ಕನ್ನಡದಲ್ಲಿ ಪ್ರಥಮ ಬಾರಿಗೆ 108 ಉಪನಿಷತ್ತುಗಳ ಸಂಪೂರ್ಣ ಸಮಗ್ರ ಮೂಲಮಂತ್ರ ಮತ್ತು ಭಾವಾರ್ಥದೊಂದಿಗೆ

# 108 ಉಪನಿಷತ್ ಸರ್ವಸ್ವ

## ಪ್ರಥಮ ಅಧ್ಯಾಯ




ಪ್ರಕಾಶಕರು :
ತಿರುಮಲ ತಿರುಪತಿ ಪ್ರತಿಷ್ಠಾನಂ (ನೋಂ)
ಬೆಂಗಳೂರು-೫೬೦ ೦೧೯. ಕರ್ನಾಟಕ.

ಪ್ರಧಾನಾಚಾರ್ಯರು :
ಉ.ವೇ. ಪ್ರ. ಶ್ರೀಮಾನ್ ಭಾರ್ಗವ ನರಸಿಂಹ

ಮತ್ಸ್ಯಾವತಾರಿ ಭಗವಾನ್ ಶ್ರೀ ಮಹಾವಿಷ್ಣುವು ಸಾಗರದಿಂದ ವೇದಗಳನ್ನು ತಂದು ಚತುರ್ಮುಖ ಬ್ರಹ್ಮನಿಗೆ ನೀಡಿದುದು.



ಆ ವೇದಗಳನ್ನು ಚತುರ್ಮುಖ ಬ್ರಹ್ಮನು
ಶ್ರೀ ವ್ಯಾಸರಿಗೆ ನೀಡಿದುದು. ಶ್ರೀ ವ್ಯಾಸರು
ಆ ವೇದವನ್ನು ನಾಲ್ಕು ವೇದಗಳನ್ನಾಗಿ ವಿಂಗಡಿಸಿ
ಭಗವಾನ್ ಶ್ರೀ ವೇದವ್ಯಾಸರೆಂದು ಖ್ಯಾತಿ ಪಡೆದರು.



ಕನ್ನಡದಲ್ಲಿ ಪ್ರಥಮ ಬಾರಿಗೆ ೧೦೮ ಉಪನಿಷತ್ತುಗಳ ಸಂಪೂರ್ಣ ಸಮಗ್ರ ಮೂಲಮಂತ್ರ ಹಾಗೂ ಭಾವಾರ್ಥದೊಂದಿಗೆ

# 108 ಉಪನಿಷತ್ ಸರ್ವಸ್ವ





ಪ್ರಧಾನಾಚಾರ್ಯರು :

**ಡಾ. ವೇ. ಪ್ರ. ಶ್ರೀಮಾನ್ ಭಾರ್ಗವ ನರಸಿಂಹ**




ಪ್ರಕಾಶಕರು :
ತಿರುಮಲ **ತಿರುಪತಿ ಪ್ರತಿಷ್ಠಾನಂ (ನೋಂ)**
ಬೆಂಗಳೂರು-ಕರ್ನಾಟಕ.
ದೂ : 9449578045

ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ ।

108 UPANISHAT SARVASVA - Collected and translated by Bhargava Narasimha, and published by **TIRUMALA TIRUPATHI PRATHISHTANAM** (R), No 172, 10th Main, Pipeline Road (Kaggis Bakery Road), Hanumanthanagar, Bangalore - 560 050
Ph.: 080-26610510, 080- 26753952, Cell: 9449578045



**ಪ್ರಥಮ ಮುದ್ರಣ:**
ಶ್ರೀ ಶಾಲಿವಾಹನ ಶಕೆ, ೧೯೩೫, ಗತಕಲಿ ೫೧೧೪, ಶ್ರೀ ವಿಜಯನಾಮ ಸಂವತ್ಸರ, ಉತ್ತರಾಯಣ ವಸಂತ ಋತು, ವೈಶಾಖ ಶುಕ್ಲ, ಅಕ್ಷಯ ತದಿಗೆ, ೨೦೧೩.
(ಸೋಮವಾರ, ೧೩-೫-೨೦೧೩)

**ಪ್ರತಿಗಳು:** ೨೦೦೦

**ಮುಖಚಿತ್ರ :** ಶ್ರೀ ಚಂದ್ರ



**ಪುಟಗಳು:** ೬೦೦ (ಪ್ರಥಮ ಸಂಪುಟ)

**ಕಾಗದ:** 70ಜಿಎಸ್‌ಎಂ ಮ್ಯಾಪಲಿಥೋ

**ಬೆಲೆ:** ರೂ. ೨೦೦೦/- (ಮೂರು ಸಂಪುಟಗಳು ಸೇರಿ)

**ಅಕ್ಷರ ಜೋಡಣೆ**
**ಇಂಪ್ರೆಸಿವ್ ಗ್ರಾಫಿಕ್ಸ್ ಅ್ಯಂಡ್ ಡಿಸೈನ್ಸ್**
ಬೆಂಗಳೂರು - ೫೬೦೦೮೫. ದೂ. ೨೬೭೨೧೯

ಮುದ್ರಕರು:
**ರೀಗಲ್ ಪ್ರಿಂಟ್ ಸರ್ವಿಸ್,**
ಕಸ್ತೂರ ಬಾ ನಗರ, ಬೆಂಗಳೂರು- ೨೬

ಓಂ ನಮೋ ನಾರಾಯಣಾಯ

ಶ್ರೀ ಲಕ್ಷ್ಮೀನರಸಿಂಹಸ್ಸಹಾಯ

# 108 ಉಪನಿಷತ್ ಸರ್ವಸ್ವ

## ಪ್ರಥಮ ಸಂಪುಟ

ಸಂಗ್ರಹ – ಅನುವಾದ

**ಭಾರ್ಗವ ನರಸಿಂಹ**



ಪ್ರಕಾಶಕರು

**ತಿರುಮಲ ತಿರುಪತಿ ಪ್ರತಿಷ್ಠಾನಂ (ನೋಂ)**

ನಂ. ೧೭೨, ೧೧ನೇ ಮುಖ್ಯರಸ್ತೆ, ಪೈಪ್ ಲೈನ್ ರಸ್ತೆ,
ಕಗ್ಗೀಸ್ ಬೇಕರಿ ರಸ್ತೆ, ಹನುಮಂತನಗರ, ಬೆಂಗಳೂರು – ೫೬೦೦೫೦
ದೂರವಾಣಿ: ೦೮೦ – ೨೬೬೧೦೫೧೦, ೦೮೦ – ೨೬೭೫೪೬೫೨

# ವಿಷಯಸೂಚಿಕೆ



* * *

# ಪ್ರಸ್ತಾವನೆ

ವೇದದ ಮೂರನೆಯ ಭಾಗವಾದ ಉಪನಿಷತ್ತುಗಳು ತತ್ವಶಾಸ್ತ್ರದ, ಮತಧರ್ಮಶಾಸ್ತ್ರದ, ಆಧ್ಯಾತ್ಮಿಕ ಪ್ರಬಂಧಗಳನ್ನು ರೂಪಿಸಿತು. ಇದರ ಪೂರ್ವಭಾವಿ ಭಾಗಗಳ ಅಸ್ತಿತ್ವವೇ ಮಂತ್ರ ಅಥವಾ ಸ್ತೋತ್ರಗಳು. ಅವು ಬಹುಮಟ್ಟಿಗೆ ಪ್ರಾರ್ಥನೆಗಳಾಗಿದ್ದು, ಬ್ರಾಹ್ಮಣಗಳು ಅಥವಾ ಯಜ್ಞದ ಸಂಸ್ಕಾರಗಳು ಅನುಕ್ರಮವಾಗಿ ಕವಿ, ಪುರೋಹಿತ ಮತ್ತು ತತ್ತ್ವಜ್ಞಾನಿಯ ನುಡಿಗಳಾಗಿವೆ.

ವೇದಗಳಲ್ಲಿ ಎರಡು ಬೃಹತ್ ವಿಭಾಗಗಳಿವೆ. ಮೊದಲನೆಯದಾಗಿ ಕರ್ಮಕಾಂಡ ಅಂದರೆ ಕಾರ್ಯ ವಿಭಾಗವಾಗಿದ್ದು, ಬ್ರಾಹ್ಮಣಗಳು ಮತ್ತು ಮಂತ್ರಗಳೆರಡನ್ನೂ ಒಳಗೊಂಡಿರುತ್ತವೆ. ಬಹು ಭಾಗದ ಜನರು ಧಾರ್ಮಿಕ ಕ್ರಿಯೆ, ಕರ್ಮಾಚರಣೆಗಳ ಪ್ರಾರ್ಥನೆ ಮತ್ತು ಯಜ್ಞದ ನೈಮಿತ್ತಿಕ ಕರ್ಮದ ರೀತಿಯನ್ನು, ಶ್ರೇಷ್ಠತೆಯನ್ನು ಸ್ಥಾಪಿಸುತ್ತಾರೆ. ಎರಡನೆಯದಾಗಿ ಜ್ಞಾನಕಾಂಡವು ಜ್ಞಾನದ ವಿಭಾಗವಾಗಿದ್ದು, ವೇದದ ದಿವ್ಯಜ್ಞಾನಕ್ಕೆ ಸಂಬಂಧಿಸಿದ ಭಾಗವಾದ ಬ್ರಹ್ಮವಿದ್ಯಾವಾದವು ಉಪನಿಷತ್ತಿನಲ್ಲಿದ್ದು, ಸತ್ಯಬೋಧನೆಯನ್ನು ಹೊಂದುವ ಸಾಮರ್ಥ್ಯವಿರುವ ಕೆಲವರನ್ನು ಆಯ್ಕೆ ಮಾಡಲು ಉದ್ದೇಶಿಸಲಾಗಿರುತ್ತದೆ.

ಬ್ರಾಹ್ಮಣದ ಅನುಬಂಧದಂತಿರುವ ಅರಣ್ಯಕ ಅಥವಾ ಅರಣ್ಯಪುಸ್ತಕವು ಉಪನಿಷತ್ತಿನಲ್ಲಿ ಅತ್ಯಂತ ಪ್ರಮುಖವಾದುದಾಗಿದ್ದು, ಪ್ರೇತಗಳೊಂದಿಗಿನ ಸಂಭಾಷಣೆಯಿಂದ ಆತ್ಮವನ್ನು ವಿಮೋಚನೆ-ಗೊಳಿಸುವ ನಿರ್ವಹಣೆ, ಆತ್ಮನ ನಿರಾಕಾರವಾದ ಶ್ರೇಷ್ಠವಾದ ನೈಜ ಸ್ವಭಾವದ ಏಕತ್ವದ ಗಣನೆಯಿಂದ ಗಹನವಾದ ಜ್ಞಾನವುಳ್ಳವರು ಕಾಡಿನ ಏಕಾಂತ ಸ್ಥಳದಲ್ಲಿ ಅಧ್ಯಯನ ಮಾಡಬೇಕು. ಹೀಗೆ ಅಧ್ಯಯನ ಮಾಡುವವರು ವಿದ್ಯಾರ್ಥಿಯ ಕರ್ತವ್ಯಗಳನ್ನೂ, ಗೃಹಸ್ಥ ಧರ್ಮವನ್ನು ನಿರ್ವಹಿಸಿ ಪ್ರಾಪಂಚಿಕ ಹಾಗೂ ತಮ್ಮ ಗತಜೀವನದಿಂದ ನಿವೃತ್ತಿಯನ್ನು ಹೊಂದಿ ದೈವ ಚಿಂತನೆಯಲ್ಲಿರಬೇಕು.

ಕುರಾನ್‌ನಿಂದ ಸೂಫಿ ಪಂಥ ಮತ್ತು ಹಳೆಯ ಒಡಂಬಡಿಕೆಯಿಂದ ಧರ್ಮಗ್ರಂಥ, ಪ್ರಾಚೀನ ಕಾವ್ಯವಾದ ವೇದದಿಂದ ಉಪನಿಷತ್ತುಗಳನ್ನು ತೆಗೆದುಕೊಳ್ಳಲಾಗಿದೆ. ಭೌತವಸ್ತು ಮತ್ತು ಆತ್ಮದ ಸಂಬಂಧ, ಮಾನವನ ಆತ್ಮಸ್ವರೂಪ, ದೈವ ಸ್ವಭಾವ, ವಿಶ್ವದ ಉದಯದಂತಹ ಅತಿಕ್ಲಿಷ್ಟ ಸಮಸ್ಯೆ-ಯಂತಹುದನ್ನು ಪರೀಕ್ಷಿಸುವುದು ಮತ್ತು ಆಧ್ಯಾತ್ಮಿಕ ಚಿಂತನೆಯ ಆಳಕ್ಕೆ ಮಾನವನ ಮನವು ಮೊದಲಬಾರಿಗೆ ಮುಳುಗಿದಾಗಿನ ಫಲಿತಾಂಶವನ್ನು ಅವು ಪ್ರತಿನಿಧಿಸುತ್ತದೆ.

**'ಉಪನಿಷತ್ತು'** ಪದ ನಿಷ್ಪತ್ತಿಯೇ ಅನುಮಾನಾಸ್ಪದವಾದುದು. ಅದು ಬಹುಶಃ ಯಾರ ಬಳಿಯೋ ಕುಳಿತು ಆಲಿಸುವುದಕ್ಕೆ ಅಥವಾ ಧ್ಯಾನಿಸುವುದಕ್ಕೆ ಹಾಗೂ ಸ್ತುತಿಸುವುದಕ್ಕೆ (ಉಪ-ನಿ-ಷದ್) ಸೂಚಿಸುತ್ತಿರಬಹುದು. ವೇದಗಳಲ್ಲಿರುವ ರಹಸ್ಯಗಳನ್ನು, ಸಂಹಿತೆಯ ಮೂಲತತ್ತ್ವಗಳನ್ನು, ರಹಸ್ಯ ಬೋಧನೆಗಳನ್ನು ಗೌರವತೋರುವಂತಹ ದೂರದಲ್ಲಿ ಶಿಷ್ಯರು ಕುಳಿತು ಕೂಟ ಅಥವಾ ಸಭೆಯಲ್ಲಿ ಅಭಿವ್ಯಕ್ತಪಡಿಸುವ ಉದ್ದೇಶವಿದ್ದಿರಬೇಕು. ಮತ್ತು ಕೆಲವು ಭಾರತೀಯ ತತ್ತ್ವಶಾಸ್ತ್ರಜ್ಞರು 'ಉಪನಿಷತ್' ಪದವನ್ನು ಅರಿವಿನ ನಾಶ ಎಂಬುವ ಅರ್ಥದಲ್ಲಿ ದುಃಖದ ಬೇರು ಎಂದು ಪದನಿಷ್ಪತ್ತಿಯನ್ನು ಮಾಡುತ್ತಾರೆ. ಅದರಿಂದ ರಹಸ್ಯಬೋಧನೆಯನ್ನು ಸಂಪೂರ್ಣವಾಗಿ ಅರಿಯಲಾಗಿದೆ. ಅದು ಅಜ್ಞಾನ, ಕೋಪೋದ್ರೇಕವೆಲ್ಲವನ್ನೂ ನಾಶಮಾಡುತ್ತದೆ. ಎಲ್ಲಾ ಜ್ಞಾನವೂ ಕೇವಲ ಇಂದ್ರಿಯ ಶಕ್ತಿಯಿಂದ ಊಹಿಸಲ್ಪಡುತ್ತದೆ. ಎಲ್ಲಾ ಜ್ಞಾನವೂ ಆತ್ಮರಕ್ಷಣೆ ಮಾಡುತ್ತದೆ.

ಉಪನಿಷತ್ತಿನ ಹಲವಾರು ಶಾಖೆಗಳಲ್ಲಿ ವೇದದ ಹಿನ್ ಸರಿತದಿಂದ (ಹಿಂಸರಿತ) ಹಲವು ಅದೃಶ್ಯವಾದುವು. ಅನೇಕ ಬ್ರಾಹ್ಮಣಗಳು, ಅರಣ್ಯಕಗಳು ಮತ್ತು ಉಪನಿಷತ್ತುಗಳೂ ಸಹಾ ಅದೃಶ್ಯ-ವಾದುವು. ವಾಸ್ತವವಾಗಿ ಪ್ರಾಚೀನ ಕಾಲದಲ್ಲಿ ಪವಿತ್ರ ಗ್ರಂಥಗಳನ್ನು ಬರೆಯದೇ ಇದ್ದುದೂ ಸಹಾ ಉಂಟಾದ ನಷ್ಟಕ್ಕೆ ಭಾಗಶಃ ಹೊಣೆಯಾಗುತ್ತದೆ. ಇನ್ನು ಉಳಿದಿರುವ ಉಪನಿಷತ್ತಿನ ಕೃತಿಗಳಲ್ಲಿ ವಿಶ್ವಾಸಾರ್ಹವೆಂದು ಪರಿಗಣಿಸಲು, ನಿಖರವಾದ ಸಂಖ್ಯೆಯನ್ನು ಖಚಿತವಾಗಿ ತಿಳಿದುಕೊಳ್ಳಲು ಕಷ್ಟವಾಗಿದೆ. ಭಾರತದಲ್ಲಿ ಧಾರ್ಮಿಕ ವ್ಯವಸ್ಥೆಯೊಂದು ಮೌಲ್ಯಯುತವೆಂದು ಪರಿಗಣಿಸಲು ಶ್ರುತಿ (ವೇದಗಳು)ಗಳ ಬೆಂಬಲವಿದ್ದರೆ ಮಾತ್ರ ಸಾಧ್ಯವಾಗುತ್ತದೆ. ಇದರ ಪರಿಣಾಮವಾಗಿ ಧಾರ್ಮಿಕ ಗ್ರಂಥವೊಂದರ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡಲು ಧಾರ್ಮಿಕ ಪಂಥ ಸ್ಥಾಪಕರು ಕೆಲವೊಮ್ಮೆ ಕೃತಿಗಳನ್ನು ರಚಿಸಿ ಅವುಗಳನ್ನು ಉಪನಿಷತ್ತುಗಳೆಂದು ಕರೆದರು. ನಿದರ್ಶನಕ್ಕಾಗಿ 16ನೇ ಶತಮಾನದ ಮುಸ್ಲಿಂ ಚಕ್ರವರ್ತಿ ಅಕ್ಬರನ ಕಾಲದಲ್ಲಿ "ಅಲ್ಲಾಹ್ ಉಪನಿಷತ್ತು" ರಚಿಸಲಾಯಿತೆಂಬುದನ್ನು ಸ್ಮರಿಸಬಹುದು.

ಯಜುರ್ವೇದದ ಸಂಪ್ರದಾಯದ ಕೃತಿಯಾದ ಮುಕ್ತಿಕೋಪನಿಷತ್ತಿನಲ್ಲಿ ಒಂದು ನೂರ ಎಂಟು ಉಪನಿಷತ್ತುಗಳನ್ನು ನಮೂದಿಸಲಾಗಿದೆ. ಅವುಗಳಲ್ಲಿ ಋಗ್ವೇದದ ಐತರೇಯ ಉಪನಿಷತ್ತು ಮತ್ತು ಕೌಶೀತಕಿ ಉಪನಿಷತ್ತು, ಸಾಮವೇದದ ಛಾಂದೋಗ್ಯ ಮತ್ತು ಕೇನೋಪನಿಷತ್ತು, ಕೃಷ್ಣ ಯಜುರ್ವೇದದ ತೈತ್ತರೀಯ, ಮಹಾನಾರಾಯಣ, ಶ್ವೇತಾಶ್ವತರ ಮತ್ತು ಮೈತ್ರಾಯನಿ ಉಪನಿಷತ್ತು-ಗಳು, ಶುಕ್ಲಯಜುರ್ವೇದದ ಈಶೋಪನಿಷತ್ತು ಮತ್ತು ಬೃಹದಾರಣ್ಯಕೋಪನಿಷತ್ತು, ಅಥರ್ವಣ ವೇದದ ಮುಂಡಕ, ಪ್ರಶ್ನ ಮತ್ತು ಮಾಂಡೂಕ್ಯ ಉಪನಿಷತ್ತುಗಳಾಗಿವೆ. ಆಯಾಯ ವೇದಗಳು ಪರಿಷ್ಕರಣಗೊಂಡಂತೆ ಸಂಬಂಧಿಸಿದ ಉಪನಿಷತ್ತುಗಳೂ ಸಹಾ ಭಿನ್ನವಾಗಿರುವುದೆಂದು ನಿರ್ಧರಿಸ-ಲಾಗಿದೆ. ನಿದರ್ಶನಕ್ಕಾಗಿ ಮುಂಡಕೋಪನಿಷತ್ತು ಶೌನಕನ ಅಥರ್ವ ವೇದದ ಪರಿಷ್ಕರಣೆಯದ್ದಾಗಿದೆ. ಪ್ರಶ್ನೋಪನಿಷತ್ತು ಪಿಪ್ಪಲನ ಪರಿಷ್ಕರಣೆಯದಾಗಿದೆ. ವೇದಾಂತ ತತ್ತ್ವಶಾಸ್ತ್ರದ ಅಧಿಕೃತ ಕೃತಿ 'ಬ್ರಹ್ಮಸೂತ್ರ'ವು ಐತರೇಯವು ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆಯ ಬೋಧನೆಗಳನ್ನು ಆಧರಿಸಿದ ರೂಪವಾಗಿದೆ.

ಆದರೆ ವೇದಾಂತದಲ್ಲಿ ವಿವಿಧ ಅಧ್ಯಯನ ವಿಭಾಗಗಳ ವ್ಯಾಖ್ಯಾನಗಳಿವೆ. ಅವು ಶಂಕರ, ರಾಮಾನುಜ, ಮಧ್ವರಂತಹ ಶ್ರೇಷ್ಠ ಆಚಾರ್ಯತ್ರಯರಿಂದ ಪ್ರತಿನಿಧಿಸಲ್ಪಟ್ಟಿದೆ. ಶಂಕರಾಚಾರ್ಯರ ವ್ಯಾಖ್ಯಾನವು ಭಾರತದ ಪ್ರಾಚೀನ ಅಭಿಪ್ರಾಯಗಳ ವಿಶ್ಲೇಷಣೆಯ ಅತ್ಯಂತ ನಿಕಟ ಸಾಮರಸ್ಯವನ್ನು ಹೊಂದಿರುವುದಲ್ಲದೆ, ಅತ್ಯಂತ ಸಾಂಪ್ರದಾಯಿಕ ಹಾಗೂ ಪ್ರಾಚೀನವಾದುದಾಗಿದೆ. ಉಪನಿಷತ್ತುಗಳು ನಿಸ್ಸಂದೇಹವಾಗಿ ವಿವಿಧ ವ್ಯಾಖ್ಯಾನಗಳನ್ನು ಅಂಗೀಕರಿಸುತ್ತದೆ. ಅವುಗಳ ಲೇಖಕರು ಸಮಾಜದ ವಿವಿಧ ವರ್ಗದವರಾಗಿದ್ದು, ಕೆಲವರು ಅತ್ಯಂತ ಪ್ರಮುಖ ಕ್ಷತ್ರಿಯರು ಅಥವಾ ರಜಪೂತ ದೊರೆ-ಗಳಾಗಿದ್ದಾರೆ. ಈ ತಲೆಮಾರಿನ ವೇದದೇವತಾಶಾಸ್ತ್ರಜ್ಞರು ತಮಗೆ ಪ್ರಿಯವಾದ ಧಾರ್ಮಿಕ ಗ್ರಂಥಗಳ ಅಧ್ಯಯನ ಹಾಗೂ ಚಿಂತನೆಗಳನ್ನು ಮಾಡಿದ್ದರು. ಈ ಚಿಂತನೆಗಳನ್ನು ಕಾಲ ಕಳೆದಂತೆ ಪವಿತ್ರವೆಂದು ಪರಿಗಣಿಸಲಾಯಿತು. ಉಪನಿಷತ್ತುಗಳಲ್ಲಿ ಗಮನಾರ್ಹವಾದ, ವಿವರಣಾತ್ಮಕವಾದ ದಿಕ್ಚ್ಯುತಿಗಳಿದ್ದರೂ, ಪ್ರಶ್ನಾತೀತವಾದ ಪ್ರಮುಖ ಕಲ್ಪನೆಗಳ ಏಕರೂಪತೆಯೊಂದನ್ನು ಅನುಸರಿಸಲಾಗಿದೆ. ಆದಾಗ್ಯೂ ವೈರುಧ್ಯವಿಲ್ಲದ, ಎಲ್ಲ ವಿಭಾಗಗಳು ಹೊಂದಿಕೊಂಡಿರುವಂತಹ ತತ್ತ್ವಶಾಸ್ತ್ರದ ವ್ಯವಸ್ಥಿತ ರೂಪವಿಲ್ಲ.

ಅವುಗಳ ಲೇಖಕರು ವಿವಿಧ ಕಾಲದವರಾಗಿದ್ದು, ಶ್ರುತಿ ಪ್ರಾಮಾಣ್ಯವನ್ನು ನಿರಂತರವಾಗಿ ರಕ್ಷಿಸುವಂತಹ ದೈವೀಕ ಸ್ಫೂರ್ತಿಯಿದ್ದವರಾಗಿರಲಿಲ್ಲ. ಒಬ್ಬ ಜ್ಞಾನಿಯ ಹಲವು ಮುಖ್ಯಾಂಶಗಳ ಬಗೆಗಿನ ದೃಷ್ಟಿಕೋನವು ಮತ್ತೊಬ್ಬರಿಗೆ ಸಮ್ಮತವಾಗದಿರುವಂತೆ ಕಾಣುತ್ತದೆ. ಶ್ರೇಷ್ಠ ಜೀವಿಯ ಸ್ವಭಾವದಂತೆ ಅವನು ಗುಣವಂತನೋ (ಸಗುಣ) ಅಥವಾ ಗುಣರಹಿತನೋ (ನಿರ್ಗುಣ) ಎಂಬುದು ಪ್ರಚಲಿತ ಅಭಿಪ್ರಾಯ-ವಾಗಿ ನಾವು ಕಂಡಂತೆ ಅಂತಿಮವಾಗಿ ಪ್ರತಿನಿಧಿಸ-ಲಾಗುತ್ತದೆ. ಬಾಹ್ಯಪ್ರಪಂಚದ ಸತ್ಯಾಸತ್ಯತೆಯಲ್ಲಿ ಮತ್ತು ಆತ್ಮಪ್ರಕೃತಿಯು ಸೂಕ್ಷ್ಮ ಮತ್ತು ಶಕ್ತಿಯುತವಾದುದರಿಂದ ಪರಿಮಿತ ಅಥವಾ ಅನನ್ಯವಾಗಿದ್ದು ಶ್ರೇಷ್ಠ ಹಾಗೂ ಅಪರಿಮಿತವಾಗಿರುತ್ತದೆ. ಪ್ರಾಚೀನ ಪ್ರಬಂಧಗಳು ಅಧ್ಯಯನಕ್ಕೆ ಸ್ವಲ್ಪವೂ ಕ್ಲಿಷ್ಟವಾಗದಂತೆ ಇವೆಲ್ಲವನ್ನೂ ಪ್ರತಿಷ್ಠಾಪಿಸಿವೆ. ಹೀಗಿದ್ದರೂ ಅವುಗಳ ಬಗೆಗಿನ ಆಸಕ್ತಿ ಮತ್ತು ಮೌಲ್ಯಗಳು ಅವರಿಂದ ಕುಂಠಿತವಾಗಿಲ್ಲ.

ಉಪನಿಷತ್ತುಗಳು ಭಾರತೀಯ ಮನಸ್ಸಿನ ಅತ್ಯುನ್ನತ ಪರಿಣಾಮವನ್ನು ನಿಸ್ಸಂದೇಹವಾಗಿ ಪ್ರತಿನಿಧಿಸುತ್ತವೆ ಮತ್ತು ತತ್ತ್ವಶಾಸ್ತ್ರದ ಚರಿತ್ರೆಯಲ್ಲಿ ಮೂಲ ತತ್ತ್ವಶಾಸ್ತ್ರ ಪದ್ಧತಿಯು ಅವರ್ಣನೀಯ ಹಾಗೂ ಅತ್ಯಂತ ಪ್ರಭಾವಶಾಲಿಯಾದುದೆಂದು ತಿಳಿಯಲಾಗಿದೆ. **ಶಂಕರಾಚಾರ್ಯರ ವೇದಾಂತದ ರಚನೆಯು 'ಉಪನಿಷತ್ತುಗಳೆಂಬ ರತ್ನಮಣಿಗಳ ಮಾಲೆಯಂತೆ' ಎಂದೂ ಭಾರತೀಯ ಆಧ್ಯಾತ್ಮದ ಪಕ್ವವಾದ ಫಲ ಹಾಗೂ ಅತ್ಯುತ್ತಮ ಪುಷ್ಪವೆಂದು ಭಾವಿಸಲಾಗಿದೆ.** ಅವುಗಳನ್ನು ಭಾರತೀಯ ತತ್ತ್ವಶಾಸ್ತ್ರದ ಹಲವಾರು ಪದ್ಧತಿಗಳ ಅತ್ಯುನ್ನತ ಪ್ರಮಾಣಗ್ರಂಥಗಳೆಂದು ಸ್ಥಾಪಿಸಲಾಗಿದೆ. ಇಂದಿನ ಸಂಪ್ರದಾಯಸ್ಥ ವಿದ್ಯಾವಂತ ಹಿಂದೂಗಳು ವೇದವಾಙ್ಮಯವನ್ನು ವಿಸ್ತಾರವಾಗಿ ಅಧ್ಯಯನ ಮಾಡುವ ಏಕಮಾತ್ರ ಭಾಗವೆಂದು ತಿಳಿದುಬರುತ್ತದೆ.

ವೇದಾಂತ ತತ್ತ್ವಶಾಸ್ತ್ರದರ್ಶನಕ್ಕೆ ಯೂರೋಪಿನಲ್ಲಿಯೂ ಗುಣಗ್ರಾಹಿಗಳಿದ್ದಾರೆ. ಮೂಲತಃ ಭಿನ್ನವಾಗಿದ್ದರೂ, ಬರ್ಕ್ಲಿಯ ವಿಜ್ಞಾನವಾದದ ಕೆಲವು ಅಂಶಗಳಲ್ಲಿ ಸಾದೃಶ್ಯವಿದ್ದರೂ ಅದರ ಬಗ್ಗೆ ಮಾತನಾಡಬಾರದು. ಪ್ರೊ॥ ಮ್ಯಾಕ್ಸ್‌ಮುಲ್ಲರ್ ಅದನ್ನು ಮೋಹಕ ಬೆಳಕಿನಂತೆ ನಿರೂಪಿಸುತ್ತಾರೆ. ಮತ್ತೆ ಕೆಲವು ಜರ್ಮನಿಯ ತತ್ತ್ವಶಾಸ್ತ್ರಜ್ಞರಾದ ಶೋಪೆನ್‌ಹೌರ್ ಮತ್ತವನ ಕಟ್ಟಕಡೆಯ ಶಿಷ್ಯನಾದ ಕೀಲ್‌ನ ಪ್ರೊ॥ ಡೌಸ್ಸೆನ್ ಅವರುಗಳು ಪೂರ್ವದ ಈ ನಿರ್ದಿಷ್ಟ ಜ್ಞಾನವನ್ನು ಅತ್ಯಂತ ಉತ್ಸಾಹದಿಂದ ಒಪ್ಪಿಕೊಳ್ಳುತ್ತಾರೆ. ಇವರಿಬ್ಬರೂ **"ಉಪನಿಷತ್ತುಗಳ ಅಧ್ಯಯನವು ಮಾನವನನ್ನು ಸಾಂತ್ವನಗೊಳಿಸಿ ಉನ್ನತಿಗೇರಿಸುವುದೆಂದು"** ಹೇಳಿದ್ದಾರೆ. ಆಧುನಿಕ ಹಿಂದೂ ವೇದಾಂತಿಗಳಿಂದ ಪ್ರೇರಣೆಗೊಂಡು ಜರ್ಮನ್ನರ ಅಧ್ಯಯನದ ಆಲೋಚನೆ ಕ್ಯಾಂಟ್‌ನಿಂದ ಮೊದಲು ಅಭಿವ್ಯಕ್ತಗೊಂಡು, ಶೋಪೆನ್ ಹೌರ್‌ನಿಂದ ಮುಕ್ತಾಯಗೊಂಡು, ಮತ್ತು ಡೌಸ್ಸೆನ್‌ನಿಂದ ಮತ್ತೆ ವಿಶದೀಕರಿಸಲ್ಪಟ್ಟು, ಪಾಶ್ಚಾತ್ಯ ಪ್ರಪಂಚವನ್ನು ಅದ್ವೈತದ ಸ್ಥಿತಿಯ ಹತ್ತಿರ ಹತ್ತಿರಕ್ಕೆ ತಂದಿತು. **"ವೇದಾಂತವು ಸರ್ವಧರ್ಮಗಳ ಕೀಲಿಕೈ"** ಎಂದು ಸಮರ್ಥಿಸಿತು. ಈ ಒಂದು ದೀಪದಿಂದ ಎಲ್ಲವನ್ನೂ ಅಧ್ಯಯನ ಮಾಡಬಹುದು. ಪ್ರೊ॥ ಡೌಸ್ಸೆನ್ ಅವರು ಮಾನವಕೋಟಿಯ ನಿತ್ಯಸತ್ಯದ ಶೋಧನೆಯಲ್ಲಿ ರಕ್ಷಕ ದೇವತೆಯ ಅತ್ಯಂತ ಮೌಲ್ಯಯುತ ಉತ್ಪನ್ನಗಳಲ್ಲಿ ಒಂದಾದ ಈ ವ್ಯವಸ್ಥೆಯು "ಪ್ಲೇಟೋ ಮತ್ತು ಕ್ಯಾಂಟ್‌ರ ಶ್ರೇಣಿಗೆ ಸಮಾನವಾದುದು" ಎಂದು ಹೇಳಿದ್ದಾರೆ.

ಉಪನಿಷತ್ತುಗಳನ್ನು ಅಧ್ಯಯನ ಮಾಡುವವರು ಖಚಿತವಾಗಿ ಹೀಗೆ ಭಾವಿಸುತ್ತಾರೆ: ಕೃತಿಯನ್ನು ಅಧ್ಯಯನ ಮಾಡಿದಾಗ ತತ್ತ್ವಶಾಸ್ತ್ರ ಮತ್ತು ಮೂಢನಂಬಿಕೆ, ಕ್ಷುಲ್ಲಕತೆ ಮತ್ತು ಗಹನತೆ, ಸಾಧಾರಣ

ಹಾಗೂ ಮಹೋನ್ನತ ವಿಚಾರಗಳ ಹೊಸ ಸಂಕಲನವಾಗಿದ್ದು ಶ್ರೇಷ್ಠ ಬೌದ್ಧಿಕ ನಿರೂಪಣೆ-ಯಂತಿದೆಯೆಂದು ಭಾಸವಾಗುತ್ತದೆ. ವೇದಗಳಲ್ಲಿ ಪ್ರಕೃತಿಯ ಆರಾಧನೆ, ವಿಶೇಷವಾಗಿ ಸೂರ್ಯ ಮತ್ತು ೩೩ ದೇವತೆಗಳನ್ನು ಉಲ್ಲೇಖಿಸಿರುವುದನ್ನು ಕಾಣಬಹುದು. ದೇವತೆಗಳಲ್ಲಿರುವ ಲೈಂಗಿಕ ಸಂಬಂಧ, ತನ್ನನ್ನೇ ಎರಡಾಗಿ ವಿಭಜಿಸಿಕೊಂಡು ಪತಿಪತ್ನಿಯರನ್ನು ಸೃಷ್ಟಿಸಿದ್ದು, ಸೃಷ್ಟಿಯಲ್ಲಿ ಪ್ರತಿಯೊಂದೂ, ಒಂದು ಸಣ್ಣ ಇರುವೆಯವರೆಗೂ ಜೋಡಿಯಾಗಿರುವಂತೆ ಸೃಷ್ಟಿಸಿರುವುದನ್ನು ಕಾಣಬಹುದು. ವೈದಿಕ ಯಜ್ಞಗಳಲ್ಲಿ ಮೊಸರು ಮತ್ತು ಜೇನುತುಪ್ಪದ ನೈವೇದ್ಯ ಮತ್ತು ಅನೇಕ ಕ್ಷುಲ್ಲಕ ಸಂಸ್ಕಾರ, ಮೂಢನಂಬಿಕೆಯ ವ್ರತಾಚರಣೆಯ ವಿವರಗಳನ್ನು ಕಾಣಬಹುದು. ದೀರ್ಘಾಯಸ್ಸು, ಕೀರ್ತಿ, ಗೋಸಂಪತ್ತು, ಸಂತಾನದಿಂದ ಕೂಡಿದ ಮಾನವನ ಹಿರಿಮೆಯನ್ನೂ, ಜ್ಯೋತಿಷ್ಯ ಶಾಸ್ತ್ರ, ನೂತನವಾದ ಖಗೋಳ ವಿಜ್ಞಾನ, ದೇಹವನ್ನು ತ್ಯಜಿಸಿದ ಆತ್ಮವು ಗಾಳಿಯಲ್ಲಿ ಹಾದುಹೋಗುವುದು, ಮೊದಲು ಸೂರ್ಯನ ಬಳಿ ಬಂದು, ಅನಂತರ ಬಹುದೂರದಲ್ಲಿರುವ ಚಂದ್ರನನ್ನು ಏರುವುದು, ಗ್ರಹಣದ ಬಗೆಗಿನ ಹಿಂದೂಗಳ ನಂಬಿಕೆ-ರಾಹುವಿನ ಬಾಯಿಂದ ಚಂದ್ರ ಪಾರಾಗುವುದು, ಲೋಹ ಸಂಯೋಜನೆ, ಗಾಲಿಗಳ ನಿರ್ಮಾಣ, ಕುಂಬಾರಿಕೆ, ಕಬ್ಬಿಣವನ್ನು ಕರಗಿಸುವಂತಹ ವಿಜ್ಞಾನ ಮತ್ತು ಕಲೆಯ ಕೆಲವು ಆಚರಣೆಗಳು, ಕುತೂಹಲಕಾರಿ ಜ್ಞಾನದ ಚಿಹ್ನೆಗಳನ್ನು ಕಾಣಬಹುದು. ಜಾತಿಗಾಗಿ ದೈವಿಕ ಕುಲ ಸಮರ್ಥನೆ, ಕೆಲವು ಸಂಗತಿಗಳನ್ನು ತಿಳಿದಿರುವ ಮಾನವನು ಹೆಚ್ಚು ಪಾಪಗಳನ್ನು ಮಾಡಿದ್ದರೂ ಸಹಾ ಅವುಗಳೆಲ್ಲವನ್ನೂ ನಾಶಪಡಿಸಿ ಸ್ವಚ್ಛ, ಶುದ್ಧನನ್ನಾಗಿ ಮಾಡುವಂತಹ ದಿಗ್ಭ್ರಾಂತಿಗೊಳಿಸುವ ಧರ್ಮಶಾಸ್ತ್ರ, ಪೂರ್ಣವಿಕಸನಗೊಂಡ, ವಿಶದೀಕರಿಸಿದ ಪುನರ್ಜನ್ಮದ ಬೋಧನೆ, ಮತ್ತು ಪಾಪದ ನಡತೆಯಿದ್ದವರು ನಾಯಿ ಅಥವಾ ಹಂದಿ, ಹುಳು, ಕೀಟ, ಮೀನು, ಪಕ್ಷಿ, ಸಿಂಹ, ಬೀಜದ ಹಂದಿ, ಬೃಹದಾಕಾರದ ಹಾವು, ಅಕ್ಕಿ ಮತ್ತು ಕಾಳು, ಗಿಡ, ಮರ, ಎಳ್ಳು, ಹುರುಳಿಗಳಾಗಿ ಜನಿಸುವರು ಎಂದು ಹೇಳಿರುವುದನ್ನು ಕಾಣಬಹುದು.

ಉಪನಿಷತ್ತಿನಲ್ಲಿ ಮಾನಸಿಕ ಪುನರಾವರ್ತನೆಯ ನೂತನವಾದ ಸೂತ್ರ ಸಮೂಹಗಳು, ಉಸಿರಾಟದ ನಿರೋಧ, ಕೆಲವು ಉಸಿರಾಟದ ಕ್ರಮಗಳು, ಶಾಶ್ವತತೆಯನ್ನು ಸೇರುವುದು, ಪ್ರಮುಖ-ವಾಗಿ ದೈಹಿಕ ಚಲನಹೀನತೆಯನ್ನು ಲಂಬಿಸುವುದು, ಕೆಲವು ಏಕಾಕ್ಷರಗಳಲ್ಲಿ ಒಳಗೊಂಡಿರುವ ಆಳವರಿಯಲಾಗದ ರಹಸ್ಯಗಳನ್ನು ಕುರಿತ ಚಿಂತನೆ, ಪ್ರಸಿದ್ಧವಾದ 'ಓಂ' ಸಂಕೇತದ ಮೂರ್ತೀ ಕರಣವು ಮುಪ್ಪುರಿಗೊಂಡ ಪರಿಪೂರ್ಣತೆಯನ್ನು ಕಾಣಬಹುದು. ಅದರಲ್ಲಿ ಬಹು ಸೂಕ್ಷ್ಮಾತಿಸೂಕ್ಷ್ಮ ಚಿಂತನೆಗಳು, ಪುಟವೊಂದರಲ್ಲಿನ ಪ್ರತಿವಾಕ್ಯವೂ ಸಂಕ್ಷಿಪ್ತ ಕಾಲಗರ್ಭದಲ್ಲಿ ಅಭಿವ್ಯಕ್ತಗೊಂಡಂತೆ ಓದಿದಾಗ ಕಂಡುಬರುತ್ತದೆ. ತೊಡಕಾದ ರಚನೆಯ ರಹಸ್ಯಭಾಷೆ, ಆಯಾಸಗೊಳಿಸುವ ಪುನರಾ-ವರ್ತನೆ ಮತ್ತು ಕ್ಷುಲ್ಲಕ ವಿಲಕ್ಷಣಾಲಂಕಾರ, ಕಾಲ್ಪನಿಕ ರೂಪಕಾಲಂಕಾರಗಳ ಪ್ರಯೋಗ, ಅಸಂಯೋಜಿತ ಪ್ರತಿಮೆಗಳು, ಪ್ರಮಾಣದ ಸ್ಥಳದಲ್ಲಿ ಅಪೂರ್ಣ ಸಾದೃಶ್ಯಗಳು, ದೃಶ್ಯಪ್ರಪಂಚದ ಮಿಥ್ಯೆಯನ್ನು ವಾದಿಸಲು ಹಾವನ್ನು ಹಗ್ಗವಾಗಿ ಭಾವಿಸುವುದು, ಅಥವಾ ವ್ಯಾಧಿಗ್ರಸ್ಥ ಕಣ್ಣುಗಳಿರುವ ಮನುಷ್ಯನು ವಾಸ್ತವವಾಗಿ ಮಣ್ಣಿನ ಮಡಕೆಗಳೆಲ್ಲವೂ ಸತ್ಯವಾಗಿ ಮಣ್ಣುಮಾತ್ರವಾಗಿದೆ. ಆದುದರಿಂದ ಸಮಸ್ತ ವಿಶ್ವವೆಲ್ಲವೂ ಬ್ರಹ್ಮವಾಗಿದೆ. ವ್ಯವಸ್ಥೆಯ ಅಭಾವ ಹಾಗೂ ಸಾಮಾನ್ಯಜ್ಞಾನದ ಅಭಾವ. ಪರೀಕ್ಷಿಸುವುದಕ್ಕಿಂತ ಹೆಚ್ಚಾಗಿ ಊಹಿಸುವ ಪ್ರವೃತ್ತಿಯಿರುವುದರಿಂದ ನಿರಂತರವಾಗಿ ನೂತನ ಚರ್ಚೆಗಳು ಆರಂಭವಾಗುತ್ತವೆ. ಅಪರಿಹಾರ್ಯ ಒಗಟುಗಳನ್ನು ಪರಿಹರಿಸುವುದು, ಸಾಧಿಸಲಾಗದು-

ದನ್ನು ಸಾಧಿಸುವಂತಹ ಮನೋರೂಪಗಳನ್ನು ಕಾಣಬಹುದು.

ಆದರೆ ಇವೆಲ್ಲವೂ ಮುಂದುವರೆಯುತ್ತದೆ. ಉಪನಿಷತ್ತಿನ ಅತ್ಯುತ್ತಮ ವೈಶಿಷ್ಟ್ಯವೆಂದರೆ ತಿಳಿಯದ ಹಾಗೂ ವಿವರಿಸಲಾಗದ ಬಯಕೆಗಳತ್ತ ಖಚಿತವಾಗಿ ಗಮನಹರಿಸುವುದು. ಅವು ಮಾನವ ಹೃದಯವನ್ನು ಪ್ರಾಪಂಚಿಕತೆಯಿಂದ ಉನ್ನತಮಟ್ಟಕ್ಕೆ ಏರಿಸುತ್ತದೆ. ಮಾನವನ ಮನಸ್ಸು ಪ್ರಸ್ತಾಪಿಸುವ ಅತ್ಯುನ್ನತ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಮನಕರಗಿಸುವ ಕಾಲ್ಪನಿಕ ಸತ್ಯ ಉನ್ನತವಾದ ಆಲೋಚನೆಗಳು ಹಾಗೂ ಉದಾರ ಭಾವನೆಗಳು ಆಳವಾದ ಪಾರಮಾರ್ಥಿಕತೆಗಳಾಗಿರುತ್ತವೆ. ಶೂನ್ಯ ಮತ್ತು ಅತೃಪ್ತ ಹೃದಯದ ಹಂಬಲ, ಅವಶ್ಯಕವೆಂದು ಭಾವಿಸುವ ಯಾವುದಾದರೊಂದರ ತಡಕಾಟದಲ್ಲಿ ಉಪನಿಷತ್ತಿನ ಮೌಲ್ಯವು ಅಡಗಿರುತ್ತದೆ. ಪ್ರತಿಯೊಂದು ಶ್ರದ್ಧಾವಂತ ಮನಸ್ಸು ತೀವ್ರಾಸಕ್ತಿಯಿಂದ ರಚಿಸಲಾದ "ಸೂರ್ಯೋದಯದ ಮುನ್ನಿನ ಹಾಡು"ಗಳಿಂದ ಅನಂತವನ್ನು ಅನ್ವೇಷಿಸಲು ಹಾಗೂ ಕಾಣಲು ಸಾಧ್ಯವಾಗುತ್ತದೆ. ದೇವರ ಬಗೆಗಿನ ನಿಸ್ಸಂದೇಹವಾದ ಕಾಲ್ಪನಿಕ ವಿಷಯಾಂತರಗಳು, ಇಲ್ಲವೇ ದೇವರಿಗೆ ಸುಂದರವಾದ ಹಾಗೂ ಉತ್ಸಾಹಪೂರಿತವಾದ ವೇದಗಳ ಪ್ರಾರ್ಥನೆಗಳನ್ನು ಒಳಗೊಂಡಿದ್ದು, ವಿಶ್ವಕ್ಕೆ ದೈವೀಕ ಸಂದೇಶವನ್ನು ನೀಡುವ ಬೈಬಲ್‌ನಂತೆ ಅವು ಪ್ರತಿಪಾದಿಸುವುದಿಲ್ಲ. ಮಾನವನು ದೇವರ ಅನ್ವೇಷಣೆಯಲ್ಲಿರುವುದಕ್ಕಿಂತಲೂ ದೇವರೇ ಮಾನವನ ಅನ್ವೇಷಣೆಯಲ್ಲಿರುವನೆಂದು ಬೈಬಲ್ ತೋರಿಸುತ್ತದೆ. ಆಲೋಚನಾಪರವಾದ ಅಧ್ಯಯನ ಹಾಗೂ ಅನುಭವಿಯಾದವನು ಪ್ರಾಚೀನ ತತ್ತ್ವಶಾಸ್ತ್ರದಲ್ಲಿನ ಪ್ರಶ್ನೆಗಳಿಗೆ ನಿಜವಾದ ಪರಿಹಾರವನ್ನು ಒದಗಿಸಿರುವುದನ್ನು ಕಾಣಬಹುದು.

ಉಪನಿಷತ್ತಿನ ಅತ್ಯುನ್ನತ ಭೌತವಸ್ತು ಹಾಗೂ ಮೂಲರೂಪದ ಮೂಲ ಮಾದರಿಯನ್ನು ಪ್ರಥಮ ಶ್ರೇಷ್ಠ ವ್ಯಾಖ್ಯಾನಕಾರರಾದ ಶಂಕರಾಚಾರ್ಯರು ಹಾಗೂ ಭಾಗಶಃ ರಾಮಾನುಜಾಚಾರ್ಯ-ರಿಂದ ವ್ಯಾಖ್ಯಾನಿಸಲಾಗಿದೆ. ಅದು ಹೀಗಿದೆ: ಸಮಸ್ತ ಘಟನೆಗಳಿಗೆ ಬೆಂಬಲವಾಗಿ ಪ್ರಕೃತಿಯ ಪುರಾಣಸಾಹಿತ್ಯ, ವೈದಿಕ ದೇವತೆಗಳಿಗೆ ಬೆಂಬಲವಾಗಿ ವಿಶ್ವದ ಪರಮಾತ್ಮ. ಅತ್ಯುನ್ನತ ಆತ್ಮ, ಪರಮಾತ್ಮ ಪರಿಪೂರ್ಣನಾದವನು. ಇದಕ್ಕೆ ಸಂವಾದಿಯಾಗಿ ಪ್ಲೇಟೋವಿನ ಆದರ್ಶವಾದ, ಸ್ಪಿನೋಜವಾದದ ಅನಂತಜೀವ, ಅಥವಾ ಹೆಗಲ್‌ನ ವಿಶ್ವದ ವಿಚಾರವಾದಗಳು ಕೆಲವು ಕೊಡುಗೆ-ಗಳನ್ನು ನೀಡಿವೆಯಾದರೂ, ಹೆಚ್ಚಾಗಿ ಕಾಲ್ಪನಿಕ ಅಥವಾ ಆಧ್ಯಾತ್ಮಿಕದಲ್ಲಿ ಯಾವುದಾದರೂ ಒಂದು ಆಗಿರುತ್ತದೆ. ಇದಲ್ಲದೆ ದೇಹದ ಅಸಂತೋಷ ಮತ್ತು ಇಂದ್ರಿಯ ಶಕ್ತಿಯ ಹಿಂದೆ ಕಾರಣವೊಂದು ಬೆಂಬಲವಾಗಿದ್ದು, ಎಲ್ಲಾ ಮನಃಶಾಸ್ತ್ರೀಯ ಸ್ಪಷ್ಟೀಕರಣವು ಅದರ ಎಲ್ಲಾ ಪ್ರಮಾದ ಹಾಗೂ ಪ್ರತಿಬಂಧಗಳ ಅಹಂಕಾರದ ಆಚೆಗೆ ಅಲ್ಲೊಂದು ಆತ್ಮ ಅಥವಾ ವ್ಯಕ್ತಿನಿಷ್ಠ ಆತ್ಮವಿರುತ್ತದೆ. ಈ ಆತ್ಮವನ್ನು ತೀರ ಸರಳ ಸನ್ನಡತೆ ಹಾಗೂ ಬೌದ್ಧಿಕ ಶಿಸ್ತನ್ನು, ಅನುಷ್ಠಾನ ಮಾಡುವ ಸಂನ್ಯಾಸಿ ಅಥವಾ ಬೈರಾಗಿ, ವಿರಕ್ತ ಅಥವಾ ಯೋಗಿಯಂತೆ ಕಂಡುಕೊಳ್ಳಬಹುದು. ವ್ಯಕ್ತಿಯೊಬ್ಬನು ಇಂದ್ರಿಯಶಕ್ತಿ ಹಾಗೂ ಭಾವೋದ್ರೇಕಗಳನ್ನು ಸಂಪೂರ್ಣವಾಗಿ ನಿಯಂತ್ರಣದಲ್ಲಿಟ್ಟುಕೊಂಡು, ತಮ್ಮ ಬಗ್ಗೆ ತಿಳಿಯುವುದಲ್ಲದೆ ತಮ್ಮ ಆತ್ಮದ ಬಗ್ಗೆಯೂ ತಿಳಿದು ಅದರ ಬೆಂಬಲದಿಂದ ಮನವನ್ನು ಪ್ರವೇಶಿಸಿ, ವ್ಯಕ್ತಿತ್ವವನ್ನು ಕಂಡುಕೊಳ್ಳುವ ಮೊದಲು "ಆತ್ಮದ ತನ್ನತನವನ್ನು ವೃದ್ಧನೊಬ್ಬ, ಪ್ರೇಕ್ಷಕನೊಬ್ಬ" ಕಂಡುಕೊಳ್ಳುವಂತೆ ಕಾಣಬೇಕು. ಮಾನವನ ಅತ್ಯುನ್ನತ ಜ್ಞಾನ ಪ್ರಾರಂಭವಾಗುವುದು ವ್ಯಕ್ತಿಯ ಆತ್ಮದ ಸ್ಥಿತಿಯು ಶಾಶ್ವತ ಆತ್ಮದ ಕೇವಲ ನಶ್ವರ ಪ್ರತಿಫಲನವೆಂದು ಗೋಚರವಾದಾಗ ಮಾತ್ರ

ಸಾಧ್ಯ. ಮತ್ತು ಸಕಲ ಆಲೋಚನೆಗಳ ಅತ್ಯುನ್ನತ ಗುರಿ ಹಾಗೂ ಅಧ್ಯಯನವು ಈ ಜ್ಞಾನದ ಮೂಲಕ ಉಂಟಾಗಿ ಪರಮಾತ್ಮನಲ್ಲಿಗೆ ಹಿಂದಿರುಗಿ ಅವನೊಂದಿಗೆ ಅಭಿನ್ನತೆಯನ್ನು ಪುನಃ ಪಡೆಯ ಬಹುದಾಗಿದೆ "ಜಾಡಿ ಒಡೆದಿದೆ, ಅದರಲ್ಲಿ ಒಂದರೊಳಗೊಂದಿದ್ದ ನಿರ್ಮಲ ಆಕಾಶ ಹಾಗೂ ಅವಿಭಾಜ್ಯ ನಿರ್ಮಲ ಆಕಾಶದಿಂದ ಜಾಡಿಯು ಒಮ್ಮೊಮ್ಮೆ ತೀರ ಸರಳವೆನಿಸುತ್ತದೆ" ಇಲ್ಲಿ ತಿಳಿಯುವುದೇನೆಂದರೆ ಆತ್ಮವನ್ನರಿಯಲು ಆತ್ಮವಾಗಿರಬೇಕು ಹಾಗೂ ಈ ಅತ್ಯುನ್ನತ ಜ್ಞಾನದಿಂದ ಮರಣಾನಂತರ ಪುನರ್ಜನ್ಮದಿಂದ ಮುಕ್ತಿ ಅಥವಾ ಅಮರತ್ವವು ಪ್ರತಿಫಲವಾಗಿ ದೊರೆಯುತ್ತದೆ.

ತಾತ್ತ್ವಿಕ ಆಲೋಚನೆಯು ಮೇಲೇರುತ್ತಾ ಹೋಗುವ ಶಿಖರದಂತಿದ್ದು, ತತ್ತ್ವಶಾಸ್ತ್ರದಲ್ಲಿ ಪರಿಪೂರ್ಣ ವ್ಯಾಪ್ತವಾದ ಆತ್ಮಚಿಂತನೆಯ ಪ್ರಥಮ ಪ್ರಯತ್ನದ ಸಾಹಸವಾಗಿದ್ದು, ಅತ್ಯುತ್ತಮವಾದ ಮಾನವನ ಮನಸ್ಸು ನಿಸ್ಸಂದೇಹವಾಗಿ ಉನ್ನತ ಮಟ್ಟವನ್ನು ತಲಪುವ ಸಾಮರ್ಥ್ಯವಿದೆಯೆಂಬುದನ್ನು ನಮಗೆ ತೋರಿಸುವಂತಹ ಕನಸು ಪ್ರಾಚೀನ ಭಾರತದ್ದಾಗಿತ್ತು. ವಿಶ್ವತತ್ತ್ವದಲ್ಲಿ ಪರಮಾತ್ಮ, ಆತ್ಮವು ಬಹುಶಃ ತಾತ್ತ್ವಿಕ ಭಾವದ ಅಸಂತೋಷವು ಗುರಿ ತಲಪುವ ಸಾಹಸದಂತೆ ಕಾಣುತ್ತದೆ. ಅದು ಇಂದ್ರಿಯಗ್ರಾಹವಾದ ಆರಂಭದ ಮುಹೂರ್ತವಾಗಿದ್ದು "ವಿಶ್ವದ ಬೇರು" ಸತ್ ಅಥವಾ ಸತ್ಯವು ಮಾತ್ರ ನಿಜವಾಗಿದ್ದು ವಾಸ್ತವಾದ ಅಸ್ತಿತ್ವವಾಗಿರುತ್ತದೆ. ಇನ್ನಾವುದೇ ಇರಲಿ ವಿಶ್ವ, ದೇವರು ಹಾಗೂ ಮಾನವರು ಮಾಯೆಯ ಪ್ರಭಾವದಿಂದ ಉದ್ಗಮ ಅಸ್ತಿತ್ವ ಅಥವಾ ಭ್ರಾಮಕ ಅಸ್ತಿತ್ವದಲ್ಲಿರುತ್ತಾರೆ. 'ಸತ್' ಅಥವಾ 'ಆತ್ಮ'ದ ಕಾರಣದಿಂದ ಸಮಸ್ತ ಸೃಷ್ಟಿಯು ಗೋಚರ ಅಗೋಚರವಾಗಿದ್ದು ಅಂತಿಮ-ವಾಗಿ ಅಲ್ಲಿಗೇ ಹಿಂದಿರುಗುವವರೆಂಬುದನ್ನು ಎತ್ತಿಹಿಡಿಯುತ್ತದೆ. ಉಪನಿಷತ್ತೊಂದು ಗಂಭೀರವಾಗಿ ಹಾಗೂ ಸುಂದರವಾಗಿ ಹೀಗೆ ಹೇಳುತ್ತದೆ: "ಅಲ್ಲೊಬ್ಬ ಶಾಶ್ವತ ಚಿಂತಕನಿರುವನು, ಅಶಾಶ್ವತ ಚಿಂತನೆಗಳನ್ನು ಚಿಂತಿಸುತ್ತಾ, ಅವನೊಬ್ಬ-ನಾದರೂ ಅನೇಕರ ಆಸೆಯನ್ನು ಪೂರೈಸುವನು. ಅವನು ಪ್ರಾಜ್ಞನಾಗಿದ್ದು, ತನ್ನಾತ್ಮವನ್ನು ತನ್ನಲ್ಲಿಯೇ ಗ್ರಹಿಸುತ್ತಾ, ಅವರು ಶಾಶ್ವತ ಜೀವನ, ಶಾಶ್ವತ ಶಾಂತಿಯನ್ನು ಹೊಂದುವಂತೆ ಮಾಡುವನು." ಗ್ರೀಸ್‌ನ ಅತ್ಯುನ್ನತ ಜ್ಞಾನವು ಅವಲೋಕಿಸಿದಂತೆ ಅದು "ನಮ್ಮನ್ನು ಅರಿತುಕೊಳ್ಳುವುದು" ಭಾರತದ ಅತ್ಯುನ್ನತ ಜ್ಞಾನವು "ನಮ್ಮ ಆತ್ಮವನ್ನು ಅರಿಯುವುದು" ಆಗಿದೆ.

ಹೀಗೆ ನಾವು ಭಾರತೀಯ ಚಿಂತನೆಯ ವಿಷಯಾತೀತ ಗುಣವನ್ನು ಕಾಣುತ್ತೇವೆ. ಉತ್ಕಟವಾಗಿ ಆಶಿಸುವುದಕ್ಕಿಂತಲೂ ಮಿಗಿಲಾಗಿ ಅದೃಶವಾದುದು, ಅನಂತವಾದುದು. ಕೇವಲ ಪ್ರಾಯೋಗಿಕ ಜ್ಞಾನದ ಎಲ್ಲ ಮಿತಿಯನ್ನು ಮೀರುವ ಅನಿವಾರ್ಯತೆಯಿದ್ದು, ಅಂತರಾಳದ ತಿರುಳನ್ನು ಗ್ರಹಿಸಲು ಕೇವಲ ಚಿಪ್ಪನ್ನು ಪ್ರವೇಶಿಸುವಂತಾಗಿದೆ. ಅಡಕಗೊಳಿಸಿರುವ ಹಲವಾರು ಲಕೋಟೆಗಳು ಅಥವಾ ಚಿಪ್ಪುಗಳನ್ನು ಅವುಗಳ ಕೊನೆಯ ಭಾಗವನ್ನು ಮೀರಿ ನಾವು ಭೇದಿಸಲಾಗುವುದಿಲ್ಲ. ಅಂತಹ ಮನಸ್ಸಿಗೆ ಅಪರಿಮಿತವಿಲ್ಲದ ಪರಿಮಿತಿಯು ಅರ್ಥರಹಿತವಾದುದು. ಈ ಐಹಿಕ ಭೂಮಿ ಶಾಶ್ವತವಲ್ಲ. ಜೀವನವು ಹುಟ್ಟು, ಸಾವು ಮತ್ತು ಎಚ್ಚರದ ಕನಸು. ಅನಂತ ಭೂಮಿ ಭಾರತ. ಅದರ ಆಗಸವು ವಿಶಾಲವಾದುದು ಹಾಗೂ ನೀಲವರ್ಣವಾಗಿವೆ; ಅದರ ಪರ್ವತಗಳು ಅತ್ಯುನ್ನತ ಹಾಗೂ ದುರ್ಗಮ-ವಾದುದು; ಅದರ ಅರಣ್ಯಗಳು ದಟ್ಟವಾಗಿದ್ದು ಸೀಮಾತೀತವಾಗಿವೆ. ಅದರ ನದಿಗಳು ಅತ್ಯಂತ ಅಗಲ ಹಾಗೂ ನೀಳವಾಗಿದ್ದು, ಭಾರತದ ಅನಂತತೆಯನ್ನು ಭಾವಿಸಿಕೊಳ್ಳಲು ಸಹಜವಾಗಿದೆ.

ತತ್ತ್ವಶಾಸ್ತ್ರದ ನಿಸರ್ಗವಾದ ಅಥವಾ ಭೌತವಾದಕ್ಕೆ ಎದುರಾಗುವುದೆಲ್ಲವನ್ನೂ ಖಂಡಿತವಾಗಿ ಮೆಚ್ಚಿಕೊಳ್ಳುವ ವೇದಾಂತಿಯ ಸ್ಥಾನದ ವಿಚಿತ್ರ ಶಕ್ತಿ ಇಲ್ಲಿದೆ. ಹಿಂದೂ ಧರ್ಮವು ವೈಜ್ಞಾನಿಕ

ಸಂಶೋಧನೆಗಳೊಂದಿಗೆ ಸಮನ್ವಯ ಮಾಡಿಕೊಳ್ಳಲು ಪ್ರಯತ್ನಿಸದೆ, ಭಾವನಾತ್ಮಕ ರಕ್ಷಣೋಪಾಯ-ಗಳನ್ನು ಹಿಮ್ಮೆಟ್ಟುವ ಸಾಲಿನಲ್ಲಿ ಯಾವಾಗಲೂ ಮುಕ್ತವಾಗಿ ತೆರೆದಿರುತ್ತದೆ. ಇಂದ್ರಿಯಾನುಭವ ಪ್ರಪಂಚವು ಸೀಮಿತ ಜ್ಞಾನಕ್ಷೇತ್ರದಲ್ಲಿರುವುದರಿಂದ ತಾರ್ಕಿಕವಾಗಿ ಅಜ್ಞೇಯತಾವಾದವು ಮುನ್ನಡೆಯುವುದೆಂದು ಸ್ಪೆನ್ಸರ್, ಮಿಲ್ ಹಕ್ಸ್‌ಲಿ ಮತ್ತಿತರರು ಇತ್ತೀಚಿನ ವರ್ಷಗಳಲ್ಲಿ ಪ್ರಾಯೋಗಿಕ ಅಧ್ಯಯನ ವಿಭಾಗದಲ್ಲಿ ವ್ಯಾಖ್ಯಾನಿಸಲಾಗಿದೆ ಎಂಬುದನ್ನು ವೇದಾಂತಿಯು ಸಮರ್ಥಿಸುತ್ತಾ ಪ್ರಸ್ತುತ ಪಶ್ಚಿಮದ ತತ್ತ್ವಶಾಸ್ತ್ರದ ಚಿಂತನಾವಿಧಾನಗಳು ಅತ್ಯುತ್ತಮವಾದುದೆಂದು ಸಾಮರಸ್ಯವನ್ನು ಹೊಂದಿವೆ. ಮಾನವನ ಧಾರ್ಮಿಕ ಕ್ಷೇತ್ರದ ಮನವರಿಕೆ ಹಾಗೂ ನಂಬಿಕೆಗಳನ್ನು ಮನಸ್ಸಿನ ಭಾವನೆಗಳು ಗ್ರಹಿಸಲಾರವು, ಇಂದ್ರಿಯಗ್ರಾಹ್ಯವಾದ ಪ್ರಪಂಚವು ಅರೆ ಭೌತವಾದುದರಿಂದ ಅವುಗಳ ಮೂಲಕ ಗ್ರಹಿಸಲಾಗುತ್ತದೆ. ವೈಜ್ಞಾನಿಕ ಕಾರಣಗಳನ್ನು ಮುಕ್ತಗೊಳಿಸುವಲ್ಲಿ ತತ್ತ್ವಜ್ಞಾನವು ಇಲ್ಲಿ ಪದಾರ್ಪಣ ಮಾಡಿದೆ. ನಶ್ವರದ ಮೂಲಕ ಶಾಶ್ವತವನ್ನು ಅರಿಯಲಾಗದೆಂದು ಪ್ರಕಟಿಸುತ್ತಾ ಹಾಗೂ ಇಂದ್ರಿಯಗೋಚರವಾದ ಅಂತಿಮ ನೆಲೆಗಳನ್ನು ವೇದಾಂತಿಯು ಯಾವಾಗಲೂ ವಿಚಾರಿಸುತ್ತಿದ್ದು, ತಾತ್ತ್ವಿಕ ವಿಶ್ಲೇಷಣೆಯ ಅಂತಿಮ ಸಂಗತಿಗಳನ್ನು ರೂಪಿಸುತ್ತಾ, ಅತ್ಯಂತ ನಿರ್ಮಲ ದೃಷ್ಟಿಯನ್ನು ಪಡೆಯಲಾಗದ ಪಾಶ್ಚಿಮಾತ್ಯ ತತ್ತ್ವಜ್ಞಾನವು ಮಾನಸಿಕ ಪ್ರಪಂಚದ ಸ್ವಪ್ರಜ್ಞೆ ಹಾಗೂ ಭೌತಿಕ ಪ್ರಪಂಚದ ಗ್ರಹಿಕೆಯಲ್ಲಿ ಶಾಶ್ವತತೆಯ ಹಾಗೂ ಮಾನಸಿಕ ಪ್ರಪಂಚದ ಅಹಂನ ಸಂರಕ್ಷಣೆಯಿಂದ ಮಾನಸಿಕ ಪ್ರಪಂಚದ ನೇರಜ್ಞಾನ ಸಾಧ್ಯ ಅಥವಾ ಆತ್ಮಸಾಕ್ಷಿಕತೆಯ ಮೂಲವರ್ತನೆಯಿಂದ ಸಾಧ್ಯವಾಗುತ್ತದೆ. ಅದು ಶುದ್ಧತತ್ತ್ವಕ್ಕೆ ಸಂಬಂಧಿಸಿದ ಸತ್ಯಾಂಶದಿಂದ ಇಂದ್ರಿಯಗ್ರಾಹ್ಯವಾದ ವೈದೃಶ್ಯವನ್ನು ಎತ್ತಿ ತೋರಿಸುತ್ತದೆ.

ವಿಶ್ವದರ್ಶನ ಯೋಗ್ಯವಾದ, ಅವಿದ್ಯೆ ಅಥವಾ ಮಾಯೆಯೆಂಬ ಕೆಲವು ಶಕ್ತಿಗಳಿಂದ ಕೂಡಿರುವ ವೇದಾಂತಿ, ಅದ್ವೈತಿಯೆಂದು ಶ್ರೇಷ್ಠ ವ್ಯಕ್ತಿಯನ್ನು ನಂಬಲಾಗುತ್ತದೆ. ತತ್ತ್ವದ ಅಸ್ತಿತ್ವಕ್ಕೆ ಆಧಾರವಾಗಿರುವ, ವಿಶ್ವದ ಶಾಶ್ವತ ತಳಹದಿಯಾಗಿರುವ, ಜ್ಞಾನವೆಂಬ ಅಂತಿಮ ಸತ್ಯವು ನಮ್ಮನ್ನು ತಲುಪುವ ಮಾರ್ಗದಲ್ಲಿ ವಿಶ್ವದ ಸರ್ವಸ್ವವೂ ಇದ್ದು, ಭ್ರಮೆ ಅಥವಾ ಮೌಢ್ಯ, ಅಜ್ಞಾನ ಅಥವಾ ಮಾಯೆಯೆಂದು ಕೆಲವು ಪ್ರಚೋದನೆಗಳಿಂದ ಕರೆಯಲ್ಪಡುತ್ತದೆ. ಅತ್ಯುನ್ನತ ಜ್ಞಾನದ ಶಾಶ್ವತ ಅಂಶದ ಅಂಗೀಕಾರವು ಪ್ರಥಮ ಹಂತವಾಗಿರುತ್ತದೆ.

ವೇದಾಂತದ ಪ್ರಕಾರ ನಮ್ಮನ್ನು ಪುನರಾವರ್ತಿತ ಜನನ ಮರಣಗಳು ಕರ್ಮ ಅಥವಾ ಫಲವಾಗಿದ್ದು ಪ್ರಪಂಚಕ್ಕೆ ಬಂಧಿಸುತ್ತದೆ. ಬೇರೊಬ್ಬರ ಕಾರ್ಯದ ಫಲಕ್ಕೆ ಆಶಿಸುವುದನ್ನು ತೊರೆದು, ನಮ್ಮ ಇಂದ್ರಿಯ ಹಾಗೂ ಕಾರ್ಯಗಳನ್ನು ನಿಗ್ರಹಿಸುತ್ತಾ, ಆತ್ಮಸಂಯಮ ಹಾಗೂ ಪ್ರಶಾಂತತೆಗಳನ್ನು ಬೆಳೆಸಿಕೊಳ್ಳುತ್ತಾ, ಇಂದ್ರಿಯ ಕ್ರಿಯೆ ಹಾಗೂ ವಿಶ್ವ ಕ್ರಿಯೆಗಳನ್ನು ಅನುಸರಿಸಿ ಅದರಾಚೆಗಿನ ಸತ್ಯತೆ-ಗಳನ್ನು ಪಡೆಯುವೆವೆಂದು ಭಾವಿಸುತ್ತೇವೆ. ಹಿಂದೂಗಳಲ್ಲಿನ ಯೋಗತತ್ತ್ವಶಾಸ್ತ್ರದಲ್ಲಿ ವಿವಿಧ ಪದ್ಧತಿಗಳು ಪ್ರವೃತ್ತಿಗಳಿದ್ದು, ಆತ್ಮಸಂಯಮ ಶಿಕ್ಷಣದ ಪರಿಮಿತಿಯಲ್ಲಿ ಅದ್ವೈತಿಗಳಂತೆ ಮಾನವನ ಆತ್ಮವು ಶರೀರದ ದಾಸ್ಯದಿಂದ ವಿಮೋಚನೆಗೊಂಡು ರಾಷ್ಟ್ರೀಯ ಭಾವನೆಯ ಸ್ಥಾಪನೆಯ ಅನಿವಾರ್ಯತೆಯನ್ನು ತಿಳಿಯಲಾಗಿದೆ. ವಿಶ್ವವೆಲ್ಲವೂ ಆತ್ಮನಲ್ಲಿ ಅಭೇದಗೊಂಡು ಎಲ್ಲ ಜೀವಿಗಳ ಶಾಶ್ವತ ತತ್ತ್ವಗಳನ್ನು ಸೃಷ್ಟಿಸಲು ಬೆಂಬಲಿಸುತ್ತಾ ಹಾಗೂ ತನ್ನಲ್ಲಿಯೇ ಮತ್ತೆ ಹಿಂತೆಗೆದುಕೊಳ್ಳುತ್ತಾ ಇರುತ್ತದೆ. ಈ ಯೋಗಪದ್ಧತಿಗಳು ಆಶಿಸಿದ ಮುಕ್ತಿಯನ್ನು ಹೊಂದಲು ತಮ್ಮದೇ ಆದ ವಿಧಾನವನ್ನು

ಬೋಧಿಸುತ್ತವೆ. ಆದರೆ ಸಿದ್ಧಿಯ ಎಲ್ಲ ಬಂಧನಗಳನ್ನು ತ್ಯಜಿಸಿ ಉತ್ಸಾಹಭರಿತವಾದ ಕಾರ್ಯಾಚರಣೆಯನ್ನು ವಿಧಿಸುತ್ತದೆ. ಪ್ರಾಚೀನ ಭಾರತವು ಮಾನವನ ಅವ್ಯಕ್ತ ಸಾಮರ್ಥ್ಯವನ್ನು ಮೀರಿರುವ, ಅನಂತ ಮತ್ತು ವಿಶ್ವವ್ಯಾಪಿಯಾದ ಒಲವಿನ ಮಿತಿಯುಳ್ಳದ್ದಾಗಿದ್ದು, ಧರ್ಮವಿಕಸನದ ಕೀಲಿಕೈಯನ್ನು ಮೊದಲಿನ ರೂಪದಲ್ಲಿ ಒದಗಿಸುತ್ತದೆ.

ಪ್ರಕೃತಿ ಶಕ್ತಿ ಮತ್ತು ವಸ್ತುಗಳ ವ್ಯಕ್ತೀಕರಣದಲ್ಲಿ ಸೂರ್ಯ, ಅರುಣೋದಯ, ಆಕಾಶ, ಬೀಸುಗಾಳಿ ಮತ್ತು ಭಾರೀ ಮಳೆಗಳನ್ನು ವೇದದ ಸ್ತೋತ್ರಗಳಲ್ಲಿ ಕಂಡಂತೆ ಬಹುದೇವತಾರಾಧನೆ, ಪ್ರಕೃತಿಯಾರಾಧನೆಯನ್ನು ಪ್ರಥಮ ನೋಟದಲ್ಲಿ ತೋರಿಸುವಂತೆ ಕಾಣುತ್ತದೆ. ಕೂಲಂಕಷವಾದ ಅಧ್ಯಯನದಿಂದ ಅನೇಕ ದಿವ್ಯತೆಗಳು ಭಿನ್ನವಾದ ವ್ಯಕ್ತಿತ್ವವನ್ನು ಹೊಂದಿರದಿದ್ದರೂ ಗ್ರೀಕ್ ಮತ್ತು ರೋಮನ್ ಪುರಾಣಗಳು ತಿಳಿಸುವಂತೆ ಅಗೋಚರವಾದ ಅಸ್ತಿತ್ವದಲ್ಲಿ ಅತೀತವಾಗಿರುವ ಏಕತೆಯೊಂದಿಗೆ ಸಮ್ಮಿಳಿತವಾಗಿ ವಿಭಿನ್ನ ಅಭಿವ್ಯಕ್ತಿಗಳನ್ನು ಮಾತ್ರ ತೋರಿಸುತ್ತವೆ. ಋಗ್ವೇದದ ಭಾಗವೊಂದು ತಿಳಿಸುವಂತೆ "**ಅಸ್ತಿತ್ವವೊಂದನ್ನೇ ಜ್ಞಾನಿಗಳು ವಿವಿಧ ರೀತಿಯಲ್ಲಿ ಕರೆಯುವರು.**"

ಅದು ಈಗ ಕೆಲವು ನೈಸರ್ಗಿಕ ವಸ್ತುಗಳನ್ನು ದೈವೀಕರಿಸುವಲ್ಲಿ ಮನಸ್ಸನ್ನು ಪ್ರಪ್ರಥಮವಾಗಿ ಮುನ್ನಡೆಸಿತು. ಅನಂತರ ಪ್ರಕೃತಿಯ ಮೂಲಘಟಕವನ್ನು ಆಳುವ ಶಕ್ತಿಯನ್ನು ಮೂರ್ತೀಕರಿಸಿ ಆರಾಧಿಸುವ ಅಂಗೀಕಾರಕ್ಕೆ ಒಳಗಾಗುವಂತಹ ವಸ್ತುವಿನ ಅಧೀನಕ್ಕೆ ಪ್ರಕೃತಿಯ ಮೂಲಘಟಕವನ್ನು ಒಳಪಡಿಸಲಾಯಿತೆ? ಅದು ಎಲ್ಲಾ ಪರಿಮಿತ ವಸ್ತುಗಳ ಅಶಾಶ್ವತ ಗುಣ ಹಾಗೂ ಅಸತ್ಯ ಹಾಗೂ ಪೊಳ್ಳುತನದ ಜ್ಞಾನವೆನಿಸಿತು. "ಅವರ ಯಾವುದೇ ಸ್ಥಿರವಾದ ನೆಲೆಯ ಕೊರತೆ, ಸ್ಥಾನಗಳ ಅಭದ್ರತೆ, ತೃಪ್ತಿಯಿಲ್ಲದಿರುವುದು" ಈ ಭಾವನೆಗಳು ನಿಸ್ಸಂಶಯವಾಗಿ ಧರ್ಮನಿಷ್ಠರ ಧರ್ಮಪ್ರಜ್ಞಾನಿಷ್ಠೆಯ ಅತ್ಯಂತ ಮುಂಚಿನ ಅರುಣೋದಯವನ್ನು ಪ್ರತಿನಿಧಿಸುತ್ತದೆ. ಇದು ಪ್ರಾಚೀನ ಭಾರತದ ಧಾರ್ಮಿಕ ನಂಬಿಕೆಯ ಪ್ರಾಥಮಿಕ ರೂಪವಾಗಿ ಕಂಡುಬರುತ್ತದೆ. ಅನಂತರದ ಚಿಂತನೆಯಲ್ಲಿ ಸೃಷ್ಟಿಕರ್ತ ಸರ್ವಶಕ್ತನಾಗಿರುವವನೂ, ಸಕಲಕ್ಕೂ ಪ್ರಥಮ ಕಾರಣನೆಂಬ ಭಾವನೆ ವಿಶ್ವದಲ್ಲಿ ಅಸ್ತಿತ್ವಕ್ಕೆ ಬಂದಿತೆಂಬ ವಾದ ಉಂಟಾಯಿತು. ಭಾರತೀಯರಿಗೆ ಸಕಲವನ್ನೂ ಆವರಿಸಿರುವ ಆಗಸ, ವೈಭವಯುಕ್ತ ಸೂರ್ಯ, ಮೌನತಾರೆಗಳು, ಶಾಶ್ವತವಾದ ಗಿರಿಪರ್ವತಗಳು, ಶ್ರೇಷ್ಠ ನದಿಗಳು ಶಕ್ತಿಯಾಚರಣೆಯ ವಿಧಗಳಾಗಿ ಮನಸ್ಸಿಗೆ ಬಂದು ಸತ್ವಹೀನ ಹಾಗೂ ನಶ್ವರ ಬದುಕಿನ ನಡುವೆ ಇವುಗಳು ತಕ್ಷಣ ದೈವೀಕರಿಸಲ್ಪಟ್ಟವು. ಹೀಗೆ ಅತ್ಯಂತ ಪೂರ್ವದ ಪ್ರಾಕೃತರೂಪದ ಆಸ್ತಿಕ ಆರಾಧನೆಯು ನಮಗೆ ಲಭಿಸುತ್ತದೆ.

ಅನುಕ್ರಮವಾಗಿ ಮನಸ್ಸು ಹೆಚ್ಚು ತತ್ತ್ವಚಿಂತನೆಯ ಚಿಂತನಾತ್ಮಕವಾಗಿದ್ದು, ಇವು ಪ್ರಕೃತಿ-ದೈವತ್ವಗಳನ್ನು ಬೇರ್ಪಡಿಸಿ ಮಸುಳಿಸಿತು ಮತ್ತು ಈವರೆಗೂ ಪ್ರಕೃತಿಯೇ ಪರಿಪೂರ್ಣವೆಂದು ಭಾವಿಸಲಾಯಿತು. ಉಪನಿಷತ್ತುಗಳಲ್ಲಿ ಧಾರ್ಮಿಕ ಜಾಗೃತಿಯು ಪ್ರಕೃತಿಯಾಚೆಗೆ, ಸರ್ವಸ್ವದಾಚೆಗೆ 'ಮಾತು ಮನಸ್ಸುಗಳು ಎಲ್ಲಿ ಹೋಗಲಾಗುವುದಿಲ್ಲವೋ' ಅವುಗಳಾಚೆಗೆ ಹೋಗಲು ಪ್ರಯತ್ನಿಸುತ್ತವೆ ಹಾಗೂ ಅದೃಶ್ಯ ಸತ್ತ್ವವನ್ನು ಗ್ರಹಿಸಲು, ಸ್ವರ್ಗವೂ ಅಲ್ಲದ ಮರ್ತ್ಯವೂ ಅಲ್ಲದ, ಆದರೆ ಹೇಳಲಾಗದ, ಅಪರಿಮಿತ, ಅತ್ಯುನ್ನತ ಹಾಗೂ ಎಲ್ಲಕ್ಕಿಂತಲೂ ಅತ್ಯಂತ ಶಾಶ್ವತವಾದ ಶುದ್ಧಜೀವಿ, ಅಂತರ್ಜೀವಿಯಾಗಿ ಪ್ರಕೃತಿ ಹಾಗೂ ಮಾನವರಿರುವರು.

ವೇದಗಳಲ್ಲಿ ಅಂತರ್ಗತವಾಗಿರುವ ದೇವರ ಸರ್ವದೇವಾತ್ಮಕನಾದ ಭಾವನೆ, ತತ್ತ್ವಚಿಂತನೆಯ ಸಮನ್ವಯವು ಉಪನಿಷತ್ತುಗಳಲ್ಲಿ ಸುಸ್ಪಷ್ಟವಾಗಿದೆ. ಅಂತೆಯೇ ಹಿಂದೂಗಳ ಚಿಂತನಾಶಕ್ತಿಯಲ್ಲಿ

ಈ ಮೊದಲೇ ತನಗೆ ತಾನೇ ಬೇರೂರಿದೆ. ಹಾಗೂ ಅದರಿಂದ ಮಾನವರ ಸಕಲ ಸಾಮಾಜಿಕ ಹಾಗೂ ನೈತಿಕ ಜೀವನ ಅಭಿವೃದ್ಧಿ ಹೊಂದಿದೆ. ಮಾನವ ಕುಲದ ಬೌದ್ಧಿಕ ಇತಿಹಾಸವನ್ನು ಸರ್ವ ದೇವಾತ್ಮಕವಾದವು ಒಂದಲ್ಲೊಂದು ರೂಪದಲ್ಲಿ ಆವರಿಸಿದ್ದು, ವಿಶ್ವದ ಕೆಲವು ಶ್ರೇಷ್ಠ ಚಿಂತಕರನ್ನು ಆಕರ್ಷಿಸಿದೆ. ಅಲ್ಲಿ ಸರ್ವದೇವಾತ್ಮಕವಾದ ಮತ್ತು ಸರ್ವಬ್ರಹ್ಮವಾದವಿದೆ. ಯೂರೋಪಿನ ಸರ್ವ ದೇವಾತ್ಮಕವಾದವು ಸಾಮಾನ್ಯವಾಗಿ ದೇವರು ಎಲ್ಲಾ ಮೂಲವಸ್ತುವಿನೊಂದಿಗೂ ಸಮವ್ಯಾಪಕ-ನಾಗಿದ್ದು, ವಿಶ್ವವೇ ದೇವರೊಂದಿಗೆ ಗುರುತಿಸಿಕೊಂಡಿದೆ. ಸಕಲ ವಸ್ತು ಜೀವಿಗಳು ದೈವಿಕ ಪ್ರಕೃತಿಯ ಅವಿಭಾಜ್ಯ ಅಂಗ. ಅದೆಂದರೆ ಪರಿಮಿತಿಯೇ ಅನಂತವಾದುದು. ಭಾರತೀಯ ಆಧ್ಯಾತ್ಮಿಕವಾದ, ಸರ್ವಬ್ರಹ್ಮವಾದವು ಅತ್ಯಂತ ಭಿನ್ನವಾದುದಾಗಿದೆ ಹಾಗೂ ಅತ್ಯಂತ ಆಧ್ಯಾತ್ಮಿಕವಾಗಿದೆ. ಅದು ಪರಿಮಿತ ವಿಶ್ವದ ದೈವೀಕರಣವನ್ನು ಸಮರ್ಥಿಸುವುದಿಲ್ಲವಾದರೂ, ಅದರ ಶೂನ್ಯತೆಯು ಅದಲ್ಲವೆಂಬ ಸೂತ್ರವನ್ನು ಅಭಿವ್ಯಕ್ತಗೊಳಿಸುತ್ತದೆ. ವಿಶ್ವವೇ ದೇವರು, ಆದರೆ ವಿಶ್ವವು ಶೂನ್ಯವಾದುದು. ಮತ್ತು ದೇವರು ಸರ್ವಾಂತರ್ಯಾಮಿ- ಅನಂತದ ಸತ್ಯತೆ ಅದೊಂದೇ.

ಅದೆಂದರೆ ಪ್ರಾಥಮಿಕವಾಗಿ ನಿಜ ಜಾಗೃತಿಯೊಂದು- ವಿಶ್ವಜಾಗೃತಿಯ ಶೂನ್ಯತೆಯು ಈ ಭಾವನೆಯನ್ನು ಉಂಟುಮಾಡಿತು. ವಸ್ತುವಿನ ಕೆಳಗೆ ನೆರಳಿದೆ, ಪರಿಮಿತದಾಚೆಗೆ ಅನಂತವಿದೆ. ಭಾರತೀಯ ಸೂಕ್ತಿಯ ತಾತ್ಪರ್ಯವೆಂದರೆ "ಅಲ್ಲಿರುವುದೊಂದೇ ಜೀವ ಎರಡೆಂಬುದಿಲ್ಲ" "ಏಕಂ ಏವ ಅದ್ವಿತೀಯಂ" ಶಾಸ್ತ್ರೀಯವಾದ ಮೂಲತತ್ತ್ವದ ವಸ್ತುವಿನ ಸಹಾಯದಿಂದ ಏಕಾಭಿಪ್ರಾಯವನ್ನು ನೀಡಲು ಪ್ರಯತ್ನಿಸಲಾಗುತ್ತದೆ. ಏಕದಲ್ಲಿ ಅನೇಕ ಎಂಬ ಸಮಸ್ಯೆಗೆ ಆರಂಭದ ಹಂತದಲ್ಲಿ ಮಾನವನ ಮನಸ್ಸು ಈ ಉತ್ತರವನ್ನು ನೀಡುತ್ತದೆ. ವಿವಿಧ ಗುಣಗಳ ಹಿನ್ನೆಲೆಯಲ್ಲಿ ಶಾಶ್ವತ ಹಾಗೂ ಸ್ಥಿರವಾದ ಹೇಳಲಾಗದ ಬದಲಾವಣೆಗಳು ಹೂವಿನಲ್ಲಿರುವುದೆಂದು ಭಾವಿಸಲಾಗಿದೆ. ಹಾಗೆಯೇ ಎಲ್ಲಾ ವಸ್ತು ಮೇಲ್ಮೈಗಳ ಕಾಣ್ಕೆಗಳ ಕೆಳಗೆ ಬದಲಾಗದ ಏಕಮಾತ್ರ ಸತ್ಯವೆಂದರೆ ಬ್ರಹ್ಮ, ಒಂದು ಜೀವಿ, ಹಾಗೂ ಯಾರು ಅವನನ್ನು ಅಥವಾ ಅದನ್ನು ಬಲ್ಲರೋ, ಅವರು ಸಕಲೇಂದ್ರಿಯ ಜ್ಞಾನದಿಂದ ವಿಮುಖರಾಗಿ ಶುದ್ಧ ಅಸ್ತಿತ್ವದ ಪ್ರತ್ಯಕ್ಷ ಜ್ಞಾನವನ್ನು ಚಿಂತಿಸುವರು.

ಆ ಹಂತದಲ್ಲಿ, ಮಾನವನ ಮನಸ್ಸು ಸತ್ಯವನ್ನು ಊಹಿಸುತ್ತಾ ಹಾಗೂ ತಡವರಿಸುತ್ತಿದ್ದಾಗ, ರೂಪಕೋಕ್ತಿಗಳಿಗಿಂತ ಹೆಚ್ಚಾಗಿ ಸ್ವರೂಪ ಕಾರಣಗಳು ರೂಪಿಸಿದ ಭಾವನೆಗಳು ಹಾಗೂ ತತ್ತ್ವಶಾಸ್ತ್ರದ ಅತ್ಯಂತ ಆಳವಾದ ಪರ್ಯಾಲೋಚನೆಯಿಂದ ಐಂದ್ರಿಕ ಮೂರ್ತಿಗಳು ಮೈದಾಳುವಂತಾಯಿತು. ಭಗವಂತನು ಹೀಗೆ ನಿರೂಪಿಸುತ್ತಾನೆ. "ನಾನು ಸೂರ್ಯನಲ್ಲಿ ಬೆಳಕಾಗಿ, ಅಗ್ನಿಯಲ್ಲಿ ತೇಜಸ್ಸಾಗಿ, ಭೂಮಿಯಲ್ಲಿ ಸುಗಂಧವಾಗಿ, ಸದ್ಗುಣಗಳಲ್ಲಿ ಗುಣವಾಗಿ ಎಲ್ಲಕ್ಕೂ ಆದಿ ಮಧ್ಯಾಂತವಾಗಿದ್ದೇನೆ." ಆದರೆ ನಿಜವಾಗಿ ದೇವನೊಬ್ಬನೇ ಇವೆಲ್ಲಕ್ಕೂ ಕಾರಣನಾಗಿದ್ದಾನೆ.

ಉಪನಿಷತ್ತಿನ ಕರ್ತೃಗಳು ತತ್ತ್ವಾತ್ಮಕ ಹಾಗೂ ತರ್ಕಾಧಾರಿತ ಈಶ್ವರವಾದದಲ್ಲಿನ ಭೇದವನ್ನು ಸ್ಪಷ್ಟವಾಗಿ ನೋಡಿದ್ದರೆಂದು ಕಾಣುತ್ತದೆ. ಈಶ್ವರವಾದವು ಕೇವಲ ಸಾಂಪ್ರದಾಯಿಕ ಅಥವಾ ಹುಟ್ಟುಗುಣದ ನಂಬಿಕೆಯ ತಳಹದಿಯ ಮೇಲಿದೆ. ಹಾಗೂ ಆತ್ಮ ಮತ್ತು ವಿಶ್ವಪ್ರಕೃತಿಯ ಆಳವಾದ ಪರ್ಯಾಲೋಚನೆ ಹಾಗೂ ಒಳನೋಟಗಳಿಂದ ಅತ್ಯುನ್ನತವಾದ ನಂಬಿಕೆಯು ಉಂಟಾಗುತ್ತದೆ. ಇದನ್ನು ಕಂಡ ಅನಂತರ, ಅವರಿಗಾಗದಿದ್ದರೂ ಮತ್ತೆ ಉದ್ಧೃತ ಭಾಗದಿಂದ ಒಂದರಿಂದ ಮತ್ತೊಂದನ್ನು ಕಾಣುವುದು ಸುಲಭವಾದುದಲ್ಲ. ಪ್ರತಿಯೊಬ್ಬರೂ ತಾವು ದೇವರಲ್ಲಿ ನಂಬಿಕೆಯುಳ್ಳವರು ಹಾಗೂ

ಉಪಾಸಕರು ಮತ್ತು ದೇವರನ್ನು ತಿಳಿಯಲು ಕುತೂಹಲವುಳ್ಳವರೆಂದು ಭಾವಿಸಿ ಸ್ವಯಂ ಘೋಷಿಸಿದರು. ಆದರೆ ಮತಧರ್ಮಶಾಸ್ತ್ರದ ವಿದ್ಯಾರ್ಥಿಗಳ ವಿನಾಯಿತಿಗಳನ್ನು ಒಪ್ಪಿಕೊಳ್ಳಲಿಲ್ಲ. ಅವನಲ್ಲಿ ನಂಬಿಕೆ ಹಾಗೂ ಅನ್ವೇಷಣಾಪ್ರವೃತ್ತಿಯಿದ್ದರೂ, ಯಶಸ್ವೀ ವಿದ್ಯಾರ್ಥಿಗೆ ಅಗತ್ಯವಾದ ಬೌದ್ಧಿಕ ಹಾಗೂ ಆಧ್ಯಾತ್ಮ ಸಾಧನೆಗಳ ಶಕ್ತಿಯನ್ನು ಹೊಂದಿರಲಿಲ್ಲ. ಅವನ ಬುದ್ಧಿಶಕ್ತಿಯು ಅತ್ಯಂತ ಅವಿಶ್ರಾಂತವಾಗಿದ್ದು ಹಾಗೂ ಅತಿಹೆಚ್ಚು ಬಾಹ್ಯವಸ್ತುಗಳನ್ನು ಸ್ವೀಕರಿಸಿದ್ದರಿಂದ ಇಂದ್ರಿಯಾತೀತ ಸತ್ಯಗಳನ್ನು ಗ್ರಹಿಸಲಾಗಲಿಲ್ಲ. ಬಹುಶಃ ಕೇವಲ ಬೌದ್ಧಿಕ ಚಿತ್ತೈಕಾಗ್ರತೆಯ ಪೆಟ್ಟಿನಿಂದ, ಅವನು ದೇವರ ಸ್ವಭಾವವನ್ನು ತಿಳಿದುಕೊಳ್ಳುವಲ್ಲಿ ಯಶಸ್ವಿಯಾಗುತ್ತಾನೆ. ಅವನ ಹೃದಯ ಶುದ್ಧಿ ಹಾಗೂ ಹೃತ್ಪೂರ್ವಕವಾದ ಭಕ್ತಿ ಸಾಧನೆಯಾಗದ ಹೊರತು ತನ್ನಲ್ಲಿ ದೇವರನ್ನು ಸ್ಥಾಪಿಸಲು ವಿಫಲನಾಗುತ್ತಾನೆ. ಅಂತೆಯೇ ನಿಜವಾಗಿ ಅವನನ್ನು ಕಾಣಲಾಗುವುದಿಲ್ಲ. ಆದುದರಿಂದ ನಮ್ಮ ಮತಧರ್ಮಶಾಸ್ತ್ರಜ್ಞರು ತಮ್ಮ ಶಿಷ್ಯರಿಗೆ, ದೈವ ವಿಜ್ಞಾನದ ಧಾರ್ಮಿಕ ವಿದ್ಯಾರ್ಥಿಗಳಾಗಿ ಒಪ್ಪಿಕೊಳ್ಳುವ ಮೊದಲು ದೀರ್ಘವಾದ ಬೌದ್ಧಿಕ ಮತ್ತು ಆಧ್ಯಾತ್ಮಿಕ ಸಾಧನೆಯನ್ನು ಮಾಡಬೇಕೆಂದು ಆಗ್ರಹಿಸುತ್ತಿದ್ದರು. ಪ್ರಶ್ನೋಪನಿಷತ್ತಿನಲ್ಲಿ, ಪಿಪ್ಪಿಲಾದ ಋಷಿಯು ಆರು ದೈವ ಅನ್ವೇಷಕರನ್ನು ಕಳುಹಿಸುವುದನ್ನು ಕಾಣುತ್ತೇವೆ.... ದೈವೋಪಾಸಕ-ರೆಂದು ವರ್ಣಿಸಲ್ಪಟ್ಟ ಅನ್ವೇಷಕರನ್ನು...... ಧಾರ್ಮಿಕ ಬೋಧನೆಯನ್ನು ಕೈಗೊಳ್ಳುವ ಮೊದಲು ಅಂತಹವರನ್ನೂ ಸಹಾ ಮತ್ತೊಂದು ವರ್ಷದ ಶಿಸ್ತಿನ ಸಾಧನೆಗಾಗಿ ಕಳುಹಿಸಲಾಯಿತು. ಛಾಂದೋಗ್ಯ ಉಪನಿಷತ್ತಿನಲ್ಲಿ ಸತ್ಯಕಾಮ ಜಾಬಾಲನು ತನ್ನ ಗುರುಗಳ ಗೋವುಗಳನ್ನು ಕಾವಲು ಕಾದದ್ದು, ಅವನ ಮತಧರ್ಮ ಶಾಸ್ತ್ರದ ಬಲವನ್ನು ಪರೀಕ್ಷಿಸುವುದಷ್ಟೇ ಅಲ್ಲದೆ, ಅತ್ಯಂತ ಪ್ರಯತ್ನಿಸುವ ಸಂದರ್ಭದಲ್ಲಿಯೂ ಸಹಾ ವಿಧೇಯನೂ ಹಾಗೂ ಕರ್ತವ್ಯಪರನಾಗಿರಬೇಕೆಂಬುದನ್ನು ಅವನಿಗೆ ಬೋಧಿಸುತ್ತದೆ. ಆದರೆ ಮತ್ತೆ ಅವನನ್ನು ಪ್ರಕೃತಿಯ ನೇರ ಸಂಪರ್ಕಕ್ಕೆ ತಂದು, ದೈವೀಕ ವಸ್ತುಜ್ಞಾನಕ್ಕೆ ಅವಶ್ಯಕವಾದ ಏಕಾಂತ ಪ್ರಕೃತಿಯ ಚಿಂತನ ಶಕ್ತಿಯ ಅಭ್ಯಾಸವನ್ನು ಬೆಳೆಸಿಕೊಳ್ಳಲು ವಿಶೇಷ ಅವಕಾಶಗಳನ್ನು ಅವನಿಗೆ ನೀಡಲಾಗುತ್ತದೆ. ಹಾಗೆಯೇ ಅವನ ದೀರ್ಘ ಹಾಗೂ ಕಠಿಣವಾದ ಶಿಷ್ಯವೃತ್ತಿಯ ಸರಣಿಯ ನಂತರ, ತನ್ನ ಗುರುವಿನ ಅಲ್ಪ ನೆರವಿನಿಂದ ದೇವರನ್ನು ಅರಿಯಲು ಸಮರ್ಥನಾಗುತ್ತಾನೆ. ಕಠೋಪನಿಷತ್ತಿನಲ್ಲಿ ಮೃತ್ಯುವು ನಚಿಕೇತನಿಗೆ ಆತ್ಮದ ರಹಸ್ಯಗಳನ್ನು ಬೋಧಿಸುವ ಸಂದರ್ಭದಲ್ಲಿ, ಸ್ವರ್ಗದ ಎಲ್ಲಾ ಆಕರ್ಷಣೆಗಳನ್ನೂ, ಮಾನವರು ಅತ್ಯಂತ ಬೆಲೆ ಬಾಳುವುದೆಂಬುದೆಲ್ಲವನ್ನೂ ಒಳಗೊಂಡಂತೆ ಒಡ್ಡಿದರೂ, ಆ ಯುವಕನು ಅವೆಲ್ಲಕ್ಕೂ ಅಲಕ್ಷಿತ-ನಾದುದನ್ನು ಕಂಡನು. ಹಾಗೂ ಅವನು ತಾನು ಬಯಸಿದ ಜ್ಞಾನದ ಹೊರತು ಬೇರಾವುದ-ರಿಂದಲೂ ತೃಪ್ತನಾಗದುದನ್ನು ಕಂಡು ಬೋಧಿಸಲು ಸಮ್ಮತಿಸಿದನು. ಅದೇ ಉಪನಿಷತ್ತಿನಲ್ಲಿ "ಯಾವನು ಕೆಟ್ಟ ಅಭ್ಯಾಸಗಳನ್ನು ತ್ಯಜಿಸನೋ, ಯಾವನ ಮನಸ್ಸು ಪ್ರಶಾಂತವಾಗಿರದೆ ಆಧ್ಯಾತ್ಮಿಕ ಏಕಾಗ್ರತೆಯನ್ನು ಹೊಂದಿರುವುದಿಲ್ಲವೋ ಅವನು ಕೇವಲ ಜ್ಞಾನದಿಂದ ಅವನನ್ನು (ಅಂದರೆ ದೇವರನ್ನು) ಕಾಣಲಾಗುವುದಿಲ್ಲ" ಎಂದು ಹೇಳಲಾಗಿದೆ.

ದೇವರನ್ನು ಕಾಣಲು ಅತ್ಯಂತ ಅವಶ್ಯಕವಾದ ಜ್ಞಾನವನ್ನು ತೋರಿಸುತ್ತಾ ಅವನನ್ನು ಮುನ್ನಡೆಸಲು ಅದಷ್ಟೇ ಸಾಲದು ಎಂದಿದೆ. ನಾವು ದೃಷ್ಟಾಂತಗಳ ಸಂಖ್ಯೆಯನ್ನು ಬೆಳೆಸುವ ಅಗತ್ಯವಿಲ್ಲ. ಈ ಕೆಳಗಿನ ಉದ್ಧರಣವು ಹೇಗೆ ಋಷಿಗಳು ಅತ್ಯಂತ ಕಷ್ಟದಿಂದ ತತ್ತ್ವಶಾಸ್ತ್ರದ ಅಥವಾ ಆಧ್ಯಾತ್ಮಿಕ ಒಳನೋಟವನ್ನು ಕೇವಲ ಧಾರ್ಮಿಕ ನಂಬಿಕೆಯಿಂದ ಉದ್ಧೃತಭಾಗವನ್ನು ಪರಿಗಣಿಸಿದರೆಂಬುದನ್ನು

ಸಂಕ್ಷಿಪ್ತವಾಗಿ ತೋರಿಸುತ್ತದೆ: "ಏಳಿ ಎಚ್ಚರಗೊಳ್ಳಿ, ಸಮರ್ಥ ಬೋಧಕರನ್ನು ಅನ್ವೇಷಿಸಿ ಮತ್ತು ದೇವರನ್ನು ಅರಿಯಲು ಪ್ರಯತ್ನಿಸಿ. ಕತ್ತಿಯ ಅಲಗಿನ ಮೇಲೆ ನಡೆಯುವಂತಹ ಕಠಿಣವಾದ ಹಾದಿಯೆಂದು ಜ್ಞಾನಿಗಳು ಹೇಳಿದ್ದಾರೆ."

ಈಶ್ವರವಾದದ ಅನ್ವೇಷಕರು ತಮ್ಮ ಶಿಷ್ಯರು ಒಮ್ಮೆ ಅನುಕೂಲ ವೃತ್ತವನ್ನು ಪ್ರವೇಶಿಸಿದೊಡನೆ ನಿಗದಿಪಡಿಸಿದ ತಾರ್ಕಿಕ ವಿಧಾನ ಹಾಗೂ ಚಿಂತನ ಸರಣಿಗಳ ಮೂಲಕ ಕಡ್ಡಾಯವಾಗಿ ಹಾದು ಹೋಗುವಂತೆ ಮಾಡುತ್ತಾರೆ. ತರ್ಕಬದ್ಧ ಅಥವಾ ತತ್ತ್ವಶಾಸ್ತ್ರೀಯ ಈಶ್ವರವಾದವನ್ನು ತಲುಪುವ ತನ್ನ ಪ್ರಯತ್ನದಲ್ಲಿ ಯಾವ ಭಾವನಾಲಹರಿಗಳನ್ನು ಅನುಸರಿಸಿದ್ದನೋ ಅದು ಕೇವಲ ಯಾವುದೇ ಪ್ರಮಾಣದ ನಿಶ್ಚಿತತೆಯನ್ನು ಆವಿಷ್ಕರಿಸಲು ಸಾಧ್ಯವಾಗುತ್ತದೆ. ಈ ಬೋಧನೆಯನ್ನು ಉದಾರವಾಗಿ, ಇಲ್ಲದಿದ್ದರೆ ಪ್ರತ್ಯೇಕವಾಗಿ ಮೌಖಿಕವಾಗಿ ನೀಡುತ್ತಿದ್ದರು. ಬರೆಯುವ ಕಲೆಯನ್ನು ಇನ್ನೂ ಪರಿಚಯಿಸಿರಲಿಲ್ಲ. ಬಹುಶಃ ಶೈಶವಾವಸ್ಥೆಯಲ್ಲಿದ್ದಿರಬಹುದು. ಹಾಗಾಗಿ ಉಪನಿಷತ್ತಿನ ತತ್ತ್ವಶಾಸ್ತ್ರವನ್ನು ಕಂಡುಹಿಡಿದವರ ಬೋಧನೆಗಳು ಹೇಳಿಕೊಳ್ಳುವಂತಹ ಸರಿಯಾದ ದಾಖಲೆಯಾಗಿ ಉಳಿದುಬರಲಿಲ್ಲ. ಆದಾಗ್ಯೂ ಉಪನಿಷತ್ತುಗಳು ತತ್ತ್ವಶಾಸ್ತ್ರದ ವ್ಯವಸ್ಥಿತ ಒಡಂಬಡಿಕೆಗಳಲ್ಲ. ಅವು ಮತ್ತಿತರ ಪ್ರಾಚೀನ ಧರ್ಮಗ್ರಂಥಗಳಂತೆ ಆಧ್ಯಾತ್ಮಿಕ ಹಾಗೂ ನೈತಿಕ ಜೀವನದ ಪ್ರೇರೇಪಣೆಗಳಿದ್ದು, ಐತಿಹ್ಯಗಳು, ಕಥೆಗಳು, ಕಾವ್ಯಗಳು, ಮನಃಶಾಸ್ತ್ರ ಮತ್ತು ಅನೇಕ ವೇಳೆ ಕಾವ್ಯಾತ್ಮಕ, ತತ್ತ್ವಶಾಸ್ತ್ರೀಯ ಧಾರ್ಮಿಕ ಭಾಷಣಗಳನ್ನು ಒಳಗೊಂಡಿರುತ್ತದೆ. ಆದರೆ ಏನೇ ಆಗಲಿ ಅವುಗಳ ಅವ್ಯವಸ್ಥಿತ ಲಿಪಿರೂಪವು ವ್ಯವಸ್ಥೆಯ ಭಾಗವನ್ನು ಒಳಗೊಂಡಿದ್ದು, ತತ್ತ್ವಶಾಸ್ತ್ರದ ಗಹನವಾದ ಹಾಗೂ ಭವ್ಯವಾದ ವ್ಯವಸ್ಥೆ-ಯಾಯಿತು. ಅದು ವಿಭಿನ್ನ ಕಾಲದ, ವಿಭಿನ್ನ ಲೇಖಕರ ಮೊತ್ತವಾದರೂ ಮುಖ್ಯವಾದ ಸಂಗತಿಗಳ ಅಸಂಬದ್ಧತೆಯಿಂದ ಮುಕ್ತವಾಗಿಲ್ಲವಾದರೂ, ತತ್ತ್ವಶಾಸ್ತ್ರದ ಓದುಗನು ಸಾಮಾನ್ಯ ಓದುಗನಿಗಿಂತ ತತ್ತ್ವಶಾಸ್ತ್ರದ ಕೃತಿಯಲ್ಲಿನ ವಿರಳವಾದ ಅಸಂಬದ್ಧತೆ, ಒಂದೇ ಸತ್ಯದ ಭಾಗಗಳು ನಿಜವಾಗಿ ಪೂರಕವಾಗಿರುವುದಾದರೂ, ಸ್ಪಷ್ಟವಾಗಿ ವಿರುದ್ಧವಾಗಿರುವ ಭಾವನೆಗಳಿಗೆ ತಾತ್ಕಾಲಿಕವಾಗಿ ಒಗ್ಗಿರುವುದನ್ನು ಕಾಣಬಹುದು. ಹಾಗಿದ್ದಾಗ್ಯೂ ನಿಷ್ಕೃಷ್ಟವಾಗಿ ಉಪನಿಷತ್ತುಗಳು ಹಾಗೂ ಯಾವುದೇ 'ಪವಿತ್ರಗ್ರಂಥ'ಗಳಿಂದ ಹೆಚ್ಚೇನೂ ಸಂಗ್ರಹಿಸಲಾಗದಿದ್ದರೂ, ಸಾಮಾನ್ಯವಾಗಿ ಪ್ರಚಲಿತವಾಗಿರುವ ತತ್ತ್ವಶಾಸ್ತ್ರದ ಬೋಧನೆಯ ಭಾವನೆಗಳ ಬಗ್ಗೆ ಕೆಲವನ್ನು ಅವುಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಉಪನಿಷತ್ತಿನ ಕರ್ತೃಗಳಲ್ಲಿರುವ ಸಾಮಾನ್ಯವಾಗಿ ಪ್ರಚಲಿತವಾಗಿರುವ ಭಾವನೆಗಳನ್ನು ಒಟ್ಟಾಗಿ "ಉಪನಿಷತ್ತುಗಳ ತತ್ತ್ವಶಾಸ್ತ್ರ" ಎನ್ನಲಾಗಿದೆ. ಹಾಗಿದ್ದರೂ ಸಹಾ ನಾವು ಈಗಾಗಲೇ ಗಮನಿಸಿರು-ವಂತೆ ನಮ್ಮ ಪುರಾತನ ಈಶ್ವರವಾದದ ಚಿಂತಕರು ಮುಕ್ತಾಯವನ್ನು ತಲುಪಲು ಅನುಸರಿಸಿದ ಆಲೋಚನೆಯ ಸೀಮಾರೇಖೆಯ ಖಚಿತವಾದ ದಾಖಲೆ ನಮ್ಮಲ್ಲಿ ಇಲ್ಲವಾದ್ದರಿಂದ, ಅನೇಕ ವೇಳೆ ಅವರು ಬಳಸಿರುವ ಭಾಷೆ, ಆರಿಸಿಕೊಂಡ ಪದ್ಧತಿಗಳನ್ನು ಸಾಕಷ್ಟು ಸ್ಪಷ್ಟವಾಗಿ ಸೂಚಿಸಲಾಗಿದ್ದು ಸ್ವತಃ ಮುಕ್ತಾಯಗೊಂಡಿವೆ. ಅವುಗಳ ಜೊತೆಗೆ ಅಲ್ಲಲ್ಲಿ ಒಳಗೊಂಡಿರುವ ಉದ್ಧೃತಗಳು ಹೆಚ್ಚು ಕಡಿಮೆ ತತ್ತ್ವಶಾಸ್ತ್ರದ ವಿಶ್ಲೇಷಣೆಯ ವಿಷಯವನ್ನು ಸ್ಪಷ್ಟಗೊಳಿಸುವಲ್ಲಿ ಋಷಿಗಳ ಮನಸ್ಸುಗಳು ಪ್ರಯತ್ನಿಸಿದ ತಾರ್ಕಿಕ ಪ್ರಕ್ರಿಯೆಗಳ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತವೆ. ಹೀಗೆ ಚದುರಿದ ಬೆಳಕಿನ ತುಣುಕುಗಳನ್ನು ಸಂಗ್ರಹಿಸಿ ಉಪನಿಷತ್ತುಗಳ ಈಶ್ವರವಾದದ ತತ್ತ್ವಶಾಸ್ತ್ರದ ಅಸ್ಪಷ್ಟ ಭಾವನೆಯನ್ನು ನಾವು ನೀಡಬಹುದು.

ಭೌತವಸ್ತು ಹಾಗೂ ಮನಸ್ಸಿಗೆ ಸಂಬಂಧಿಸಿದ ವಿಷಯದ ಮೇಲಿನ ಎಲ್ಲಾ ಸೂಚನೆಗಳು ಉಪನಿಷತ್ತಿನ ಕರ್ತೃಗಳು ಆದರ್ಶವಾದಿಗಳೆಂದು ನಿರ್ಧರಿಸಲು ಪ್ರೇರೇಪಿಸುತ್ತವೆ. ಬರ್ಕ್ಲಿ ಮತ್ತು ಹೆಗಲ್ ಹಾಗೂ ಅವರ ಅನುಯಾಯಿಗಳು ವಿಶ್ವವು ಮಾನಸಿಕ ಸಂಯೋಜನೆಯ ಮೂಲಕ ಆದ್ಯಂತವಾಗಿದೆ ಎನ್ನುತ್ತಾರೆ. ಅದನ್ನು ಅವರು ವಿಶದಪಡಿಸಲಿ ಅಥವಾ ವಿಶದಪಡಿಸದಿರಲಿ ಅದು ಮನದಲ್ಲಿ ಉಳಿಯುತ್ತದೆ. ಯೂರೋಪಿಯನ್ ಆದರ್ಶವಾದಿಗಳಿಗೆ ಭೌತವಸ್ತು ಮೂಲತಃ ಜ್ಞಾನಕ್ಕೆ ಸಂಬಂಧಿಸಿದ್ದುದರಿಂದ ಜ್ಞಾನದಲ್ಲಿ ಮಾತ್ರ ಅಂತ್ಯವಾಗುತ್ತದೆ. ಐತರೇಯ ಉಪನಿಷತ್ತು ಅತ್ಯುನ್ನತ ದೇವತೆಗಳನ್ನು ಒಳಗೊಂಡಂತೆ ಹಲವಾರು ಭೌತವಸ್ತುಗಳ ವರ್ಗಗಳನ್ನು, ಸಜೀವ ಮತ್ತು ನಿರ್ಜೀವ-ಗಳನ್ನು ನಮೂದಿಸುತ್ತದೆ, ಹಾಗೂ ಹೀಗೆನ್ನುತ್ತದೆ...." ಎಲ್ಲವೂ ಕಾರಣದಿಂದಲೇ ಉತ್ಪತ್ತಿಯಾಗಿ ಮತ್ತು ಕಾರಣದಿಂದಲೇ ಇರುತ್ತದೆ. ವಿಶ್ವವು ಕಾರಣದಿಂದ ಉತ್ಪನ್ನವಾಗಿ, ಕಾರಣದಲ್ಲಿಯೇ ಇರುತ್ತದೆ ಮತ್ತು ಕಾರಣವೇ ಬ್ರಹ್ಮವಾಗಿರುತ್ತದೆ. ಕಥೆ ಹೇಳುತ್ತದೆ.... ವಿಶ್ವವೆಲ್ಲವೂ ತನ್ನಲ್ಲಿದೆ ಮತ್ತು ತನ್ನನ್ನು ಮೀರಿ ಯಾವುದೂ ಇಲ್ಲ." ಪ್ರಶ್ನೆ ಹೇಳುತ್ತದೆ..... "ನನ್ನ ಪ್ರೀತಿಯ ಹಕ್ಕಿಗಳು ಮರದ ಮೇಲಿರುವಾಗ, ಎಲ್ಲವೂ ಪರಮಾತ್ಮನಲ್ಲಿರುತ್ತದೆ" ಇವು ಹಾಗೂ ಅಗಣಿತವಾದ ಇತರ ಉದ್ಧೃತಗಳು ಇಂತಹುದೇ ಅಭಿಪ್ರಾಯವನ್ನು ಆದರ್ಶವಾದದ ಬೆಳಕಿನಲ್ಲಿ ಮಾತ್ರ ವಿವರಿಸಬಹುದು. ವಿಷಯ ಮತ್ತು ವಸ್ತುಗಳಿಗೆ ಪರಸ್ಪರ ಸಂಬಂಧವಿದ್ದರೂ, ಪರಮ ಜ್ಞಾನೋದ್ದೇಶದಲ್ಲಿ ಎಲ್ಲಾ ವಸ್ತುಗಳು ಇರುತ್ತವೆ. ಋಷಿಗಳು ವಸ್ತುವಿನ ಇತರ ಎಲ್ಲಾ ಗುಣಗಳೊಂದಿಗೆ ತಮ್ಮ ಜ್ಞಾನಕ್ಕೆ, ಮನಸ್ಸಿಗೆ ಗೋಚರಿಸಿರುವುದನ್ನು ಕಂಡಿರಬೇಕು. ಹಾಗೂ ಅವರು ಮನಸ್ಸಿಗೆ ಸಂಬಂಧಿಸಿದಂತೆ ಸತ್ಯವೆಂದು ಕಂಡದ್ದನ್ನು ಮಾತ್ರ ಭಾವಿಸಿದರು. ಮುಂಡಕೋಪನಿಷತ್ತು ಹೇಳುವಂತೆ.... "ಯಾರಲ್ಲಿ ಬೆಳಕಿರುವುದೋ ಅಲ್ಲಿ ಎಲ್ಲಾ ವಸ್ತುಗಳು ಇದ್ದು ಹೊಳೆಯುತ್ತವೆ" ಮತ್ತು ಅನ್ಯತ್ರ.... "ಅವನ ಹೊಳೆಯುವಿಕೆಯಲ್ಲಿ, ಎಲ್ಲಾ ವಸ್ತುಗಳೂ ಅವನ ಬೆಳಕಿನ ಮೂಲಕ ಅನಂತರ ಹೊಳೆಯುತ್ತವೆ."

ಅಂತಹ ಹೇಳಿಕೆಗಳು ಜೀವಿಯ ಅಸ್ತಿತ್ವವನ್ನು ವಿಶ್ವದ ಕಾನೂನು ಮತ್ತು ಸುವ್ಯವಸ್ಥೆಯ ಸೂಚನೆಗಳಿಂದ ಊಹಿಸಲಾಗುವುದೆಂದು ಕೆಲವರು ಸೂಚಿಸಿದಂತೆ ಕಾಣುತ್ತದೆ. ಜೀವಿಯ ಪ್ರಕೃತಿ-ಯೊಂದಿಗಿನ ಸಂಬಂಧವನ್ನು ವಸ್ತು ಮತ್ತು ವಿಷಯದ ಆತ್ಮೀಯ ಸಂಬಂಧದಿಂದ ವಿವರಿಸ-ಲಾಗುವುದಿಲ್ಲ. ಹಾಗೂ ಯಾರನ್ನು ನೇರವಾಗಿ ಅರಿಯಲಾಗುವುದಿಲ್ಲವೋ, ಅವನನ್ನು ಮುಮುಕ್ಷುಗಳು ಒಳನೋಟದ ಶ್ರೇಷ್ಠ ಕ್ಷಣಗಳಿಂದ ಮಾತ್ರ ಅರಿಯಬಲ್ಲರು. ಆದರೆ ಉಪನಿಷತ್ತಿನ ಕರ್ತೃಗಳು, ಯೂರೋಪಿನ ಅಸದೃಶ ಯೋಗ್ಯ ಮತಧರ್ಮ ಶಾಸ್ತ್ರಜ್ಞರು ರಚಕನ ಅನುಮಾನದ ಅಲ್ಪ ಪ್ರಯೋಜನವನ್ನು ಮಾಡಿಕೊಂಡರು. ಕಾರಣವೆಂದರೆ ಚಾತುರ್ಯದಿಂದ ರಚಿಸಿದ ವಾದಗಳ ಸಾಧನದಿಂದ ತಾವು ಅನ್ವೇಷಿಸುತ್ತಿದ್ದ ವಿಶ್ವಕಾಂತಿಯು ತಾವುಗಳು ಕಂಡದ್ದೇ ಆಗಿತ್ತು. ಅದನ್ನು ತಮ್ಮಲ್ಲಿಯೇ ಕಂಡುಕೊಂಡರು. ಪ್ರತಿಯೊಬ್ಬರೂ ತನ್ನ ವಾದವೇ ತನ್ನ ಆತ್ಮ ಎಂದು ಕರೆಯುವಂತೆ, ಅದು ಅನನ್ಯವಾದುದು. ಅದರಲ್ಲಿಯೇ ನಮಗೆ ವಿಷಯಗಳು ಗೋಚರಿಸುತ್ತವೆ ಮತ್ತು ನಿರ್ಗಮಿಸು-ತ್ತವೆ. ಕೇನೋಪನಿಷತ್ತು ವಿಷಯ ಮತ್ತು ವಸ್ತುವನ್ನು ಹೇಗೆ ವಿಭಜಿಸುತ್ತದೆ ಮತ್ತು ಪೂರ್ವದೊಂದಿಗೆ ದೇವರನ್ನು ಹೇಗೆ ಗುರುತಿಸುತ್ತದೆ ಎಂಬುದನ್ನು ತಿಳಿಯೋಣ.

ಆದರೆ ಪ್ರತಿಯೊಬ್ಬ ವ್ಯಕ್ತಿಯು ತನ್ನಲ್ಲಿಯೇ ಆತ್ಮ ಅಥವಾ ವಸ್ತುವಿನಿಂದ ಬ್ರಹ್ಮವನ್ನು ಗುರುತಿಸುವುದರಿಂದ ಉಪನಿಷತ್ತು ಅವನನ್ನು ಪರಿಮಿತ ಮತ್ತು ಅಪರಿಮಿತ ಎಂದು ಮಾಡುವು-

ದಿಲ್ಲವೇ? ಅವು ಹಾಗೆ ಮಾಡುವುದಾದಲ್ಲಿ 'ಆತ್ಮ' ಯಾವುದಾದರೂ ಉದ್ದೇಶದಿಂದ ಅದು ಅನುಕ್ರಮವಾಗಿ ಪ್ರಕೃತಿ, ನಿರ್ದಿಷ್ಟ ವ್ಯಕ್ತಿಗೆ ನಿಜವಾಗಿಯೂ ಮಾಡುತ್ತದೆ. ಆದರೆ ಉಪನಿಷತ್ತು-ಗಳಿಗೆ, 'ಆತ್ಮ'ನ ಬಗ್ಗೆ ಅಂತಹ ಯಾವುದೇ ಉದ್ದೇಶವಿರುವುದಿಲ್ಲ. ಅವು ಉದ್ದೇಶ ಹೊಂದಿವೆ. ಅದೆಂದರೆ ತನ್ನ ನಿಜವಾದ ಪ್ರಕೃತಿಯನ್ನು ಚಿಂತಿಸುವ ಎಲ್ಲಾ ವ್ಯಕ್ತಿಗಳಿಗೆ ಸಾಮಾನ್ಯವಾಗಿ ಸರ್ವ ವ್ಯಾಪಿಯಾಗಿರುತ್ತದೆ. ಎಲ್ಲ ವಿಷಯಗಳ ಸಾಮಾನ್ಯ ಅಂಶವೆಂದರೆ ಸಜೀವ ಮತ್ತು ನಿರ್ಜೀವವಾಗಿದೆ. ಋಷಿಗಳು ವಿಶ್ಲೇಷಣೆಯ ಪ್ರತಿಯೊಂದು ಹಂತದಲ್ಲೂ ಕೆಳವರ್ಗವನ್ನು ತಿಳಿಯಲು ವರ್ಗವನ್ನು ಅತ್ಯಂತ ಮೇಲ್ವರ್ಗ ಪರಮಾತ್ಮನವರೆಗೆ ಅವನು ಬರುವವರೆಗೂ ಹೆಸರಿಸುತ್ತಾರೆ. ಅದು ಬುದ್ಧಿಶಕ್ತಿ ಮತ್ತು ಸಂವೇದನಾ ಮಂಡಲಕ್ಕಿಂತಲೂ ಅತೀತವಾಗಿರುತ್ತದೆ. ಅಲ್ಲಿ ಕಾಲ ಮತ್ತು ಆಕಾಶದ ಅಂತ್ಯವಾದರೂ, ಅಧ್ಯಾತ್ಮ ಚಟುವಟಿಕೆಗಳ ಕೇಂದ್ರವಾಗಿರುತ್ತದೆ. ಅದು ವಸ್ತುವಾಗಿ, ಬುದ್ಧಿಶಕ್ತಿಯಾಗಿ ಲಕ್ಷಣ ಅಥವಾ ವಿಧಾನದ ಉಲ್ಲೇಖವಾಗಿರುತ್ತದೆ. ಶ್ರೇಷ್ಠ ವ್ಯಕ್ತಿ ಅಥವಾ ಆತ್ಮದ ಪ್ರಕಾರ ಉಪನಿಷತ್ತುಗಳು ಪರಿಮಾಣ, ಆಕಾಶ ಕಾಲವನ್ನು ಮೀರುವಂತಹುದಾಗಿದ್ದು, ಅದು ನನಗೊಬ್ಬನಿಗೆ ಮಾತ್ರ ಅನ್ವಯಿಸುವಂತಹುದಲ್ಲ, ಅಧ್ಯಾತ್ಮ ಚಟುವಟಿಕೆಗಳು ನಡೆಯುವ ನಿರ್ದಿಷ್ಟ ಕೇಂದ್ರ ಹಾಗೂ ಅಂತಹ ಎಲ್ಲಾ ಕೇಂದ್ರಗಳಿಗೂ ಅನ್ವಯಿಸುವ ಉದ್ದೇಶವಿದೆ. ಅದೇ ಉಪನಿಷತ್ತು ಹೇಳುವಂತೆ:- ಇಲ್ಲೇನಿರು-ವುದೋ ಅದು ಅಲ್ಲಿದೆ, ಅಲ್ಲೇನಿರುವುದೋ ಅದು ಇಲ್ಲಿದೆ. ಯಾರು ಇದರಲ್ಲಿ ನಾನತ್ವವನ್ನು ಕಾಣುವರೋ ಸಾವಿನಿಂದ ಸಾವಿಗೆ ಹೋಗುತ್ತಾರೆ. ಇದು ಛಾಂದೋಗ್ಯ ಉಪನಿಷತ್ತಿನ ನಾರದ ಮತ್ತು ಸನತ್ಕುಮಾರರ ನಡುವಿನ ಸಂಭಾಷಣೆಯಲ್ಲಿ ಮತ್ತಷ್ಟು ಸ್ಪಷ್ಟಗೊಳಿಸಲಾಗಿದೆ. ಸನತ್ಕುಮಾರನು ಅನೇಕ ವಿಭಾಗಗಳನ್ನು ನಮೂದಿಸುತ್ತಾನೆ. ಪ್ರತಿಹಂತದಲ್ಲೂ ಔನ್ನತ್ಯಕ್ಕೆ ಬಂದಾಗ, ಪ್ರತಿ ಮುಕ್ತಾಯದಲ್ಲೂ ನಾರದನು ಅತೃಪ್ತಿಯನ್ನು ವ್ಯಕ್ತಪಡಿಸುತ್ತಾನೆ. ಅಂತಿಮವಾಗಿ 'ಪ್ರಾಣ'ಕ್ಕೆ ಬಂದಾಗ ನಾರದನು ತೃಪ್ತನಾದಂತೆ ಕಾಣುತ್ತಾನೆ. ಅವನು ಜೀವನಕ್ಕಿಂತಲೂ ಉನ್ನತ ವರ್ಗವನ್ನು ಚಿಂತಿಸಲಾಗುವುದಿಲ್ಲ. ಅದರ ನಿರ್ಗಮನದೊಂದಿಗೆ ನಮ್ಮಲ್ಲಿನ ಪ್ರತಿಯೊಂದು ಚಟುವಟಿಕೆಯೂ ಮುಕ್ತಾಯುವಾಗುತ್ತದೆ. ಆದರೆ ಸನತ್ಕುಮಾರನು ಎಲ್ಲಿ ಅಂತಿಮ ತೃಪ್ತಿಯನ್ನು ಮಾತ್ರ ಪಡೆಯಲಾಗುವುದೋ, ಹಾಗೂ ಅನಂತ (ಭೂಮ) ವೆಂಬ ಅತ್ಯುನ್ನತ ವರ್ಗಕ್ಕೆ ಅವನನ್ನು ಮುನ್ನಡೆಸುತ್ತಾನೆ. ಆದರೆ ನಾರದನು ಅತ್ಯುನ್ನತ ಜ್ಞಾನದ ಅರುಣೋದಯವಾಗದ ಎಲ್ಲ ಮನಸ್ಸುಗಳಂತೆ ಕೇಳುತ್ತಾನೆ. "ಹೇ ದೇವನೆ, ಅನಂತವು ಎಲ್ಲಿ ನೆಲೆಸಿರುತ್ತದೆ? ನಾವು "ಆತ್ಮನೆಲ್ಲಿದ್ದಾನೆ"? ಅಥವಾ "ಆತ್ಮನಿಲ್ಲಿದ್ದಾನೆ" ಎಂದು ಹಾಗೆ ಆತ್ಮಕ್ಕಿಂತಲೂ ಬಾಹ್ಯಾಕಾಶವೇ ಅತ್ಯುನ್ನತ ವರ್ಗವಾಗಿ ಮಾಡುವಂತೆ ಕೇಳುತ್ತಾನೆ. ಸನತ್ಕುಮಾರನು ಮೊದಲಿಗೆ "ಅನಂತವು ತನ್ನದೇ ಆದ ವೈಭವದಲ್ಲಿ ನೆಲೆಸಿರುತ್ತದೆ" ಎಂದು ಹೇಳುತ್ತಾನೆ. ಆದರೆ ನಾರದನಿಂದ "ಆ ವೈಭವ ಎಲ್ಲಿದೆ"? ಎಂಬ ನಾರದನ ಪ್ರಶ್ನೆಯನ್ನು ನಿರೀಕ್ಷಿಸುವಂತೆ ಸನತ್ಕುಮಾರನು ಬಾಹ್ಯ ರೂಪದಲ್ಲಿ ಅನಂತಕ್ಕೂ ಇತಿಮಿತಿಯಿದೆ ಎಂದು ನಿಲ್ಲಿಸಿ ಮತ್ತೆ "ಅದು ತನ್ನ ವೈಭವದಲ್ಲಿ ನೆಲೆಸಿರುವುದಿಲ್ಲ" ಎಂದು ಹೇಳುತ್ತಾನೆ. ಅನಂತವು ಆಕಾಶವನ್ನೆಲ್ಲಾ ವ್ಯಾಪಿಸಿರುತ್ತದೆ. ಹಾಗಾಗಿ ನಿರ್ದಿಷ್ಟವಾಗಿ ಎಲ್ಲಿಯೂ ಇರುವುದಿಲ್ಲ, ಅನಂತವನ್ನು ಆತ್ಮನೊಂದಿಗೆ ಗುರುತಿಸಲಾಗುತ್ತದೆ, ಮತ್ತು ಆತ್ಮನ ಅಪರಿಮಿತತೆಯನ್ನು ಈ ಮಾತುಗಳಲ್ಲಿ ವರ್ಣಿಸಲಾಗಿದೆ- "ನಿಜವಾಗಿಯೂ ನಾನು ಅಡಿಯಿಂದ ಬೆಳೆಯುತ್ತೇನೆ, ಮೇಲಿನಿಂದ, ಹಿಂದಿನಿಂದ, ಮುಂದಿನಿಂದ, ದಕ್ಷಿಣದಿಂದ, ಉತ್ತರದಿಂದ ಬೆಳೆಯುತ್ತೇನೆ. ನಿಜವಾಗಿ ನಾನೇ ಇದೆಲ್ಲಾ" ಅನಂತರ

ಮೇಲೆ ನಮೂದಿಸಿದ ವಸ್ತುಗಳು ಅಥವಾ ವಿಭಾಗಗಳೆಲ್ಲವೂ ಆತ್ಮದ ಪರಿಣಾಮವಾಗಿದೆ ಎಂದು ಹೇಳಲಾಯಿತು.

ನಮ್ಮಲ್ಲಿರುವ ಆತ್ಮನ ಭಂಗಿಯನ್ನು ಸ್ಪಷ್ಟವಾಗಿ ನೀಡಲಾಗಿದೆ. ಅದು ನಮ್ಮನ್ನು ತಿಳಿಯುವ, ಚಿಂತಿಸುವ ಜೀವಿಗಳಾಗಿರುವ ಅನಂತ ಹಾಗೂ ಎಲ್ಲವೂ ಒಂದರಲ್ಲೇ ಸೇರಿರುವುದು. ಇದಕ್ಕೆ ಸಾಮಾನ್ಯ ಮಾತುಗಳಲ್ಲಿ ನಿದರ್ಶನವಿಲ್ಲ. ಇದಕ್ಕೆ ಬಹುಶಃ ಋಷಿಗಳು ಪ್ರತಿಪಾದನಾ ಕಲೆಯಲ್ಲಿ ಪರಿಪೂರ್ಣ ಆಚಾರ್ಯರಾಗಿರದಿದ್ದುದು ಭಾಗಶಃ ಕಾರಣವಾಗಿದೆ. ಆದರೆ ಸತ್ಯವು ಅತ್ಯಂತ ವಿಶದವಾಗಿ ಗೋಚರಿಸಿದುದರಿಂದ ವ್ಯವಸ್ಥಿತ ನಿದರ್ಶನದ ಅವಶ್ಯಕತೆಯಿರಲಿಲ್ಲವೆಂದು ಈ ಘಟನೆಯ ಕಾರಣದಿಂದ ವ್ಯಕ್ತವಾಗುತ್ತದೆ. ನಮಗೆ ಎಲ್ಲಾ ನಿದರ್ಶನಗಳು, ಎಲ್ಲಾ ಚಿಂತನೆಗಳು, ಎಲ್ಲಾ ಜ್ಞಾನದ ಹಿನ್ನೆಲೆಯಿಂದ ದಿವ್ಯಜ್ಞಾನವೆಂಬ ಸತ್ಯವನ್ನು ರೂಪಿಸುವುದರಿಂದ 'ನಿದರ್ಶನ' ಎಂಬ ಪದವು ನಿಜವಾದ ನಿದರ್ಶನವಾಗಿ ತಾಗುತ್ತದೆ. ಋಷಿಗಳು ವಿರಳ ವಿರಳವಾಗಿರುವ ಬೆಳಕಿನ ಕಿರಣಗಳನ್ನು ಕೇಂದ್ರೀಕರಿಸಿ ಸಮಸ್ಯೆಯ ಮೇಲೆ ಬೆಳಕು ಚೆಲ್ಲಿದಂತೆ ಕಾಣುತ್ತದೆ. ನಾವು ವಸ್ತುವಿನ ಚಿಂತನೆಯನ್ನು ಮಾಡುವಾಗ ಅನಿವಾರ್ಯವಾಗಿ ವಿಷಯದ ಬಗ್ಗೆ ಚಿಂತಿಸುತ್ತೇವೆ. ವಸ್ತುವಿನ ಮಿತಿಗಳನ್ನು ಅರಿಯುವ ಹಾಗೂ ಚಿಂತಿಸುವಲ್ಲಿ, ವಸ್ತು ಅಥವಾ ಮನಸ್ಸಿನ ಪರಸ್ಪರ ಏಕಮಾತ್ರ ಚಿಂತನೆಯನ್ನು ನಾವು ವಿಷಯದ ದೃಷ್ಟಿಕೋನದಿಂದ ಮಿತಿಗಳೆಲ್ಲವನ್ನೂ ಮೀರಿ ಅನಿವಾರ್ಯವಾಗಿ ಚಿಂತಿಸಬೇಕಾಗುತ್ತದೆ. ನಾವು ಹಾಗೆ ಮಾಡುವಾಗ ಮಾತ್ರ ನಮ್ಮನ್ನು ಸಾರ್ವತ್ರಿಕವಾಗಿ ಗುರುತಿಸಿ ಕೊಳ್ಳುತ್ತಾ ತಿಳಿಯುವ ಸ್ಥಿತಿ ಮತ್ತು ಚಿಂತಿಸುವ ಮಿತಿಯಿಂದ ತಾವೇ ಮಿತಿಗೆ ಒಳಗಾಗಬಾರದು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಅದು ಯಾವುದೇ ವ್ಯಕ್ತಿಯಲ್ಲ, ಬೇರೆ ಕೇಂದ್ರಗಳಿಂದ ಪ್ರತ್ಯೇಕಿಸಲ್ಪಟ್ಟ ಆಧ್ಯಾತ್ಮಿಕ ಚಟುವಟಿಕೆಯ ನಿರ್ದಿಷ್ಟ ಕೇಂದ್ರಗಳಲ್ಲ. ಅದು ಚಿಂತಿಸುವ ಮಿತಿಯನ್ನು ತಿಳಿದಿದ್ದು, ಅನಂತದಿಂದಲೇ ಹಾಗೆ ಮಾಡಲಾಗುತ್ತದೆ. ಹಾಗೂ ನನಗಾಗಿ ನನ್ನ ಚಿಂತನಾಶಕ್ತಿಗಾಗಿ ಅನಂತವು ಎಷ್ಟು ಚಿಂತಿಸುವುದೋ ಅಷ್ಟು ನಾನು ಅದರಲ್ಲಿ ಒಂದಾಗುತ್ತೇನೆ. ಅದರಲ್ಲಿನ ಉದ್ಧೃತ ಭಾಗಗಳು ಎಲ್ಲದರ ಪರಿಮಿತ ಹಾಗೂ ವಸ್ತುನಿಷ್ಠವಾದ ಸಂಪೂರ್ಣ ಆತ್ಮನಾಶವಾದವನ್ನು ಬೋಧಿಸುವಂತೆ ಕಾಣುತ್ತದೆ. ಈ ಉದ್ಧೃತ ಭಾಗವನ್ನು ಹೇಗೆ ಅರ್ಥೈಸಲಾಗಿದೆ ಎಂಬುದರ ಮೇಲೆ ಹೆಚ್ಚಾಗಿ ಅವಲಂಬಿತವಾಗಿದೆ. ಆದರೂ ಆಧ್ಯಾತ್ಮಿಕ ಅನುಭವವು ಆತ್ಮನಾಶವಾದವನ್ನು ಅನ್ವಯಿಸಿ ಅರ್ಥೈಸುತ್ತದೆ ಹಾಗೂ ಸಮರ್ಥಿಸುತ್ತದೆ, ಪರಿಮಿತದಿಂದ ಅನಂತದೊಳಗೆ ನಿಜವಾಗಿಯೂ ಸಮಾವೇಶವಾಗುತ್ತದೆ. ಪರಿಮಿತದೆಡೆಗಿನ ಪರಿಪೂರ್ಣ ಆತ್ಮಸಾಕ್ಷಿಕತೆಯು ತನಗೆ ತಾನೇ ಏನೇನೂ ಅಲ್ಲ, ಎಲ್ಲವೂ ಅದೇ ಅನಂತವಾಗಿರುತ್ತದೆ.

## ವಿಶ್ವಾನ್ವೇಷಣೆಯ ಕಾರಣಗಳು

ಪ್ರಾಚೀನ ತತ್ತ್ವಶಾಸ್ತ್ರಗಳ ದೃಷ್ಟಿಯಲ್ಲಿ ಭಗವಂತನ ವಿಷಯವಾಗಿ ಹಾಗೂ ವಿಶ್ವದ ಮೂಲವೇನು? ಎಂಬ ಪ್ರಶ್ನೆಗೆ ಉತ್ತರಿಸುವ ಪ್ರಯತ್ನಗಳು ಉದ್ಭವಿಸಿದಂತೆ ಕಾಣುತ್ತದೆ. ಅದರ ಫಲವಾಗಿ ಉಪನಿಷತ್ತುಗಳಲ್ಲಿ ಅಸಂಖ್ಯಾತ ಸೃಷ್ಟಿ ಸಿದ್ಧಾಂತಗಳಿವೆ. ಸೃಷ್ಟಿಕರ್ತನು ವಿಶ್ವವನ್ನು ಏಕೆ ಸೃಷ್ಟಿಸಿದನು? ಹೇಗೆ ಸೃಷ್ಟಿಸಿದನು? ವಿಶ್ವದ ಸೃಷ್ಟಿಕರ್ತನ ನೆಲೆಯನ್ನು ಶೋಧಿಸಲು ಪ್ರತಿಯೊಬ್ಬರೂ ಪ್ರಯತ್ನಿಸಿದ್ದಾರೆ. ಬೃಹದಾರಣ್ಯಕದಲ್ಲಿ ಅತ್ಯಂತ ಪ್ರಾಚೀನವಾದ ಸೃಷ್ಟಿ ಸಿದ್ಧಾಂತವನ್ನು ಕಾಣಬಹುದು.

ಅದರಲ್ಲಿ "ಆರಂಭದಲ್ಲಿ ಈ ವಿಶ್ವವು ಪುರುಷ ರೂಪದ ಆತ್ಮಮಾತ್ರವಾಗಿತ್ತು. ಅವನು ಸುತ್ತಲೂ ನೋಡಿ ತನ್ನನ್ನು ಬಿಟ್ಟು ಬೇರಾರೂ ಇಲ್ಲದಿರುವುದನ್ನು ಕಂಡು.... ಜೊತೆಯನ್ನು ಅಪೇಕ್ಷಿಸಿದನು.

ತತ್ತ್ವಶಾಸ್ತ್ರದ ಚಿಂತನೆಯಲ್ಲಿ ನಿಸ್ಸಂಶಯವಾಗಿ ಉನ್ನತ ಮಟ್ಟವನ್ನು ಮುಟ್ಟಿದಾಗ ನಾವು ಪ್ರಾಕೃತಿಕ ವಿದ್ಯಮಾನಗಳಿಂದ ವಿವರಿಸಲ್ಪಟ್ಟ ಪುರುಷನನ್ನು ಸ್ತುತಿಸುತ್ತಾ ವಿಶ್ವವನ್ನು ವಿವರಿಸಲು ಪ್ರಯತ್ನವನ್ನು ಮುಂದುವರೆಸುತ್ತೇವೆ. ಅವು ನೀರು ಅಥವಾ ಆಹಾರ (ಭೂಮಿ) ಹಾಗೂ ಅವಿನಾಶಿಯಾದ ಜೀವ, ಅಜೀವಗಳು, ಆಕಾಶ, ವಾಯುಗಳು ಅತ್ಯಂತ ವಿಶ್ವವ್ಯಾಪಿಯಾಗಿ ಹಾಗೂ ಅಲ್ಪವಾಗಿ ಕಾಣುವ ಘಟಕಗಳು, ನಿರ್ದಿಷ್ಟವಾಗಿ, ಪ್ರತ್ಯಕ್ಷವಾಗಿ ಮತ್ತೆ ಗೋಚರಿಸುತ್ತದೆ. ಹಾಗೆಯೇ ಬೃಹದಾರಣ್ಯಕದಲ್ಲಿ ಪ್ರಥಮ ತತ್ತ್ವವಾಗಿ ನೀರಿಗೆ ಸಂಬಂಧಿಸಿದಂತೆ ಹೇಳಲಾಗಿದೆ. ಆ ನೀರು ಸತ್ಯವನ್ನು ಹೊರಹಾಕುತ್ತದೆ. ಛಾಂದೋಗ್ಯ ಉಪನಿಷತ್ತಿನಲ್ಲಿ "ಘನರೂಪವಾದ ನೀರು ಭೂಮಿ-ಯಾಯಿತು.... ವಾತಾವರಣ....ಆಕಾಶ..... ದೇವರುಗಳು ಹಾಗೂ ಮಾನವರು, ದುಂಬಿಗಳು ಹಾಗೂ ಪಕ್ಷಿಗಳು, ಹುಲ್ಲು ಮತ್ತು ಮರಗಳು..... ಪವಿತ್ರಜಲ" ಎಂದಿದೆ. ನೀರಿಲ್ಲದೆ ಜೀವನವು ಅಸಾಧ್ಯವಾದುದರಿಂದ ಎಲ್ಲಕ್ಕೂ ನೀರು ಮೂಲಕಾರಣವಾದುದರಿಂದ ಅದನ್ನು ಗೌರವಿಸಲಾಗಿದೆ. ಛಾಂದೋಗ್ಯವು ಹೇಳುವಂತೆ ಮಳೆಯಿಲ್ಲದಿದ್ದರೆ ಜೀವಿಗಳು ನಾಶವಾಗುತ್ತವೆ. ಅದರಂತೆಯೇ ಎಲ್ಲದರ ಮೂಲ ಆಹಾರ (ಭೂಮಿ)ವಾಗಿದ್ದು, ಆಹಾರವಿಲ್ಲದಿದ್ದರೆ ಪ್ರಾಣಿಗಳು ನಾಶವಾಗುತ್ತವೆ ಎಂದು ವಾದಿಸಲಾಗಿದೆ. ಈ ಸಿದ್ಧಾಂತಗಳ ಮೂಲರೂಪವೆಂದರೆ ತತ್ತ್ವಶಾಸ್ತ್ರ ಚಿಂತನೆಯಲ್ಲಿ ಅತ್ಯಮೋಘ ಪ್ರಗತಿಯಾಗಿದ್ದು, ಪ್ರಾಚೀನ ಕಾಲದಲ್ಲಿನ ಮಾನವೀಕರಣದಿಂದ ಚಿಂತಕನು ವಿಮುಖ-ನಾಗಿ ದೇವದೇವತೆಗಳ ಎಲ್ಲಾ ವಿವರಣೆಗಳನ್ನು ತಿಳಿಸಿ ವಿಶ್ವವನ್ನು ವಿವರಿಸಲು ಆಶಿಸುತ್ತಾನೆ. ಅವನು ತನ್ನ ಕಾಲ್ಪನಿಕ ಸೃಷ್ಟಿಯ ಮಾತುಗಳಿಂದಲ್ಲ, ಆದರೆ ದೈನಂದಿನ ಅನುಭವದಲ್ಲಿ ತನಗೆ ತಿಳಿದ ಮೂಲಭೂತ ತತ್ತ್ವಗಳಲ್ಲಿನ ವಿಚಾರಗಳನ್ನು ತಿಳಿಸಿದ್ದಾನೆ.

ನೀರು ಮತ್ತು ಆಹಾರ ಅಂತಿಮ ತತ್ತ್ವವಾಗಿದ್ದರೂ ನಾವಿನ್ನೂ ಇಂದ್ರಿಯ ಗ್ರಾಹ್ಯ ಹಾಗೂ ನಿರ್ದಿಷ್ಟ ವಿಶ್ವದೆಡೆಗೆ ಮುಂದುವರೆಯುತ್ತೇವೆ. ಗಾಳಿ ಅಥವಾ ಉಸಿರು ಅದೃಶ್ಯವಾಗಿದ್ದು, ಅಸ್ಪಷ್ಟವಾಗಿ ಲಕ್ಷಣ ನಿರೂಪಿಸಲಾಗಿದೆ, ಇಂದ್ರಿಯಗ್ರಾಹ್ಯ ಬಂಧನದಿಂದಾಚೆಗೆ ಮನಸ್ಸು ಮುನ್ನಡೆಯುವಂತೆ ಮಾಡುತ್ತದೆ. ಈ ಪ್ರಥಮಾನ್ವೇಷಣ ಚಿಂತಕರಿಗೆ ಅದೂ ಸಹಾ ಸುಲಭವಾದುದಲ್ಲ. ಇದಕ್ಕೆ ಸಂಬಂಧಿಸಿದಂತೆ ಅಂತಿಮವಾದ ಕಾರಣವೆಂದರೆ ಉಸಿರು ನಿಂತಾಗ ವ್ಯಕ್ತಿಯು ಸಾಯುವ-ನೆಂಬುದನ್ನು ಪ್ರಮುಖವಾಗಿ ವೀಕ್ಷಣೆಯಿಂದ ಊಹಿಸಲಾಯಿತು ಮತ್ತು ವ್ಯಕ್ತಿಯಲ್ಲಿ ಬೇರೆ ಅಂಗಗಳು ಬೇಗನೆ ಆಯಾಸಗೊಂಡು ವಿಶ್ರಾಂತಿಯನ್ನು ಬಯಸುತ್ತವೆ, ಉಸಿರೊಂದೇ ಅವಿಶ್ರಾಂತವಾಗಿ ಕಾರ್ಯನಿರ್ವಹಿಸುತ್ತದೆ ಎಂಬ ಸಂಗತಿಯು ತಿಳಿಯಿತು. ಜೀವಂತ ದೇಹದಲ್ಲಿ ಉಸಿರಿನ ಅಸಂಘಟಿತ ವಿಶ್ವದ ಪೂರಕ ವಸ್ತು ಉಸಿರು ಅಥವಾ ಗಾಳಿ ಎಂಬುದು ನಿಜ, ವಿಲಕ್ಷಣವಾದ ಬೆಂಕಿಯಂತೆ ಗಾಳಿಯು ವಿಶ್ರಾಂತಿಯನ್ನು ಬಯಸಿದಂತೆ ಕಾಣುವುದಿಲ್ಲ, ಅದು ತನಗೆ ತಾನೇ ಬೇಗ ಬರಿದಾಗುತ್ತದೆ ಮತ್ತು ದಿನವೂ ಮುಳುಗುವ ಸೂರ್ಯಚಂದ್ರರು ಹಾಗೇ ವಿಶ್ರಾಂತಿ ಪಡೆಯುತ್ತಾರೆ. ಜೊತೆಗೆ ಶರೀರದ ಬೇರೆಲ್ಲಾ ಕ್ರಿಯೆಗಳು ನಿದ್ದೆಯಲ್ಲಿನ ಉಸಿರಾಟದಲ್ಲಿ ಅದೃಶ್ಯವಾಗುತ್ತವೆ ಮತ್ತು ಉಸಿರು ಮಾತ್ರ ಉಳಿಯುತ್ತದೆ. ಪ್ರಕೃತಿ ಶಕ್ತಿಗಳ ಮೂಲಾಂಶಗಳಾದ ಬೆಂಕಿ, ನೀರು, ಸೂರ್ಯ ಮತ್ತು ಚಂದ್ರರು ಗಾಳಿ ಅಥವಾ ಉಸಿರಿನಲ್ಲಿ ಅದೃಶ್ಯವಾಗುವುದನ್ನು ಕಾಣಬಹುದು, "ಗಾಳಿಯು ತನ್ನ

ವಿನಾ ನಿಜವಾಗಿಯೂ ಅಪಹರಣಕಾರನೆನಿಸಿದೆ. ನಿಜವಾಗಿಯೂ ಬೆಂಕಿಯು ಸುಡುವಾಗಲೂ ಸೂರ್ಯಾಸ್ತಮವಾದಾಗಲೂ, ಚಂದ್ರಾಸ್ತಮವಾದಾಗಲೂ ಕೇವಲ ಗಾಳಿಯೊಡನೆ ಸೇರುತ್ತದೆ. ನಿಜವಾಗಿಯೂ ಗಾಳಿಯು ಎಲ್ಲವನ್ನೂ ತಾನೇ ಅಪಹರಿಸುತ್ತದೆ. ಪ್ರಾಣವನ್ನು ಈಗ ಉಲ್ಲೇಖಿಸಿದಂತೆ ತಾನೇ ನಿಜವಾಗಿಯೂ ತನ್ನ ವಿನಾ ಅಪಹರಣಕಾರನೆನಿಸಿದೆ. ಒಬ್ಬನು ನಿದ್ರಿಸಿದಾಗ ಮಾತು, ಕಣ್ಣು, ಕಿವಿ, ಮನಸ್ಸು ಕೇವಲ ಗಾಳಿಯೊಡನೆ ಸೇರುತ್ತದೆ. ನಿಜವಾಗಿಯೂ ಉಸಿರು ಎಲ್ಲವನ್ನೂ ತಾನೇ ಅಪಹರಿಸುತ್ತದೆ. ತಮ್ಮಲ್ಲಿಯೇ ನಿಜವಾಗಿಯೂ ಇಬ್ಬರು ಅಪಹರಣಕಾರರಿದ್ದಾರೆ. ಶರೀರದಲ್ಲಿನ ಎಲ್ಲಾ ಜೈವಿಕ ಮೂಲವಸ್ತುಗಳಿಗಿಂತ ಉಸಿರು ಪಾರಮ್ಯವನ್ನು ಹೊಂದಿದೆ. ಶರೀರದ ಪಂಚೇಂದ್ರಿಯ-ಗಳಾದ ಮಾತು, ನೋಟ, ಆಲಿಸುವುದು, ಮನಸ್ಸು ಮತ್ತು ಉಸಿರುಗಳಲ್ಲಿನ ಪೈಪೋಟಿಯ ನಾಟಕೀಯ ನಿರೂಪಣೆ ನಮ್ಮಲ್ಲಿದೆ. ವಿಜಯಲಾಭವನ್ನು ಪಡೆದ ಉಸಿರು ತಾನಿಲ್ಲದೇ ಬೇರಾವ ಅಂಗಗಳೂ ಕಾರ್ಯ ನಿರ್ವಹಿಸುವುದಿಲ್ಲ. ಆದರೆ ಬೇರೆ ಅಂಗಾಂಗಗಳಿಲ್ಲದೆ ತಾನು ಕಾರ್ಯ ನಿರ್ವಹಿಸಬಲ್ಲೆ-ನೆಂಬುದನ್ನು ತೋರಿಸಿತು. ಇದು ಪ್ರಾಥಮಿಕವಾಗಿ ಜೀವಿಗಳಿಗೆ ಉಸಿರಿನ ಅವಶ್ಯಕತೆಯನ್ನು ಆಧರಿಸಿ ಅದನ್ನು ಶ್ರೇಷ್ಠವೆಂದು ಘೋಷಿಸಲಾಯಿತು. ಹಾಗಾಗಿ ತತ್ತ್ವಶಾಸ್ತ್ರಜ್ಞನು ಉಸಿರು ಅಥವಾ ಗಾಳಿಗೆ ಸಂಬಂಧಿಸಿದಂತೆ ಅಂತಿಮ ತತ್ತ್ವವಾಗಿ ಮಂಡಿಸುತ್ತಿದ್ದಂತೆ, ಇಂದ್ರಿಯ ಗ್ರಾಹ್ಯ ವಸ್ತುಗಳಾದ ನೀರು ಅಥವಾ ಆಹಾರವನ್ನು ಅಂತಿಮವಾದುದೆಂದು ಮುಂದಿಟ್ಟನು. ಇದು ಎಂದೆಂದಿಗೂ ಮೇಲಿನ ಮಾನವೀಕರಣವನ್ನು ಮೇಲೆತ್ತುವುದರಿಂದ ಜಯಿಸಿದರು, ಬಹುಶಃ ಮಾನವೀಕರಣದಿಂದ ಎಂದರೆ ಮಾನವನ ನಿಜವಾದ ಅನುಭವದಲ್ಲಿ ಸಾದೃಶ್ಯರೂಪದಲ್ಲಿ ಶುದ್ಧವಾಗಿ ವಾದಿಸುವ ಚಿಂತನಾಮಾರ್ಗ. ಅಂತಿಮವಾಗಿ ಆತ್ಮವನ್ನು ನೀರು, ಆಹಾರ ಅಥವಾ ಉಸಿರು ಎಂದು ನಿರೂಪಿಸಲಾಯಿತು. ಏಕೆಂದರೆ ಮಾನವನ ಜೀವನಕ್ಕೆ ಇವೆಲ್ಲವೂ ಖಚಿತವಾಗಿ, ವಾಸ್ತವವಾಗಿ ಅವಶ್ಯಕವಾಗಿದ್ದುವು.

ನಾವು ವಿಶ್ವವ್ಯಾಪಿ ಹಾಗೂ ಸರ್ವವ್ಯಾಪಿಯಾದ ಆಕಾಶದ ಮೊದಲ ತತ್ತ್ವಕ್ಕೆ ಮುಂದುವರೆಯು-ತ್ತೇವೆ. ಮನುಷ್ಯತ್ವಾರೋಪಣ ಹಾಗೂ ಇಂದ್ರಿಯ ಗ್ರಾಹ್ಯವಾದ್ದರಿಂದ ತನಗೆ ತಾನೇ ಪ್ರತ್ಯೇಕ ಗೊಳ್ಳುವಿಕೆಯನ್ನು ಅನುಸರಿಸುತ್ತಾ, ಇಂದ್ರಿಯಾತೀತ ಭಾವನೆಗಳ ಹಂತವನ್ನು ಪ್ರಥಮ ಬಾರಿಗೆ ಮೀರುವುದನ್ನು ನಾವು ಕಾಣುತ್ತೇವೆ. ಹಾಗೆ ನಮಗೊಂದು ಪ್ರಶ್ನೆಯನ್ನು ಕೇಳಲಾಯಿತು, "ವಿಶ್ವ ಹಿಂದಿರುಗಿ ಎಲ್ಲಿಗೆ ಹೋಗುತ್ತದೆ?" ಉತ್ತರವೆಂದರೆ "ಆಕಾಶಕ್ಕೆ" ..... ನಿಜವಾಗಿಯೂ ವಸ್ತುಗಳು ಆಕಾಶದಿಂದ ಉಗಮವಾಗುತ್ತವೆ. ಅವು ಮತ್ತೆ ಆಕಾಶದಲ್ಲಿ ಅದೃಶ್ಯವಾಗುತ್ತವೆ. ಆಕಾಶ ಮಾತ್ರವೇ ಇವೆಲ್ಲಕ್ಕಿಂತಲೂ ಶ್ರೇಷ್ಠ, ಆಕಾಶವೇ ಅಂತಿಮ ಗುರಿ. ಇದರಿಂದ ಅತ್ಯಂತ ಅಮೂರ್ತ ಕಲ್ಪನೆಗಳು ಬದಲಾವಣೆಗೊಂಡು ಅಸತ್, ಸತ್ ಅಥವಾ ಅಂತಿಮವಾಗಿ ಸುಲಭವಾಗಿ ನಾಶವಾಗದ, ಎಲ್ಲಾ ವಸ್ತುಗಳಿಗೆ ಮೂಲವಾದ ನಮ್ಮಲ್ಲಿರುವ ಮೂರು ತತ್ತ್ವಗಳನ್ನು ಮುಂದಿಡುತ್ತೇವೆ. ಶೂನ್ಯತೆಗೆ ಕೇವಲ ಅಸತ್ ಕಾರಣವಲ್ಲ, ಆದರೆ ಸಾಮಾನ್ಯ ಅಸ್ತಿತ್ವದ ಕೆಲವು ರೂಪವಾಗಿದೆ. ಕೆಲವರು ನಿಸ್ಸಂದೇಹವಾಗಿ ಹೇಳುತ್ತಾರೆ: "ಪ್ರಾರಂಭದಲ್ಲಿ ಈ ವಿಶ್ವವು ಕೇವಲ ಅಸತ್ ಆಗಿತ್ತು. ಜೊತೆಯಿಲ್ಲದ ಏಕಾಂಗಿಯಾಗಿತ್ತು. ಆ ಅಸತ್‌ನಿಂದ ಸತ್ ಅನ್ನು ನಿರ್ಮಿಸಲಾಯಿತು. ಆದರೆ (ನನ್ನ ಪ್ರಿಯನೆ) ನಿಜವಾಗಿಯೂ ಇದರ ಮೂಲ ಯಾವುದು? ಅಸತ್‌ನಿಂದ ಸತ್ ಅನ್ನು ಹೇಗೆ ನಿರ್ಮಿಸಲಾಯಿತು? (ನನ್ನ ಪ್ರಿಯನೆ) ಪ್ರತಿಕೂಲವಾಗಿ ಆರಂಭದಲ್ಲಿ ವಿಶ್ವವು ಕೇವಲ ಸತ್, ಜೊತೆಯಿಲ್ಲದ ಏಕಾಂಗಿಯಾಗಿತ್ತು. ಅದು ತನ್ನಲ್ಲಿಯೇ ಚಿಂತಿಸುತ್ತಾ ನಾನು ಅನೇಕವಾಗಬಹುದೇ? ನನಗೆ ನಾನೇ

ಸಂತಾನ ಪಡೆಯುತ್ತೇನೆಂದು, ಅದು ಶಾಖವನ್ನು ಹೊರಡಿಸಿತು.... ಆ ಶಾಖವು ತನ್ನಲ್ಲೇ ಚಿಂತಿಸಿತು..... ನಾನು ಅನೇಕನಾಗಬಹುದೇ? ನನಗೆ ನಾನೇ ಸಂತಾನ ಪಡೆಯುತ್ತೇನೆಂದು ಅದು ನೀರನ್ನು ಹೊರಚಿಮ್ಮಿಸಿತು.... ಆ ನೀರೂ ತಾನೇ ಆಲೋಚಿಸಿ..... ನಾನು ಅನೇಕನಾಗಬಹುದೇ? ನನಗೆ ನಾನೇ ಸಂತಾನ ಪಡೆಯುತ್ತೇನೆಂದು ಅದು ಆಹಾರವನ್ನು ಹೊರಡಿಸಿತು" ಹಾಗೆ ಇಡೀ ವಿಶ್ವ, ಮಾನವನನ್ನೊಳಗೊಂಡು ಈ ಮೂರು ಮೂಲವಸ್ತುಗಳಾದ ಶಾಖ, ನೀರು ಮತ್ತು ಆಹಾರವು ಆದ್ಯ ಜೀವಿಗಳ ಜೀವಗೂಡಿಸುವ ತತ್ತ್ವವಾಗಿದೆಯೆಂದು ನಮಗೆ ತಿಳಿಸಲಾಯಿತು. ಈ ಜೀವಿಗಳು ಜಾಗ್ರದವಸ್ಥೆಯಲ್ಲಿ ಸ್ವರೂಪವನ್ನು ನಿರೂಪಿಸುವ ಚಿಂತನೆಯನ್ನು ಮಾಡಲಿಲ್ಲವೆಂದು ಕಾಣುತ್ತದೆ. ಜೀವಿಗಳ ಮೂಲ ಚಿಂತನೆಯು ಮೇಲಿನ ಉದ್ಧೃತದಲ್ಲಿ ಕಾಣಿಸಿರುವಂತೆ ಅಕ್ಷರಶಃ ಅದೇ ಪದವನ್ನು 'ಚಿಂತನೆ' ಎಂದು ಅನುವಾದಿಸಿ ಶಾಖ ಮತ್ತು ನೀರು ತಾವೇ ಪ್ರತಿಯೊಂದೂ ಬೇರ್ಪಡುವುದರಿಂದ ಈ ಸಂದರ್ಭದಲ್ಲೂ ಬಳಸಲಾಗಿದೆ. ಮಾನವನಿಗೆ ಭೌತವಾದದ ಪ್ರಾಮುಖ್ಯವನ್ನು ನೀಡಲಾಯಿತು. ಹಾಗೂ ಅವನ ಪ್ರಾಜ್ಞ ಸಾಮರ್ಥ್ಯವು ಶಾಖ, ನೀರು ಮತ್ತು ಆಹಾರದ ಮೊತ್ತವಾಗಿ ಮೂರು ಬಾರಿ ಪುನರಾವರ್ತಿತ ಸೂಕ್ತಿಯಾಗಿ "ಮನಸ್ಸು (ಬುದ್ಧಿ) ಆಹಾರವನ್ನು ಒಳಗೊಂಡಿದೆ" ಮತ್ತು ಸಮೀಪ-ದಲ್ಲಿರುವ ನಿಜವಾದ ವಸ್ತುನಿಷ್ಠ ದೃಷ್ಟಾಂತಗಳೆಂದರೆ 15 ದಿನಗಳಿಂದ ಉಪವಾಸವಿದ್ದ ಓರ್ವ ಶಾಸ್ತ್ರಜ್ಞನು ತನ್ನ ಬುದ್ಧಿಯನ್ನು ಪ್ರಯೋಗಿಸಲಾಗಲಿಲ್ಲ. ಈ ತತ್ತ್ವಶಾಸ್ತ್ರಜ್ಞನ ದೃಷ್ಟಿಯಲ್ಲಿ ಅಪ್ರಜ್ಞೆಯ ಪ್ರಕ್ರಿಯೆಗಳ ಫಲಿತಾಂಶದಿಂದ ಪ್ರಜ್ಞೆಯನ್ನು ಭಾವಿಸಲಾಗುತ್ತದೆಂಬುದು ಕಾಣುತ್ತದೆ, ಆದುದರಿಂದ ಅದು ಅಂತಿಮವಾದುದಲ್ಲ. ಅನಂತರ ನಿದ್ದೆಯಲ್ಲಿ ಸಂಪೂರ್ಣ ಪ್ರಜ್ಞಾ ಕೊರತೆ ಅಥವಾ ಸಾವಿನಲ್ಲಿ ಮನಸ್ಸು (ಬುದ್ಧಿ) ಉಸಿರಿನಲ್ಲಿ ಸೇರಿ ಉಸಿರು ಶಾಖವಾಗಿ ಜೀವಿಯನ್ನು ತಲಪುತ್ತವೆ. ಕೆಲವು ಪ್ರಾಚೀನ ಪ್ರಜ್ಞಾಹೀನ ವಸ್ತುಗಳು ಎಲ್ಲಾ ವಸ್ತುಗಳ ಕೆಳಗೆ ನೆಲೆಸಿ, ಶಾಖ, ನೀರು ಮತ್ತು ಆಹಾರವೆಂಬ ಮೂರು ಮೂಲ ವಸ್ತುಗಳಿಂದ ಉತ್ತಮವಾಗಿ ನಿರೂಪಿಸಿ ಜೀವಿಯ ಭಾವನೆಗಳನ್ನು ಗುರುತಿಸುವಂತೆ ಕಾಣುತ್ತದೆ. ಈ ಪ್ರಾಚೀನ ಮೂಲ ಸಾಮಗ್ರಿಗಳಲ್ಲಿ ಎಲ್ಲವೂ ವಿಶ್ವದಲ್ಲಿದೆ ಎಂದು ಕೆಲವರು ಜೀವಿಯನ್ನು ವಿವರಿಸಿದರು. ಪ್ರಜ್ಞೆಯಿರುವ ಆತ್ಮವೋ ಅಥವಾ ಪ್ರಜ್ಞೆಯಿಲ್ಲದ ವಸ್ತುವೋ ಎಂದು ಅಂತಿಮವಾಗಿ ನಿಯೋಜಿಸಲಾಯಿತು. ಗ್ರೀಕ್ ತತ್ತ್ವಶಾಸ್ತ್ರಜ್ಞ ಥೇಲ್ಸ್ ಹೇಳುವಂತೆ ಉಪನಿಷತ್ತಿನ ತತ್ತ್ವಜ್ಞಾನಿಗಳು ವಿಶ್ವದ ಭೌತಿಕ ಕಾರಣವನ್ನು ಶೋಧಿಸಲು ಪ್ರಯತ್ನಿಸಿದಂತೆ ಕಾಣುತ್ತದೆ. ಅನಂತರ ವಿಶ್ವದ ಭೌತಿಕ ಕಾರಣದಿಂದ ಸಮರ್ಥ ಕಾರಣವನ್ನು ಗುರುತಿಸಿರುವುದನ್ನು ಕಾಣಬಹುದು. ಅಸತ್ ಅಥವಾ ಸತ್ ಆಗಲೀ, ಅಸ್ತಿತ್ವದಲ್ಲಿರುವ ಎಲ್ಲಾ ಮೂಲಸಾಮಗ್ರಿಗಳು ಎಲ್ಲವೂ ಕೇವಲ ಪ್ರಾಚೀನ ವಸ್ತುವೊಂದರಿಂದ ಬಂದಿದ್ದು, ಅಂತಿಮ ಅಸ್ತಿತ್ವದ ರೂಪವನ್ನು ಪಡೆಯಿತು. ಅಂತಿಮ ಸತ್ಯವೆಂದರೆ ಕೆಲವು ಅಮೂರ್ತ ಶಕ್ತಿ ಅಥವಾ ಅಸ್ತಿತ್ವದಿಂದ ವಿಶ್ವವು ಹೊರಹೊಮ್ಮಿ ಅಂತಿಮವಾಗಿ ಅಲ್ಲಿಗೇ ಅದು ಹಿಂತಿರುಗುತ್ತದೆ. ತೈತ್ತರೀಯ ಉಪನಿಷತ್ತಿನಲ್ಲಿ ಭೃಗುವಿನ ತಂದೆಯಾದ ವರುಣನು ತನ್ನ ಮಗನಿಗೆ ವಿಶ್ವದ ಕಾರಣವನ್ನು ಬೋಧಿಸುತ್ತಾನೆ. ಅವನು: "ವಿಲಯದ ಸಮಯದಲ್ಲಿ ಅವು ಪ್ರವೇಶಿಸಿ, ಅವು ಅನ್ವೇಷಿಸಲು ಅರಿತು ಅದರಲ್ಲಿಯೇ ವಿಲೀನಗೊಳ್ಳುತ್ತವೆ- ಅದೇ ಬ್ರಹ್ಮ" ಎನ್ನುತ್ತಾನೆ. ವರುಣನ ಮಗನಾದ ಭೃಗುವು ಆಹಾರವೇ ಬ್ರಹ್ಮ ಎಂದು ಅರಿತನು; ಆಹಾರಕ್ಕಿಂತಲೂ ಹೆಚ್ಚಾಗಿ ಈ ಜೀವಿಗಳು ಆಹಾರದಿಂದಲೇ ಹುಟ್ಟಿ, ರೂಪುಗೊಂಡು ಜೀವಿಸಿವೆಯೇ, ವಿಲಯದ ಸಮಯದಲ್ಲಿ ಆಹಾರದಲ್ಲಿ ಅವು ಪ್ರವೇಶಿಸುತ್ತವೆಯೇ, ಅವು ವಿಲೀನಗೊಳ್ಳುವುವೇ? ಅವನು ಮತ್ತೆ ಪ್ರಾಣ, ಮನಸ್ಸು ಮತ್ತು

ವಿಜ್ಞಾನ ಬ್ರಹ್ಮವೆಂದು ಅದೇ ಕಾರಣದಿಂದ ಅರಿತನು. ಅವನು ಅಂತಿಮವಾಗಿ ಬ್ರಹ್ಮನಲ್ಲಿ ಆನಂದವಿದೆ ಎಂದು ಅರಿತನು. ಆನಂದದಿಂದಾಚೆಗೆ ನಿಜವಾಗಿಯೂ ಈ ಜೀವಿಗಳು ಆನಂದದಲ್ಲಿಯೇ ಹುಟ್ಟಿ ಆನಂದದಲ್ಲಿಯೇ ಬದುಕಿ ವಿಲಯದ ಸಮಯದಲ್ಲಿ ವಿಲೀನಗೊಳ್ಳಲು ಪ್ರವೇಶಿಸುತ್ತವೆಯೇ? ಋಷಿಗಳು ವಿಶ್ವದ ಕಾರಣ ಬ್ರಹ್ಮನೇ ಎಂದು ಕೇಳುತ್ತಾ ಸಂವಾದ ಮಾಡುವಾಗ "ಬ್ರಹ್ಮವು ಕಾರಣವೇ? ನಾವು ಎಲ್ಲಿಂದ ಜನಿಸಿದೆವು? ನಾವು ಯಾವುದರಿಂದ ಬದುಕುತ್ತಿದ್ದೇವೆ? ಅಂತ್ಯದಲ್ಲಿ (ಸಾವಿನ ನಂತರ) ನಾವೆಲ್ಲಿ ವಿರಮಿಸುತ್ತೇವೆ? ಕಾಲ ಅಥವಾ ಪ್ರಕೃತಿ ಅಥವಾ ಅವಶ್ಯಕತೆ ಅಥವಾ ಅವಕಾಶ ಅಥವಾ ಮೂಲವಸ್ತುವು ಕಾರಣವೆಂದು ಭಾವಿಸುವುದೇ? ಅಥವಾ ಯಾರನ್ನು ಪುರುಷನೆಂದು ಕರೆಯಲ್ಪಡುವುದೋ, ಆ ಸಾರ್ವಕಾಲಿಕ ಆತ್ಮವೇ? ಋಷಿಗಳು ಮೇಲಿನ ಪ್ರಶ್ನೆಗಳಿಗೆ ಉತ್ತರವಾಗಿ ವಿಶ್ವದ ಅಂತಿಮ ಕಾರಣವನ್ನು ಅನ್ವೇಷಿಸಲು ಸಾಧ್ಯವಿಲ್ಲ. ಇಂದ್ರಿಯಾನುಭವವನ್ನು ಆಧರಿಸಿದ ಕಾರಣವೇ ವಿಶ್ವದ ಅಂತಿಮ ಕಾರಣ ಎಂದಿದ್ದಾರೆ. ಆದುದರಿಂದ ಋಷಿಗಳು ಯೋಗಪಥವನ್ನು ಅನುಸರಿಸಿ ಪರಮಾತ್ಮನು ತನ್ನ ಮಾಯೆಯ ಸಹಾಯದಿಂದ ವಿಶ್ವವನ್ನು ಕ್ರಮವಾಗಿ ನಿರೂಪಿಸಿದ-ನೆಂಬ ಮುಕ್ತಾಯಕ್ಕೆ (ನಿರ್ಧಾರಕ್ಕೆ) ಬಂದರು. ಇಲ್ಲಿ ವಿಶ್ವದ ಕಾರಣವು ಪ್ರಜ್ಞೆ ಎಂದು ಕಾಣುತ್ತದೆ. ಅವನೇ ಮಾಯೆ. ದೇವರು ತನ್ನ ಮಾಯೆಯ ಸಹಾಯದಿಂದ ವಿಶ್ವವನ್ನು ಸೃಷ್ಟಿಸುತ್ತಾನೆ. ಅವನ ಅಪೇಕ್ಷೆಯಂತೆ, ಪರಮಾತ್ಮನ ಅಪೇಕ್ಷೆಯಂತೆ ನಾನು ಅನೇಕವಾಗಬಹುದು. ನಾನು ಹುಟ್ಟಬಹುದು. ಐತ್ತರೇಯ ಉಪನಿಷತ್ತಿನಲ್ಲಿಯೂ ಸಹಾ ಇಂತಹುದೇ ನಿರೂಪಣೆಯನ್ನು ನಾವು ಕಾಣುತ್ತೇವೆ: "ಅವನು ತನ್ನಲ್ಲಿಯೇ ಚಿಂತಿಸುತ್ತಾನೆ; ಈಗ ವಿಶ್ವವನ್ನು ಸೃಷ್ಟಿಸೋಣ. ಅನಂತರ ಅವನು ಈ ವಿಶ್ವಗಳನ್ನು ಸೃಷ್ಟಿಸಿದನು.... ತೈತ್ತರೀಯ ಉಪನಿಷತ್ತಿನಲ್ಲಿ ಮತ್ತೆ ಹೀಗೆ ವಿವರಿಸಲಾಗಿದೆ "ಅದರಿಂದ (ಬ್ರಹ್ಮ) ಆಕಾಶ ಹುಟ್ಟಿತು, ಗಾಳಿಯಿಂದ ಬೆಂಕಿ, ಬೆಂಕಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಸಸ್ಯಗಳು, ಸಸ್ಯಗಳಿಂದ ಆಹಾರ, ಆಹಾರದಿಂದ ಮನುಷ್ಯ ಎಂದಿದೆ. ಹಾಗಾದರೆ ನಾವು ವಿಶ್ವಗಳು ಬ್ರಹ್ಮನಿಂದ ಮತ್ತು ಬ್ರಹ್ಮನ ಮೂಲಕ ಸೃಷ್ಟಿಯಾಯಿತೆಂದು ಹೇಳಬಹುದು. ವಿಶ್ವದ ಕಾರಣ ಬ್ರಹ್ಮವೆಂದು ಹೇಳಲಾಗಿದೆ. ವಿಶ್ವವು ಬ್ರಹ್ಮನಿಂದ ಹೊರಬಂದು ಮತ್ತೆ ಬ್ರಹ್ಮನಲ್ಲಿಗೇ ಹಿಂದಿರುಗುತ್ತದೆ. ಈಗ ಅದು ಬ್ರಹ್ಮನ ಭಾವನೆಗಳನ್ನು ನೀರು, ಉಸಿರು ಅಥವಾ ಆಕಾಶ ಭಾವನೆ-ಗಳೆಂದು ಬೇರ್ಪಡಿಸುತ್ತದೆ. ಈ ಭಾವನೆಗಳು ಅಸದೃಶವಾದುವು, ಪ್ರಾಥಮಿಕ ಪ್ರಜ್ಞೆಯ ತತ್ತ್ವದಿಂದ ಬ್ರಹ್ಮನ ವಿಶ್ವದ ಶಕ್ತಿಯು ಚಿಂತನೆಗೆ ಬಂದಿತು. ಅದಕ್ಕೆ ಅನುಸಾರವಾಗಿ ಪರೋಕ್ಷವಾಗಿ ಒಬ್ಬರ ಸ್ವ ಆತ್ಮದಲ್ಲಿ ಅಸ್ತಿತ್ವದಲ್ಲಿರುವ ಬಾಹ್ಯ ವಿಶ್ವವು ಆಧಾರವಾಗಿರುತ್ತದೆ. ಅದಕ್ಕಿಂತಲೂ ಹೆಚ್ಚಾಗಿ ಪ್ರಜ್ಞೆಯ ತತ್ತ್ವವು ಅನಾತ್ಮಕ್ಕಿಂತಲೂ ಆತ್ಮಕ್ಕೆ ಹೆಚ್ಚು ಸಮಾನವಾಗಿರುತ್ತದೆ. ಏಕತತ್ತ್ವ ಭಾವನಾವಾದದ ಬೀಜಗಳು ಉಪನಿಷತ್ತಿನ ಬೋಧನೆಗಳನ್ನು ವಿವರಿಸುತ್ತವೆ. ಮತ್ತು ಭಾರತೀಯ ಚಿಂತನೆಯ ಅತ್ಯಂತ ಅನಂತರದ ಅಭಿವೃದ್ಧಿಯನ್ನು ಬಿತ್ತಲಾಯಿತು. ಅದು ಯಾಜ್ಞವಲ್ಕ್ಯರಂತಹವರ ತತ್ತ್ವ ಶಾಸ್ತ್ರದ ಅಂತರ್‌ದೃಷ್ಟಿಯಿಂದ ಎಲ್ಲಾ ವಸ್ತುಗಳ ಅಂತಿಮ ಆಧಾರ ಬ್ರಹ್ಮವೆಂದೂ, ಅದು ಪ್ರಜ್ಞೆಯ ತತ್ತ್ವವೆಂದೂ ಕಂಡುಬಂದಿತು.

ನಾವು ಈವರೆಗೂ ನಿರೂಪಿಸಿರುವ ಅಭಿವೃದ್ಧಿಯ ದೃಷ್ಟಿಯಲ್ಲಿ ಪರಮಸತ್ಯ ಎಂದರೆ ನಿರಾಕಾರ ಇಂದ್ರಿಯ ಗ್ರಾಹ್ಯ ಮೂಲವಸ್ತುವಾದ ನೀರು ಮತ್ತು ಆಹಾರ, ಹೆಚ್ಚೆಚ್ಚು ಅಮೂರ್ತ ಹಾಗೂ ಸಾರ್ವತ್ರಿಕ ಮೂಲ ವಸ್ತುಗಳಾದ ಉಸಿರು ಅಥವಾ ಗಾಳಿ, ಆಕಾಶ, ಅಸತ್, ಜೀವಿಗಳು ಅವಿನಾಶವಾದವು.

ಅಂತಿಮವಾಗಿ ಪ್ರಜ್ಞೆಯ ತತ್ತ್ವವಾದ ಬ್ರಹ್ಮದೃಷ್ಟಿಯನ್ನು ತಲುಪುವವರೆಗೂ ಅಸಂಖ್ಯಾತ ಆಲೋಚನಾ ಸರಣಿಯಿಂದ ಈ ಕಾಲದ ಏಕಮಾತ್ರ ಅಭಿವೃದ್ಧಿಗೆ ಬಂದಿರುವುದನ್ನು ನಿರೂಪಿಸುತ್ತವೆ.

ಈ ಬ್ರಹ್ಮವೇ ಎಲ್ಲದರ ಅಸ್ತಿತ್ವ. ಎಲ್ಲಾ ದೇವರುಗಳು ಮತ್ತು ಇದುವರೆಗೆ ಅಂಗೀಕರಿಸಿರುವ ಎಲ್ಲಾ ಶಕ್ತಿಗಳು ಅವನಿಗೆ ಅಧೀನ. ದೇವರುಗಳಾದ ಅಗ್ನಿ ಮತ್ತು ವಾಯು ಬ್ರಹ್ಮ ನೀಡಿದ ಶಕ್ತಿಯಿಲ್ಲದೆ ಹುಲ್ಲಿನ ಕಣವನ್ನು ಅನುಕ್ರಮವಾಗಿ ದಹಿಸಲು ಅಥವಾ ಬೀಸಲು (ಹಾರಿಸಲು) ಅಸಮರ್ಥರು. ಉಪನಿಷತ್ತುಗಳು ಸಂಪೂರ್ಣವಾಗಿ ಸ್ಪಷ್ಟಪಡಿಸುವುದೇನೆಂದರೆ ಎಂದೆಂದಿಗೂ ಮಾಡು ಅಥವಾ ಬ್ರಹ್ಮದ ಆಚೆಗೆ ಇರು. ಎಲ್ಲವನ್ನೂ ಗ್ರಹಿಸಬಲ್ಲ ಆತ್ಮ ಅಥವಾ ಬ್ರಹ್ಮನೊಳಗೆ ಪ್ರತಿಯೊಂದೂ ಅಸ್ತಿತ್ವ-ದಲ್ಲಿರುವುದನ್ನು ಕಾಣಬಹುದು. ಆದುದರಿಂದ "ನನ್ನ ಪ್ರೀತಿ ಪಾತ್ರನೇ, ಒಂದು ಮಣ್ಣಿನ ಹೆಂಟೆಯಿಂದ ಎಲ್ಲವೂ ಮಣ್ಣಿನಲ್ಲಿಯೇ ಮಾಡಿರುವುದೆಂದು ತಿಳಿದಿದೆ. ಮಾತಿನಿಂದ ಹೊಮ್ಮುವ ಹೆಸರೊಂದೇ ಮಾರ್ಪಾಡು. ಸತ್ಯವೆಂದರೆ ಎಲ್ಲವೂ ಮಣ್ಣೇ ಆಗಿದೆ. ನನ್ನ ಪ್ರೀತಿ ಪಾತ್ರನೇ, ಒಂದು ಚಿನ್ನದ ತುಣುಕಿನಿಂದ ಎಲ್ಲವೂ ಚಿನ್ನದಲ್ಲಿಯೇ ಮಾಡಿರುವುದೆಂದು ತಿಳಿದಿದೆ. ಮಾತಿನಿಂದ ಹೊಮ್ಮುವ ಹೆಸರೊಂದೇ ಮಾರ್ಪಾಡು. ಸತ್ಯವೆಂದರೆ ಎಲ್ಲವೂ ಚಿನ್ನವೇ ಆಗಿದೆ." ಬ್ರಹ್ಮನ ಆಚೆಗೆ ಇರುವುದನ್ನು ಉಪನಿಷತ್ತಿಗೆ ಅನುಗುಣವಾಗಿ ಭಾವಿಸಲು ಕಷ್ಟವಾಗುತ್ತದೆ. ಎಲ್ಲೆಡೆ ವ್ಯಾಪಿಸಿರುವ ಬ್ರಹ್ಮನು ವಿಶ್ವಕ್ಕೆ ಕಾರಣನಾಗಿದ್ದಾನೆ. ಆದುದರಿಂದ "ಇದೆಲ್ಲವೂ ಬ್ರಹ್ಮ" ಬ್ರಹ್ಮನು ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮಗಳಲ್ಲಿ ಹೊಳೆಯುತ್ತಿದ್ದಾನೆ. ಭೂಮಿಯಲ್ಲಿ ಅಂತ್ಯವಿಲ್ಲದ ಅಥವಾ ಅನಂತವಾದ ವಾಯು, ಆಕಾಶ, ಸಮುದ್ರ, ಬೆಳಕು ಸೂಸುವ ಅಗ್ನಿ, ಸೂರ್ಯ, ಚಂದ್ರ ಹಾಗೂ ಮಿಂಚು ಮತ್ತು ಬೆಂಬಲವನ್ನು ಹೊಂದಿರುವ ಉಸಿರು, ಕಣ್ಣು, ಕಿವಿ ಮತ್ತು ಮನಸ್ಸು (ಬುದ್ಧಿ) ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಬ್ರಹ್ಮನು ಎಲ್ಲಕ್ಕಿಂತಲೂ ಹೆಚ್ಚಾಗಿ ತಾನೇ ಪ್ರಜ್ಞೆಯ ತತ್ತ್ವವೆಂದು ಪ್ರಸಿದ್ಧನಾಗಿರುವನೆಂಬುದನ್ನು ತಿಳಿಸುತ್ತಾ ಈ ಧರ್ಮ ಬೋಧೆಯು ಮುಕ್ತಾಯವಾಗುತ್ತದೆ.

## ಆತ್ಮ

ನಾವು ವೈಯಕ್ತಿಕ ದೃಷ್ಟಿಕೋನದಿಂದ ಆತ್ಮದ ಸತ್ಯತೆಯನ್ನು ಹೇಳಬಹುದು. ಛಾಂದೋಗ್ಯ ಉಪನಿಷತ್ತಿನಲ್ಲಿ ಜೀವಿಯು ವೈಯಕ್ತಿಕ ದೃಷ್ಟಿಕೋನದಿಂದ ಸ್ವಪ್ರಜ್ಞೆಯ ಕಲ್ಪನೆಗೆ ಬರುವ ಮತ್ತೊಂದು ಕಥೆಯನ್ನು ನಿರೂಪಿಸಲಾಗಿದೆ, ಅವರು ದೈಹಿಕ ಪ್ರಜ್ಞೆಯಿಂದ ಅಂತಿಮ ಸತ್ಯವನ್ನು ಹೇಗೆ ತಪ್ಪಾಗಿ ಭಾವಿಸಬಾರದೆಂಬುದನ್ನೂ ಹೇಗೆ ಸ್ವಪ್ನಪ್ರಜ್ಞೆಯಿಂದ ಕಂಗೆಡಬಾರದು, ಅದು ಹೇಗೆ ಗಾಢನಿದ್ರೆಯ ಪ್ರಜ್ಞೆಯನ್ನು ಮೀರುತ್ತದೆ, ಅಂತಿಮವಾಗಿ ಅದು ಹೇಗೆ ದೈಹಿಕ ಅಥವಾ ಮಾನಸಿಕ ಮಿತಿಯಾಚೆಗೆ ಶುದ್ಧಸ್ವಪ್ರಜ್ಞೆಯಾಗುತ್ತದೆ ಎಂಬುದನ್ನು ಅಭಿವ್ಯಕ್ತಪಡಿಸುತ್ತಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ದೇವರುಗಳಲ್ಲಿ ಇಂದ್ರನು, ರಾಕ್ಷಸರಲ್ಲಿ ವಿರೋಚನನು ಆತ್ಮದ ನಿಜ ಸ್ವಭಾವವನ್ನು ತಿಳಿಯಲು ಪ್ರಜಾಪತಿಯಲ್ಲಿಗೆ ಹೋಗುತ್ತಾರೆ. ಅವರು ಪಾಪದಿಂದ ಮುಕ್ತವಾದ ಆತ್ಮ, ವೃದ್ಧಾಪ್ಯದಿಂದ, ಮರಣ-ದಿಂದ, ದುಃಖದಿಂದ, ಹಸಿವಿನಿಂದ, ಬಾಯಾರಿಕೆಯಿಂದ ಮುಕ್ತವಾದ ಆತ್ಮ. ಯಾರ ಆಸೆಗಳು, ಆಲೋಚನೆಗಳು ನಿಜವಾಗುವುದೋ ಅದನ್ನು ಅನ್ವೇಷಿಸಬೇಕೆಂಬುದನ್ನು ತಿಳಿಯಲು ಆಶಿಸುತ್ತೇವೆ ಎಂದರು. ಪ್ರಜಾಪತಿಯು ಅವರಿಗೆ ಅಂತಿಮ ಸತ್ಯವನ್ನು ತಕ್ಷಣ ಹೇಳಲಿಲ್ಲ. ಅವನು ಅವರನ್ನು ಭ್ರಾಂತಿಗೊಳಿಸಲು ಪ್ರಯತ್ನಿಸಿ ಮೊದಲು ಆತ್ಮವೆಂದರೆ ಕಣ್ಣಿನಲ್ಲಿ, ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ಪ್ರತಿಬಿಂಬವನ್ನು ಕಂಡಂತೆ ಹೆಚ್ಚೇನೂ ಇಲ್ಲವೆಂದನು. ಇಂದ್ರ ಮತ್ತು ವಿರೋಚನ ಹಿಂದಿರುಗಿದರು.

ವಿರೋಚನನು ಪ್ರಜಾಪತಿಯ ಬೋಧನೆಯಿಂದ ತೃಪ್ತನಾದನು ಮತ್ತು ಆತ್ಮವೆಂದರೆ ಕೇವಲ ದೈಹಿಕ ಪ್ರಜ್ಞೆಗಿಂತ ಹೆಚ್ಚೇನೂ ಇಲ್ಲವೆಂದು ಭಾವಿಸಿದನು. ಆದರೆ ಇಂದ್ರನು ಪ್ರಜಾಪತಿಯ ಪ್ರಥಮ ಬೋಧನೆಯಿಂದ ತೃಪ್ತನಾಗಲಿಲ್ಲ. ಅವನು ಮತ್ತೆ ಪ್ರಜಾಪತಿಯಲ್ಲಿಗೆ ಹೋಗಿ ಅಂತಿಮ ಸತ್ಯ-ವೆಂದರೇನೆಂಬುದನ್ನು ಮತ್ತೊಮ್ಮೆ ಹೇಳುವಂತೆ ಕೇಳಿಕೊಂಡನು. ಪ್ರಜಾಪತಿಯು ಮತ್ತೊಮ್ಮೆ ಅವನನ್ನು ಕಂಗೆಡಿಸಲು ಪ್ರಯತ್ನಿಸಿದನು. ಅವನ ಯೋಗ್ಯತೆಯನ್ನು ಪರೀಕ್ಷಿಸಲು ನಿಜವಾದ ಆತ್ಮವೆಂದರೆ ಸ್ವಪ್ನಪ್ರಜ್ಞೆ ಎಂದು ಹೇಳಿದನು. ಇಂದ್ರನು ಮೂರನೆಯ ಬಾರಿ ಪ್ರಜಾಪತಿಯಲ್ಲಿಗೆ ಹೋದನು, ಅವನು ಮತ್ತೆ ಇಂದ್ರನನ್ನು ಕಂಗೆಡಿಸಿ ನಿಜವಾದ ಆತ್ಮವೆಂದರೆ ದೀರ್ಘ ನಿದ್ರಾಪ್ರಜ್ಞೆ ಎಂದು ಹೇಳಿದನು. ಅಂತಿಮವಾಗಿ ಇಂದ್ರನು ಆತ್ಮನ ನಿಜಸ್ವಭಾವವನ್ನು ತಿಳಿಯಲು ಪ್ರಜಾಪತಿಯಲ್ಲಿಗೆ ಹೋದಾಗ ಪ್ರಜಾಪತಿಯು "ಓ ಇಂದ್ರನೇ, ಈ ದೇಹವು ಸಾವಿಗೆ ಒಳಪಟ್ಟಿರುವುದಾದರೂ, ಅದೇ ಸಮಯದಲ್ಲಿ ಅಮರವಾದ ಆತ್ಮಕ್ಕೆ ಹೊದಿಕೆಯಾಗಿದೆ. ಯಾವಾಗ ಆತ್ಮವು ದೇಹವನ್ನು ಆವರಿಸುವುದೋ, ಆಗ ಮಾತ್ರ ಪ್ರತ್ಯಕ್ಷ ಜ್ಞಾನವುಳ್ಳ ಸಂತೋಷ ಮತ್ತು ಯಾತನೆಯಾಗುತ್ತದೆ. ದೇಹದಿಂದ ಆತ್ಮವು ಮುಕ್ತವಾದಾಗ ಸಂತೋಷವೂ ಇಲ್ಲ ಯಾತನೆಯೂ ಇಲ್ಲವಾಗುತ್ತದೆ. ಗಾಳಿ ಮತ್ತು ಮೋಡದಂತೆ, ಮಿಂಚು ಮತ್ತು ಗುಡುಗಿನಂತೆ, ದೇಹವಿಲ್ಲದೆ ಸ್ವರ್ಗೀಯ ಆಕಾಶದಿಂದ ಗೋಚರಿಸುತ್ತದೆ, ಮತ್ತು ತನ್ನ ಸ್ವರೂಪದಲ್ಲಿ ಕಾಣುತ್ತದೆ. ಹೀಗೆ ಈ ಪ್ರಶಾಂತ ಜೀವಿಯ ಹೆಸರೇ ಆತ್ಮ. ಸಾಯುವ ದೇಹದಿಂದ ಗೋಚರಿಸಿ, ಅತ್ಯುನ್ನತ ಬೆಳಕನ್ನು ತಲುಪಿ, ಅನಂತರ ತನ್ನ ಸ್ವರೂಪದಲ್ಲಿ ಕಾಣುವ ಈ ಪ್ರಶಾಂತ ಜೀವಿಯೇ ಅತ್ಯುನ್ನತ ವ್ಯಕ್ತಿ. ಶುದ್ಧಾತ್ಮ, ಅಮರ ಮತ್ತು ಅಮೂರ್ತ ಸಶರೀರವಾಗಿರುವ ಆತ್ಮ ಸಂತೋಷ ಮತ್ತು ಯಾತನೆಯ ಬಲಿಪಶು. ಎಲ್ಲಿಯವರೆಗೆ ದೇಹದೊಂದಿಗೆ ಗುರುತಿಸಿಕೊಳ್ಳುವುದೋ ಅಲ್ಲಿಯವರೆಗೆ ಸಂತೋಷ ಮತ್ತು ಯಾತನೆಗೆ ಅಂತ್ಯವಿಲ್ಲ. ಆದರೆ ದೇಹದೊಂದಿಗೆ ಗುರುತಿಸಿಕೊಳ್ಳದಿದ್ದಲ್ಲಿ ಸಂತೋಷವಾಗಲೀ ಯಾತನೆಯಾಗಲೀ (ಮುಟ್ಟುವುದಿಲ್ಲ) ಇರುವುದಿಲ್ಲ.

ಆತ್ಮವು ದೇಹದಲ್ಲಿ ನೆಲೆಸಲು ಬಂದಾಗ, ಅದನ್ನು ಕೆಲವು ಮಾನಸಿಕ ಸ್ಥಿತಿಗಳ ಮೂಲಕ ಮುಂದುವರೆಯುತ್ತಿದೆ ಎಂದು ಅಂಗೀಕರಿಸಬೇಕು. ಮಾಂಡೂಕ್ಯ ಉಪನಿಷತ್ತು ಪ್ರಜ್ಞೆಯ ನಾಲ್ಕು ಸ್ಥಿತಿಗಳನ್ನು ವಿಶ್ಲೇಷಿಸುತ್ತದೆ. ಆತ್ಮನ ಪಾದವನ್ನು ವೈಶ್ವಾನರವೆಂದು ಕರೆಯಲಾಗಿದ್ದು, ಅದರ ಚಟುವಟಿಕೆಯ ಗೋಲವು ಎಚ್ಚರದ ಸ್ಥಿತಿ ಆಗಿದೆ. ಇದು ಬಾಹ್ಯವಸ್ತುಗಳ ಪ್ರಜ್ಞೆ. ಎರಡನೆಯ ಪಾದವು ತೇಜಸ್ಸು, ಗೋಲದ ಚಟುವಟಿಕೆಯು ಸ್ವಪ್ನ ಸ್ಥಿತಿ, ಆಂತರಿಕ ವಸ್ತುಗಳ ಪ್ರಜ್ಞೆ, ಮೂರನೆಯದು ಪ್ರಜ್ಞೆ, ಅದರ ಗೋಲ ಗಾಢನಿದ್ರೆ, ಅದರಲ್ಲಿ ಎಲ್ಲಾ ಅನುಭವಗಳು ಒಂದಾಗುತ್ತದೆ. ತುರೀಯವು ಬಾಹ್ಯ (ವಸ್ತುನಿಷ್ಠ) ಪ್ರಪಂಚದ ಪ್ರಜ್ಞೆ, ಇಲ್ಲವೇ ಎರಡರ ಪ್ರಜ್ಞೆ ಇಲ್ಲದ, ಇಲ್ಲವೇ ಸಮೂಹ ಪ್ರಜ್ಞೆ ಇರುವುದಾಗಿದೆ. ಅದು ಸಾಧಾರಣ ಪ್ರಜ್ಞೆಯಲ್ಲ, ಇಲ್ಲವೇ ಪ್ರಜ್ಞಾಹೀನವೂ ಅಲ್ಲ. ಅದು ಕಣ್ಣಿನಿಂದ ನೋಡದ ಸಂಬಂಧವಿಲ್ಲದ ಅವೇದ್ಯ, ಅನೂಹ್ಯ ಮತ್ತು ಅಸ್ಪಷ್ಟ. ಅದು ಇಂದ್ರಿಯಗೋಚರವಾದ ವಿಷಯಗಳೆಲ್ಲದರ ಅಂತ್ಯ. ಅದೆಲ್ಲವೂ ಶಾಂತಿ, ಎಲ್ಲವೂ ಪರಮಾನಂದ, ಮತ್ತು ಅದ್ವೈತ. ಇದು ಆತ್ಮ ಮತ್ತು ಇದನ್ನು ಸಾಧಿಸಿಕೊಳ್ಳಬೇಕು.

ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದನು ಆತ್ಮ ಎಂದರೆ ಹದಿನಾರು ಭಾಗಗಳಿರುವ ಪುರುಷ ಎಂದು ವಿವರಿಸುತ್ತಾನೆ. 'ಅವನು ಸುಕೇಶನಿಗೆ ಹೇಳುತ್ತಾನೆ. ಆ ವ್ಯಕ್ತಿ ಅಥವಾ ಯಾರಿಂದ ಈ

ಹದಿನಾರು ಭಾಗಗಳು ಉಗಮವಾಗುವುದೋ ಅವು ನಿಜವಾಗಿಯೂ ಇಲ್ಲಿ ದೇಹದೊಳಗೇ ಇದೆ. ಅವನು ಪ್ರಾಣವನ್ನು ಸೃಷ್ಟಿಸಿದ, ಪ್ರಾಣದಿಂದ ನಂಬಿಕೆ, ಆಕಾಶ, ವಾಯು, ಅಗ್ನಿ, ನೀರು, ಭೂಮಿ, ಅಂಗಾಂಗಗಳು, ಮನಸ್ಸು, ಆಹಾರ, ಆಹಾರದಿಂದ ಕಸುವು, ಕಟುತ್ವ, ವೇದದ ಸ್ತೋತ್ರಗಳು, ತ್ಯಾಗ, ವಿಶ್ವಗಳು; ಮತ್ತು ವಿಶ್ವಗಳಲ್ಲಿ ಅವನು ಹೆಸರುಗಳನ್ನು ಸೃಷ್ಟಿಸಿದ.

ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರು ಬ್ರಹ್ಮನಂತೆ. ಆತ್ಮವೂ ಸಹಾ ವಿಶ್ವದ ಆಧಾರವೆಂದು ವಿಧಿಸಿದರು. ಅಂತಿಮವಾಗಿ ಈ ಎರಡು ವಿಶ್ವದ ಆಧಾರಗಳಾದ ಬ್ರಹ್ಮ ಮತ್ತು ಆತ್ಮಗಳು ಭಿನ್ನವಲ್ಲ ಮತ್ತು ಬೇರ್ಪಡಿಸಲಾಗುವುದಿಲ್ಲ. ನಿಜವಾಗಿಯೂ ಆ ಶ್ರೇಷ್ಠ ಅಜಾತ ಆತ್ಮವು, ಕೊಳೆಯದ, ಅಮರವಾದ, ಅಮರ್ತ್ಯ, ಭಯವಿಲ್ಲದಿರುವುದೇ ಬ್ರಹ್ಮವೆಂದು ನಾವು ಕಂಡು ನೇರವಾಗಿ ಸತ್ಯವೆಂದು ಘೋಷಿಸಿದೆ. ಎಳ್ಳುಕಾಳಿನಲ್ಲಿ ಎಣ್ಣೆಯಿರುವಂತೆ, ಹಾಲಿನಲ್ಲಿ ಬೆಣ್ಣೆ, ನದೀಪಾತ್ರದಲ್ಲಿ ನೀರು, ಮತ್ತು ಮರದಲ್ಲಿ ಬೆಂಕಿಯಿರುವಂತೆ ಆತ್ಮದೊಳಗೆ ಆತ್ಮನಿರುವಂತೆ ಅರಿಯಲಾಯಿತು. ಯಾವಾಗ ಮಾನವನು ಉದ್ದೇಶಪೂರ್ವಕವಾಗಿ ಸತ್ಯಸ್ಥಿತಿ ಮತ್ತು ವಿರಕ್ತಿಯನ್ನು ಕಾಣುವನೋ ಅದೇ ಬ್ರಹ್ಮ..... ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರು ವಿಶ್ವದ ಆಧಾರವಾದ ಆತ್ಮ ಮತ್ತು ಬ್ರಹ್ಮವು ಅಭಿನ್ನವಾದುದು ಹಾಗೂ ಪರಿಪೂರ್ಣವಾದುದೆಂದು ಭಾವಿಸುತ್ತಾರೆ. ಸ್ವಪ್ರಜ್ಞೆಯುಳ್ಳ ಆತ್ಮ ಮತ್ತು ಬ್ರಹ್ಮವು ಆತ್ಮನ ಸ್ವಪ್ರಜ್ಞೆಯಿಂದ ಅಭಿನ್ನವಾದುದು. ಓರ್ವ ತತ್ತ್ವಶಾಸ್ತ್ರಜ್ಞರುಹೇಳುವಂತೆ "ಇಲ್ಲಿನ ಸುಸ್ಪಷ್ಟವಾದ ಮೂಲತತ್ತ್ವಶಾಸ್ತ್ರದ ವಾದವೆಂದರೆ ಅಂತಿಮ ಇರುವಿಕೆಯಿಂದ ಸ್ವಪ್ರಜ್ಞೆಯಲ್ಲಿ ತಾದಾತ್ಮ್ಯಗೊಳಿಸುವುದು. ಹೀಗೆ ಸತ್ಯತೆಯ ಸಮಸ್ಯೆಯು ಭಿನ್ನ ಸೂಚನೆಗಳನ್ನು ಅಂದರೆ ವಿಶ್ವವಿಜ್ಞಾನ, ಮತಧರ್ಮ ಶಾಸ್ತ್ರ ಮತ್ತು ಮನಃಶಾಸ್ತ್ರೀಯವಾಗಿ ಪರಿಶೀಲಿಸಿದಾಗ ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರು ಸ್ವಪ್ರಜ್ಞೆಯ ದೃಢವಾದ ಸುರಕ್ಷಿತ ಸ್ಥಾನದ ಮೇಲೆ ಸತ್ಯವನ್ನು ಸ್ಥಾಪಿಸಲು ಯತ್ನಿಸುತ್ತಾರೆ. ಅವರಿಗದು ನಿಜವಾಗಿಯೂ ಶಾಶ್ವತವಾದುದು. ಅವನು ಸ್ವಪ್ರಜ್ಞೆಯಲ್ಲಿ ಅಭಿನ್ನವಾದ ಹೊರತು ದೇವರು ಅವರಿಗೆ ದೇವರಲ್ಲ. ಅದಕ್ಕೆ ಸ್ವಪ್ರಜ್ಞೆಯ ಉದ್ದೇಶವಿರದಿದ್ದಲ್ಲಿ ಅಸ್ತಿತ್ವವು ಅಸ್ತಿತ್ವವೇ ಅಲ್ಲ. ಶುದ್ಧಸ್ವಪ್ರಜ್ಞೆಯ ನಿರಂತರ ವಿಧಾನದ ಗುರುತುಗಳನ್ನು ಸರಿಯಾಗಿ ವ್ಯಕ್ತಪಡಿಸದಿದ್ದಲ್ಲಿ ಸತ್ಯತೆಯು ಸತ್ಯತೆಯೇ ಅಲ್ಲ. ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರಿಗೆ ಹೀಗೆ ಸ್ವಪ್ರಜ್ಞೆಯ ಅಂತಿಮ ಮೂಲತತ್ತ್ವದ ಅಸ್ತಿತ್ವವನ್ನು ನಿಯಮಿಸುತ್ತದೆ.

ಈ ಅಂತಿಮ ಸತ್ಯ ಅಥವಾ ಆತ್ಮವನ್ನು ಪುರುಷ ಎಂದು ವರ್ಣಿಸಲಾಗಿದೆ. ಆತ್ಮನು ಪುರುಷನೊಬ್ಬನನ್ನು ಸೃಷ್ಟಿಸಿ, ಅವನನ್ನು ನೀರಿನೊಳಗಿನಿಂದ ಎಳೆದು ಅವನ ಸಂತಾನವನ್ನು ಸೃಷ್ಟಿಸಲಾಯಿತು. ಪುರುಷನ ಬಾಯಿಯಿಂದ ಅಗ್ನಿ, ಅವನ ಮೂಗಿನ ಹೊಳ್ಳೆಯಿಂದ ವಾಯು, ಅವನ ಕಣ್ಣುಗಳಿಂದ ಸೂರ್ಯ, ಅವನ ಕಿವಿಗಳಿಂದ ಸ್ವರ್ಗನಿವಾಸ, ಅವನ ಚರ್ಮದಿಂದ ಗಿಡಮರಗಳು, ಅವನ ಹೃದಯದಿಂದ ಚಂದ್ರ, ಅವನ ನಾಭಿಯಿಂದ ಸಾವು, ಮತ್ತು ಅವನ ಶಿಶ್ನದಿಂದ ನೀರು ಉಂಟಾಯಿತೆಂದು ನಮಗೆ ತಿಳಿಸಲಾಯಿತು. ಮಾನವನನ್ನು ಸೃಷ್ಟಿಸುವಲ್ಲಿ ದೇವರು ಬಾಹ್ಯ ಪ್ರಪಂಚದಲ್ಲಿನ ವಿವಿಧ ಮೂಲವಸ್ತುಗಳು ಮಾನವನೊಳಗೆ ಪ್ರವೇಶಿಸುವಂತೆ ಆಜ್ಞಾಪಿಸಿದನು. ಅಗ್ನಿಯು ವಾಕ್ ಶಕ್ತಿಯಾಗಿ ಬಾಯಿಯನ್ನು ಪ್ರವೇಶಿಸಿತು. ವಾಯುವು ಉಸಿರಾಗಿ ಮೂಗಿನ ಹೊಳ್ಳೆಗಳನ್ನು ಪ್ರವೇಶಿಸಿತು. ಸೂರ್ಯನು ಸೃಷ್ಟಿಯಾಗಿ ನೇತ್ರವನ್ನು ಪ್ರವೇಶಿಸಿತು. ಸ್ವರ್ಗನಿವಾಸಗಳು ಶ್ರವಣವಾಗಿ ಕಿವಿಗಳನ್ನು ಪ್ರವೇಶಿಸಿತು. ಗಿಡಮರಗಳು ರೋಮಗಳಾಗಿ ಚರ್ಮ-

ವನ್ನು ಪ್ರವೇಶಿಸಿತು. ಚಂದ್ರನು ಮನಸ್ಸಾಗಿ ಹೃದಯವನ್ನು ಪ್ರವೇಶಿಸಿದನು. ಸಾವು ಅಪಾನವಾಗಿ ಹೊಕ್ಕುಳನ್ನು ಪ್ರವೇಶಿಸಿತು. ನೀರು ವೀರ್ಯವಾಗಿ ಶಿಶ್ನವನ್ನು ಪ್ರವೇಶಿಸಿತು. ಯಾವ ಆತ್ಮ ಮತ್ತು ಅನಾತ್ಮಗಳೆರಡೂ ಅಯೋಗ್ಯವೋ, ಅವು ಒಂದರಿಂದೊಂದು ಸಂಪೂರ್ಣ ಭಿನ್ನವಾಗಿ ಕಾಣುತ್ತದೆ. ಆದಿಯುಗದ ಪುರುಷನಿಂದ ಹೊಮ್ಮಿದ ಅದೇ ಶಕ್ತಿಯಿಂದ ಅವೆರಡರ ಒಳ ವ್ಯಾಪಿಸಿರುವುದರಿಂದ ಫರಸ್ಪರ ಸಾದೃಶ್ಯವಿರುವುದೆಂದು ಭಾವಿಸಲಾಯಿತು. ಪುರಾತನ ಋಗ್ವೇದದ ವಿಶ್ವದ ಪುರುಷನ ಕಲ್ಪನೆಯಿದ್ದು, ಯಾರ ದೇಹದ ಭಾಗಗಳಿಂದ ವಿಶ್ವದ ಮೂಲ ವಸ್ತುಗಳನ್ನು ಹೊರಡಿಸುವ ಕಲ್ಪನೆಯು ಉಪನಿಷತ್ತುಗಳಲ್ಲಿ ಆಗಾಗ ದೊರಕುತ್ತದೆಂದು ಭಾವಿಸಲಾಗಿದೆ. ಹಾಗೆಯೇ ಅನಂತರದ ಭಾರತೀಯ ಗ್ರಂಥಗಳಲ್ಲಿ ಆತ್ಮನ ಸಿದ್ಧಾಂತವನ್ನು ಸಮೀಕರಿಸಲಾಗಿದೆ. ಪುರುಷನೇ ಅಂತಿಮ ಸತ್ಯ ಅಥವಾ ವಿಶ್ವದ ಅಗ್ರಾಧಿದೇವತೆಯಂತೆ ಕಾಣುತ್ತದೆ. ಹೀಗೆ ವೃದ್ಧಿಹೊಂದಿದುದೇ ಆತ್ಮ. ಇಂತಹ ಪ್ರಾಚೀನ ಆತ್ಮ ಸಿದ್ಧಾಂತಗಳಿಂದ ಹೆಚ್ಚು ಸ್ಪಷ್ಟವಾಗುತ್ತದೆ. ಪುರುಷ ಮತ್ತು ಆತ್ಮದಲ್ಲಿನ ಬೇಧವನ್ನು ಪಾಲಿಸಿ ಕೊಂಡು ಬರಲಿಲ್ಲವೆಂದು ಕಾಣುತ್ತದೆ. ಎರಡು ಸತ್‌ಗಳನ್ನು ಒಂದರೊಡನೊಂದು ಸುಲಭವಾಗಿ ಗುರುತಿಸಬಹುದು. ಹೀಗೆ ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರು ಆತ್ಮನೊಡನೆ ಗುರುತಿಸಿಕೊಂಡ ವಿಶ್ವ ಪುರುಷನನ್ನು ವಿವರಿಸಿದ್ದಾರೆ ಮತ್ತು ಮೊದಲೇ ತಿಳಿಸಿರುವಂತೆ ಆತ್ಮವು ಬ್ರಹ್ಮನಿಂದ ಬೇರೆಯಲ್ಲ.

ಕೈಕೇಯನ ಸೂಚನೆಯಂತೆ ಅವನ ಬಳಿಗೆ ಬಂದ ಆರು ಬ್ರಹ್ಮಗಳು ಪ್ರತಿಯೊಂದೂ ಬ್ರಹ್ಮ-ವೆಂದರೇನೆಂಬ ವಿಭಿನ್ನ ಚರಿತ್ರೆಯಿಂದ ಇದ್ದುವು, ಎಂದರೆ ಅವನು ಸ್ವರ್ಗ, ಸೂರ್ಯ, ವಾಯು, ಆಕಾಶ, ನೀರು ಮತ್ತು ಭೂಮಿ, ಇವೆಲ್ಲವೂ ಬ್ರಹ್ಮವೆಂದು ತೋರಿಸುವುದಷ್ಟೇ ಅಲ್ಲ. ಪ್ರತಿಯೊಂದು ಬ್ರಹ್ಮದ ಲಕ್ಷಣ ನಿರೂಪಣೆಯಾಗಿದ್ದು, ಅದಕ್ಕನುಗುಣವಾಗಿ ಅವನ ವೈಶಿಷ್ಟ್ಯವಾಗಿತ್ತು. ಹೀಗೆ ಸ್ವರ್ಗದಂತೆ, ಅವನೊಬ್ಬ ಸೂರ್ಯನಂತೆ ಪ್ರಕಾಶಮಾನವಾಗಿ ಹೊಳೆಯುವವನು, ವಾಯುವಿನಂತೆ ಬಹುರೂಪಿ-ಯಾದವನು, ಆಕಾಶದಂತೆ ಹಲವಾರು ಹಾದಿಗಳನ್ನು ಹೊಂದಿರುವವನು, ನೀರಿನಂತೆ ವಿಕಸಿಸು-ವವನು, ಸಂಪತ್ತು ಯಾರಾಗಿರುವನೋ ಅವನು ಭೂಮಿಯಂತೆ ಬೆಂಬಲವಾಗಿರುವವನು. ತತ್ತ್ವಜ್ಞಾನಿಯು ಇಲ್ಲಿ ಮತ್ತೆ ಬ್ರಹ್ಮವನ್ನು ನಿಸ್ಸಂಶಯವಾಗಿ ವಿವರಿಸಲು ಪ್ರಯತ್ನಿಸುವನು. ಅವನನ್ನು ಅತ್ಯಂತ ಆಕರ್ಷಕ ಹಾಗೂ ಮಹತ್ತ್ವಪೂರ್ಣವಾದ, ಇಂತಹ ಪ್ರತಿಯೊಂದು ಹಲವಾರು ಮೂಲ ವಸ್ತುಗಳಿಂದ ಗುರುತಿಸಲ್ಪಡುವ ಬ್ರಹ್ಮವೇ ಆತ್ಮ. ಅದು ಒಂದೇ ಆತ್ಮ ಎಂದು ಅರ್ಥೈಸುವುದ-ರಿಂದ ಮುಕ್ತಾಯಗೊಳಿಸುತ್ತಾನೆ.

ನಾರದನ ಪ್ರಗತಿಪರ ಸೂಚನೆಯಿಂದ ಸನತ್ಕುಮಾರನು, ಎಲ್ಲಿ ನಾರದನು ಬ್ರಹ್ಮನ ಕಲ್ಪನೆಯನ್ನು ಕೆಳಭಾಗದಿಂದ ಅತ್ಯುನ್ನತ ಸ್ತರದವರೆಗೆ ಮುಂದುವರೆಸಿದನೋ-ಬ್ರಹ್ಮ ಹೆಸರಾಗಿ, ಮಾತು, ಮನಸ್ಸು, ಕಲ್ಪನೆ, ಆಲೋಚನೆ, ಧ್ಯಾನ, ವಿವೇಚನೆಯುಳ್ಳ ಇತ್ಯಾದಿಯಾಗಿ ಆತ್ಮ ಅತ್ಯುನ್ನತವಾದ ವಿಶಿಷ್ಟವಾದ ಸತ್ಯಸಂಗತಿ, ಪ್ರತಿ ವಿಭಾಗದಲ್ಲಿ ವಿವರಣಾತ್ಮಕವಾದ ಬ್ರಹ್ಮವನ್ನು ಕುರಿತು ಹೇಳುವುದು, ಅತ್ಯಗತ್ಯವಾದ ಹಾಗೂ ಪ್ರಮುಖ ಆಧಾರವೆಂದೂ, ಅದಿನ್ನೂ ಅತ್ಯುನ್ನತ ವರ್ಗದಲ್ಲಿರುವುದರಿಂದ ಅತೀತ-ವಾಗಿರುವುದು, ಹಿಂದಿನ ವರ್ಗಗಳೊಂದಿಗೆ ಸಮಾವೇಶಗೊಳಿಸಿದುದರಿಂದ ಶ್ರೇಷ್ಠತೆಯನ್ನು ನೀಡಿದಂತಾಯಿತು. ಹೀಗೆ ಎಲ್ಲವನ್ನೂ ಒಳಗೊಂಡ ಹಾಗೂ ಅತ್ಯಂತ ಅರ್ಥಪೂರ್ಣವಾದ ಗುಣಗಳಿಗೆ ಸಂಬಂಧಿಸಿದ ಬ್ರಹ್ಮವನ್ನು ವಿವರಿಸಲು ಪ್ರಯತ್ನ ಮಾಡಲಾಯಿತು. ಹೀಗೆ ತತ್ತ್ವಶಾಸ್ತ್ರಜ್ಞರು ಬ್ರಹ್ಮದೃಷ್ಟಿಯಿಂದ ಆಚೆಗೆ ಅನ್ವೇಷಿಸಲು ಹೋದಂತೆ ಕಾಣುತ್ತದೆ. ಎಲ್ಲ ವಸ್ತುಗಳ ಅಂತಿಮ ಆಧಾರ-

ವೆಂದರೆ ಪ್ರಜ್ಞಾ ತತ್ತ್ವ ಮತ್ತು ಸರ್ವಶ್ರೇಷ್ಠತೆ ಹಾಗೂ ಮೌಲ್ಯಸೂಚಕ ಸಂಬಂಧದಲ್ಲಿ ವಿವರಿಸಲಾಗಿದೆ. ಮೇಲೆ ಹೇಳಿದ ಬ್ರಹ್ಮಲಕ್ಷಣದಿಂದಾಚೆಗೆ ಬೇರೇನನ್ನೂ ಹೆಚ್ಚಾಗಿ ಹೇಳಲಾಗದೆಂಬುದು ಸತ್ಯವಾದುದು. ಆದಾಗ್ಯೂ ಬ್ರಹ್ಮವು ಸಂಪೂರ್ಣ ವ್ಯಾಪಿಸಿರುವ ಪ್ರಜಾತತ್ತ್ವವು ಅರ್ಥಪೂರ್ಣವಾದುದು. ಮೌಲ್ಯ ಹೊಂದಿರುವಂತೆ ಭಾವಿಸುವುದು ಅನುಕೂಲವಾಗುತ್ತದೆ. ಬ್ರಹ್ಮವು ಅಖಂಡವಾಗಿದ್ದು ಈ ಎಲ್ಲಾ ವಿವಿಧತೆಗಳನ್ನು ವಿವರಿಸುತ್ತದೆ. ವಿಶ್ವದಲ್ಲಿ ಬ್ರಹ್ಮದೊಂದಿಗೆ ಪ್ರತಿಯೊಂದನ್ನು ನೇರವಾಗಿ ಗುರುತಿಸ ಬಹುದು. ಉಪನಿಷತ್ತಿನ ತತ್ತ್ವಶಾಸ್ತ್ರಜ್ಞರಿಗೆ ಬ್ರಹ್ಮವಿಲ್ಲದೆ ಯಾವುದೂ ಇರದು. ಆದುದರಿಂದ ಅವರು ಘೋಷಿಸಿದರು. "ಅಗೋ ನೋಡು, ಇಲ್ಲಿರುವುದೆಲ್ಲಾ ಬ್ರಹ್ಮ" ನಿಜವಾಗಿಯೂ ಈ ಇಡೀ ವಿಶ್ವವೇ ಬ್ರಹ್ಮ. ಪ್ರಶಾಂತವಾಗಿ ಒಬ್ಬರು ಉಪಾಸನೆ ಮಾಡಿದಾಗ ಅವರು ಮುಂದೆ ಬರುವರು. ಅವನು ಉಸಿರಾಡಿದಂತೆ ಅವನು ಅದರಲ್ಲಿ ಲೀನವಾಗುವನು. ಬ್ರಹ್ಮವೆಂದು ನಿಜವಾಗಿಯೂ ಯಾವುದನ್ನು ಕರೆಯಲಾಗಿದೆಯೋ ಹಾಗೆಯೇ ವ್ಯಕ್ತಿಯ ಹೊರಗಿನ ಆಕಾಶವೂ ನಿಜವಾಗಿದೆ. ವ್ಯಕ್ತಿಯ ಹೊರಗಿನ ಆಕಾಶವು ಹಾಗೆಯೇ ನಿಜವಾಗಿಯೂ ವ್ಯಕ್ತಿಯ ಒಳಗಿನ ಆಕಾಶವೇ ಆಗಿದೆ. ವ್ಯಕ್ತಿಯ ಒಳಗಿನ ಆಕಾಶವು ಹಾಗೆಯೇ ಹೃದಯದೊಳಗಿನ ಆಕಾಶವೇ ಆಗಿದೆ. ನಿಜವಾಗಿಯೂ ಈ ವಿಶ್ವವಿಡೀ ಎಲ್ಲಾ ಆಸೆಗಳನ್ನೂ, ಎಲ್ಲಾ ಸುವಾಸನೆಯನ್ನೂ, ಎಲ್ಲಾ ರುಚಿಗಳನ್ನೂ ಒಳಗೊಂಡಿದ್ದು, ಇಡೀ ವಿಶ್ವವನ್ನು ಆವರಿಸಿದೆ. ಅನಿರ್ವಚನೀಯವಾದ, ನಿಶ್ಚಿಂತವಾದ ನನ್ನೀ ಆತ್ಮವು ಹೃದಯದಲ್ಲಿದೆ, ಇದೇ ಬ್ರಹ್ಮವಾಗಿದೆ.

## ಭಾರತೀಯ ತತ್ತ್ವಶಾಸ್ತ್ರದ ಕೆಲವು ಪದ್ಧತಿಗಳು ಮತ್ತು ಉಪನಿಷತ್ತಿನಲ್ಲಿ ಆತ್ಮದ ಬಗ್ಗೆ ಉಪದೇಶ

ಶಂಕರಾಚಾರ್ಯರ ವೇದಾಂತ ಶಾಖೆಯು ಸಂಪೂರ್ಣವಾಗಿ ಆತ್ಮದ ಬಗೆಗಿನ ಉಪನಿಷತ್ತಿನ ಉಪದೇಶವನ್ನು ಆಧರಿಸಿದೆ. ಶಂಕರರು ಅದ್ವೈತದ ಪರವಾಗಿ ಉಪನಿಷತ್ತಿನ ಪಾಠವನ್ನು ಯಶಸ್ವಿ-ಯಾಗಿ ವಿವರಿಸಿದ್ದಾರೆ. ಶ್ರೀರಾಮಾನುಜಾಚಾರ್ಯರೂ ಸಹಾ ತಾವು ಉಪನಿಷತ್ತಿನ ಬೋಧನೆಗಳ ನಿಜವಾದ ಅನುಯಾಯಿಗಳೆಂದು ಸಮರ್ಥಿಸಿಕೊಂಡಿದ್ದಾರೆ. ಉಪನಿಷತ್ತಿನಲ್ಲಿ ನ್ಯಾಯ ಮತ್ತು ಸಾಂಖ್ಯ ಎಂಬ ಇತರ ತತ್ತ್ವಶಾಸ್ತ್ರಗಳ ಅಂಕುರವನ್ನು ಕಾಣಬಹುದು.

### 1. ನ್ಯಾಯದಲ್ಲಿ ದ್ವೈತ

ನ್ಯಾಯವು ಪರಮಾಣುವಾದದ, ಆತ್ಮವಾದದ ಮತ್ತು ಅನೇಕತ್ವವಾದದ ಪದ್ಧತಿಯಾಗಿದೆ. ಅದು ಭೌತದ್ರವ್ಯ ಮತ್ತು ಆತ್ಮದ ದ್ವೈತವನ್ನು ಅಂಗೀಕರಿಸುತ್ತದೆ. ಆದರೂ ನ್ಯಾಯವು ದೇವರು ಈ ವಿಶ್ವದ ಸೃಷ್ಟಿ, ಸ್ಥಿತಿ, ಲಯಕರ್ತನು. ಆದರೆ ಅವನು ಶಾಶ್ವತವಾದ ಬಾಹ್ಯಸತ್ಯ, ಯಾವಾಗಲೂ ಕರ್ಮಸಿದ್ಧಾಂತದ ಮಾರ್ಗದರ್ಶನದಲ್ಲಿ ಸಮಶಾಶ್ವತ ಪರಮಾಣು ಮತ್ತು ಆತ್ಮಗಳನ್ನು ಮಿತ ಗೊಳಿಸುವನೆಂದು ಪ್ರಸ್ತಾಪಿಸಲಾಗಿದೆ. ನ್ಯಾಯವು ದೇವರು ಈ ವಿಶ್ವದ ಸಮರ್ಥ ಕಾರಣನೆಂದು ಅಂಗೀಕರಿಸುತ್ತದೆ. ನ್ಯಾಯ ತತ್ತ್ವಶಾಸ್ತ್ರದ ಪ್ರಕಾರ ಮೂಲವಸ್ತುವಿನ ಶಾಶ್ವತ ಪರಮಾಣುಗಳು ಈ ವಿಶ್ವದ ಕಾರಣಗಳು. ಹೀಗೆ ನ್ಯಾಯವು ಉಪನಿಷತ್ತಿನ ಮೂಲಬೋಧನೆಯಿಂದ ತತ್ತ್ವಶಾಸ್ತ್ರದ ಸಿದ್ಧಾಂತಗಳೆಡೆಗೆ ಗಮನ ಸೆಳೆಯುತ್ತದೆ. ಉಪನಿಷತ್ತು ನ್ಯಾಯ ಸಿದ್ಧಾಂತದ ತತ್ತ್ವಶಾಸ್ತ್ರದಲ್ಲಿ ಕಂಡುಬಂದಂತೆ ದ್ವೈತದ ಅತ್ಯಂತ ಪರಾಕಾಷ್ಠೆಯ ಬೋಧನೆಯನ್ನು ಮಾಡುವುದಿಲ್ಲ. ನ್ಯಾಯವು

ಆತ್ಮಗಳ ಅನೇಕತೆಯನ್ನು ಒಪ್ಪಿಕೊಳ್ಳುತ್ತದೆ. ಪರಿಮಿತ ಆತ್ಮಗಳನ್ನು ಪರಮಾತ್ಮ, ದೇವರಿಂದ ಸಂಪೂರ್ಣವಾಗಿ ಬೇರ್ಪಡಿಸಲಾಗಿದೆ. ಪರಿಮಿತ ಆತ್ಮಗಳು ಅತ್ಯುನ್ನತವಾದ ಅನಂತದೊಂದಿಗೆ ಗುರುತಿಸಿಕೊಳ್ಳುವುದನ್ನು ಪರಿಗಣಿಸದೆ, ನ್ಯಾಯವು ಪರಮನೊಂದಿಗೆ ಯಾವುದೇ ರೀತಿಯಾದ ಐಕ್ಯತೆಯನ್ನು ಒಪ್ಪುವುದಿಲ್ಲ. ಉಪನಿಷತ್ತಿನಲ್ಲಿ ಈ ರೀತಿಯಾದ ಅದ್ವೈತ ಮತ್ತು ಅನೇಕತ್ವವಾದದ ಪರಾಕಾಷ್ಠೆಯನ್ನು ಕಾಣಲಾಗುವುದಿಲ್ಲ. ಉಪನಿಷತ್ತು ಏಕಮಾತ್ರ ಸತ್ಯವೆಂದರೆ ಅದು ಬ್ರಹ್ಮವೆಂದು ನಮಗೆ ಬೋಧಿಸುತ್ತದೆ. ಪ್ರತಿಯೊಂದೂ ಅಸ್ತಿತ್ವಕ್ಕಾಗಿ ಬ್ರಹ್ಮದ ಮೇಲೆ ಅವಲಂಬಿತವಾಗಿದೆ.

ನ್ಯಾಯದ ಪ್ರಕಾರ ಈಗಾಗಲೇ ಹೇಳಿರುವಂತೆ ದೇವರು ವಿಶ್ವದ ಸೃಷ್ಟಿ, ಸ್ಥಿತಿ, ಲಯಕರ್ತ-ನಾಗಿದ್ದಾನೆ. ಉಪನಿಷತ್ತಿನಲ್ಲಿ ನ್ಯಾಯದ ಸೃಷ್ಟಿಸಿದ್ಧಾಂತದ ಅಂಕುರವನ್ನು ನಾವು ಕಾಣಬಹುದು. ಆದರೂ ಉಪನಿಷತ್ತು ಮತ್ತು ನ್ಯಾಯದ ಸೃಷ್ಟಿ ಸಿದ್ಧಾಂತದ ಮಧ್ಯೆ ಕೆಲವು ವ್ಯತ್ಯಾಸಗಳು ಉಳಿದಿವೆ. ಏಕೆಂದರೆ ನ್ಯಾಯವು ವಿಶ್ವದ ಕಾರಣ ಮೂಲವಸ್ತುವಿನ ಶಾಶ್ವತ ಪರಮಾಣು ಎಂದು ಒಪ್ಪಿದೆ. ಉಪನಿಷತ್ತಿನ ಪ್ರಕಾರ ಪರಮಾತ್ಮನಾದ ಬ್ರಹ್ಮನೇ ಸಮರ್ಥನು. ಹಾಗೆಯೇ ವಿಶ್ವ ಕಾರಣದ ಮೂಲ ವಸ್ತು. "ವೈರಾಗ್ಯವನ್ನು ನಿರ್ವಹಿಸುತ್ತಾ ಅವನು ಅಲ್ಲಿರುವುದೆಲ್ಲವನ್ನೂ ಸೃಷ್ಟಿಸಿದನು..... ಎಲ್ಲವೂ ಸತ್ಯವಾಯಿತು."

## ೨. ಸಾಂಖ್ಯ ಪದ್ಧತಿ

ಸಾಂಖ್ಯದ ಮೂಲ ಮಾದರಿ ಛಾಂದೋಗ್ಯ, ಕಠ ಮತ್ತು ಪ್ರಶ್ನೋಪನಿಷತ್ತಿನಲ್ಲಿ ಕಂಡುಬರುತ್ತದೆ. ಆದರೆ ಶ್ವೇತಾಶ್ವತಾರವು ಸಾಂಖ್ಯ ತತ್ತ್ವಶಾಸ್ತ್ರದ ಸಂಪೂರ್ಣವಾದ ಹಾಗೂ ಅತ್ಯಂತ ವಿವರವಾದ ಮಾಹಿತಿಯನ್ನು ನಮಗೆ ನೀಡುತ್ತದೆ. ಉಪನಿಷತ್ತಿನ ಸಾಂಖ್ಯ ತತ್ತ್ವಶಾಸ್ತ್ರವು ವಿಶೇಷವಾಗಿ ಶ್ವೇತಾಶ್ವತಾರ ಉಪನಿಷತ್ತಿನಲ್ಲಿ ಈಶ್ವರವಾದಿಯಾಗಿದೆ. ಅದು ದೇವರ ಶಿರವು ವಿಶ್ವದ ಸೃಷ್ಟಿತತ್ತ್ವವೆಂದು ಅಂಗೀಕರಿಸುತ್ತದೆ. ಆದರೆ ಸಾಂಖ್ಯ ತತ್ತ್ವಶಾಸ್ತ್ರದ ಅನಂತರದ ಪದ್ಧತಿಯು ದೇವರ ಶಿರವನ್ನು ಅದೇ ಪದ್ಧತಿಗಾಗಿ ಅಂಗೀಕರಿಸುವುದಿಲ್ಲ. ನಾವು ಸಾಂಖ್ಯ ತತ್ತ್ವಶಾಸ್ತ್ರದ ಅಂಕುರವನ್ನು ಕಠೋಪನಿಷತ್ತಿನಲ್ಲಿಯೂ ಸಹಾ ಕಾಣುತ್ತೇವೆ. ಉಪನಿಷತ್ತಿನಲ್ಲಿ ಅದು ಮನಸ್ಸಿನಾಚೆಯ ಬುದ್ಧಿ, ಬುದ್ಧಿ ಆಚೆಗೆ ಮಹಾ ಆತ್ಮ, ಮಹಾ ಆತ್ಮದ ಆಚೆಗೆ ಅವ್ಯಕ್ತ, ಅವ್ಯಕ್ತದಾಚೆಗೆ ಪುರುಷ ಮತ್ತು ಪುರುಷನಾಚೆಗೆ ಏನೂ ಇಲ್ಲವೆಂದು ನಮಗೆ ತಿಳಿಸಲಾಗಿದೆ. ಶ್ವೇತಾಶ್ವತಾರದಲ್ಲಿ ಅಲ್ಲೊಂದು ಅಜಾತ ಪ್ರಕೃತಿ-ಕೆಂಪು, ಬಿಳಿ ಮತ್ತು ಕಪ್ಪು, ತನ್ನಂತಿರುವ ಅನೇಕ ಪ್ರಾಣಿಗಳಿಗೆ ಜನ್ಮವನ್ನು ನೀಡುತ್ತದೆಂದು ಮತ್ತೆ ನಮಗೆ ತಿಳಿಸಲಾಗಿದೆ. ಇವು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಕಂಡುಬರುವ ಸಾಂಖ್ಯ ತತ್ತ್ವಶಾಸ್ತ್ರದ ಮೂಲಮಾದರಿ. ಆದರೆ ಈ ಉಪನಿಷತ್ತುಗಳೂ ಸಹಾ ಸಾಂಖ್ಯದ ನಿರೀಶ್ವರವಾದ ಮತ್ತು ಆತ್ಮದ ಅನೇಕತ್ತ್ವವನ್ನು ಬೆಂಬಲಿಸುವುದಿಲ್ಲ. ಡಾ॥ ರಾಧಾಕೃಷ್ಣನ್ ಅವರು "ಉಪನಿಷತ್ತುಗಳು ಪುರುಷಗಳ ಅನೇಕತ್ವ ಸಿದ್ಧಾಂತವನ್ನು ಬೆಂಬಲಿಸುವುದಿಲ್ಲ..... ಉಪನಿಷತ್ತಿನ ಪ್ರಮುಖ ಬೋಧನೆ ಏಕಾತ್ಮದ ಉಪದೇಶ, ಪರಮಾತ್ಮ. ಅದು ಶ್ರೇಷ್ಠ ಹಾಗೂ ಸರ್ವಾಂತರ್ಯಾಮಿ. ಅದು ವಿಶ್ವದ ಕಾರಣ. ಆದರೆ ಅನಂತರದ ಸಾಂಖ್ಯ ತತ್ತ್ವಶಾಸ್ತ್ರಜ್ಞರು ಏಕಸತ್ಯದ ಬೋಧನೆಯನ್ನು ಪರಿವರ್ತಿಸಿದರು ಮತ್ತು ಅವರ ಪುರುಷದ ಅನೇಕತ್ವದ ಕಲ್ಪನೆಯನ್ನು ಅಭಿವೃದ್ಧಿಪಡಿಸಿದರು. ವಿಶ್ವದ ಕಾರಣತ್ವವನ್ನು ಬ್ರಹ್ಮನಿಂದ ಪ್ರಕೃತಿಗೆ ವರ್ಗಾಯಿಸಲಾಯಿತು. ಸಾಂಖ್ಯ ತತ್ತ್ವಶಾಸ್ತ್ರದ ಪ್ರಕಾರ ಪುರುಷನಿಗೆ ಆದಿಯಿಲ್ಲ ಮತ್ತು ಸಂಪೂರ್ಣವಾಗಿ ನಿಷ್ಕ್ರಿಯವಾದುದು. ಪುರುಷನು ತ್ರಿಗುಣಗಳ ಶೂನ್ಯ. ಅದು ಶಾಶ್ವತ

ತತ್ತ್ವದರ್ಶಿ ಪ್ರಕೃತಿಯ ಪ್ರತ್ಯಕ್ಷ ವಿಷಯದ ಹಿಂದಿನದು ಮತ್ತು ಬದಲಾಗುವಂತಹುದು. ಅದು ಅಂಶವಿಲ್ಲದ ವೈಶಿಷ್ಟ್ಯ, ಸರ್ವವ್ಯಾಪಿ ಮತ್ತು ಅವರ್ಣನೀಯವಾದುದು. ಪುರುಷ ಶುದ್ಧ ಪ್ರಜ್ಞೆ ಉಳ್ಳದ್ದು. ಪುರುಷಗಳ ಅನೇಕತ್ತ್ವದ ಬೋಧನೆಯು ಸಂಧಾನಕ್ಕೆ ಸಿದ್ಧವಿಲ್ಲದ ಸಾಂಖ್ಯಕ್ಕೆ ನಿಷ್ಠವಾಗಿರುತ್ತದೆ. ಏಕತತ್ತ್ವವಾದದ ತತ್ತ್ವಶಾಸ್ತ್ರಜ್ಞರು ವಿಶಿಷ್ಟವಾದ ಆತ್ಮಗಳು ಭ್ರಾಮಕವಾದುವು ಮತ್ತು ವಿಶ್ವಾತ್ಮ ಮಾತ್ರ ಸತ್ಯವೆಂದು ಸಮರ್ಥಿಸುತ್ತಾರೆ. ಸಾಂಖ್ಯವು ಆತ್ಮದ ಏಕತತ್ತ್ವವಾದದ ಸಿದ್ಧಾಂತವನ್ನು ಒಪ್ಪುವುದಿಲ್ಲ. ಸಾಂಖ್ಯವು ಪುರುಷನ ಅನೇಕತ್ತ್ವವನ್ನು ಸಮರ್ಥಿಸಲು ಕೆಲವು ವಾದ ಸರಣಿಗಳನ್ನು ನೀಡುತ್ತಾರೆ.

ಸಾಂಖ್ಯ ಪುರುಷದ ಆತ್ಮದ ಅನೇಕತ್ತ್ವದ ಬೋಧನೆಗೂ ಮತ್ತು ಉಪನಿಷತ್ತಿನಲ್ಲಿನ ಆತ್ಮನ ಬೋಧನೆಗೂ ವ್ಯತ್ಯಾಸವನ್ನು ಗುರುತಿಸುವುದು ನಿರ್ಣಾಯಕ ಅಂಶವಾಗಿದೆ. ಉಪನಿಷತ್ತಿನ ಆತ್ಮದ ಬೋಧನೆಗೆ ಅನುಗುಣವಾಗಿ ವಿಶಿಷ್ಟವಾದ ಆತ್ಮಗಳು ಮಾತ್ರ ಅನಿತ್ಯ ಮತ್ತು ವಿಶ್ವಾತ್ಮದ ರೂಪವು ಸುವ್ಯಕ್ತವಾದುದು. ಪುರುಷ ಸ್ವಭಾವ ಉಪನಿಷತ್ತಿನ ಬ್ರಹ್ಮದಂತೆ ಇದೆ. ಏಕೆಂದರೆ ಪುರುಷನೂ ಸಹಾ ಶುದ್ಧಪ್ರಜ್ಞೆಯವನು, ಎಲ್ಲಾ ಜ್ಞಾನದ ಮೂಲವನ್ನು ಅಂತಿಮವಾಗಿ ತಿಳಿದವನು. ಅವನು ಸ್ವಯಂ ಪ್ರಕಾಶ ಮತ್ತು ಸ್ವಯಂಸಾಧಿತ, ಕಾರಣಶೂನ್ಯ, ಶಾಶ್ವತ ಮತ್ತು ಸರ್ವವ್ಯಾಪಿ. ಪ್ರಕೃತಿಯ ಕಾರಣತ್ವ ಮತ್ತು ಆತ್ಮಗಳ ಅನೇಕತ್ವದ ವರ್ಗಾವಣೆ ಮಾತ್ರ ಉಪನಿಷತ್ತಿನ ಆತ್ಮನ ಉಪದೇಶದಿಂದ ಸಾಂಖ್ಯ ಪದ್ಧತಿಯನ್ನು ಬೇರ್ಪಡಿಸಲಾಗಿದೆ. ಪುರುಷನ ಅನೇಕತ್ವವಾದನನ್ನು ಸಮರ್ಥಿಸಲು ನೀಡಿರುವ ಮೂರು ವಾದ ಸರಣಿಗಳು ವಾಸ್ತವಿಕವಾಗಿ ಪುರುಷನ ಶ್ರೇಷ್ಠತೆ ಮತ್ತು ಶುದ್ಧ ಪ್ರಜ್ಞೆಯನ್ನು ಸ್ಪರ್ಶಿಸುವುದಿಲ್ಲ. ಜನನ, ಮರಣ ಕಾರಣಕ್ಕೆ ಗುರಿಯಾದ ಜೀವಿಗಳ ಅನೇಕತ್ವವನ್ನು ಮಾತ್ರ ಮೂರು ವಾದ ಸರಣಿಗಳು ಸಮರ್ಥಿಸುತ್ತವೆ. ಆದುದರಿಂದ ಈಶ್ವರ ಕೃಷ್ಣರು- ಪುರುಷನು ಸತ್ಯವಾಗಿ ಸ್ಥಾಪಿತನಾಗಲಿಲ್ಲ ಇಲ್ಲವೇ ವಿಮುಕ್ತನಾಗಲಿಲ್ಲ ಇಲ್ಲವೇ ಪುನರ್ಜನ್ಮವೆತ್ತಲಿಲ್ಲ ಎನ್ನುತ್ತಾರೆ.

ಬಂಧನ, ವಿಮುಕ್ತಿ ಮತ್ತು ಪುನರ್ಜನ್ಮವು ಪ್ರಕೃತಿಯ ವಿವಿಧ ರೂಪಗಳಿಗೆ ಸೇರಿದ್ದಾಗಿದೆ. ಜೀವ ಗುಣಾತೀತವಲ್ಲ. ಅದು ಪ್ರಕೃತಿಯ ತ್ರಿಗುಣಗಳಿಗೆ ಸಂಬಂಧಿಸಿದೆ. ಆದುದರಿಂದ ಜೀವತ್ತ್ವವು ಪ್ರಕೃತಿಯ ತ್ರಿಗುಣಗಳಿಂದ ಕೂಡಿರುವ ಮೊತ್ತವೆಂದು ಹೇಳಬಹುದು. ಆದುದರಿಂದ ಜೀವಗಳು ಅಥವಾ ಪ್ರಕೃತಿಯು ಜನನ ಮತ್ತು ಮರಣವನ್ನು ಅನುಭವಿಸುತ್ತದೆಯೇ ಹೊರತು ಶುದ್ಧಪ್ರಜ್ಞೆಯ ಪುರುಷನಲ್ಲ. ಸಾಂಖ್ಯ ತತ್ತ್ವಶಾಸ್ತ್ರಜ್ಞರು ಶುದ್ಧ ವಿಷಯಾತೀತ ಪುರುಷ ಮತ್ತು ಜೀವದ ನಡುವೆ ಸಂದೇಹವನ್ನು ಸೃಷ್ಟಿಸಿರುವುದು ಈಗ ಸ್ಪಷ್ಟವಾಗಿದೆ. ಪುರುಷನ ಅನೇಕತ್ವವನ್ನು ಸಮರ್ಥಿಸಲು ನೀಡಿದ ಮೂರು ವಾದ ಸರಣಿಗಳು ಪ್ರಯೋಗ ವಾದದ ಅಹಂ ಆಗಿದೆ. ವಾಸ್ತವವಾಗಿ ಈ ಮೂರು ವಾದ ಸರಣಿಗಳನ್ನು ಜೀವಗಳ ಅನೇಕತ್ವವನ್ನು ಸಮರ್ಥಿಸಲು ನೀಡಬೇಕಾದುದು. ಡಾ॥ ಸಿ.ಡಿ. ಶರ್ಮ ಅವರು ತಮ್ಮ ಗ್ರಂಥದಲ್ಲಿ "ಸಾಂಖ್ಯವು ಆದ್ಯಂತವಾಗಿ ಜೀವ ಮತ್ತು ಶ್ರೇಷ್ಠ ವಿಷಯವಾದ ಪುರುಷನ ಮಧ್ಯೆ, ಪ್ರಯೋಗವಾದದ ಅಹಂ, ಪ್ರತಿಬಿಂಬದ ಮೊತ್ತವಾದ ಪುರುಷನಲ್ಲಿನ ಬುದ್ಧಿ ಅಥವಾ ಮಹತ್ ನಡುವೆ ಸಂದೇಹವನ್ನು ಉಂಟುಮಾಡಿದೆ. ಆಚಾರ್ಯ ಶಂಕರರು ಮುಗ್ಧ ಪ್ರಕೃತಿಯು ಸತ್ ಜ್ಞಾನವಿಲ್ಲದೆ ವಿಶ್ವಕಾರಣವು ಸಮರ್ಥವಾಗುವುದಿಲ್ಲ. ಸಾಂಖ್ಯ ತತ್ತ್ವಶಾಸ್ತ್ರಜ್ಞರು ಸಮರ್ಥಕಾರಣವೆಂದು ಕರೆಯಲ್ಪಡುವ ಯಾವುದೇ ತತ್ತ್ವಪ್ರಜ್ಞೆಯ ಸಹಾಯವಿಲ್ಲದೆ ವಿಶ್ವವು ಮುಗ್ಧ ಪ್ರಕೃತಿಯಿಂದ ಬಂದಿತೆಂಬ ವಾದವನ್ನು ಹಿಡಿದಿರಲು, ಪುರುಷನನ್ನು ಶುದ್ಧ ಪ್ರಜ್ಞೆ ಎಂದು

ಅಂಗೀಕರಿಸಿದರೆ ಅದು ಅಪ್ರಯೋಜಕವಾಗುತ್ತದೆ. ಮತ್ತು ಹಾಗಾದಲ್ಲಿ ಸಾಂಖ್ಯ ತತ್ತ್ವಶಾಸ್ತ್ರಜ್ಞರು ಪಾಶ್ಚಾತ್ಯ ಚಿಂತಕರು ನೀಡುವ, ಸೃಷ್ಟಿಗೆ ಯಾವುದೇ ಪ್ರಜ್ಞೆ, ಕರ್ತೃವನ್ನು ಅಂಗೀಕರಿಸದೆ ಯಾಂತ್ರಿಕವಾದದ ವಿಕಸನ ವಿವರಣೆಯನ್ನು ಮಂಡಿಸುವವರೊಂದಿಗೆ ಹಸ್ತಲಾಘವವನ್ನು ನೀಡುತ್ತಾರೆ.

### 3. ವಿಶಿಷ್ಟಾದ್ವೈತವಾದ

ಆಚಾರ್ಯ ರಾಮಾನುಜರ ತತ್ತ್ವಶಾಸ್ತ್ರವನ್ನು ಗುಣಾತ್ಮಕ ಅದ್ವೈತವೆಂದು ಕರೆಯಲಾಗಿದೆ. ಅವರು ತಾವು ಉಪನಿಷತ್ತಿನ ಆತ್ಮಬೋಧನೆಯ ನಿಜ ವ್ಯಾಖ್ಯಾನಕಾರರೆಂದು ಸಮರ್ಥಿಸಿಕೊಳ್ಳುತ್ತಾರೆ. ರಾಮಾನುಜರ ಪ್ರಕಾರ ಪರಿಪೂರ್ಣ ಸುಸಂಘಟಿತ ಏಕತೆಯನ್ನು ವಿವಿಧತೆಯಿಂದ ನಿರೂಪಿಸಲಾಗಿದೆ. ರಾಮಾನುಜರು ಅಂಗೀಕರಿಸುವ ಮೂರು ತತ್ತ್ವಗಳು ಅಂತಿಮ ಸತ್ಯವಾಗಿದೆ. ಅವು ಭೌತವಸ್ತು, ಆತ್ಮಗಳು ಮತ್ತು ದೇವರು. ಭೌತವಸ್ತು ಮತ್ತು ಆತ್ಮಗಳು ವಾಸ್ತವವಾಗಿ ದೇವರ ಮೇಲೆ ಅವಲಂಬಿತ-ವಾಗಿವೆ. ಅಲ್ಲಿ ವಸ್ತುಗಳು ಅವುಗಳಲ್ಲಿಯೇ ಇವೆ. ಆದರೆ ಅವುಗಳು ದೇವರ ಮೇಲೆ ಅವಲಂಬಿತ-ವಾಗಿರುವುದರಿಂದ ಅವು ಅವನ ವೈಶಿಷ್ಟ್ಯವಾಗಿವೆ. ದೇವರನ್ನು ಭೌತವಸ್ತು ಮತ್ತು ಆತ್ಮಗಳಿಂದ ನಿರೂಪಿಸಲಾಗಿದೆ. ರಾಮಾನುಜರು ತಮ್ಮ ವಿಶಿಷ್ಟಾದ್ವೈತವಾದಕ್ಕೆ ಶ್ವೇತಾಶ್ವತಾರ ಉಪನಿಷತ್ತಿನಲ್ಲಿ ಸಮರ್ಥನೆಯನ್ನು ಕಾಣುತ್ತಾರೆ, ಅವು ಮೂರು ಅಂತಿಮ ಅಸ್ತಿತ್ತ್ವಗಳನ್ನು ತಿಳಿಸುತ್ತಾ-ಪರಮಾತ್ಮನು ಶಾಶ್ವತನು, ಸರ್ವಜ್ಞನು, ಅವಿನಾಶಿ ಮತ್ತು ಎಲ್ಲವನ್ನೂ ಬಲ್ಲ ದೇವರು. ಶಾಶ್ವತ ಜೀವದ ಸೀಮಿತ ಜ್ಞಾನ, ಶಕ್ತಿ ಮತ್ತು ಅಜನ್ಯ ಪ್ರಕೃತಿಯಾಗಿದ್ದು ಮೂರು ತತ್ವಗಳಿವೆ: ಸುಖಿಸುವವನು (ಜೀವ), ಭೌತಿಕ ವಸ್ತುವಿನ ಸುಖಾನುಭವ ಮತ್ತು ಆಳುವವನು (ಈಶ್ವರ). ಬ್ರಹ್ಮವನ್ನು ಅರಿತವರಿಂದ ಈ ಮೂರನ್ನು ವಿವರಿಸಲಾಗಿದೆ.

ರಾಮಾನುಜರ ಪ್ರಕಾರ ದೇವರು ಆತ್ಮಗಳ ಆತ್ಮ. ದೇವರೂ ಸಹಾ ಪ್ರಕೃತಿಯ ಆತ್ಮ. ಬೃಹದಾರಣ್ಯಕವು ದೇವರು ವಿಶ್ವದ ಅಂತರ್ಯಾಮಿ ಎಂದು ನಮಗೆ ತಿಳಿಸುತ್ತದೆ: ಅವನು ನೀರಿನಲ್ಲಿ ನೆಲೆಸಿರುತ್ತಾನಾದರೂ, ನೀರಿಗೇ ತಿಳಿದಿರುವುದಿಲ್ಲ..... ತನ್ನಲ್ಲಿಯೇ ಯಾರು ನೀರನ್ನು ನಿಯಂತ್ರಿಸುತ್ತಾರೋ ಅವನು ನೀನೇ, ಆತ್ಮ ನಿಯಂತ್ರಕ, ಅಮರ. ಯಾರು ತನ್ನಲ್ಲಿಯೇ ಅಗ್ನಿಯನ್ನು ನಿಯಂತ್ರಿಸುತ್ತಾರೋ.... ಯಾರು ತನ್ನಲ್ಲಿಯೇ ಆಕಾಶವನ್ನು ನಿಯಂತ್ರಿಸುತ್ತಾರೋ..... ಯಾರು ತನ್ನಲ್ಲಿಯೇ ವಾಯುವನ್ನು ನಿಯಂತ್ರಿಸುತ್ತಾರೋ..... ಯಾರು ತನ್ನಲ್ಲಿಯೇ ಸ್ವರ್ಗವನ್ನು ನಿಯಂತ್ರಿಸುತ್ತಾರೋ...... ಯಾರು ತನ್ನಲ್ಲಿಯೇ ಸೂರ್ಯನನ್ನು ನಿಯಂತ್ರಿಸುತ್ತಾರೋ..... ಯಾರು ತನ್ನಲ್ಲಿಯೇ ಎಲ್ಲಾ ಜೀವಿಗಳನ್ನು ನಿಯಂತ್ರಿಸುತ್ತಾರೋ..... ಆತ್ಮ ನಿಯಂತ್ರಕ.... ಅಮರ....

ಈ ಅಂತರ್ಯಾಮಿಯ ಬೋಧನೆಯು ರಾಮಾನುಜರು ತಮ್ಮ ತತ್ತ್ವಶಾಸ್ತ್ರದಲ್ಲಿ ದೇವರು ಪ್ರಕೃತಿಯ ಆತ್ಮ ಎಂದು ಯಾವಾಗ ಕರೆದರೋ, ಆಗ ಅಲ್ಲಿ ಮೂಲಸ್ಥಾನ ಸ್ಥಾಪಿತವಾಯಿತು. ರಾಮಾನುಜರ ತತ್ತ್ವಶಾಸ್ತ್ರದಲ್ಲಿ ದೇವರನ್ನು ಪರಿಪೂರ್ಣನೆಂದು ಗುರುತಿಸಲಾಗಿದೆ. ದೇವರು ಬ್ರಹ್ಮ ಮತ್ತು ಬ್ರಹ್ಮನ ಅರ್ಹ ಐಕ್ಯತೆ. ದೇವರನ್ನು ಕಾರಣ ಬ್ರಹ್ಮ ಮತ್ತು ಕಾರ್ಯಬ್ರಹ್ಮ ಎಂದು ಎರಡು ಹಂತಗಳ ಮೂಲಕ ನೋಡಬಹುದು. ಬ್ರಹ್ಮವು ವಿಶ್ವದ ಅತ್ಯುನ್ನತ ಕಾರಣ. ಆದುದರಿಂದ ವಿಶ್ವವು ಸಂಪೂರ್ಣವಾಗಿ ಬ್ರಹ್ಮನ ಮೇಲೆ ಅವಲಂಬಿತವಾಗಿದೆ. ಪರಿಮಿತ ಆತ್ಮವು ಸತ್ಯವಾದರೂ, ಇನ್ನೂ ಸ್ವತಂತ್ರವಾಗಿಲ್ಲ. ಅದು ದೇವರ ಮೇಲೆ ಅವಲಂಬಿತವಾಗಿದೆ. ಭೌತವಸ್ತು ಮತ್ತು ಆತ್ಮ ಎರಡೂ ದೇವರ ವೈಶಿಷ್ಟ್ಯಗಳಾಗಿವೆ.

ರಾಮಾನುಜರು ಅದ್ವೈತ ದೃಷ್ಟಿಯ ಅಂತಿಮ ಸತ್ಯದ ಸ್ವಭಾವವನ್ನು ಎಚ್ಚರಿಕೆಯಿಂದ ವಿಮರ್ಶಿಸುತ್ತಾರೆ. ಅವರು ಅದ್ವೈತ ದೃಷ್ಟಿಯ ಬ್ರಹ್ಮ ಅಥವಾ ಅದ್ವೈತದಲ್ಲಿನ ಅಂತಿಮ ಸತ್ಯತೆ ಅಥವಾ ಜೊತೆಯಿಲ್ಲದ ಏಕತೆ, ಭೇದವೆಲ್ಲವನ್ನೂ ಬಹಿಷ್ಕರಿಸುವಂತಹ ಶುದ್ಧತೆ ಎಂದು ವಿಮರ್ಶಿಸುತ್ತಾರೆ. ಅವರ ವಾದವೆಂದರೆ ಅಂತಹ ಶುದ್ಧ ಅಭೇದ ಜೀವಿಯನ್ನು ಅನುಭವ ಜನ್ಯ ಜ್ಞಾನದ ಮೊರೆಯಿಂದ ಸ್ಥಾಪಿಸಲಾಗುವುದಿಲ್ಲ. ರಾಮಾನುಜರ ಪ್ರಕಾರ ಬ್ರಹ್ಮನು ಸವಿಶೇಷ. ಬ್ರಹ್ಮನನ್ನು ಶುದ್ಧ ಅಭೇದ ಪ್ರಜ್ಞೆ ಎಂದು ಭಾವಿಸಲಾಗುವುದಿಲ್ಲ. ಬ್ರಹ್ಮನನ್ನು ಆತ್ಮ ಅಥವಾ ಅತ್ಯುತ್ತಮ ವೈಶಿಷ್ಟದಿಂದಿರುವವನೆಂದು ಭಾವಿಸಬೇಕು. ಅದ್ವೈತವು ವ್ಯಾಖ್ಯಾನಿಸುವುದೆಂದರೆ ಜೊತೆಯಿಲ್ಲದ ಏಕತೆ, ಬ್ರಹ್ಮನು ಭೇದರಹಿತ ಶುದ್ಧ ಐಕ್ಯತೆ ಎಂದು ಅರ್ಥೈಸಲಾಗಿದೆ. ಆದರೆ ರಾಮಾನುಜರು, ಇದು ನಿಜವಾದರೆ ಇತರ ಉದ್ಧೃತಗಳಲ್ಲಿ ಸೂಚಿಸಿರುವ "ಬ್ರಹ್ಮನ ಶಾಶ್ವತತೆ ಮತ್ತಿತರ ವೈಶಿಷ್ಟ್ಯಗಳೇನು? ಎಂದು ಪ್ರಶ್ನಿಸುತ್ತಾರೆ. ಈ ಉದ್ಧೃತಗಳನ್ನು ಪರಿಗಣಿಸಿದಾಗ, ಮೂಲಪಾಠದಲ್ಲಿ ಬ್ರಹ್ಮನು 'ಜೊತೆಯಿಲ್ಲದ ಏಕಮಾತ್ರನೆಂದು' ಬೋಧನೆಯಲ್ಲಿ ಕಾಣುವಾಗ, ಬ್ರಹ್ಮನು ಗುಣರಹಿತನಲ್ಲ. ಆದರೆ ಅವನು ಬೇರೆಲ್ಲದರಂತೆ ಏಕಮಾತ್ರ. 'ಜೊತೆಯಿಲ್ಲದ' ಎಂಬ ಪದಗುಚ್ಛವು ನಿಜವಾಗಿಯೂ ಬ್ರಹ್ಮನು ವಿವಿಧ ಶಕ್ತಿಗಳನ್ನು ಹೊಂದಿರುವನೆಂಬುದನ್ನು ಸೂಚಿಸುವ ಗುರಿ ಹೊಂದಿದೆ ಮತ್ತು ಬ್ರಹ್ಮನಿಂದ ಬೇರೊಂದು ಆಚಾರ ಸಂಹಿತೆಯ ಭಿನ್ನ ತತ್ವವು ಅಸ್ತಿತ್ವದಲ್ಲಿರುವುದನ್ನು ನಿರಾಕರಿಸುತ್ತದೆ. ಈ ಅಂಶವು "ಪರಮಪದದ ಆರಂಭದಲ್ಲಿ ಮಾತ್ರವಿದ್ದು, ಏಕಮಾತ್ರವಾಗಿದೆ" ಎಂದು ಬೋಧಿಸುತ್ತಾ, ಬ್ರಹ್ಮನು ವಿಶ್ವಕಾರಣ ಅಸ್ತಿತ್ವವುಳ್ಳ ಸೃಷ್ಟಿಯನ್ನು ನಿಯೋಜಿಸುತ್ತಾನೆ ಎನ್ನುತ್ತಾರೆ. ಇಲ್ಲಿ ಮತ್ತಿತರ ಪರಿಣಾಮ-ಕಾರಿಯಾದ ಕಾರಣದಿಂದ ಮನಸ್ಸು ತನ್ನನ್ನು ಸ್ವಾಭಾವಿಕವಾಗಿ ಪರಿಚಯಿಸಿಕೊಳ್ಳುವುದರ ಫಲವಾಗಿ ಉನ್ನತಿಯನ್ನು ನೀಡಲು ಸಮರ್ಥವಾಗಿದೆ ಮತ್ತು ಈ ಕಾರಣದಿಂದ ನಾವು 'ಜೊತೆಯಿಲ್ಲ'ವೆಂಬ ಅಧಿಕಾಂಶವು, ಅಂತಹ ಅಧಿಕ ಕಾರಣವನ್ನು ನಿರಾಕರಿಸುವ ಉದ್ದೇಶವಿರಬಹುದೆಂದು ತಿಳಿಯ ಬಹುದು. ರಾಮಾನುಜರ ಉದ್ಧೃತಗಳು ತಿಳಿಯಪಡಿಸುವದೇನೆಂದರೆ ಬ್ರಹ್ಮನು ಗುಣರಹಿತನು. ಪ್ರಕೃತಿಯ ಮೇಲೆ ಅವಲಂಬಿತವಾಗಿರುವ ಕೆಟ್ಟ ಗುಣಗಳನ್ನು ನಿರಾಕರಿಸುವ-ಉದ್ದೇಶವಿರುವುದೆಂದೂ, ಮತ್ತು ಎಲ್ಲವೂ ಅಂತಹ ಗುಣಗಳಲ್ಲವೆಂದು ಹೇಳುತ್ತಾರೆ. ರಾಮಾನುಜರು ಬ್ರಹ್ಮನಿಗೆ ಅನೇಕ ಅತ್ಯುತ್ತಮ ಗುಣಗಳಿವೆ. ಎಲ್ಲಾ ಕೆಟ್ಟ ಗುಣಗಳು ಶೂನ್ಯವಾಗಿವೆ ಎಂದು ಬೋಧಿಸುವುದು ಪವಿತ್ರ ಗ್ರಂಥಗಳ ಉದ್ದೇಶವೆನ್ನುತ್ತಾರೆ. ಅಷ್ಟೇ ಅಲ್ಲದೆ ಬ್ರಹ್ಮನ ಆನಂದವು ಅವನ ಅತ್ಯುತ್ತಮ ಗುಣಗಳನ್ನು ಸೂಚಿಸುತ್ತವೆಂದು ಹೇಳುತ್ತಾ, ವಿವಿಧ ವಿಶ್ವಗಳಲ್ಲಿ ಆತ್ಮಗಳು ಅನುಭವಿಸಿದ ಆನಂದಕ್ಕೆ ಸಂಬಂಧಿಸಿ-ದಂತೆ, ಮಹದಾನಂದವನ್ನು ಬ್ರಹ್ಮಾನಂದವೆಂದು ಹೇಳಲಾಗಿದೆ ಎಂದು ತಿಳಿಸುತ್ತಾರೆ.

ರಾಮಾನುಜರ ದೃಷ್ಟಿಯಲ್ಲಿ ಪವಿತ್ರಗ್ರಂಥಗಳ ಬೋಧನೆಯಂತೆ ಬ್ರಹ್ಮವು ಗುಣಶೂನ್ಯ ವಸ್ತು, ಅಲ್ಲದೆ ವೈಶಿಷ್ಟ್ಯಗಳ ಶೂನ್ಯತೆಯಾದರೂ, ಅವನು ಪರಮಾತ್ಮ, ಜ್ಞಾನದ ಅಸ್ತಿತ್ವದ ವೈಶಿಷ್ಟ್ಯವನ್ನು 'ಆನಂದ'ದಿಂದ ನಿರೂಪಿಸಲಾಗಿದೆ. ಆದರೆ ಎಲ್ಲ ಕೆಟ್ಟ ಗುಣಗಳನ್ನು ನಿರಾಕರಿಸಿ, ಅಪರಿಮಿತವಾದ ಮಂಗಳಕರ ಗುಣಗಳನ್ನು ಯಾರು ಹೊಂದಿರುವರೋ, ಅಂತಹ ಸದೃಶವಾದ ಅಥವಾ ಉನ್ನತವಾದ ಗುಣಗಳು ಬೇರಾರಿಗೂ ಇಲ್ಲವೆಂಬುದು ಕಂಡುಬರುತ್ತದೆ.

ವಿಶ್ವಕ್ಕೆ ಬ್ರಹ್ಮನ ಸಂಬಂಧವನ್ನು ಕುರಿತಂತೆ, ರಾಮಾನುಜರು ಬ್ರಹ್ಮನಿಗೆ ಹಾಗೂ ವಿಶ್ವಕ್ಕೆ ಸಂಬಂಧಿಸಿದಂತಹ ಉದ್ಧರಿಸಿದ ಪಠ್ಯದಲ್ಲಿ ವಿಶ್ವದ ಸತ್ಯತೆ ಅಥವಾ ಬ್ರಹ್ಮನ ಸ್ವಭಾವದ ವೈಲಕ್ಷಣ್ಯವಾದ

ಎರಡನ್ನೂ ತ್ಯಜಿಸದೆ ಅನ್ವೇಷಿಸುತ್ತಾರೆ. ರಾಮಾನುಜರ ಬೋಧನೆಗಳು ಬ್ರಹ್ಮನ ವಿಶ್ವ ಸಂಬಂಧವನ್ನು ಭಾವಿಸುವ ಅಧಿಕೃತ ಕೃತಿಗಳಿಂದ ರುಜುವಾತುಪಡಿಸುತ್ತವೆ. ಇದು ವಿಶ್ವವು ಭೌತವಸ್ತುವಿನಿಂದ ಕೂಡಿದೆ ಮತ್ತು ಆತ್ಮಗಳು ಬ್ರಹ್ಮನ ದೇಹವಾಗಿದೆ. ಅವನು ಅದರಿಂದ ಮತ್ತು ಅದರ ಆತ್ಮದಿಂದ ಭಿನ್ನನಾದವನು.

ರಾಮಾನುಜರು ಬ್ರಹ್ಮ ಪರಿಣಾಮವಾದದಲ್ಲಿ ನಂಬಿಕೆಯಿರುವವರು. ಈ ಸಿದ್ಧಾಂತದ ಪ್ರಕಾರ ಸಮಸ್ತ ವಿಶ್ವವು ಬ್ರಹ್ಮನ ನಿಜವಾದ ಪರಿವರ್ತನೆ. ರಾಮಾನುಜರು ಅವಶ್ಯಕವಾದ ಆತ್ಮಸ್ವಭಾವವು ತಿಳಿಯುವಂತಹ ವಿಷಯವೆನ್ನುತ್ತಾರೆ. ಕೆಲವು ಸಂದರ್ಭಗಳಲ್ಲಿ ಅವರು ಆತ್ಮವು ಬ್ರಹ್ಮನ ಭಾಗ-ವೆನ್ನುತ್ತಾರೆ. ರಾಮಾನುಜರು ಅದನ್ನು ಮೀರಿ ಯಾವುದೂ ಇಲ್ಲವೆಂಬುದನ್ನು ತೋರಿಸಿ ಸ್ಪಷ್ಟ ಪಡಿಸುತ್ತಾರೆ. ಆತ್ಮಗಳು ಬ್ರಹ್ಮನ ಚಿಹ್ನೆಗಳು ಅಥವಾ ವಿಧಾನಗಳು. ಬ್ರಹ್ಮ ಮತ್ತು ಆತ್ಮದ ಸಂಬಂಧವು ಅವಿಭಾಜ್ಯವಾದುದು. ರಾಮಾನುಜರು ಯಾವುದೇ ಸಂದರ್ಭದಲ್ಲಿಯೂ ದೇವರೊಂದಿಗಿನ ಆತ್ಮದ ಅಭೇದವನ್ನು ಒಪ್ಪುವುದಿಲ್ಲ. ವಿಮೋಚನೆಯ ಹಂತದಲ್ಲಿಯೂ ಆತ್ಮಗಳನ್ನು ದೇವರೊಂದಿಗೆ ಗುರುತಿಸುವುದಿಲ್ಲ.

ರಾಮಾನುಜರು ಯಾವಾಗ ಏಕತತ್ತ್ವವಾದದ ಬೋಧನೆಯ ಅರ್ಹತೆಯನ್ನು ಪಡೆದರು? ಎಂಬುದನ್ನು ಈಗ ಕೇಳಬಹುದು. ಅವರು ಪವಿತ್ರ ಗ್ರಂಥಗಳು ಅದನ್ನು ಬೋಧಿಸುತ್ತವೆಂದು ಸಮರ್ಥಿಸುತ್ತಾರೆ. ಆದರೆ ನಮ್ಮ ಎಣಿಕೆಯಂತೆ ಉಪನಿಷತ್ತುಗಳಲ್ಲಿ ಅಂತಹ ಸ್ಪಷ್ಟವಾದ ಸೂತ್ರೀಕರಿಸಿದ ಬೋಧನೆಯು ಅವುಗಳಲ್ಲಿ ಕಾಣುವುದಿಲ್ಲವೆಂಬುದನ್ನು ತೋರಿಸುತ್ತವೆ. ಸ್ವತಃ ರಾಮಾನುಜರೇ ವಾಸ್ತವಾಂಶವನ್ನು ಅರಿತಿದ್ದರು. ಮತ್ತೆ ಅವರು ಉಲ್ಲೇಖಿಸುವ ಉಪನಿಷತ್ತಿನ ತಮ್ಮ ಬೋಧನೆಯ ದೃಷ್ಟಿಯಲ್ಲಿರುವ ಬ್ರಹ್ಮನ ಸ್ವಭಾವದ ಉದ್ಧೃತಗಳು ಅತ್ಯಲ್ಪ ಮತ್ತು ಅರ್ಥಸಂದಿಗ್ಧವಾದುದು. ಅವರು ಅವುಗಳಿಂದ ತಮ್ಮ ಬೋಧನೆಯನ್ನು ರುಜುವಾತುಪಡಿಸಲು ಆಗುವುದಿಲ್ಲವೆಂಬುದು ನಮಗೆ ಖಂಡಿತ ತಿಳಿದಿದೆ. ಅಲ್ಲದೆ ಅವರ ಅತ್ಯಂತ ಅಭಿಲಾಷೆಯ ಸಮರ್ಥನೆಗೆ ಅನ್ಯ ಮೂಲಗಳ ಪವಿತ್ರ ಗ್ರಂಥಗಳ ಬೋಧನೆಯನ್ನು ಅವರು ಪಡೆದಿರಬಹುದೆಂದು ವಾಸ್ತವಾಂಶಗಳು ತಿಳಿಸುವಂತೆ ಕಾಣುತ್ತದೆ. ತಮ್ಮ ಬ್ರಹ್ಮಸ್ವಭಾವ ದೃಷ್ಟಿಗೆ ಸಂಬಂಧಿಸಿದಂತೆ, ಸ್ವತಃ ರಾಮಾನುಜರೇ ಮುಂದುವರೆದು ವಿಷ್ಣುಪುರಾಣ ಮತ್ತು ಅವರು ಉಲ್ಲೇಖಿಸುವ ಉಲ್ಲೇಖಗಳು, ಸಂಪೂರ್ಣವಾಗಿ ಅವರ ಸಮರ್ಥನೆಯು ಆದ್ಯಂತವಾಗಿ ಶ್ರೀಭಾಷ್ಯದಿಂದ ಬೋಧಿಸಲಾಗಿದೆಯೆಂದು ತೋರಿಸುತ್ತಾರೆ. ಬೃಹದಾರಣ್ಯಕ ಮತ್ತು ಶ್ವೇತಾಶ್ವತಾರ-ಗಳು ಅವರ ದೃಷ್ಟಿಯ ಮೂರು ತತ್ತ್ವಗಳು ಮತ್ತು ವಿಶಿಷ್ಟಾದ್ವೈತವಾದವನ್ನು ನೇರವಾಗಿ ಬೆಂಬಲಿಸುವುದಿಲ್ಲ.

### 4. ಅದ್ವೈತ ವೇದಾಂತ

ಆಚಾರ್ಯ ಶಂಕರರು ಉಪನಿಷತ್ತಿನ ಆತ್ಮಬೋಧನೆಯಿಂದ ಅದ್ವೈತವಾದವನ್ನು ಅಭಿವೃದ್ಧಿ-ಗೊಳಿಸಿದರು. ಶಂಕರರ ದೃಷ್ಟಿಯ ಅದ್ವೈತಕ್ಕೆ ಬೆಂಬಲವಾಗಿ ಉಪನಿಷತ್ತಿನಿಂದ ಅನೇಕ ಉದ್ಧೃತಗಳನ್ನು ಸಮರ್ಥನೆಗಾಗಿ ದೃಷ್ಟಾಂತವಾಗಿ ನೀಡುತ್ತಾರೆ. ನಾವು ಈಗಾಗಲೇ ಪರಮಾತ್ಮನ (ಪರಮ ಆತ್ಮ) ಬೋಧನೆಯನ್ನು ಬೆಂಬಲಿಸುವ ಉಪನಿಷತ್ತಿನ ಉದ್ಧೃತಗಳನ್ನು ದೃಷ್ಟಾಂತವಾಗಿ ಹಿಂದಿನ ಅಧ್ಯಾಯ-ಗಳಲ್ಲಿ ನೀಡಿದ್ದೇವೆ. ಯಾರು ಈ ವಿಶ್ವದಲ್ಲಿ ವ್ಯತ್ಯಾಸವನ್ನು ಕಾಣುವರೋ ಅವರು ಉಪನಿಷತ್ತಿನಲ್ಲಿ ಸಾವಿನಿಂದ ಸಾವಿಗೆ ಹೇಳುತ್ತಾ ಹೋಗುತ್ತಾರೆ. ಕೇವಲ ಜ್ಞಾನದಿಂದ ಭೂಮಿಯ ಉಬ್ಬು, ಎಲ್ಲವೂ

ಭೂಮಿಯಿಂದಲೇ ಮಾಡಿರುವುದೆಂಬುದು ತಿಳಿದುಬಂದಿದೆ; ಕೇವಲ ಕಬ್ಬಿಣದ ತುಂಡಿನ ಜ್ಞಾನದಿಂದ ಎಲ್ಲವೂ ಕಬ್ಬಿಣದಿಂದಲೇ ಮಾಡಿರುವುದೆಂದು ತಿಳಿಯುತ್ತದೆ.... ಹಾಗೆಯೇ ಬ್ರಹ್ಮಜ್ಞಾನದಿಂದ ಸಕಲವೂ ತಿಳಿಯುತ್ತದೆ, ಏಕೆಂದರೆ ಬ್ರಹ್ಮನೇ ಎಲ್ಲದರ ಅಂತಿಮ ತಳಹದಿ. ಆರುಣಿಯು "ಆರಂಭದಲ್ಲಿ ಈ ವಿಶ್ವವು ಕೇವಲ ಏಕಾಂಗಿಯಾಗಿತ್ತು, ಜೊತೆಯಿಲ್ಲದ ಏಕಾಂಗಿಯಾಗಿತ್ತು.... ಆರಂಭದಲ್ಲಿ ಜೊತೆಯಿಲ್ಲದ ಏಕಾಂಗಿಯಾಗಿ ಜೀವಿಯೊಂದೇ ಅಸ್ತಿತ್ವದಲ್ಲಿತ್ತು ಎಂದು ಹೇಳುತ್ತಾನೆ. ಯಾಜ್ಞವಲ್ಕ್ಯರು ಅದು ಅತಿಸ್ತುತಿ ಮಾತ್ರ ಅಲ್ಲಿದ್ದಂತೆ ಕಾಣುತ್ತದೆ.... ಮತ್ತೊಂದರ ಬಗ್ಗೆ ಚಿಂತಿಸುತ್ತದೆ. ಆದರೆ ಎಲ್ಲಿ ಆತ್ಮವು ಏಕಾಂಗಿಯೋ, ಏನು ಮತ್ತು ಎಲ್ಲಿ ಎಂಬ ಸಂದೇಹವಿದೆ.... ಚಿಂತಿಸಿ? ಎನ್ನುತ್ತಾರೆ.

ಅದ್ವೈತ ವೇದಾಂತದ ಪ್ರಕಾರ ಬ್ರಹ್ಮವೇ ಅಂತಿಮಸತ್ಯ. ಬ್ರಹ್ಮನು ಅಂತಿಮ ಜ್ಞಾನದಲ್ಲಿ ಸರ್ವ ಗುಣರಹಿತನು. ಅದು ಅಸ್ಪಷ್ಟ ಮತ್ತು ಅದ್ವೈತ. ಅದು ನಿರ್ವಿಶೇಷ ಮತ್ತು ಶ್ರೇಷ್ಠ. ಬ್ರಹ್ಮನು ಶುದ್ಧ ಪ್ರಜ್ಞೆಯವನು. ಬ್ರಹ್ಮನು ಮಾಯೆಯ ಜೊತೆ ಸೇರಿದಾಗ ಅರ್ಹ ಅಥವಾ ಸಗುಣ ಅಥವಾ ಈಶ್ವರ ವಿಶ್ವದ ಸೃಷ್ಟಿ, ಸ್ಥಿತಿ, ಲಯಕರ್ತನಾಗಿ ಕಾಣುತ್ತಾನೆ. ಬ್ರಹ್ಮನು ವಿಶ್ವದ ಆಧಾರವೆಂದು ಮಾಯೆಯ ಮೂಲಕ ಕಾಣುತ್ತದೆ. ಶಂಕರರ ಪ್ರಕಾರ ಬ್ರಹ್ಮನು ಸಮರ್ಥ ಮತ್ತು ಹಾಗೆಯೇ ಮಾಯೆಯ ಮೂಲಕ ಭೌತಿಕ ಕಾರಣನು. ಮಾಯೆಯಿಲ್ಲದೆ ಬ್ರಹ್ಮನಿಗೆ ವಿಪತ್ತಿಲ್ಲ. ವಿಶ್ವವೊಂದು ದರ್ಶನ. ಆದರೆ ಇಂದ್ರಿಯಗ್ರಾಹ್ಯವಾದ ವಿಷಯದ ದೃಷ್ಟಿಯಿಂದ ವಿಶ್ವವು ಸಂಪೂರ್ಣ ಸತ್ಯವಾದುದು. ಅದು ಎಲ್ಲಿಯವರೆಗೂ ಸತ್ಯಜ್ಞಾನದ ಅರುಣೋದಯವಾಗುವುದಿಲ್ಲವೋ ಅಲ್ಲಿಯವರೆಗೂ ಪ್ರಾಯೋಗಿಕ ಸತ್ಯವಾಗಿರುತ್ತದೆ.

ಅದ್ವೈತ ದೃಷ್ಟಿಯಂತೆ ಆತ್ಮವು ಶುದ್ಧಪ್ರಜ್ಞೆ ಹಾಗೂ ಶುದ್ಧ ಜೀವಿಯಾಗಿದೆ. ಜೀವತ್ವವೊಂದು ದರ್ಶನ. ಅದು ಇಂದ್ರಿಯಗ್ರಾಹ್ಯವಾದ ದೃಷ್ಟ್ಯಾಂಶದಿಂದ ಇಂದ್ರಿಯಗ್ರಾಹ್ಯ ಸತ್ಯವಾಗಿದೆ. ಜೀವಿಗಳು ಅನೇಕವಾದರೂ ವಾಸ್ತವವಾಗಿ ಆತ್ಮದ ಅನೇಕತ್ವವೊಂದು ಹೇರುವಿಕೆಯಾಗಿದೆ. ಶುದ್ಧಾತ್ಮವು ಏಕಮಾತ್ರವಾದುದು. ಆದುದರಿಂದ ಉಪನಿಷತ್ತು ತತ್ತ್ವಮಸಿ ಎನ್ನುತ್ತದೆ. ಅಂದರೆ ಆತ್ಮನು ಬ್ರಹ್ಮನೊಡನೆ ಗುರುತಿಸುವುದು. ಬ್ರಹ್ಮವು ನಿಜಜ್ಞಾನದಲ್ಲಿ ಪರಿಪೂರ್ಣವಾದುದು. ಆದುದರಿಂದ ಬ್ರಹ್ಮವು ಸಮಸ್ತ ಮತ್ತು ಸಮಸ್ತವೂ ಬ್ರಹ್ಮ. ಶಂಕರರು ಬ್ರಹ್ಮಪರಿಣಾಮವಾದವನ್ನು ಟೀಕಿಸುತ್ತಾರೆ. ವಿಶ್ವವು ಬ್ರಹ್ಮನ ವಿವರ್ತ. ವಿವರ್ತವು ದರ್ಶನ. ಶಂಕರರು ವಿಶ್ವವು ಮಾಯೆಯೆಂದು ಘೋಷಿಸುವುದಿಲ್ಲ. ಅವರ ಪ್ರಕಾರ ವಿಶ್ವವು ಮಾಯೆಯಲ್ಲ. ಅದು ಮಿಥ್ಯೆ. ಮಿಥ್ಯೆಯೆಂದರೆ ವಿಶ್ವವು ಸತ್ಯವೂ ಅಲ್ಲ ಅಸತ್ಯವೂ ಅಲ್ಲ. ಆದರೆ ಮಿಥ್ಯೆ. ಸತ್ಯದಂತೆ ಕಾಣುತ್ತದೆ. ಉಪನಿಷತ್ತಿನ ಉದ್ಧೃತಗಳು ಬಹುಮಟ್ಟಿಗೆ ಶಂಕರರ ಅದ್ವೈತ ದೃಷ್ಟಿಯನ್ನು ಬೆಂಬಲಿಸುತ್ತವೆ. ಶಂಕರರು ವಿಶ್ವ ಮತ್ತು ಜೀವತ್ವವು ಕನಸೆಂದು ಹೇಳುವುದಿಲ್ಲ. ಅವರು ಸ್ವಪ್ನ ಜಾಗೃತದ ನಡುವೆ ಅತ್ಯಂತ ವ್ಯತ್ಯಾಸವಿದೆ ಎನ್ನುತ್ತಾರೆ.

ಅದ್ವೈತ ದೃಷ್ಟಿಯಂತೆ ಪ್ರಾಪಂಚಿಕ ಸೃಷ್ಟಿಯನ್ನು ವಿವರಿಸಲು ಅದ್ವೈತವಾದಿಗಳು ವಿವರ್ತದ ಕಲ್ಪನೆಯನ್ನು ಪರಿಚಯಿಸುತ್ತಾರೆ. ಪ್ರಪಂಚದಲ್ಲಿ ನಾವು ಕಾಣುವ ಸೃಷ್ಟಿಯಲ್ಲೆಲ್ಲಾ ಯಾವುದೋ ಒಂದು ಕಾರಣದಿಂದ ಪರಿವರ್ತನೆಯ ಮೂಲಕ ಸೃಷ್ಟಿ ಕಾರ್ಯವಾಗುತ್ತದೆ. ಕಾರ್ಯಕ್ಕೆ ಜನನವನ್ನು ನೀಡುವ ಉದ್ದೇಶದಿಂದ ಕಾರಣದ ಅವಸಾನವಾಗುತ್ತದೆ. ಯಾವುದೇ ಸಂದರ್ಭದಲ್ಲಿ ಕ್ರಮಬದ್ಧ-ವಾಗಿರುವ ಕಾರ್ಯ ನಿರ್ಗಮನದ ಎಣಿಕೆಯಲ್ಲಿ ಕಾರಣದ ಮಾರ್ಪಾಡು ಕೆಲವು ರೂಪಗಳಲ್ಲಿ ಉಂಟಾಗುವುದನ್ನು ಹೇಗೋ ಒಪ್ಪಿಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ವಿವರ್ತವಾದವು ಧೀರ ಪ್ರಯತ್ನವನ್ನು ಮಾಡುತ್ತದೆ. ಇದರಲ್ಲಿಯೂ ದೃಷ್ಟಾಂತಗಳಿದ್ದು, ಪೂರ್ಣ ಅಸ್ತಿತ್ವದಲ್ಲಿನ ಸೃಷ್ಟಿ

ಕಾರ್ಯದಲ್ಲಿ ಯಾವುದೇ ಕಾರಣಕ್ಕೂ ತಿದ್ದುಪಡಿ ಅಥವಾ ಯಾವುದೇ ಬದಲಾವಣೆಯಿಲ್ಲದಿರುವುದನ್ನು ತೋರಿಸಲು ಅದು ಪ್ರಯತ್ನಿಸುತ್ತದೆ. ಹಾವು ಹಗ್ಗ ಇತ್ಯಾದಿಗಳು ಅತ್ಯುತ್ತಮ ನಿದರ್ಶನಗಳು. ಈ ನಿದರ್ಶನಗಳನ್ನು ಎಲ್ಲೆಡೆಯೂ ದೋಷಯುಕ್ತವಾಗಿ ಸ್ವೀಕರಿಸಿರುವುದರಿಂದ ಅವುಗಳ ನಿಜವಾದ ಅರ್ಥವು ಲೋಪವಾಗಿದೆ. ಈ ನಿದರ್ಶನಗಳಿಂದ ವೇದಾಂತವು ವಿಶ್ವವು ಕೇವಲ ಮಾಯೆಯೆಂದು ವಿವರಿಸುತ್ತದೆ. ಆದರೆ ನಿದರ್ಶನಗಳು ಸಂಪೂರ್ಣವಾಗಿ ಬೇರೊಂದಕ್ಕೆ ಸಂಬಂಧಿಸಿರುವುದನ್ನು ಅದು ಸ್ವೀಕರಿಸಿರುತ್ತದೆ. ಅವು ಅಕಳಂಕ ಪ್ರಕೃತಿಯ ಕಾರಣವನ್ನು ತೋರಿಸಲು ಮಾತ್ರ ಕೋರುತ್ತವೆ. ಅವು ಯಾವುದೇ ರೀತಿಯಲ್ಲೂ ಅದರ ಮೇಲೆ ಪರಿಣಾಮ ಉಂಟಾಗುವಂತೆ ಸ್ಪರ್ಶಿಸುವುದಿಲ್ಲ. ಶಂಕರರು ಹೇಳುವಂತೆ ನೀರು ಹಾವನ್ನು ವಿಷಪೂರಿತ ಹಾವೆಂದು ಸ್ವೀಕರಿಸುವುದು, ಇಲ್ಲ ವಿಷ ರಹಿತವಾದ ನೀರು ಹಾವನ್ನು ವಿಷದ ಹಾವೆಂದು ಪರಿಗಣಿಸುವುದು ವಾಸ್ತವತೆಯಿಂದಲ್ಲದೆ ಅಲ್ಲ. ಹಾಗೆಯೇ ಸೃಷ್ಟಿಯಲ್ಲಿ ಎಲ್ಲಾ ಅಸಮಗ್ರತೆ ಮತ್ತು ಮಿತಿಗಳು ಬ್ರಹ್ಮನನ್ನು ಸ್ಪರ್ಶಿಸುವುದಿಲ್ಲ. ವಿವರ್ಥವಾದವು ಸಮಸ್ತ ಕಾರಣವನ್ನು ಮಾರ್ಪಡಿಸದೆ ಇಡುತ್ತದೆ ಮತ್ತು ಮಾರ್ಪಾಡುಗಳನ್ನೂ ವಿವರಿಸುತ್ತದೆ. ವೇದಾಂತವು ಮಾಯೆಯ ಅತ್ಯುತ್ತಮ ನಿದರ್ಶನಗಳನ್ನು ಉದ್ಧರಿಸುತ್ತಾ, ಬೌದ್ಧಿಕ ಯೋಜನೆಯ ಕಾರಣದಿಂದ ಮಾರ್ಪಡಿಸದ ಸೃಷ್ಟಿಯ ಸ್ವಭಾವ ಕಾರಣದೊಂದಿಗೆ ಪರಿಣಾಮ-ಕಾರಿಯಾಗಿ ಸ್ಪಷ್ಟಪಡಿಸಲು ಅಲ್ಲಿ ಬೇರೊಂದು ಸಾದೃಶ್ಯವಿಲ್ಲ. ಹಾಗಾಗಿ ಶಂಕರರು ಅದ್ವೈತ ತತ್ತ್ವ ಶಾಸ್ತ್ರವನ್ನು ಉಪನಿಷತ್ತಿನಿಂದ ಪ್ರಕಟಗೊಳಿಸುವಾಗ ಆತ್ಮ ಬೋಧನೆಯ ನಿಜ ಸತ್ತ್ವವನ್ನು ರಕ್ಷಿಸುತ್ತಾರೆ.

### 5. ಅದ್ವೈತ ಮತ್ತು ವಿಶಿಷ್ಟಾದ್ವೈತಗಳ ಮಧ್ಯೆ ವಿವಾದ

ಅದ್ವೈತದ ಪಕ್ಷವಾದಿಗಳು ಒಂದೆಡೆ ಮತ್ತು ವಿಶಿಷ್ಟಾದ್ವೈತದವರು ಮತ್ತೊಂದೆಡೆ ಇದ್ದು ಇವೆರಡರ ಮಧ್ಯದ ವಿವಾದದ ಪ್ರಶ್ನೆ ಎಂದರೆ ಪ್ರಕೃತಿಯು ಸ್ಪಷ್ಟವೇ ಅಥವಾ ಸತ್ಯವೇ, ಪರಿಮಿತ ವಸ್ತು, ವಸ್ತುವಿನ ಕಾಲ ಮತ್ತು ಆಕಾಶ ಸತ್ಯವಾಗಿಯೂ ಇರುವುದೇ ಅಥವಾ ಇರುವಂತೆ ಭಾಸವಾಗು-ತ್ತದೆಯೇ ಎಂಬ ಸಮಸ್ಯೆಯನ್ನು ನಿರ್ಧರಿಸುವುದೇ ಆಗಿದೆ. ಉಪನಿಷತ್ತಿನಲ್ಲಿ ಈ ವಿವಾದವು ಮುಕ್ತಾಯ ರೂಪದಲ್ಲಿ ಕಂಡುಬರುವುದಿಲ್ಲ. ಅದು ಕಾಲಕ್ರಮದಲ್ಲಿ ವೃದ್ಧಿಹೊಂದಿ ಅನಂತರ ಈ ಗ್ರಂಥಗಳನ್ನು ರಚಿಸಿದಾಗ, ಅವುಗಳಲ್ಲಿನ ಕೆಲವು ಹೇಳಿಕೆಗಳನ್ನು ನಿರೂಪಿಸುವ ಪ್ರಯತ್ನವು ಒಂದಲ್ಲ ಒಂದು ರೀತಿಯಲ್ಲಿ ನಡೆಯಿತು. ಅನಂತರ ತುಂಬಾ ಜಾಗರೂಕತೆಯಿಂದ ಸಮಸ್ಯೆಯನ್ನು ಅರ್ಪಣಾ ಭಾವದಿಂದ ಅಧ್ಯಯನ ಮಾಡಿದಾಗ ನಾವು ಯುದ್ಧ ಅಥವಾ ಲೌಕಿಕಾಸಕ್ತಿಗಳಿಗಿಂತ ಸ್ವಲ್ಪ ಹೆಚ್ಚು ವಿವಾದವೆಂದು ಮುಕ್ತಾಯಗೊಳಿಸಬೇಕಾಯಿತು. ಅಲ್ಲಿ ಅಪಂಥೀಯ ವೇದಾಂತವಾದವು ಒಂದಿಲ್ಲೊಂದು ಪಂಥವನ್ನು ನಿಜವಾಗಿ ಪ್ರತಿನಿಧಿಸುತ್ತಿತ್ತು. ಹಾಗೂ ಎರಡು ಪಕ್ಷದ ಸತ್ಯವು, ಭಿನ್ನ ಮಾರ್ಗಗಳಲ್ಲಿ ವಾಸ್ತವವನ್ನು ಘೋಷಿಸುತ್ತಿದ್ದವು. ಅಲ್ಲಿ ಒಬ್ಬರು ಒಪ್ಪಿ ಮತ್ತೊಬ್ಬರು ತಿರಸ್ಕರಿಸುವ ಏಕಮಾತ್ರ ಸತ್ಯವೂ ಇರಲಿಲ್ಲ ಹಾಗೂ ಏಕಮಾತ್ರ ಅಬದ್ಧ ಬೋಧನೆಯಿಲ್ಲದೆ ಒಬ್ಬರು ಸಮನಾಗಿ ಇನ್ನೊಬ್ಬರೊಂದಿಗೆ ತೊರೆಯುವಂತಹುದೂ ಇರಲಿಲ್ಲವೆಂದು ನಮಗೆ ಕಂಡುಬರುತ್ತದೆ. ಆದರೆ ಒಬ್ಬರೊಂದಿಗೊಬ್ಬರು ವಾದಿಸುವಾಗ ಅವರ ಅಂಗೀಕಾರಗಳು ಮತ್ತು ನಿರಾಕರಣೆಗಳನ್ನು ಮಾಡುವಾಗ ಅವರು ಸಂಪೂರ್ಣವಾಗಿ ಭಿನ್ನ ಭಾಷೆಗಳು ಹಾಗೂ ಔಣ್ನುಡಿಗಳನ್ನು ಬಳಸುತ್ತಿದ್ದರು. ಹಾಗಾಗಿ ಒಬ್ಬರು ಸಮರ್ಥಿಸುವಂತೆ ಮತ್ತೊಬ್ಬರು ನಿರಾಕರಿಸುವಂತೆ ಮತ್ತು ವಿಪರ್ಯಯವಾಗಿರುವಂತೆ ಕಾಣುತ್ತದೆ. ನಾವು ಮುಂದುವರೆದಂತೆ ನಾವು ಏನು ಹೇಳಿದ್ದೇವೆಯೋ ಅದು ಸ್ಪಷ್ಟವಾಗುತ್ತದೆ.

ವಿವಾದವು ವಿಷಯದ ಸಾಪೇಕ್ಷತೆ ಮತ್ತು ವಸ್ತು. ಎರಡೂ ತಮ್ಮದೇ ಆದ ವೈಯಕ್ತಿಕ ಮತ್ತು ಸಾರ್ವತ್ರಿಕ ಲಕ್ಷಣಗಳಿಂದ ಗೋಚರಿಸುತ್ತದೆ. ನಾವು ಮನಸ್ಸಿನ ಇಂದ್ರಿಯಗ್ರಾಹ್ಯ ವಿಷಯವು ಅದಕ್ಕೆ ಹೇಗೆ ಸಂಬಂಧಿಸಿದೆ ಎಂಬುದನ್ನು ನೋಡಿದ್ದೇವೆ. ಅವು ಅದಕ್ಕೆ ಸಂಬಂಧಿಸಿದ್ದು, ಅದರ ಮೇಲೆ ಅವಲಂಬಿಸಿದ್ದು, ಅವು ಅನೇಕವಾಗಿದ್ದು, ಒಂದಾದಾಗ ಅಶಾಶ್ವತವಾದ ನಿರಂತರ ಬದಲಾವಣೆ, ಆದರೆ ಅದು ಶಾಶ್ವತ ಮತ್ತು ಪ್ರಶ್ನಿಸಲು ಸಾಧ್ಯವಾದುದು. ಸ್ವಪ್ನರಹಿತ ನಿದ್ರಾಸಮಯದಲ್ಲಿ ಅವೆಲ್ಲಾ ಒಂದಾದರೂ, ಅಸ್ತಿತ್ವದಲ್ಲಿರುವುದಿಲ್ಲ..... ಅವು ಸಂಭಾವ್ಯ ರೂಪದಲ್ಲಿ ಮಾತ್ರ ಇರುತ್ತವೆ. ಮನಸ್ಸಿನ ಅನುದ್ದಿಷ್ಟ ಶಕ್ತಿಯೊಂದಿಗೆ ಒಂದಾಗಿರುತ್ತದೆ. ನಾವು ಈಗ ಕೇಳಬೇಕಾದ ಪ್ರಶ್ನೆಯೆಂದರೆ, ಇಂದ್ರಿಯ ಗ್ರಾಹ್ಯ ವಿಷಯಗಳು ಸ್ವಪ್ನವೋ? ಅಥವಾ ಸತ್ಯವೋ? ಅವುಗಳಿಗೆ ಕೆಲವು ರೀತಿಯ ಅಸ್ತಿತ್ವವಿರುತ್ತದೆ. ಅವು ಖಂಡಿತವಾಗಿ ಅಸತ್ಯವೆಂದು ಪ್ರಶ್ನಾತೀತವಾಗಿ ಅಂಗೀಕರಿಸಬಹುದು. ಅವುಗಳ ಅಸ್ತಿತ್ವದ ಸ್ವಭಾವವೇ ಪ್ರಶ್ನೆಯಾಗಿದೆ, ಅವು ಮನಸ್ಸಿಗೆ ಸಂಬಂಧಿಸಿದ್ದು, ಮನಸ್ಸಿನ ಮೇಲೆ ಅವಲಂಬಿತವಾಗಿದ್ದು, ಸ್ಪಷ್ಟ ಪ್ರತಿಬಿಂಬವಾಗಿರದಿದ್ದಲ್ಲಿ ಸಾಧಾರಣವಾದ ಸಾಮಾನ್ಯ ಜ್ಞಾನವಾಗಿರುತ್ತದೆ. ಬಣ್ಣಕ್ಕೆ ಮನಸ್ಸನ್ನು ಕಾಣುವ ಸ್ವತಂತ್ರ ಅಸ್ತಿತ್ವವಿಲ್ಲ ಮತ್ತು ಶ್ರವಣ ಶಕ್ತಿಗೆ ಸಂಬಂಧಿಸಿದಂತೆ ಮಾತ್ರ ಶಬ್ದದ ಅಸ್ತಿತ್ವವಿರುತ್ತದೆ. ಬಹುಶಃ ಬುದ್ಧಿಗ್ರಾಹ್ಯವಲ್ಲದರಿಂದ ಚಿಂತಿಸದ ಜನರು, ತತ್ತ್ವಶಾಸ್ತ್ರಜ್ಞನ ಕ್ಷಣಸಂದೇಹವನ್ನು ಅಂಗೀಕರಿಸಲಾರರು. ಸ್ವತಂತ್ರ ಹಾಗೂ ಖಂಡಿತವಾದ ಅಸ್ತಿತ್ವವಿರುವುದರಿಂದ ಯಾವುದೇ ಸಂದರ್ಭದಲ್ಲಿ "ಸತ್ಯತೆ" ಎಂಬ ಪದದ ಬಳಕೆಯು ಖಂಡಿತ ಅಸ್ತಿತ್ವದ ಪ್ರಜ್ಞೆಯಲ್ಲಿ ಅಲ್ಲ, ಆದರೆ ಭಿನ್ನಪ್ರಜ್ಞೆಯಲ್ಲಿ ಅಂದರೆ "ಅನುಗುಣವಾದ ಅಥವಾ ಅವಲಂಬಿತವಾದ ಅಸ್ತಿತ್ವ" ಎಂಬುದನ್ನು ನೀವು ನೆನಪಿನಲ್ಲಿಡಬೇಕು. ಆದರೆ ಮನಸ್ಸು ಪೂರ್ವಜ್ಞಾನದಲ್ಲಿ ಸತ್ಯ, ಖಂಡಿತವಾಗಿ ಸತ್ಯ, ಅದರ ಅಸ್ತಿತ್ವವು ಯಾವುದರ ಮೇಲೆಯೂ ಅವಲಂಬಿಸಿಲ್ಲ. ಹಾಗಾಗಿ ಮನಸ್ಸು ಸತ್ಯವಾಗಿರುವಂತೆ ಅದೇ ರೀತಿಯಲ್ಲಿ ಇಂದ್ರಿಯ ಗ್ರಾಹ್ಯ ವಿಷಯವು ಸತ್ಯವಲ್ಲ, ಮತ್ತು ಮನಸ್ಸು ಸತ್ಯವಾಗಿರುವಂತೆ ಅವುಗಳಾವುವೂ ಆ ಸಮಾನ ಹಂತದಲ್ಲಿ ಸತ್ಯವಲ್ಲವೆಂದು ನಾವು ಹೇಳಬಹುದು. ಆದರೆ "ಸತ್ಯತೆ"ಯಿಂದ ಒಬ್ಬರು ಮಾತ್ರ ಸತ್ಯವನ್ನು ಖಂಡಿತ ಅರಿಯುತ್ತಾರೆ, ಒಬ್ಬರು ಹೇಳಬಹುದು. ಮನಸ್ಸು ಸತ್ಯವಾದರೆ ಇಂದ್ರಿಯಗ್ರಾಹ್ಯ ವಿಷಯಗಳು ಅಸತ್ಯ, ಅದೆಂದರೆ ಮನಸ್ಸಿನಲ್ಲದೆ ಅದು ಬೇರೇನೂ ಅಲ್ಲ, ಅವುಗಳ ಬಗ್ಗೆ ಹೇಳಬೇಕೆಂದರೆ, ಸೂಚನೆಯಲ್ಲಿ ಈಗಾಗಲೇ ಹೇಳಲಾಗಿದೆ ಎನ್ನಬಹುದು, "ಮನಸ್ಸು ಸತ್ಯ" ಮತ್ತು ಅವು ಸುಸಂಘಟಿತ ಸೂಚನೆಯಲ್ಲಿ ಸಮರ್ಥಿಸಲು ಅರ್ಹವಾದುದಲ್ಲ. ಆದುದರಿಂದ ಈ ರೀತಿಯಲ್ಲಿ ನೋಡಿದಾಗ, ಇಂದ್ರಿಯ ಗ್ರಾಹ್ಯ ವಿಷಯಗಳು ಸತ್ಯವಲ್ಲದಿದ್ದರೂ ಸ್ವಪ್ನಮಾತ್ರವಾಗಿರುತ್ತದೆ. ಅವು ಅತ್ಯಂತ ಸತ್ಯವೆಂದು ಕಂಡರೂ ಸಹಾ, ನಮ್ಮ ಜಾಗ್ರತವಸ್ಥೆಯಲ್ಲಿ, ಅವುಗಳ ಅಸ್ತಿತ್ವಕ್ಕೆ ಮಾತ್ರ ಅನುಗುಣವಾದುದು, ತಮಗಲ್ಲವಾದರೂ ಅನ್ಯರಿಗೆ ಅವಲಂಬಿತವಾದುದು. ಸ್ವಪ್ನವಾದುದರಿಂದ ಅಸತ್ಯವಾದುದು.

ಮತ್ತೊಂದು ದೃಷ್ಟಿಯಿಂದ ಪುನಃ ಅವಲೋಕಿಸಿದಾಗ, ಅವುಗಳ ಪರಿವರ್ತನಶೀಲತೆಯ ದೃಷ್ಟಿಯಿಂದ, ಅವುಗಳ ನಶ್ವರತೆಯು, ಸಾಮಾನ್ಯ ಜ್ಞಾನದಿಂದ ಅವುಗಳ ಮೇಲೆ ಆರೋಪಿಸಿರುವ ಸತ್ಯತೆಯ ಬಹುಪಾಲನ್ನು ಇಂದ್ರಿಯಗ್ರಾಹ್ಯ ವಿಷಯಗಳು ಕಳೆದುಕೊಂಡಂತೆ ಕಾಣುತ್ತದೆ. ಈಗ ಕೆಂಪಾಗಿರುವುದು ಮರುಕ್ಷಣದಲ್ಲಿ ಬೆಳ್ಳಗಾಗುತ್ತದೆ, ಯಾವುದು ಕಠಿಣವೋ ಅದನ್ನು ಅಂತಹ ಯಾವುದೇ ಕಷ್ಟವಿಲ್ಲದೆ ಮೃದು ಮಾಡಬಹುದು, ಬಣ್ಣ, ಆಕಾರದಿಂದ ಅತ್ಯಂತ ಸುಂದರವಾಗಿರುವ

ಮಾನವ ಶರೀರವನ್ನು ಕೆಲವೇ ಗಂಟೆಗಳಲ್ಲಿ ಬೂದಿಯಾಗಿ ಪರಿವರ್ತಿಸಬಹುದು. ಅಂತಹ ಅನಿಯತ, ಕ್ಷಣಿಕವಾದ ವಸ್ತುಗಳನ್ನು ಸತ್ಯವೆಂದು ಕರೆಯಲು ಅರ್ಹವೇ? ಸತ್ಯಕ್ಕಿಂತ ಹೆಚ್ಚಾಗಿ ಅವು ಕಾಣಿಸಿ ಕೊಳ್ಳುವುದಿಲ್ಲವೇ?

ಸ್ವಪ್ನರಹಿತ ನಿದ್ರಾವಸ್ಥೆಯಲ್ಲಿ ಮತ್ತೆ ಇಂದ್ರಿಯಗ್ರಾಹ್ಯ ವಿಷಯಗಳು ಸಂಬಂಧಗಳನ್ನು ಕಳೆದುಕೊಳ್ಳುವಂತೆ ಕಾಣುತ್ತದೆ, ನಮ್ಮ ಜಾಗ್ರತ ಅವಧಿಯಲ್ಲಿ ಅವು ಸ್ಪಷ್ಟ ಅಸ್ತಿತ್ವವನ್ನು ಹೊಂದುತ್ತವೆ. ಅವು ಆ ಅವಧಿಯಲ್ಲಿ ಸತ್ಯವಾಗಿ, ಖಂಡಿತವಾಗಿ ಅನಸ್ತಿತ್ತ್ವವನ್ನು ಹೊಂದಿರುತ್ತವೆ. ಹಾಗಿದ್ದಲ್ಲಿ, ಅವುಗಳ ಪರಸ್ಪರ ಅಸ್ತಿತ್ವದ ಪುನಃ ಪ್ರಾರಂಭವನ್ನು ಹಾಗೂ ಜಾಗ್ರತ ಅವಧಿಯಲ್ಲಿ ಅವುಗಳ ಗುರುತನ್ನು ಅಂಗೀಕರಿಸುವುದಿಲ್ಲವೆ? ಆದರೆ ಅವುಗಳ ಅಸ್ತಿತ್ವದ ರೀತಿಯ ಮೊದಲಿನ ಪರಿಸ್ಥಿತಿಯು ಅನಂತರದ ಅವುಗಳ ಅಸ್ತಿತ್ವಕ್ಕಿಂತ ತುಂಬಾ ಭಿನ್ನವಾಗಿದೆ. ಅವುಗಳ ಮೊದಲಿನ ಅಸ್ತಿತ್ವದಲ್ಲಿ ಸಂಭಾವ್ಯ ಮಾತ್ರವಾಗಿದ್ದು, ಸಾಂದರ್ಭಿಕ ಹಾಗೂ ವಾಸ್ತವವಲ್ಲ ಮತ್ತು ಅವುಗಳ ವ್ಯತ್ಯಾಸಗಳು ಸುಸ್ಪಷ್ಟವಲ್ಲದೆ, ಸೂಚ್ಯ ಮಾತ್ರವಾಗಿತ್ತು. ಈಗ ವಸ್ತುಗಳ ಅಸ್ತಿತ್ವವನ್ನು ಹಾಗೆಯೇ ತಡೆದು, ಎಲ್ಲಾ ಪ್ರಾಯೋಗಿಕ ಉದ್ದೇಶಗಳಿಗೆ ಸತ್ಯವೆಂದು ಹೇಗೆ ಹೇಳಲಾಗುತ್ತದೆ? ಅವು ಸ್ಪಷ್ಟ ಮಾತ್ರವಾಗಿದೆ. ಇಂದ್ರಿಯ ಗ್ರಾಹ್ಯ ಅಥವಾ ಸ್ಪಷ್ಟ ಅಸ್ತಿತ್ವ-ಬಾಹ್ಯರೂಪದ ಅಸ್ತಿತ್ವ-ಇವು ಮಾತ್ರ ಅಸ್ತಿತ್ವದ ರೀತಿಯಾಗಿದ್ದು, ಅದು ಅವುಗಳ ವೈಶಿಷ್ಟ್ಯವೆನ್ನಬಹುದು.

ಈಗ ಸಂಗತಿಗಳು ಸಂಪೂರ್ಣವಾಗಿ ಅದೇ ಆಗಿರುವುದನ್ನು ಕಾಣಬಹುದು, ಅವುಗಳಿಗೆ ಅತ್ಯಂತ ವಿಭಿನ್ನವಾದ ವಿವರಣೆಯನ್ನು ನೀಡಬಹುದು ಮತ್ತು ಯಾರಾದರೂ ಹಾಗೆ ಮಾಡಲು ಆರಿಸಿಕೊಂಡಲ್ಲಿ, ಅತ್ಯಂತ ವಿಭಿನ್ನವಾದ ಪದಾವಳಿಯನ್ನು ಅವುಗಳನ್ನು ಪರಾಮರ್ಶಿಸಲು ಬಳಸಬಹುದು. ನಿದರ್ಶನಕ್ಕಾಗಿ ಮನಸ್ಸಿನ ಇಂದ್ರಿಯಗ್ರಾಹ್ಯ ವಿಷಯವಾಗಿದ್ದಾಗ್ಯೂ ಸಹಾ ಅವು ಸ್ವತಂತ್ರವಾಗಿರುವುದಿಲ್ಲ. ಇಂದ್ರಿಯ ಶಕ್ತಿಯು ಅವುಗಳಿಂದ ಪ್ರತ್ಯೇಕಿಸುತ್ತದೆ. ಅವುಗಳೆಂದರೆ ರೀತಿಗಳಾಗಿ ಪ್ರತ್ಯೇಕಿಸಿರುವುದು ಅಥವಾ ಮಾರ್ಪಾಡಾದ ವಸ್ತುಗಳಿಂದ ಮಾರ್ಪಾಡುಗಳಾಗಿರ ಬಹುದೆಂದು ಹೇಳಬಹುದು. ಮಾರ್ಪಾಡಾದ ವಸ್ತುಗಳು ಮತ್ತು ಅವುಗಳ ಮಾರ್ಪಾಡುಗಳು ವಾಸ್ತವವಾಗಿ ಪರಸ್ಪರ ಸಂಬಂಧಿಸಿರುತ್ತವೆ, ಆದರೆ ಅವುಗಳು ಸ್ವತಂತ್ರವಾಗಿ ಸಮಾನವಾದುದಲ್ಲ. ಇಂದ್ರಿಯಗ್ರಾಹ್ಯ ವಿಷಯಗಳು ಅನೇಕ ಮತ್ತು ವಿಭಿನ್ನವಾದುದಾದರೂ, ಮನಸ್ಸು ಒಂದೇ ಆಗಿರುತ್ತದೆ. ಮಾರ್ಪಾಡುಗಳ ಅನಂತರ ಇಂದ್ರಿಯಗ್ರಾಹ್ಯ ವಿಷಯಗಳು ಅವುಗಳ ನಾನತ್ವ ಮತ್ತು ವ್ಯತ್ಯಾಸಗಳು, ವಸ್ತು ಮಾರ್ಪಾಡಾಗಿರುವುದು ಮನಸ್ಸಿನಷ್ಟೇ ಸತ್ಯವಾದುದು. ಎರಡನೆಯದಾಗಿ, ಅವುಗಳ ನಶ್ವರತೆ-ಯಿಂದ, ಪರಿವರ್ತನಶೀಲತೆಯಿಂದ, ರೂಪದಲ್ಲಿ ಬದಲಾವಣೆಯಿದ್ದರೂ, ಅವುಗಳ ವಸ್ತು ಅಕ್ಷಯ-ವಾಗಿರುವುದನ್ನು ಗಮನಿಸಬಹುದು. ಈ ವಸ್ತುವು ವಾಸ್ತವವಾಗಿ ಏನೂ ಇಲ್ಲದಿದ್ದರೂ, ಇಂದ್ರಿಯ-ಗ್ರಾಹ್ಯ ವಿಷಯಗಳನ್ನು ಉತ್ಪಾದಿಸುವ ಮನಸ್ಸಿನ ಶಕ್ತಿಯನ್ನು ಹಲವಾರು ರೂಪಗಳಲ್ಲಿ ಹೊಂದಿರುವು-ದಾದರೂ, ಈ ಶಕ್ತಿಯು ಸ್ವಲ್ಪಮಟ್ಟಿಗೆ ಸತ್ಯ ಹಾಗೂ ಅಸ್ಪಷ್ಟ. ಹಾಗೆಯೇ ತನ್ನನ್ನು ಹಲವಾರು ರೀತಿಗಳಲ್ಲಿ ಮಾರ್ಪಡಿಸಿಕೊಳ್ಳುವ ಶಕ್ತಿಯಿದೆ, ಶಾಶ್ವತದಿಂದ ಸ್ವಲ್ಪಮಟ್ಟಿಗೆ ವಿಭಜಿಸಬಹುದಾದ, ಮನಸ್ಸಿನ ಮಾರ್ಪಡಿಸಲಾಗದ ಲಕ್ಷಣ, ಆ ಲಕ್ಷಣವು ಶಾಶ್ವತ ಅರ್ಥಪ್ರತೀಕದ ಸ್ಥಾನವಾಗಿರುತ್ತದೆ. ಅವುಗಳ ಈ ಎರಡೂ ನಿರೀಕ್ಷೆಗಳು ಪರಸ್ಪರ ಭಿನ್ನವಾಗಿದ್ದರೂ, ಸಮಾನ ಸತ್ಯವಾಗಿದ್ದು, ಅಸ್ಪಷ್ಟ-ವಾಗಿರುತ್ತದೆ. ಮೂರನೆಯ ಸ್ಥಾನದಲ್ಲಿ, ಸ್ವಪ್ನರಹಿತ ನಿದ್ದೆಯ ಸ್ಥಿತಿಯಾದರೂ, ಇಂದ್ರಿಯಗ್ರಾಹ್ಯ

ವಿಷಯದ ಸ್ಥಿತಿ ಮತ್ತು ಅವುಗಳ ವ್ಯತ್ಯಾಸಗಳು ವಿಶದಪಡಿಸಲಾಗದೆ ಉಳಿಯುತ್ತದೆ. ಇದು ಅನಗತ್ಯವಾಗಿ ನಿಷ್ಪಕ್ಷಪಾತ ಅಥವಾ ಪರಿಪೂರ್ಣ ಸಮರಸತೆಯ ಸ್ಥಿತಿಯಾಗಿದೆ. ಆದಾಗ್ಯೂ ವಾಸ್ತವವಾಗಿ ಅವುಗಳೆಲ್ಲದರ ವ್ಯತ್ಯಾಸಗಳಿಂದ ವಿಶದಪಡಿಸಲಾಗದ ವಸ್ತುಗಳು ಅಲ್ಲಿವೆ, ಇಲ್ಲವಾದರೆ ಜಾಗೃತ ಜೀವನದ, ಅವುಗಳೆಲ್ಲದರ ವೈವಿಧ್ಯ ಮತ್ತು ಪೂರ್ಣತೆಯಿಂದ ಪುನರುತ್ಪಾದಿಸಲಾಗುವುದಿಲ್ಲ. ಈ ಸಂದರ್ಭದಲ್ಲಿಯೂ ಸಹಾ, ವ್ಯತ್ಯಾಸಗಳು ಮಾತ್ರ ಸ್ಪಷ್ಟ ಮತ್ತು ಗುರುತು ಮಾತ್ರ ಸ್ಪಷ್ಟವೆಂದು ಹೇಳಲು ಯಾವುದೇ ಅವಕಾಶವಿಲ್ಲ. ಸತ್ಯತೆಯನ್ನು ಗುರುತು ಮತ್ತು ವ್ಯತ್ಯಾಸಗಳೆರಡರಿಂದ ಸಮರ್ಥಿಸಬೇಕಾಗುತ್ತದೆ. ನಾವು ನಮ್ಮ ಸಂಗತಿಯನ್ನು ವಿಶ್ವ ವ್ಯಾಪಕಗೊಳಿಸಲು ಮತ್ತು ಕೈಯಲ್ಲಿನ ಸಮಸ್ಯೆಯಿಂದ ಮಾತ್ರ ನಾವು ಮುಖಾಮುಖಿ ಆಗಬಹುದು. ದೇವರನ್ನು ಮನಸ್ಸಿನ ಸ್ಥಾನದಲ್ಲಿಟ್ಟು ಮತ್ತು ನೈಸರ್ಗಿಕ ವಸ್ತುಗಳು ಅಂದರೆ ಮನಸ್ಸಿನ ಇಂದ್ರಿಯಗ್ರಾಹ್ಯ ವಿಷಯಗಳನ್ನು ಹಾಗೂ ವಿವರ್ಥವಾದ ಮತ್ತು ಪರಿಣಾಮವಾದದ ನಡುವಿನ ನಿರ್ಣಯಾಂಶಗಳನ್ನು ನಾವು ತಿಳಿದುಕೊಳ್ಳಬೇಕು. ಪ್ರಕೃತಿಯು ದೇವರಿಗೆ ಸಂಬಂಧಿಸಿದೆ, ಅವನ ಮೇಲೆ ಅವಲಂಬಿತವಾಗಿದೆ, ಇದು ಅವನಿಂದ ಸ್ವೀಕರಿಸಿದ ವಿಧಾನ ಮಾತ್ರವಾಗಿದೆ. ಅದು ನಿರಂತರವಾಗಿ ಬದಲಾಗುವಂತಹುದು. ಅದು ಶಾಶ್ವತ ಪ್ರವಾಹ-ದಲ್ಲಿರುತ್ತದೆ. ಅನಂತರ, ಸಮಯ ಬಂದಾಗ, ಪ್ರತಿ ಜೀವನ ಚಕ್ರದ ಅಂತ್ಯದಲ್ಲಿ, ಯಾವಾಗ ಅದು ತನ್ನೆಲ್ಲಾ ಅತ್ಯಾಶ್ಚರ್ಯಕರವಾದ ಸಂಕೀರ್ಣವನ್ನು ಕಳೆದುಕೊಂಡು ಹಾಗೂ ಜೀವಾಂಕುರ ವೈವಿಧ್ಯ ಸಾಮರ್ಥ್ಯದಿಂದ ಮಾತ್ರ ಪ್ರಾಸಂಗಿಕ ರೂಪವನ್ನು ಹೊಂದುತ್ತದೆ. ಈ ಪ್ರಾಸಂಗಿಕ ರೂಪದಲ್ಲಿಯೂ ಸಹಾ, ದೈವಶಕ್ತಿಯು ಸೂಕ್ತಕಾಲದಲ್ಲಿ ಮತ್ತು ಆಕಾಶದಲ್ಲಿ ವಿವಿಧ ದರ್ಶನಗಳನ್ನು ಕಲ್ಪಿಸುತ್ತಾದರೂ, ಅದು ಸ್ವತಂತ್ರ ಸತ್ಯತೆ ಅಲ್ಲದೆ ಬೇರೇನೂ ಇಲ್ಲ. ಅಂತಹ ವಿಷಯಗಳ ಬಗ್ಗೆ ನಾವೇನು ಹೇಳಲಾಗುತ್ತದೆ? ಅದರ ಅಸ್ತಿತ್ವ ಸ್ಪಷ್ಟ ಅಥವಾ ಸತ್ಯವೇ? ನಾವು ಒಂದಿಲ್ಲೊಂದು ರೂಪಾಭಿವ್ಯಕ್ತಿಗೆ ಅನುಗುಣವಾಗಿ ನಾವು ಕಂಡ ವಾಸ್ತವಾಂಶದ ಒಂದಿಲ್ಲೊಂದು ದೃಷ್ಟಿಯಿಂದ ಆರಿಸಿಕೊಳ್ಳಬಹುದು. ವಾಸ್ತವಾಂಶಗಳೆಲ್ಲವೂ ತಮಗೆ ತಾವೇ ಸಮನಾಗಿರುತ್ತದೆ.

ಪ್ರಕೃತಿಯ ಆಶ್ರಿತಗುಣ ಮತ್ತು ಸಂಬಂಧಗಳಿಗೆ ಪ್ರಾಧಾನ್ಯ ನೀಡುತ್ತಾ, ನಾವು ಅದಕ್ಕೆ ಪರಿಪೂರ್ಣ ಅಸ್ತಿತ್ವವಿಲ್ಲ. ಅದು ಸತ್ಯವೆಂದು ಕರೆಸಿಕೊಳ್ಳಲು ಯೋಗ್ಯವಲ್ಲ ಎಂಬುದು ಮಾತ್ರ ಸ್ಪಷ್ಟ ಎನ್ನಬಹುದು. ಮತ್ತೆ, ನಿರ್ದಿಷ್ಟವಾಗಿ ಪ್ರಕೃತಿಯ ವಾಸ್ತವಾಂಶದ ಕಡೆಗೆ ನಮ್ಮ ಗಮನವನ್ನು ಹರಿಸುತ್ತಾ, ಸಂಬಂಧಿ-ಯಾಗಿ, ಆಶ್ರಿತವಾಗಿ, ಇಂದ್ರಿಯಗ್ರಾಹ್ಯ ವಿಷಯಗಳಿಂದ ಅತ್ಯಂತ ಭಿನ್ನವಾದ, ದೇವರಿಂದ ಭಿನ್ನವಾದ ಪರಮಸತ್ಯವಾಗಿದೆ. ಹಾಗೆ ವಿಭಜಿಸಿರುವಂತೆ ಅದು ಸತ್ಯತೆಯನ್ನು ಹೊಂದಿದ್ದು ಅಂತೆಯೇ ಪರಮಸತ್ಯವಾಗಿದೆಯೆಂದು ನಾವು ಹೇಳಬಹುದು. ಮತ್ತೆ ಸಮರಸತೆಯಲ್ಲಿ ಪ್ರಕೃತಿಯು ಒಂದು ಸೃಷ್ಟಿಯ ಅಂತ್ಯ ಹಾಗೂ ಮತ್ತೊಂದು ಯುಗದ ಆರಂಭವನ್ನು ಪುನಃ ಸ್ಥಾಪಿಸುತ್ತದೆ. ನಾವು ವಾಸ್ತವಕ್ಕೆ ಪ್ರಾಧಾನ್ಯತೆಯನ್ನು ನೀಡುತ್ತಾ ಸತ್ಯಕ್ಕಿಂತ ಸಮರಸತೆ ಹೆಚ್ಚು ಸ್ಪಷ್ಟ ಎನ್ನಬಹುದು. ಶ್ರೇಷ್ಠ ಮೇಧಾವಿಗೆ ಭೂತ, ಭವಿಷ್ಯಗಳು ವರ್ತಮಾನದಂತೆಯೇ ಸತ್ಯ, ಪ್ರಕೃತಿಯ ಅನಂತ ಸಂಕೀರ್ಣತೆಯು ತನ್ನ ಸಂಭಾವ್ಯ ಸ್ಥಿತಿಯಲ್ಲಿರುತ್ತದೆ. ಆದುದರಿಂದ ಅವನಿಗೆ ಪರಿಮಿತ ಮಾಹಿತಿ ಅಲ್ಲದಿದ್ದರೂ, ಪ್ರಕೃತಿಯು ತನ್ನಲ್ಲಿನ ವಾಸ್ತವತೆಯ ಸಂಭಾವ್ಯತೆಯಲ್ಲಿ ಸತ್ಯವಾಗಿದೆ.

ಅದ್ವೈತಿಗಳು ದೇವರಲ್ಲಿರುವ ಪ್ರಕೃತಿಯೋಗ್ಯವಾದ ಸತ್ಯತೆ, ಅವಿಭಾಜ್ಯತೆ, ಪರಿಪೂರ್ಣಪ್ರಜ್ಞೆ, ಅವ್ಯತ್ಯಸನೀಯತೆ, ಶಾಶ್ವತತೆ, ಅನಂತತೆ, ಪರಿಪೂರ್ಣ ಗುಣದಲ್ಲಿರುವ ಅಚಲವಾದ ನಂಬಿಕೆಯನ್ನು

ಅಸಾಮಂಜಸ್ಯವೆಂದು ಅಂಗೀಕರಿಸುತ್ತಾರೆ. ಅವರು ಪ್ರಕೃತಿಯ ಸತ್ಯತೆಯನ್ನು ಅಂಗೀಕರಿಸುವರು. ಅವುಗಳ ವೈಶಿಷ್ಟ್ಯವನ್ನು ನಿರಾಕರಿಸುವುದಕ್ಕೆ ಸಮನಾದುದೆಂದು ಚಿಂತಿಸುತ್ತಾರೆ. ಪರಿಮಿತ ವಸ್ತುಗಳು ನಿಜವಾಗಿದ್ದರೆ, ಅನಂತತೆಗೆ ಅನೇಕ ಮಿತಿಗಳನ್ನು ರೂಪಿಸುತ್ತಿರಲಿಲ್ಲವೇ, ಅದರಲ್ಲಿ ಅನಂತತೆಯನ್ನು ತಡೆಯುತ್ತಿರಲಿಲ್ಲವೆ? ಎರಡನೆಯದಾಗಿ, ಅನಂತವು ಜನಿಸುವುದೂ ಇಲ್ಲ, ಸಾಯುವುದೂ ಇಲ್ಲ ಮತ್ತು ಅದು ಅನಂತ. ಜೊತೆಯಿಲ್ಲದ ಏಕಾಂಗಿ, ನಿಜ ಅಸ್ತಿತ್ವದಲ್ಲಿ ಅನ್ಯವಸ್ತುಗಳು ಒಳಬರುವು-ದಾಗಲೀ ಹಾಗೂ ಹೊರ ಹೋಗುವುದಾಗಲೀ ಮಾಡಲು ಅವಕಾಶವೆಲ್ಲಿದೆ? ಮತ್ತೆ ಬದಲಾವಣೆ ನಿಜವೆಂದು ಹೇಳಲಾಗಿದೆ, ಪರಿಪೂರ್ಣ ಸತ್ಯತೆ ಬದಲಾಗುವುದೆಂದು ಹೇಳಲಾಗಿದೆ. ಮೊದಲು ಏನಾಗಿರಲಿಲ್ಲವೋ ಅದಾಗುತ್ತದೆ. ಅಂದರೆ ಅದು ಕಾರಣತಾವಾದಕ್ಕೆ ಒಳಪಟ್ಟಿದ್ದುದರಿಂದ ಪರಿಪೂರ್ಣತೆ ಇಲ್ಲವೇ ಇಲ್ಲ. ಮತ್ತೆ ಶ್ರೇಷ್ಠ ಮೇಧಾವಿಯಾದರೆ, ಎಲ್ಲವೂ ಸಮವಾಗಿರಲು ಭೂತ ಹಾಗೂ ಭವಿಷ್ಯಗಳ ಚಿಂತನೆಗೆ ಯಾವ ಅರ್ಥವನ್ನು ಸೇರಿಸಲು ಸಾಧ್ಯ? ಅನಂತರ, ದೋಷ ಮತ್ತು ಮೌಢ್ಯತೆಗೆ ಪರಿಮಿತ ಪ್ರಜ್ಞೆ ಒಳಪಟ್ಟಾಗ ಅನಂತ ಜ್ಞಾನದ ನಡುವೆ ಅಂತಹ ವಸ್ತುಗಳಿಗೆ ಅವಕಾಶವೆಲ್ಲಿದೆ? ಪರಿಣಾಮವಾದಿಗಳು ಹೇಳುವಂತೆ ದೇವರು ವಿಶ್ವದ ರೂಪವನ್ನು ಹೊಂದಿ, ತನಗೆ ತಾನೇ ವಿಶ್ವದ ಹಲವಾರು ವಸ್ತುಗಳಾಗಿ, ಸಜೀವ ಮತ್ತು ನಿರ್ಜೀವವೂ ಆಗುತ್ತಾನೆ, ಹೇಳಬೇಕೆಂದರೆ ಅನಂತವು ತನ್ನ ಅನಂತತೆಯಿಂದ ತನ್ನನ್ನೇ ನಿವಾರಿಸಿಕೊಳ್ಳುತ್ತದೆಂಬುದು ಅನಂತತೆಯ ವಿಷಯವಾಗಿದೆ. ಹೊರನೋಟಕ್ಕೆ ಅಸಂಬದ್ಧ ಬೋಧನೆಯಾದರೂ, ಅದು ಎಲ್ಲಾ ಆಧ್ಯಾತ್ಮಿಕ ಆಚರಣೆಗಳನ್ನು ಮಾಡುತ್ತದೆ, ಅನಂತದೊಂದಿಗೆ ಐಕ್ಯತೆಯನ್ನು ಹೊಂದಲು ನಡೆಸುವ ಪ್ರಯತ್ನಗಳೆಲ್ಲಾ ಸಂಪೂರ್ಣವಾಗಿ ಅರ್ಥವಿಲ್ಲದ್ದಾಗಿರುತ್ತದೆ. ಆದುದರಿಂದ ವಿವರ್ತವಾದಿಗಳು ಸೂಕ್ತ ಸಮಯದಲ್ಲಿ ಆಕ್ಷೇಪಿಸುತ್ತಾ ಪರಿಮಿತ ಪ್ರಜ್ಞೆಯನ್ನು ಒಳಗೊಂಡು ಆಕಾಶ, ಅಥವಾ ಅತ್ಯಂತ ನಿರ್ದುಷ್ಟವಾಗಿ ಮಾತನಾಡಬೇಕೆಂದರೆ, ಎಲ್ಲಾ ವಸ್ತುಗಳ ಸೀಮಿತ ಪ್ರಜ್ಞೆಯಲ್ಲಿ ದರ್ಶನ ಮಾತ್ರ ಕಾಣುವಂತೆ ಮಾಡಿ, ದೇವರು ತನ್ನ ವಿಶಿಷ್ಟ ಶಕ್ತಿಯಿಂದ ಇಂತಹ ದರ್ಶನಗಳನ್ನು ಜಾದೂಗಾರನೊಬ್ಬ ತನ್ನ ಆಶ್ಚರ್ಯಕರವಾದ ಅದ್ಭುತ ಚಮತ್ಕಾರಗಳನ್ನು ನಿರ್ವಹಿಸುವಂತೆ ಸತ್ಯತೆಯಲ್ಲದುದನ್ನು ಏರ್ಪಡಿಸು-ತ್ತಾನೆ. ಇದೊಂದು ಅತ್ಯಂತ ರಹಸ್ಯಪೂರ್ಣ ಶಕ್ತಿ, ಅದು ಮಾನವನ ಗ್ರಹಿಕೆಯನ್ನು ಮೀರುವ ಸ್ವಭಾವ. ಅದು ಒಂದೆಡೆ ದೇವನೊಬ್ಬ, ಅದು ಅವನ ಶಕ್ತಿ ಹಾಗೂ ಅವನನ್ನು ಮೀರಿ ಯಾವುದೂ ಇಲ್ಲ ಎನ್ನುತ್ತದೆ. ಮತ್ತೊಂದೆಡೆ ಯಾವುದೋ ಒಂದು ತನ್ನನ್ನು ಅಗಣಿತವಾದ ಪರಿಮಿತ ವಸ್ತುವೆಂದು ವಿಶದಪಡಿಸುತ್ತದೆ. ಅಗಣಿತ ಬದಲಾವಣೆಯ ಸರಣಿಯಲ್ಲಿ ಆದ್ಯಂತವಿಲ್ಲ, ಅದು ಏನೋ ಒಂದು ದೈವಿಕ ಅಸ್ತಿತ್ವದಿಂದ ವಿಭಜಿಸಬಹುದಾದುದು. ಪರಿಮಿತತೆಯ ಕಲ್ಪನೆಯಿಲ್ಲ, ಅಸ್ಥಿರತೆ ಮತ್ತು ವಿಭಜನೀಯತೆ ಪ್ರವೇಶಿಸುತ್ತದೆ. ಈ ಶಕ್ತಿಯ ರಹಸ್ಯಪೂರ್ಣತೆಯು ಮತ್ತೆ ಸ್ಪಷ್ಟವಾಗಿ ಒಳಗೊಂಡಿದ್ದು, ವಿರೋಧಾತ್ಮಕವಾದ ವಿಷಯಗಳು ಮುಂದುವರೆಯುವಂತೆ ಮಾಡುವುದರಿಂದ ಅಸಾಧ್ಯವೆನಿಸುತ್ತದೆ. ಈ ಶಕ್ತಿಯಿಂದ, ಅದು ಯಾರನ್ನಾದರೂ ತನ್ನಲ್ಲಿಯೇ ಅಪರಿಮಿತ ಮತ್ತು ಪರಿಮಿತವನ್ನಾಗಿ ಮಾಡಿ ಅನಂತವಾಗಿ ಕಾಣುತ್ತದೆ. ಅವನಾದರೋ ಬದಲಾಗದ, ತನಗೆ ತಾನೇ ಬದಲಾಗುವ, ಯಾರು ಶಾಶ್ವತವಾಗಿ ಪರಿಪೂರ್ಣಜ್ಞಾನ ಪಾವಿತ್ರ್ಯತೆಯನ್ನು ಹೊಂದಿರುವನೋ ಅವನು ತನಗೆ ತಾನೇ ಅಜ್ಞಾನಿಯಾಗಿ ಮತ್ತು ಅಪವಿತ್ರನನ್ನಾಗಿ ಮಾಡಿಕೊಂಡಂತೆ ಕಾಣಿಸುತ್ತಾನೆ. ಆದುದರಿಂದ ನಮ್ಮ ತತ್ತ್ವಶಾಸ್ತ್ರಜ್ಞರು ಈ ಶಕ್ತಿಯನ್ನು ಮಾಯೆ ಎಂದು ಕರೆಯುತ್ತಾರೆ. ಇದು ಅತ್ಯಂತ ಅರ್ಥವತ್ತಾದ

ಮಾತು. ಶಕ್ತಿಯ ಗಟ್ಟಿತನವನ್ನು ಸೂಚಿಸುವ ಅದರ ಅಸ್ತಿತ್ವವನ್ನು ನಿರಾಕರಿಸುವುದಲ್ಲದೆ ಇನ್ನೇನೂ ಗ್ರಹಿಸಲಾಗುವುದಿಲ್ಲ. ಅದ್ವೈತಿಗಳು ಈ ಅಗ್ರಾಹ್ಯವಾದ ಶಕ್ತಿಯನ್ನು ಪ್ರಾರ್ಥಿಸುವುದರಿಂದ ವಿಶ್ವದ ಒಗಟುಗಳಿಗೆ ಯಾವುದೇ ನಿಜವಾದ ಸಮರ್ಥ ವಿವರಣೆ ದೊರೆಯುವುದು ಎಂಬುದನ್ನು ಸಮರ್ಥಿಸುವುದಿಲ್ಲ, ಅವರು ನಿಷ್ಪಕ್ಷಪಾತವಾಗಿ ಅಂತಿಮ ಅಗ್ರಾಹ್ಯ ವಸ್ತುಗಳನ್ನು ಒಪ್ಪಿಕೊಳ್ಳುತ್ತಾರೆ. ಸೃಷ್ಟಿಯ ರಹಸ್ಯ ಪೂರ್ಣತೆಯ ಈ ರಹಸ್ಯಕ್ಕೆ ಮಾಯೆ ಅಥವಾ ಅದ್ವೈತ ಎಂಬ ಹೆಸರೊಂದನ್ನು ನೀಡುತ್ತಾರೆ. ಈ ಅದ್ವೈತ ಎಂಬ ಮಾತನ್ನಾಡುವಾಗ ವಿಶ್ವದ ಕಾರಣವೆನಿಸಿದರೂ, ಖಚಿತವಾಗಿ ಅಜ್ಞಾನವೆಂಬ ಅರ್ಥವಾಗುವುದಿಲ್ಲ. ಆದರೆ ಸಂಕೀರ್ಣ ಜ್ಞಾನಕ್ಕಿಂತ ಅಂದರೆ ಯಾವುದೋ ಒಂದು ಜ್ಞಾನದಿಂದ ಭಿನ್ನವಾದುದು ಕಾಣುವಂತಹುದು, ದೈವಿಕ ಅಸ್ತಿತ್ವವನ್ನು ಸ್ಥಾಪಿಸುವುದು. ಈಗ ದೇವರು ತನ್ನಲ್ಲಿನ ಅನಂತತೆಯನ್ನು ತನ್ನಲ್ಲೇ ಚಿಂತಿಸಿ, ಮಾಯೆಯಿಂದ ಹೊರತಾದ ನಿರ್ವಿಕಲ್ಪ ಅಸ್ತಿತ್ವವೇ ನಿರ್ಗುಣ ಬ್ರಹ್ಮ, ಯಾರಿಂದ ಅಥವಾ ಯಾವುದು, ಅದು ಸತ್ಯವೆನ್ನದೆ ಅದಕ್ಕಿಂತ ಹೆಚ್ಚಿನದೇನನ್ನೂ ಹೇಳಲಾಗುವುದಿಲ್ಲ. ಅದೇ ಪ್ರಜ್ಞೆ ಮತ್ತು ಆನಂದ, ಸತ್, ಚಿತ್, ಆನಂದ. ಮಾಯೆಯನ್ನು ಕುರಿತು ಚಿಂತಿಸುವಾಗ, ರಹಸ್ಯಪೂರ್ಣ ಶಕ್ತಿಯಿಂದ ಪ್ರಪಂಚದ ಪರಿಮಿತ ವಸ್ತುಗಳು ಸೃಷ್ಟಿಯಾಗುತ್ತವೆ. ಈಶ್ವರನೇ ದೇವರು, ಆಳುವವನು, ಒಡೆಯ ಎಂದೂ, ಪಾಶ್ಚಿಮಾತ್ಯ ದೇವತಾಶಾಸ್ತ್ರಜ್ಞರು ವೈಯಕ್ತಿಕ ದೇವರು ಎಂದು ಕರೆಯುವಂತೆ, ಭಗವಂತ ಸರ್ವಶಕ್ತ, ವಿಶ್ವದ ಸೃಷ್ಟಿ, ಸ್ಥಿತಿ, ಲಯಕರ್ತ, ತಂದೆ, ಮಾರ್ಗದರ್ಶಕ, ಗುರು ಮತ್ತು ಪರಿಮಿತ ಆತ್ಮಗಳ ಸಂರಕ್ಷಕ, ಅದ್ವೈತಿಗಳು ಇವೆಲ್ಲವನ್ನೂ ದೇವರ ವೈಶಿಷ್ಟ್ಯವೆಂದು ಹೇಳುವುದಿಲ್ಲ. ವೈಶಿಷ್ಟ್ಯವನ್ನು ವೈಯಕ್ತಿಕವೆಂದು ಕರೆಯಲಾಗುತ್ತದೆ. ಅವು ಸತ್ಯವಲ್ಲ. ಅವು ಏನು ಹೇಳುತ್ತವೆಯೆಂದರೆ, ಅವೆಲ್ಲವೂ ಸತ್ಯಕ್ಕೆ ಸಂಬಂಧಿಸಿದಂತೆ ಅದು ಸತ್ಯ, ದೇವರು ರಹಸ್ಯಪೂರ್ಣ ಶಕ್ತಿಯ ಸಂಬಂಧದಿಂದ ತನಗಿಂತ ಭಿನ್ನವಾದ ವಸ್ತುಗಳನ್ನು ಸೃಷ್ಟಿಸಿದಂತೆ ಕಾಣುತ್ತದೆ. ಈ ವೈಶಿಷ್ಟ್ಯಗಳು ಕೆಲವು ವ್ಯತ್ಯಾಸಗಳನ್ನು ಸೂಚಿಸುತ್ತದೆ. ದೇವರು ಮತ್ತು ವಿಶ್ವದ ನಡುವೆ ದ್ವೈತತೆ ಮತ್ತು ಮಾಯೆಯ ಫಲವಾಗಿ ದ್ವೈತ. ಮಾಯೆಗೆ ಆದ್ಯಂತವಿಲ್ಲ, ದೇವರ ಶಕ್ತಿಯಾಗಿದೆ, ದೇವರ ಸುಗುಣವು ಅಸಾಧಾರಣ ಲಕ್ಷಣವಾದರೂ ಶಾಶ್ವತವಾದುದು; ಅವನು ಶಾಶ್ವತವಾಗಿ ಸ್ವಾಮಿ ಈಶ್ವರ ಹಾಗೂ ಬ್ರಹ್ಮ.

ನಾವು ಹೇಳಿದಂತೆ ವಿವಾದವು ಲೌಕಿಕಾಸಕ್ತಿಯ ಯುದ್ಧಕ್ಕಿಂತಲೂ ಸ್ವಲ್ಪ ಹೆಚ್ಚು. ಒಂದು ಪಕ್ಷದವರು, ವಿರೋಧ ಪಕ್ಷದವರು ಒಪ್ಪಿದ ಆಕಾರಾದಿಗಳನ್ನು ಒಪ್ಪದಿದ್ದುದರಿಂದ ಸಂತೃಪ್ತಿಯಾಗಲಿಲ್ಲ. ಪರಮಾತ್ಮನೇ ಅಂತಿಮ ವಿವರಣೆ ಮತ್ತು ಎಲ್ಲ ಅಸ್ತಿತ್ವದ ಅಂತಿಮ ಸತ್ಯ, ಸೃಷ್ಟಿಶಕ್ತಿಯಿಂದ ಎಲ್ಲವೂ ಸೃಷ್ಟಿಯಾಗುತ್ತದೆ. ಸಂಭಾವ್ಯ ಅಸ್ತಿತ್ವದ ಆರಂಭದಿಂದ ವ್ಯತ್ಯಾಸಗಳೆಲ್ಲವೂ ಅಪ್ರಕಟಿತವಾದುದು. ದೇವರ ಸಾಂದರ್ಭಿಕ ವಿಶ್ವರೂಪ ದರ್ಶನ, ಪರಿಮಿತ ಆತ್ಮಗಳು ಅಸಮವಾದುದರಿಂದ ಅನಂತವು ಅಂತ್ಯದೊಂದಿಗೆ ಐಕ್ಯತೆಯನ್ನು ಕೋರುತ್ತದೆ. ಇವೆಲ್ಲವೂ ಸಾಧಿಸುವ ಎರಡೂ ಪದ್ಧತಿಯಲ್ಲಿಯೂ ಕಾಣುತ್ತದೆ. ಬೋಧನೆಯಲ್ಲಿ ಅಂತಹ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಸ್ವರಭಾರದಂತೆ ಪದ ವಿನ್ಯಾಸವನ್ನು ಅಂತಹ ವ್ಯತ್ಯಾಸವೆಂದು ಸ್ವೀಕರಿಸಿಲ್ಲ. ಆದರೂ ಅದೇ ವಸ್ತುಗಳನ್ನು ಎರಡೂ ಪದ್ಧತಿಗಳಲ್ಲಿ ಅಂಗೀಕರಿಸಲಾಗಿದೆ. ಅವು ಎಲ್ಲಾ ವಸ್ತುಗಳ ಮೇಲೆ ಅದೇ ಸ್ವರಭಾರವನ್ನು ಹಾಕುವುದಿಲ್ಲ. ಅದ್ವೈತವು ಸಾಪೇಕ್ಷತೆ ಹಾಗೂ ಪರಿಮಿತ ವಸ್ತುಗಳು ಅದೃಶ್ಯವಾಗುವುದನ್ನು ಒತ್ತಿ ಹೇಳುತ್ತದೆ. ಪರಿಣಾಮವಾದಿಗಳು ಸಾಪೇಕ್ಷ ಹಾಗೂ ಪರಿವರ್ತನಶೀಲತೆಯನ್ನು ಮರೆಯಬಾರದೆಂದು

ಹೇಳುತ್ತಾರೆ; ಇವೆಲ್ಲವೂ ನಿಜವಾದ ದೈವಿಕ ಶಕ್ತಿಯ ಲಕ್ಷಣಗಳು ಅದ್ವೈತಿಗಳು ನೈಸರ್ಗಿಕ ವಸ್ತುಗಳ ಸ್ಪಷ್ಟ ವ್ಯತ್ಯಾಸದ ನಡುವೆಯೂ ದೈವಚಿಹ್ನೆ ಹಾಗೂ ಐಕ್ಯತೆಯ ಕಡೆಗೆ ಗಮನವನ್ನು ಸೆಳೆಯುವರು. ಪರಿಣಾಮವಾದಿಗಳು ಚಿಹ್ನೆಯ ವ್ಯತ್ಯಾಸವನ್ನು ವಿರೋಧಿಸಲಿಲ್ಲವೆಂಬ ಅಂಶವನ್ನು ತೋರಿಸುತ್ತಾರೆ. ಮತ್ತು ಅಂತ್ಯದಷ್ಟೇ ಸತ್ಯವಾದುದು. ಒಬ್ಬರು ವಿಶ್ವದ ಅಪೂರ್ಣತೆಗಳಿಂದ ದೈವಿಕ ಅಸ್ತಿತ್ವ ಅನನ್ವೇಷಿತ ಎಂಬುದು ಸತ್ಯವೆಂದು ಪ್ರಾಮುಖ್ಯತೆಯನ್ನು ನೀಡುತ್ತಾರೆ; ಮತ್ತೊಬ್ಬರು ವಸ್ತುಗಳಲ್ಲಿನ ಎಲ್ಲಾ ಅಸಂಪೂರ್ಣತೆಗಳಿದ್ದಾಗ್ಯೂ ಸಂಪೂರ್ಣ ದೈವಿಕ ಉಪಸ್ಥಿತಿ ಇರುವುದೆಂದು ಸೇರಿಸುತ್ತಾರೆ. ರೂಪರಚಕನು ದೇವ ಮತ್ತು ಮಾನವನ ಅಂತಿಮ ಐಕ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಿರಂತರವಾಗಿ ನಮ್ಮನ್ನು ಆಗ್ರಹಿಸುತ್ತಾನೆ. ಐಕ್ಯತೆಯೊಂದೇ ಮೋಕ್ಷವನ್ನು ಹೊಂದುವಂತೆ ಮಾಡಬಲ್ಲುದು, ಅಂತಿಮವಾಗಿ ಅನಂತದಲ್ಲಿನ ವ್ಯತ್ಯಾಸದಿಂದ ದೃಷ್ಟಿಶೂನ್ಯರಾಗಬಾರದೆಂದು ನಮಗೆ ಹೇಳುತ್ತಾನೆ. ಆ ವ್ಯತ್ಯಾಸವೊಂದೇ ಮೋಕ್ಷಾನಂತರದ ನಮ್ಮ ಅನ್ವೇಷಣೆಗೆ ಅರ್ಥವನ್ನು ನೀಡುತ್ತದೆ. ನಾವು ಈ ಅಂಶದ ಮೇಲೆ ಗಮನವಿಡಬೇಕಾಗಿಲ್ಲ. ಈ ಸ್ವರಭಾರದ ವ್ಯತ್ಯಾಸವು ಎರಡೂ ಪದ್ಧತಿ-ಗಳನ್ನು ವ್ಯಾಪಿಸಿ, ಅವುಗಳ ಪ್ರಮುಖ ವ್ಯತ್ಯಾಸಗಳನ್ನು ಸ್ಥಾಪಿಸುತ್ತದೆ.

ನಾವು ತತ್ತ್ವಶಾಸ್ತ್ರದ ದರ್ಶನದ ಪ್ರಶ್ನೆಗೆ ವಿವರಣೆಯನ್ನು ನೀಡಿದ್ದೇವೆ ಮತ್ತು ಧಾರ್ಮಿಕ ಆಧಾರದ ದರ್ಶನವನ್ನು ಸ್ಪರ್ಶಿಸಿಲ್ಲ. ಧಾರ್ಮಿಕ ಪಠ್ಯಗಳ ಅನ್ವೇಷಣೆಯ ಪ್ರಯತ್ನವನ್ನು ವಿವರಿಸುವಲ್ಲಿ ಉಭಯ ಪಕ್ಷಗಳೂ ಅಪಾರ ಶಕ್ತಿಯನ್ನು ವ್ಯಯಿಸಿವೆ, ನಿದರ್ಶನಕ್ಕೆ ಅದ್ವೈತತೆಯನ್ನು ಅಂಗೀಕರಿಸು-ವುದೋ ಅಥವಾ ಉದ್ಧೃತದಲ್ಲಿನ ವ್ಯತ್ಯಾಸವೋ ಅಂತಿಮವೋ ಅಥವಾ ತಾತ್ಕಾಲಿಕ ಮಾತ್ರವೋ, ಕೇವಲ ಆಧ್ಯಾತ್ಮಿಕ ಶಿಸ್ತಿನ ಪೂರ್ವಸಿದ್ಧತೆಯನ್ನು ಆನಂದಿಸುವ ಉದ್ದೇಶದಿಂದ ಮಾಡಿದುದೋ ಅಥವಾ ಅಂತಿಮ ಸತ್ಯದ ಅಭಿವ್ಯಕ್ತಿಯೋ; ಅಥವಾ ಮತ್ತೆ ಒಂದಾಗಿರುವುದನ್ನು ಖಚಿತಪಡಿಸಿ-ಕೊಳ್ಳುವುದೋ ಅಥವಾ ನಿಜವಾದ ವೈವಿಧ್ಯತೆಗಳನ್ನು ನಿರಾಕರಿಸದಂತೆ ಮಾಡುವುದೋ; ಮತ್ತು ಮೂರನೆಯದಾಗಿ ನೈಸರ್ಗಿಕ ವಸ್ತುಗಳಿಂದ ತೆಗೆದ ನಿದರ್ಶನಗಳ ಯಾವ ಅಂಶಗಳು ಯಾವ ಮಟ್ಟದಲ್ಲಿವೆ ಅಥವಾ ಮಾನವನ ವಾಸ್ತವ ಜೀವನದಿಂದ, ವಿಶ್ವದೊಂದಿಗಿನ ದೇವರ ಸಂಬಂಧವನ್ನು ವಿವರಿಸುವುದನ್ನು ಅಂತಿಮ ಸತ್ಯದ ಪ್ರಾತಿನಿಧ್ಯವೆಂದು ಒಪ್ಪಿಕೊಳ್ಳಬೇಕೋ ಇತ್ಯಾದಿ. ಆದರೂ, ಮುಖ್ಯಾಂಶವೊಂದರ ದೃಷ್ಟಿಯಿಂದ ಅಂತಹ ಚರ್ಚೆಗಳನ್ನು ಬಹುಶಃ ನಾವು ಉದ್ದೇಶ ಪೂರ್ವಕವಾಗಿ ಅವುಗಳಲ್ಲಿ ಪ್ರವೇಶಿಸುವುದರಿಂದ ತಡೆಯಲಾಯಿತು. ಮತ್ತು ದೃಢಸಂಕಲ್ಪದಿಂದ ಸಂಕ್ಷಿಪ್ತವಾಗಿ ತಿಳಿಸಲು ಪ್ರಯತ್ನಿಸಿದೆವು. ಧರ್ಮಗ್ರಂಥಗಳಲ್ಲಿನ ನಂಬಿಕೆಯಿಂದ ಎರಡು ಸಿದ್ಧಾಂತಗಳೂ ಭಿನ್ನವಾದ ಕಾರಣ ವಿನಂತಿಸುವಂತೆ ಮಾಡಿದೆವು. ಧರ್ಮಗ್ರಂಥಗಳ ದರ್ಶನದಲ್ಲಿನ ವಿಷಯಾನ್ವೇಷಣದ ವಿವರವಾದ ಚರ್ಚೆಯಿಂದ ಪ್ರಾಸಂಗಿಕವಾದ ವಿಧಾನಗಳಿಂದ ಸ್ವತಂತ್ರವಾದ ತರ್ಕವನ್ನು ಶಂಕರರ ವ್ಯಾಖ್ಯಾನದ 14ನೇ ಸೂಕ್ತಿ, ಪಾದ 1, ಅಧ್ಯಾಯ 2ರಲ್ಲಿನ ಶಂಕರ ಮೀಮಾಂಸೆಯಲ್ಲಿ ಕಾಣಬಹುದು. ಎರಡು ದರ್ಶನಗಳ ನಡುವಿನ ಅಂಶಗಳ ಪರಿಣಾಮವಾಗಿ ಪ್ರಮುಖವಾದ ಹೇಳಿಕೆಗಳನ್ನು ಅದೇ ಪಾದದ ಅನ್ಯಸೂಕ್ತಿಗಳ ವ್ಯಾಖ್ಯಾನಗಳಲ್ಲಿ ಕಾಣಬಹುದು.

## ಉಪನಿಷತ್ತುಗಳ ಪ್ರಮುಖ ಬೋಧನೆ

ಉಪನಿಷತ್ತಿನ ನಿಜವಾದ ಹಾಗೂ ಪ್ರಮುಖವಾದ ಬೋಧನೆ ಏನು? ಇನ್ನೂ ಒಂದು ಪ್ರಶ್ನೆ ಏಳಬಹುದು. "**ಈಶಾವಾಸ್ಯಮಿದಂ ಸರ್ವಂ**" ಎಂದು ಈಶೋಪನಿಷತ್ತು ಉತ್ತರಿಸುತ್ತದೆ.

ಪ್ರತಿಯೊಂದೂ ನೆಲೆಸಿರುವುದು ಈಶ ಅಥವಾ ಬ್ರಹ್ಮನಿಂದ. "**ನೇಹಾನಾನಾಸ್ತಿಕಿಂಚನ**" ನಾನತ್ವವೇ ಇಲ್ಲ. ಪಾಲ್ ಡ್ಯೂಸೀನ್ ವರ್ಣಿಸುತ್ತಾರೆ; ಋಗ್ವೇದದ ಮಾತುಗಳಲ್ಲಿ (1.164) ಐಕ್ಯತೆಯ ಕಲ್ಪನೆಯಲ್ಲಿ ಅಭಿವ್ಯಕ್ತವಾಗಿರುವಂತೆ "**ಏಕಂ ಸದ್ವಿಪ್ರಾ ಬಹುಧಾ ವದಂತಿ**" ಎಂಬುದಕ್ಕೆ ಏಕಮಾತ್ರವಾಗಿರುವುದಕ್ಕೆ ಕವಿಗಳು ಅನೇಕ ಹೆಸರುಗಳನ್ನು ಕೊಡುತ್ತಾರೆ. ಉಪನಿಷತ್ತಿನ ಸಂಪೂರ್ಣ ಬೋಧನೆಯ ಮೂಲೋದ್ದೇಶವು ಈಗಾಗಲೇ ಹುದುಗಿರುವ ರತ್ನದಂತೆ ಸ್ಥಾಪಿಸಲಾಗಿದೆ. ಈ ಬೋಧನೆಯನ್ನು ಸಂಪೂರ್ಣವಾಗಿ ಗ್ರಹಿಸಿದಾಗ, ಎಲ್ಲವೂ ನಾನತ್ವವೆಂದು ಸಮರ್ಥಿಸುತ್ತದೆ. ಪರಿಣಾಮವಾಗಿ ಆಕಾಶದಲ್ಲಿ ಎಲ್ಲದರ ಸಾಮೀಪ್ಯ, ಸಕಾಲದ ಎಲ್ಲಾ ಅನುಪೂರ್ವಿ (ಅನುಕ್ರಮ), ಎಲ್ಲಾ ಕಾರಣ ಹಾಗೂ ಪರಿಣಾಮಗಳ ಸಂಬಂಧ, ಎಲ್ಲಾ ವಿಷಯ ಹಾಗೂ ವಸ್ತುವಿನ ಪರಸ್ಪರಾವಲಂಬನೆಯು, ವದಂತಿ ಎಂಬುದರ ಮೇಲೆ ಮಾತ್ರವಿದೆ ಅಥವಾ ಅನಂತರ ಹೇಳಿದಂತೆ, "ಕೇವಲ ವಿಷಯ ವಾಚಾರಣಭಾನ, ಆ ಐಕ್ಯತೆ ಮಾತ್ರವೇ ಪೂರ್ಣಜ್ಞಾನದಲ್ಲಿರುವ ಸತ್ಯ. ಉಪನಿಷತ್ತಿನ ಪ್ರಮುಖ ಬೋಧನೆ ಎಂದರೆ ಆತ್ಮವೇ, ಆತ್ಮ ಸತ್ಯತೆಯಾಗಿದೆ, ಅದರ ಹತ್ತಿರ ಬೇರಾವುದೂ ಇಲ್ಲ, ಆದುದರಿಂದ ಆತ್ಮಜ್ಞಾನದಿಂದ ಎಲ್ಲವೂ ತಿಳಿಯುತ್ತದೆ. ಈ ದೃಷ್ಟ್ಯಾಂಶದಿಂದ ಆತ್ಮದಾಚೆಗೆ ವಿಶ್ವವಿಲ್ಲ. ಆದರೆ ಈ ತತ್ತ್ವಜಿಜ್ಞಾಸೆಯ ಔನ್ನತ್ಯದ ಕಲ್ಪನೆಯನ್ನು ನಿಷೇಧಿಸಿ ಅದರ ಸಮ್ಮುಖದಲ್ಲಿ ವಿಶ್ವಸತ್ಯದ ಅಸ್ತಿತ್ವವನ್ನು ಬೋಧಿಸುವ ಅನುಭವಾತ್ಮಕ ಜ್ಞಾನವನ್ನು ಸಮರ್ಥಿಸುತ್ತದೆ. ಅದು ವಿಶ್ವದ ಸತ್ಯತೆಯನ್ನು ಅನುಮೋದಿಸಲು ಅವಶ್ಯಕವಾದುದು ಮತ್ತು ವಿಶ್ವದ ಅಸ್ತಿತ್ವವನ್ನು ಆತ್ಮದೊಂದಿಗೆ ಸಮರ್ಥಿಸುವ ಆದರ್ಶಾತ್ಮಕ ತತ್ತ್ವದ ಏಕಮಾತ್ರ ಸತ್ಯತೆಯೊಂದಿಗೆ ರಾಜಿ ಮಾಡಿಕೊಂಡರೂ ಸತ್ಯವು ಆತ್ಮವೇ ಆಗಿರುತ್ತದೆ. ಉಪನಿಷತ್ತಿನ ದೃಷ್ಟಿಯಲ್ಲಿ ಬ್ರಹ್ಮವು ಏಕಮಾತ್ರ ಸತ್ಯತೆ; ಎಂದರೆ ಬ್ರಹ್ಮನಿಂದಾಚೆಗೆ ಭ್ರಾಮಕ ವಸ್ತುಗಳಿವೆ ಎಂದು ಅರ್ಥವಲ್ಲ. ಬ್ರಹ್ಮನ ಸತ್ಯತೆಯಲ್ಲಿ ಎಲ್ಲಾ ವ್ಯಾಪಕ ಮಹತ್ವವನ್ನು ಹೊಂದಿರುವುದರಿಂದ ಪ್ರತಿಯೊಂದೂ ಸತ್ಯ, ಅಸತ್ಯವೆಂಬುದೇ ಇಲ್ಲ. ಬ್ರಹ್ಮದಾಚೆಗೆ ಯಾವುದೂ ಇರಲಾಗದು. ಪ್ರತಿಯೊಂದೂ ಎಲ್ಲಾ ವ್ಯಾಪಕ ಆತ್ಮ ಅಥವಾ ಬ್ರಹ್ಮದಲ್ಲಿದೆ. ಯಾಜ್ಞವಲ್ಕ್ಯರ ನೇತಿ-ನೇತಿಯೂ ಸಹಾ ಇಲ್ಲಿರುವುದರ ಎಲ್ಲದರಲ್ಲಿಯೂ ಆತ್ಮನ ಭೇದವನ್ನು ಸರಳವಾಗಿ ಸೂಚಿಸುತ್ತದೆ ಮತ್ತು ಸಾಮಾನ್ಯವಾಗಿ ಭಾವಿಸಿರುವ ಅದರಿಂದ ಎಲ್ಲವನ್ನೂ ಬಹಿಷ್ಕರಿಸುವ ಯಾವುದೇ ಜ್ಞಾನವನ್ನು ತಿಳಿಸುವುದಿಲ್ಲ. ಉಪನಿಷತ್ತಿನ ಬ್ರಹ್ಮಕ್ಕೆ ಯಾವುದೇ ರೀತಿಯ ವಿರೋಧವಿಲ್ಲ ಮತ್ತು ಹಾಗಾಗಿ ಶುದ್ಧತೆ ಅಥವಾ ಸತ್ಯತೆಯನ್ನು ಸಂರಕ್ಷಿಸುವ ಯಾವುದನ್ನಾದರೂ ಬಹಿಷ್ಕರಿಸುವ ಅಗತ್ಯವಿಲ್ಲ. ಆದುದರಿಂದ "ನೇತಿ-ನೇತಿ"ಯು ಸತ್ಯತೆಯ ಅಸ್ತಿತ್ವವನ್ನು ತಿರಸ್ಕರಿಸುವುದಿಲ್ಲ. ಅದು ಸತ್ಯತೆಯ ಅನುಭವಾತ್ಮಕ ವೈಶಿಷ್ಟ್ಯಗಳನ್ನೆಲ್ಲಾ ನಿರಾಕರಿಸುತ್ತದೆ. ಅದು ಸತ್ಯತೆಯು ಏನೋ ಒಂದು ಅನುಭವಾತ್ಮಕದಿಂದ ಭಿನ್ನವಾದುದು ಮತ್ತು ಅನನ್ಯವಾದುದೆಂದು ಮಾತ್ರ ಸೂಚಿಸುತ್ತದೆ. ಆರ್.ಇ.ಹ್ಯೂಮ್‌ರ ಪ್ರಕಾರ ಸಂಪೂರ್ಣ ಸರ್ವದೇವಾತ್ಮಕವಾದ ಉಪನಿಷತ್ತಿನಲ್ಲಿ ಆತ್ಮ ಸಿದ್ಧಾಂತ ಮತ್ತು ಬ್ರಹ್ಮ ಸಿದ್ಧಾಂತವು ವಿಲೀನಗೊಂಡಿದೆ. ಅವರು ಅದನ್ನು ಅರಿವುಳ್ಳ ಏಕತತ್ತ್ವವಾದ (ಅದ್ವೈತ) ಎಂದು ಕರೆದಿದ್ದಾರೆ. "ಸಾಮಾನ್ಯವಾಗಿ ಅರಿವುಳ್ಳ ಅದ್ವೈತವೆಂದು ಕರೆದಿರಬಹುದು, ಆದರೂ ಉಪನಿಷತ್ತಿನಲ್ಲಿ ಅತ್ಯಂತ ವಿವಿಧ ರೀತಿಗಳ ತತ್ತ್ವಜ್ಞಾನವನ್ನು ತೋರಿಸಲಾಗಿದೆ ಎಂದು ನಿರೂಪಿಸಲಾಗಿದೆ. ಅದ್ವೈತವು ಅದರ ಅತ್ಯಂತ ಪ್ರಚಲಿತ ರೀತಿ ಮತ್ತು ಅದರ ಪ್ರಧಾನ ಪರಂಪರೆಯನ್ನು ಮುಂದುವರೆಸುತ್ತದೆ. ಆದರೂ ಅದ್ವೈತದಂತೆ, ಅದು ಅಲ್ಪಸ್ವಲ್ಪ ಪಶ್ಚಿಮದ ಅದ್ವೈತ, ಇಲ್ಲವೇ ವಿಜ್ಞಾನವನ್ನು ಆಧರಿಸಿದ ಅದ್ವೈತವಾಗಿದೆ.

ಉಪನಿಷತ್ತಿನ ಸರ್ವಾಂಗದಲ್ಲಿ ಹರಿಯುತ್ತಿರುವ ಮೂಲ ಚಿಂತನಾಶಕ್ತಿ ಎಂದರೆ ಏಕಮಾತ್ರ ಸತ್ಯತೆಯ ಬ್ರಹ್ಮ ಅಥವಾ ಆತ್ಮ. ವಿಶ್ವದ ಸತ್ಯತೆಯನ್ನು ಒಪ್ಪಿಕೊಂಡಿದ್ದರೂ, ವಿವಿಧ ವಿಶ್ವವು ಬ್ರಹ್ಮನಿಂದ ಬೇರೆಯಲ್ಲ ಎಂಬುದನ್ನು ಸಮರ್ಥಿಸುವ ಉದ್ದೇಶವಿದೆ. ಆದರೂ ಬ್ರಹ್ಮವು ಅಂತರ್ಗತ, ಹಾಗೆಯೇ ಶ್ರೇಷ್ಠವಾಗಿರುವುದು. "ಅದು ಎಲ್ಲದರ ಆಂತರ್ಯ ಮತ್ತು ಎಲ್ಲದರ ಬಾಹ್ಯವಾಗಿರುವುದು. "ಋಗ್ವೇದವು ಬ್ರಹ್ಮವು ಸಂಪೂರ್ಣ ವಿಶ್ವವನ್ನು ಆವರಿಸುತ್ತದೆ ಮತ್ತು ಅತ್ಯತಿಷ್ಠ ದಶಾಂಗುಲವಾಗಿ ಅತೀತ-ವಾಗಿರುತ್ತದೆ" ಎಂದು ಹೇಳುತ್ತದೆ. ಉಪನಿಷತ್ತು "ತಿಳಿದಿರುವುದಕ್ಕಿಂತಲೂ ಹೆಚ್ಚು ಮತ್ತು ತಿಳಿಯದಿರುವುದಕ್ಕಿಂತಲೂ ಹೆಚ್ಚು" ಎಂದು ಘೋಷಿಸುತ್ತದೆ.

ವಂದನೆಗಳೊಂದಿಗೆ
**ಪ್ರಕಾಶಕರು**



# ಉಪೋದ್ಘಾತ

ಸನ್ಮಾನ್ಯರೇ,

ನಮ್ಮ ಪ್ರತಿಷ್ಠಾನದ ವತಿಯಿಂದ ಪ್ರಪ್ರಥಮವಾಗಿ ಕರ್ನಾಟಕ ಭಾಷೆಯಲ್ಲಿ "108 ಉಪನಿಷತ್ತು" ಅದರ ಸಂಪೂರ್ಣ ಸಮಗ್ರ ಮೂಲಮಂತ್ರವನ್ನೊಳಗೊಂಡ ಅರ್ಥಪೂರ್ಣ ಭಾವಾರ್ಥವನ್ನು ಹೊಂದಿರುವ ಗ್ರಂಥವನ್ನು ಪ್ರಕಟಿಸಿರುವುದು ನಮಗೆ ಗರ್ವ ಕಾರಣವಾಗಿದೆ. ಇದು ಕೇವಲ ನಮ್ಮ ಸಾಧನೆಯಲ್ಲ. ಇದಕ್ಕೆ ಭಗವಂತನೇ ಪ್ರೇರಣೆ ಬುಧ ಜನರಾದ ನಿಮ್ಮ ಹಾರೈಕೆಯೇ ಶ್ರೀರಕ್ಷೆ. ನಮ್ಮ ಕೈಂಕರ್ಯ ಕೇವಲ ನಮ್ಮ ಸಂತಸವನ್ನು ತಮ್ಮಲ್ಲಿ ಹಂಚಿಕೊಂಡು ಈ ಕೃತಿಯನ್ನು ನಿಮಗೆ ಅರ್ಪಣೆ ಮಾಡುವುದಷ್ಟೇ ಕೆಲಸ.

ಉಪನಿಷತ್ತುಗಳು ವೇದಾಂತಗಳು ಅಂದರೆ ವೇದದ ಅಂತ್ಯಗಳು. ವೇದಗಳ ರಹಸ್ಯಾರ್ಥವನ್ನು ಅರಿಯಲು ಆಸಕ್ತರಾದವರಿಗಾಗಿ ಹೊಂದಿಸಿದ ಆತ್ಮ ವಿಚಾರಗ್ರಂಥ, ಇದು ಸತ್ಯ ಜ್ಞಾನಗಳ ರಹಸ್ಯ; ನೆರೆಯ ಭವ್ಯ ಮಂದಿರ. ಇಂತಹ ವೇದಾಂತವಾದ ಉಪನಿಷತ್ತುಗಳು ಸಂಖ್ಯೆ ಅನೇಕ ಸಹಸ್ರಗಳು ಎಂಬುದು ಅಭಿಜ್ಞರ ಮಾತು. ಆದರೆ ಶ್ರೀರಾಮಚಂದ್ರನು ತನ್ನ ಆಪ್ತ ಸಚಿವನೂ, ನೆಚ್ಚಿನ ಭಕ್ತಾ-ಗ್ರೇಸರನಾದ ಹನುಮಂತನಿಗೆ ಉಪದೇಶಿಸಿದ "**108 ಉಪನಿಷತ್ತು**"ಗಳೇ ದೈವಮಾನ್ಯ ಎಂಬುದು ಲೋಕಾರೂಢಿ. ಕಾಲಾನುಕ್ರಮೇಣ ತ್ರಿಮತಸ್ಥ ಮಾನ್ಯರು ಒಮ್ಮತದಿಂದ ಕೇವಲ 10 ಉಪನಿಷತ್ತುಗಳನ್ನಷ್ಟೇ ಪರಿಗಣನೆಗೆ ತೆಗೆದುಕೊಂಡರು. ಇನ್ನುಳಿದವುಗಳು ಹಲವಾರು ಕಾರಣಗಳಿಂದ ಗಣನೆಗೆ ಬರಲಿಲ್ಲ. ಇವುಗಳು ಯಾವುವು ಎಂದೂ ಸಹ ಅನೇಕರಿಗೆ ತಿಳಿದಿಲ್ಲ. ಹೀಗೆ ಹೆಚ್ಚು ಕಡಿಮೆ ನಿಗೂಢವಾಗಿಯೇ ಉಳಿದುಹೋದ ಉಪನಿಷತ್ತುಗಳು. ಶಾಶ್ವತವಾಗಿ ಜನಮಾನಸದಿಂದ ಅಳಿಸಿ ಹೋಗದಂತೆ ತಡೆಯಲು ಇದರ ಸಂಪೂರ್ಣ ತಿರುಳನ್ನು ಪಂಡಿತ ಪಾಮರರ ಅವಗಾಹನೆಗೆ ತರಲು ಇಚ್ಛಿಸಿ ನಾವು ಈ ಮೂಲಕ ಅನೇಕ ಪ್ರಾಚೀನ ಗ್ರಂಥಗಳು ಆಯ್ದಂತಹ ಈ ಪರಿಪೂರ್ಣ ಕೃತಿಯನ್ನು ಕನ್ನಡೀಕರಿಸಿ ನಿಮಗೆ ಅರ್ಪಿಸಿದ್ದೇವೆ. ತಾವು ಇದನ್ನು ತುಂಬು ಹೃದಯದಿಂದ ಸ್ವೀಕರಿಸಿ, ಹರಸಿ.

ಪ್ರಥಮ ಪ್ರಯತ್ನ ಇದಾದ್ದರಿಂದ ಹಲವು ಲೋಪದೋಷಗಳಿರಬಹುದು. "**ಹಂಸಕ್ಷೀರನ್ಯಾಯ**"-ದಂತೆ ಇದನ್ನು ಪರಿಗಣಿಸಬೇಕೆಂದು ಕೋರುತ್ತೇವೆ. ತಪ್ಪುಗಳನ್ನು ತಿಳಿಸಿದಲ್ಲಿ ತಿದ್ದುಕೊಂಡು ಮುಂದಿನ ಮುದ್ರಣದಲ್ಲಿ ಅದನ್ನು ಸರಿಪಡಿಸುತ್ತೇವೆ. ಸಹೃದಯರ ಮಾರ್ಗದರ್ಶನವೇ ನಮಗೆ ಶ್ರೀರಕ್ಷೆ. ಯಾವುದೇ ರಾಗದ್ವೇಷವಿಲ್ಲದೆ ಯಥಾರ್ಥವಾಗಿ ಉನ್ನತ ಧ್ಯೇಯದಿಂದೊಡಗೂಡಿ ಈ ಗ್ರಂಥವನ್ನು ನಿಮಗೆ ಅರ್ಪಿಸಿದ್ದೇವೆ. ನಿಮಗೆ ಒಪ್ಪಿಗೆಯಾದಲ್ಲಿ ನಮ್ಮ ಶ್ರಮ ಸಾರ್ಥಕ. ನಮ್ಮ ಮುಂದಿನ ನಡಿಗೆಗೆ ಅದು ಮಾರ್ಗಸೂಚಿ.

ಈ ಗ್ರಂಥದ ಎಲ್ಲ ಹಂತಗಳಲ್ಲಿಯೂ ನಾರಾಯಣ ಸ್ವರೂಪಿಗಳಾದ ಅನೇಕ ಮಹನೀಯರು ಸಹಕಾರ ನೀಡಿದ್ದಾರೆ. ಅವರಿಗೆ ನಮ್ಮ ನಮಃ ಸುಮಾಂಜಲಿ. ಕಲಿಯುಗ ಪ್ರತ್ಯಕ್ಷ ದೈವವಾದ ಶ್ರೀಶ್ರೀನಿವಾಸನು ನಮ್ಮೆಲ್ಲರನ್ನು ಸರ್ವರನ್ನೂ ಸಲಹಲಿ.

ಬುಧಜನ ವಿಧೇಯ

**ಉ|| ವೇ|| ಭಾರ್ಗವ ನರಸಿಂಹ**

**ಪ್ರಧಾನಾಚಾರ್ಯರು**

## ಕೃತಜ್ಞತಾ ಪೂರ್ವಕ ಸಂಸ್ಮರಣೆಗಳು

ತ್ರೇತಾಯುಗ ಅವತಾರಿ ಶ್ರೀನೃಸಿಂಹನಿಗೆ, ಕಲಿಯುಗ ಪ್ರತ್ಯಕ್ಷ ದೈವ ಶ್ರೀ ವೇಂಕಟೇಶ್ವರನಿಗೆ, ಶ್ರೀವಿದ್ಯಾಗಣಪನಿಗೆ ಇವರ ಕೃಪಾಪೂರ್ವಕ ಆಶೀರ್ವಾದಗಳಿಗೆ.

ಶ್ರೀಮತಿ ಲಲಿತಾ ಶಾಸ್ತ್ರಿ, ಬೆಂಗಳೂರು, ಶ್ರೀ ಸೂರ್ಯನಾರಾಯಣ ಶಾಸ್ತ್ರಿ, ಅನಂತಪುರ, ಶ್ರೀಗೋವಿಂದ ಪ್ರಕಾಶ ಘನಪಾಟಿ, ಬೆಂಗಳೂರು, ಶ್ರೀ ಯಲಮೇಲಿ ಪುಷ್ಪಹಾಸ ಬಾಲಕೃಷ್ಣ, ಶ್ರೀಮತಿ ಸಾವಿತ್ರಿ ಭಾಸ್ಕರ್, ಶ್ರೀ ವಿದ್ವಾನ್ ಗರ್ರೇ ಸತ್ಯನಾರಾಯಣ ಗುಪ್ತ, ಶ್ರೀಮತಿ ಮಾಲತಿ, ಶ್ರೀ ಮುರಳಿ (D.T.P.), ಶ್ರೀ ವೆಂಕಟೇಶ (ಮುದ್ರಕರು) ಶ್ರೀ ಚಂದ್ರ (COLOURIST) ಕಲಾವಿದರು, (ಮುಖಪುಟ ಹಾಗೂ ಒಳರಕ್ಷಾಪುಟ), ಶ್ರೀ ಶರವೂರು ಸುಬ್ರಹ್ಮಣ್ಯ, ವಿನ್ಯಾಸ, ಕರಡು ಪ್ರತಿಯ ತಿದ್ದುಪಡಿ ಮಾಡಿದ ಶ್ರೀಮತಿ ವಿಜಯಲಕ್ಷ್ಮೀ ಲಕ್ಷ್ಮೀನರಸಿಂಹ, ತಿರುಮಲ ತಿರುಪತಿ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ, ನನ್ನ ಧರ್ಮಪತ್ನಿ ಶ್ರೀಮತಿ ಪ್ರೇಮಾಮೂರ್ತಿ ಇವರ ತುಂಬು ಸಹಕಾರಕ್ಕೆ-

ಶ್ರೀ ಬಿ. ಚಂದ್ರಶೇಖರ ಐತಾಳ್, ಲೆಕ್ಕಪರಿಶೋಧಕರು, ಶ್ರೀಮತಿ ಮೈಲಾರಯ್ಯ ಮಾಲತಿ, ಶ್ರೀ ಶ್ರೀನಿವಾಸ ಹುಚ್ಚಯ್ಯ, ಶ್ರೀಮತಿ ಮಾಲತಿ, ಶ್ರೀ ಮುರಳಿ, ಶ್ರೀ ಪಾರನಂದಿ ಸುದರ್ಶನ್, ಶ್ರೀವ್ಯಾಸಕೃಷ್ಣ, ಶ್ರೀ ಸಂತೋಷ ಹೆಗ್ಗಡೆ, ಶ್ರೀಯುತ ಬಿಳಿಗಿರಿವಾಸನ್, ಪ್ರಾಧ್ಯಾಪಕರು, ವಿಜಯ ಕಾಲೇಜು, ಹಾಗೂ ಈ ಗ್ರಂಥ ಹೊರಬರಲು ಪ್ರತ್ಯಕ್ಷ-ಪರೋಕ್ಷ ಕಾರಣರಾದ ಎಲ್ಲ ಮಹಾನ್ ಆಸ್ತಿಗಳಿಗೂ

ಶ್ರೀ ಶ್ರೀನಿವಾಸನ ಮಂಗಳಾಶಾಸನಗಳು
ಇತಿ ಭಾಗವತ ಸೇವಾ ಪರಮಾಣು

**ಉ|| ವೇ || ಪ್ರ. ಭಾರ್ಗವನರಸಿಂಹ**
ಪ್ರಧಾನಾ ಆಚಾರ್ಯರು, ಸಂಸ್ಥಾಪಕ ಕಾರ್ಯದರ್ಶಿ
ತಿರುಮಲ ತಿರುಪತಿ ಪ್ರತಿಷ್ಠಾನಂ (ನೋಂ)
ಬೆಂಗಳೂರು, ಕರ್ನಾಟಕ



# ಮಹಾವಾಕ್ಯ ಚತುಷ್ಟಯಂ

## 1. "ಪ್ರಜ್ಞಾನಂ ಬ್ರಹ್ಮ"

(ಋಗ್ವೇದ ಐತರೇಯೋಪನಿಷತ್ತು, ಲಕ್ಷಣ ವಾಕ್ಯ)

**ಶಾಂತಿ ಮಂತ್ರ॥ ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ - ಮನೋ ಮೇ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಆಣೀಸ್ಥಃ - ಶ್ರುತಂ ಮೇ ಮಾ ಪ್ರಹಸೀಃ ಅನೇನಾಧಿತೇನ ಅಹೋರಾತ್ರಾನ್ ನಂದಧಾಮಿ - ಋತಂ ವದಿಷ್ಯಾಮಿ - ಸತ್ಯಂ ವದಿಷ್ಯಾಮಿ - ತನ್ಮಾಮವತು - ತದ್ವಕ್ತಾರಮವತು - ಅವತುಮಾಂ, ಅವತು ವಕ್ತಾರಂ.**

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಓಂ ಯೇನೇಕ್ಷತೇ ಶೃಣೋತೀದಂ, ಜಿಘ್ರತಿ ವ್ಯಾಕರೋತಿ ಚ ।**
**ಸ್ವಾದ್ವಸ್ವಾದು ವಿಜಾನಾತಿ, ತತ್ ಪ್ರಜ್ಞಾನಮುದೀರಿತಮ್ ॥**

ತಾ: ಪರಬ್ರಹ್ಮನನ್ನು ನೋಡುತ್ತ, ಕೇಳುತ್ತ, ವಾಸನೆ ನೋಡುತ್ತ(ಆಘ್ರಾಣಿಸುತ್ತ), ವಿಸ್ತರಿಸುತ್ತ (ಅನುಭವಿಸುತ್ತಾ), ಒಳ್ಳೆಯದು, ಕೆಟ್ಟದ್ದನ್ನು ಗ್ರಹಿಸುವುದೇ ಪ್ರಜ್ಞಾನವೆಂದು ಹೇಳಲಾಗುತ್ತದೆ.

**ಶ್ಲೋ॥ ಚತುರ್ಮುಖೇಂದ್ರದೇವೇಷು, ಮನುಷ್ಯಾಶ್ವಗವಾದಿಷು ।**
**ಚೈತನ್ಯಮೇಕಂ ಬ್ರಹ್ಮಾತಃ, ಪ್ರಜ್ಞಾನಂ ಬ್ರಹ್ಮಮಯ್ಯಪಿ ॥**

ತಾ: ಬ್ರಹ್ಮೇಂದ್ರಾದಿದೇವತೆಗಳಲ್ಲಿಯೂ, ಮಾನವರು, ಕುದುರೆಗಳು, ಗೋವುಗಳು ಮುಂತಾದವು-ಗಳಲ್ಲಿಯೂ, ಬ್ರಹ್ಮಸ್ವರೂಪವಾದ ಯಾವ ಚೈತನ್ಯವಿರುವುದೋ ಅಂತಹ ಪ್ರಜ್ಞಾನವಾದ ಬ್ರಹ್ಮವೇ ನನ್ನಲ್ಲಿಯೂ ಇರುವುದು.

## 2. "ಅಹಂ ಬ್ರಹ್ಮಾಽಸ್ಮಿ"

(ಯಜುರ್ವೇದ, ಬೃಹದಾರಣ್ಯಕೋಪನಿಷತ್ತು, ಸ್ವಾನುಭವ ವಚನ)

**ಶ್ಲೋ॥ ಪರಿಪೂರ್ಣಃ ಪರಾತ್ಮಾಽಸ್ಮಿನ್, ದೇಹೇ ವಿದ್ಯಾಧಿಕಾರಿಣಿ ।**
**ಬುದ್ಧೇಸ್ಸಾಕ್ಷಿತಯಾ ಸ್ಥಿತ್ವಾ, ಸ್ಫುರನ್ನಹಮಿತೀರ್ಯತೇ ॥**

ತಾ: ಈ ಶರೀರದಲ್ಲಿ ಪರಿಪೂರ್ಣನಾದ ಪರಮಾತ್ಮನು ಬುದ್ಧಿಗೆ ಸಾಕ್ಷೀಭೂತನಾಗಿದ್ದುಕೊಂಡು ಪ್ರಕಾಶಿಸುತ್ತಿರುವವನಾಗಿ 'ನಾನು' ಎಂದು ಕರೆಸಲ್ಪಡುತ್ತಾನೆ.

**ಶ್ಲೋ ॥ ಸ್ವತಃ ಪೂರ್ಣಃ ಪರಾತ್ಮಾಽತ್ರ, ಬ್ರಹ್ಮಶಬ್ದೇನ ವರ್ಣಿತಃ ।**
**ಅಸ್ಮೀತ್ಯೈಕಪರಾಮರ್ಶಃ, ತೇನ ಬ್ರಹ್ಮ ಭವಾಮ್ಯಹಮ್ ॥**

ತಾ: ಸ್ವತಃ ಸಿದ್ಧನಾಗಿ ಪರಿಪೂರ್ಣನಾಗಿ, ಆ ಪರಮಾತ್ಮನೇ ಬ್ರಹ್ಮಶಬ್ದದಿಂದ ವರ್ಣಿಸಲ್ಪಟ್ಟಿದ್ದಾನೆ. ಜೀವಬ್ರಹ್ಮರ ಏಕತೆಯೇ 'ಅಸ್ಮಿ' ಎನ್ನುವ ಶಬ್ದಕ್ಕೆ ಲಕ್ಷಣವಾದುದರಿಂದ ನಾನು ಆ ಬ್ರಹ್ಮಸ್ವರೂಪದಂತೆ ಆಗುತ್ತಿದ್ದೇನೆ.

## 3. "ತತ್ತ್ವಮಸಿ"

### (ಸಾಮವೇದ, ಛಾಂದೋಗ್ಯೋಪನಿಷತ್ತು, ಉಪದೇಶ ವಾಕ್ಯ)

**ಶ್ಲೋ|| ಏಕಮೇವಾಽದ್ವಿತೀಯಂ, ಸನ್ನಾಮರೂಪವಿವರ್ಜಿತಮ್ ।**
**ಸೃಷ್ಟೇಃ ಪುರಾಽಧುನಾಽಪ್ಯಸ್ಯ, ತಾದೃಕ್ತ್ವಂ ತದಿತೀರ್ಯತೇ ||**

ತಾ: ಅನ್ಯ ಯಾವುದೂ ಇಲ್ಲದೇ ತಾನೊಂದೇ ನಾಮರೂಪರಹಿತವಾಗಿ ಸೃಷ್ಟಿಗೆ ಮೊದಲೇ ಅಂದರೆ ಪ್ರಳಯ ಕಾಲದಲ್ಲಿದ್ದ ಪರಬ್ರಹ್ಮನೇ, ತ್ವಂ (ನೀನು) ತತ್ (ಅದು) ಶಬ್ದವಾಚ್ಯವಾಗಿ ಹೇಳಲ್ಪಟ್ಟಿದೆ.

**ಶ್ಲೋ ||ಶ್ರೋತುರ್ದೇಹೇಂದ್ರಿಯಾತೀತಂ, ವಸ್ತುತಸ್ತ್ವಂ (ವಸ್ತ್ವತ್ರತ್ವಂ) ಪದೇರಿತಮ್ ।**
**ಏಕತಾಗ್ರಾಹ್ಯತೇಽಸೀತಿ, ತದೈಕ್ಯ ಮನುಭೂಯತಾಮ್ ||**

ತಾ: ಈ ಶರೀರಕ್ಕೆ, ಇಂದ್ರಿಯಗಳಿಗೆ, ಅತೀತವಾಗಿ, ವಸ್ತುತಃ 'ತ್ವಂ' ಪದವಾಚ್ಯವಾಗಿ ಬ್ರಹ್ಮಪದವು ಸರಿಹೊಂದುತ್ತದೆ. ಒಂದೇ ಕಡೆ ಗ್ರಹಿಸಲಾಗದಂತಹುದಾಗಿ, ಏಕತ್ವವನ್ನು ಗ್ರಹಿಸುವಂತಹುದು. ಅಸಿ ಎಂದು ಕರೆಯಲಾಗುತ್ತದೆ. ಅಂತಹ 'ತತ್' ಎನ್ನುವ ಶಬ್ದವಾಚ್ಯ-ದೊಡನೆ ಐಕ್ಯಹೊಂದಿದ ಬ್ರಹ್ಮವನ್ನು ಅನುಭವಿಸಿ ಆನಂದಪಡಬೇಕು.

## 4. "ಅಯಮಾತ್ಮಾಬ್ರಹ್ಮ"

### (ಅಥರ್ವಣ ವೇದ, ಮಾಂಡೂಕ್ಯೋಪನಿಷತ್ತು, ಸಾಕ್ಷಾತ್ಕಾರವಾಕ್ಯ)

**ಶ್ಲೋ|| ಸ್ವಪ್ರಕಾಶಾಽಪರೋಕ್ಷತ್ವಮ್, ಅಯಮಿತ್ಯುಕ್ತಿತೋ ಮತಮ್ ।**
**ಅಹಂಕಾರಾದಿ ದೇಹಾಂತಂ, ಪ್ರತ್ಯಗಾತ್ಮೇತಿ ಗೀಯತೇ ||**

ತಾ: ಸ್ವಯಂಪ್ರಕಾಶವಾಗಿ, ಅಪರೋಕ್ಷವಾಗಿ 'ಅಯಂ' ಶಬ್ದವಾಚ್ಯವಾಗಿ, ಅಹಂಕಾರಾದಿಗಳು. ದೇಹಾಂತರ್ಯಾಮಿಯಾದ, ಆ ಪರಬ್ರಹ್ಮವನ್ನು 'ಪ್ರತ್ಯಗಾತ್ಮ'ವೆಂದು ಹೇಳುತ್ತಾರೆ.

**ಶ್ಲೋ|| ದೃಶ್ಯಮಾನಸ್ಯ ಸರ್ವಸ್ಯ, ಜಗತಸ್ತತ್ತ್ವಮೀರ್ಯತೇ ।**
**ಬ್ರಹ್ಮಶಬ್ದೇನ ತದ್‌ಬ್ರಹ್ಮ, ಸ್ವಪ್ರಕಾಶಾತ್ಮರೂಪಕಮ್ ||**

ತಾ: ಜಗತ್ತಿನಲ್ಲಿ ಕಣ್ಣಿಗೆ ಕಾಣಿಸುವ ಸಮಸ್ತ ತತ್ತ್ವವು ಸ್ವಪ್ರಕಾಶಾತ್ಮರೂಪದಿಂದ ಬ್ರಹ್ಮವೆನ್ನುವ ಶಬ್ದದಿಂದಲೇ ಹೇಳಲ್ಪಡುತ್ತದೆ. ಸ್ವಯಂಪ್ರಕಾಶಾತ್ಮಕವಾದ ಆ ಬ್ರಹ್ಮಸ್ವರೂಪವೇ "ಪರಬ್ರಹ್ಮ"ವಾಗಿ ಹೇಳಲಾಗುತ್ತಿದೆ.(ತ್ತದೆ)

# 108 ಉಪನಿಷತ್ತುಗಳ ವಿವರಗಳು

## ಋಗ್ವೇದೀಯಗಳು - 10

1. ಐತರೇಯ 2. ಕೌಷಿತಕೀ ಬ್ರಾಹ್ಮಣ 3. ನಾದಬಿಂದು 4. ಆತ್ಮಬೋಧ 5. ನಿರ್ವಾಣ 6. ಮುದ್ಗಲ 7. ಅಕ್ಷಮಾಲಿಕಾ 8. ತ್ರಿಪುರ 9. ಸೌಭಾಗ್ಯಲಕ್ಷ್ಮಿ 10. ಬಹ್ವೃಚ

## ಶುಕ್ಲಯಜುರ್ವೇದೀಯಗಳು - 19

1. ಈಶಾವಾಸ್ಯ 2. ಬೃಹದಾರಣ್ಯಕ 3. ಜಾಬಾಲ 4. ಹಂಸ 5. ಪರಮಹಂಸ 6. ಸುಬಾಲ 7. ಮಂತ್ರಿಕ 8. ನಿರಾಲಂಬ 9. ತ್ರಿಶಿಖಿಬ್ರಾಹ್ಮಣ 10. ಮಂಡಲ ಬ್ರಾಹ್ಮಣ 11. ಅದ್ವಯತಾರಕ 12. ಪೈಂಗಲ 13. ಭಿಕ್ಷುಕ 14. ತುರೀಯಾತೀತ 15. ಅಧ್ಯಾತ್ಮ 16. ತಾರಸಾರ 17. ಯಾಜ್ಞವಲ್ಕ್ಯ 18. ಶಾಟ್ಯಾಯನಿ 19. ಮುಕ್ತಿಕೋಪನಿಷತ್

## ಕೃಷ್ಣಯಜುರ್ವೇದೀಯಗಳು - 32

1. ಕಠವಲ್ಲಿ 2.ತೈತ್ತಿರೀಯ 3.ಬ್ರಹ್ಮ 4. ಕೈವಲ್ಯ 5. ಶ್ವೇತಾಶ್ವತರ 6. ಗರ್ಭ 7. ನಾರಾಯಣ 8. ಅಮೃತಬಿಂದು 9. ಅಮೃತನಾದ 10. ಕಾಲಾಗ್ನಿರುದ್ರ 11.ಕ್ಷುರಿಕ 12. ಸರ್ವಸಾರ 13. ಶುಕರಹಸ್ಯ 14. ತೇಜೋಬಿಂದು 15. ಧ್ಯಾನಬಿಂದು 16. ಬ್ರಹ್ಮವಿದ್ಯ 17. ಯೋಗತತ್ತ್ವ 18. ದಕ್ಷಿಣಾಮೂರ್ತಿ 19. ಸ್ಕಂದ 20. ಶಾರೀರಕ 21. ಯೋಗಶಿಖಾ 22. ಏಕಾಕ್ಷರ 23. ಅಕ್ಷಿ 24. ಅವಧೂತ 25. ಕಠರುದ್ರ 26. ರುದ್ರಹೃದಯ 27. ಯೋಗಕುಂಡಲಿನಿ 28. ಪಂಚಬ್ರಹ್ಮ 29. ಪ್ರಾಣಾಗ್ನಿಹೋತ್ರ 30. ವರಾಹ 31. ಕಲಿಸಂತಾರಣ 32. ಸರಸ್ವತೀರಹಸ್ಯ

## ಸಾಮವೇದೀಯಗಳು - 16

1. ಕೇನ 2. ಛಾಂದೋಗ್ಯ 3. ಆರುಣಿಕ 4. ಮೈತ್ರಾಯಣಿ 5. ಮೈತ್ರೇಯ 6. ವಜ್ರಸೂಚಿಕ 7. ಯೋಗಚೂಡಾಮಣಿ 8. ವಾಸುದೇವ 9. ಮಹಾತ್ 10. ಸನ್ನ್ಯಾಸ 11. ಅವ್ಯಕ್ತ 12. ಕುಂಡಿಕ 13. ಸಾವಿತ್ರಿ 14. ರುದ್ರಾಕ್ಷಜಾಬಾಲ 15. ದರ್ಶನ 16. ಜಾಬಾಲಿ

## ಅಥರ್ವಣ ವೇದಗಳು - 31

1. ಪ್ರಶ್ನ 2. ಮುಂಡಕ 3. ಮಾಂಡೂಕ್ಯ 4. ಅಥರ್ವಶಿರ 5. ಅಥರ್ವಶಿಖ 6. ಬೃಹಜ್ಜಾಬಾಲ 7. ನೃಸಿಂಹತಾಪಿನಿ 8. ನಾರದ ಪರಿವ್ರಾಜಕ 9. ಸೀತೋಪನಿಷತ್ 10. ಮಹಾನಾರಾಯಣ 11. ರಾಮರಹಸ್ಯ 12. ರಾಮತಾಪಿನಿ 13. ಶಾಂಡಿಲ್ಯ 14. ಪರಮಹಂಸ ಪರಿವ್ರಾಜಕ 15. ಅನ್ನಪೂರ್ಣ 16. ಸೂರ್ಯ 17. ಆತ್ಮ 18. ಪಾಶುಪತಬ್ರಹ್ಮ 19. ಪರಬ್ರಹ್ಮ 20. ತ್ರಿಪುರತಾಪಿನಿ 21. ದೇವಿ 22. ಭಾವನ 23. ಭಸ್ಮಜಾಬಾಲ 24. ಗಣಪತಿ 25. ಮಹಾವಾಕ್ಯ 26. ಗೋಪಾಲತಾಪಿನಿ 27.ಕೃಷ್ಣ 28. ಹಯಗ್ರೀವ 29. ದತ್ತಾತ್ರೇಯ 30. ಗರುಡ

## ಸನ್ಯಾಸವನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್ತುಗಳು

1. ಆರುಣಿಕೋಪನಿಷತ್ 2. ಸನ್ಯಾಸೋಪನಿಷತ್ 3. ಕಠರುದ್ರೋಪನಿಷತ್ 4. ಕುಂಡಿ-ಕೋಪನಿಷತ್ 5. ಪರಮಹಂಸೋಪನಿಷತ್ 6. ಮೈತ್ರೇಯೋಪನಿಷತ್ 7. ಬ್ರಹ್ಮೋಪನಿಷತ್ 8. ಜಾಬಾಲೋಪನಿಷತ್ 9. ನಾರದಪರಿವ್ರಾಜಕೋಪನಿಷತ್ 10. ನಿರ್ವಾಣೋಪನಿಷತ್ 11. ಭಿಕ್ಷುಕೋಪನಿಷತ್ 12. ತುರೀಯಾತೀತೋಪನಿಷತ್ 13. ಪರಮಹಂಸಪರಿವ್ರಾಜಕೋಪನಿಷತ್ 14. ಪರಬ್ರಹ್ಮೋಪನಿಷತ್ 15. ಅವಧೂತೋಪನಿಷತ್ 16. ಯಾಜ್ಞವಲ್ಕ್ಯೋಪನಿಷತ್ 17. ಶಾಟ್ಯಾಯನೀಯೋಪನಿಷತ್.

## ಯೋಗವಿದ್ಯೆಯನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್‌ಗಳು

1. ಅದ್ವಯತಾರಕೋಪನಿಷತ್ 2. ಅಮೃತನಾದೋಪನಿಷತ್ 3. ಕ್ಷುರಿಕೋಪನಿಷತ್ 4. ತೇಜೋ-ಬಿಂದೂಪನಿಷತ್ 5. ತ್ರಿಶಿಖಿಬ್ರಹ್ಮೋಪನಿಷತ್ 6. ದರ್ಶನೋಪನಿಷತ್ 7. ಧ್ಯಾನಬಿಂದೂಪನಿಷತ್ 8. ನಾದಬಿಂದೂಪನಿಷತ್ 9. ಬ್ರಹ್ಮವಿದ್ಯೋಪನಿಷತ್ 10. ಮಂಡಲಬ್ರಾಹ್ಮಣೋಪನಿಷತ್ 11. ಯೋಗಕುಂಡಲ್ಯುಪನಿಷತ್ 12. ಯೋಗಚೂಡಾಮಣ್ಯುಪನಿಷತ್ 13. ಯೋಗತತ್ತ್ವೋಪನಿಷತ್ 14. ಯೋಗಶಿಖೋಪನಿಷತ್ 15. ವರಾಹೋಪನಿಷತ್ 16. ಶಾಂಡಿಲ್ಯೋಪನಿಷತ್ 17. ಹಂಸೋಪ-ನಿಷತ್ 18. ಅಮೃತಬಿಂದು 19. ಪಾಶುಪತಬ್ರಹ್ಮ 20. ಮಹಾವಾಕ್ಯ.

## ವೇದಾಂತ ವಿಜ್ಞಾನವನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್‌ಗಳು

1. ಅಕ್ಷ್ಯುಪನಿಷತ್ 2. ಅಧ್ಯಾತ್ಮೋಪನಿಷತ್ 3. ಅನ್ನಪೂರ್ಣೋಪನಿಷತ್ 4. ಆತ್ಮೋಪನಿಷತ್ 5. ಆತ್ಮಬೋಧೋಪನಿಷತ್ 6. ಏಕಾಕ್ಷರೋಪನಿಷತ್ 7. ಕೌಷಿತಕೀಬ್ರಾಹ್ಮಣೋಪನಿಷತ್ 8. ಗರ್ಭೋಪನಿಷತ್ 9. ನಿರಾಲಂಬೋಪನಿಷತ್ 10. ಪೈಂಗಲೋಪನಿಷತ್ 11. ಪ್ರಾಣಾಗ್ನಿಹೋತ್ರೋಪನಿಷತ್ 12. ಮಂತ್ರಿಕೋಪನಿಷತ್ 13. ಮಹೋಪನಿಷತ್ 14. ಮುಕ್ತಿಕೋಪನಿಷತ್ 15. ಮುದ್ಗಲೋಪನಿಷತ್ 16. ಮೈತ್ರಾಯಣ್ಯುಪನಿಷತ್ 17. ವಜ್ರಸೂಚಿಕೋಪನಿಷತ್ 18. ಶಾರೀರಕೋಪನಿಷತ್ 19. ಶುಕರಹಸ್ಯೋಪನಿಷತ್ 20. ಸರ್ವಸಾರೋಪನಿಷತ್ 21. ಸಾವಿತ್ರ್ಯುಪನಿಷತ್ 22. ಸುಬಾಲೋಪನಿಷತ್ 23. ಸೂರ್ಯೋಪನಿಷತ್ 24. ಸ್ಕಂದೋಪನಿಷತ್.

## ವೈಷ್ಣವ ಸಿದ್ಧಾಂತವನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್ತುಗಳು

1. ಅವ್ಯಕ್ತೋಪನಿಷತ್ 2. ಕಲಿಸಂತಾರಣೋಪನಿಷತ್ 3. ಕೃಷ್ಣೋಪನಿಷತ್ 4. ಗಾರುಡೋಪನಿಷತ್ 5. ಗೋಪಾಲತಾಪಿನ್ಯೋಪನಿಷತ್ 6. ತಾರಸಾರೋಪನಿಷತ್ 7. ಮಹಾನಾರಾಯಣೋಪನಿಷತ್ 8. ದತ್ತಾತ್ರೇಯೋಪನಿಷತ್ 9. ನಾರಾಯಣೋಪನಿಷತ್ 10. ನೃಸಿಂಹತಾಪಿನ್ಯುಪನಿಷತ್ 11.ರಾಮತಾಪಿನ್ಯುಪನಿಷತ್ 12. ರಾಮರಹಸ್ಯೋಪನಿಷತ್ 13. ವಾಸುದೇವೋಪನಿಷತ್ 14. ಹಯಗ್ರೀವೋಪನಿಷತ್

## ಶೈವ ಸಿದ್ಧಾಂತವನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್ತುಗಳು

1. ಅಕ್ಷಮಾಲಿಕೋಪನಿಷತ್ 2. ಅಥರ್ವಶಿರೋಪನಿಷತ್ 3. ಕಾಲಾಗ್ನಿರುದ್ರೋಪನಿಷತ್ 4. ಅಥರ್ವಶಿಖೋಪನಿಷತ್ 5. ಕೈವಲ್ಯೋಪನಿಷತ್ 6. ಗಣಪತ್ಯುಪನಿಷತ್ 7. ಜಾಬಾಲ್ಯುಪನಿಷತ್ 8. ದಕ್ಷಿಣಾಮೂರ್ತ್ಯುಪನಿಷತ್ 9. ಪಂಚಬ್ರಹ್ಮೋಪನಿಷತ್ 10. ಬೃಹಜ್ಜಾಬಾಲೋಪನಿಷತ್ 11. ಭಸ್ಮಜಾಬಾಲೋಪನಿಷತ್ 12. ರುದ್ರಹೃದಯೋಪನಿಷತ್ 13. ರುದ್ರಾಕ್ಷಜಾಬಾಲೋಪನಿಷತ್ 14. ಶ್ವೇತಾಶ್ವತರೋಪನಿಷತ್

## ಶಕ್ತಿ (ದೇವಿ) ಸಿದ್ಧಾಂತವನ್ನು ಪ್ರಧಾನವಾಗಿ ಬೋಧಿಸುವ ಉಪನಿಷತ್ತುಗಳು

1. ತ್ರಿಪುರೋಪನಿಷತ್ 2. ತ್ರಿಪುರತಾಪಿನ್ಯುಪನಿಷತ್ 3. ದೇವ್ಯುಪನಿಷತ್ 4. ಬಹ್ವೃಚೋಪ-ನಿಷತ್ 5. ಭಾವನೋಪನಿಷತ್ 6. ಸರಸ್ವತೀ ರಹಸ್ಯೋಪನಿಷತ್ 7. ಸೀತೋಪನಿಷತ್ 8. ಸೌಭಾಗ್ಯಲಕ್ಷ್ಮ್ಯುಪನಿಷತ್. (108 ಉಪನಿಷತ್ತುಗಳಿಗೆ ಸಂಬಂಧಿಸಿದ ಪೂರ್ಣ ವಿವರಗಳು, ಕ್ರಮಗಳು ಮುಕ್ತಿಕೋಪನಿಷತ್ತಿನಲ್ಲಿ ವಿವರವಾಗಿ ತಿಳಿಸಲಾಗಿದೆ)

# ಉಪನಿಷತ್ತುಗಳ ಪಂಚಶಾಂತಿ ಮಂತ್ರಗಳು

**(ಈ ಕೆಳಗೆ ತಿಳಿಸಿರುವ ಶಾಂತಿ ಮಂತ್ರಗಳನ್ನು ಆಯಾ ಉಪನಿಷತ್ತುಗಳ ಪ್ರಾರಂಭದಲ್ಲಿ ಕೊನೆಯಲ್ಲಿ ವಿಧಿಯಂತೆ ತಪ್ಪದೆ ಪಠಿಸಬೇಕು)**

## ಉಪನಿಷತ್ತುಗಳ ಶಾಂತಿ ಮಂತ್ರಗಳು

### 1. ಋಗ್ವೇದಾಂತರ್ಗತವಾದ (ಐತರೇಯಾದಿ) ಉಪನಿಷತ್ತುಗಳಿಗೆ

**ಓಂ ವಾಙ್ಮೇಮನಸಿ ಪ್ರತಿಷ್ಠಿತಾ – ಮನೋ ಮೇ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಅಣೀಸ್ಥಃ – ಶ್ರುತಂ ಮೇ ಮಾ ಪ್ರಹಾಸೀಃ ಅನೇನಾಧಿತೇನ ಅಹೋರಾತ್ರಾನ್ ಸಂದಧಾಮಿ – ಋತಂ ವದಿಷ್ಯಾಮಿ – ಸತ್ಯಂ ವದಿಷ್ಯಾಮಿ – ತನ್ಮಾಮವತು – ತದ್ವಕ್ತಾರಮವತು – ಅವತುಮಾಂ, ಅವತು ವಕ್ತಾರಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ॥**

ಪದ ವಿಭಾಗ: ಓಂ – ವಾಕ್ – ಮೇ – ಮನಸಿ – ಪ್ರತಿಷ್ಠಿತಾ – ಮನೋ – ಮೇ – ವಾಚಿ – ಪ್ರತಿಷ್ಠಿತಂ – ಆವಿಃ – ಆವೀಃ – ಮೇ – ಏಧಿ – ವೇದಸ್ಯ – ಮೇ – ಅಣಿ – ಸ್ಥಃ – ಶ್ರುತಂ – ಮೇ – ಮಾ – ಪ್ರಹಾಸೀಃ – ಅನೇನ – ಅಧೀತೇನ – ಅಹೋರಾತ್ರಾನ್ – ಸಂದಧಾಮಿ – ಋತಂ – ವದಿಷ್ಯಾಮಿ – ಸತ್ಯಂ – ವದಿಷ್ಯಾಮಿ – ತತ್ – ಮಾಂ – ಅವತು – ತತ್ – ವಕ್ತಾರಂ – ಅವತು – ಅವತು – ಮಾಂ – ಅವತು – ವಕ್ತಾರಂ.

ತಾ॥ ನನ್ನ ವಾಕ್ಕು ನಿರಂತರವಾಗಿ ಮನಸ್ಸಿನಲ್ಲಿ ಸ್ಥಿರವಾಗುವಂತಾಗಲೀ, ನನ್ನ ಮನಸ್ಸು ವಾಕ್ಕಿನಲ್ಲಿ ನೆಲಸುವಂತಾಗಲಿ. ಓ ಜ್ಯೋತಿಸ್ವರೂಪನಾದ ಪರಮಾತ್ಮನೇ! ನನ್ನ ಅಜ್ಞಾನವನ್ನು ಹೋಗಲಾಡಿಸಿ, ಜ್ಞಾನಪ್ರಕಾಶವುಂಟಾಗುವಂತೆ ಅನುಗ್ರಹಿಸು. ಓ ಮಹಾವಾಕ್ಕುಗಳೇ! ನನಗೆ ವಿಜ್ಞಾನ-ವನ್ನುಂಟು ಮಾಡಲು ಸಮರ್ಥರಾಗುವಂತವರಾಗಿ! ನನ್ನಿಂದ ಕೇಳಲ್ಪಟ್ಟ ಗ್ರಂಥವನ್ನು ಅದರ ಅರ್ಥವನ್ನು ಮರೆಯದಿರುವಂತಾಗಲಿ. ಅಧ್ಯಯನ ಮಾಡಿ ಮರೆತುಹೋಗುವಂತಾಗದಿರಲು ಗ್ರಂಥವನ್ನು ನಾನು ಹಗಲೂ ರಾತ್ರಿ ಅನುಸಂಧಾನ ಮಾಡುತ್ತಿರುವಂತಾಗಲಿ. ಯಥಾರ್ಥ ವಸ್ತುವಾಚಕ ಸತ್ಯವನ್ನು, ಮಾನಸಿಕ ಸತ್ಯವನ್ನು ಬಾಯಲ್ಲಿ ಹೇಳುತ್ತೇನೆ. ಆ ಪರಮಾತ್ಮ ನನ್ನನ್ನು ರಕ್ಷಿಸುವಂತಾಗಲಿ! ನನ್ನ ಗುರುವನ್ನು ರಕ್ಷಿಸುವಂತಾಗಲಿ! ತ್ರಿವಿಧತಾಪಗಳು ಶಾಂತಿಹೊಂದುವಂತಾಗಲಿ.

## 2. ಶುಕ್ಲಯಜುರ್ವೇದಾಂತರ್ಗತವಾದ (ಈಶಾವಾಸ್ಯಾದಿ)

**ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ**

**ಪದ ವಿಭಾಗ:** ಓಂ-ಪೂರ್ಣಂ-ಅದಃ-ಪೂರ್ಣಂ-ಇದಂ-ಪೂರ್ಣಾತ್-ಪೂರ್ಣಂ-ಉದಚ್ಯತೇ-ಪೂರ್ಣಸ್ಯ-ಪೂರ್ಣಂ-ಆದಾಯ-ಪೂರ್ಣಂ-ಏವ-ಅವಶಿಷ್ಯತೇ

ತಾ॥ ಈ ಅದು (ಬ್ರಹ್ಮ) ಸಂಪೂರ್ಣವಾದುದು. ಅದು ಕೂಡಾ ಸಂಪೂರ್ಣವೇ. ಪೂರ್ಣದಿಂದಲೇ ಪೂರ್ಣವು ಹುಟ್ಟುವುದು. ಪೂರ್ಣವನ್ನು ಪೂರ್ಣದಿಂದ ತೆಗೆದುಬಿಟ್ಟರೂ ಪೂರ್ಣವೇ ಉಳಿಯುತ್ತದೆ.

## 3. ಕೃಷ್ಣಯಜುರ್ವೇದವಾದ (ಕಠ, ತೈತ್ತಿರೀಯ) ಉಪನಿಷತ್ತುಗಳ ಶಾಂತಿ ಮಂತ್ರ!

**ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ ॥**

ತಾ॥ (ಗುರು ಶಿಷ್ಯರಿಗೆ) ನಮ್ಮನ್ನು ಆ ಪರಮಾತ್ಮ ರಕ್ಷಿಸುವಂತಾಗಲಿ! ನಮಗೆ ಪೋಷಣೆಯು ದೊರೆಯುವಂತಾಗಲಿ! ನಾವು ಕಲೆತು ವಿದ್ಯೆಗೆ ಸಾಮರ್ಥ್ಯವನ್ನು ಉಂಟುಮಾಡುವಂತಾಗಲಿ! ನಾವು ಕಲಿತಿರುವ ವಿದ್ಯೆಯು ತೇಜಸ್ವಂತವಾಗಲಿ! ನಾವು ಪರಸ್ಪರ ದ್ವೇಷಿಸದೆ ಇರುವಂತಾಗಲಿ! ತ್ರಿವಿಧತಾಪಗಳು ಶಾಂತಿ ಹೊಂದುವಂತಾಗಲಿ!

*(ಈ ಕೆಳಗೆ ತಿಳಿಸಿರುವ ಮಂತ್ರವು ತೈತ್ತಿರೀಯೋಪನಿಷತ್ತಿನಲ್ಲಿನ ಅನುವಾಕ ಆದ್ದರಿಂದ ಈ ಮಂತ್ರವನ್ನು ಸಹ ಶಾಂತಿ ಮಂತ್ರವಾಗಿ ಉಪನಿಷತ್ ಪಾಠದಲ್ಲಿ ಪಠಿಸುವ ಸಂಪ್ರದಾಯವು ಇದೆ)*

**ಓಂ. ಶಂನೋ ಮಿತ್ರಶ್ಶಂ ವರುಣಃ । ಶಂನೋ ಭವತ್ವರ್ಯಮಾ । ಶಂನ ಇಂದ್ರೋ ಬೃಹಸ್ಪತಿಃ । ಶಂನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ ತನ್ಮಾಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ । ಓಂ ಶಾಂತಿಃ ಶಾಂತಿಃ ಶಾಂತಿಃ ॥**

ತಾ॥ ಮಿತ್ರನನ್ನು, ವರುಣನನ್ನು, ಆರ್ಯನನ್ನು, ಇಂದ್ರನನ್ನು, ಬೃಹಸ್ಪತಿಯನ್ನು, ವಿಷ್ಣುವನ್ನು, ವೀರರು ಕ್ರಮವಾಗಿ ಪ್ರಾಣದಲ್ಲಿ, ಅಪಾನದಲ್ಲಿ, ನೇತ್ರದಲ್ಲಿ, ಬಲದಲ್ಲಿ, ವಾಗ್ಬುದ್ಧಿಗಳಲ್ಲಿ, ಪಾದಗಳಲ್ಲಿ, ಬ್ರಹ್ಮವಿದ್ಯಾ ಶ್ರವಣಧಾರಣಸಮರ್ಥವಾಗುವಂತೆ ನಮಗೆ ಅನುಕೂಲ ಮಾಡಿರಿ! ಪರಬ್ರಹ್ಮವೇ ನಮಸ್ಕಾರ! ವಾಯುದೇವಾ! ನಿನಗೆ ನಮಸ್ಕಾರ! ನೀನೇ ಪ್ರತ್ಯಕ್ಷ ಬ್ರಹ್ಮನಾಗಿರುವೆ (ಖಂಡಿತವಾಗಿ) ನೀನೇ ಪ್ರತ್ಯಕ್ಷಬ್ರಹ್ಮವೆಂದು ಹೇಳುತ್ತಿದ್ದೇನೆ.

ಅಪ್ರಯತ್ನ ಸತ್ಯವಾಗಿ ಬರುವ ವಾಕ್ಕಿನ ರೂಪವಾಗಿ ನಿನ್ನನ್ನೇ ಹೇಳುತ್ತಿದ್ದೇನೆ. ಆ ನೀನು ನನ್ನನ್ನು ರಕ್ಷಿಸುವಂತಾಗಲಿ. (ಆ ನೀನು) ಆಚಾರ್ಯನನ್ನು ರಕ್ಷಿಸುವಂತಾಗಲಿ! ನನ್ನನ್ನು ಕಾಪಾಡುವಂತಾಗಲಿ! (ಆ ನೀನು) ವಕ್ತನನ್ನು ರಕ್ಷಿಸುವಂತಹನಾಗಲಿ (ಓ ಪ್ರಣವ ಬ್ರಹ್ಮವೇ) ಆಧ್ಯಾತ್ಮಿಕ, ಆದಿಭೌತಿಕ, ಅಧಿದೈವಿಕಗಳಾದ ತಾಪತ್ರಯಗಳು ನಮಗೆ ಶಾಂತಿಯನ್ನುಂಟು ಮಾಡುವಂತಾಗಲಿ.

## 4. ಸಾಮವೇದಾಂತರ್ಗತವಾದ (ಛಾಂದೋಗ್ಯಾದಿ)

**ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋ ಬಲಮಿಂದ್ರಿಯಾಣಿಚ ಸರ್ವಾಣಿಃ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು; ತದಾತ್ಮನಿ: ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ಪದ ವಿಭಾಗ:** ಓಂ – ಆಪ್ಯಾಯಂತು – ಮಮ – ಅಂಗಾನಿ – ವಾಕ್ – ಪ್ರಾಣಃ – ಚಕ್ಷುಃ – ಶ್ರೋತ್ರಂ – ಅಥೋ – ಬಲಂ – ಇಂದ್ರಿಯಾಣಿ – ಚ – ಸರ್ವಾಣಿ – ಸರ್ವಂ – ಬ್ರಹ್ಮ – ಔಪನಿಷದಂ – ಮಾ – ಅಹಂ – ಬ್ರಹ್ಮ – ನಿರಾಕುರ್ಯಾಂ – ಮಾ – ಮಾ – ಬ್ರಹ್ಮ – ನಿರಾಕರೋತ್ – ಅನಿರಾಕರಣಂ – ಅಸ್ತು – ಅನಿರಾಕರಣಂ – ಮೇ – ಅಸ್ತು – ತತ್ – ಆತ್ಮನಿ – ನಿರತೇ – ಯೇ – ಉಪನಿಷತ್ಸು – ಧರ್ಮಾಃ – ತೇ – ಮಯಿ – ಸಂತು – ತೇ – ಮಯಿ – ಸಂತು.

ತಾ॥ ಉಪನಿಷತ್ತುಗಳಿಂದ ತಿಳಿಸಲ್ಪಟ್ಟ ಪ್ರತಿಪಾದಿತವಾದ ಬ್ರಹ್ಮವು, ನನ್ನ ಅಂಗಗಳಾದ, ವಾಕ್ಕು, ನೇತ್ರಗಳು, ಶ್ರೋತ್ರಗಳು, ಪ್ರಾಣಗಳು, ಬಲ, ಇಂದ್ರಿಯಗಳು, ಮುಂತಾದವುಗಳನ್ನು ರಕ್ಷಿಸುವಂತಾಗಲಿ. ಬ್ರಹ್ಮವು ನನ್ನನ್ನು ನಿರಾದರಣೆ ಮಾಡದಿರುವಂತಾಗಲಿ. ನನ್ನ ಬಗ್ಗೆ ಬ್ರಹ್ಮನಿಗೆ ಆದರವುಂಟಾಗುವಂತಾಗಲಿ. ನಾನು ಆತ್ಮಜ್ಞಾನನಿರತನಾಗುವಂತಾಗಲಿ. ಉಪನಿಷತ್ತುಗಳಲ್ಲಿ ಹೇಳಲಾಗಿರುವ ಧರ್ಮಗಳು ನನ್ನಲ್ಲಿ ಸ್ಥಿರವಾಗಿರುವಂತಾಗಲಿ. ತ್ರಿವಿಧತಾಪತ್ರಯಗಳು ಶಾಂತಿ ಹೊಂದುವಂತಾಗಲಿ.

**ಓಂ ಸಹನಾವವತು, ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ ॥ ಓಂ ಶಾಂತಿ ಶಾಂತಿ ಶಾಂತಿಃ ॥**

## 5. ಅಥರ್ವಣ ವೇದಾಂತರ್ಗತವಾದ (ಮಾಂಡೂಕ್ಯಾದಿ) ಉಪನಿಷತ್ತುಗಳ ಶಾಂತಿ ಮಂತ್ರಃ:-

**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈ -ಸ್ತುಷ್ಟುವಾಗ್‌ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಪದ ವಿಭಾಗ: ಓಂ - ಭದ್ರಂ - ಕರ್ಣೇಭಿಃ - ಶೃಣುಯಾಮ - ದೇವಾಃ - ಭದ್ರಂ - ಪಶ್ಯೇಮ - ಅಕ್ಷಭಿಃ - ಯಜತ್ರಾಃ - ಸ್ಥಿರೈಃ - ಅಂಗೈಃ - ತುಷ್ಟುವಾಗ್‌ಂಸಃ - ತನೂಭಿಃ - ವ್ಯಶೇಮ - ದೇವಹಿತಂ - ಯತ್ - ಆಯುಃ - ಸ್ವಸ್ತಿನಃ - ಇಂದ್ರಃ - ವೃದ್ಧಶ್ರವಾಃ - ಸ್ವಸ್ತಿ - ನಃ ಪೂಷಾ - ವಿಶ್ವ - ವೇದಾಃ - ಸ್ವಸ್ತಿ- ನಃ - ತಾರ್ಕ್ಷ್ಯಃ - ಅರಿಷ್ಟನೇಮಿಃ - ಸ್ವಸ್ತಿ - ನಃ - ಬೃಹಸ್ಪತಿಃ - ದಧಾತು.

ತಾ॥ ದೇವತೆಗಳೇ, ನಾವು (ಜ್ಞಾನ) ಪ್ರಕಾಶವಂತರಾಗಿ ಶುಭವಾದುದನ್ನೇ ಕಿವಿಗಳಿಂದ ಕೇಳುವಂತಾಗಲಿ. ಯಜನಶೀಲರಾಗಿದ್ದು ಶುಭವಾದುದನ್ನೇ ಕಣ್ಣುಗಳಿಂದ ನೋಡುವಂತಾಗಲಿ. ಶಕ್ತಿಯುತವಾದ ಅವಯವಗಳೊಂದಿಗೆ ಆರೋಗ್ಯವಾಗಿದ್ದು ನಿಮ್ಮನ್ನು ಸ್ತುತಿಸುವುದಕ್ಕಾಗಿ ನಮಗೆ ವಿಧಿಸಿರುವ ಆಯುಷ್ಕಾಲದವರೆಗೂ ಬದುಕಿರುವಂತಾಗಲಿ. ಪುರಾತನನು, ಪ್ರಸಿದ್ಧನೂ, ಅಧಿಕ ಕೀರ್ತಿಯುಳ್ಳವನು ಆದ ಇಂದ್ರನು ಸರ್ವವನ್ನೂ ತಿಳಿದವನಾದ (ಪೂಷಾ) ಸೂರ್ಯ, ಅಧಿಕ ವೇಗವನ್ನು ಹೊಂದಿದ ವಾಯುದೇವ, ನಮ್ಮಲ್ಲಿನ ಆಧ್ಯಾತ್ಮಿಕ ಸಂಪತ್ತನ್ನು ರಕ್ಷಿಸುವ ಬೃಹಸ್ಪತಿ, ಇವರೆಲ್ಲರೂ ನಮಗೆ ವಿಷಯವನ್ನು ಗ್ರಹಿಸುವಂತಹ ಬುದ್ಧಿಕೌಶಲ್ಯವನ್ನು, ಅವನ್ನು ಅನುಸರಿಸುವ (ಎದೆಗಾರಿಕೆಯನ್ನು) ನೀಡಿ ಅನುಗ್ರಹಿಸುವಂತಾಗಲಿ. ತ್ರಿವಿಧತಾಪಗಳು ಓಂ=ಪರಮಾತ್ಮನ ಅನುಗ್ರಹದಿಂದ ಶಾಂತಿ ಹೊಂದುವಂತಾಗಲಿ.





# ಈಶಾವಾಸ್ಯೋಪನಿಷತ್ - 1

## ವಾಜಸನೇಯ ಸಂಹಿತೋಪನಿಷತ್
## (ಶುಕ್ಲ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ ।**

**ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಮಂ.ಶ್ಲೋ.॥ ಓಂ ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಞ್ಜೀಥಾ ಮಾಗೃಧಃ ಕಸ್ಯಸ್ವಿದ್ ಧನಮ್ ॥ 1**

ತಾ॥ ಈ ಜಗತ್ತೆಲ್ಲವೂ ನಾಮರೂಪಕ್ರಿಯಾರಹಿತವಾದ ಈಶ್ವರ ಸ್ವರೂಪವಾಗಿ ಮಾತ್ರವೇ ನೋಡುವಂತೆ ಆಗಲಿ. ಇದರಲ್ಲಿನ ನಾಮಾಕೃತಿಕ್ರಿಯೆಗಳನ್ನು ಮನಸ್ಸಿನಿಂದ ತ್ಯಜಿಸಿ, ಸ್ವರೂಪ-ವೆನ್ನುವ ಭೋಜನವನ್ನು ಭುಜಿಸುವೆವು. ನಿನ್ನ ಧನವನ್ನಾಗಲೀ ಪರಧನವನ್ನಾಗಲೀ ಆಶಿಸುವುದಿಲ್ಲ. ವಿಶ್ವದಲ್ಲಿರುವ ಸಕಲವೂ ಈಶ್ವರನೇ ಎನ್ನುವ ನಿಶ್ಚಯ ಬುದ್ಧಿ ಇರುವಂತಾಗಲಿ.

**ಮಂ.ಶ್ಲೋ.॥ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ 2**

ತಾ॥ ಶಾಸ್ತ್ರ ಸಮ್ಮತವಾದ ಕರ್ಮಗಳನ್ನು ಮಾಡುವುದಕ್ಕಾಗಿ ಮಾತ್ರವೇ ಮಾನವನು ನೂರು ವರ್ಷಗಳ ಕಾಲ ಜೀವಿಸಬೇಕೆಂದು ಕೋರಿಕೊಳ್ಳಬೇಕು. ಜೀವನದ ಮೇಲೆ ಮಮಕಾರವಿರುವವರೆಗೂ ದುಷ್ಕರ್ಮ ಕಾಲುಷ್ಯಗಳನ್ನು ಹೋಗಲಾಡಿಸುವುದಕ್ಕಾಗಿ ಇದನ್ನು ಬಿಟ್ಟು ಬೇರೆ ಮಾರ್ಗವಿಲ್ಲ.

**ಮಂ.ಶ್ಲೋ.॥ ಅಸುರ್ಯಾನಾಮ ತೇ ಲೋಕಾ ಅಂಧೇನ ತಮಸಾವೃತಾಃ ।**
**ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಕೇ ಚಾತ್ಮಹನೋ ಜನಾಃ ॥ 3**

ತಾ॥ ಅವಿದ್ಯಾದೋಷದಿಂದ ಆತ್ಮವನ್ನು ತಿಳಿಯದ ಅವಿದ್ವಾಂಸರು ಅಜ್ಞಾನವೆನ್ನುವ ತಮಸ್ಸಿನಿಂದ ಆವರಿಸಲ್ಪಟ್ಟಿರುವ ದೇವಾಧಿ ಲೋಕಗಳನ್ನು ದೇಹವನ್ನು ಬಿಟ್ಟನಂತರ ಹೊಂದುವರು.

**ಮಂ.ಶ್ಲೋ.॥ ಅನೇಜದೇಕಂ ಮನಸೋ ಜವೀಯೊ ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ 4**

ತಾ॥ ಪರಮಾತ್ಮವೊಂದೇ ಚಲನರಹಿತವಾದುದು. ಆದರೂ ಮನಸ್ಸಿಗಿಂತ ಮಹಾವೇಗವುಳ್ಳದ್ದು. ಮನಸ್ಸಿಗಿಂತ ಮೊದಲೇ ಹೋಗುವುದರಿಂದ ಅದು ಇಂದ್ರಿಯಗಳಿಗೆ ದೊರಕುವುದಿಲ್ಲ. ನಿತ್ಯವಾದುದು,

ಸ್ಥಿರವಾದುದು. ಆದರೂ ಕೂಡಾ ಓಡುತ್ತಾ ಎಲ್ಲವನ್ನೂ ಅದು ದಾಟಿ ಹೋಗುತ್ತಿದೆ. ಆತ್ಮಸಾನ್ನಿಧ್ಯ-ದಲ್ಲಿರುವುದರಿಂದಲೇ ಜೀವಕೋಟಿಗಳು ತಮ್ಮ ಕಾರ್ಯಕಲಾಪಗಳನ್ನು ಸಾಗಿಸಲು ಸಮರ್ಥ-ವಂತವಾಗುತ್ತಿವೆ.

**ಮಂ.ಶ್ಲೋ.॥ ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥** 5

ತಾ॥ ಆ ಆತ್ಮ ಚಲಿಸುತ್ತದೆ ಚಲಿಸುವುದಿಲ್ಲ. ಆ ಆತ್ಮ ದೂರದಲ್ಲಿದೆ; ಹತ್ತಿರದಲ್ಲಿದೆ. ಆ ಆತ್ಮವೇ ಸರ್ವವ್ಯಾಪಕವಾಗಿದೆ. ಈ ಪ್ರಪಂಚದ ಆಚೆಗೂ, ಒಳಗೂ ಕೂಡಾ ಇದೆ.

**ಮಂ.ಶ್ಲೋ.॥ ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥** 6

ತಾ॥ ಎಲ್ಲ ಪ್ರಾಣಿಗಳು ತನ್ನ ಆತ್ಮಕ್ಕಿಂತ ಭಿನ್ನವಲ್ಲವೆಂದು, ತನ್ನ ಆತ್ಮವೇ ಎಲ್ಲ ಜೀವಿಗಳಲ್ಲಿರುವ ಆತ್ಮ ಎಂದು ದರ್ಶಿಸುವ ಜ್ಞಾನಿಯು ಆ ದರ್ಶನ ವಿವೇಕದಿಂದ ಯಾವುದನ್ನೂ ದ್ವೇಷಿಸುವುದಿಲ್ಲ.

**ಮಂ.ಶ್ಲೋ.॥ ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥** 7

ತಾ॥ ಹಿಂದೆ ಹೇಳಿದ ಹಾಗೆ ಸರ್ವಸ್ವರೂಪವಾದ ಆತ್ಮ ಒಂದೇ ಎಂದು ತಿಳಿದುಕೊಂಡವನಿಗೆ ಶೋಕಮೋಹಗಳು ಎಲ್ಲಿರುತ್ತವೆ?

**ಮಂ.ಶ್ಲೋ.॥ ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಗ್‌ಂ ಶುದ್ಧಮಪಾಪವಿದ್ಧಮ್,**
**ಕವಿರ್ಮನೀಷೀ ಪರಿಭೂಃ ಸ್ವಯಂ ಭೂರ್ಯಥಾ ತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ**
**ಸಮಾಭ್ಯಃ ॥ 8**

ತಾ॥ ಸ್ವಯಂಭು, ಸರ್ವವ್ಯಾಪಿ, ಅಶರೀರಿ, ಅಸ್ನಾಯು, ಪಾಪಕಳಂಕ ರಹಿತ, ಉಜ್ವಲ, ಪರಿಪೂರ್ಣ, ಶುದ್ಧವಾದವನು, ಸರ್ವದರ್ಶಿ, ಸರ್ವವಿದ, ಸರ್ವಪರಿಚ್ಛೇದಕನೂ ಆದ ಆ ಪರಮಾತ್ಮ ಶಾಶ್ವತರಾದ ಪ್ರಜಾಪತಿಗಳಿಗೆ ಯಥಾವಿಧಿಯಾಗಿ ಅವರವರ ಕರ್ತವ್ಯಗಳನ್ನು ನಿರ್ಣಯಿಸಿಕೊಟ್ಟಿರುವನು.

**ಮಂ.ಶ್ಲೋ.॥ ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್‌ಂ ರತಾಃ ॥** 9

ತಾ॥ ಅವಿದ್ಯೆಯನ್ನು ಉಪಾಸಿಸುವವರು ಅವಿದ್ಯೆಯನ್ನೇ ಹೊಂದುವರು. ಕರ್ಮದಿಂದ ಚಿತ್ತಶುದ್ಧಿ-ಯನ್ನು ಹೊಂದಲಾರದೆ ವಿದ್ಯೆಯನ್ನು (ಬ್ರಹ್ಮವಿದ್ಯೆಯನ್ನು) ಉಪಾಸಿಸುವವರು ಅದಕ್ಕಿಂತ ಹೆಚ್ಚಿನ ಅವಿದ್ಯೆಯನ್ನು ಹೊಂದುವರು.

**ಮಂ.ಶ್ಲೋ.॥ ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇನಸ್ತದ್ವಿಚಚಕ್ಷಿರೇ ॥** 10

ತಾ॥ ವಿದ್ಯೆಯನ್ನು ಸಾಧಿಸುವುದರಿಂದ ಒಂದು ವಿಧವಾದ ಫಲಿತ ಲಭಿಸಿದರೂ ಅವಿದ್ಯೆಯನ್ನು ಸಾಧಿಸುವುದರಿಂದ ಇನ್ನೊಂದು ವಿಧವಾದ ಫಲವು ಲಭಿಸುವುದೆಂದು ಪ್ರಾಜ್ಞರು ಹೇಳುವರು.

**ಮಂ.ಶ್ಲೋ.॥ ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥ 11**

ತಾ॥ ಕರ್ಮೋಪಾಸನೆಗಳೆರಡೂ ಒಬ್ಬರೇ ಆಚರಿಸತಕ್ಕದ್ದೆಂದು ತಿಳಿದುಕೊಂಡು ಈ ಎರಡನ್ನೂ ಕೂಡ ಆಚರಿಸುವ ಮಾನವನು -ಕರ್ಮದಿಂದ ಭಯರೂಪವಾದ ಮೃತ್ಯುವನ್ನತಿಕ್ರಮಿಸಿ, ಉಪಾಸನೆ-ಯಿಂದ ದೇವತಾಸ್ವರೂಪ ಭಾವವನ್ನು ಹೊಂದುವನು.

**ಮಂ.ಶ್ಲೋ.॥ ಅಂಧಂತಮಃ ಪ್ರವಿಶಂತಿಯೇಽಸಂಭೂತಿಮುಪಾಸತೇ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಗ್ಂ ರತಾಃ॥ 12**

ತಾ॥ ಪ್ರಪಂಚಕಾರಣವಾದ ಪ್ರಕೃತಿಯನ್ನು ಸೇವಿಸುವವರು ಗಾಡಾಂಧಕಾರದಲ್ಲಿ ಪ್ರವೇಶಿಸು-ವರು. ಅದಕ್ಕಿಂತಲೂ ಹೆಚ್ಚಿನದು ಮತ್ತೇನಾದರೂ ಇದೆಯೇ ಎಂದು ಅನ್ನಿಸುವ ಅಂಧಕಾರದಲ್ಲಿ, ಹಿರಣ್ಯ ಗರ್ಭಾಧಿಗಳನ್ನು ಉಪಾಸಿಸುವವರು ಸೇವಿಸುವವರು ಪ್ರವೇಶಿಸುತ್ತಾರೆ. (ಅಸಂಭೂತಿ ಎಂದರೆ ಪ್ರಕೃತಿ. ಸಂಭೂತಿ ಎಂದರೆ ಹಿರಣ್ಯಗರ್ಭ)

**ಮಂ.ಶ್ಲೋ.॥ ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇನಸ್ತದ್ವಿಚಚಕ್ಷಿರೇ ॥ 13**

ತಾ॥ ಅಸಂಭೂತ ಉಪಾಸನೆಯಿಂದ ಪ್ರಕೃತಿಲಯವನ್ನು, ಸಂಭೂತಿ ಉಪಾಸನೆಯಿಂದ, ಅಣಿಮಾದಿ ಐಶ್ವರ್ಯಗಳನ್ನು ಹೊಂದುವುದೆಂದು ಧೀರರು ನಮಗೆ ಹೇಳಿದ್ದಾರೆ. ಅಸಂಭೂತಿ ಉಪಾಸನೆಯಿಂದ ಪ್ರಕೃತಿಯ ಲಯವನ್ನು, ಸಂಭೂತ್ಯುಪಾಸನೆಯಿಂದ ಅಣಿಮಾದಿ ಐಶ್ವರ್ಯ ಪ್ರಾಪ್ತಿ ಉಂಟಾಗುವುದೆಂದು ಧೀರರು ನಮಗೆ ಹೇಳಿದ್ದಾರೆ.

**ಮಂ.ಶ್ಲೋ.॥ ಸಂಭೂತಿಂಚ ವಿನಾಶಂಚ ಯಸ್ತದ್ವೇದೋಭಯಗ್ಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ॥ 14**

ತಾ॥ ಅಸಂಭೂತಿಯನ್ನು-ಸಂಭೂತಿಯನ್ನು ತಿಳಿದುಕೊಂಡು, ಎರಡನ್ನೂ ಸಹ ಉಪಾಸಿಸು-ವವನು-ಸಂಭೂತ್ಯುಪಾಸನೆಯಿಂದ ಅಣಿಮಾದಿ ಐಶ್ವರ್ಯಗಳನ್ನು ಹೊಂದಿ, ಅದರಿಂದ ಅಧರ್ಮಾದಿ ಮೃತ್ಯುವನ್ನು ಅತಿಕ್ರಮಿಸಿ ಅಸಂಭೂತ್ಯುಪಾಸನೆಯಿಂದ ಪ್ರಕೃತಿಲಯವನ್ನು ಹೊಂದುವುದು.

**ಮಂ.ಶ್ಲೋ.॥ ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।**
**ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥ 15**

ತಾ|| ಸರ್ವಜೀವಪೋಷಕನಾದ ಓ ಸೂರ್ಯದೇವಾ! ನಿನ್ನ ಯಥಾರ್ಥ ಮುಖವು ಮಿರಮಿರನೆ ಹೊಳೆಯುವಂತಹ ತೇಜಃಪುಂಜದೊಂದಿಗೆ ಮುಚ್ಚಿಕೊಂಡಿದೆ. ಕರುಣೆದೋರಿ ಆ ಆವರಣವನ್ನು ಪಕ್ಕಕ್ಕೆ ಸರಿಸಿ ನಿನ್ನ ಶುದ್ಧಭಕ್ತನಿಗೆ ದರ್ಶನವನ್ನು ಅನುಗ್ರಹಿಸುವಂತಹವನಾಗು.

**ಮಂ.ಶ್ಲೋ.|| ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ ।**
**ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ**
**ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ 16**

ತಾ|| ಓ ಸೂರ್ಯದೇವಾ! ಪ್ರಜಾಪತಿ ಪುತ್ರಾ! ನಿಯಮನಿರ್ದೇಶಕಾ, ವಿಶ್ವಂ ಪೋಷಕಾ, ವಿಶುದ್ಧ ಭಕ್ತ ಗಮ್ಯಸ್ಥಾನವೇ, ಪ್ರಜಾಸೃಷ್ಟಿಕಾರಕನೇ, ನಿನ್ನ ಆನಂದಾಕೃತಿಯನ್ನು ನೋಡುವುದಕ್ಕಾಗಿ, ನಿನ್ನ ದಿವ್ಯ ಕಿರಣಕಾಂತಿಪುಂಜವನ್ನು ಪಕ್ಕಕ್ಕೆ ಸರಿಸು. ಸೂರ್ಯನಾದ ನೀನು ಶಾಶ್ವತವಾದ ದೇವದೇವನು. ನಾನು ಕೂಡಾ ನಿನ್ನಷ್ಟರವನೇ!

**ಮಂ.ಶ್ಲೋ.|| ವಾಯುರನಿಲಮಮೃತಮಥೇದಂ ಭಸ್ಮಾಂತಗ್ಗ್ಂಶರೀರಮ್ ।**
**ಓಂ ಕ್ರತೋಸ್ಮರ ಕೃತಗ್ಂಸ್ಮರ ಕ್ರತೋಸ್ಮರ ಕೃತಗ್ಗ್ಂಸ್ಮರ ॥ 17**

ತಾ|| ಈ ಶರೀರದಲ್ಲಿರುವ ಪ್ರಾಣವಾಯುವು ಸರ್ವಾತ್ಮಕ ಪ್ರಾಣದಲ್ಲಿ ಲೀನವಾಗುವಂತಾಗಲಿ. ಈ ಶರೀರವು ಭಸ್ಮವಾಗಲಿ. ಮನಸ್ಸೇ ಜ್ಞಾಪಕಕ್ಕೆ ತಂದುಕೋ. ಪೂರ್ವ ಕರ್ಮವನ್ನು ನೆನಪು ಮಾಡಿಕೋ, ಮನಸ್ಸೇ ನೆನಪು ಮಾಡಿಕೋ, ಪೂರ್ವ ಕರ್ಮಗಳನ್ನು ಸ್ಮರಣೆ ಮಾಡಿಕೋ.

**ಮಂ.ಶ್ಲೋ.|| ಅಗ್ನೇನಯ ಸುಪಥಾರಯೇ ಅಸ್ಮಾನ್ ವಿಶ್ವಾನಿ ದೇವವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥18**

**(ಈಶಾವಾಸ್ಯೋಪನಿಷತ್ಸಮಾಪ್ತಾ)**

ತಾ|| ಓ ಅಗ್ನಿದೇವಾ, ನೀನು ಸಕಲಕರ್ಮಗಳನ್ನು, ಜ್ಞಾನಗಳನ್ನು ತಿಳಿದವನು. ನೀನು ಫಲೋಪಭೋಗಕ್ಕಾಗಿ ನಮ್ಮನ್ನು ಕಲ್ಯಾಣಮಾರ್ಗದ ಮೂಲಕ ಕರೆದುಕೊಂಡು ಹೋಗು. ವಂಚನಾತ್ಮಕವಾದ ಪಾಪಬುದ್ಧಿಯನ್ನು ನಮ್ಮಿಂದ ದೂರ ಮಾಡು. ನಿನಗೆ ಪರಿಚರ್ಯೆ ಮಾಡಲಾರೆವು. ಆದರೆ ನಮಸ್ಕಾರವನ್ನೂ ಕೂಡಾ ಕ್ರಿಯಾಪೂರ್ವಕವಾಗಿ ಮಾಡಲು ಶಕ್ತರಾಗಿಲ್ಲ. ಮಾತಿನಲ್ಲಿ ಮಾತ್ರವೇ ಮತ್ತೆ ಮತ್ತೆ ನಮಸ್ಕರಿಸುತ್ತಿದ್ದೇವೆ. (ಈಶಾವಾಸ್ಯೋಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ|| ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ|| ಓಂ ಶಾಂತಿಃ**
**ಶಾಂತಿಃ ಶಾಂತಿಃ**

**(ಈಶಾವಾಸ್ಯೋಪನಿಷತ್ಸಮಾಪ್ತಾ)**



# ಕೇನೋಪನಿಷತ್ - ೨

## ತಲವಕಾರೋಪನಿಷತ್
## (ಸಾಮವೇದಾಂತರ್ಗತ)

**ಶಾಂತಿ ಮಂತ್ರ॥ ಓಂ ಆಪ್ಯಾಯಸ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋಃ ಬಲಮಿಂದ್ರಿಯಾಣಿಚ ಸರ್ವಾಣಿಃ ಸರ್ವಂ ಬ್ರಹ್ಮೋಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇsಸ್ತು; ತದಾತ್ಮನಿ: ನಿರತೇಃ ಯ ಉಪನಿಷತ್ಸು ಧರ್ಮಾಃ ತೇಃ ಮಯಿ ಸಂತು ತೇಃ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ**

## ಪ್ರಥಮ ಖಂಡ

**ಮಂ.ಶ್ಲೋ.॥ ಓಂ ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ।**
**ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ 1**

ತಾ॥ (ಶಿಷ್ಯನ ಪ್ರಶ್ನೆ) ಯಾರ ಆಜ್ಞೆಯಿಂದಾಗಿ ಸಂಕಲ್ಪದಿಂದಾಗಿ ಜಡವಾಗಿರುವ ಮನಸ್ಸಿಗೆ, ಪ್ರಾಣಕ್ಕೆ, ವಾಗಾದಿ ಕರ್ಮೇಂದ್ರಿಯಗಳಿಗೆ, ಚಕ್ಷುರಾದಿ ನೇತ್ರೇಂದ್ರಿಯಗಳಿಗೆ ಆಯಾ ವ್ಯವಹಾರಗಳನ್ನು ಮಾಡುವ ಶಕ್ತಿಯುಂಟಾಗುತ್ತದೆ. ಯಾರು ಈ ದೇಹೇಂದ್ರಿಯಗಳನ್ನು ಆಜ್ಞಾಪಿಸುತ್ತಿರುವವರು? ಆ ಇಂದ್ರಿಯಗಳನ್ನು ಆ ರೀತಿಯಾಗಿ ನಿರ್ಮಾಣ ಮಾಡಿದವರ್‍ಯಾರು?

**ಮಂ.ಶ್ಲೋ.॥ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ।**
**ಚಕ್ಷುಷಶ್ಚಕ್ಷುರತಿಮುಚ್ಯಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ 2**

ತಾ॥ (ಗುರು)ಆ ಆತ್ಮ ಕಿವಿಗೆ ಕಿವಿ, ಮನಸ್ಸಿಗೆ ಮನಸ್ಸು, ವಾಕ್ಕಿಗೆ ವಾಕ್ಕು, ಮತ್ತು ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು ಇವುಗಳಲ್ಲಿ ಆತ್ಮಭಾವವನ್ನು ತುಂಬಿ, ಇಂದ್ರಿಯ ವ್ಯವಹಾರ ಜೀವನವನ್ನು ಬಿಟ್ಟುಕೊಟ್ಟರೂ ಬ್ರಹ್ಮಜ್ಞಾನಿಗಳು ಅಮೃತ ಪದವಿಯನ್ನು ಹೊಂದುತ್ತಿದ್ದಾರೆ.

**ಮಂ.ಶ್ಲೋ.॥ನ ತತ್ರ ಚಕ್ಷುರ್ ಗಚ್ಛತಿ, ನ ವಾಗ್ಗಚ್ಛತಿ ನೋ ಮನಃ ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾದನ್ಯದೇವ ತದ್ವಿದಿತಾದಥೋ ಅವಿದಿತಾದಧಿ, ಇತಿ ಶುಶ್ರುಮ ಪೂರ್ವೇಷಾಂ ಯೇನಸ್ತದ್ ವ್ಯಾಚಚಕ್ಷಿರೇ ॥ 3**

ತಾ॥ ಪರಬ್ರಹ್ಮವನ್ನು ಕಣ್ಣುಗಳಿಂದ ನೋಡಲು ಸಾಧ್ಯವಾಗುವುದಿಲ್ಲ. ವಾಕ್ಕಿನಲ್ಲಿ ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಮನಸ್ಸಿನಲ್ಲಿ ಚಿಂತಿಸಲು ಸಾಧ್ಯವಾಗುವುದಿಲ್ಲ. ಅಂತಹ ಆತ್ಮವನ್ನು ಹೇಗೆ

ಬೋಧಿಸುವುದು? ನಮಗೆ ತಿಳಿಯದು. ಅದನ್ನು ತಿಳಿದವನಿಗೆ, ತಿಳಿಯದವನಿಗೆ ಅತೀತವಾಗಿ ಇದೆ. ನಮ್ಮ ಗುರುದೇವರು ಹೀಗೆ ಹೇಳುತ್ತಿದ್ದುದನ್ನು ಕೇಳಿದ್ದೇನೆ.

**ಮಂ.ಶ್ಲೋ.॥ ಯದ್ವಾಚಾಽನಭ್ಯುದಿತಂ, ಯೇನ ವಾಗಭ್ಯುದ್ಯತೇ ।**
**ತದೇವ ಬ್ರಹ್ಮ ತ್ವಂವಿದ್ಧಿ, ನೇದಂ ಯದಿದಮುಪಾಸತೇ ॥ 4**

ತಾ॥ ಯಾವ ಆತ್ಮವು ವಾಗಿಂದ್ರಿಯದಿಂದ ಗ್ರಹಿಸಲಾರದ್ದೋ, ಯಾವ ಶಕ್ತಿಯ ಮೂಲಕ ವಾಗಿಂದ್ರಿಯವು ಕೆಲಸ ಮಾಡುತ್ತಿದೆಯೋ, ಆ ಆತ್ಮವೇ ಪರಮಾತ್ಮವೆಂದು ತಿಳಿದುಕೊಳ್ಳಬೇಕು. ಇದಕ್ಕೆ ಅನ್ಯವಾದುದು ಬ್ರಹ್ಮವಲ್ಲ.

**ಮಂ.ಶ್ಲೋ.॥ ಯನ್ಮನಸಾ ನ ಮನುತೇ, ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ 5**

ತಾ॥ ಯಾವುದು ಮನಸ್ಸಿನಿಂದ ಭಾವಿಸಲು ಅಶಕ್ಯವಾಗುವುದೋ, ಯಾವುದರಿಂದ ಮನಸ್ಸು ಕೆಲಸ ಮಾಡುವುದೋ, ಅದನ್ನೇ ಪರಬ್ರಹ್ಮವೆಂದು ತಿಳಿದುಕೊಳ್ಳಬೇಕು. ಅನ್ಯವಾದು-ದ್ಯಾವುದೂ ಬ್ರಹ್ಮವಲ್ಲ. (ಭೇದ ಬುದ್ಧಿಯಿಂದ ಯಾವುದನ್ನು ಉಪಾಸಿಸುತ್ತಿರುವರೋ ಅದು ಬ್ರಹ್ಮವಲ್ಲ.)

**ಮಂ.ಶ್ಲೋ.॥ ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಗ್ಂಷಿಪಶ್ಯತಿ ॥**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ 6**

ತಾ॥ ಯಾವುದನ್ನು ಕಣ್ಣುಗಳಿಂದ ನೋಡಲಾಗುವುದಿಲ್ಲವೋ, ಯಾವುದರಿಂದ ಅಂತಃಕರಣ ವೃತ್ತಿಗಳನ್ನು ನೋಡಲಾಗುವುದೋ ಅದೇ ಬ್ರಹ್ಮ, ಅನಾತ್ಮವನ್ನು ಈಶ್ವರನೆಂದು ಉಪಾಸಿಸುತ್ತಿದ್ದಾರಲ್ಲ, ಅದು ಬ್ರಹ್ಮವಲ್ಲ (ಬ್ರಹ್ಮಕ್ಕೆ ಅಂತಹ ಚಕ್ಷುಗಳಿಲ್ಲ. ಸಾಧನಗಳ ಸಹಾಯವನ್ನು ಅಪೇಕ್ಷಿಸದೆಯೇ ಬ್ರಹ್ಮವು ಸರ್ವವನ್ನು ತಿಳಿದುಕೊಳ್ಳಬಲ್ಲದ್ದೆಂಬ ಭಾವ)

**ಮಂ.ಶ್ಲೋ.॥ ಯತ್ ಶ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ 7**

ತಾ॥ ಯಾವುದು (ಯಾವ ಅದು) ಕಿವಿಗಳಿಂದ ಕೇಳುವುದಿಲ್ಲವೋ, ಯಾವುದರಿಂದ ಈ ಶ್ರವಣೇಂದ್ರಿಯವು ಕೆಲಸ ಮಾಡುತ್ತಿದೆಯೋ, ಅದೇ ನೀನು (ಬ್ರಹ್ಮ) ಎಂದು ತಿಳಿದಿದ್ದೇವೆ. ಶಬ್ದವನ್ನು ಗ್ರಹಿಸಬಲ್ಲದ್ದಾಗಿದೆಯೆಂದು ತಿಳಿಯಬೇಕು. ಕಿವಿಗೆ ಶಬ್ದಗ್ರಾಹಕ ಶಕ್ತಿಯನ್ನು ಕೊಡುವುದೇ ಬ್ರಹ್ಮ.

**ಮಂ.ಶ್ಲೋ.॥ ಯತ್ ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ 8**

ತಾ॥ ಯಾವುದು, ಉಚ್ಛ್ವಾಸ ನಿಶ್ವಾಸಾತ್ಮಕವಾದ ಪ್ರಾಣಕ್ರಿಯೆಯೊಂದಿಗೆ, ಮೂಗಿನ ಹೊಳ್ಳೆಗಳಿಂದ ಉಚ್ಛ್ವಾಸ ನಿಶ್ವಾಸಗಳನ್ನು ಮಾಡುವುದಿಲ್ಲವೋ, ಯಾವುದರಿಂದ ಪ್ರಾಣವು ನಿಜಕರ್ಮವನ್ನು ನಡೆಸುತ್ತಿದೆಯೋ, ಅದೇ ಬ್ರಹ್ಮವೆಂದು ನಿನಗೆ ತಿಳಿದಿದೆ. ಜನರು ಯಾವುದನ್ನು ಉಪಾಸಿಸುತ್ತಿರುವರೋ ಆ ಜಗತ್ತು ಬ್ರಹ್ಮವಲ್ಲ.

# ದ್ವಿತೀಯ ಖಂಡ

**ಮಂ.ಶ್ಲೋ.॥ ಯದಿ ಮನ್ಯಸೇ ಸುವೇದೇತಿ ದ ಭ್ರಮೇವಾಪಿ ನೂನಂ ತ್ವಂ ವೇತ್ಥ**
**ಬ್ರಹ್ಮಣೋ ರೂಪಮ್ ॥**
**ಯದಸ್ಯ ತ್ವಂ ಯದಸ್ಯ ಚ ದೇವೇಷ್ವಥನು ಮೀಮಾಂಸ್ಯಮೇವ ತೇ ಮನ್ಯೇ ವಿದಿತಂ॥ 1 (9)**

ತಾ॥ ಹಿಂದಿನ ಖಂಡದಲ್ಲಿ ವರ್ಣಿಸಲಾದ ಈ ಬ್ರಹ್ಮ(ವು) ಯಾವ ಸ್ವರೂಪವನ್ನು ಹೊಂದಿರುವುದೋ, ಅದು ಅತ್ಯಂತ ಸೂಕ್ಷ್ಮವಾದುದೇ. ಅದನ್ನು ನೀನು ನಿಶ್ಚಯವಾಗಿ ಚೆನ್ನಾಗಿ ತಿಳಿದುಕೊಂಡೆ ಎಂದು ಭಾವಿಸಿಕೊಂಡು ವಿದ್ವಾಂಸರೊಂದಿಗೆ ಈ ಬ್ರಹ್ಮದ ಯಾವ ರೂಪವನ್ನು, ತಿಳಿಸಲಾಗಿದೆಯೋ, ಅದನ್ನು ನೀನು ತಿಳಿದುಕೊಂಡಿದ್ದೀಯೆಂದು ನಾನು ಭಾವಿಸುವುದಿಲ್ಲ. ಕಾರಣವೇನೆಂದರೆ ನಿನಗೆ ಅನಂತರವೂ ಸಹ ಆ ಬ್ರಹ್ಮರೂಪವನ್ನು ತಿಳಿದುಕೊಳ್ಳುವಂತಹುದೇ ಆಗಿರುತ್ತದೆಯೆಂದು ನಾನು ಅಂದುಕೊಳ್ಳುತ್ತಿದ್ದೇನೆ. ನೀನು ತಿಳಿದುಕೊಂಡಿರುವ ಬ್ರಹ್ಮಸ್ವರೂಪವಾಗಲೀ ದೇವತೆಗಳ ಸ್ವರೂಪವಾಗಲೀ ಬಹಳ ಕಡಿಮೆಯಾದುದು. ಆದ್ದರಿಂದ ನೀನು ಯಾವುದನ್ನು ತಿಳಿದುಕೊಳ್ಳಬೇಕೆಂದಿದ್ದೀಯೋ ಅದನ್ನು ಇನ್ನೂ ತಿಳಿಯಬೇಕಾಗಿದೆ.

**ಮಂ.ಶ್ಲೋ.॥ ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚ ।**
**ಯೋ ನಸ್ತದ್ವೇದ ತದ್ವೇದ ನೋ ನ ವೇದೇತಿ ವೇದಚ ॥ 2 (10)**

**ತಾ॥ ನನಗೆ ಚೆನ್ನಾಗಿ ಅರ್ಥವಾಗಿದೆಯೆಂದು ಅಂದುಕೊಳ್ಳಲಾರೆ, ನನಗೆ ಪೂರ್ತಿಯಾಗಿ ತಿಳಿದಿದೆಯೆಂದೂ ಅಂದುಕೊಳ್ಳಲಾರೆ, ಹೀಗೆ ಯಾರು ಬ್ರಹ್ಮನ ವಿಷಯದಲ್ಲಿ ಅರಿತುಕೊಂಡಿದ್ದಾನೆಯೋ ಅವನಿಗೆ ಅದರ ವಿಷಯವು(ಪೂರ್ಣನಾದ ಬ್ರಹ್ಮನ ವಿಷಯವು) ಪೂರ್ತಿಯಾಗಿ ತಿಳಿಯುತ್ತದೆ. (ವಾಗಾದಿ ಇಂದ್ರಿಯಗಳಿಂದ ಮನಸ್ಸಿನಲ್ಲಿ ಬ್ರಹ್ಮವು ತಿಳಿಯುವುದು.)**

**ಮಂ.ಶ್ಲೋ.॥ ಯಸ್ಯಾಮತಂ ತಸ್ಯಮತಂ ಮತಂ ಯಸ್ಯ ನ ವೇದ ಸಃ ।**
**ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥ 3 (11)**

ತಾ॥ ಯಾರು ಬ್ರಹ್ಮವನ್ನು ತಿಳಿದುಕೊಳ್ಳಲಾಗದ್ದೆಂದು ತಿಳಿಯುವನೋ ಅಂತಹವನು ಬ್ರಹ್ಮವನ್ನು ಕುರಿತು ತಿಳಿದುಕೊಂಡಿರುತ್ತಾನೆ. ಯಾರು ಬ್ರಹ್ಮವನ್ನು (ಭೌತಿಕ ವಸ್ತುವಿನಂತೆ) ತಿಳಿದುಕೊಂಡೆನೆಂದು ಭಾವಿಸುವನೋ ಆತನು ಬ್ರಹ್ಮವನ್ನು ತಿಳಿಯದವನಾಗಿರುತ್ತಾನೆ. ರೂಪಾದಿಗಳು ಬ್ರಹ್ಮಕ್ಕೆ ಇಲ್ಲವಾದುದರಿಂದ ಚಕ್ಷುವಿಗೆ ಅದು ಕಾಣಿಸುವುದಿಲ್ಲ. ಆದ್ದರಿಂದಲೇ ಮನಸ್ಸಿಗೆ ಅದು ವಿಷಯವಾಗಿರುವುದಿಲ್ಲ. ಈ ಕಾರಣದಿಂದ ಮನಸ್ಸಿನಿಂದ ಬ್ರಹ್ಮವನ್ನು ತಿಳಿಯಲಾಗುವನೆಂದು ಭಾವಿಸುವವನು ಬ್ರಹ್ಮವನ್ನು ತಿಳಿಯಲಾರನು.

**ಮಂ.ಶ್ಲೋ.॥ ಪ್ರತಿಬೋಧ ವಿದಿತಂ ಮತಮಮೃತತ್ವಂ ಹಿ ವಿಂದತೇ ।**
**ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತೇಽಮೃತಮ್ ॥ 4(12)**

ತಾ॥ ಬೋಧೆಯಿಂದ ತಿಳಿದ ಬ್ರಹ್ಮವು ಬ್ರಹ್ಮವೆಂದು ಗ್ರಾಹ್ಯವಾಗುವುದು. ಅಂತಹ ಆತ್ಮಜ್ಞಾನದೊಂದಿಗೆ ಜೀವನು ಮೋಕ್ಷವನ್ನು ಪಡೆಯುವನು. ಸ್ವರೂಪಜ್ಞಾನದೊಂದಿಗೆ ವೀರ್ಯವನ್ನು ಹೊಂದುವನು. ಬ್ರಹ್ಮವಿದ್ಯೆಯಿಂದ ಅಮೃತವನ್ನು ಹೊಂದುವನು.

**ಮಂ.ಶ್ಲೋ.॥ ಇಹ ಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ ।**
**ಭೂತೇಷು ಭೂತೇಷು ವಿಚಿಂತ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ॥ 5(13)**

ತಾ॥ ಈ ಮಾನವ ಜನ್ಮದಲ್ಲಿ ಪರಮಾತ್ಮನನ್ನು ಕುರಿತು ತಿಳಿದುಕೊಂಡಲ್ಲಿ, ಅವನಿಗೆ ನಿಜವಾದ ಬ್ರಹ್ಮಾನಂದವು ಸಿದ್ಧಿಸುತ್ತದೆ. ಈ ಪ್ರಕಾರವಾಗಿ ಈ ಜನ್ಮದಲ್ಲಿ ಭಗವಂತನನ್ನು ಕುರಿತು ತಿಳಿದುಕೊಳ್ಳದೆ ಹೋದಲ್ಲಿ ದೊಡ್ಡ ವಿನಾಶವು ಸಂಭವಿಸುತ್ತದೆ. ಧೀರನಾದವನು ಸಮಸ್ತಭೂತ ಕೋಟಿಯಲ್ಲಿಯೂ ಅದ್ವಿತೀಯಾತ್ಮತತ್ತ್ವವನ್ನು ತಿಳಿದುಕೊಂಡು ಈ ಲೋಕದಿಂದ (ದೇಹದಿಂದ) ಬೇರ್ಪಟ್ಟು ಜನನ-ಮರಣರಹಿತನಾಗುತ್ತಾನೆ. (ಅಮೃತತ್ವವನ್ನು ಹೊಂದುತ್ತಾನೆ.)

# ತೃತೀಯ ಖಂಡ

**ಮಂ.ಶ್ಲೋ.॥ ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹಿಯಂತ**
**ತ ಐಕ್ಷಂತಾಸ್ಮಾಕಮೇವಾಯಂ ವಿಜಯೋಽಸ್ಮಾಕಮೇವಾಯಂ ಮಹಿಮೇತಿ ॥ 1 (14)**

ತಾ॥ (ಗುರು) ಒಮ್ಮೆ ಪರಬ್ರಹ್ಮ ದೇವತೆಗಳಿಗಾಗಿ ಅಸುರರನ್ನು ಯುದ್ಧದಲ್ಲಿ ಜಯಿಸಿದ. ಬ್ರಹ್ಮನಿಂದಲೇ ಜಯವುಂಟಾಗಿದ್ದರೂ, ದೇವತೆಗಳು, ಅಹಂಕಾರಪಟ್ಟು "ಈ ವಿಜಯವು ನಮ್ಮಿಂದಲೇ ಸಾಧ್ಯವಾಯಿತು. ಈ ಮಹಿಮೆಯೆಲ್ಲವೂ ನಮ್ಮದೇ" ಎಂದು ಭಾವಿಸಿದರು. ಅವರಿಗೆ ಆ ಮಹಿಮೆ ಪರಮೇಶ್ವರನ ಮೂಲಕ ಉಂಟಾಯಿತು. ಅಗ್ನ್ಯಾದಿ ದೇವತೆಗಳು ಆ ವಿಷಯವನ್ನು ಮರೆತು ಆ ಮಹಿಮೆಯ ವಿಜಯವು ತಮ್ಮಿಂದಲೇ ಆಯಿತೆಂದು ಭಾವಿಸಿದರೆಂದು ಅಲಂಕಾರಿಕವಾಗಿ ವರ್ಣಿಸಲಾಗಿದೆ.

**ಮಂ.ಶ್ಲೋ.॥ ತದ್ಧೈಷಾಂ ವಿಜಜ್ಞೌ, ತೇಭ್ಯೋಽಹ ಪ್ರಾದುರ್ಬಭೂವ**
**ತನ್ನ ವ್ಯಜಾನಂತ, ಕಿಮಿದಂ ಯಕ್ಷಮಿತಿ ॥ 2(15)**

ತಾ॥ ಅಗ್ನ್ಯಾದಿಗಳ ಈ ಭಾವನೆಯನ್ನು ಗುರುತಿಸಿದ ಬ್ರಹ್ಮವು ಯಕ್ಷರೂಪದಲ್ಲಿ ಅವರೆದುರಿಗೆ ಪ್ರತ್ಯಕ್ಷವಾಯಿತು. ಆಗ ದೇವತೆಗಳು ಆ ಯಕ್ಷನನ್ನು ನೋಡಿ ಗುರುತಿಸಲಾಗದೆ ಈ ಯಕ್ಷನ್ಯಾರೆಂದು ಆಶ್ಚರ್ಯಪಡಲಾರಂಭಿಸಿದರು.

**ಮಂ.ಶ್ಲೋ॥ ತೇಽಗ್ನಿಮಬ್ರುವನ್ ಜಾತವೇದ ಏತದ್ವಿಜಾನೀಹಿ ।**
**ಕಿಮೇತದ್ ಯಕ್ಷಮಿತಿ, ತಥೇತಿ ॥ 3 (16)**

ತಾ॥ ಆ ದೇವತೆಗಳು ಅಗ್ನಿದೇವನೊಂದಿಗೆ ಹೀಗೆ ಹೇಳಿದರು – ಓ ಅಗ್ನೀ! ಈ ಯಕ್ಷನ್ಯಾರು? ತಿಳಿದುಕೊಳ್ಳುವಂತಹವನಾಗು' ಎಂದು. ಅದನ್ನು ತಿಳಿಯಲು ಅಗ್ನಿಯನ್ನು ಮೊದಲು ನೇಮಿಸಿದರು. ಅಗ್ನಿದೇವತೆಯು ಯಕ್ಷನ ಬಗ್ಗೆ ತಿಳಿದುಕೊಂಡು ಬರಲು ಸಮ್ಮತಿಸಿದ. (ನು.)

**ಮಂ.ಶ್ಲೋ.॥ ತದಭ್ಯದ್ರವತ್ತಮಭ್ಯವದತ್ ಕೋಽಸೀತಿ, ಅಗ್ನಿರ್ವಾ**
**ಅಹಮಸ್ಮೀತ್ಯಬ್ರವೀಜ್ಜಾತವೇದಾವಾ ಅಹಮಸ್ಮೀತಿ ॥ 4 (17)**

ತಾ॥ ಆಗ ಆ ಅಗ್ನಿಯು ಯಕ್ಷರೂಪದಲ್ಲಿ ಕಾಣಿಸಿದ ಬ್ರಹ್ಮಕ್ಕೆ ಎದುರಾಗಿ ಹೊರಟ. ಆಗ ಆ ಯಕ್ಷನು ಆ ಅಗ್ನಿಯನ್ನು "ನೀನು ಯಾರು?" ಎಂದು ಪ್ರಶ್ನಿಸಿತು. ಅದಕ್ಕೆ ಆ ಅಗ್ನಿಯು "ನಾನು ಅಗ್ನಿದೇವನು. ಜಾತವೇದನೆಂದು ನನ್ನನ್ನು ಕರೆಯುತ್ತಾರೆ" ಎಂದನು. (ತನ್ನನ್ನು ಶ್ಲಾಘಿಸಿಕೊಂಡ)

**ಮಂ.ಶ್ಲೋ.॥ ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ ಸರ್ವಂ**
**ದಹೇಯಂ ಯದಿದಂ ಪೃಥಿವ್ಯಾಮಿತಿ ॥ 5 (18)**

ತಾ॥ ಆಗ ಆ ಯಕ್ಷನು "ಅಗ್ನಿಯೆಂದು ನಾಮಧೇಯವನ್ನು ಹೊಂದಿರುವ ನಿನ್ನಲ್ಲಿರುವ ಶಕ್ತಿ ಎಷ್ಟು?" ಎಂದು ಪ್ರಶ್ನಿಸಿದ. ಅದಕ್ಕೆ ಅಗ್ನಿಯು ಭೂಮಿಯಲ್ಲಿ ಯಾವ ಯಾವ ವಸ್ತುಗಳಿರುವುದೋ ಅದನ್ನೆಲ್ಲಾ ದಹಿಸಿಬಿಡುತ್ತೇನೆ" ಎಂದ.

**ಮಂ.ಶ್ಲೋ.॥ ತಸ್ಮೈ ತೃಣಂ ನಿದಧಾವೇತದ್ದಹೇತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕ**
**ದಗ್ಧುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ 6 (19)**

ತಾ॥ ಆ ಅಗ್ನಿಗೆದುರಾಗಿ ಒಂದು ಹುಲ್ಲುಕಡ್ಡಿಯನ್ನಿಟ್ಟು ಇದನ್ನು ದಹಿಸು ಎಂದ. ಆಗ ಆ ಅಗ್ನಿಯು ತನಗಿರುವ ಸಮಸ್ತ ವೇಗದಿಂದ ಆ ತೃಣವನ್ನು ಸಮೀಪಿಸಿ ಆ ಹುಲ್ಲುಕಡ್ಡಿಯನ್ನು ಸುಟ್ಟುಹಾಕಲು ಪ್ರಯತ್ನಿಸಿ ವಿಫಲವಾದ. ತನಗಾಗಿ ಪ್ರತೀಕ್ಷಿಸುತ್ತಿದ್ದ ವಾಯುವಿಗೆ, ಇಂದ್ರನಿಗೆ, ತಾನು ಆ ಯಕ್ಷನನ್ನು ಕುರಿತು ಏನೂ ತಿಳಿದುಕೊಳ್ಳಲು ಆಗಲಿಲ್ಲವೆಂದು ಹೇಳಿದ.

**ಮಂ.ಶ್ಲೋ.॥ ಅಥವಾಯುಮಬ್ರುವನ್ ವಾಯವೇತದ್ವಿಜಾನೀಹಿ ಕಿಮೇತದ್ಯಕ್ಷಮಿತಿ, ತಥೇತಿ॥ 7 (20)**

ತಾ॥ ಆನಂತರ, ಅಗ್ನಿ ಮೊದಲಾದ ದೇವತೆಗಳು ವಾಯುವನ್ನು ಸಮೀಪಿಸಿ, "ವಾಯು-ದೇವತೆಯೇ, ಈ ಯಕ್ಷನ್ಯಾರೆಂದು ತಿಳಿದುಕೊಂಡು ಬಾ" ಎಂದು ಕೋರಿದರು. ಹಾಗೆಯೇ ಆಗಲಿ ಎಂದ ವಾಯುದೇವ.

**ಮಂ.ಶ್ಲೋ.॥ ತದಭ್ಯದ್ರವತ್ತಮಭ್ಯವದತ್ ಕೋಽಸೀತಿ ವಾಯುರ್ವಾಹಮಸ್ಮೀ**
**-ತ್ಯಬ್ರವೀನ್ಮಾತರಿಶ್ವಾವಾ ಅಹಮಸ್ಮೀತಿ ॥ 8 (21)**

ತಾ॥ ಆನಂತರ ವಾಯುವು ಯಕ್ಷನ ಬಳಿಗೆ ಹೋದ. ನೀನ್ಯಾರೆಂದು ಯಕ್ಷನು ಪ್ರಶ್ನಿಸಿದ. "ನಾನು ವಾಯುದೇವ. ನನ್ನ ಹೆಸರು ಮಾತರಿಶ್ವ (ಗಗನಸಂಚಾರಿ) ಎಂದು ಹೇಳಿದ.

**ಮಂ.ಶ್ಲೋ.॥ ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಂ ಸರ್ವ**
**ಮಾದದೀಯ ಯದಿದಂ ಪೃಥಿವ್ಯಾಮಿತಿ ॥ 9 (22)**

ತಾ॥ ತನ್ನ ಸಮೀಪಕ್ಕೆ ಬಂದ ವಾಯುವನ್ನು ನಿನಗೆ ಇರುವ ಸಾಮರ್ಥ್ಯವೆಂತಹುದು? ಎಂದು ಯಕ್ಷನು ಪ್ರಶ್ನಿಸಿದ. ಅದಕ್ಕೆ ಆ ವಾಯುವು ಭೂಮಿಯಲ್ಲಿರುವ ಯಾವ ವಸ್ತುವನ್ನಾದರೂ ಗ್ರಹಿಸಿ (ಸೆಳೆದು)ಕೊಂಡು ಬಿಡುತ್ತೇನೆ" ಎಂದು ಉತ್ತರವನ್ನಿತ್ತ.

**ಮಂ.ಶ್ಲೋ.॥ ತಸ್ಮೈ ತೃಣಂ ನಿದಧಾವೇತದಾದತ್ಸ್ವೇತಿ ತದುಪ ಪ್ರೇಮಾಯ ಸರ್ವಜವೇನ। ತನ್ನ ಶಶಾಕಾದಾತುಂ, ಸ ತತ ಏವ ನಿವವೃತೇ, ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ 10 (23)**

ತಾ॥ (ಹಾಗಾದರೆ) ಈ ತೃಣವನ್ನು ಗ್ರಹಿಸು ಎಂದು, ಆ ವಾಯುವಿಗೆದುರಾಗಿ ಹುಲ್ಲುಕಡ್ಡಿಯನ್ನಿಟ್ಟ. ಆಗ ವಾಯುವು ಸಮಸ್ತ ವೇಗದೊಂದಿಗೆ ಆ ತೃಣವನ್ನು ಸಮೀಪಿಸಲು, ಅದನ್ನು ಗ್ರಹಿಸಲು ಸಮರ್ಥವಾಗಲಿಲ್ಲ. ಆ ವಾಯುವು ಅಲ್ಲಿಂದ ಹಿಂದಿರುಗಿದ. ಈ ಯಕ್ಷನ್ಯಾರೋ ತಿಳಿಯಲು ನನಗೆ ಶಕ್ತಿಯಿಲ್ಲ ಎಂದು ಹೇಳಿದ.

**ಮಂ.ಶ್ಲೋ.॥ ಅಥೇಂದ್ರಮಬ್ರುವನ್ ಮಘುವನ್! ಏತದ್ವಿಜಾನೀಹಿ ಕಿಮೇತದ್ಯಕ್ಷಮಿತಿ । ತಥೇತಿ, ತದಭ್ಯದ್ರವತ್ತಸ್ಮಾತ್ತಿರೋದಧೇ ॥ 11 (24)**

ತಾ॥ ಆ ನಂತರ ಅಗ್ನಿ, ವಾಯುಗಳು ಯಕ್ಷನನ್ನು ತಿಳಿದುಕೊಳ್ಳಲಾರದೆ, ಕೊನೆಗೆ ಇಂದ್ರನನ್ನು ಆ ಯಕ್ಷನ ಬಗ್ಗೆ ತಿಳಿದುಕೊಳ್ಳಬೇಕೆಂದು ಕೋರಿದರು. ಇಂದ್ರನು ಯಕ್ಷನನ್ನು ಸಮೀಪಿಸಿದ. ಆದರೆ ಯಕ್ಷನು ಆ ಇಂದ್ರನಿಗೆ ಕಾಣಿಸದೆ ಅದೃಶ್ಯನಾದ.

**ಮಂ.ಶ್ಲೋ॥ ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ ಬಹುಶೋಭಮಾನಾಮುಮಾಂ ಹೈಮವತೀಂ ತಾಂ ಹೋವಾಚ ಕಿಮೇತದ್ಯಕ್ಷಮಿತಿ ॥ 12 (25)**

ತಾ॥ ಇಂದ್ರನು ಯಕ್ಷನನ್ನು ನೋಡಲು ಪ್ರಯತ್ನಿಸಲು ಆ ಯಕ್ಷನು ಕಾಣಿಸದೆ ಮಾಯವಾಗಿಬಿಟ್ಟ (ವಾದ.) ಆ ಯಕ್ಷಸ್ಥಾನದಲ್ಲಿ ಒಬ್ಬ ಸ್ತ್ರೀ ಅತಿಶಯವಾಗಿ ಶೋಭಿಸುತ್ತಾ ಇಂದ್ರನಿಗೆ ದರ್ಶನವಿತ್ತಳು. ಇಂದ್ರನು ಆಕೆಯನ್ನು ಹಿಮವಂತನ ಪುತ್ರಿಯಾಗಿ, ಉಮೆಯೆಂದು ಗುರುತಿಸಿ ಯಕ್ಷನ ಬಗ್ಗೆ ಕೇಳಿದ. (ಬ್ರಹ್ಮವಿದ್ಯೆಯು ಉಮಾದೇವಿಯಾಗಿ ಪ್ರತ್ಯಕ್ಷವಾಯಿತು.)

## ಚತುರ್ಥ ಖಂಡ

**ಮಂ.ಶ್ಲೋ.॥ ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ । ಮಹೀಯಧ್ವಮಿತಿ ತತೋ ಹೈವ, ವಿದಾಂಚಕಾರ ಬ್ರಹ್ಮೇತಿ ॥ 1 (26)**

ತಾ॥ ಉಮ ಎನ್ನುವ ಆ ಸ್ತ್ರೀಯು (ನಿಮ್ಮೆದುರಿಗೆ ಇದಕ್ಕೆ ಮೊದಲು ಆವಿರ್ಭವಿಸಿದ ಯಕ್ಷ) ಬ್ರಹ್ಮ-ವೆಂದು ಹೇಳಿದಳು. ಆ ಬ್ರಹ್ಮದ ಮಹಿಮೆಯಿಂದಲೇ ನಿಮಗೂ ಮಹಿಮೆ ಉಂಟಾಗಿದೆ ಎಂದು ತಿಳಿ-ಸಿದಳು. ಆಗ ಆ ಇಂದ್ರನು ತಮ್ಮೆದುರಿಗೆ ಆವಿರ್ಭವಿಸಿದ ಯಕ್ಷನು ಪರಬ್ರಹ್ಮನೆಂದು ನಿಶ್ಚಯಿಸಿ ಕೊಂಡ.

**ಮಂ.ಶ್ಲೋ.॥ ತಸ್ಮಾದ್ ವಾ ಏತೇ ದೇವಾ ಅತಿತರಾಮಿ ವಾನ್ಯಾನ್ ದೇವಾನ್ ಯದಗ್ನಿರ್ ವಾಯುರಿಂದ್ರಸ್ತೇ ಹ್ಯೇನನ್ನೇದಿಷ್ಠಂ ಪಸ್ಪರ್ಶುಸ್ತೇ ಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥ 2 (27)**

ತಾ॥ ಅಗ್ನಿ, ವಾಯು, ಇಂದ್ರ (ಜೀವನ)ನೆನ್ನುವ ದೇವತೆಗಳು ಮೂವರು ಮಾತ್ರವೇ, ಆ ಕಾಣಿಸಿಕೊಂಡ ಯಕ್ಷರೂಪ ಬ್ರಹ್ಮವನ್ನು ಅತಿ ಸಮೀಪದಿಂದ ಸ್ಪೃಶಿಸಿದರು. ಅವರೇ ಮೊಟ್ಟಮೊದಲಿಗೆ

ಈ ಯಕ್ಷನೇ ಬ್ರಹ್ಮವೆಂದು ತಿಳಿದುಕೊಂಡವರು. ಆದ್ದರಿಂದ ಅಗ್ನಿ, ವಾಯು, ಇಂದ್ರನೆನ್ನುವ ಮೂವರು ದೇವತೆಗಳು ಇತರ ದೇವತೆಗಳಿಗಿಂತ ಉತ್ತಮರೆಂದು ಪ್ರಕಾಶಿಸಿದರು.

**ಮಂ.ಶ್ಲೋ.॥ ತಸ್ಮಾದ್ ವಾ ಇಂದ್ರೋಽತಿತರಾಮಿ, ವಾನ್ಯಾನ್ ದೇವಾನ್ ಸ ಹ್ಯೇನ**
**ನ್ನೇದಿಷ್ಠಂ ಪಸ್ಪರ್ಶ ಸ ಹ್ಯೇನತ್ ಪ್ರಥಮೋ ವಿದಾಂ ಚಕಾರ ಬ್ರಹ್ಮೇತಿ॥ 3 (28)**

ತಾ॥ ಇಂದ್ರನು-ಜೀವಾತ್ಮ, ತಮ್ಮ ಎದುರಿಗೆ ಆವಿರ್ಭವಿಸಿದ ಯಕ್ಷನನ್ನು ಅತಿ ಸಮೀಪದಿಂದ ಸ್ಪರ್ಶಿಸಿದ. ಆ ಜೀವನೇ ಯಕ್ಷನನ್ನು ಪ್ರಥಮವಾಗಿ ಪರಬ್ರಹ್ಮವೆಂದು ತಿಳಿದುಕೊಂಡ. ಆದ್ದರಿಂದ ನಿಶ್ಚಯವಾಗಿ ಇತರರಾದ ಅಗ್ನ್ಯಾದಿ ದೇವತೆಗಳಿಂದ ಶ್ರೇಷ್ಠನಾದ.

**ಮಂ.ಶ್ಲೋ.॥ ತಸ್ಯೈಷ ಆದೇಶೋ ಯದೇತದ್ ವಿದ್ಯುತೋಽವ್ಯದ್ಯುತದಾ**
**ಇತೀತಿ ನ್ಯಮೀಮಿಷದಾ ಇತ್ಯಧಿದೈವತಮ್ ॥ 4 (29)**

ತಾ॥ ಆ ಬ್ರಹ್ಮದ ಉಪದೇಶವು ಇದೇ! ವಿದ್ಯುತ್ತಿನ ಪ್ರಕಾಶದಂತೆ ಕಣ್ಣು ತೆರೆದಾಗ ವಸ್ತುಗಳನ್ನು ನೋಡಲಾಗುತ್ತದೆ. ಕಣ್ಣನ್ನು ಮುಚ್ಚಿಕೊಂಡರೆ ವಸ್ತುಗಳು ಗೋಚರಿಸುವುದಿಲ್ಲ. ಹಾಗೆಯೇ ಕ್ಷಣಕಾಲ ಮಿಂಚು ಹೊಳೆದಾಗ ಕಣ್ಣು ಕೋರೈಸುತ್ತದೆ. ವಿದ್ಯುತ್ ಕ್ಷಣಮಾತ್ರವೇ ಪ್ರಕಾಶಿಸುವುದು. ಹಾಗೆಯೇ ಬ್ರಹ್ಮದ ದರ್ಶನವು ಸಹ.

**ಮಂ.ಶ್ಲೋ.॥ ಅಥಾಧ್ಯಾತ್ಮಂ ಯದೇತದ್ ಗಚ್ಛತೀವ ಚ ಮನೋಽನೇನ**
**ಚೈತದುಪಸ್ಮರತ್ಯಭೀಕ್ಷ್ಣಂ ಸಂಕಲ್ಪಃ ॥ 5 (30)**

ತಾ॥ ಅಧಿದೈವತ-ದೇವತೆಗಳಿಗೆ ಸಂಬಂಧಿಸಿದ ಉಪದೇಶದ ನಂತರ ದೇಹಾಂತರ್ಗತ ವಿಷಯವನ್ನು ಹೇಳಲಾಗುತ್ತಿದೆ. ಈ ಮನಸ್ಸು-ಅಂತಃಕರಣವು ಬ್ರಹ್ಮವನ್ನು ಕುರಿತು ಹೋಗುತ್ತಿರು-ವಂತೆ ಧ್ಯಾನವನ್ನು ಮಾಡಬೇಕು. ಮತ್ತು ನಿನ್ನ ಮನಸ್ಸಿನಲ್ಲಿ ಅತಿ ಸಮೀಪವಾಗಿ ಬ್ರಹ್ಮವನ್ನು ಸ್ಮರಿಸಬೇಕು. ಸಂಕಲ್ಪವನ್ನು ಮಾತುಮಾತಿಗೆ ಹಲವುಬಾರಿ ಬ್ರಹ್ಮಚಿಂತನೆಯಲ್ಲಿಡಬೇಕು.

**ಮಂ.ಶ್ಲೋ.॥ ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಂ ಸ ಯ**
**ಏತದೇವಂ ವೇದಾಽಭಿಹೈನಂ ಸರ್ವಾಣಿಭೂತಾನಿ ಸಂವಾಂಛಂತಿ ॥ 6 (31)**

ತಾ॥ ಹಿಂದೆ ವರ್ಣಿಸಲಾದ ಬ್ರಹ್ಮವೇ, ತದ್ವನವೆನ್ನುವುದಾಗಿದೆ. ಆ ಬ್ರಹ್ಮವನ್ನು ಸರ್ವ-ಭೂತಾತ್ಮಿಕವಾಗಿ ಉಪಾಸಿಸಬೇಕು. ಬ್ರಹ್ಮವು 'ತದ್ವನ'ವೆಂದು ಧ್ಯಾನಿಸಬೇಕು. ಸರ್ವಜೀವಿಗಳು ಆತನನ್ನು ಬ್ರಹ್ಮದಂತೆಯೇ ಬಯಸುವರು.

**ಮಂ.ಶ್ಲೋ.॥ ಉಪನಿಷದಂ ಭೋ ಬ್ರೂಹಿತ್ಯುಕ್ತಾ ತ ಉಪನಿಷದ್**
**ಬ್ರಾಹ್ಮೀಂವಾವ ತ ಉಪನಿಷದಮಬ್ರೂಮೇತಿ ॥ 7 (32)**

ತಾ॥ ಓ ಆಚಾರ್ಯಾ! ಬ್ರಹ್ಮವಿದ್ಯೆಯನ್ನು ಬೋಧಿಸಿ ಎಂದು, ಶಿಷ್ಯನು ಕೇಳಿದನು. ನಿನಗೆ ಬ್ರಹ್ಮವನ್ನು ಹೇಳಲಾಗಿದೆ. ನಿನಗೆ ಬ್ರಹ್ಮವಿದ್ಯೆಯನ್ನು ನಿಶ್ಚಯವಾಗಿಯೂ ತಿಳಿಸಿದ್ದೇನೆ. ಇನ್ನೇನೂ ಉಳಿದಿಲ್ಲವೆಂದು ಆಚಾರ್ಯನು ಹೇಳಿದ.

ಮಂ.ಶ್ಲೋ.॥ ತಸ್ಯೈ ತಮೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ
ಸರ್ವಾಂಗಾಣಿ ಸತ್ಯಮಾಯತನಮ್ ॥ ೮ (೩೩)

ತಾ॥ ಆ ಉಪನಿಷತ್ತಿಗಾಗಿ - ಬ್ರಹ್ಮವಿದ್ಯಾ ಪ್ರಾಪ್ತಿಗಾಗಿ ತಪಸ್ಸು, ದಮ, ಕರ್ಮ, ಇವೆಲ್ಲವೂ ಸಾಧನೆಗಳು. ಸತ್ಕರ್ಮಾನುಷ್ಠಾನದಿಂದ ಕೀರ್ತಿಯು ಬರುವುದು. ಶಿಕ್ಷಾ ವ್ಯಾಕರಣಾದಿ ಸರ್ವಾಂಗಗಳು ಸತ್ಯ, ಎಲ್ಲದಕ್ಕೂ ಆಧಾರವಾಗಿವೆ.

ಮಂ.ಶ್ಲೋ.॥ ಯೋ ವಾ ಏತಾಮೇವಂ ವೇದ ಅವಹತ್ಯಪಾಪ್ಮಾನಮನಂತೇ
ಸ್ವರ್ಗೇ ಲೋಕೇ ಜ್ಯೇಯೇ। ಪ್ರತಿತಿಷ್ಠತಿ, ಪ್ರತಿತಿಷ್ಠತಿ ॥ ೯ (೩೪)

ಕೇನೋಪನಿಷತ್ಸಮಾಪ್ತಿ

ತಾ॥ ಕೇನೋಪನಿಷತ್ತನ್ನು ತಿಳದುಕೊಂಡ ವಿದ್ವಾಂಸರು ಜನ್ಮಜನ್ಮಾಂತರಗಳಂದ ಸಂಚಿತವಾದ ಕಲ್ಮಷಗಳನ್ನು ನಶಿಸಿಹೋಗುವಂತೆ ಮಾಡಿಕೊಂಡು, ಸ್ವಸ್ವರೂಪವಾದ ಬ್ರಹ್ಮಾನಂದದಲ್ಲಿ ಸ್ಥಿತಿಯನ್ನು ಸಂಪಾದಿಸುವನು. ಅದರಲ್ಲಿ ತಲ್ಲೀನನಾಗಿ ಆನಂದವನ್ನು ಅನುಭವಿಸುವನು. ಜನನ ಮರಣ ಬಂಧನದಿಂದ ವಿಮುಕ್ತನಾಗುವನು. ಆತ್ಮಾನಂದ ಲೋಕದಲ್ಲಿ ಪ್ರತಿಷ್ಠಿತನಾಗುವನು. (ಕೇನೋಪನಿಷತ್ತು ಸಮಾಪ್ತಿ)

ಶಾಂತಿ ಮಂತ್ರ॥ಓಂ ಆಪ್ಯಾಯಸ್ತು ಮಮಾಂಗಾನಿ, ವಾಕ್ ಪ್ರಾಣಶ್ಚಕ್ಷುಶ್ರೋತ್ರಮಥೋ ಬಲ ಮಿಂದ್ರಿಯಾಣಿಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ: ಮಾಹಂ ಬ್ರಹ್ಮ ನಿರಾಕುರ್ಯಾಂ: ಮಾಮಾ ಬ್ರಹ್ಮಾ ನಿರಾಕರೋತ್: ಅನಿರಾಕರಣಮಸ್ತ್ವನಿರಾಕರಣಂ ಮೇऽಸ್ತು: ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ



# ಕಠೋಪನಿಷತ್ - ೩

(ಕೃಷ್ಣಯಜುರ್ವೇದಾಂತರ್ಗತ)

(ಪ್ರಥಮಾಧ್ಯಾಯ) ೧ನೇ ವಲ್ಲಿ

ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥

ಮಂ.ಶ್ಲೋ.॥ ಓಂ ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ
ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥ 1

ತಾ॥ ವಾಜಶ್ರವಸ್ಸು ಎನ್ನುವ ಋಷಿ ವಿಶ್ವಜಿತ್ ಎನ್ನುವ ಹೆಸರಿನ ಯಜ್ಞವನ್ನು ಮಾಡಿ ಅದರಲ್ಲಿ ತನ್ನ ಸರ್ವಸ್ವವನ್ನೂ ಋತ್ವಿಕರಿಗೆ ದಾನ ಮಾಡಿದ. ಆತನಿಗೆ ನಚಿಕೇತನೆನ್ನುವ ಮಗನಿದ್ದ.

**ಮಂ.ಶ್ಲೋ.॥ತಗ್ಂಹ ಕುಮಾರಗ್ಂ ಸಸ್ತಂ ದಕ್ಷಿಣಾಸು ನೀಯಮಾನಾಸು ಶ್ರದ್ಧಾಽಽ-**
**ವಿವೇಶಸೋಽಮನ್ಯತ ॥ 2**

ತಾ॥ ಆ ವಿಧವಾಗಿ ತಂದೆ ದಕ್ಷಿಣೆಯನ್ನು ಹಂಚುತ್ತಿದ್ದಾಗ ಪುತ್ರನಾದ ನಚಿಕೇತನಿಗೆ ತಂದೆಯ ಬಗ್ಗೆ ಆ ಎಳೆಯ ಹೃದಯದಲ್ಲಿ ತೀವ್ರವಾದ ಶ್ರದ್ಧೆಯುಂಟಾಯಿತು. ಆಗ ನಚಿಕೇತನು ಈ ರೀತಿಯಾಗಿ ಆಲೋಚಿಸಿದ.

**ಮಂ.ಶ್ಲೋ.॥ ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ**
**ಅನನ್ದಾನಾಮ ತೇ ಲೋಕಾಸ್ತಾನ್ಸ ಗಚ್ಛತಿ ತಾ ದದತ್ ॥ 3**

ತಾ॥ ತಂದೆ ದಾನ ಮಾಡಿದ ಗೋವುಗಳು ಇನ್ನು ನೀರು ಕುಡಿಯಲಾರವು. ಒಂದಿಷ್ಟು ಹುಲ್ಲನ್ನು ತಿನ್ನಲಾರವು. ಕೊಡಬೇಕಾದಷ್ಟು ಹಾಲನ್ನು ಕೊಟ್ಟು ಈಗ ಬರಡಾಗಿದೆ. ಆದ್ದರಿಂದ ಅಂತಹ ಗೋವುಗಳನ್ನು ದಾನ ಮಾಡುವವರು 'ಅನಂದ' (ಸುಖವಿಲ್ಲದ) ಎಂಬ ಹೆಸರಿನ ಪರಲೋಕಕ್ಕೆ ಹೋಗುತ್ತಾರೆ.

**ಮಂ.ಶ್ಲೋ.॥ ಸಹೋವಾಚ ಪಿತರಂ, ತಾತಃ ಕಸ್ಮೈ ಮಾಂ ದಾಸ್ಯಸೀತಿ । ದ್ವಿತೀಯಂ**
**ತೃತೀಯಂ ತಗ್ಂ ಹೋವಾಚ, ಮೃತ್ಯುವೇ ತ್ವಾ ದದಾಮೀತಿ ॥ 4**

ತಾ॥ ನಚಿಕೇತನು ತಂದೆಯನ್ನು ಸಮೀಪಿಸಿ 'ತಂದೆಯೇ ನನ್ನನ್ನು ಯಾರಿಗೆ ದಾನ ಕೊಡುತ್ತೀಯೆ?'' ಎಂದು ಪ್ರಶ್ನಿಸಿದನು. ತಂದೆ ಉತ್ತರ ಕೊಡದಿರಲು ಎರಡನೆಯ ಸಲ ಮೂರನೆಯ ಸಲ ಅದೇ ಪ್ರಶ್ನೆಯನ್ನು ಕೇಳಿದನು. ತಂದೆ ಬೇಸರಪಟ್ಟು ಕೋಪದಿಂದ "ಮೃತ್ಯುವಿಗೆ ಕೊಡುತ್ತೇನೆ" ಎಂದು ಹೇಳಿದ.

**ಮಂ.ಶ್ಲೋ.॥ ಬಹೂನಾ ಮೇಮಿ ಪ್ರಥಮೋ ಬಹೂನಾ ಮೇಮಿ ಮಧ್ಯಮಃ**
**ಕಿಗ್ಂಸ್ವಿ ದ್ಯಮಸ್ಯ ಕರ್ತವ್ಯಂ ಯನ್ಮ ಯೋಽದ್ಯ ಕರಿಷ್ಯತಿ ॥ 5**

ತಾ॥ ನಚಿಕೇತನು ಹೀಗೆ ಭಾವಿಸಿಕೊಂಡ "ಅನೇಕ ಮಂದಿ ಶಿಷ್ಯರಲ್ಲಿ ನಾನು ಉತ್ತಮನು. ಇಲ್ಲವೇ ಅನೇಕ ಮಂದಿಯಲ್ಲಿ ನಾನು ಮಧ್ಯಮನು. ಆದರೆ ಅಧಮನು ಮಾತ್ರ ಅಲ್ಲವೇ ಅಲ್ಲ. ಅಂತಹ ನನ್ನಿಂದ ಯಮಧರ್ಮರಾಜನಿಗೆ ಪ್ರಯೋಜನವೇನಾಗುತ್ತದೆ? ನನ್ನಿಂದ ಆತನು ಎಂತಹ ಕಾರ್ಯವನ್ನು ಸ್ವೀಕರಿಸಬಲ್ಲ? ಎಂದು ಹೇಳಿದ.

**ಮಂ.ಶ್ಲೋ.॥ ಅನುಪಶ್ಯ ಯಥಾಪೂರ್ವೇ ಪ್ರತಿಪಶ್ಯ ತಥಾಽಪರೇ**
**ಸಸ್ಯಮಿವ ಮರ್ತ್ಯಃ ಪಚ್ಯತೇ, ಸಸ್ಯಮಿವಾಽಽಜಾಯತೇ ಪುನಃ ॥ 6**

ತಾ॥ ಓ ತಂದೆಯೇ ನಮ್ಮ ಪೂರ್ವಿಕರು ಹೇಗೆ ಆಚರಿಸಿದರೋ, ನಮ್ಮ ಪೀಳಿಗೆಯವರು ಯಾವ ವಿಧವಾಗಿ ಪ್ರವರ್ತಿಸುತ್ತಿದ್ದಾರೋ ಜ್ಞಾಪಿಸಿಕೊಳ್ಳಿ. ಸಸ್ಯಗಳು ನಾಶವಾಗಿ ಮತ್ತೆ ಹುಟ್ಟುವಂತೆ

ಮಾನವನು ಈ ದೇಹವನ್ನು ತ್ಯಜಿಸಿ ಮತ್ತೆ ಪೈರಿನಂತೆಯೇ ಜನಿಸುತ್ತಿದ್ದಾನೆ" ಎಂದ. ನಚಿಕೇತ ಯಮನ ಸದನಕ್ಕೆ ಹೋಗಿ ಮೂರುದಿನಗಳಾದ ಮೇಲೆ ಯಮನು ಮನೆಯೊಳಗೆ ಪ್ರವೇಶಿಸು-ತ್ತಿದ್ದಂತೆಯೇ ಮನೆಯಲ್ಲಿನವರು ಹೀಗೆ ಹೇಳಿದರು.

**ಮಂ.ಶ್ಲೋ.॥ ವೈಶ್ವಾನರಃ ಪ್ರವಿಶತ್ಯತಿಥಿ ಬ್ರಾಹ್ಮಣೋ ಗೃಹಾನ್**
**ತಸ್ಯೈತಾಗ್ಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಂ ॥ 7**

ತಾ॥ ಅತಿಥಿಯಾಗಿ ಬಂದಿರುವ ಬ್ರಾಹ್ಮಣನು ಅಗ್ನಿಯಂತೆ ಮನೆಯೊಳಕ್ಕೆ ಬಂದಿದ್ದಾನೆ. ಆ ಬ್ರಾಹ್ಮಣನನ್ನು ಯಜಮಾನನಾದ ನೀನು ತೃಪ್ತಿಪಡಿಸಬೇಕು. ಯಮಧರ್ಮರಾಜಾ ನೀನು ನೀರನ್ನು ತೆಗೆದುಕೊಂಡು ಬಾ.

**ಮಂ.ಶ್ಲೋ.॥ ಆಶಾ ಪ್ರತೀಕ್ಷೇ ಸಂಗತಗ್ಂ ಸೂನೃತಾಂ ಚೇಷ್ಟಾಪೂರ್ತೇ ಪುತ್ರಪಶೂಗ್ಂಶ್ಚ ಸರ್ವಾನ್**
**ಏತದ್ವೃಂಕ್ತೇ ಪುರುಷಸ್ಯಾಲ್ಪಮೇಧಸೋ ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ ॥ 8**

ತಾ॥ ಯಾರ ಮನೆಯಲ್ಲಿ ಬ್ರಾಹ್ಮಣನು ನಿರಾಹಾರನಾಗಿದ್ದನೋ ಅಂತಹ ಅಜ್ಞಾನಿಯಲ್ಲಿರುವ ಆಶೆಗಳು, ಆಕಾಂಕ್ಷೆಗಳು, ಸತ್ಸಾಂಗತ್ಯ, ಮೈತ್ರಿ, ಯಜ್ಞಗಳು, ಪುಣ್ಯದಾನಗಳೆಲ್ಲವೂ, ಪುತ್ರ ಪಶು ಸಂಪತ್ತುಗಳೊಂದಿಗೆ ನಾಶವಾಗುತ್ತವೆ.

**ಮಂ.ಶ್ಲೋ.॥ "ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನ ಬ್ರಹ್ಮಾನ್ನತಿಥಿರ್ನಮಸ್ಯಃ**
**ನಮಸ್ತೇಽಸ್ತು ಬ್ರಹ್ಮಸ್ಸ್ವಸ್ತಿಮೇಽಸ್ತು ತಸ್ಮಾತ್ಪ್ರತಿತ್ರೀನ್ವರಾನ್ ವೃಣೀಷ್ವ"॥ 9**

ತಾ॥ ಅತಿಥಿಯಾಗಿ ಬಂದಿರುವ ಬ್ರಾಹ್ಮಣೋತ್ತಮಾ. ನೀನು ನನ್ನ ಗೃಹದಲ್ಲಿ ಮೂರು ರಾತ್ರಿಗಳು ಉಪವಾಸವಿದ್ದೆ. ಅದಕ್ಕೆ ಪ್ರಾಯಶ್ಚಿತ್ತವಾಗಿ ಮೂರು ವರಗಳನ್ನು ಕೊಡಬೇಕೆಂದಿದ್ದೇನೆ. ಕೋರಿಕೋ. ನಿನಗೆ ಸಮರ್ಪಿಸುತ್ತೇನೆ. ನಿನಗೆ ಶುಭವಾಗಲಿ ಎಂದು ವೈವಸ್ವತನು ನಚಿಕೇತನಿಗೆ ಹೇಳಿದ.

**ಮಂ.ಶ್ಲೋ.॥ ಶಾಂತಸಂಕಲ್ಪಸ್ಸುಮನಾ ಯಥಾಸ್ಯಾದ್ವೀತಮನ್ಯು ಗೌತಮೋ ಮಾಽಭಿಮೃತ್ಯೋ**
**ತ್ವತ್ಪ್ರಸೃಷ್ಟಂ ಮಾಭಿವದೇತ್ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ॥ 10**

ತಾ॥ ಓ ವೈವಸ್ವತಾ(ಯಮ)! ನನ್ನ ತಂದೆಯಾದ ಗೌತಮನು(ವಾಜಶ್ರವಸ್ಸನು) ನನ್ನ ಮೇಲೆ ಕೋಪಗೊಳ್ಳದೆ ಕರುಣೆ ತೋರಿ, ಸಮಾಧಾನ ಹೊಂದಿ, ನನ್ನನ್ನು ನೀನು ಪುನಃ ಕಳುಹಿಸಿದಾಗ, ಮತ್ತೆ ನನ್ನನ್ನು ಅಂಗೀಕರಿಸುವಂತೆ ಮಾಡು. ಇದು ನೀನು ಕೊಡಬೇಕೆಂದಿರುವ ಮೂರು ವರಗಳಲ್ಲಿ ಮೊದಲನೆಯದು ಎಂದು ನಚಿಕೇತ ಹೇಳಿದ.

**ಮಂ.ಶ್ಲೋ.॥ ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ**
**ಸುಖಗ್ಂ ರಾತ್ರೀಃ ಶಯಿತಾ ವೀತಮನ್ಯುಸ್ತ್ವಾಂ ದದೃಶಿವಾನ್ಮೃತ್ಯುಮುಖಾತ್ ಪ್ರಮುಕ್ತಮ್ ॥ 11**

ತಾ॥ ನಚಿಕೇತನು ಕೇಳಿದ ಮೊದಲನೆಯ ವರಕ್ಕೆ ಯಮನು ಅಂಗೀಕಾರವನ್ನು ಸೂಚಿಸಿದನು. ಆತನ ಅನುಗ್ರಹದಿಂದ ಆರುಣಿ ಪುತ್ರನಾದ ಔದ್ಧಾಲಕನು ನಿನ್ನನ್ನು ಗುರುತಿಸುತ್ತಾನೆ. ರಾತ್ರಿಯಲ್ಲಿ

ನಿರ್ವಿಚಾರವಾಗಿ (ಏನೊಂದೂ ಚಿಂತೆಯಿಲ್ಲದೆ) ಸುಖನಿದ್ರೆ ಮಾಡುವಂತವನಾಗಿ, ಮೃತ್ಯುಮುಖದಿಂದ ಹೊರಬಂದ ನಿನ್ನನ್ನು ಕೋಪವಿಲ್ಲದೆ ಆದರಿಸುವನು. ಇದಕ್ಕೆ ಮೊದಲು ನಿನ್ನ ತಂದೆ ನಿನ್ನ ಬಗ್ಗೆ ಎಷ್ಟು ಪ್ರೀತಿ ತೋರುತ್ತಿದ್ದನೋ ಅಷ್ಟೇ ಪ್ರೀತಿಯನ್ನು ನಿನ್ನಲ್ಲಿ (ನಿನ್ನ ಬಗ್ಗೆ) ಹೊಂದಿರುತ್ತಾನೆ.

ಮಂ.ಶ್ಲೋ.॥ **ಸ್ವರ್ಗೇಲೋಕೇ ನ ಭಯಂ ಕಿಂಚ ನಾಸ್ತಿ ನ ತತ್ರ ತ್ವಂ ನ ಜರಯಾ ಬಿಭೇತಿ**
**ಉಭೇ ತೀರ್ತ್ವಾಽಶನಾಯಾ ಪಿಪಾಸೇ ಶೋಕಾತೀಗೋ ಮೋದತೇ ಸ್ವರ್ಗಲೋಕೇ॥** 12

ತಾ॥ (ಸ್ವರ್ಗದ ಪ್ರಶಂಸೆ) ಹಸಿವು ಬಾಯಾರಿಕೆಗಳು, ಜರಾ ಮರಣಗಳಿಲ್ಲದೆ ಎಲ್ಲ (ಸಮಸ್ತ) ದುಃಖಗಳಿಗೂ ಅತೀತನಾಗಿ ಸ್ವರ್ಗದಲ್ಲಿ ಆನಂದಿಸುವಂತಾಗುತ್ತಾನೆ. ಅಲ್ಲಿ (ಎಂತಹ) ಯಾವ ಭಯವೂ ಇಲ್ಲ. ಬಾಹ್ಯ ಮಾನಸಿಕ ಶೋಕಗಳೂ ಇರುವುದಿಲ್ಲ. ನೀನು ಅಲ್ಲಿರಬಹುದು.

ಮಂ.ಶ್ಲೋ.॥ **ಸತ್ವಮಗ್ನಿಗ್ಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿತ್ವಗ್ಂ ಶ್ರದ್ಧಧಾನಾಯ ಮಹ್ಯಂ**
**ಸ್ವರ್ಗಲೋಕಾ ಅಮೃತತ್ವಂ ಭಜನ್ತ ಏತದ್ವಿತೀಯೇನ ವೃಣೇ ವರೇಣ** ॥ 13

ತಾ॥ ಓ ವೈವಸ್ವತಾ! ಸ್ವರ್ಗಸಾಧನವಾದ ಅಗ್ನಿ (ಯಜ್ಞವು) ನಿನಗೆ ಚೆನ್ನಾಗಿ ತಿಳಿದಿದೆ. ಶ್ರದ್ಧಾಳುವಾದ ನನಗೆ ಯಜ್ಞ ವಿಧಾನವನ್ನು ತಿಳಿಸಬೇಕೆಂದು ಎರಡನೆಯ ವರವಾಗಿ ಕೋರುತ್ತಿದ್ದೇನೆ.

ಮಂ.ಶ್ಲೋ.॥ **ಪ್ರತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿ ನಚಿಕೇತಃ ಪ್ರಜಾನನ್**
**ಅನನ್ತಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಂ॥** 14

ತಾ॥ ಓ ನಚಿಕೇತಾ! ಸ್ವರ್ಗಕ್ಕೆ ಕೊಂಡೊಯ್ಯುವ ಆ ಅಗ್ನಿ(ಯಜ್ಞ) ವಿಜ್ಞಾನವು ನನಗೆ ಚೆನ್ನಾಗಿ ಗೊತ್ತಿದೆ. ನಿನಗೆ ಹೇಳಿಕೊಡುತ್ತೇನೆ. ಶ್ರದ್ಧೆಯಿಂದ ಆಲಿಸಿ ತಿಳಿದುಕೋ. ಆ ವಿದ್ಯೆ ಶಾಶ್ವತ ಸ್ವರ್ಗ ಸುಖವನ್ನು ಅನುಭವಿಸುವುದಕ್ಕೆ ಸಾಧನವಾಗಿದೆ. ಸಕಲ ಲೋಕಗಳಿಗೂ ಆಧಾರವಾಗಿದೆ. ವಿದ್ವಾಂಸರ ಹೃದಯಗಳಲ್ಲಿ ಪ್ರಕಾಶಿಸುತ್ತಿದೆ.

ಮಂ.ಶ್ಲೋ.॥ **ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ। ನ**
**ಚಾಪಿ ತತ್ಪ್ರತ್ಯಪದದ್ಯಥೋಕ್ತಂ ಅಥಾಽಸ್ಯ ಮೃತ್ಯುಃ ಪುನರೇವಾಹ ತುಷ್ಟಃ॥** 15

ತಾ॥ ಆನಂತರ ಯಮನು ಆ ಅಗ್ನಿವಿಜ್ಞಾನವನ್ನು ಅರುಹಿದನು. ಆ ಯಜ್ಞವು ಎಲ್ಲ ಲೋಕಗಳಿಗೆ ಕಾರಣವೆಂದೂ, ಆ ಯಜ್ಞದಲ್ಲಿ ಎಂತಹವು ಯಾವ ರೀತಿಯಲ್ಲಿ ಎಷ್ಟು ಇಟ್ಟಿಗೆಗಳನ್ನು ಉಪಯೋಗಿಸಬೇಕೋ ಪೂರ್ತಿಯಾಗಿ ವಿವರಿಸಿದ. ನಚಿಕೇತನು ಅದನ್ನೆಲ್ಲಾ ಧಾರಣೆ ಮಾಡಿ ಕೂಡಲೇ ಒಪ್ಪಿಸಿದ. ಸಂತುಷ್ಟನಾದ ಯಮನು ಮತ್ತೊಂದು ವರವನ್ನು ಕೊಡಬಯಸಿ ಕೋರಿಕೊಳ್ಳಲು ಹೇಳಿದ.

ಮಂ.ಶ್ಲೋ.॥ **ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ ವರಂ ತವೇಹಾದ್ಯ ದದಾಮಿ ಭೂಯಃ**
**ತವೈವ ನಾಮ್ನಾ ಭವಿತಾಽಯಮಗ್ನಿಃ ಸೃಂಕಾಂ ಚೇಮಾಮನೇಕರೂಪಾಂ ಗೃಹಾಣ॥**16

ತಾ॥ ಮಹಾತ್ಮನಾದ ಯಮನು ಆನಂದಪಟ್ಟು ನಚಿಕೇತನೊಂದಿಗೆ ಹೇಳುತ್ತಿದ್ದಾನೆ. ನಿನಗೆ ಮತ್ತೊಂದು ವರವನ್ನು ಕೊಡುತ್ತಿದ್ದೇನೆ. ಆ ಅಗ್ನಿಯು ನಿನ್ನ ಹೆಸರಿನಲ್ಲಿ ಪ್ರಸಿದ್ಧಿ ಪಡೆಯುವಂತಾಗಲೀ ಮತ್ತು ನೀನು ಈ ಚಿತ್ರಮಾಲೆ (ರತ್ನಮಾಲೆ)ಯನ್ನು ಸ್ವೀಕರಿಸು.

ಮಂ.ಶ್ಲೋ.॥ ತ್ರಿಣಾಚಿಕೇತ ಸ್ತ್ರೀಭಿರೇತ್ಯ ಸಂಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ । ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ ನಿಚಾಯ್ಯೇ ಮಾಗ್ಂ ಶಾಂತಿಮತ್ಯನ್ತ್ಯಮೇತಿ ॥ 17

ತಾ॥ (ಅಗ್ನಿಚಯನ ಕರ್ಮ ಪ್ರಶಂಸೆ) ಮೂರುಬಾರಿ ನಚಿಕೇತಾಗ್ನಿಚಯನವನ್ನು ಮಾಡಿ-ದವರು, ತಾಯಿ, ತಂದೆ, ಗುರುವೆನ್ನುವ ಮೂವರಿಂದಲೂ ಅನುಶಾಸನವನ್ನು ಹೊಂದಿ ಮೂರು ವಿಧಿಗಳನ್ನು ಪಾಲಿಸುವಂತಹವನಾಗುತ್ತಾರೆ ಮತ್ತು ಜನನ ಮರಣಗಳಿಗೆ ಅತೀತನಾಗುತ್ತಾರೆ. ಅಂತಹವರು ಬ್ರಹ್ಮನಿಂದ ಜನಿಸಿ, ಬ್ರಹ್ಮಜ್ಞಾನವನ್ನು ಹೊಂದಿ (ಪ್ರಶಾಂತಿ) ಶಾಂತಿಯನ್ನು ಅನುಭವಿಸುತ್ತಾರೆ. ಪ್ರಕಾಶವಂತನಾಗುತ್ತಾರೆ.

ಮಂ.ಶ್ಲೋ.॥ ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ ಯ ಏವಂ ವಿದ್ವಾಗ್ಶ್ಚಿನುತೇ ನಾಚಿಕೇತಮ್। ಸ ಮೃತ್ಯುಪಾಶಾನ್ಪುರತಃ ಪ್ರಣೋದ್ಯ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ 18

ತಾ॥ ಈ ಜ್ಞಾನದೊಂದಿಗೆ ಯಾರು ನಚಿಕೇತಾಗ್ನಿಯನ್ನು ಅಭ್ಯಾಸ ಮಾಡುತ್ತಾರೋ ಅಂತಹ ವಿದ್ವಾಂಸರು ಸಂಸಾರದುಃಖ ವಿಮುಕ್ತರಾಗಿ ಸ್ವರ್ಗದಲ್ಲಿ ಸರ್ವಸುಖಗಳನ್ನು ಪಡೆದು ಆನಂದದಿಂದ ಇರುತ್ತಾರೆ.

ಮಂ.ಶ್ಲೋ.॥ ಏಷತೇಽಗ್ನಿರ್ನಚಿಕೇತಃ ಸ್ವರ್ಗ್ಯೋ ಯಮವೃಣೀಥಾ ದ್ವಿತೀಯೇನ ವರೇಣ । ಏತಮಗ್ನಿಂ ತವೈವ ಪ್ರವಕ್ಷ್ಯನ್ತಿ ಜನಾಸಸ್ತೃತೀಯಂ ವರಂ ನಚಿಕೇತೋ ವೃಣೀಷ್ವ ॥ 19

ತಾ॥ ಸ್ವರ್ಗಕ್ಕೆ ಕರೆದೊಯ್ಯುವ ಈ ಅಗ್ನಿ ವಿದ್ಯೆಯನ್ನು ನೀನು ಎರಡನೆಯ ವರವಾಗಿ ಕೋರಿದ್ದರೂ ಅದನ್ನು ಪ್ರಜೆಗಳು ನಿನ್ನ ಹೆಸರಿನಲ್ಲೇ ಕರೆಯುತ್ತಾರೆ. ಓ ನಚಿಕೇತಾ! ಮೂರನೆಯ ವರವನ್ನು ಸಹ ನೀನು ಕೋರಿಕೋ.

ಮಂ.ಶ್ಲೋ.॥ ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ ವರಸ್ತೃತೀಯಃ ॥ 20

ತಾ॥ ಮನುಷ್ಯನು (ಜೀವಾತ್ಮ) ತನ್ನ ದೇಹವನ್ನು ತ್ಯಜಿಸಿದ ನಂತರ, ಕೆಲವರು ಆತನಿದ್ದಾನೆಂದು, ಕೆಲವರು ಆತನಿಲ್ಲವೆಂದು ಹೇಳುತ್ತಿದ್ದಾರೆ. ನಿನ್ನಿಂದ ಬೋಧಿಸಲ್ಪಟ್ಟವನಾಗಿ ನಾನು ಆ ರಹಸ್ಯವನ್ನು ನಿನ್ನಿಂದ ಕೇಳಬೇಕೆಂದು ಇದ್ದೇನೆ. ಮೂರನೆಯ ವರ ಇದೇ.

ಮಂ.ಶ್ಲೋ.॥ ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ, ನ ಹಿ ಸುಜ್ಞೇಯಮಣುರೇಷಧರ್ಮಃ ಅನ್ಯಂ ವರಂ ನಚಿಕೇತೋ ವೃಣೀಷ್ವ, ಮಾ ಮೋಪರೋತ್ಸೀರತಿ ಮಾ ಸೃಜೈನಮ್ ॥ 21

ತಾ॥ ನಚಿಕೇತಾ! ಆತ್ಮ ವಿಷಯದಲ್ಲಿನ ಈ ಧರ್ಮವು ಅತ್ಯಂತ ಸೂಕ್ಷ್ಮವಾದುದು. ಈ ವಿಷಯದಲ್ಲಿ ಹಿಂದೆ ದೇವತೆಗಳು ಕೂಡಾ ಸಂಶಯವನ್ನು ಹೊಂದಿದವರಾಗಿದ್ದರು. ಸೂಕ್ಷ್ಮಾತಿಸೂಕ್ಷ್ಮವಾದ್ದರಿಂದ ಇದನ್ನು ಅತಿ ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಈ ವಿಷಯದಲ್ಲಿ ನನ್ನನ್ನು ಬಲವಂತ ಮಾಡಬೇಡ. ಇದನ್ನು ಬಿಟ್ಟು ಮತ್ತೇನಾದರೂ ವರವನ್ನು ಕೋರಿಕೋ.

**ಮಂ.ಶ್ಲೋ.॥ ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂ ಚ ಮೃತ್ಯೋಯನ್ನ ಸುಜ್ಞೇಯಮಾತ್ಥ**
**ವಕ್ತಾಚಾಸ್ಯ ತ್ವಾದೃಗನ್ಯೋ ನಲಭ್ಯೋ ನಾನ್ಯೋವರಸ್ತುಲ್ಯ ಏತಸ್ಯ ಕಶ್ಚಿತ್ ॥ 22**

ತಾ॥ ಓ ಮೃತ್ಯುದೇವಾ! ದೇವತೆಗಳು ಸಹಾ ಈ ವಿಷಯದಲ್ಲಿ ಸಂಶಯಗ್ರಸ್ತರಾದರೆಂದು, ಆತ್ಮಧರ್ಮವು ತಿಳಿದುಕೊಳ್ಳುವುದು ಸುಲಭ ಸಾಧ್ಯವಲ್ಲವೆಂದು ನೀನೇ ಹೇಳಿರುವೆ. ನಿನಗಿಂತ ದೊಡ್ಡವನು, ಆತ್ಮಧರ್ಮವನ್ನು ತಿಳಿಸಿಕೊಡುವಂತಹವನು ಮತ್ತೊಬ್ಬರಿಲ್ಲ. ಈ ವರಕ್ಕೆ ಸಮಾನವಾದ ವರವೂ ಮತ್ತೊಂದಿಲ್ಲ.

**ಮಂ.ಶ್ಲೋ.॥ ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ಪಶೂನ್ ಹಸ್ತಿ ಹಿರಣ್ಯಮಶ್ವಾನ್**
**ಭೂಮೇರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ 23**

ತಾ॥ ನಚಿಕೇತಾ! ಪೂರ್ಣಾಯಸ್ಸುಳ್ಳ ಪುತ್ರ ಪೌತ್ರರನ್ನು ಕೋರಿಕೋ. ಅಸಂಖ್ಯಾತವಾದ ಪಶುಗಳನ್ನು, ಗಜಗಳನ್ನು, ಅಶ್ವಗಳನ್ನು ಸುವರ್ಣವನ್ನು ಕೋರಿಕೋ, ವಿಸ್ತಾರವಾದ ಸಾಮ್ರಾಜ್ಯವನ್ನು ಕೋರಿಕೋ. ನಿನಗಿಷ್ಟ ಬಂದಷ್ಟು ಕಾಲ ಬದುಕಿರು.

**ಮಂ.ಶ್ಲೋ.॥ ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂ ಚ**
**ಮಹಾಭೂಮೌ ನಚಿಕೇತಸ್ತ್ವಮೇಧಿ ಕಾಮಾನಾಂ ತ್ವಾ ಕಾಮಭಾಜಂ ಕರೋಮಿ॥ 24**

ತಾ॥ ಓ ನಚಿಕೇತಾ! ಅಪಾರವಾದ ಐಶ್ವರ್ಯ, ಪೂರ್ಣ ಆಯುಷ್ಯ, ಭೂ ಪ್ರಪಂಚಕ್ಕೆ ಚಕ್ರವರ್ತಿ-ಯಾಗುವುದು ಇವೆಲ್ಲವನ್ನೂ ನೀನು ಅನುಭವಿಸುವಂತೆ ಮಾಡುವೆ. ಇದಕ್ಕೆ ಸರಿಸಮಾನವಾದ ಮತ್ತೊಂದು ವರ ಬೇಕಿದ್ದರೆ ಅದನ್ನೂ ಕೋರಿಕೋ.

**ಮಂ.ಶ್ಲೋ.॥ ಯೇ ಯೇ ಕಾಮ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾನ್ಶ್ಛಂದತಃ ಪ್ರಾರ್ಥಯಸ್ವ।**
**ಇಮಾ ರಾಮಾಃ ಸರಥಾಃ ಸತೂರ್ಯಾ ನ ಹೀದೃಶಾ ಲಂಭನೀಯಾಃ ಮನುಷ್ಯೈಃ।**
**ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ ಮಾऽನುಪ್ರಾಕ್ಷೀಃ ॥ 25**

ತಾ॥ ಓ ನಚಿಕೇತಾ! ಈ ಮನುಷ್ಯಲೋಕದಲ್ಲಿ ಯಾವಯಾವ ವಿಷಯಭೋಗಗಳು ದುರ್ಲಭ-ವಾಗಿವೆಯೋ ಆ ವರಗಳಲ್ಲಿ ನಿನಗಿಷ್ಟ ಬಂದುದನ್ನು ಕೋರಿಕೋ. ಮಾನವಲೋಕ ದುರ್ಲಭವಾದ ಈ ಅಪ್ಸರೆಯರು ಅವರ ರಥಗಳಲ್ಲಿ ಸಂಗೀತ ವಾದ್ಯಗಳೊಂದಿಗೆ ಅನುಭವಿಸತಕ್ಕವರು, ಅವರನ್ನು ನಿನಗೆ ನೀಡುತ್ತಿದ್ದೇನೆ, ಅವರನ್ನು ಪೂರ್ತಿಯಾಗಿ ಅನುಭವಿಸು. ಮರಣಾನಂತರದ ಆತ್ಮವಿಚಾರವನ್ನು ಕುರಿತು ಮಾತ್ರ ಮತ್ತೆ ಕೇಳಬೇಡ.

**ಮಂ.ಶ್ಲೋ.॥ ಶ್ವೋಭಾವಮರ್ತ್ಯಸ್ಯ ಯದನ್ತಕೈ ತತ್ಸರ್ವೇಂದ್ರಿಯಾಣಾಂ ಜರಯನ್ತಿ ತೇಜಃ**
**ಅಪಿ ಸರ್ವಂ ಜೀವಿತಮಲ್ಪಮೇವ, ತವೈವ ವಾಹಾಸ್ತವ ನೃತ್ಯಗೀತೇ ॥ 26**

ತಾ॥ ಓ ಯಮರಾಜಾ! ಮನುಷ್ಯರಿಗೆ ಸರ್ವಭೋಗಗಳು ಶಾಶ್ವತವಾದುದಲ್ಲ. ಇವೆಲ್ಲವೂ ಇಂದ್ರಿಯಗಳಲ್ಲಿನ ಶಕ್ತಿಯನ್ನು ನಾಶಪಡಿಸುವಂತಹವುಗಳು. ದೀರ್ಘಾಯಸ್ಸು ಸಹಾ ಅಲ್ಪವಾದ ಕೋರಿಕೆಯೇ. ಆದ್ದರಿಂದ ಈ ಅಪ್ಸರೆಯರು, ನೃತ್ಯಗೀತೆಗಳು ರಥಾಶ್ವಗಳು ಇವೆಲ್ಲವೂ ನಿನಗೇ ಇರಲಿ.

**ಮಂ.ಶ್ಲೋ.॥ ನ ವಿತ್ತೇನ ತರ್ಪಣೀಯೋ ಮನುಷ್ಯೋ, ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮಚೇತ್ತ್ವಾ ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ವರಸ್ತು ಮೇ ವರಣೀಯಃ ಸಃ ಏವ॥ 27**

ತಾ॥ ಮಾನವನೆಂದಿಗೂ ಭೋಗಭಾಗ್ಯಗಳೊಂದಿಗೆ ಸಂತೃಪ್ತಿಯನ್ನು ಹೊಂದಲಾರ. ನಿನ್ನನ್ನು ದರ್ಶನ ಮಾಡಿದ ಮೇಲೆ ಐಶ್ವರ್ಯ ಲಭಿಸುವುದು. ನೀನು ರಾಜ್ಯವಾಳುವಷ್ಟು ಕಾಲ ನಾವು ಕೂಡಾ ಜೀವಿಸಿರುತ್ತೇವೆ. ಆದ್ದರಿಂದ ನಾನು ಕೋರಿರುವ ಆತ್ಮಸಂಬಂಧವಾದ ಆ ವರವನ್ನೇ ಪ್ರಸಾದಿಸು ಮಾನವನೆಂದಿಗೂ ಭೋಗಭಾಗ್ಯಗಳಿಂದ ಸಂತೃಪ್ತಿ ಹೊಂದಲಾರ.

**ಮಂ.ಶ್ಲೋ.॥"ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ಮರ್ತ್ಯಃ ಕ್ವಧಸ್ಥಃ ಪ್ರಜಾನನ್ ಅಭಿಧ್ಯಾಯ ಸ್ವರ್ಣ ರತಿ ಪ್ರಮೋದಾನ್ ಅತಿದೀರ್ಘೇ ಜೀವಿತೇ ಕೋ ರಮೇತ"॥ 28**

ತಾ॥ ಮಹಾತ್ಮನು, ಶಾಶ್ವತನು ಆದ ಯಮಧರ್ಮರಾಜನ ಅನುಗ್ರಹವನ್ನು ಹೊಂದಿಯೂ ಸಹ, ಬುದ್ಧಿವಂತನಾದ ಯಾವ ಮನುಷ್ಯನು ವಿಷಯ ಸುಖಗಳ ಸ್ವಭಾವವನ್ನು ಅರಿತು ದೀರ್ಘಾಯಸ್ಸನ್ನು ಬಯಸುತ್ತಾನೆ?

**ಮಂ.ಶ್ಲೋ.॥ ಯಸ್ಮಿನ್ನಿದಂ ವಿಚಿಕಿತ್ಸನ್ತಿಮೃತ್ಯೋ ಯತ್ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ ಯೋಽಯಂ ವರೋ ಗೂಢಮನುಪ್ರವಿಷ್ಟೋ ನಾನ್ಯಂ ತಸ್ಮಾನ್ನಚಿಕೇತಾವೃಣೀತೇ॥ 29**

ತಾ॥ ಓ ಮೃತ್ಯುದೇವಾ! ನನ್ನನ್ನು ಪರೀಕ್ಷಿಸುವುದನ್ನು ಬಿಟ್ಟು ಆತ್ಮಜ್ಞಾನವನ್ನು ಮಾತ್ರವೇ ನನಗೆ ತಿಳಿಸುವಂತವನಾಗು. ಯಾವುದರ ಹಿಂದೆ ಹೆಚ್ಚಿನ ಮಹತ್ತಿರುವುದೋ, ಯಾವುದು ಇದುವರೆಗೂ ಅನೂಹ್ಯವೋ, ಅಂತಹ ಆತ್ಮಜ್ಞಾನವನ್ನು ಕುರಿತಲ್ಲದೆ, ಇತರ ಯಾವ ವರವನ್ನೂ ನಚಿಕೇತನು ಕೋರಿಕೊಳ್ಳಲಾರ. ದೇವತೆಗಳೆಲ್ಲರೂ ಯಾವ ವಿಷಯದಲ್ಲಿ ಸಂದೇಹ ತಳೆದಿದ್ದರೋ ಆಲೋಚನೆಯಲ್ಲಿ ಬಿದ್ದಿದ್ದರೋ ಆ ಜ್ಞಾನವನ್ನು ತಿಳಿಸಿಕೊಡು.

## (ಪ್ರಥಮಾಧ್ಯಾಯ) ೨ನೇ ವಲ್ಲಿ

**ಮಂ.ಶ್ಲೋ.॥ ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಸ್ತೇ ಉಭೇ ನಾನಾರ್ಥೇ ಪುರುಷಗ್ಂ ಸಿನೀತಃ ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ ಹಿಯತೇಽರ್ಥಾದ್ಯ ಉಪ್ರೇಯೋ ವೃಣೀತೇ॥ 1 (30)**

ತಾ॥ ಯಮನು ಹೇಳುತ್ತಿದ್ದಾನೆ. "ಒಂದು ಶ್ರೇಯಸ್ಸನ್ನು ಕುರಿತಾದುದು. ಎರಡನೆಯದು ಪ್ರೇಯಸ್ಸನ್ನು ಕುರಿತಾದುದು. ವಿಭಿನ್ನ ದೃಷ್ಟಿಯಿರುವ ಈ ಎರಡೂ ಮಾನವನನ್ನು ಬಂಧಿಸುತ್ತಿರುತ್ತವೆ. ಯಾರು ಶ್ರೇಯಸ್ಸನ್ನೇ ಬಯಸುತ್ತಾನೋ ಅವನು ಶುಭವನ್ನು ಹೊಂದುತ್ತಾನೆ. ಪ್ರೇಯಸ್ಸನ್ನು ವಾಂಛಿಸುವವನು ಗಮ್ಯ ಸ್ಥಾನವನ್ನು ತಲುಪಲಾರ.

**ಮಂ.ಶ್ಲೋ.॥ ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ
ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋಮನ್ದೋ
ಯೋಗಕ್ಷೇಮಾದ್ವೃಣೀತೇ ॥ 2(31)**

ತಾ।। ಶ್ರೇಯುಸ್ಸು(ಪರಲೋಕದ ಮಂಗಳ) ಪ್ರೇಯುಸ್ಸು(ಇಹಲೋಕದ ಮಂಗಳ) ಎನ್ನುವುದೆರಡೂ ಮಾನವನ ಬಳಿ ಬರುತ್ತವೆ. ವಿವೇಕಿಯಾದವನು ಪರೀಕ್ಷಿಸಿ ವಿಮರ್ಶಿಸಿಕೊಳ್ಳುತ್ತಾನೆ. ಏಕೆಂದರೆ ಅವನು ಪ್ರೇಯಸ್ಸಿಗಿಂತ ಶ್ರೇಯಸ್ಸನ್ನೇ ಕೋರಿಕೊಳ್ಳುತ್ತಾನೆ. ಆದರೆ ಅಜ್ಞಾನಿಯಾದವನು ಇಹದಲ್ಲಿನ ಯೋಗಕ್ಷೇಮಗಳಗೋಸ್ಕರ ಪ್ರೇಯಸ್ಸನ್ನೇ ಇಚ್ಛಿಸುತ್ತಾನೆ.

**ಮಂ.ಶ್ಲೋ.।। ಸತ್ವಂ ಪ್ರಿಯಾನ್ ಪ್ರಿಯರೂಪಾಗ್ಂಶ್ಚ ಕಾಮಾನಭಿಧ್ಯಾಯನ್ನಚಿಕೇತೋಽತ್ಯ ಸ್ರಾಕ್ಷೀಃ**
**ನೈತಾಗ್ಂ ಸೃಂಕಾಂ ವಿತ್ತಮಯೀಮವಾಪ್ತೋ ಯಸ್ಯಾಂ ಮಜ್ಜನ್ತಿ ಬಹವೋ ಮನುಷ್ಯಾಃ।।**
**3(32)**

ತಾ।। ಪ್ರಿಯರೂಪಗಳನ್ನು ಹೊಂದಿದಂತಹವುಗಳಾಗಿ, ಕಾಮ್ಯಗಳೆನ್ನುವ ಆ ಸಂಪತ್ತನ್ನು ಆಶೆಯನ್ನು, ಅವುಗಳ ಸಹಜಸ್ವಭಾವವನ್ನು ಅರಿತವನಾಗಿ ತ್ಯಜಿಸುತ್ತಾನೆ. ಮನುಷ್ಯರು ಯಾವ ಮಾರ್ಗವನ್ನನುಸರಿಸಿ ಕುಗ್ಗಿಹೋಗುತ್ತಿದ್ದಾರೋ, ಅಂತಹ ಧನವೇ ಪ್ರಧಾನವಾಗಿರುವ ಮಾರ್ಗದಲ್ಲಿ ನೀನು ಹೋಗುತ್ತಿಲ್ಲ.

**ಮಂ.ಶ್ಲೋ.।। ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾಚ ವಿದ್ಯೇತಿ ಜ್ಞಾತಾ ।**
**ವಿದ್ಯಾಽಭೀಪ್ಸಿನಂ ನಚಿಕೇತಸಂ ಮನ್ಯೇ ನ ತ್ವಾ ಕಾಮಾ ಬಹಾವೋಽಲೋಲುಪನ್ತ।।**
**4(33)**

ತಾ।। ವಿದ್ಯೆ, ಅವಿದ್ಯೆ, ಎನ್ನುವ ಈ ಎರಡೂ ದೂರ ದೂರದಲ್ಲಿದ್ದು ಬೇರೆ ಬೇರೆ ಪ್ರಯೋಜನಕ್ಕಾಗಿ ಇರತಕ್ಕಂತಹವುಗಳು. ಅನೇಕ ಕಾಮ್ಯ ವಸ್ತುಗಳನ್ನು ಕೊಡುತ್ತದೆಯೆಂದು ತಿಳಿದಿದ್ದರೂ ಅವುಗಳ ಆಕರ್ಷಣೆಗೆ ಒಳಗಾಗದೆ ಇದ್ದುದರಿಂದಲೇ ನಚಿಕೇತನು ವಿದ್ಯೆಯನ್ನು ಮನಸ್ಫೂರ್ತಿಯಾಗಿ ಬಯಸುತ್ತಿದ್ದಾನೆಂದು ಭಾವಿಸುತ್ತಿದ್ದೇನೆ.

**ಮಂ.ಶ್ಲೋ.।। ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ।**
**ದನ್ದ್ರಮ್ಯಮಾಣಾಃ ಪರಿಯನ್ತಿಮೂಢಾಃ ಅಂಧೇನೈವ ನೀಯಮಾನಾ ಯಥಾಽಂಧಾಃ।। 5(34)**

ತಾ।। ಅವಿದ್ಯೆಯಲ್ಲಿ ವಾಸಮಾಡುತ್ತಾ, ತಾವೇ ಪಂಡಿತರೆಂದು, ವಿವೇಕವಂತರೆಂದು ಭಾವಿಸುತ್ತಾ ಗರ್ವದಿಂದ ತುಂಬಿ ಬೀಗುವ ಮೂಢರು ಕುರುಡನ ಹಿಂದೆ ಹೋಗುವ ಕುರುಡನಂತೆಯೇ ತಿರುಗಾಡುತ್ತಿರುತ್ತಾರೆ.

**ಮಂ.ಶ್ಲೋ.।। ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯನ್ತಂ ವಿತ್ತಮೋಹೇನ ಮೂಢಮ್।**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ।। 6(35)**

ತಾ।। ಪ್ರಮತ್ತನಾದ ಅಜ್ಞಾನಿಗೆ ಧನಮೋಹದಿಂದ ಮುಗ್ಧನಾದಾಗ, ಪರಲೋಕ ಮಾರ್ಗವು ಕಾಣಿಸುವುದಿಲ್ಲ. ಇದೇ ವಾಸ್ತವವಾಗಿರುವ ಲೋಕ. ಪರಲೋಕವು ಇಲ್ಲ. ಎಂದು ತಿಳಿಯುವವನು ಮತ್ತೆ ಮತ್ತೆ ನನ್ನ ವಶನಾಗುತ್ತಾನೆ. (ಮೃತ್ಯು ಮುಖನಾಗುತ್ತಾನೆ) ಎಂದು ಮೃತ್ಯುದೇವತೆ (ಯಮ ಧರ್ಮರಾಜ) ಹೇಳುತ್ತಿದ್ದಾನೆ.

**ಮಂ.ಶ್ಲೋ.॥ಶ್ರವಣಾಯಾಽಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಽಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ॥** 7 (36)

ತಾ॥ ಆತ್ಮವನ್ನು ಕುರಿತು ಕೇಳಲು ಅನೇಕರಿಗೆ ಸಾಧ್ಯವಾಗುವುದಿಲ್ಲ. ಒಂದು ವೇಳೆ ಕೇಳಿದರೂ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆಗುವುದಿಲ್ಲ. ಅಂತಹ ಸ್ಥಿತಿಯಲ್ಲಿ ಆತ್ಮಜ್ಞಾನವನ್ನು ಬೋಧಿಸುವವರು ಲಭಿಸುವುದೂ ಆಶ್ಚರ್ಯಕರವಾದ ವಿಷಯವೇ! ಸರಿಯಾದ (ತಕ್ಕ) ಗುರುವಿನ ಮೂಲಕ ಬೋಧಿಸಲ್ಪಟ್ಟವನಾಗಿ ಅದನ್ನು ಗ್ರಹಿಸಬಲ್ಲ ಶಿಷ್ಯನು ಲಭಿಸುವುದೆನ್ನುವುದು ಆಶ್ಚರ್ಯ-ಕರವಾದ ವಿಷಯವೇ.

**ಮಂ.ಶ್ಲೋ.॥ ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್॥**8(37)

ತಾ॥ ಬಹುರೀತಿಗಳಲ್ಲಿ ವಿಚಾರಿಸಬೇಕು. ಆ ಬ್ರಹ್ಮತತ್ತ್ವ ಅಲ್ಪಬುದ್ಧಿಗಳಿಂದ ಬೋಧಿಸಲ್ಪಟ್ಟಿಲ್ಲದ್ದು. ಅರಿತುಕೊಳ್ಳಲು ಸಾಧ್ಯವೇ ಇಲ್ಲ. ಆದರೆ ಆ ಬ್ರಹ್ಮತತ್ತ್ವ ಬ್ರಹ್ಮಜ್ಞಾನವನ್ನು ಹೊಂದಿದ ಸದ್ಗುರುವಿನ ಮೂಲಕ ಬೋಧಿಸಲ್ಪಟ್ಟರೆ ಅದನ್ನು ಪಡೆಯಬಹುದು. ಆ ಬ್ರಹ್ಮತತ್ತ್ವ ಅಣುವಿಗಿಂತ ಅಣುವಾಗುವುದ-ರಿಂದ, ಕೇವಲ ವಾದದಿಂದ ಸಿದ್ಧಿಸುವಂತಹುದಲ್ಲ, ಅದು ಅನುಭವಕ್ಕೆ ಸಂಬಂಧಿಸಿರುವ ವಿಷಯ.

**ಮಂ.ಶ್ಲೋ.॥ ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ।**
**ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಗ್‌ನೋ ಭೂಯಾನ್ನಚಿಕೇತಃ ಪ್ರಷ್ಟಾ ॥**
9 (38)

ತಾ॥ ಈ ಆತ್ಮಜ್ಞಾನವು ತರ್ಕದ ಮೂಲಕ ಪಡೆಯುವಂತಹುದಲ್ಲ. ಮತ್ತೊಬ್ಬರಿಂದ (ಸದ್ಗುರುವಿನಿಂದ) ಉಪದೇಶ ಹೊಂದಿದಾಗಲೇ ಇದು ಸುಲಭವಾಗಿ ಅರ್ಥವಾಗುವುದು. ನೀನು ಅದನ್ನು ಪಡೆದು ಅಂತಹ ಸತ್ಯದಲ್ಲಿ ಸ್ಥಿರವಾಗಿ ನಿಂತುಬಿಟ್ಟೆ. ಓ ನಚಿಕೇತಾ! ನಿನ್ನಂತಹ ಜಿಜ್ಞಾಸುಗಳು ಮತ್ತೆ ನಮಗೆ ಲಭಿಸುವರೇ?

**ಮಂ.ಶ್ಲೋ.॥ಜಾನಾಮ್ಯಹಗ್‌ಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್।**
**ತತೋ ಮಯಾ ನಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಂ॥**
10(39)

ತಾ॥ ಧನವು ಅನಿತ್ಯವೆಂದು ನನಗೆ ತಿಳಿದಿದೆ. ಆಸ್ಥಿರವಾದ ಆತ್ಮವು ಈ ಅಸ್ಥಿರವಾದವುಗಳ ಮೂಲಕ ಹೊಂದಲಾಗದ್ದೆಂದು ನನಗೆ ಸ್ಪಷ್ಟವಾಗಿ ತಿಳಿದಿದೆ. ಆದರೂ ನನ್ನಿಂದ ನಚಿಕೇತಾಗ್ನಿ ಹೊರಬರುತ್ತಿದೆ. ಆದ್ದರಿಂದಲೇ ಈ ನಿತ್ಯವನ್ನು ಅನುಭವಿಸುತ್ತಿದ್ದೇನೆ.

**ಮಂ.ಶ್ಲೋ.॥ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನನ್ತ್ಯಮಭಯಸ್ಯ ಪಾರಮ್ । ಸ್ತೋಮ**
**ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀಽರೋ ನಚಿಕೇತೋಽತ್ಯಸ್ರಾಕ್ಷೀಃ ॥**
11(40)

ತಾ॥ ಕೋರಿಕೆಗಳೆಲ್ಲವನ್ನೂ ನೆರವೇರಿಸಿಕೊಳ್ಳುವುದು ಲೋಕದಲ್ಲಿ ಸಹಜವಾದುದು. ಕರ್ಮಗಳೆಲ್ಲದರ ಶಾಶ್ವತ ಫಲ. ಭಯರಹಿತವಾದ ತೀರ (ದಡ)ವು ಸ್ತುತ್ಯರ್ಥವಾದುದು. ಅದು ಬಹಳ ಮೇಲ್ಮಟ್ಟದ್ದು. ಮಹಾವಿಶ್ರಾಂತಿಸ್ಥಾನ. ಜೀವನದಲ್ಲಿನ ಆಶ್ರಯತಾಣವಾದ ಅದನ್ನು ನೋಡಿ, ಓ ನಚಿಕೇತನೇ! ನೀನು ದೃಢವಾದ ಸಂಕಲ್ಪದೊಂದಿಗೆ ಪ್ರಾಪಂಚಿಕ ಸುಖಗಳನ್ನು ತಳ್ಳಿಹಾಕಿಬಿಟ್ಟೆ.

**ಮಂ.ಶ್ಲೋ.॥ ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ**
**ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ 12(41)**

ತಾ॥ ಸಾಹಸವಂತನಾದ ಯೋಗಿ. ತನ್ನ ಆತ್ಮಧ್ಯಾನ ಸಾಧನದ ಮೂಲಕ ಪುರಾಣರೂಪ ಪಡೆದು, ಚರ್ಮಚಕ್ಷುವಿಗೆ ಅಗೋಚರವಾಗಿ, ಹೃದಯ ಕುಹರದಲ್ಲಿ ಗುಪ್ತವಾಗಿದ್ದು ಸಂಸಾರ-ಬಂಧನದಲ್ಲಿ ಸಿಲುಕಿಕೊಂಡು ಬುದ್ಧಿ ಮಧ್ಯಸ್ಥವಾಗಿದ್ದುಕೊಂಡು ಆ ಪರಮಾತ್ಮನನ್ನು ದರ್ಶನ ಮಾಡಿ ಸುಖದುಃಖಗಳನ್ನು ತ್ಯಜಿಸಿಬಿಡುತ್ತಾನೆ.

**ಮಂ.ಶ್ಲೋ.॥ "ಏತಚ್ಛ್ರುತ್ವಾ ಸಂಪರಿಗೃಹ್ಯಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ**
**ಸ ಮೋದತೇ ಮೋದನೀಯಗ್ಂ ಹಿ ಲಬ್ಧ್ವಾ ವಿವೃತಗ್ಂ ಸದ್ಮ ನಚಿಕೇತಸಂ**
**ಮನ್ಯೇ" 13(42)**

ತಾ॥ ಬ್ರಹ್ಮಾನಂದಕಾರಕನಾದ ಆತ್ಮದ ಬಗ್ಗೆ ಕೇಳಿ. ಆತ್ಮವನ್ನು ಅರ್ಥ ಮಾಡಿಕೊಂಡು ಧರ್ಮರೂಪವಾದ ಆತ್ಮವನ್ನು ಸಂಗ್ರಹಿಸಿ, ಸೂಕ್ಷ್ಮರೂಪವಾದ ಆತ್ಮವನ್ನು ಅನುಭವಿಸುವುದರಿಂದ, ಆತ ಸರ್ವಸಂಪತ್ಕರನಾಗುತ್ತಾನೆ. ನಚಿಕೇತನಿಗೆ ಆ ಬ್ರಹ್ಮಲೋಕ ದ್ವಾರವು ತೆರೆದು ಸ್ವಾಗತ ದೊರೆಯುವುದೆಂದು ನಾನು ಭಾವಿಸಿದ್ದೇನೆ.

**ಮಂ.ಶ್ಲೋ.॥ "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ ಪಶ್ಯಸಿ ತದ್ವದ" 14 (43)**

ತಾ॥ (ನಚಿಕೇತನು ಹೇಳುತ್ತಿದ್ದಾನೆ ನೀನು ತ್ರಿಕಾಲಬಾಧಿತ ಪದಾರ್ಥವನ್ನು ಕಾರ್ಯ-ಕಾರಣಗಳಿಗೆ ಅತೀತವಾದುದನ್ನು, ಭೂ ಭವಿಷ್ಯತ್ತುಗಳಿಗಿಂತ ಪರವನ್ನು ತಿಳಿದಿದ್ದೀಯೆ. ನೀನು ತಿಳಿದಿರುವ ಆ ಆತ್ಮವಿದ್ಯೆಯನ್ನು ನನಗೆ ಉಪದೇಶಿಸುವಂತಹವನಾಗು.

**ಮಂ.ಶ್ಲೋ.॥ ಸರ್ವೇ ವೇದಾಯತ್ಪದಮಾಮನಂತಿ, ತಪಾಗ್ಂಸಿಸರ್ವಾಣಿ ಚ ಯದ್ವದನ್ತಿ ಯದಿಚ್ಛನ್ತೋ**
**ಬ್ರಹ್ಮಚರ್ಯಂ ಚರಂತಿ ತತ್ತೇಪದಗ್ಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥ 15 (44)**

ತಾ॥ ಯಮಧರ್ಮರಾಜ ಹೇಳುತ್ತಿದ್ದಾನೆ. "ಸಮಸ್ತ ವೇದಗಳು ಯಾವ ವಸ್ತುವನ್ನು ಲಕ್ಷ್ಯ-ವಾಗಿಟ್ಟುಕೊಂಡು ಹೇಳುತ್ತಿದೆಯೋ, ಕೃಚ್ಛ್ರಚಾಂದ್ರಾಯಣಾದಿರೂಪಗಳಾದ ತಪಸ್ಸುಗಳೆಲ್ಲವೂ ಯಾವ ವಸ್ತುವನ್ನು ಹೊಂದುವುದೇ ಪ್ರಯೋಜನಗಳೆಂದು ಅರಿತು ಆಚರಿಸಲ್ಪಡುತ್ತವೆಯೋ, ಯಾವ ವಸ್ತುವನ್ನು ಕೋರಿ ಬ್ರಹ್ಮಚರ್ಯವನ್ನು ಅವಲಂಬಿಸುತ್ತಿರುವರೋ, ಅಂತಹ ಪರಬ್ರಹ್ಮವನ್ನು ಕುರಿತು ನಿನಗೆ ಸಂಗ್ರಹವಾಗಿ ಹೇಳುತ್ತಿದ್ದೇನೆ. "ಆ ಪರಮಪದವೇ ಓಂ." (ಪ್ರಣವ)

**ಮಂ.ಶ್ಲೋ.॥ ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಂ**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ 16 (45)**

ತಾ॥ ಈ ಅಕ್ಷರವೇ ಬ್ರಹ್ಮ. ಇದೇ ಎಲ್ಲದಕ್ಕಿಂತಲೂ ಶ್ರೇಷ್ಠವಾದುದು. ಈ ಅಕ್ಷರ ಪರಬ್ರಹ್ಮವನ್ನು ತಿಳಿದುಕೊಂಡವನಿಗೆ ಸರ್ವಕಾರ್ಯಗಳು ಸಿದ್ಧಿಸುತ್ತವೆ.

**ಮಂ.ಶ್ಲೋ.॥ ಏತದಾಲಂಬನಗ್ಂ ಶ್ರೇಷ್ಠಮೇತದಾಲಂಬನಂ ಪರಂ**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ 17 (46)**

ತಾ॥ ಈ ಬ್ರಹ್ಮವು (ಆತ್ಮ) ಶ್ರೇಷ್ಠವಾದ ಆಲಂಬನೆ, ಇದು ಸರ್ವೋತ್ಕೃಷ್ಟವಾದುದು. ಇದನ್ನು ತಿಳಿದುಕೊಂಡವನನ್ನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುವುದುಂಟು.

**ಮಂ.ಶ್ಲೋ.॥ ನ ಜಾಯತೇ ಮ್ರಿಯತೇವಾ ವಿಪಶ್ಚಿತ್ ನಾಯಂಕುತಶ್ಚಿನ್ನ ಬಭೂವ ಕಶ್ಚಿತ್**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ 18(47)**

ತಾ॥ ಈ ಆತ್ಮವು ಜನಿಸುವುದಿಲ್ಲ, ಮರಣಹೊಂದುವುದಿಲ್ಲ, ಯಾವುದರಿಂದಲೂ ಈ ಆತ್ಮ ಉದ್ಭವಿಸಲಿಲ್ಲ. ಆತ್ಮದಿಂದ ಯಾವುದೂ ಉದ್ಭವಿಸಲಿಲ್ಲ. ಜನ್ಮವಿಲ್ಲದ್ದು, ನಿತ್ಯವಾದುದು, ಶಾಶ್ವತವಾದುದು ಆದ ಆತ್ಮವು ತನ್ನ ದೇಹವು ಹತ್ಯೆಗೊಳಗಾದಾಗ ತಾನು ಸಾಯುವುದಿಲ್ಲ. (ಈ ಜೀವನು ಶಾಶ್ವತ.)

**ಮಂ.ಶ್ಲೋ.॥ ಹನ್ತಾ ಚೇನ್ಮನ್ಯತೇ ಹನ್ತುಗ್ಂ ಹತಶ್ಚೇನ್ಮನ್ಯತೇ ಹತಂ**
**ಉಭೌ ತೌ ನ ವಿಜಾನೀತೋ ನಾಯಗ್ಂ ಹನ್ತಿ ನ ಹನ್ಯತೇ ॥ 19(48)**

ತಾ॥ ಆತ್ಮ ಅಸಂಗ ಸ್ವಭಾವವನ್ನು ಹೊಂದಿರುವುದು, ದೇಹ ಬುದ್ಧಿಯಿರುವ ಹಂತಕನು ಶರೀರವನ್ನು ಗಾಯಗೊಳಿಸುವುದರಿಂದ ಆತ್ಮವನ್ನು ಸಾಯಿಸಿದೆನೆಂದಾಗಲಿ, ಹತ್ಯೆಗೊಳಗಾದವನು ತನ್ನ ಆತ್ಮಕ್ಕೆ ಮರಣವು ಪ್ರಾಪ್ತವಾಯಿತೆಂದಾಗಲೀ, ಅಂದುಕೊಂಡರೇ ಈ ಇಬ್ಬರೂ ದೇಹವೇ ಆತ್ಮವೆಂಬ ಮಾಯಾ ಭಾವವನ್ನು ಹೊಂದಿದವರಾಗುತ್ತಾರೆ. ಈ ಇಬ್ಬರಿಗೂ (ಉಭಯರಿಗೂ) ಆತ್ಮವನ್ನು ಕುರಿತಾದ ಜ್ಞಾನವಿಲ್ಲ. ಈ ಆತ್ಮ ಯಾರನ್ನೂ ಸಾಯಿಸುವುದಿಲ್ಲ. ಯಾರಿಂದಲೂ ಸಾಯುವುದಿಲ್ಲ.

**ಮಂ.ಶ್ಲೋ.॥ ಅಣೋರಣೀಯಾನ್ಮಹತೋ ಮಹೀಯಾನಾತ್ಮಾಽಸ್ಯ ಜನ್ತೋರ್ನಿಹಿತೋ ಗುಹಾಯಾಂ**
**ತಮಕ್ರತುಃ ಪಶ್ಯತಿ ವೀತಶೋಕೋ ಧಾತು ಪ್ರಸಾದಾನ್ಮಹಿಮಾನಮಾತ್ಮನಃ॥ 20(49)**

ತಾ॥ ಆತ್ಮತತ್ತ್ವವು ಅಣುವಿಗಿಂತ ಅಣುವಾಗಿಯೂ, ಮಹತ್ತಿಗಿಂತ ಮಹತ್ತಾಗಿಯೂ, ಪ್ರತಿ ಜೀವಿಯ ಹೃದಯ ಕುಹರದಲ್ಲಿಯೂ ವಾಸಿಸುತ್ತಿದೆ. ಮನೋಬುದ್ಧೀಂದ್ರಿಯಗಳ ಕರುಣೆಯಿಂದ ಯಾರು ಸಂಕಲ್ಪ ವಿಕಲ್ಪಗಳಿಂದ ವಿಮುಕ್ತನಾಗುತ್ತಿದ್ದಾನೋ ಅಂತಹವನು ಮೇಲೆ ಹೇಳಿದ, ಆತ್ಮದ ಮಹಾಮಹಿಮೆಯನ್ನು ಗುರುತಿಸಿ ಸರ್ವಶೋಕಗಳಿಂದ ರಕ್ಷಿಸಲ್ಪಡುತ್ತಿದ್ದಾನೆ.

**ಮಂ.ಶ್ಲೋ.॥ ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ**

**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ 21 (50)**

ತಾ॥ ಆತ್ಮ ಕುಳಿತಿದ್ದಂತೆಯೇ ದೂರಕ್ಕೆ ಹೋಗುತ್ತಿದ್ದಾನೆ. ಮಲಗಿಕೊಂಡೇ ಎಲ್ಲೆಡೆಯೂ ಸಂಚಾರ ಮಾಡುತ್ತಾನೆ. ಆದ್ದರಿಂದ ನನಗಿಂತ ಯಾರು ಹರ್ಷ ಶೋಕಗಳಿಲ್ಲದ ಪರಮಾತ್ಮನನ್ನು ತಿಳಿದುಕೊಳ್ಳಬಲ್ಲವನಾಗಿದ್ದಾನೆ?

**ಮಂ.ಶ್ಲೋ.॥ ಅಶರೀರಗ್ಂ ಶರೀರೇಷ್ವನವಸ್ಥೇಷ್ವವಸ್ಥಿತಂ**

**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥22 (51)**

ತಾ॥ ಅಶಾಶ್ವತ ಶರೀರಗಳಲ್ಲಿ ಇದ್ದರೂ ಸಹ, ಈ ಆತ್ಮ ಶರೀರವಿಲ್ಲದ್ದು, ಬಹಳ ದೊಡ್ಡದು. ಸರ್ವ ವ್ಯಾಪ್ತಿಯುಳ್ಳದ್ದು. ದೇಹಗಳಲ್ಲಿ ದೇಹವಿಲ್ಲದವನಾಗಿ ಅನಿತ್ಯಗಳಲ್ಲಿ ನಿತ್ಯನಾಗಿ, ಮಹಾತ್ಮನಾಗಿ ಆತ್ಮವನ್ನು ಅರಿತುಕೊಂಡವನು. ಅಂತಹ ಧೀರನು - ದುಃಖಿಸುವುದಿಲ್ಲ.

**ಮಂ.ಶ್ಲೋ.॥ ನಾಯಮಾತ್ಮಾ ಪ್ರವಚನೇನ ಲಭ್ಯೋ, ನ ಮೇಧಯಾ, ನ ಬಹುನಾ ಶ್ರುತೇನ,**

**ಯಮೇವೈಷ ವೃಣುತೇ, ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಗ್ಂ ಸ್ವಾಂ॥ 23 (52)**

ತಾ॥ ಅನೇಕ ವೇದಗಳನ್ನು ಅಧ್ಯಯನ ಮಾಡುವುದರಿಂದ, ಆತ್ಮವನ್ನು ಹೊಂದುವುದು ಶಕ್ಯವಿಲ್ಲ. ಗ್ರಂಥಾರ್ಥಶ್ರವಣದಿಂದ ಆತ್ಮಪ್ರಾಪ್ತಿ ಸಾಧ್ಯವಾಗುವುದಿಲ್ಲ. ಕೇವಲವಾದ ವಿಶೇಷ ಪಾಂಡಿತ್ಯ-ದಿಂದಲೂ ಸಹ ಆತ್ಮನನ್ನು ಹೊಂದುವುದು ಸಾಧ್ಯವಿಲ್ಲ. ಇನ್ನು ಯಾವುದರಿಂದ ಆತ್ಮಪ್ರಾಪ್ತಿ ಲಭ್ಯವಾಗುತ್ತದೆ ಎಂದರೆ, ಸಾಧಕನಾದವನ್ಯಾರೂ ಸ್ವಾತ್ಮಭೂತವಾದ ಆತ್ಮವನ್ನು ಹೊಂದಬೇಕೆಂದು ಕೋರಿಕೊಂಡರೆ ಅಂತಹವನಿಂದಲೇ ಸ್ವಯಂ ಆತ್ಮವು ಲಭ್ಯವಾಗುತ್ತದೆಯೆಂದು ತಿಳಿಯಬೇಕು.

**ಮಂ.ಶ್ಲೋ.॥ ನಾವಿರತೋ ದುಶ್ಚರಿತಾತ್ ನಾಶಾಂತೋ ನಾ ಸಮಾಹಿತಃ**

**ನಾಶಾಂತಮಾನಸೋವಾಽಪಿ ಪ್ರಜ್ಞಾನೇನೈನಮಾಪ್ನುಯಾತ್ ॥ 24 (53)**

ತಾ॥ ದುಷ್ಟವರ್ತನೆಯಿಂದ ದೂರವಿರಲಾರದವನು, ಶಾಂತಿಯಿಲ್ಲದವನು, ಸಮಾಹಿತ ಚಿತ್ತವಿಲ್ಲದವನು, ಅಶಾಂತ ಮನಸ್ಕನು ಜ್ಞಾನದ ಮೂಲಕವೂ ಈ ಆತ್ಮವನ್ನು ಹೊಂದಲಾರ.

**ಮಂ.ಶ್ಲೋ.॥ ಯಸ್ಯ ಬ್ರಹ್ಮ ಚ ಕ್ಷತ್ರಂಚ, ಉಭೇ ಭವತ ಓದನಃ**

**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ 25(54)**

ತಾ॥ ಯಾರಿಗೆ ಬ್ರಹ್ಮ ಕ್ಷತ್ರಿಯ ಜಾತಿಗಳೆರಡು ಅನ್ನವಾಗುತ್ತಿದೆಯೋ ಮೃತ್ಯುವು ಉಪ್ಪಿನಕಾಯಿ ಆಗುತ್ತಿದೆಯೋ, ಅಂತಹದ್ದಾದ ಆ ಆತ್ಮವೆಲ್ಲಿದೆಯೆಂಬುದನ್ನು ಯಾರಾದರೂ ಹೇಗೆ ತಿಳಿಯ ಬಲ್ಲರು? ಯಾವುದಕ್ಕೆ ಮೃತ್ಯುವು ಉಪಸೇಚನ ಪದಾರ್ಥವೋ ಅಂತಹ ಆತ್ಮ ಎಲ್ಲಿದೆಯೆಂದು ಯಾರಿಗೆ ಗೊತ್ತು? (ಸರ್ವಸಂಹಾರಕವಾದ ಮೃತ್ಯುವು ಯಾರಿಗೆ ಭೋಜನವಾಗಿಯೂ ಸಹ ಆಗದೆ ತದುಪ ಸೇಚನವಾಗಿರುತ್ತದೆಯೋ ಅಂತಹ ಆ ಆತ್ಮವನ್ನು ಸಾಧನ ಸಂಪತ್ತುಳ್ಳ ಜ್ಞಾನಿಯು ತಿಳಿದುಕೊಳ್ಳಬಲ್ಲ. ಅಜ್ಞಾನಿ ತಿಳಿದುಕೊಳ್ಳಲಾರ ಎಂಬ ಭಾವ.)

# (ಪ್ರಥಮಾಧ್ಯಾಯ) 3ನೇ ವಲ್ಲಿ

**ಮಂ.ಶ್ಲೋ.॥ ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ**
**ಛಾಯಾತಪೌ ಬ್ರಹ್ಮವಿದೋ ವದನ್ತಿ, ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ** ॥ 1 (55)

ತಾ॥ ಆ ಪರಮಾತ್ಮನ ಸ್ಥಾನವಾದ ಹೃದಯಕುಹರದಲ್ಲಿ ಕುಳಿತು ತಮ್ಮ ಪುಣ್ಯಕರ್ಮ ಫಲವನ್ನು ಅನುಭವಿಸುವವರು ಈ ಲೋಕದಲ್ಲಿ ಇಬ್ಬರಿದ್ದಾರೆ. ಬ್ರಹ್ಮವಿದರು ಆ ಇಬ್ಬರನ್ನೂ ನೆರಳು ಬೆಳಕುಗಳೆಂದು ಹೇಳುತ್ತಾರೆ. ನಚಿಕೇತಾಗ್ನಿಯನ್ನು ಮೂರು ಬಾರಿ ಆರಾಧಿಸುವ ಗೃಹಸ್ಥರು ಸಹ ಈ ರೀತಿಯಾಗಿಯೇ ಹೇಳುತ್ತಿರುವರು.

**ಮಂ.ಶ್ಲೋ.॥ ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್**
**ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಗ್ಂ ಶಕೇಮಹೀ** ॥ 2 (56)

ತಾ॥ ನಚಿಕೇತಾಗ್ನಿಯು ಯಜ್ಞಗಳು ಮಾಡುವವರಿಗೆ ಸೇತುವೆಯಂತಹುದು. ಅಲ್ಲದೆ ಆ ಅಗ್ನಿಯು ಪರಬ್ರಹ್ಮ ಸ್ವರೂಪ, ನಿರ್ಭಯವಾದುದು. ಸಂಸಾರದಲ್ಲಿ ಧನ್ಯತಾಭಾವವನ್ನು ಹೊಂದ-ಬೇಕೆನ್ನುವವರಿಗೆ ಸುಲಭಸಾಧ್ಯವಾದುದು. ಅಂತಹ ಅಗ್ನಿಯನ್ನು ನಾವು ತಿಳಿದುಕೊಳ್ಳಲು ನಾವು ಸಮರ್ಥರಾಗೋಣ.

**ಮಂ.ಶ್ಲೋ.॥ ಆತ್ಮಾನಗ್ಂ ರಥಿನಂ ವಿದ್ಧಿ, ಶರೀರಗ್ಂ ರಥಮೇವ ತು**
**ಬುದ್ಧಿಂ ತು ಸಾರಥಿಂ ವಿದ್ಧಿ, ಮನಃ ಪ್ರಗ್ರಹ್ಯಮೇವ ಚ** ॥ 3 (57)

ತಾ॥ ಆ ಆತ್ಮವನ್ನು ರಥದಲ್ಲಿನ ಯಜಮಾನನೆಂದು ತಿಳಿಯೋಣ. ಶರೀರವನ್ನು ರಥ-ವನ್ನಾಗಿಯೂ, ಬುದ್ಧಿಯನ್ನುಕುದುರೆಗಳನ್ನಾಗಿಯೂ, ಮನಸ್ಸನ್ನುಲಗಾಮು ಎಂದು ತಿಳಿದುಕೊಳ್ಳೋಣ.

**ಮಂ.ಶ್ಲೋ.॥ ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್**
**ಆತ್ಮೇಂದ್ರಿಯ ಮನೋಯುಕ್ತಂ, ಭೋಕ್ತೇತ್ಯಾಹುರ್ಮನೀಷಿಣಃ** ॥ 4 (58)

ತಾ॥ ಇಂದ್ರಿಯಗಳು ಕುದುರೆಗಳು, ಅವುಗಳ ಮಾರ್ಗಗಳು ಇಂದ್ರಿಯ ವಿಷಯಗಳು. ಧೀಮಂತರು ಅವನನ್ನು (ಆತ್ಮನನ್ನು) ಈ ದೇಹೇಂದ್ರಿಯ ಮನಸ್ಸುಗಳೊಂದಿಗೆ ಕೂಡಿಕೊಂಡಾಗ ಭೋಕ್ತ ಎಂದು ಕರೆಯುತ್ತಾರೆ.

**ಮಂ.ಶ್ಲೋ.॥ ಯಸ್ತ್ವವಿಜ್ಞಾನವಾನ್ಭವತ್ಯ ಯುಕ್ತೇನ ಮನಸಾ ಸದಾ**
**ತಸ್ಯೇನ್ದ್ರಿಯಾಣ್ಯವಶ್ಯಾನಿ, ದುಷ್ಟಾಶ್ವಾ ಇವ ಸಾರಥೇಃ** ॥ 5 (59)

ತಾ॥ ಅಯುಕ್ತವಾದ ಮನಸ್ಸನ್ನು ಹೊಂದಿ, ಸರಿಯಾದ ವಿಜ್ಞಾನವಿಲ್ಲದವನ ಇಂದ್ರಿಯಗಳು ಸಾರಥಿಗೆ ದುಷ್ಟಾಶ್ವಗಳಂತೆ ತನ್ನ ವಶದಲ್ಲಿ ಇಲ್ಲದಂತಾಗುತ್ತದೆ.

**ಮಂ.ಶ್ಲೋ.॥ ಯಸ್ತು ವಿಜ್ಞಾನವಾನ್ಭವತ್ಯಯುಕ್ತೇನ ಮನಸಾ ಸದಾ**
**ತಸ್ಯೇನ್ದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ** ॥ 6 (60)

ತಾ॥ ವಿಜ್ಞಾನವನ್ನು ಹೊಂದಿದವನು, ಯುಕ್ತ ಮನಸ್ಸುಳ್ಳವನ ಇಂದ್ರಿಯಗಳು ಸಾರಥಿಗೆ ಒಳ್ಳೆಯ ಕುದುರೆಗಳಂತೆ ವಶದಲ್ಲಿರುತ್ತವೆ.

**ಮಂ.ಶ್ಲೋ.॥ ಯಸ್ತ್ವವಿಜ್ಞಾನವಾನ್ಭವತ್ಯಮನಸ್ಕಃ ಸದಾಶುಚಿಃ**
**ನ ಸ ತತ್ಪದಮಾಪ್ನೋತಿ, ಸಂಸಾರಂ ಚಾಧಿಗಚ್ಛತಿ ॥ 7(61)**

ತಾ॥ ವಿಜ್ಞಾನವಿಲ್ಲದವನು, ಸದಾ ಅಪವಿತ್ರ ಮನಸ್ಸುಳ್ಳವನು ಗಮ್ಯಸ್ಥಾನವನ್ನು ಸೇರಲಾರದೆ, ಜನನ ಮರಣ ರೂಪ ಸಂಸಾರದಲ್ಲಿ ಸುತ್ತುತ್ತಿರುತ್ತಾನೆ.

**ಮಂ.ಶ್ಲೋ.॥ ಯಸ್ತು ವಿಜ್ಞಾನವಾನ್ ಭವತಿ, ಸಮನಸ್ಕಃ ಸದಾ ಶುಚಿಃ**
**ಸತು ತತ್ಪದಮಾಪ್ನೋತಿ, ಯಸ್ಮಾದ್ಭೂಯೋ ನಜಾಯತೇ ॥ 8 (62)**

ತಾ॥ ವಿಜ್ಞಾನವನ್ನು ಹೊಂದಿರುವವನು, ಸದಾ ಪವಿತ್ರವಾದ ಮನಸ್ಸನ್ನು ಹೊಂದಿರುವ ಮನೋ ನಿಗ್ರಹ ಉಳ್ಳವನು, ಪುನರ್ಜನ್ಮ ರಹಿತವಾದ ಆತ್ಮಪದವನ್ನು ಹೊಂದುತ್ತಾನೆ.

**ಮಂ.ಶ್ಲೋ.॥ ವಿಜ್ಞಾನ ಸಾರಥೀರ್ಯಸ್ತು ಮನಃ ಪ್ರಗಹವಾನ್ನರಃ**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥9 (63)**

ತಾ॥ ಯಾರಿಗೆ ವಿಜ್ಞಾನವು ಸಾರಥಿಯಾಗಿ, ಸ್ವಾಧೀನದಲ್ಲಿರುವ ಮನಸ್ಸೆನ್ನುವ ಲಗಾಮನ್ನು ಹೊಂದಿರುವುದೋ ಅಂತಹವನು ಜೀವಿತ ಮಾರ್ಗದ ಗಮ್ಯವಾದ ವಿಷ್ಣುಪದ (ಸರ್ವವ್ಯಾಪಕವಾದ ಬ್ರಹ್ಮಪದ)ವನ್ನು ಸೇರುತ್ತಾನೆ.

**ಮಂ.ಶ್ಲೋ.॥ ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ**
**ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥10 (64)**

ತಾ॥ ಇಂದ್ರಿಯಗಳನ್ನು ಸ್ಥೂಲಗಳೆಂದು ಗ್ರಹಿಸಬೇಕು. ಈ ಇಂದ್ರಿಯಗಳಿಗೆ ಕಾರಣಭೂತಗಳಾದ ಶಬ್ದಾದಿ ವಿಷಯಗಳು, ಇಂದ್ರಿಯಗಳಗಿಂತ ಸೂಕ್ಷ್ಮವಾಗುತ್ತಿವೆ. ಆ ಶಬ್ದಾದಿ ವಿಷಯಗಳಗಿಂತ ಪ್ರತ್ಯಗಾತ್ಮವಾದ ಮನಸ್ಸು ಮಹತ್ತಾದುದು. ಮನಸ್ಸಿಗಿಂತ ಬುದ್ಧಿ ಶ್ರೇಷ್ಠವಾದುದು. ಬುದ್ಧಿಗಿಂತ ಮಹತ್ತತ್ವವು ಪರಮವಾದುದೆಂದು ತಿಳಿಯಬೇಕು.

**ಮಂ.ಶ್ಲೋ.॥ ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ**
**ಪುರುಷಾನ್ನ ಪರಂಕಿಂಚಿತ್ಸಾಕಾಷ್ಠಾ ಸಾ ಪರಾಗತಿಃ ॥11 (65)**

ತಾ॥ ಮಹತ್ತತ್ವಕ್ಕಿಂತ ಪರವಾದುದು ಅವ್ಯಕ್ತ. ಅವ್ಯಕ್ತಕ್ಕಿಂತ ಪರವಾದವನು ಪ್ರತ್ಯಗಾತ್ಮಪುರುಷ. ಆ ಪುರುಷನಿಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಅದೇ ಪರಮಗಮ್ಯ, ಅವ್ಯಕ್ತಾವ್ಯಾಕೃತ ಆಕಾಶಾದಿ ನಾಮವಾಚಕ.

**ಮಂ.ಶ್ಲೋ.॥ ಏಷ ಸರ್ವೇಷುಭೂತೇಷು, ಗೂಢೋತ್ಮಾಽಽನ ಪ್ರಕಾಶತೇ**
**ದೃಶ್ಯತೇತ್ವಗ್ರ್ಯಯಾ ಬುದ್ಧ್ಯಾ, ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥12 (66)**

ತಾ॥ ಈ ಆತ್ಮವು ಸಮಸ್ತ ಪ್ರಾಣಿಗಳಲ್ಲಿಯೂ ನಿಗೂಢವಾಗಿ ಇದೆ. ಸುಲಭವಾಗಿ ಎಲ್ಲರಿಗೂ ಕಾಣಿಸುವುದಿಲ್ಲ. ಸೂಕ್ಷ್ಮ ದೃಷ್ಟಿಯುಳ್ಳವರು ತೀಕ್ಷ್ಣವಾಗಿ ಸೂಕ್ಷ್ಮವಾದ ಬುದ್ಧಿಯೊಂದಿಗೆ ಆತ್ಮವನ್ನು ದರ್ಶಿಸಬಲ್ಲವರಾಗಿದ್ದಾರೆ.

**ಮಂ.ಶ್ಲೋ.॥ ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇತ್‌ಜ್ಞಾನ ಆತ್ಮನಿ**
**ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ ॥ 13 (67)**

ತಾ॥ ಓ ನಚಿಕೇತಾ! ವಿವೇಕಿಯಾದವನು, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನು ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸಿನಲ್ಲಿ ಉಪಸಂಹರಿಸಬೇಕು. ಅಂತಹ ಮನಸ್ಸನ್ನು ಪ್ರಕಾಶ ಸ್ವರೂಪವೆನ್ನುವ ಬುದ್ಧ್ಯಾತ್ಮದಲ್ಲಿ ಉಪಸಂಹರಿಸಬೇಕು. ಅಂತಹ ಬುದ್ಧಿಯನ್ನು ಮಹತ್ತಾದ ಆತ್ಮದಲ್ಲಿ ಅಂದರೆ ಪ್ರಥಮಜ-ನಾದ ಹಿರಣ್ಯಗರ್ಭನಲ್ಲಿ ಉಪಸಂಹರಿಸಬೇಕು. ಅಂತಹ ಮಹದಾತ್ಮಕವಾದ ಆತ್ಮವನ್ನು ಸರ್ವವಿಶೇಷ ಶೂನ್ಯವಾದ ವಿಕಾರರಹಿತವಾದ ಸರ್ವಾಂತರವಾದ ಸರ್ವಪ್ರತ್ಯಯಸಾಕ್ಷಿಯೆನ್ನುವ ಮುಖ್ಯ ಆತ್ಮದಲ್ಲಿ-ಪರಮಾತ್ಮನಲ್ಲಿ ಉಪಸಂಹರಿಸಬೇಕು.

**ಮಂ.ಶ್ಲೋ.॥ ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ । ಕ್ಷುರಸ್ಯ ಧಾರಾ ನಿಶಿತಾ**
**ದುರತ್ಯಯಾ, ದುರ್ಗಂ ಪಥಸ್ತತ್ಕವಯೋ ವದನ್ತಿ ॥ 14 (68)**

ತಾ॥ ನಚಿಕೇತಾ! ಏಳು, ಎಚ್ಚರವಾಗು, ಸದ್ಗುರುವನ್ನು ಸಮೀಪಿಸಿ ಆತ್ಮಜ್ಞಾನವನ್ನು ಸಂಪಾದಿಸಿಕೋ, ಹರಿತವಾಗಿರುವ ಕತ್ತಿಯ ಅಂಚಿನ (ಅಲಗು) ಹಾಗೆ ಆ ಮಾರ್ಗವು ಬಹಳ ನಿಶಿತ-ವಾದುದು. ದಾಟಲು ಅಸಾಧ್ಯವಾದುದು. ಹೊಂದಲು ಸಾಧ್ಯವಾಗದಿರುವಂತಹುದು ಎಂದು ಕವಿಗಳು ಪ್ರವಚನ ಮಾಡುತ್ತಿದ್ದಾರೆ. (ಕತ್ತಿಯ ಚೂಪನ್ನು-ಹರಿತವಾದುದನ್ನು-ದಾಟಿದ ಹಾಗೆ ದಾಟಬೇಕು.)

**ಮಂ.ಶ್ಲೋ.॥ ಅಶಬ್ದಮಸ್ಪರ್ಶಮರೂಪಮವ್ಯಯಂ, ತಥಾಽರಸಂ ನಿತ್ಯಮಗನ್ಧವಚ್ಚ ಯತ್**
**ಅನಾದ್ಯನನ್ತಂ ಮಹತಃ ಪರಂ ಧ್ರುವಂ, ನಿಚಾಯ್ಯ ತನ್ಮೃತ್ಯುಮುಖಾತ್**
**ಪ್ರಮುಚ್ಯತೇ ॥ 15 (69)**

ತಾ॥ ಆತ್ಮವು ಶಬ್ದಸ್ಪರ್ಶರೂಪ ರಸಗಂಧಗಳಿಲ್ಲದಂತಹುದು. ಅವ್ಯಯವಾದುದು. ಆದ್ಯಂತ್ಯ-ಗಳಿಲ್ಲದಿರುವಂತಹುದು, ನಿತ್ಯವಾದುದು, ಮಹತ್ತಿಗೆ ಪರಮವಾಗಿರುವುದಾಗಿ ಇರುವಂತಹುದು. ಅಂತಹ ಆತ್ಮವನ್ನು ತಿಳಿದುಕೊಂಡವನು ಮೃತ್ಯು ಮುಖದಿಂದ ಸಂಪೂರ್ಣವಾಗಿ ಹೊರಬೀಳುತ್ತಾನೆ.

**ಮಂ.ಶ್ಲೋ.॥ ನಾಚಿಕೇತಮುಪಾಖ್ಯಾನಂ, ಮೃತ್ಯುಪ್ರೋಕ್ತಂ ಸನಾತನಮ್**
**ಉಕ್ತ್ವಾ ಶ್ರುತ್ವಾಚ ಮೇಧಾವೀ, ಬ್ರಹ್ಮಲೋಕೇ ಮಹೀಯತೇ ॥ 16 (70)**

ತಾ॥ ಮೃತ್ಯುದೇವತೆಯಿಂದ ಹೇಳಲ್ಪಟ್ಟ, ಸನಾತನವಾದ, ಈ ನಾಚಿಕೇತೋಪಾಖ್ಯಾನವನ್ನು ಹೇಳಿದರೂ, ಕೇಳಿದರೂ, ಬ್ರಹ್ಮಲೋಕದಲ್ಲಿ ಬುದ್ಧಿವಂತನು ಬ್ರಹ್ಮಾನಂದವನ್ನು ಹೊಂದುತ್ತಾನೆ.

**ಮಂ.ಶ್ಲೋ.॥ ಯ ಇಮಂ ಪರಮಂ ಗುಹ್ಯಂ, ಶ್ರಾವಯೇದ್‌ಬ್ರಹ್ಮಸಂಸದಿ**
**ಪ್ರಯತಃ ಶ್ರಾದ್ಧಕಾಲೇವಾ, ತದಾನನ್ತ್ಯಾಯಕಲ್ಪತೇ ತದಾನನ್ತ್ಯಾಯಕಲ್ಪತ ಇತಿ॥ 17 (71)**

ತಾ|| ಪರಮಗುಹ್ಯವಾದ ಈ ಉಪನಿಷತ್ತನ್ನು ಬ್ರಾಹ್ಮಣ ಸಭೆಯಲ್ಲಿ ಭಕ್ತಿಯಿಂದ ಪಠಿಸಿದರೂ, ಶುಚಿರ್ಭೂತನಾಗಿ ಶ್ರಾದ್ಧಕಾಲದಲ್ಲಿ ಹೇಳಿದರೂ ಅಂತಹವನು ಅಮರತ್ವವನ್ನು ಹೊಂದುತ್ತಾನೆ. ಅನಂತ ಫಲವನ್ನು ನೀಡುತ್ತದೆ.

# (ದ್ವಿತೀಯಾಧ್ಯಾಯ) 4ನೇ ವಲ್ಲಿ

**ಮಂ.ಶ್ಲೋ.|| ಪರಾಂಚಿಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಂಗ್ ಪಶ್ಯತಿ ನಾನ್ತರಾತ್ಮನ್।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್|| 1(72)**

ತಾ|| ಪರಮೇಶ್ವರನಾದ ಬ್ರಹ್ಮನು ಹೊರಕ್ಕೆ ಹೋಗುವ ಸ್ವಭಾವವುಳ್ಳ ಇಂದ್ರಿಯಗಳನ್ನು ಸೃಷ್ಟಿಸಿದನು. ಅದರಿಂದಲೇ ಮಾನವನು ಅಂತರಾತ್ಮನನ್ನು ನೋಡದೆ, ಬಾಹ್ಯ ವಿಷಯಗಳನ್ನೇ ನೋಡುತ್ತಿದ್ದಾನೆ. ಆದರೆ ಕೆಲವು ಮಂದಿ ಧೀಮಂತರು ಆತ್ಮಾಭಿಮುಖವಾಗಿ ದೃಷ್ಟಿಯನ್ನು ಅಂತರ್ಮುಖವನ್ನಾಗಿ ಮಾಡಿಕೊಂಡು ಪ್ರತ್ಯಗಾತ್ಮನನ್ನು ದರ್ಶಿಸುತ್ತಿದ್ದಾರೆ.

**ಮಂ.ಶ್ಲೋ.|| ಪರಾಚಃ ಕಾಮಾನನುಯನ್ತಿ ಬಾಲಾ ಸ್ತೇ ಮೃತ್ಯೋರ್ಯನ್ತಿ ವಿತತಸ್ಯ ಪಾಶಮ್ ।**
**ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯನ್ತೇ ॥ 2 (73)**

ತಾ|| ಬಾಲಕರು (ಅಜ್ಞಾನಿಗಳು) ಬಾಹ್ಯವಾದ ವಿಷಯ ಸುಖಗಳಿಗೆ, ಬೆನ್ನು ಹತ್ತಿಹೋಗಿ, ವಿಶಾಲವಾದ ಮೃತ್ಯುಪಾಶದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾರೆ. ಆದರೆ, ಧೀರರಾದವರು ಅಶಾಶ್ವತ ವಸ್ತುಗಳ ಮಧ್ಯೆ ನಿಶ್ಚಲವಾದ ಅಮೃತತ್ವವನ್ನು (ಆತ್ಮವನ್ನು) ಅರಿತುಕೊಂಡು ಈ ಪ್ರಪಂಚದಲ್ಲಿ ಯಾವ ವಸ್ತುವನ್ನೂ ಅಪೇಕ್ಷಿಸುವುದಿಲ್ಲ.

**ಮಂ.ಶ್ಲೋ.|| ಯೇನ ರೂಪಂ ರಸಂ ಗನ್ಧಂ, ಶಬ್ದಾನ್ ಸ್ಪರ್ಶಾಗ್‌ಂಶ್ಚ ಮೈಥುನಾನ್**
**ಏತೇನೈವ ವಿಜಾನಾತಿ, ಕಿಮತ್ರ ಪರಿಶಿಷ್ಯತೇ, ಏತದ್ವೈ ತತ್ ॥ 3 (74)**

ತಾ|| ಯಾವ ಆತ್ಮದಿಂದ ಮನುಷ್ಯನು ಶಬ್ದಸ್ಪರ್ಶ ರೂಪರಸಗಂಧಗಳನ್ನು ಕಾಮಾದಿಗಳು, ಮುಂತಾದವುಗಳನ್ನು ತಿಳಿದುಕೊಳ್ಳುತ್ತಿದ್ದಾನೋ, ಅಂತಹ ಆತ್ಮಕ್ಕೆ ಈ ಜಗತ್ತಿನಲ್ಲಿ ತಿಳಿಯದ್ದೇನಿದೆ? ಇದೇ ಅದು. (ನೀನು ತಿಳಿಯಬಯಸಿರುವ ಆತ್ಮ ಅದೇ ಆಗಿರುತ್ತದೆ.)

**ಮಂ.ಶ್ಲೋ.|| ಸ್ವಪ್ನಾನ್ತಂ ಜಾಗರಿತಾನ್ತಂ, ಚೋಭೌ ಯೇ ನಾನುಪಶ್ಯತಿ**
**ಮಹಾನ್ತಂ ವಿಭುಮಾತ್ಮಾನಂ, ಮತ್ವಾ ಧೀರೋ ನ ಶೋಚತಿ ॥ 4 (75)**

ತಾ|| ಜಾಗ್ರತ್ ಸ್ವಪ್ನ ದಶೆಗಳಲ್ಲಿ ಸಮಸ್ತ ವಿಷಯಗಳನ್ನು ಯಾವುದರಿಂದ ತಿಳಿದು-ಕೊಳ್ಳುತ್ತಿದ್ದಾನೋ ಅಂತಹ ಆತ್ಮ(ತತ್) ಸರ್ವವ್ಯಾಪಿಯಾದ ಪರಮಾತ್ಮನೆಂದು ಧೀರನು ತಿಳಿದು ಕೊಂಡವನಾಗಿ ಶೋಕಿಸುವುದಿಲ್ಲ.

**ಮಂ.ಶ್ಲೋ.|| ಯ ಇಮಂ ಮಧ್ವದಂ ವೇದ, ಆತ್ಮಾನಂ ಜೀವಮನ್ತಿಕಾತ್**
**ಈಶಾನಂ ಭೂತಭವ್ಯಸ್ಯ, ನ ತತೋ ವಿಜುಗುಪ್ಸತೇ, ಏತದ್ವೈ ತತ್ ॥ 5(76)**

ತಾ॥ ಮಧುವನ್ನು ಆಸ್ವಾದಿಸುತ್ತಿರುವಂತಹವನು. ಜೀವನವನ್ನು ಪೋಷಿಸುತ್ತಿರುವವನು ಭೂತಭವಿಷ್ಯತ್ತುಗಳಿಗೆ ಈಶನು ಆದ ಆತ್ಮವನ್ನು ತನ್ನ ಹತ್ತಿರವಿದ್ದವನನ್ನಾಗಿ ಯಾರು ಗ್ರಹಿಸುತ್ತಾರೋ ಅಂತಹವರು ಭಯಪಡುವುದಿಲ್ಲ. ಇದೇ ಆ ಆತ್ಮ.

**ಮಂ.ಶ್ಲೋ.॥ ಯಃ ಪೂರ್ವಂ ತಪಸೋಜಾತಮದ್ಭ್ಯಃ ಪೂರ್ವಮಜಾಯತ**
**ಗುಹಾಂ ಪ್ರವಿಶ್ಯ ತಿಷ್ಠನ್ತಂ ಯೋ ಭೂತೇಭಿರ್ವ್ಯಪಶ್ಯತ, ಏತದ್ವೈ ತತ್ ॥ 6(77)**

ತಾ॥ ಜ್ಞಾನಕ್ಕೆ (ಬ್ರಹ್ಮಕ್ಕೆ) ಮೊದಲು ಜನಿಸಿದವನು, ನಿನಗಿಂತ ಮೊದಲು ಜನಿಸಿದವನು. ಪಂಚಭೂತಗಳ ಮಧ್ಯೆ ಇರುವವನು, ಬ್ರಹ್ಮನ ತಪಸ್ಸಿನಿಂದ ಹುಟ್ಟಿದವನು, ಜಲವು ಹುಟ್ಟುವುದಕ್ಕಿಂತ ಮುಂಚೆಯೇ ಸೃಷ್ಟಿಯಾದವನು, ಹೃದಯಕುಹರದಲ್ಲಿ ವಾಸಿಸುವನು. ಆದ ಆತ್ಮವನ್ನು ಯಾರು ನೋಡುವಂತಹರಾಗುತ್ತಾರೋ ಅಂತಹವರೇ ಬ್ರಹ್ಮನನ್ನು ದರ್ಶನ ಮಾಡಬಲ್ಲರು. ಇದೇ ಅದು (ಬ್ರಹ್ಮ) ನೀನು ಇದಕ್ಕೆ ಈ ಮೊದಲೇ ಕೇಳಿದ್ದಾಗಿದೆ.

**ಮಂ.ಶ್ಲೋ.॥ ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ**
**ಗುಹಾಂ ಪ್ರವಿಶ್ಯ ತಿಷ್ಠನ್ತೀಂ ಯಾ ಭೂತೇಭಿರ್ವ್ಯಜಾಯತ, ಏತದ್ವೈ ತತ್ ॥ 7(78)**

ತಾ॥ ಅದಿತಿಯೆಂಬ ಹೆಸರುಳ್ಳವನಾಗಿ ಸಮಸ್ತ ದೇವತಾಮಯನಾಗಿ, ಸಮಸ್ತ ಪ್ರಾಣಗಳೊಂದಿಗೆ ಸಹ ಯಾರು ಉದ್ಭವಿಸುತ್ತಾನೋ, ಹಿರಣ್ಯಗರ್ಭ ರೂಪವಾದ ಪ್ರಾಣಾತ್ಮನಾಗಿರುವನೋ, ಪಂಚಭೂತಗಳೊಂದಿಗೆ ಸಹಾ ಸರ್ವಪ್ರಾಣಿಗಳ ಬುದ್ಧಿಗುಹೆಯನ್ನು ಪ್ರವೇಶಿಸಿರುವನೋ ಆತನೇ ನೀನು ಕೇಳಿದ ಆತ್ಮ, ಇದೇ ಅದು.

**ಮಂ.ಶ್ಲೋ.॥ ಅರಣ್ಯೋರ್ನಿಹಿತೋ ಜಾತವೇದಾ, ಗರ್ಭ ಇವ ಸುಭೃತೋ ಗರ್ಭಿಣೀಭಿಃ**
**ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ, ಏತದ್ವೈ ತತ್॥ 8(79)**

ತಾ॥ ಗರ್ಭವತಿಯರಾದ ತಾಯಂದಿರಿಂದ ರಕ್ಷಿಸಲ್ಪಡುವ ಗರ್ಭದಂತೆ, ಎರಡು ಅರಣಿಗಳ ಮಧ್ಯೆ ಇರುವ ಅಗ್ನಿಯು ಅಪ್ರಮತ್ತರಾದ ಋತ್ವಿಕ್ಕರಿಂದ ಪ್ರತಿನಿತ್ಯವೂ ಆಹುತಿಗಳಿಂದ ಪೂಜಿಸು -ವುದರಿಂದ, ಅನುದಿನವೂ ಆ ಆತ್ಮ ಆರಾಧಿಸಲ್ಪಡುತ್ತಿದ್ದಾನೆ. ಇದೇ ಅದು.

**ಮಂ.ಶ್ಲೋ.॥ ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ**
**ತಂ ದೇವಾಃ ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ, ಏತದ್ವೈ ತತ್ ॥ 9 (80)**

ತಾ॥ ಎಲ್ಲಿ ಸೂರ್ಯೋದಯವಾಗುವುದೋ, ಭಾನುಎಲ್ಲಿ ಅಸ್ತಮಿಸುತ್ತಿದ್ದಾನೋ ಆ ಪ್ರದೇಶದ ಮೇಲೆ ಸರ್ವ ದೇವತೆಗಳು ಆಧಾರಪಡುತ್ತಿದ್ದಾರೆ. ಆ ಪ್ರದೇಶವನ್ನು ದಾಟಿ ಯಾರೂ ಹೋಗ ಲಾರರು. ಇದೇ ಅದು.

**ಮಂ.ಶ್ಲೋ.॥ ಯದೇವೇಹ ತದಮುತ್ರ ಯದಮುತ್ರ ತದನ್ವಿಹ**
**ಮೃತ್ಯೋಃ ಸ ಮೃತ್ಯುಮಾಪ್ನೋತಿ, ಯ ಇಹ ನಾನೇವ ಪಶ್ಯತಿ ॥ 10(81)**

ತಾ॥ ಇಲ್ಲಿ ಯಾವುದು ಪ್ರತ್ಯಕ್ಷ ಜಗದ್ರೂಪವಾಗಿರುವುದೋ, ಅದೇ ಅಲ್ಲಿ ಅಪ್ರತ್ಯಕ್ಷವಾದ

ಬ್ರಹ್ಮವಾಗಿದೆ. ಅಲ್ಲಿ ಏನಿದೆಯೋ, ಇಲ್ಲಿಯೂ ಅದೇ ಇದೆ. ಯಾರು ಇಲ್ಲಿ ನಾನತ್ವವನ್ನು ಕಾಣುವರೋ, ಅವರು ಮೃತ್ಯುವಿನಿಂದ ಮೃತ್ಯುವಿನೆಡೆಗೆ ಓಡುತ್ತಿರುತ್ತಾರೆ.

**ಮಂ.ಶ್ಲೋ.॥ ಮನಸೈವೇದಮಾಪ್ತವ್ಯಂ, ನೇಹ ನಾನಾಸ್ತಿ ಕಿಂಚನ**
**ಮೃತ್ಯೋಃ ಸ ಮೃತ್ಯುಂ ಗಚ್ಛತಿ, ಯ ಇಹ ನಾನೇವ ಪಶ್ಯತಿ ॥ 11 (82)**

ತಾ॥ ಮನಸ್ಸಿನಿಂದ ಮಾತ್ರವೇ ಇದನ್ನು (ಆತ್ಮವನ್ನು) ಹೊಂದಬಲ್ಲರು. ಇಲ್ಲಿ ಅನೇಕತ್ವವು ಒಂದಿಷ್ಟು ಇಲ್ಲ. ಇಲ್ಲಿ ಅನೇಕತ್ವವು ಇದೆಯೆಂದು ಯಾರಿಗೆ ಗೋಚರಿಸುವುದೋ ಆತನು ಒಂದು ಮೃತ್ಯುವಿನಿಂದ ಮತ್ತೊಂದು ಮೃತ್ಯುವನ್ನು ಹೊಂದುತ್ತಾನೆ.

**ಮಂ.ಶ್ಲೋ.॥ ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ, ಏತದ್ವೈ ತತ್ ॥ 12(83)**

ತಾ॥ ಹೆಬ್ಬೆರಳ ಗಾತ್ರವುಳ್ಳ ಪುರುಷನು ಶರೀರದಲ್ಲಿ ಹೃದಯಮಧ್ಯದಲ್ಲಿ ಇದ್ದಾನೆ. ಈ ಪುರುಷನು, ಭಾವಿ ಭೂತಕಾಲಗಳ ಅಧಿಪತಿಯಾದುದರಿಂದ ಇನ್ನು ಯಾರಿಂದಲೂ ಭಯವಿರುವುದಿಲ್ಲ. ಇದೇ ಆ ಆತ್ಮ.

**ಮಂ.ಶ್ಲೋ.॥ ಅಂಗುಷ್ಟಮಾತ್ರಃ ಪುರುಷೋ, ಜ್ಯೋತಿರಿವಾ ಧೂಮಕಃ**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ಏತದ್ವೈ ತತ್ ॥ 13(84)**

ತಾ॥ ಹೆಬ್ಬೆರಳ ಗಾತ್ರದ (ಪ್ರಮಾಣದ)ಲ್ಲಿದ್ದು ಭೂತ ಭವಿಷ್ಯತ್‌ಕಾಲಗಳಿಗೆ ಅಧಿಪತಿಯಾದ ಪುರುಷನು ಹೊಗೆಯಿಲ್ಲದ ಅಗ್ನಿಯಂತಹವನು. ಇಂದೂ, ನಾಳೆಯೂ ಸಹ ಭೇದರಹಿತವಾದ ಈತನೇ ಇರುವನು. ಈತನೇ ಆ ಆತ್ಮ.

**ಮಂ.ಶ್ಲೋ.॥ ಯಥೋದಕಂ ದುರ್ಗೇ ವೃಷ್ಟಂ, ಪರ್ವತೇಷು ವಿಧಾವತಿ**
**ಏವಂ ಧರ್ಮಾನ್ ಪೃಥಕ್ ಪಶ್ಯನ್, ತಾನೇವಾನುವಿಧಾವತಿ ॥ 14 (85)**

ತಾ॥ (ನಚಿಕೇತಾ) ನಿರ್ಮಲವಾದ ಜಲವು ನಿರ್ಮಲವಾದ ಜಲದಲ್ಲಿ ದುರ್ಗಗಳಲ್ಲಿ ಬಿದ್ದು ಅದರಲ್ಲಿ ಬೆರೆತು ಹೋಗುವಂತೆ ಜ್ಞಾನಿಯಾದ ಯೋಗಿಯ ಆತ್ಮವು ಸಹ ಪರಬ್ರಹ್ಮವೇ ಆಗಿರುತ್ತದೆ. (ದುರ್ಗ ಕಣಿವೆ) ಗಳಲ್ಲಿ (ಬಿದ್ದ ನೀರು) ಸುರಿದ ಮಳೆ ನೀರು ಭಿನ್ನ ಭಿನ್ನ ಮಾರ್ಗಗಳಲ್ಲಿ ಹರಿದು ಅಲ್ಲೇ ಇಂಗಿ-ಹೋಗಿಬಿಡುತ್ತದೆ. ನದಿಗಳಲ್ಲಿ ಸೇರಿದ ಜಲವು ಸಮುದ್ರಕ್ಕೆ ಹೋಗಿ ಬೆರೆತು ಏಕತ್ವವನ್ನು ಹೊಂದುತ್ತದೆ.

**ಮಂ.ಶ್ಲೋ.॥ ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ**
**ಏವಂ ಮುನೇರ್ವಿಜಾನತ, ಆತ್ಮಾ ಭವತಿ ಗೌತಮ ॥ 15 (86)**

ತಾ॥ ಶುಭ್ರವಾದ ನೀರು ಶುದ್ಧವಾದ ಜಲದೊಂದಿಗೆ ಬೆರೆತಾಗ ಶುದ್ಧವಾಗಿಯೇ ಉಳಿಯುವಂತೆ ಗೌತಮಾ ಸಾಧಕನು ಯಾವ ರೀತಿ ಭಾವಿಸುತ್ತಾನೋ, ಆ ಭಾವವೇ ಆಗುತ್ತಾನೆ. (ತಂದೆತಾಯಿಗಳಿಗೆ ತನ್ನ ಸಂತಾನದ ಬಗ್ಗೆ ಪ್ರೀತಿಯಿರುವುದು ಸರ್ವಾನುಭವ ಸಿದ್ಧವಾದುದು. ಯಾವುದು ಜೀವಿಗಳಿಗೆ ಹಿತವೋ, ಯಾವುದು ಹಿತವಲ್ಲವೋ, ಎನ್ನುವ ವಿಷಯವನ್ನು ತಿಳಿಯಲು ಸಾಮರ್ಥ್ಯವಿರುವುದು

ಶ್ರುತಿಗಿಂತ ಬೇರೆಯವರಿಗೆ ಸಾಧ್ಯವಿಲ್ಲ. ತಂದೆ ತಾಯಿಗಳಿಗಿಂತ ಸಾವಿರ ಪಾಲು ಅಧಿಕವಾದ ಹಿತವನ್ನು ಸಕಲಜೀವಿಗಳ ಬಗ್ಗೆಯೂ ವೇದವು ಹೊಂದಿರುವುದು. ಅಂತಹ ವೇದ ಮಾತೆಯ ಉಪದೇಶವನ್ನು ಉಪೇಕ್ಷಿಸುವುದು ಶುಭಕರವಲ್ಲವೆಂದು ತಾತ್ಪರ್ಯ)

## (ದ್ವಿತೀಯಾಧ್ಯಾಯ) 5ನೇ ವಲ್ಲಿ

**ಮಂ.ಶ್ಲೋ.॥ ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**

**ಅನುಷ್ಠಾಯ ನ ಶೋಚತಿ, ವಿಮುಕ್ತಶ್ಚ ವಿಮುಚ್ಯತೇ, ಏತದ್ವೈ ತತ್ ॥ 1 (87)**

ತಾ॥ ಹುಟ್ಟು ಎನ್ನುವುದಿಲ್ಲದ ಬ್ರಹ್ಮನ ಪಟ್ಟಣಕ್ಕೆ ಹನ್ನೊಂದು ದ್ವಾರಗಳಿವೆ. ಅಂತಹ ಪುರದಲ್ಲಿರುವ ಬ್ರಹ್ಮನನ್ನು ಆರಾಧಿಸುವವರು ದುಃಖವನ್ನು ಅನುಭವಿಸುವುದಿಲ್ಲ. ಮತ್ತು ಅಜ್ಞಾನ ಬಂಧನದಿಂದ ವಿಮುಕ್ತನಾಗಿ ಸ್ವೇಚ್ಛೆಯನ್ನು ಹೊಂದುತ್ತಾನೆ. ಇದೇ ಅದು! (11 ದ್ವಾರಗಳು= ಕಪಾಲ–1, ನೇತ್ರಗಳು 2, ಕಿವಿಗಳು–2, ನಾಸಿಕಾ ದ್ವಾರಗಳು ಮೂಗಿನ ಹೊಳ್ಳೆಗಳು–2, ಬಾಯಿ–1, ನಾಭಿ–1, ಮಲದ್ವಾರ–1, ಮೂತ್ರದ್ವಾರ–1)

**ಮಂ.ಶ್ಲೋ.॥ ಹಂಸಃ ಶುಚಿಷದ್‌ವಸುರನ್ತರಿಕ್ಷಸದ್‌ಹೋತಾ ವೇದಿಷದತಿಥಿರ್ದುರೋಣಷತ್।**

**ನೃಷದ್‌ವರಸದೃತಸದ್‌ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ**

**ಬೃಹತ್ ॥ 2(88)**

ತಾ॥ ಸೂರ್ಯನಂತೆ ಸ್ವರ್ಗದಲ್ಲಿ ವಾಸಿಸುವನು, ವಾಯುವಿನಂತೆ ಆಕಾಶದಲ್ಲಿ ವಾಸಿಸುವನು, ಅಗ್ನಿಯಂತೆ ಭೂಮಿಯಲ್ಲಿಯೂ, ಅತಿಥಿಯಂತೆ ಗೃಹದಲ್ಲಿಯೂ ವಾಸವಾಗಿರುವನು. ಆ ಪುರುಷನು ಮಾನವರಲ್ಲೂ, ದೇವತೆಗಳಲ್ಲೂ, ಯಜ್ಞಗಳಲ್ಲೂ, ಸತ್ಯದಲ್ಲಿಯೂ ಅಗ್ನಿಯಲ್ಲಿಯೂ ತುಂಬಿರುತ್ತಾನೆ. ಆತ ಜಲದಲ್ಲಿ ಜನಿಸುತ್ತಾನೆ. ಭೂಮಿಯಲ್ಲಿ ಹುಟ್ಟುತ್ತಾನೆ. ಬೆಟ್ಟಗಳಲ್ಲಿ ಉದ್ಭವಿಸುತ್ತಾನೆ. ಆ ಆತ್ಮ ಸತ್ಯಸ್ವರೂಪನಾಗಿ ಪ್ರಕಾಶಿಸಿರುತ್ತಾನೆ.

**ಮಂ.ಶ್ಲೋ.॥ ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ**

**ಮಧ್ಯೇ ವಾಮನಮಾಸೀನಂ, ವಿಶ್ವೇದೇವಾ ಉಪಾಸತೇ ॥ 3 (89)**

ತಾ॥ ಪೂಜನೀಯವಾದ ಪರಮಾತ್ಮನು ಪ್ರಾಣವನ್ನು ಮೇಲಕ್ಕೆ ಕಳುಹಿಸುತ್ತಿದ್ದಾನೆ. ಅಪಾನವನ್ನು ಕೆಳಕ್ಕೆ ಕಳುಹಿಸುತ್ತಾನೆ. ಮಧ್ಯದಲ್ಲಿ ಆಸೀನನಾಗಿರುವ ಆ ಆತ್ಮವನ್ನು ದೇವತೆಗಳೆಲ್ಲರೂ ಆರಾಧಿಸುತ್ತಿರುತ್ತಾರೆ.

**ಮಂ.ಶ್ಲೋ.॥ ಅಸ್ಯ ವಿಸ್ರಂಸಮಾನಸ್ಯ, ಶರೀರಸ್ಥಸ್ಯ ದೇಹಿನಃ**

**ದೇಹಾದ್ವಿಮುಚ್ಯಮಾನಸ್ಯ, ಕಿಮತ್ರ ಪರಿಶಿಷ್ಯತೇ, ಏತದ್ವೈ ತತ್ ॥ 4 (90)**

ತಾ॥ ದೇಹದಲ್ಲಿ ವಾಸವಾಗಿರುವ ಇಂತಹ ಆತ್ಮ ದೇಹವನ್ನು ಬಿಟ್ಟುಹೋದನಂತರ ಅಲ್ಲಿ ಆಗ ಉಳಿಯುವುದಾದರೂ ಏನು? ಇದೇ ಆ ಪರಮಾತ್ಮ (ಪ್ರಾಣಾದಿಗಳಿಗಿಂತ ಆತ್ಮವು ಪ್ರತ್ಯೇಕ-ವಾದುದೆಂದು ಅರ್ಥ)

**ಮಂ.ಶ್ಲೋ.॥ ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ**

**ಇತರೇಣತು ಜೀವನ್ತಿ, ಯಸ್ಮಿನ್ನೇತಾ ವುಪಾಶ್ರಿತೌ ॥ 5 (91)**

ತಾ॥ ಪ್ರಾಣದಿಂದಾಗಲೀ, ಅಪಾನದಿಂದಾಗಲೀ, ಮರ್ತ್ಯನು (ಮಾನವನು) ಜೀವಿಸುತ್ತಿಲ್ಲ. ಈ ಪ್ರಾಣಾಪಾನಗಳೆರಡೂ ಯಾವುದರ ಮೇಲೆ ಆಧಾರಪಟ್ಟು ಇವೆಯೋ ಅಂತಹ ಮತ್ತೊಂದರಿಂದಲೇ (ಆತ್ಮದಿಂದಲೇ) ಮನುಷ್ಯನು ಜೀವಿಸುತ್ತಾನೆ.

**ಮಂ.ಶ್ಲೋ.॥ ಹನ್ತ ತ ಇದಂ ಪ್ರವಕ್ಷ್ಯಾಮಿ, ಗುಹ್ಯಂ ಬ್ರಹ್ಮ ಸನಾತನಂ**

**ಯಥಾ ಚ ಮರಣಂ ಪ್ರಾಪ್ಯ, ಅತ್ಮಾ ಭವತಿ ಗೌತಮ ॥ 6 (92)**

ತಾ॥ ಓ ಗೌತಮಾ! ಸನಾತನವಾದ ಗುಹ್ಯವಾದ ಆ ಬ್ರಹ್ಮನನ್ನು ಕುರಿತು ನಿನಗೆ ಹೇಳಿದೆನು. ಮತ್ತು ಮರಣದ ನಂತರ ಆತ್ಮ ಏನಾಗುತ್ತದೆಯೆಂದು ನಿನಗೆ ವಿವರವಾಗಿ ಹೇಳಿದೆನು.

**ಮಂ.ಶ್ಲೋ.॥ ಯೋನಿಮನ್ಯೇ ಪ್ರಪದ್ಯನ್ತೇ, ಶರೀರತ್ವಾಯ ದೇಹಿನಃ**

**ಸ್ಥಾಣುಮನ್ಯೇಽನುಸಂಯನ್ತಿ ಯಥಾಕರ್ಮ ಯಥಾ ಶ್ರುತಂ ॥ 7 (93)**

ತಾ॥ ತಮ್ಮ ತಮ್ಮ ಜ್ಞಾನಕ್ಕನುಗುಣವಾಗಿ, ಕರ್ಮಾನುಸಾರವಾಗಿ ಕೆಲವು ಜೀವಾತ್ಮಗಳು ಗರ್ಭದೊಳಕ್ಕೆ ಪ್ರವೇಶಿಸುತ್ತವೆ. ಕೆಲವು ಜೀವಿಗಳು ವೃಕ್ಷಾದಿಗಳಲ್ಲಿ ಜನಿಸುತ್ತವೆ.

**ಮಂ.ಶ್ಲೋ.॥ಯ ಏಷ ಸುಪ್ತೇಷು ಜಾಗರ್ತಿ, ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ**

**ತದೇವಶುಕ್ರಂ ತದ್ಬ್ರಹ್ಮ, ತದೇವಾಮೃತಮುಚ್ಯತೇ॥**

**ತಸ್ಮಿಗ್‌ಲ್ಲೋಕಾಃ ಶ್ರಿತಾಸ್ಸರ್ವೇ, ತದು ನಾತ್ಯೇತಿ ಕಶ್ಚನ, ಏತದ್ವೈ ತತ್॥ 8 (94)**

ತಾ॥ ಜನರು, ನಿದ್ರಿಸುವಾಗಲೂ ಕೂಡಾ ಸಮಸ್ತ ವಿಧವಾದ ವಿಷಯೇಚ್ಛೆಗಳನ್ನು ಸ್ವಪ್ನದಲ್ಲಿ ರೂಪುಗೊಳಿಸುತ್ತಾ, ಎಚ್ಚರದಲ್ಲಿರುವ ಪುರುಷನೇ ಪವಿತ್ರವಾದ ಬ್ರಹ್ಮ, ಆ ಆತ್ಮನೇ 'ಅಮೃತ'ವೆಂದು ಕೂಡಾ ಕರೆಯುತ್ತಿದ್ದಾರೆ. ಸರ್ವ ಪ್ರಪಂಚವೂ ಇದರ ಮೇಲೇ ಆಧಾರವಾಗಿದೆ. ಇದನ್ನು ಯಾರೂ ಅತಿಕ್ರಮಿಸಲಾರರು. ಇದೇ ಆತ್ಮ.

**ಮಂ.ಶ್ಲೋ.॥ ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ**

**ಏಕಸ್ತಥಾ ಸರ್ವಭೂತಾನ್ತರಾತ್ಮಾ, ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ 9 (95)**

ತಾ॥ ಪ್ರಕಾಶ ಸ್ವಭಾವವನ್ನು ಹೊಂದಿದ ಅಗ್ನಿಯೊಬ್ಬನೇ ಹಲವು ಬಗೆಯ ಕಟ್ಟಿಗೆಗಳಲ್ಲಿ ಪ್ರವೇಶಿಸಿ ಆಯಾ ಬಾಹ್ಯ ರೂಪಕ್ಕೆ ತಕ್ಕಂತೆ ರೂಪವನ್ನು ಹೊಂದಿದವನಾಗಿರುತ್ತಾನೋ, ಅದೇ ವಿಧವಾಗಿ ಒಬ್ಬನೇ ಆದ ಆತ್ಮನೇ, ಸರ್ವಭೂತಗಳಲ್ಲಿಯೂ, ಸರ್ವ ದೇಹಗಳಲ್ಲಿಯೂ, ಅತಿ ಸೂಕ್ಷ್ಮವಾದ ಅಂತರಾತ್ಮಭೂತನಾಗಿ ಪ್ರವೇಶಿಸಿ, ಆಯಾ ದೇಹಗಳಿಗೆ ತಕ್ಕ ರೂಪವನ್ನು ಹೊಂದಿದವನಾಗಿರುತ್ತಾನೆ.

**ಮಂ.ಶ್ಲೋ.॥ ವಾಯುರ್ಯಥೈಕೋ ಭುವನಂ ಪ್ರವಿಷ್ಟೋ, ರೂಪಂ ರೂಪಂ ಪ್ರತಿರೂಪೋ ಬಭೂವ**

**ಏಕಸ್ತಥಾ ಸರ್ವಭೂತಾನ್ತರಾತ್ಮಾ, ರೂಪಂ, ರೂಪಂ ಪ್ರತಿರೂಪೋ ಬಹಿಶ್ಚ॥ 10(96)**

ತಾ॥ ಒಂದೇ ವಾಯುವು ಲೋಕದಲ್ಲಿ ಪ್ರವೇಶಿಸಿ, ತಾನು ಹೊಂದಿದ ರೂಪಾನುಸಾರವಾಗಿ ಹೇಗೆ ಬದಲಾವಣೆಯನ್ನು ಹೊಂದುತ್ತದೆಯೋ, ಹಾಗೆಯೇ ಸರ್ವಜೀವಿಗಳಲ್ಲಿನ ಆ ಪರಮಾತ್ಮ ಒಬ್ಬನೇ ಆದರೂ, ತಾನು ಧರಿಸುವ ರೂಪಗಳಿಗನುರೂಪವಾಗಿ ದರ್ಶನವನ್ನು ಕೊಡುತ್ತಿದ್ದಾನೆ. ಆತ್ಮವು ಲೋಕಕ್ಕೆ ಅತೀತವಾಗಿದೆ.

**ಮಂ.ಶ್ಲೋ.॥ ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ**
**ಏಕಸ್ತಥಾ ಸರ್ವಭೂತಾನ್ತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ 11 (97)**

ತಾ॥ ಸೂರ್ಯನು ಯಾವ ರೀತಿಯಲ್ಲಿ ಬಾಹ್ಯದೃಷ್ಟಿ ದೋಷಗಳಿಗೆ ಕಾರಣನಾಗುವುದಿಲ್ಲವೋ, ಹಾಗೆಯೇ, ಸರ್ವಭೂತಾಂತರಾತ್ಮನಾದ ಪರಮಾತ್ಮನು ಬಾಹ್ಯ ಪ್ರಪಂಚ ದೋಷಗಳಿಂದ ದೂರವೇ ಉಳಿಯುತ್ತಾನೆ. ದೋಷಗಳಿಗೆ ಕಾರಣನಾಗುವುದಿಲ್ಲ. ಆತನು ಸಾಕ್ಷಿಯಾಗಿ ಮಾತ್ರವೇ ಇರುವಂತಹವನು.

**ಮಂ.ಶ್ಲೋ.॥ ಏಕೋ ವಶೀ ಸರ್ವಭೂತಾನ್ತರಾತ್ಮಾ, ಏಕಂ ರೂಪಂ ಬಹುಧಾ ಯಃ ಕರೋತಿ**
**ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ 12 (98)**

ತಾ॥ "ಆ ಪರಮೇಶ್ವರನು ಸರ್ವ ಭೂತಾನ್ತರಾತ್ಮನು. ತನ್ನ ಏಕ(ಒಂದೇ) ರೂಪವನ್ನು ಬಹುರೂಪಗಳಾಗಿ ವ್ಯಕ್ತಪಡಿಸುತ್ತಿದ್ದಾನೆ" ಎಂದು ಆತನ ದಿವ್ಯ ರೂಪವನ್ನು ಯಾವ ಜ್ಞಾನಿಗಳು ಗ್ರಹಿಸುತ್ತಿದ್ದಾರೋ ಅವರೇ ಶಾಶ್ವತವಾದ ಸುಖವನ್ನು ಹೊಂದುತ್ತಿದ್ದಾರೆ. ಇನ್ನುಳಿದವರು ಹೊಂದಲಾರರು.

**ಮಂ.ಶ್ಲೋ.॥ ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್**
**ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ ಶಾನ್ತಿಃ ಶಾಶ್ವತೀ ನೇತರೇಷಾಮ್॥ 13 (99)**

ತಾ॥ ಆ ಪರಮಾತ್ಮನು ಅನಿತ್ಯರಲ್ಲಿ ನಿತ್ಯನು. ಚೇತನರಲ್ಲಿ ಚೇತನನು. ಏಕೈಕನಾದರೂ ಬಹುಕಾಮಗಳನ್ನು ನೆರವೇರಿಸುವಂತಹ ಆತ್ಮವನ್ನು ತಮ್ಮ ಆತ್ಮದಲ್ಲಿಯೇ ದರ್ಶಿಸುವಂತಹ ಪ್ರಾಜ್ಞರಿಗೆ ಮಾತ್ರವೇ ಶಾಶ್ವತಶಾಂತಿ ಲಭಿಸುತ್ತದೆ. ಇತರರು ಆ ಶಾಂತಿಯನ್ನು ಹೊಂದಲಾರರು.

**ಮಂ.ಶ್ಲೋ.॥ ತದೇತದಿತಿಮನ್ಯನ್ತೇ ಅನಿರ್ದೇಶ್ಯಂ ಪರಮಂ ಸುಖಂ**
**ಕಥಂ ನು ತದ್ವಿಜಾನೀಯಾಂ, ಕಿಮು ಭಾತಿ ವಿಭಾತಿ ವಾ ॥ 14 (100)**

ತಾ॥ ಇದೇ ಅದು, ಎಂದು ಹೇಗೆ ತಿಳಿದುಕೊಳ್ಳಬಲ್ಲೆ? ಅದು ಸ್ವಯಂ ಪ್ರಕಾಶಿಸುತ್ತಿದೆಯೇ? ಇಲ್ಲವೇ ಇತರ ಪ್ರಕಾಶದಿಂದ ಪ್ರಕಾಶಿಸಲ್ಪಡುತ್ತಿದೆಯೇ? ಎಂದು ನಿರ್ದೇಶಿಸಲು (ನಿರ್ಧರಿಸಲು) ಸಾಧ್ಯವಿಲ್ಲದ ಆ ಪರಮಸುಖವನ್ನು ಕುರಿತು ಮಹರ್ಷಿಗಳು ಭಾವಿಸುತ್ತಿದ್ದಾರೆ.

**ಮಂ.ಶ್ಲೋ.॥ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ, ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ**
**ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ 15 (101)**

ತಾ|| ಸೂರ್ಯನು, ಚಂದ್ರನು, ನಕ್ಷತ್ರಗಳು, ವಿದ್ಯುತ್ತುಗಳು ಅಲ್ಲಿ ಪ್ರಕಾಶಿಸುವುದಿಲ್ಲ. ಇನ್ನು ಈ ಅಗ್ನಿ ವಿಷಯವನ್ನು ಹೇಳಬೇಕೇ? ಆ ಆತ್ಮ ಪ್ರಕಾಶಿಸುವುದರಿಂದ ಅದನ್ನು ಆಶ್ರಯಿಸಿಕೊಂಡು ಉಳಿದದ್ದೆಲ್ಲವೂ ಪ್ರಕಾಶಿಸುತ್ತಿವೆ. ಆತ್ಮದ ಬೆಳಕಿನಿಂದಲೇ ಇವೆಲ್ಲವೂ ಬೆಳಗುತ್ತಿವೆ. (ಆ ಬ್ರಹ್ಮವು "ಭಾತಿ ವಿಭಾತಿ" ಎಂದು ಹೇಳಲಾಗುತ್ತಿದೆ. ಅಂದರೆ ಕಾರ್ಯ ರೂಪಗಳಾಗಿರುವ ವಿವಿಧ ಪ್ರಕಾಶದಿಂದ ಬ್ರಹ್ಮದ ಪ್ರಕಾಶವು ಸ್ವತಃ ತಿಳಿಯಲಾಗುತ್ತಿದೆ.)

# ದ್ವಿತೀಯಾಧ್ಯಾಯ- 6ನೇ ವಲ್ಲಿ

**ಮಂ.ಶ್ಲೋ.|| ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ, ತದೇವಾಮೃತಮುಚ್ಯತೇ ತಸ್ಮಿಗ್‌ಲ್ಲೋಕಾಃ ಶ್ರಿತಾಃ ಸರ್ವೇ।**
**ತದು ನಾತ್ಯೇತಿ ಕಶ್ಚನ, ಏತದ್ವೈ ತತ್ ॥ 1 (102)**

ತಾ|| ಮೇಲೆ ಬೇರುಗಳು, ಕೆಳಗೆ ಕೊಂಬೆಗಳು ವ್ಯಾಪಿಸಿರುವ ಪ್ರಾಚೀನವಾದ ಅಶ್ವತ್ಥವೃಕ್ಷವಿದು. ಇದೇ ಶುದ್ಧವಾದುದು, ಇದೇ ಬ್ರಹ್ಮ ಇದೇ ಅಮೃತವೆಂದು ಕರೆಯಲಾಗುತ್ತದೆ. ಇದರಲ್ಲೇ ಲೋಕವೆಲ್ಲವೂ ಆಧಾರವಾಗಿ ಇವೆ. ಯಾವುದೂ ಇದನ್ನು ಅತಿಕ್ರಮಿಸಲಾರದು. ಇದೇ ಆ ಪರಮಾತ್ಮ.

**ಮಂ.ಶ್ಲೋ.|| ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ**
**ಮಹದ್ಭಯಂ ವಜ್ರಮುದ್ಯತಂ, ಯ ಏತದ್ವಿದುರಮೃತಾಸ್ತೇ ಭವನ್ತಿ ॥ 2 (103)**

ತಾ|| ಪ್ರಾಣದಂತಹ ಈ ಆತ್ಮದಿಂದಲೇ ಪ್ರಪಂಚವೆಲ್ಲವೂ ಆವಿರ್ಭವಿಸುತ್ತಾ ಅದರಲ್ಲೇ ಚಲಿಸುತ್ತಾ ಇದೆ. ಮೇಲಕ್ಕೆತ್ತಿದ ವಜ್ರಾಯುಧದಂತೆ ಆತ್ಮವು ಹೆಚ್ಚಿನ ಭಯವನ್ನುಂಟು ಮಾಡುವುದು. (ಆಶ್ಚರ್ಯವಾಗಿ, ಭಯಪ್ರದವಾಗಿರುವುದು) ಈ ಆತ್ಮವನ್ನು ಅರಿತುಕೊಂಡವರು ಜನನ ಮರಣ ರಹಿತರಾಗುವರು.

**ಮಂ.ಶ್ಲೋ.|| ಭಯಾದಸ್ಯಾಗ್ನಿಸ್ತಪತಿ, ಭಯಾತ್ತಪತಿ, ಸೂರ್ಯಃ**
**ಭಯಾದಿನ್ದ್ರಶ್ಚ, ವಾಯುಶ್ಚ, ಮೃತ್ಯುರ್ಧಾವತಿ ಪಂಚಮಃ ॥ 3 (104)**

ತಾ|| ಓ ನಚಿಕೇತನೇ! ಆ ಪರಮೇಶ್ವರನಲ್ಲಿನ ಭಯವು ಇರುವುದರಿಂದಲೇ ಅಗ್ನಿಯು ಆಯಾ ಪದಾರ್ಥಗಳನ್ನು ದಹಿಸುತ್ತಿದ್ದಾನೆ. ಸೂರ್ಯನು ಶಾಖವನ್ನು ಕೊಡುತ್ತಿದ್ದಾನೆ. ಇಂದ್ರನು ದೇವಲೋಕವನ್ನು ಪರಿಪಾಲಿಸುತ್ತಿದ್ದಾನೆ. ವಾಯುವು ಗಾಳಿ ಬೀಸುತ್ತಿದ್ದಾನೆ. ಈ ಐದನೆಯದಾದ ಮೃತ್ಯುವು ಶರೀರಧಾರಿಗಳನ್ನು ಅವರವರ ಕಾಲ ತೀರಿದ ಮೇಲೆ ಯಮಲೋಕದಲ್ಲಿ ಇರುವಂತೆ ಮಾಡುತ್ತಾನೆ.

**ಮಂ.ಶ್ಲೋ.|| ಇಹಚೇದಶಕದ್ಬೋದ್ಧುಂ, ಪ್ರಾಕ್ಶರೀರಸ್ಯ ವಿಸ್ರಸಃ**
**ತತಃ ಸರ್ಗೇಷು ಲೋಕೇಷು, ಶರೀರತ್ವಾಯ ಕಲ್ಪತೇ ॥ 4 (105)**

ತಾ|| ಶರೀರವು ಬೀಳುವುದಕ್ಕೆ ಮೊದಲೇ ಈ ಆತ್ಮವನ್ನು ತಿಳಿದುಕೊಂಡವನು ಸಂಸಾರ

ಬಂಧದಿಂದ ವಿಮುಕ್ತಿ ಪಡೆಯುತ್ತಾನೆ. ಹಾಗೆ ತಿಳಿದುಕೊಳ್ಳಲಾಗದಿದ್ದಲ್ಲಿ ಆತನು ಮತ್ತೆ ಶರೀರವನ್ನು ಧರಿಸಬೇಕಾಗಿ ಬರುತ್ತದೆಯೇನೋ (ಪುನರ್ಜನ್ಮವನ್ನು ಹೊಂದಬೇಕಾಗಿ ಬರುತ್ತದೆಯೇನೋ?)

**ಮಂ.ಶ್ಲೋ.॥ ಯಥಾಽಽದರ್ಶೇ ತಥಾತ್ಮನಿ, ಯಥಾ ಸ್ವಪ್ನೇ ತಥಾ ಪಿತೃಲೋಕೇ ಯಥಾಽಪ್ಸುಪರೀವ**
**ದದೃಶೇ ತಥಾ, ಗನ್ಧರ್ವಲೋಕೇ ಛಾಯಾತಪಯೋರಿವ ಬ್ರಹ್ಮಲೋಕೇ॥ 5(106)**

ತಾ॥ ಕನ್ನಡಿಯಲ್ಲಿ ಪ್ರತಿ ವಸ್ತುವು ಗೋಚರಿಸಿದಂತೆ ಈ ಆತ್ಮ ಪ್ರತಿವ್ಯಕ್ತಿಯ ಅಂತರಂಗ-ದಲ್ಲಿಯೂ, ಸ್ಪಷ್ಟವಾಗಿ ಪ್ರತಿಬಿಂಬಿಸುತ್ತಿದೆ. ಸ್ವಪ್ನದಂತಿರುವುದರಿಂದಲೇ ಪಿತೃಲೋಕದಲ್ಲಿ, ಜಲದಂತಿರುವುದರಿಂದಲೇ ಗಂಧರ್ವಲೋಕದಲ್ಲಿ, ಕತ್ತಲೆ ಬೆಳಕುಗಳಿಂದಲೇ ಬ್ರಹ್ಮಲೋಕದಲ್ಲಿಯೂ ಆ ಬ್ರಹ್ಮ ಅನುಭೂತವಾಗುತ್ತಿದ್ದಾನೆ. (ಆತ್ಮದರ್ಶನಕ್ಕೆ ಮಾನವ ಜನ್ಮ ಉತ್ತಮವೆಂದು ತಾತ್ಪರ್ಯ)

**ಮಂ.ಶ್ಲೋ.॥ ಇನ್ದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್**
**ಪೃಥಕ್ ಉತ್ಪದ್ಯಮಾನಾನಾಂ, ಮತ್ವಾ ಧೀರೋ ನ ಶೋಚತಿ ॥ 6 (107)**

ತಾ॥ ಪರಿಪರಿ ವಿಧಗಳಲ್ಲಿ ಉತ್ಪನ್ನವಾದ ಮನೋಬುದ್ಧೀಂದ್ರಿಯಗಳು ಆತ್ಮಕ್ಕಿಂತ ಬೇರೆ-ಯಾದುದೆಂದು ತಿಳಿದುಕೊಂಡು ಅವುಗಳ ವೃದ್ಧಿ ಕ್ಷಯಗಳನ್ನು ಸ್ಪಷ್ಟವಾಗಿ ಗ್ರಹಿಸಿದಾಗ ಆ ಜ್ಞಾನಿ ಶೋಕವನ್ನನುಭವಿಸುವುದಿಲ್ಲ.

**ಮಂ.ಶ್ಲೋ.॥ ಇಂದ್ರಿಯೇಭ್ಯಃ ಪರಂ ಮನೋ, ಮನಸಃ ಸತ್ತ್ವಮುತ್ತಮಂ**
**ಸತ್ತ್ವಾದಧಿಮಹಾನಾತ್ಮಾ, ಮಹತೋಽವ್ಯಕ್ತಮುತ್ತಮಮ್ ॥ 7 (108)**

ತಾ॥ ಇಂದ್ರಿಯಗಳಿಗಿಂತ ಮನಸ್ಸು ಶ್ರೇಷ್ಠವಾದುದು. ಆ ಮನಸ್ಸಿಗಿಂತ ಸತ್ವವು ಅಂದರೆ ಬುದ್ಧಿ ಶ್ರೇಷ್ಠವಾದುದು. ಆ ಮಹದಾತ್ಮಕ್ಕಿಂತ ಸರ್ವಕಾರಣವಾದ ಅವ್ಯಕ್ತವು ಶ್ರೇಷ್ಠವಾದುದು.

**ಮಂ.ಶ್ಲೋ.॥ ಅವ್ಯಕ್ತಾತ್ತು ಪರಃಪುರುಷೋ, ವ್ಯಾಪಕೋಽಲಿಙ್ಗ ಏವ ಚ**
**ಯತ್ ಜ್ಞಾತ್ವಾ ಮುಚ್ಯತೇ ಜನ್ತುರಮೃತತ್ವಂ ಚ ಗಚ್ಛತಿ ॥ 8 (109)**

ತಾ॥ ಅವ್ಯಕ್ತಕ್ಕಿಂತ ಪರವಾದವನು ಪುರುಷ. ಆತ ಸರ್ವವ್ಯಾಪಕನು. ಲಿಂಗರಹಿತ. ಅಂತಹವ-ನನ್ನು ತಿಳಿದುಕೊಂಡವನು ಸಂಸಾರ ಬಂಧನದಿಂದ ವಿಮುಕ್ತನಾಗಿ ಅಮೃತತ್ವವನ್ನು ಹೊಂದುತ್ತಾನೆ.

**ಮಂ.ಶ್ಲೋ.॥ ನ ಸಂದೃಶೇ ತಿಷ್ಠತಿ ರೂಪಮಸ್ಯ, ನ ಚಕ್ಷುಷಾ ಪಶ್ಯತಿ ಕಶ್ಚನೈನಂ**
**ಹೃದಾ ಮನೀಷಾ ಮನಸಾಽಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವನ್ತಿ ॥9(110)**

ತಾ॥ ದೃಗ್ಗೋಚರವಾದ ವಸ್ತುಜಾಲದಲ್ಲಿ ಆತನಿಗೆ ರೂಪವಿಲ್ಲ. ಕಣ್ಣುಗಳಿಂದ ಯಾರೂ ಆತನನ್ನು ನೋಡಲಾರರು. ಹೃದಯದೊಳಗಿನಿಂದ ಮನಸ್ಸನ್ನು ವಶಮಾಡಿಕೊಂಡ ಪ್ರತಿಭೆಯೆನ್ನುವ ಜ್ಞಾನ(ವು)ದಿಂದ ಆತನು ಅಭಿವ್ಯಕ್ತವಾಗುತ್ತಿದ್ದಾನೆ. ಆತನನ್ನು ತಿಳಿದುಕೊಂಡವರು ಅಮೃತರಾಗುತ್ತಾರೆ.

**ಮಂ.ಶ್ಲೋ.॥ ಯದಾ ಪಂಚಾವತಿಷ್ಠನ್ತೇ, ಜ್ಞಾನಾನಿ ಮನಸಾ ಸಹ**
**ಬುದ್ಧಿಶ್ಚ ನ ವಿಚೇಷ್ಟತಿ, ತಾಮಾಹುಃ ಪರಮಾಂ ಗತಿಮ್ ॥ 10 (111)**

ತಾ॥ ಈ ಪ್ರಪಂಚ ಜ್ಞಾನೇಂದ್ರಿಯಗಳು ಮನೋಬುದ್ಧಿಗಳಿಂದ ಕೂಡಿ ವಿಶ್ರಾಂತಿ ಹೊಂದಿದಂತಹ ಸ್ಥಿತಿ ಅತ್ಯುನ್ನತವಾದುದು. ಅದನ್ನೇ ಅವರು "ಪರಮಗತಿ" "ಪರಮಾತ್ಮಪದ"ವೆಂದು ಹೇಳುತ್ತಿದ್ದಾರೆ.

**ಮಂ.ಶ್ಲೋ.॥ ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿನ್ದ್ರಿಯಧಾರಣಾಂ**
**ಅಪ್ರಮತ್ತಸ್ತದಾ ಭವತಿ, ಯೋಗೋ ಹಿ ಪ್ರಭವಾಪ್ಯಯೌ** ॥ 11 (112)

ತಾ॥ ಸ್ಥಿರವಾದ ಇಂದ್ರಿಯಧಾರಣವನ್ನೇ ಯೋಗವೆಂದು ಹೇಳಿದ್ದಾರೆ. ಅಂತಹ ಸ್ಥಿತಿಯಲ್ಲಿ ಯೋಗಿ ಅಪ್ರಮತ್ತನಾಗಿರುವನು. ಈ ಯೋಗವನ್ನು ಹೊಂದಬಹುದು. (ಅಜಾಗ್ರತೆಯಿಂದ) ಕಳೆದು ಕೊಳ್ಳಬಹುದು.

**ಮಂ.ಶ್ಲೋ.॥ ನೈವ ವಾಚಾ ನ ಮನಸಾ, ಪ್ರಾಪ್ತುಂ ಶಕ್ಯೋ ನ ಚಕ್ಷುಷಾ**
**ಅಸ್ತೀತಿ ಬ್ರುವತೋಽನ್ಯತ್ರ, ಕಥಂ ತದುಪಲಭ್ಯತೇ** ॥ 12 (113)

ತಾ॥ ಆತ್ಮವು ವಾಕ್ಕಿನಿಂದಲೂ, ಮನಸ್ಸಿನಿಂದಲೂ, ನೇತ್ರಗಳಿಂದಲೂ ಹೊಂದಲಾರದ್ದಾಗಿದೆ. "ಅದು ಇದೆ" ಎಂದು ಹೇಳುವವರ ಮೂಲಕವಲ್ಲದೆ ಮತ್ತೆ ಯಾವ ಇತರ ಸಾಧನಗಳಿಂದ ಯಾವುದನ್ನು ಹೊಂದಬಲ್ಲರು?

**ಮಂ.ಶ್ಲೋ.॥ ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ**
**ಅಸ್ತೀತ್ಯೇವೋಪಲಬ್ಧಸ್ಯ, ತತ್ತ್ವಭಾವಃ ಪ್ರಸೀದತಿ** ॥ 13 (114)

ತಾ॥ ಇದೆ, ಇಲ್ಲ ಎನ್ನುವ ಎರಡರಲ್ಲೂ "ಇದೆ" ಎನ್ನುವುದನ್ನು ಮಾತ್ರವೇ ತತ್ತ್ವಭಾವದೊಂದಿಗೆ ಹೊಂದಬಲ್ಲದು. ಅಂತಹ ಅಸ್ತಿತ್ವವನ್ನು ಅನುಭವಿಸುವವನಿಗೇ ತತ್ತ್ವವು ಅನುಭವವೇದ್ಯವಾಗುತ್ತದೆ.

**ಮಂ.ಶ್ಲೋ.॥ ಯದಾ ಸರ್ವೇ ಪ್ರಮುಚ್ಯನ್ತೇ, ಕಾಮಾ ಯೇಽಸ್ಯ ಹೃದಿಶ್ರಿತಾಃ**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ** ॥ 14 (115)

ತಾ॥ ಹೃದಯದಲ್ಲಿರುವ ಕೋರಿಕೆಗಳನ್ನೆಲ್ಲಾ ಯಾವಾಗ ಪೂರ್ತಿಯಾಗಿ ಹೋಗಲಾಡಿಸಿಕೊಳ್ಳುವರೋ, ಆಗ ಮರ್ತ್ಯನು ಅಮೃತನಾಗಿ ಅಲ್ಲಿಯೇ ಬ್ರಹ್ಮವನ್ನು ಚೆನ್ನಾಗಿ ಹೊಂದುತ್ತಾನೆ.

**ಮಂ.ಶ್ಲೋ.॥ ಯದಾ ಸರ್ವೇ ಪ್ರಭಿದ್ಯನ್ತೇ, ಹೃದಯಸ್ಯೇಹಗ್ರನ್ಥಯಃ**
**ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್** ॥ 15 (116)

ತಾ॥ ಈ ಜೀವಿತದಲ್ಲಿಯೇ ಹೃದಯ ಗ್ರಂಥಿಗಳನ್ನು ಬೇಧಿಸಿದ ಮಾನವನು ಅಮರತ್ವವನ್ನು ಹೊಂದುತ್ತಾನೆಂದು ವೇದಾಂತಗಳೆಲ್ಲವೂ ಬೋಧಿಸುತ್ತಿದೆ.

**ಮಂ.ಶ್ಲೋ.॥ ಶತಂ ಚೈಕಾ ಚ ಹೃದಯಸ್ಯ, ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ**
**ತಯೋರ್ಧ್ವಮಾಯನ್ನಮೃತತ್ವಮೇತಿ, ವಿಷ್ವಙ್ಙನ್ಯಾಉತ್ಕ್ರಮಣೇ ಭವನ್ತಿ** ॥ 16(117)

ತಾ॥ ಹೃದಯದಲ್ಲಿನ ನಾಡಿಗಳು ನೂರಾ ಒಂದು (101) ಇವುಗಳಲ್ಲಿ ಒಂದು ನಾಡಿ (ಸುಷುಮ್ನ)

ತಲೆಯ ಮೇಲಿನವರೆಗೂ ವ್ಯಾಪಿಸಿದೆ. ಇದರೊಂದಿಗೆ ಮೇಲಕ್ಕೆ ಹೋಗುವ ಮಾನವನು ಅಮೃತತ್ವ-ವನ್ನು ಹೊಂದುತ್ತಾನೆ. ಮಿಕ್ಕವು ಮಾತ್ರ ಭಿನ್ನಮಾರ್ಗಗಳ ಮೂಲಕ ಹೊರಟುಹೋಗುವವು. (ಈ ವಿಷಯವನ್ನು ಬ್ರಹ್ಮಾವಿದ್ಯಾಧಿಕಾರಿಗಳನ್ನು ಕುರಿತು ಹೇಳಿದ್ದೆಂದು ಭಾಷ್ಯಕಾರರು ಹೇಳಿದ್ದಾರೆ.)

**ಮಂ.ಶ್ಲೋ.॥ ಅಂಗುಷ್ಠಮಾತ್ರಃ ಪುರುಷೋಽನ್ತರಾತ್ಮಾ, ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಂ, ತಂ ವಿದ್ಯಾಚ್ಛುಕ್ರಮಮೃತಮಿತಿ ॥ 17 (118)**

ತಾ॥ ಅಂಗುಷ್ಠ ಮಾತ್ರ ಪ್ರಮಾಣವುಳ್ಳ ಹೃದಯ ಪದ್ಮಪುರುಷನು ಅಂಗುಷ್ಠ ಮಾತ್ರ-ನೆಂದೆನಿಸಿಕೊಳ್ಳುತ್ತಾನೆ. ಅಂತಹ ಅಂಗುಷ್ಠ ಮಾತ್ರ ಪುರುಷನ ಮುಂಗೈಯನ್ನು ತೃಣ ವಿಶೇಷದಿಂದ ತದಂತರ್ಗತವಾದ ಇಷೀಕದವನ್ನೂ ಕಸಬರಿಕೆಯಿಂದ ಹೊರಕ್ಕೆ ಎಳೆಯುತ್ತಿರುವಂತೆ ಸರ್ವ ಶರೀರದಿಂದ ಜ್ಞಾನದೊಂದಿಗೆ ಬೇರ್ಪಡಿಸಬೇಕು. ಶರೀರದಿಂದ ಬೇರ್ಪಡಿಸಿದ ಚಿನ್ಮಾತ್ರನಾದ ಆ ಆತ್ಮವನ್ನೇ ಶುದ್ಧವಾದ ಬ್ರಹ್ಮವೆಂದು ತಿಳಿಯಬೇಕು. ಆತನನ್ನೇ ಪರಿಶುದ್ಧವಾದ ಬ್ರಹ್ಮನೆಂದು ತಿಳಿಯಬೇಕು. ಈ ದ್ವಿರುಕ್ತಿಯು ಉಪನಿಷತ್ ಸಮಾಪ್ತಿಯ ದ್ಯೋತಕ.

**ಮಂ.ಶ್ಲೋ.॥ ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಂ ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುರನ್ಯೋಽಪೇವ್ಯಂ ಯೋ ವಿದಧ್ಯಾತ್ಮಮೇವ ॥ 18 (119)**

ತಾ॥ ನಚಿಕೇತನು ಮೃತ್ಯುದೇವತೆಯು ಹೇಳಿದ ಈ ಜ್ಞಾನವನ್ನು, ಯೋಗ ಪದ್ಧತಿಯನ್ನು ಅರ್ಥಮಾಡಿಕೊಂಡು ಸಮಸ್ತಮಾಲಿನ್ಯಗಳಿಂದ ವಿಮುಕ್ತನಾಗಿ, ಬ್ರಹ್ಮೈಕ್ಯವನ್ನು ಹೊಂದುತ್ತಿದ್ದಾನೆ. ಅದೇ ರೀತಿಯಾಗಿ ಈ ಉಪನಿಷತ್ತನ್ನು ಅರ್ಥ ಮಾಡಿಕೊಂಡವರೆಲ್ಲರೂ ಆತ್ಮಜ್ಞಾನದಿಂದ ಮೋಕ್ಷವನ್ನು ಪಡೆಯಬಲ್ಲರು. (ಕಠೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ ಓಂ – ಸಹನಾವವತು – ಸಹನೌ ಭುನಕ್ತು – ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು – ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**





# ಪ್ರಶ್ನೋಪನಿಷತ್ - 4

(ಅಥರ್ವವೇಂದಾರ್ತರ್ಗತ)

ಶಾಂತಿ ಮಂತ್ರ॥ ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋಃ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋಃ ಅರಿಷ್ಟನೇಮಿಃ, ಸ್ವಸ್ತಿನೋಃ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ

## ಪ್ರಥಮ ಪ್ರಶ್ನಃ

ಮಂ.ಶ್ಲೋ.॥ ಓಂ ಸುಕೇಶಾ ಚ ಭಾರದ್ವಾಜಃ, ಶೈಬ್ಯಶ್ಚ ಸತ್ಯಕಾಮಃ, ಸೌರ್ಯಾಯಣೀ ಚ ಗಾರ್ಗ್ಯಃ, ಕೌಸಲ್ಯಶ್ಚಾಶ್ವಲಾಯನೋಃ, ಭಾರ್ಗವೋಃ ವೈದರ್ಭಿಃ, ಕಬನ್ಧೀ ಕಾತ್ಯಾಯನಸ್ತೇ ಹೈತೇ ಬ್ರಹ್ಮಪರಾಃ ಬ್ರಹ್ಮನಿಷ್ಠಾಃ ಪರಂಬ್ರಹ್ಮಾನ್ವೇಷಮಾಣಾ ಏಷಹ ವೈ ತತ್ಸರ್ವಂ ವಕ್ಷ್ಯತೀತಿ ತೇಹ ಸಮಿತ್ಪಾಣಯೋಃ ಭಗವನ್ತಂ ಪಿಪ್ಪಲಾದಮುಪಸನ್ನಾಃ ॥ 1

ತಾ॥ ಭರದ್ವಾಜ ಪುತ್ರನಾದ ಸುಕೇಶನು, ಶಿಬಿಯ ಮಗನಾದ ಸತ್ಯಕಾಮನು, ಗಾರ್ಗ್ಯ-ಗೋತ್ರೋದ್ಭವನಾದ ಸೌರ್ಯಾಯಣಿ, ಅಶ್ವಲನ ಪುತ್ರನಾದ ಕೋಸಲ್ಯ, ಭೃಗುಗೋತ್ರಜನಾದ ವೈದರ್ಭಿ, ಕತ್ಯನ ಕುಮಾರನಾದ ಕಬಂಧಿ, ಎನ್ನುವ ಆರು ಮಂದಿ ಮುನೀಶ್ವರರು, ಬ್ರಹ್ಮನಿಷ್ಠರಾಗಿ, ಪರಬ್ರಹ್ಮವನ್ನು ಸ್ಪಷ್ಟವಾಗಿ ತಿಳಿಯಬಯಸಿದರು. ಅದಕ್ಕಾಗಿ ಸಮಿತ್ತುಗಳನ್ನು ಕೈಯಲ್ಲಿ ಹಿಡಿದು ಬ್ರಹ್ಮವೇತ್ತರಿಗಾಗಿ ಪಯಣ ಬೆಳೆಸಿದರು. ಪಿಪ್ಪಲಾದ ಮಹರ್ಷಿ ಬ್ರಹ್ಮಜ್ಞಾನವನ್ನು ಉಪದೇಶಿಸುವರೆಂದು ನಿಶ್ಚಯಿಸಿಕೊಂಡು, ಆ ಮಹರ್ಷಿಯ ಬಳಿಗೆ ಬಂದರು.

ಮಂ.ಶ್ಲೋ.॥ ತಾನ್ಹಸ ಋಷಿರುವಾಚ, ಭೂಯ ಏವ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥ, ಯಥಾಕಾಮಂ ಪ್ರಶ್ನಾನ್ ಪೃಚ್ಛತ, ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋಃ ವಕ್ಷ್ಯಾಮ ಇತಿ ॥ 2

ತಾ॥ ಭಕ್ತಿ ಶ್ರದ್ಧೆಗಳಿಂದ ಶುಶ್ರೂಷೆ ಮಾಡಲು ಬಂದವರೊಂದಿಗೆ ಪಿಪ್ಪಲಾದ ಮಹರ್ಷಿ ಹೀಗೆ ಹೇಳಿದರು. ನೀವು ಇದಕ್ಕೆ ಮೊದಲೇ ತಪಸ್ಸನ್ನು ಮಾಡಿದ್ದೀರಿ. ಆದರೂ ಇನ್ನೊಂದು ವರ್ಷಕಾಲ ತಪಸ್ಸು, ಶ್ರದ್ಧೆ, ಬ್ರಹ್ಮಚರ್ಯ ಇವುಗಳೊಂದಿಗೆ ಗುರುಶುಶ್ರೂಷೆಗೈಯುತ್ತ ಇಲ್ಲಿಯೇ ಇರಿ. ಆನಂತರ ನಿಮ್ಮ ಇಷ್ಟದಂತೆ ನನ್ನನ್ನು ಪ್ರಶ್ನೆ ಕೇಳಬಹುದು. ನನಗೆ ತಿಳಿದಿರುವ ಬ್ರಹ್ಮಜ್ಞಾನವನ್ನು ಉಪದೇಶಿಸುವೆ.

ಮಂ.ಶ್ಲೋ.॥ ಅಥ ಕಬನ್ಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ ಭಗವನ್ ಕುತೋಃ ಹ ವಾ ಇಮಾಃ ಪ್ರಜಾಃ ಪ್ರಜಾಯನ್ತ ಇತಿ ॥ 3

ತಾ॥ ಸಂವತ್ಸರವಾದ ಮೇಲೆ ಕತ್ಯನ ಮಗನಾದ ಕಬಂಧಿ ಪಿಪ್ಪಲಾದರನ್ನು ಸಮೀಪಿಸಿ, 'ಓ ಗುರುದೇವಾ, ಈ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?' ಎಂದು ಪ್ರಶ್ನಿಸಿದ.

**ಮಂ.ಶ್ಲೋ.॥ ತಸ್ಮೈ ಸಹೋವಾಚ, ಪ್ರಜಾಕಾಮೋ ವೈ ಪ್ರಜಾಪತಿಃ ಸ ತಪೋಽತಪ್ಯತ,**
**ಸ ತಪಸ್ತಪ್ತ್ವಾ ಸ ಮಿಥುನಮುತ್ಪಾದಯತೇ, ರಯಿಂ ಚ ಪ್ರಾಣಂ ಚೇತ್ಯೇತೌ**
**ಯೇ ಬಹುಧಾ ಪ್ರಜಾಃ ಕರಿಷ್ಯತ ಇತಿ॥ 4**

ತಾ॥ ಸುಕೇಶಾದಿಗಳಲ್ಲಿ ಒಬ್ಬನಾದ ಕಬಂಧಿಯೊಂದಿಗೆ, ಪಿಪ್ಪಲಾದ ಮಹರ್ಷಿ ಹೀಗೆ ನುಡಿದರು: ಪ್ರಜೆಗಳನ್ನು ಸೃಷ್ಟಿ ಮಾಡಬೇಕೆಂದು ಅಪೇಕ್ಷಿಸಿದ ಪ್ರಜಾಪತಿ ಮೊಟ್ಟಮೊದಲು ತಪಸ್ಸು ಮಾಡಿದನು. ಆ ಪ್ರಜಾಪತಿ, ತಪಸ್ಸುಗೈದು ಈ ಇಬ್ಬರೂ ನನಗೆ, ಅನೇಕ ವಿಧವಾದ ಸಂತಾನವನ್ನು ಮಾಡ-ಬಹುದೆಂದು ತಿಳಿದು, ಸೋಮನನ್ನೂ (ರಯಿಯನ್ನೂ) ಪ್ರಾಣವನ್ನೂ (ಅನ್ನಭೋಕ್ತನಾದ ಅಗ್ನಿಯನ್ನೂ) ಮಿಥುನಗೊಳಿಸಿ ಹುಟ್ಟಿಸಿದ.

**ಮಂ.ಶ್ಲೋ.॥ ಆದಿತ್ಯೋ ಹ ವೈ ಪ್ರಾಣೋ ರಯಿರೇವ ಚನ್ದ್ರಮಾಃ ರಯಿರ್ವಾ ಏತತ್ಸರ್ವಂ ಯನ್ಮೂರ್ತಂ ಚಾಮೂರ್ತಂ ಚ ತಸ್ಮಾನ್ಮೂರ್ತಿರೇವ ರಯಿಃ ॥ 5**

ತಾ॥ ಪ್ರಾಣವೆಂದರೆ (ಭುಜಿಸುವ ಅಗ್ನಿ) ಸೂರ್ಯ, ರಯಿ ಅಂದರೆ (ಅನ್ನ) ಚಂದ್ರನೇ ಮೂರ್ತವಾಗಿ (ಇಂದ್ರಿಯ ಗೋಚರವಾಗಿ) ಅಮೂರ್ತವಾಗಿರುವ, ಯಾವುದು ಇದೆಯೋ ಅದೆಲ್ಲವೂ ರಯಿಯೇ ಆಗಿದೆ. ಬೇರ್ಪಡಿಸಿರುವ ಆ ಅಮೂರ್ತಕ್ಕಿಂತಲೂ ಪ್ರತ್ಯೇಕ ಮೂರ್ತರೂಪವೇ ರಯಿಯಾಗಿದೆ.

**ಮಂ.ಶ್ಲೋ.॥ ಅಥಾದಿತ್ಯಃ ಉದಯನ್‌ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸಂವಿಧತ್ತೇ। ಯದ್ದಕ್ಷಿಣಾಂ, ಯತ್‌ಪ್ರತೀಚೀಂ, ಯದುದೀಚೀಂ ಯದಧೋ, ಯದೂರ್ಧ್ವಂ, ಯದನ್ತರಾ ದಿಶೋ, ಯತ್ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ॥ 6**

ತಾ॥ ಆದಿತ್ಯನುದಯಿಸಿ ದಿಕ್ಕುಗಳೆಲ್ಲಡೆಯೂ ತನ್ನ ಕಿರಣಗಳನ್ನು ಪ್ರಸಾರ ಮಾಡುವುದರಿಂದ ಸರ್ವ ಪ್ರಾಣಿಗಳನ್ನೂ, ತನ್ನ ಕಿರಣಗಳಲ್ಲಿ ಸೇರಿಸಿಕೊಂಡಿದ್ದಾನೆ. ಆದ್ದರಿಂದಲೇ ಸೂರ್ಯನು ಸರ್ವಾತ್ಮ ಭಾವವುಳ್ಳವನು ಎಂದು ಪ್ರಸಿದ್ಧಿ.

**ಮಂ.ಶ್ಲೋ.॥ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ ತದೇತದೃಚಾಭ್ಯುಕ್ತಮ್॥7**

ತಾ॥ ಅಂತಹ ಪ್ರಸಿದ್ಧನಾದ ವೈಶ್ವಾನರನು ಸಕಲ ಪ್ರಪಂಚಾತ್ಮನಾಗಿ ಪ್ರಾಣವೂ, ಅಗ್ನಿಯೂ ಆದ ಆದಿತ್ಯನಾಗಿ ಪ್ರತಿದಿನವೂ ಉದಯಿಸುತ್ತಿದ್ದಾನೆ. ಈ ವಿಷಯವನ್ನು ಋಗ್ವೇದ ಮಂತ್ರದಲ್ಲಿ ಹೇಳಲಾಗಿದೆ.

**ಮಂ.ಶ್ಲೋ.॥ ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪನ್ತಮ್।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥ 8**

ತಾ॥ ವಿಶ್ವರೂಪನಾದವನು, ಸರ್ವವನ್ನು ಉಪಸಂಹರಿಸುವವನು, ಸರ್ವ ವಿಜ್ಞಾನಗಳಿಗೆಲ್ಲದಕ್ಕೂ ನಿಲಯವಾದವನು, ಉತ್ಕೃಷ್ಟ (ಶ್ರೇಷ್ಠ)ನಾದವನು, ತೇಜೋಮಂಡಲ ರೂಪವಿರುವವನು, ಅದ್ವಿತೀಯನು, ಬೇಗೆಯನ್ನುಂಟು ಮಾಡುವವನು, ಸಹಸ್ರ ಕಿರಣಗಳನ್ನೊಳಗೊಂಡಿರುವವನು, ಅನೇಕ ರೂಪಗಳನ್ನು ಅರಿತವನು, ಸ್ಥಾವರ ಜಂಗಮಾತ್ಮಕಗಳಿಗೆ, ಸಮಸ್ತಭೂತಗಳಿಗೆ ಪ್ರಾಣನಾಗಿರುವವನು ಆದ ಈ ಸೂರ್ಯನು ಉದಯಿಸುತ್ತಿದ್ದಾನೆ.

ಮಂ.ಶ್ಲೋ.॥ **ಸಂವತ್ಸರೋವೈ ಪ್ರಜಾಪತಿಃ ತಸ್ಯಾಯನೇ ದಕ್ಷಿಣಂ ಚೋತ್ತರಂ ಚ ತದ್ಯೇಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ ಚಾನ್ದ್ರಮಸಮೇವ ಲೋಕಮಭಿಜಯನ್ತೇ, ತ ಏವ ಪುನರಾವರ್ತನ್ತೇ ತಸ್ಮಾದೇತೇ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯನ್ತೇ. ಏಷಹವೈ ರಯಿರ್ಯಃ ಪಿತೃಯಾಣಃ ॥ 9**

ತಾ॥ ಆ ಸೂರ್ಯಚಂದ್ರರೇ ರಯಿ, ಪ್ರಾಣ ಮಿಥುನ, ಸಂವತ್ಸರ ರೂಪವಾಗಿರುವ ಕಾಲ. ಪ್ರಜಾಸತ್ತಾತ್ಮಕವಾದ ಆ ಮಿಥುನವೇ ಸಂವತ್ಸರ ರೂಪಕಾಲವಾಗಿ ಗೋಚರಿಸುತ್ತಿದೆ. ಚಂದ್ರನಿಂದಾಗಿ ತಿಥಿ ನಕ್ಷತ್ರಗಳಾದಿಗಳು, ಸೂರ್ಯನ ಚಲನೆಯಿಂದಾಗಿ ಅಹೋರಾತ್ರಿಗಳು (ಹಗಲು ರಾತ್ರಿಗಳು) ಉಂಟಾಗುತ್ತವೆ. ಆದ್ದರಿಂದ ಪ್ರಜಾಪತಿಯಿಂದ (ಮಿಥುನದಿಂದ) ಸಂಭವಿಸುವ ಸಂವತ್ಸರವು ಸಹ ಪ್ರಜಾಪತಿಯೇ. ಇಷ್ಟಾಪೂರ್ತ್ಯಾದಿ ಅನಿತ್ಯವಾದ ಯಜ್ಞಗಳನ್ನು ಆಚರಿಸುವವರು ಚಂದ್ರಲೋಕಕ್ಕೆ ಹೋಗಿ ಮತ್ತೆ ತಿರುಗಿ ಬರುತ್ತಾರೆ. ಪ್ರಜಾಕಾಮರಾಗಿ ಗೃಹಸ್ಥರಾಗಿರುವ ಋಷಿಗಳು ದಕ್ಷಿಣ ಮಾರ್ಗವನ್ನು, ಅಂದರೆ ಚಂದ್ರನನ್ನು ಸೇರುವರು. ಈ ಪಿತೃಯಾಣವೇ ಅಂದರೆ ಚಂದ್ರನೇ ರಯಿಯೆಂದು ಹೇಳಲಾಗಿದೆ.

ಮಂ.ಶ್ಲೋ.॥ **ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾಽಽತ್ಮಾನಮನ್ವಿಷ್ಯಾಽಽದಿತ್ಯಮಭಿಜಯನ್ತೇ। ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ಪರಾಯಣಮೇತಸ್ಮಾನ್ನಪುನರಾವರ್ತನ್ತ ಇತ್ಯೇಷ ನಿರೋಧಸ್ತದೇಷ ಶ್ಲೋಕಃ ॥ 10**

ತಾ॥ ಆನಂತರ ಉತ್ತರಾಯಣ ಮಾರ್ಗವಾಗಿ, ತಪಸ್ಸಿನಿಂದ, ಬ್ರಹ್ಮಚರ್ಯದಿಂದ, ಶ್ರದ್ಧೆಯಿಂದ, ವಿದ್ಯೆಯಿಂದ, ಪರಮೇಶ್ವರನನ್ನು ಅನ್ವೇಷಿಸಿ (ನಾನು ಆದಿತ್ಯನೇ ಎಂದು ಗ್ರಹಿಸಿ) ಆದಿತ್ಯನನ್ನು ಹೊಂದುವರು. ಇದೇ ಸರ್ವ ಪ್ರಾಣಗಳಿಗೆ ಆಶ್ರಯವಾದುದು. ಇದು ನಾಶವಾಗುವುದಿಲ್ಲ. ಭಯವಿಲ್ಲದ್ದು, ಇದು ಕರ್ಮಾಧಿಕಾರವಿಲ್ಲದ ಕೇವಲ ಉಪಾಸನೆ ಮಾಡುವವರಿಗೂ, ಕರ್ಮ ಜ್ಞಾನಗಳೆರಡನ್ನೂ ಹೊಂದಿದವರಿಗೂ ಅತ್ಯುತ್ತಮವಾದ ಗಮ್ಯಸ್ಥಾನ. ಇದರಿಂದ ಮತ್ತೆ ಜನ್ಮವೆನ್ನುವುದು ಇರುವುದಿಲ್ಲ. ಏಕೆಂದರೆ ಈ ಆದಿತ್ಯ ರೂಪಸ್ಥಾನವು, ಕೇವಲ ಕರ್ಮವಂತರಿಗೆ. ನಿರೋಧ ಹೇತುವಾಗಿದೆ. ಆ ವಿಷಯದಲ್ಲಿ ಶಕ್ತಿಯನ್ನು ಪ್ರತಿಪಾದಿಸುವ ಶ್ಲೋಕವಿದು.

ಮಂ.ಶ್ಲೋ.॥ **ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಮ್ ಅಥೇಮೇ ಅನ್ಯ ಉ ಪರೇ ವಿಚಕ್ಷಣಂ ಸಪ್ತಚಕ್ರೇ ಷಡರ ಆಹುರರ್ಪಿತಮಿತಿ ॥ 11**

ತಾ॥ ಐದು ಪಾದಗಳನ್ನುಳ್ಳದ್ದು, ಹನ್ನೆರಡು ರೂಪಗಳನ್ನೊಳಗೊಂಡಿರುವಂತಹುದು, ಜಲಕ್ಕೆ

ಹೇತುವಾದುದು, ದೇವಲೋಕಕ್ಕಿಂತ ಪರವಾದ ಅರ್ಧಭಾಗದಲ್ಲಿರುತ್ತದೆಯೆನ್ನುವ ಸೂರ್ಯ ಸ್ಥಾನವನ್ನು ಜನಕನೆಂದು ಆದಿತ್ಯನೆಂದು ವಿದ್ವಾಂಸರು ಹೇಳುವರು. ಈ ಸಂವತ್ಸರಾದಿತ್ಯನು ಬಹು ಜಾಣನೆಂದು (ಪರಿಣಿತನೆಂದು) ಏಳು ಅಶ್ವಗಳನ್ನೇರಿ ಸದಾಕಾಲ ತಿರುಗುವವನಾಗಿದ್ದು, ಆರು ಋತುಗಳೆನ್ನುವ ಅರೆಗಳನ್ನು ಹೊಂದಿರುತ್ತಾನೆಂದು ಹೇಳುತ್ತಾರೆ. ರಥಚಕ್ರದ ನಾಭಿಯಲ್ಲಿ ಅರೆಗಳನ್ನು ಜೋಡಿಸಿರುವಂತೆ ಜಗತ್ತೆಲ್ಲವೂ ಆಕ್ರಮಿಸಿಕೊಂಡಿದೆ.

**ಮಂ.ಶ್ಲೋ.॥ ಮಾಸೋ ವೈ ಪ್ರಜಾಪತಿಃ ತಸ್ಯ ಕೃಷ್ಣಪಕ್ಷ ಏವ ರಯಿಃ ಶುಕ್ಲಃ ಪ್ರಾಣಃ;**
**ತಸ್ಮಾದೇತೇ ಋಷಯಃ ಶುಕ್ಲ ಇಷ್ಟಂ ಕುರ್ವನ್ತೀತರ ಇತರಸ್ಮಿನ್** ॥ 12

ತಾ॥ ಅವಯವವಾದ ಮಾಸವು ಸಹ ಪ್ರಜಾಪತಿ. ಮಿಥುನಾತ್ಮಕವಾದ ಈ ಪ್ರಜಾಪತಿಯ ಒಂದು ಭಾಗವಾದ ಕೃಷ್ಣ ಪಕ್ಷವೇ ರಯಿ, ಅಂದರೆ ಅನ್ನ, ಚಂದ್ರ. ಎರಡನೆಯ ಭಾಗವಾದ ಶುಕ್ಲ ಪಕ್ಷವೇ ಪ್ರಾಣ, ಆದಿತ್ಯ ಅಗ್ನಿ, ಆದ್ದರಿಂದ ಮಂತ್ರದ್ರಷ್ಟರಾದ ಮಹರ್ಷಿಗಳು ಶುಕ್ಲ ಪಕ್ಷದಲ್ಲಿ ಯಜ್ಞಾದಿಗಳನ್ನು ಕೈಗೊಳ್ಳುತ್ತಾರೆ. ಸರ್ವಾತ್ಮ ಜ್ಞಾನವಿಲ್ಲದವರು ಕೃಷ್ಣ ಪಕ್ಷದಲ್ಲಿ ಯಜ್ಞಾದಿಗಳನ್ನು ನಿರ್ವಹಿಸುವರು.

**ಮಂ.ಶ್ಲೋ.॥ ಅಹೋರಾತ್ರೋ ವೈ ಪ್ರಜಾಪತಿಃ; ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ**
**ಪ್ರಾಣಂ ವಾ ಏತೇ ಪ್ರಸ್ಕನ್ದನ್ತಿ, ಯೇ ದಿವಾ ರತ್ಯಾ ಸಂಯುಜ್ಯನ್ತೇ ಬ್ರಹ್ಮಚರ್ಯಮೇವ**
**ತದ್ಯದ್ರಾತ್ರೌ ರತ್ಯಾ ಸಂಯುಜ್ಯನ್ತೇ** ॥ 13

ತಾ॥ ದಿವಾರಾತ್ರಿಗಳು ಸಹ ಪ್ರಜಾರಕ್ಷಕಗಳೇ. ಈ ಅಹೋರಾತ್ರಿಗಳಲ್ಲಿ ಹಗಲಿನ ಭಾಗ ಪ್ರಾಣ. ಆದಿತ್ಯನು. ಅಗ್ನಿ, ಅತ್ತ ರಾತ್ರಿಯೇ ರಯಿ. ಚಂದ್ರ ಅನ್ನ, ಹಗಲಿನ ವೇಳೆ ಸ್ತ್ರೀ ಸಂಭೋಗವನ್ನು ಮಾಡುವವರು ಜೀವನ ಹೇತುವಾದ ಪ್ರಾಣಶಕ್ತಿಯನ್ನು ಕಳೆದುಕೊಳ್ಳುವರು. ರಾತ್ರಿಯಲ್ಲಿನ ಸ್ತ್ರೀ ಸಂಭೋಗವು (ಋತುಕಾಲದಲ್ಲಿ) ಬ್ರಹ್ಮಚರ್ಯವನ್ನು ಅವಲಂಬಿಸಿದಂತೆಯೇ ಆಗುತ್ತದೆ.

**ಮಂ.ಶ್ಲೋ.॥ ಅನ್ನಂ ವೈ ಪ್ರಜಾಪತಿಃ ತತೋ ಹ ವೈ ತದ್ರೇತಸ್ತಸ್ಮಾದಿಮಾಃ**
**ಪ್ರಜಾಃ ಪ್ರಜಾಯನ್ತ ಇತಿ** ॥ 14

ತಾ॥ ಅನ್ನವೇ ಪ್ರಜಾಪತಿ. ಆ ಅನ್ನದಿಂದಲೇ ಶುಕ್ಲ ಶೋಣಿತಗಳು ಉಂಟಾಗುತ್ತವೆ. ಅನ್ನದಿಂದಲೇ ಪ್ರಜೆಗಳು (ಜೀವಿಗಳು) ಹುಟ್ಟುತ್ತಾರೆ.

**ಮಂ.ಶ್ಲೋ.॥ ತದ್ಯೇ ಹವೈ ತತ್ಪ್ರಜಾಪತಿ ವ್ರತಂ ಚರನ್ತಿ, ತೇ ಮಿಥುನಮುತ್ಪಾದಯನ್ತೇ,**
**ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಮ ಸತ್ಯಂ**
**ಪ್ರತಿಷ್ಠಿತಮ್** ॥ 15

ತಾ॥ ಆದ್ದರಿಂದ ಯಾರು ಪ್ರಜಾಪತಿ ವ್ರತವನ್ನು ಆಚರಿಸುತ್ತಿದ್ದಾರೋ, ಅವರು ಸ್ತ್ರೀ ಪುರುಷ ರೂಪ ಸಂತಾನ ಹುಟ್ಟುವುದಕ್ಕೆ ಕಾರಣರಾಗುತ್ತಿದ್ದಾರೆ. ಯಾರೊಬ್ಬರು ಆಚರಿಸುವ ತಪಸ್ಸು ಮರ್ಮೇಂದ್ರಿಯ ನಿಗ್ರಹವೋ (ಬ್ರಹ್ಮಚರ್ಯವೋ) ಯಾರಲ್ಲಿ ಸತ್ಯಧಾರಣವು ಪ್ರತಿಷ್ಠಿತವಾಗಿ-ರುವುದೋ ಅವರಿಗೇ ಬ್ರಹ್ಮದರ್ಶನವಾಗುತ್ತದೆ.

**ಮಂ.ಶ್ಲೋ.॥ ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ ॥ 16**

ತಾ॥ ಪರಿಶುದ್ಧವಾದ ಈ ಬ್ರಹ್ಮಲೋಕವು - ಜಿಹ್ವಾ ಚಾಪಲ್ಯ, ಅಸತ್ಯ, ಮೋಸ - ಇವು ಇಲ್ಲದವರಿಗೆ ಪ್ರಾಪ್ತವಾಗುವುದು. (ಅಂದರೆ ಆಧ್ಯಾತ್ಮಿಕ ಜಿಜ್ಞಾಸೆ, ಸತ್ಯಜೀವನಾಭಿಲಾಷಿಯಾಗಿ, ಸತ್ಯಾಚರಣೆಯನ್ನು ಹೊಂದಿರುವುದು.)

# ದ್ವಿತೀಯಃ ಪ್ರಶ್ನಃ

**ಮಂ.ಶ್ಲೋ.॥ ಅಥ ಹೈನಂ ಭಾರ್ಗವೋ ವೈದರ್ಭಿಃ ಪ್ರಪಚ್ಛ, ಭಗವನ್ ಕತ್ಯೇವ ದೇವಾಃ ಪ್ರಜಾಂ ವಿಧಾರಯನ್ತೇ ಕತರ ಏತತ್ಪ್ರಕಾಶಯನ್ತೇ ಕಃ ಪುನರೇಷಾಂ ವರಿಷ್ಠ ಇತಿ ॥1 (17)**

ತಾ॥ ಆನಂತರ ಭೃಗುವಂಶಜನಾದ ಭಾರ್ಗವನು, ಈ ಪಿಪ್ಪಲಾದ ಮಹರ್ಷಿಯನ್ನು ಪ್ರಶ್ನಿಸಿದನು. 'ಭಗವಂತಾ, ಎಷ್ಟು ಮಂದಿ ದೇವತೆಗಳು ಜೀವಿಗಳ ಶರೀರಗಳನ್ನು ವಿಶೇಷ ರೂಪಗಳಿಂದ ಕಾಪಾಡಿ ಕೊಂಡಿದ್ದಾರೆ? ಯಾವ್ಯಾವುದು ತಮ್ಮ ಮಹಾತ್ಮ್ಯತೆಯನ್ನು, ಪ್ರಕಾಶಿಸುತ್ತಿವೆ? ಇವುಗಳಲ್ಲಿ ಯಾವುದು ಶ್ರೇಷ್ಠ?' ಎಂದು ಪ್ರಶ್ನಿಸಿದನು.

**ಮಂ.ಶ್ಲೋ.॥ ತಸ್ಮೈ ಸ ಹೋವಾಚ; ಆಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ । ತೇ ಪ್ರಕಾಶ್ಯಾಭಿವದನ್ತಿ ವಯಮೇತದ್ಬಾಣಮವಷ್ಟಭ್ಯ ವಿಧಾರಯಾಮಃ ॥ 2 (18)**

ತಾ॥ ಪಿಪ್ಪಲಾದ ಮಹರ್ಷಿಯು ಆ ಭಾರ್ಗವನಿಗೆ ಹೀಗೆ ಉತ್ತರ ಕೊಟ್ಟರು. ಆಕಾಶ, ಅಗ್ನಿ, ಜಲ, ಪೃಥ್ವಿ ವಾಯು ಎನ್ನುವ ಪಂಚಭೂತಗಳು ಈ (ದೇಹದಲ್ಲಿ) ದೇಹಾದಿ ಸೃಷ್ಟಿಗೆ ಕಾರಣ ಪದಾರ್ಥಗಳು. ವಾಕ್ ಪಾಣಿ ಪಾದ ಪಾಯೂಪಸ್ಥಗಳೆನ್ನುವ ಕರ್ಮೇಂದ್ರಿಯಗಳನ್ನು, ಮನಸ್ಸು ತ್ವಕ್, ಚಕ್ಷು, ಶ್ರೋತ್ರ ಜಿಹ್ವೆ, ಘ್ರಾಣಗಳೆನ್ನುವ ಜ್ಞಾನೇಂದ್ರಿಯಗಳು, ಇವುಗಳ ಅಧಿಷ್ಠಾನ ದೇವತೆಗಳು, ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುವುದರ ಮೂಲಕ ತಮ್ಮ ಮಹಾತ್ಮ್ಯವನ್ನು ಲೋಕದಲ್ಲೆಲ್ಲಾ ಸಾರಿ, "ನಾವೇ ಈ ಶರೀರವನ್ನು ಬೀಳದಂತೆ ಮಾಡಿ ಹಿಡಿದಿಟ್ಟುಕೊಂಡಿದ್ದೇವೆ" ಎಂದು ಪೈಪೋಟಿ-ಯನ್ನು ಮಾಡುತ್ತಾ ತಮ್ಮ ತಮ್ಮ ಹೆಚ್ಚುಗಾರಿಕೆಯನ್ನು ಮಾಡುತ್ತಿರುತ್ತವೆ.

**ಮಂ.ಶ್ಲೋ.॥ ತಾನ್ವರಿಷ್ಠಃ ಪ್ರಾಣ ಉವಾಚ; ಮಾ ಮೋಹಮಾಪದ್ಯಥಾಹ, ಮೇವೈತತ್ಪಞ್ಚಧಾಽಽತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮೀತಿ, ತೇಽಶ್ರದ್ಧಧಾನಾ ಬಭೂವುಃ ॥ 3 (19)**

ತಾ॥ ಮುಖ್ಯವಾದ ಪ್ರಾಣವು, ಆಕಾಶಾದಿಗಳನ್ನು ಕುರಿತು ಹೀಗೆ ಹೇಳಿತು - ಅಜ್ಞಾನವನ್ನು ಹೊಂದದೆ ನಾನೇ ನನ್ನನ್ನು ಐದು ಭಾಗಗಳಾಗಿ ವಿಭಜಿಸಿ, ಈ ಶರೀರವನ್ನು ಬೀಳದಂತೆ ಮಾಡಿ ಹಿಡಿದಿಟ್ಟುಕೊಂಡಿದ್ದೇನೆ ಎಂದು ಹೇಳಿದ ಮಾತುಗಳನ್ನು ಆಕಾಶಾದಿಗಳು ನಂಬಲಿಲ್ಲ.

**ಮಂ.ಶ್ಲೋ.॥ ಸೋಽಭಿಮಾನಾದೂರ್ಧ್ವಮುತ್ಕ್ರಾಮತ ಇವ ತಸ್ಮಿನ್ನುತ್ಕ್ರಾಮತ್ಯಥೇತರೇಸರ್ವ ಏವೋತ್ಕ್ರಾಮನ್ತೇ ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರತಿಷ್ಠನ್ತೇ, ತದ್ಯಥಾ ಮಕ್ಷಿಕಾ ಮಧುಕರ ರಾಜಾನಮುತ್ಕ್ರಾಮನ್ತಂ ಸರ್ವಾ ಏವೋತ್ಕ್ರಾಮನ್ತೇ ತಸ್ಮಿಂಶ್ಚ ಪ್ರತಿಷ್ಠಮಾನೇಸರ್ವಾ ಏವ ಪ್ರತಿಷ್ಠನ್ತ ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂಚ ತೇ ಪ್ರೀತಾಃ ಪ್ರಾಣಂ ಸ್ತುನ್ವನ್ತಿ ॥ 4(20)**

ತಾ॥ ಈ ಪ್ರಾಣವು ಅಹಂಕಾರವನ್ನು ಅಭಿನಯಿಸಿ ಮೇಲಕ್ಕೆ ಎದ್ದು ಹೊರಟುಹೋಯಿತು. ಆ ಮುಖ್ಯ ಪ್ರಾಣವು ಮೇಲಕ್ಕೆ ಹೋಗುತ್ತಿರಲು, ಇತರ ಇಂದ್ರಿಯಗಳೆಲ್ಲವೂ ಮೇಲಕ್ಕೆದ್ದು ಹೊರಟು ಹೋದವು. ಆ ಮುಖ್ಯಪ್ರಾಣವು ಸ್ಥಿರವಾಗಿ ನಿಂತಿದ್ದಾಗ ಇಂದ್ರಿಯಗಳೆಲ್ಲವೂ ನಿಂತಿದ್ದವು. ಅವು ಹೇಗೆಂದರೆ, ಮೇಲಕ್ಕೆ ಹಾರಿಹೋಗುವ ಮಧುರಾಜ - ಆ ಮಧುಕರ ರಾಜನನ್ನು ಅನುಸರಿಸಿ, ಉಳಿದೆಲ್ಲ ಜೇನುಹುಳುಗಳು ಹಾರಿ ಹೋಗುತ್ತವೆ. ಆ ಮಧುಕರ ರಾಜ ಕದಲದೆ ಇದ್ದಲ್ಲಿಯೇ ಇದ್ದರೆ, ಉಳಿದೆಲ್ಲ ಜೇನುಹುಳುಗಳು ಹೇಗೆ ಸ್ಥಿರವಾಗಿ ಇರುತ್ತವೆಯೋ ಹಾಗೆಯೇ ವಾಕ್ಕು, ಮನಸ್ಸು, ನೇತ್ರ, ಶ್ರೋತ್ರ (ಪ್ರವರ್ತಿಸುವ) ಅವೆಲ್ಲವೂ ಸಂತೋಷಪಟ್ಟು ಪ್ರಾಣವನ್ನು ಸ್ತುತಿಸುತ್ತವೆ.

**ಮಂ.ಶ್ಲೋ.॥ ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುಃ ।**
**ಏಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥ 5 (21)**

ತಾ॥ ಈ ಮುಖ್ಯಪ್ರಾಣವೇ ಅಗ್ನಿಯಾಗಿ ಪ್ರಕಾಶಿಸುತ್ತಿದೆ. ಈ ಪ್ರಾಣವೇ ಸೂರ್ಯ. ಇದೇ ಮೇಘ (ಮೋಡ) ಇದೇ ದೇವೇಂದ್ರ. ಇದೇ ವಾಯು. ಇದೇ ಪೃಥ್ವಿ. ದೇವನಾದ ಚಂದ್ರ, ಮೂರ್ತ, ಅಮೂರ್ತವೆನ್ನುವ ಯಾವ ಅಮೃತವಿದೆಯೋ ಅದೇ ಪ್ರಾಣ.

**ಮಂ.ಶ್ಲೋ.॥ ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್, ಋಚೋ**
**ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥ 6 (22)**

ತಾ॥ ರಥಚಕ್ರದಲ್ಲಿನ (ಅರೆ)ಗಳು ಚಕ್ರದ ಮಧ್ಯದಲ್ಲಿನ ಕೇಂದ್ರದಲ್ಲಿ ಜೋಡಣೆಯಾಗಿರುವಂತೆ ಪ್ರಾಣದಲ್ಲಿ ಸರ್ವವೂ ಪ್ರತಿಷ್ಠಿತವಾಗಿದೆ. ಯಜಸ್ಸುಗಳು, ಸೋಮಗಳು, ಯಜ್ಞವು, ಕ್ಷತ್ರಿಯರು, ಬ್ರಾಹ್ಮಣರು ಎಲ್ಲವೂ, ಎಲ್ಲರೂ ಸಮಸ್ತವೂ ಪ್ರಾಣದಲ್ಲಿ ಪ್ರತಿಷ್ಠಿತವಾಗಿದೆ.

**ಮಂ.ಶ್ಲೋ.॥ ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ । ತುಭ್ಯಂ ಪ್ರಾಣ**
**ಪ್ರಜಾಸ್ತ್ವಿಮಾಃ ಬಲಿಂ ಹರನ್ತಿ ಯಃ ಪ್ರಾಣ್ಯೈಃ ಪ್ರತಿತಿಷ್ಠಸಿ ॥ 7 (23)**

ತಾ॥ ಪ್ರಜಾಪತಿಯಾದ ನೀನೇ, ಗರ್ಭದಲ್ಲಿ ಸಂಚರಿಸುತ್ತಿರುವೆ, ಜನಿಸುತ್ತಿದ್ದೀಯೆ. ಓ ಪ್ರಾಣವೇ! ನೀನು ಚಕ್ಷುರಾದಿ ಪ್ರಾಣಗಳೊಂದಿಗೆ ಸೇರಿ, ಸರ್ವ ಶರೀರಗಳಲ್ಲೂ ಇದ್ದೀಯೆ. ಅಂತಹ ನಿನಗಾಗಿ, ಈ ಮನುಷ್ಯಾದಿ ಪ್ರಾಣಿಗಳು, ಇಂದ್ರಿಯಗಳ ಮೂಲಕ ಆಹಾರವನ್ನು ದೊರಕಿಸಿಕೊಡುತ್ತಿವೆ.

**ಮಂ.ಶ್ಲೋ.॥ ದೇವಾನಾಮಸಿ ವಹ್ನಿತಮಃ ಪಿತ್ರೂಣಾಂ ಪ್ರಥಮಾ ಸ್ವಧಾ**
**ಋಷೀಣಾಂ ಚರಿತಂ ಸತ್ಯಮಥರ್ವಾಙ್ಗೀರಸಾಮಸಿ ॥ 8 (24)**

ತಾ॥ ಓ ಪ್ರಾಣವೇ! ನೀನು ದೇವತೆಗಳಿಗೆ ಹವಿಸ್ಸನ್ನು ಕೊಂಡೊಯ್ಯುವಂತಹವನು. ಪಿತೃ-

ದೇವತೆಗಳಿಗೆ ಮೊದಲ (ತುತ್ತು) ಅನ್ನವಾಗಿರುವೆ. ತಪಸ್ವಿಗಳಿಗೆ ನಿಶ್ಚಯಾತ್ಮಕ ತಪಸ್ವಿ ನೀನು. ಅಥರ್ವ, ಆಂಗೀರಸ ಮುಂತಾದ ಋಷೀಶ್ವರರಿಗೆ ಸತ್ಯಾಚರಣೆ ರೂಪದಲ್ಲಿರುವೆ.

**ಮಂ.ಶ್ಲೋ.॥ ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ**
**ತ್ವಮನ್ತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥ 9 (25)**

ತಾ॥ ಓ ಪ್ರಾಣವೇ, ನೀನೇ ಪರಮೇಶ್ವರನು. ನೀನೇ ಸಮಸ್ತಲೋಕಗಳನ್ನು ಪರಿಪಾಲಿಸು-ವಂತಹವನು. ನೀನೇ ಸೂರ್ಯನಾಗಿ ಆಕಾಶದಲ್ಲಿ ಸಂಚರಿಸುತ್ತೀಯೆ. ನೀನು ಜ್ಯೋತಿಷ್ಯಗಳಿಗೆಲ್ಲ ಅಧಿಪತಿ.

**ಮಂ.ಶ್ಲೋ.॥ ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣ ತೇ ಪ್ರಜಾಃ**
**ಆನನ್ದರೂಪಾಸ್ತಿಷ್ಠನ್ತಿ ಕಾಮಾಯಾನ್ನಂ ಭವಿಷ್ಯತೀತಿ ॥ 10 (26)**

ತಾ॥ ಓ ಪ್ರಾಣವೇ, ಯಾವಾಗ ನೀನು ಪರ್ಜನ್ಯ ರೂಪದಲ್ಲಿ ಮಳೆಯಾಗಿ ಸುರಿಯುತ್ತೀಯೋ, ಆಗ ಈ ಪ್ರಜೆಗಳು ಪ್ರಾಣಕ್ರಿಯೆ (ಚೇಷ್ಠೆ)ಗಳನ್ನು ಮಾಡುವರು. ಇಷ್ಟಬಂದಷ್ಟು ಅನ್ನವು ಲಭಿಸುವುದು ಎಂದೂ ಆನಂದದಿಂದ ಇರುವರು.

**ಮಂ.ಶ್ಲೋ.॥ ವ್ರಾತ್ಯಸ್ತ್ವಂ ಪ್ರಾಣೈಕ ಋಷಿರತ್ತಾ ವಿಶ್ವಸ್ಯ ಸತ್ಪತಿಃ**
**ವಯಮಾದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ ॥ 11 (27)**

ತಾ॥ ಓ ಪ್ರಾಣವೇ! ನೀನು ನಿತ್ಯ ಶುದ್ಧನು. ಅಥರ್ವಣರಿಗೆ (ಪ್ರಸಿದ್ಧನಾದ) ಒಬ್ಬನೇ ಋಷಿ ಎನ್ನುವ ಅಗ್ನಿಯಾಗಿ ತಿಳಿದಿರುವವರಾಗಿ ಅರ್ಪಣೆ ಮಾಡುವ ಸರ್ವ ಹವಿಸ್ಸುಗಳನ್ನು ಭುಜಿಸುವವನು. ಸಮಸ್ತವಾದ ಸತ್ ಪದಾರ್ಥಗಳಲ್ಲಿ ಅಡಗಿ ಅಧಿಪತಿಯಾಗಿರುವೆ. ಪ್ರಭುವಾಗಿರುವವನು, ನಾವು (ಇಂದ್ರಿಯಗಳು) ಭಕ್ಷ್ಯಪದಾರ್ಥಗಳನ್ನು ಕೊಡುವವರು ಮಾತ್ರವೇ. ಓ ವಾಯು ರೂಪನಾದ ಪ್ರಾಣವೇ! ನೀನು ವಾಯುವಿಗೆ ತಂದೆಯಾಗಿರುವೆ.

**ಮಂ.ಶ್ಲೋ.॥ ಯಾ ತೇ ತನೂರ್ವಾಚಿ ಪ್ರತಿಷ್ಠಿತಾ ಯಾ ಶ್ರೋತ್ರೇ ಯಾ ಚ ಚಕ್ಷುಷಿ**
**ಯಾ ಚ ಮನಸಿ ಸನ್ತತಾ ಶಿವಾಂ ತಾಂ ಕುರು ಮೋತ್ಕ್ರಮೀಃ ॥ 12 (28)**

ತಾ॥ ಓ ಪ್ರಾಣವೇ! ನಿನ್ನ ಯಾವ ಶರೀರವು, ವಾಕ್ಕಿನಲ್ಲಿ, ನೇತ್ರದಲ್ಲಿ, ಮನಸ್ಸಿನಲ್ಲಿ ಪ್ರತಿಷ್ಠಿತ-ವಾಗಿರುವುದೋ ಆ ಶರೀರವನ್ನು ಶಾಂತವಾಗಿರಿಸು. ಈ ದೇಹವನ್ನು ಬಿಟ್ಟು ಹೋಗಬೇಡ.

**ಮಂ.ಶ್ಲೋ.॥ ಪ್ರಾಣಸ್ಯೇದಂ ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಮ್**
**ಮಾತೇವ ಪುತ್ರಾನ್ ರಕ್ಷಸ್ವ ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥ 13 (29)**

ತಾ॥ ಮೂರು ಲೋಕಗಳಲ್ಲಿಯೂ ಯಾವುದು ಪ್ರತಿಷ್ಠಿತವಾಗಿದೆಯೋ, ಈ ಸಮಸ್ತ ಭೋಗ್ಯ ಪದಾರ್ಥಗಳು, ಸ್ವರ್ಗದಲ್ಲಿ ಯಾವ ಭೋಗ್ಯ ವಸ್ತುಜಾತವಿದೆಯೋ ಅದು, ಪ್ರಾಣದ ವಶದಲ್ಲಿಯೇ ಇವೆ. ತಾಯಿ, ಮಕ್ಕಳನ್ನು ರಕ್ಷಿಸುವಂತೆ ನಮ್ಮನ್ನು ರಕ್ಷಿಸು. ನಮಗೆ ಐಶ್ವರ್ಯವನ್ನು ಯೋಗ್ಯ ಬುದ್ಧಿಯನ್ನು ಪ್ರಸಾದಿಸು. (ವೈದರ್ಭೀ ಕೇಳಿದ ಪ್ರಶ್ನೆಗೆ ಉತ್ತರವಾಗಿ ಪಿಪ್ಪಲಾದ ಮಹರ್ಷಿ ಪ್ರಾಣತತ್ತ್ವದ ಮಹಾ ವೈಭವವನ್ನು, ಸೃಷ್ಟಿ, ಸ್ಥಿತಿಗಳಿಗೆ ಪ್ರಾಣದ ಪ್ರಾಮುಖ್ಯತೆಯನ್ನು ವರ್ಣಿಸಿ ಹೇಳಿದರು.)

# ತೃತೀಯಃ ಪ್ರಶ್ನಃ

**ಮಂ.ಶ್ಲೋ.॥ ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ, ಭಗವನ್ ಕುತ ಏಷ ಪ್ರಾಣೋ ಜಾಯತೇ; ಕಥಮಾಯಾತ್ಯಸ್ಮಿನ್ ಶರೀರೇ; ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರಾತಿಷ್ಠತೇ; ಕೇನೋತ್ಕ್ರಮತೇ; ಕಥಂ ಬಾಹ್ಯಮಭಿದತ್ತೇ ಕಥಮಧ್ಯಾತ್ಮಮಿತಿ ॥ 1 (30)**

ತಾ॥ ಆನಂತರ ಅಶ್ವಲನ ಪುತ್ರನಾದ (ಅಶ್ವಲಾಯನನ ಮಗನಾದ) ಕೌಸಲ್ಯನು ಈ ಪಿಪ್ಪಲಾದನನ್ನು ಹೀಗೆ ಪ್ರಶ್ನಿಸಿದನು. 'ಓ ಪೂಜನೀಯನೇ! ಈ ಪ್ರಾಣವು ಎಲ್ಲಿಂದ ಹುಟ್ಟುತ್ತಿದೆ? ಈ ದೇಹದೊಳಕ್ಕೆ ಹೇಗೆ ಪ್ರವೇಶಿಸುತ್ತದೆ? ಈ ಶರೀರದಲ್ಲಿ ವಿಭಜನೆಗೊಂಡು, ಹೇಗೆ ಪ್ರತಿಷ್ಠಿತವಾಗುತ್ತದೆ? ಯಾವ ವಿಧವಾಗಿ ಈ ಶರೀರದಿಂದ ನಿಷ್ಕ್ರಮಿಸುತ್ತದೆ. ಯಾವ ರೀತಿಯಾಗಿ ಆದಿಭೌತಿಕವೂ, ಆಧಿದೈವಿಕವೂ ಆದ ಬಾಹ್ಯಜ್ಞಾನವನ್ನು ಆಧ್ಯಾತ್ಮಿಕವಾದ ಅಂತರ್ಜ್ಞಾನವನ್ನು ಧರಿಸುತ್ತಿದೆ?

**ಮಂ.ಶ್ಲೋ.॥ ತಸ್ಮೈ ಸ ಹೋವಾಚ, ಅತಿಪ್ರಶ್ನಾನ್ ಪೃಚ್ಛಸಿ ಬ್ರಹ್ಮಿಷ್ಠೋಽಸೀತಿ ತಸ್ಮಾತ್ತೇಽಹಂ ಬ್ರವೀಮಿ ॥ 2 (31)**

ತಾ॥ ಆ ಪಿಪ್ಪಲಾದ ಮಹರ್ಷಿ ಕೌಸಲ್ಯನು ಕೋರಿದ ಪ್ರಶ್ನೆಗಳನ್ನು ಕೇಳಿ, ಆ ಪ್ರಶ್ನೆಗಳ ಮೂಲಕ (ಪ್ರಶ್ನೆಗಳಿಂದ) ಆತನ ಯೋಗ್ಯತೆಯನ್ನು ಗುರುತಿಸಿ ಆತನ ಬುದ್ಧಿಶಕ್ತಿಯನ್ನು ಪ್ರಶಂಸೆ ಮಾಡಿದನು. ಆತನಿಗೆ ಪ್ರಾಣದ ವಿಷಯವಾಗಿ ವಿವರವಾಗಿ ಹೇಳಲುಪಕ್ರಮಿಸಿದ ಪಿಪ್ಪಲಾದ ಮಹರ್ಷಿ.

**ಮಂ.ಶ್ಲೋ.॥ ಆತ್ಮನ ಏಷ ಪ್ರಾಣೋ ಜಾಯತೇ, ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಂ ಮನೋಕೃತೇನಾ ಯಾತ್ಯಸ್ಮಿನ್ ಶರೀರೇ ॥ 3(32)**

ತಾ॥ ಈ ಮುಖ್ಯಪ್ರಾಣವು ಪರಬ್ರಹ್ಮದಿಂದ ಹುಟ್ಟುತ್ತದೆ. ಪುರುಷನಲ್ಲಿ ಈ ಛಾಯೆ (ಪ್ರತಿಬಿಂಬ) ಹೇಗಿದೆಯೋ ಹಾಗೆ? ಈ ಬ್ರಹ್ಮನಲ್ಲಿ ಪ್ರಾಣರೂಪವಾದ ತತ್ತ್ವವು ಸಮರ್ಪಿತವಾಗಿದೆ. (ಆ ಪ್ರಾಣವೇ) ಮಾನಸಿಕವಾದ ಆಲೋಚನೆಗಳಿಂದ ಏರ್ಪಡುವ ಕರ್ಮಗಳು ಮೊದಲಾದ ನಿಮಿತ್ತದಿಂದ ಈ ದೇಹದಲ್ಲಿ ಪ್ರವೇಶಿಸುತ್ತದೆ.

**ಮಂ.ಶ್ಲೋ.॥ ಯಥಾ ಸಮ್ರಾಡೇವಾಧಿಕೃತಾನ್ ವಿನಿಯಂಕ್ತೇ, ಏತಾನ್ ಗ್ರಾಮಾನೇತಾನ್ ಗ್ರಾಮಾನ್ ಅಧಿತಿಷ್ಠಸ್ವೇತ್ಯೇವಮೇವೈಷ ಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸಂನಿಧತ್ತೇ ॥ 4 (33)**

ತಾ॥ ಚಕ್ರವರ್ತಿಯು ಭಿನ್ನಭಿನ್ನ ಅಧಿಕಾರಗಳಲ್ಲಿ, ಭಿನ್ನಭಿನ್ನ ಕಾರ್ಯಗಳನ್ನು ನಿರ್ವಹಿಸಲು ಅಧಿಕಾರಿಗಳನ್ನು ನೇಮಿಸಿ, ಆಜ್ಞಾಪಿಸುವಂತೆ, ಈ ಮುಖ್ಯ ಪ್ರಾಣವು ಇತರವಾದ ಚಕ್ಷುರಾದಿ ಪ್ರಾಣಗಳನ್ನು, ತನ್ನ ಪ್ರಭೇಧಗಳಾದ ಪ್ರಾಣಾಪಾನಾದಿಗಳನ್ನು, ಬೇರೆಬೇರೆಯಾಗಿ ಆಜ್ಞಾಪಿಸುತ್ತದೆ.

**ಮಂ.ಶ್ಲೋ.॥ ಪಾಯೂಪಸ್ಥೇಽಪಾನಂ ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರಾತಿಷ್ಠತೇ ಮಧ್ಯೇ ತು ಸಮಾನಃ, ಏಷ ಹ್ಯೇತದ್ಧುತಮನ್ನಂ ನಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವನ್ತಿ ॥ 5 (34)**

ತಾ|| ಈ ಮುಖ್ಯ ಪ್ರಾಣವು ಪಾಯೂಪಸ್ಥಲದಲ್ಲಿ (ಅಪಾನ) ಅಪಾನವನ್ನು ನೇಮಕ ಮಾಡುತ್ತದೆ. ಸ್ವತಃ ತಾನು ಮುಖದಲ್ಲಿಯೂ ನಾಸಿಕದಿಂದಲೂ ಪ್ರಕಟಗೊಂಡು ಚಕ್ಷುಗಳಲ್ಲಿಯೂ, ಶ್ರೋತ್ರ (ಕಿವಿ)ಗಳಲ್ಲಿಯೂ ಸಂಚರಿಸುತ್ತದೆ. ಈ ಪ್ರಾಣಾಪಾನಗಳ ಮಧ್ಯೆ ಸಮಾನವಿದೆ. ಈ ಸಮಾನ ವಾಯುವು ಜಠರಾಗ್ನಿಯಲ್ಲಿ ಪಚನ ಮಾಡಿದಂತಹ ಅನ್ನವನ್ನು ಸಮಾನವಾಗಿ ಎಲ್ಲ ಅವಯವ-ಗಳಿಗೂ ಹಂಚಿಕೊಡುತ್ತದೆ. ಈ ಜಠರಾಗ್ನಿಯಿಂದ ಏಳು ಜ್ವಾಲೆಗಳು ಹೊರಬೀಳುತ್ತವೆ.

**ಮಂ.ಶ್ಲೋ.|| ಹೃದಿಹ್ಯೇಷ ಆತ್ಮಾ, ಅತ್ರೈತದೇಕಶತಂ ನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯಾಂ**
**ದ್ವಾಸಪ್ತತಿರ್ದ್ವಾಸಪ್ತತಿಃ ಪ್ರತಿಶಾಖಾನಾಡೀ ಸಹಸ್ರಾಣಿ ಭವನ್ತ್ಯಾಸು ವ್ಯಾನಶ್ಚರತಿ ||**
**6(35)**

ತಾ|| ಈ ಜೀವಾತ್ಮ ಹೃದಯ ಭಾಗದಲ್ಲಿರುತ್ತಾನೆ. ಈ ಹೃದಯದಲ್ಲಿ ಪ್ರಧಾನ ನಾಡಿಗಳು ನೂರಾ ಒಂದು ಇವೆ. ಈ ಪ್ರಧಾನ ನಾಡಿಗಳಲ್ಲಿ ಒಂದೊಂದು ನಾಡಿಯಲ್ಲೂ ನೂರು ಉಪನಾಡಿ-ಗಳಿರುತ್ತವೆ. ಒಂದೊಂದು ಉಪನಾಡಿಯಲ್ಲೂ ಎಪ್ಪತ್ತೆರಡು ಪ್ರತಿ ಶಾಖಾನಾಡಿಗಳ ಸಹಸ್ರಗಳು ಇವೆ. (ನಾಡೀ ಮಂಡಲದಲ್ಲಿ ಚಿಕ್ಕ-ದೊಡ್ಡ ನಾಡಿಗಳೆಲ್ಲವೂ ಸೇರಿ, ಎಪ್ಪತ್ತೆರಡು ಕೋಟಿ, ಎಪ್ಪತ್ತೆರಡು ಲಕ್ಷ, ಹತ್ತು ಸಾವಿರದ ಎರಡು ನೂರಾ ಒಂದು ನಾಡಿಗಳಾಗುತ್ತವೆ.) ಈ ನಾಡಿಗಳೆಲ್ಲದರಲ್ಲೂ ವ್ಯಾನವೆಂಬ ಪ್ರಾಣವು ಸಂಚರಿಸುತ್ತಿರುತ್ತದೆ.

**ಮಂ.ಶ್ಲೋ.|| ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ**
**ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಮ್ || 7 (36)**

ತಾ|| ಅವುಗಳಲ್ಲಿ ಉದಾನ ವಾಯುವು ಈ ನೂರಾ ಒಂದು ನಾಡಿಗಳಲ್ಲಿ ಊರ್ಧ್ವಾಭಿಮುಖವಾದ ಸುಷುಮ್ನಾ ನಾಡಿಯೆನ್ನುವ ನಾಡಿಯ ಮೂಲಕ ನಾಭಿಯ ಮೇಲ್ಭಾಗದಲ್ಲಿ ಸಂಚರಿಸುವಂತಹು-ದಾಗಿದ್ದು, ಶುಭಕರ್ಮಗಳ ಮೂಲಕ ಪುಣ್ಯಲೋಕವನ್ನು, (ನಿಷಿದ್ಧ) ಪಾಪಕರ್ಮಗಳಾದಾಗಿ ಪಾಪ ಲೋಕವನ್ನು, ಶುಭಾಶುಭ ಕರ್ಮಗಳಂದ ಮನುಷ್ಯ ಲೋಕವನ್ನು ಈ ಜೀವನು ಸೇರುವಂತೆ ಮಾಡುವುದು.

**ಮಂ.ಶ್ಲೋ.|| ಆದಿತ್ಯೋ ಹವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ,**
**ಪ್ರಾಣಮನುಗೃಹ್ಣಾನಃ**
**ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಾನ್ತರಾ ಯದಾಕಾಶಃ**
**ಸ ಸಮಾನೋ ವಾಯುರ್ವ್ಯಾನಃ || 8 (37)**

ತಾ|| ಸುಪ್ರಸಿದ್ಧನಾದ ಸೂರ್ಯನು ಬಾಹ್ಯ ಪ್ರಾಣ. ಈ ಆದಿತ್ಯನು ಚಕ್ಷುರಿಂದ್ರಿಯದಲ್ಲಿರುವ ಪ್ರಾಣವನ್ನು ಅನುಗ್ರಹಿಸುತ್ತಾ, ಉದಯಿಸುತ್ತಿರುತ್ತಾನೆ. ಭೂಮಿಯಲ್ಲಿ ಆ ದೇವತೆ, ಪುರುಷನಲ್ಲಿರುವ ಅಪಾನ ವೃತ್ತಿಯನ್ನು ಆಕರ್ಷಿಸಿ, ತನ್ನ ವಶದಲ್ಲಿಟ್ಟುಕೊಂಡು ತಡೆದಿಟ್ಟುಕೊಳ್ಳುತ್ತದೆ. ಭೂಲೋಕ, ಸ್ವರ್ಗಗಳ ಮಧ್ಯೆ, ಯಾವ ಆಕಾಶವಿದೆಯೋ ಆ ಆಕಾಶವು (ಆಕಾಶದಲ್ಲಿರುವ ವಾಯುವು) ಸಮಾನವಾಯು. ಸಾಮಾನ್ಯರೂಪದಲ್ಲಿರುವ ವಾಯುವಿನ ಹೆಸರು ವ್ಯಾನವಾಯು.

**ಮಂ.ಶ್ಲೋ.॥ ತೇಜೋ ಹವಾ ಉದಾನಸ್ತಸ್ಮಾದುಪಶಾನ್ತ ತೇಜಾಃ**
**ಪುನರ್ಭವಮಿನ್ದ್ರಿಯೈರ್ಮನಸಿ ಸಂಪದ್ಯಮಾನೈಃ ॥ 9 (38)**

ತಾ॥ ತೇಜಸ್ಸು (ದೇಹಗತವಾದ ತೇಜಸ್ಸು ಉದಾನಕ್ಕೆ ಜೊತೆಯಾಗಿರುವುದು.) ಉದಾನವು. ಆದ್ದರಿಂದಲೇ (ಮರಣಹೊಂದಿದರೂ) ಶಾಂತಿಹೊಂದಿದ ತೇಜಸ್ಸನ್ನು ಹೊಂದಿದವನು, ಮನಸ್ಸಿನಲ್ಲಿ ಪ್ರವೇಶಿಸಲಿರುವ ವಾಗಾದೀಂದ್ರಿಯಗಳಲ್ಲಿ ಮತ್ತೆ ಜನ್ಮಹೊಂದುತ್ತಾನೆ.

**ಮಂ.ಶ್ಲೋ.॥ ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ ಪ್ರಾಣಸ್ತೇಜಸಾ ಯುಕ್ತಃ**
**ಸಹಾತ್ಮನಾ ಯಥಾ ಸಙ್ಕಲ್ಪಿತಂ ಲೋಕಂ ನಯತಿ ॥ 10 (39)**

ತಾ॥ ಮರಣ ಸಮಯದಲ್ಲಿ ಜೀವನು ಎಂತಹ ಸಂಕಲ್ಪವನ್ನು ಮಾಡುವನೋ ಆ ಸಂಕಲ್ಪಾನುಸಾರವಾಗಿ ಪ್ರಾಣ ವೃತ್ತಿಯನ್ನು ಹೊಂದುವನು. ಆ ಪ್ರಾಣವು ತೇಜಸ್ಸಿನೊಂದಿಗೆ ಸೇರಿ, ಸಂಕಲ್ಪಕ್ಕೆ ಅನುರೂಪವಾದ ಶರೀರವನ್ನು ಜೀವನು ಪಡೆಯುತ್ತಾನೆ.

**ಮಂ.ಶ್ಲೋ.॥ ಯ ಏವಂ ವಿದ್ವಾನ್ ಪ್ರಾಣಂ ವೇದ, ನ ಹಾಸ್ಯ ಪ್ರಜಾ ಹೀಯತೇಽಮೃತೋ ಭವತಿ ತದೇಷ ಶ್ಲೋಕೋ ಭವತಿ ॥ 11 (40)**

ತಾ॥ ಯಾವ ವಿದ್ವಾಂಸನು ಪ್ರಾಣವನ್ನು ಕುರಿತು ಈ ವಿಧವಾಗಿ ತಿಳಿದುಕೊಳ್ಳುತ್ತಾನೋ, ಆತನಿಗೆ ಪುತ್ರಪೌತ್ರಾದಿ ಸಂತಾನವು ವಿಚ್ಛಿನ್ನವಾಗುವುದಿಲ್ಲ. ಆತ ಅಮರನಾಗುವನು. ಈ ಅರ್ಥವನ್ನೇ ಪ್ರತಿಪಾದಿಸುತ್ತಾ, ಮುಂದೆ ಹೇಳಲಿರುವ ಶ್ಲೋಕವು ಪ್ರಮಾಣವಾಗುತ್ತದೆ.

**ಮಂ.ಶ್ಲೋ.॥ ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಞ್ಚಧಾ । ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಽಮೃತಮಶ್ನುತೇ, ವಿಜ್ಞಾಽಯಾಮೃತಮಶ್ನುತ ಇತಿ ॥ 12(41)**

ತಾ॥ ಪ್ರಾಣದ ಜನನವು, ಮನಸ್ಸಿನ ಮೂಲಕ ಈ ಶರೀರದೊಳಕ್ಕೆ ಸೇರಿಸಲು, ಪಾಯೂಪಸ್ಥಾದಿಗಳಲ್ಲಿ ಸ್ಥಿತಿಯನ್ನು, ಚಕ್ರವರ್ತಿಯಂತೆ ಪ್ರಾಣಕ್ಕಿರುವ ಪ್ರಭುತ್ವವನ್ನು, ದೇಹದಲ್ಲಿ ಚಕ್ಷುರಾದ್ಯಾಕಾರದಲ್ಲಿ ಐದು ವಿಧಗಳಲ್ಲಿ ಸಂಚರಿಸುತ್ತಿರುವ, ಅಧಿ ದೈವಿಕ ಸ್ಥಿತಿಯನ್ನು ತಿಳಿದುಕೊಂಡವರು ಅಮರತ್ವವನ್ನು ಹೊಂದುತ್ತಾರೆ; ಅನುಭವಿಸುತ್ತಾರೆ. "ವಿಜ್ಞಾಯಾಽ ಮೃತ ಮಶ್ನುತೇ" ಎನ್ನುವ ವಾಕ್ಯವನ್ನು ಎರಡು ಬಾರಿ ಹೇಳಿ, ತೃತೀಯ ಪ್ರಶ್ನೆ ಸಮಾಪ್ತಿಯನ್ನು ಮಹರ್ಷಿ ತಿಳಿಸಿಕೊಡುತ್ತಿದ್ದಾನೆ.

## ಚತುರ್ಥಃ ಪ್ರಶ್ನಃ

**ಮಂ.ಶ್ಲೋ.॥ ಓಂ. ಅಥ ಹೈನಂ ಸೌರ್ಯಾಯಣೀ ಗಾರ್ಗ್ಯಃ ಪಪ್ರಚ್ಛ, ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪನ್ತಿ;**
**ಕಾನ್ಯಸ್ಮಿನ್ ಜಾಗ್ರತಿ; ಕತರ ಏಷ ದೇವಃ ಸ್ವಪ್ನಾನ್ ಪಶ್ಯತಿ; ಕಸ್ಯೈತತ್ಸುಖಂ ಭವತಿ;**
**ಕಸ್ಮಿನ್ನು ಸರ್ವೇ ಸಂಪ್ರತಿಷ್ಠಿತಾ ಭವನ್ತೀತಿ ॥ 1 (42)**

ತಾ॥ ಅನಂತರ ಸೂರ್ಯನ ಪ್ರಪೌತ್ರನು ಗರ್ಗಗೋತ್ರದವನಾದ ಸಾರ್ಯಾಯಣಿ, ಈ ಪಿಪ್ಪಲಾದ ಮಹರ್ಷಿಯನ್ನು ಪ್ರಶ್ನಿಸಿದ. 'ಓ ಗುರುದೇವ! (ಶಿರಸ್ಸು, ಕೈಗಳು, ಮೊದಲಾದ

ಅವಯುವಗಳನ್ನು ಹೊಂದಿದ) ಈ ಪುರುಷನಲ್ಲಿ, ಯಾವ ಕರಣಗಳು ನಿದ್ರಿಸುತ್ತಿವೆ? ಈ ಪುರುಷನು ಎಚ್ಚರವಾಗಿದ್ದಾಗ, ಯಾವ ಇಂದ್ರಿಯಗಳು ಎಚ್ಚರಗೊಂಡಿರುತ್ತವೆ? ಕಾರ್ಯ (ಶರೀರ) ಕರಣ (ಇಂದ್ರಿಯ)ಗಳಲ್ಲಿ ಯಾವ ದೇವರು ಸ್ವಪ್ನಗಳನ್ನು ತೋರಿಸುತ್ತಿದ್ದಾನೆ? ಜಾಗ್ರತ್ ಸ್ವಪ್ನ ವ್ಯಾಪಾರಗಳು ನಿಂತಾಗ ಉಂಟಾಗುವ ಈ ಸುಖವು ಯಾರಿಗೆ ಲಭಿಸುತ್ತದೆ? ಜಾಗ್ರತ್ ಸ್ವಪ್ನ ವ್ಯಾಪಾರಗಳಿಂದ ಪ್ರಾಣಾದಿಪದಾರ್ಥಗಳೆಲ್ಲವೂ ವಿರಮಿಸಿದಾಗ, ಯಾವುದರಲ್ಲಿ ಚೆನ್ನಾದ ಸ್ಥಿತಿಯನ್ನು ಹೊಂದಲಾಗುವುದು?' ಎಂದು ಪ್ರಶ್ನಿಸಿದ.

**ಮಂ.ಶ್ಲೋ.॥ ತಸ್ಮೈ ಸಹೋವಾಚ, ಯಥಾ ಗಾರ್ಗ್ಯ ಮರೀಚಯೋಽರ್ಕಸ್ಯಾಸ್ತಂ ಗಚ್ಛತಃ ಸರ್ವಾ ಏತಸ್ಮಿಂಸ್ತೇಜೋಮಣ್ಡಲ ಏಕೀಭವನ್ತಿ; ತಾಃ ಪುನಃ ಪುನರುದಯತಃ ಪ್ರಚರನ್ತ್ಯೇವಂ ಹವೈ ತತ್ಸರ್ವಂ ಪರೇ ದೇವೇ ಮನಸ್ಯೇಕೀಭವತಿ, ತೇನ ತರ್ಹ್ಯೇಷ ಪುರುಷೋ ನಶೃಣೋತಿ, ನ ಪಶ್ಯತಿ, ನ ಜಿಘ್ರತಿ, ನ ರಸಯತೇ, ನ ಸ್ಪೃಶತೇ, ನಾಭಿವದತೇ, ನಾಽದತ್ತೇ, ನಾಽನನ್ದಯತೇ, ನ ವಿಸೃಜತೇ, ನೇಯಾಯತೇ, ಸ್ವಪಿತೀತ್ಯಾಚಕ್ಷತೇ ॥ 2 (43)**

ತಾ॥ ಪಿಪ್ಪಲಾದ ಮಹರ್ಷಿ ಗಾರ್ಗ್ಯನಿಗೆ ಹೀಗೆ ಹೇಳಿದನು. "ಓ ಗಾರ್ಗ್ಯನೇ, ಅಸ್ತಮಿಸಲಿರುವ ಸೂರ್ಯನ ಸಮಸ್ತ ಕಿರಣಗಳು ಯಾವ ವಿಧವಾಗಿ ಈ ತೇಜೋಮಂಡಲದಲ್ಲಿ ಏಕವಾಗುತ್ತಿದೆಯೋ (ಒಂದೇ ಆಗಿಬಿಡುತ್ತದೆಯೋ) ಈ ಕಿರಣಗಳು ಮತ್ತೆ ಮತ್ತೆ ಪ್ರತಿನಿತ್ಯ ಆ ಸೂರ್ಯನು ಉದಯಿಸುತ್ತಿರುವಾಗ ನಾಲ್ಕು ದಿಕ್ಕುಗಳಲ್ಲಿಯೂ ವ್ಯಾಪಿಸುತ್ತಿರುತ್ತವೆಯೋ, ಆ ವಿಧವಾಗಿಯೇ ನೇತ್ರಾದಿ ಇಂದ್ರಿಯಾದಿಗಳ ಸಮುದಾಯವೆಲ್ಲವೂ ಸೂಕ್ಷ್ಮವಾಗಿ ದಿವ್ಯವಾಗುತ್ತ, ಮನಸ್ಸಿನಲ್ಲಿ ಒಂದಾಗಿ (ಲೀನವಾಗಿ) ಬಿಡುತ್ತದೆ. ಆ ಕಾರಣದಿಂದ ಆಗ ಆ ಪುರುಷನು ಕೇಳನು, ನೋಡಲಾರನು, ವಾಸನೆ ನೋಡಲಾಗುವುದಿಲ್ಲ. ರುಚಿ ನೋಡಲಾರ. ಸ್ಪರ್ಶವಿರುವುದಿಲ್ಲ. ಮಾತನಾಡುವುದಿಲ್ಲ. ಗ್ರಹಿಸಲಾರ (ಹಿಡಿದುಕೊಳ್ಳಲಾರ) ಉಪಸ್ಥೇಂದ್ರಿಯ ಸುಖವನ್ನು ಅನುಭವಿಸಲಾರ, ಮಲಮೂತ್ರಗಳನ್ನು ವಿಸರ್ಜಿಸಲಾರ, ಅಂತಹವನನ್ನು ನಿದ್ರೆ ಮಾಡುತ್ತಿದ್ದಾನೆಂದು ಹೇಳುವರು.

**ಮಂ.ಶ್ಲೋ.॥ ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ, ಗಾರ್ಹಪತ್ಯೋ ಹ ವಾ ಏಷೋಽಪಾನೋ, ವ್ಯಾನೋಽನ್ವಾಹಾರ್ಯಪಚನೋ, ಯದ್ಗಾರ್ಹಪತ್ಯಾತ್ ಪ್ರಣೀಯತೇ ಪ್ರಣಯನಾದಾಹವನೀಯಃ ಪ್ರಾಣಃ ॥ 3 (44)**

ತಾ॥ ಈ ದೇಹವೆನ್ನುವ ಪಟ್ಟಣದಲ್ಲಿ, ಪಂಚ ಪ್ರಾಣಗಳೆನ್ನುವ ಅಗ್ನಿಗಳೇ ಜಾಗೃತವಾಗಿ ವ್ಯಾಪಾರಗಳನ್ನು ಮಾಡುತ್ತವೆ. ಈ ಅಪಾನವು ಗಾರ್ಹಪತ್ಯವು. ವ್ಯಾನವು ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿಯಿಂದ ತೆಗೆದುಕೊಂಡು ಬಂದಿರುವುದರಿಂದ ಪ್ರಾಣವು ಆವಹನೀಯಾಗ್ನಿ ಆಗುತ್ತದೆ.

**ಮಂ.ಶ್ಲೋ.॥ ಯದುಚ್ಛ್ವಾಸ ನಿಃಶ್ವಾಸೌ ಏತಾವಾಹುತಿ ಸಮಂ ನಯತೀತಿ ಸ ಸಮಾನಃ, ಮನೋ ಹವಾವ ಯಜಮಾನ ಇಷ್ಟಫಲಮೇವೋದಾನಃ ಸ ಏನಂ ಯಜಮಾನಮಹರಹರ್ಬ್ರಹ್ಮ ಗಮಯತಿ ॥ 4 (45)**

ತಾ॥ ಉಚ್ಛ್ವಾಸ ನಿಶ್ವಾಸಗಳೆರಡನ್ನೂ ಆಹುತಿ ರೂಪದಲ್ಲಿ ಸಮಾನವಾಗಿ ನಡೆಸುವುದರಿಂದ

ಆ ಪ್ರಾಣವಾಯುವು ಸಮಾನ. (ಹೋತ (ಹೋತೃ) ಗಳೆನ್ನುವ ಋತ್ವಿಕನು) ಜೀವಾತ್ಮ (ಮನಸ್ಸೇ)ವೇ ಯಜ್ಞವನ್ನು ಮಾಡುವ ಯಜಮಾನನು. ಇಷ್ಟವಾದ ಫಲವೇ ಆ ಉದಾನನು. ಪ್ರತಿದಿನವೂ ಯಜಮಾನನನ್ನು ಬ್ರಹ್ಮ(ಕ್ಕೆ)ದ ಬಳಿಗೆ ಸೇರಿಸುತ್ತಾನೆ.

**ಮಂ.ಶ್ಲೋ.॥ ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ, ಯದ್ದೃಷ್ಟಂ ದೃಷ್ಟಮನುಪಶ್ಯತಿ, ಶ್ರುತಂ ಶ್ರುತಮೇವಾರ್ಥಮನುಶೃಣೋತಿ; ದೇಶದಿಗನ್ತರೈಶ್ಚ ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನುಭವತಿ, ದೃಷ್ಟಂ ಚಾದೃಷ್ಟಂ ಚ ಶ್ರುತಂ ಚಾಶ್ರುತಂ ಚಾನುಭೂತಂ ಚಾನನು -ಭೂತಂ ಚ, ಸಚ್ಚಾಸಚ್ಚ ಸರ್ವಂ ಪಶ್ಯತಿ ಸರ್ವಃ ಪಶ್ಯತಿ ॥ 5 (46)**

ತಾ॥ ಸ್ವಪ್ನದಲ್ಲಿ ಈ ಜೀವನು ತನ್ನ ಮಹತ್ವವನ್ನು ಅನುಭವಕ್ಕೆ ತಂದುಕೊಳ್ಳುವನು. ಯಾವುದನ್ನು ಜಾಗ್ರದವಸ್ಥೆಯಲ್ಲಿ ನೇತ್ರಾದಿಂದ್ರಿಯಗಳೊಂದಿಗೆ ನೋಡುವಂತಾಗುತ್ತದೆಯೋ. ಅದನ್ನೇ ಸ್ವಪ್ನದಲ್ಲೂ ಕೂಡಾ ನೋಡುತ್ತಿರುತ್ತಾನೆ. ಹಿಂದೆ ಕೇಳದ ಅರ್ಥವನ್ನೇ ಮತ್ತೆ ಕೇಳುವನು. ದೇಶದಲ್ಲಿ ದಿಕ್ಕುಗಳಲ್ಲಿಯೂ, ಹಿಂದೆ ಅನುಭವಿಸಿದುದನ್ನೇ ತಿರುಗಿ ತಿರುಗಿ ಅದನ್ನೇ ಮತ್ತೆ ಮತ್ತೆ ಅನುಭವಿಸುತ್ತದೆ. ಈ ಜನ್ಮದಲ್ಲಿ ನೋಡುವಂತಹುದನ್ನು (ಪೂರ್ವ ಜನ್ಮದಲ್ಲಿ ನೋಡಿದುದನ್ನು) ಅನುಭವಿಸ-ಲಾಗದುದನ್ನು ಈ ಜನ್ಮದಲ್ಲಿ ಕೇಳಸಿದಂತಹುದನ್ನು ಈ ಜನ್ಮದಲ್ಲಿ ಕೇಳಸಲಾಗದ್ದನ್ನು, ಈ ಜನ್ಮದಲ್ಲಿ ಅನುಭವಿಸಿದುದನ್ನು, ಈ ಜನ್ಮದಲ್ಲಿ ಅನುಭವಿಸಲಾಗದ್ದನ್ನು ಸತ್ಯವಾದ ಜಲಾಧಿಕವನ್ನು, ಅಸತ್ಯವಾದ ಭೂಮಿಯ ಮರುಮರೀಚಿಕೆ ಮುಂತಾದವುಗಳಲ್ಲಿನ ಜಲವನ್ನು ಸಮಸ್ತವನ್ನೂ ನೋಡುತ್ತಿದೆ. ಹಾಗೆಯೇ ಸಕಲೇಂದ್ರಿಯ ವಾಸನಾರೂಪದಿಂದಾಗಿ ಸಕಲ ಜೀವ ಕೋಟಿಯನ್ನು ಸ್ವಪ್ನದಲ್ಲಿ ನೋಡುತ್ತಿರುವುದು.

**ಮಂ.ಶ್ಲೋ.॥ ಸ ಯದಾ ತೇಜಸಾಽಭಿಭೂತೋ ಭವತಿ ಅತ್ರೈಷ ದೇವಃ ಸ್ವಪ್ನಾನ್ನ ಪಶ್ಯತ್ಯಥ ತದೈತಸ್ಮಿನ್ ಶರೀರ ಏತತ್ಸುಖಂ ಭವತಿ ॥ 6 (47)**

ತಾ॥ (ಮನೋರೂಪನಾದ) ಆ ಜೀವನು ಯಾವಾಗ ತೇಜಸ್ಸಿನಿಂದ ಆಚ್ಛಾದಿತನಾದ-ನಾಗುತ್ತಾನೋ ಆ ಸಮಯದಲ್ಲಿ ಈ ದೇವನು (ಜೀವನು) ಸ್ವಪ್ನಗಳನ್ನು ಕಾಣುವುದಿಲ್ಲ ಅದೇ ಸುಷುಪ್ತಿ. ಆಗ ಈ ಶರೀರದಲ್ಲಿ ಪರಮಾತ್ಮನಿಂದ ಜೀವಾತ್ಮನಿಗೆ ಉಂಟಾಗುವ ಸಂಬಂಧದಿಂದ ಸುಖವು ಉಂಟಾಗುತ್ತದೆ.

**ಮಂ.ಶ್ಲೋ.॥ ಸ ಯಥಾ ಸೋಮ್ಯ ವಯಾಂಸಿ ವಾಸೋ ವೃಕ್ಷಂ ಸಂಪ್ರತಿಷ್ಠನ್ತೇ, ಏವಂ ಹವೈ ತತ್ಸರ್ವಂ ಪರ ಆತ್ಮನಿ ಸಂಪ್ರತಿಷ್ಠತೇ ॥ 7 (48)**

ತಾ॥ ಪಿಪ್ಪಲಾದರು ಹೇಳುತ್ತಿದ್ದಾರೆ, ಓ ಪ್ರಿಯದರ್ಶನಾ! ಪಕ್ಷಿಗಳು ನಿವಾಸವಾದ ವೃಕ್ಷವನ್ನು ಹುಡುಕಿಕೊಂಡು ಹೇಗೆ ಹೋಗುತ್ತವೆಯೋ ಅದೇ ರೀತಿ ಮುಂದೆ ಹೇಳುವಂತಹ ವಿಷಯವೆಲ್ಲವೂ ಪರಮಾತ್ಮನಲ್ಲಿ ಯಾವಾಗಲೂ ನೆಲಸಿರುವುದು. (ಸ್ಥಿತಿ)

**ಮಂ.ಶ್ಲೋ.॥ ಪೃಥಿವೀ ಚ ಪೃಥಿವೀಮಾತ್ರಾಚ, ಅಪಶ್ಚಾಪೋಮಾತ್ರಾಚ, ತೇಜಶ್ಚ ತೇಜೋಮಾತ್ರಾಚ, ವಾಯುಶ್ಚ ವಾಯುಮಾತ್ರಾಚಾಕಾಶಶ್ಚಾಕಾಶಮಾತ್ರಾ ಚ, ಚಕ್ಷುಶ್ಚ ದ್ರಷ್ಟವ್ಯಂಚ, ಶ್ರೋತ್ರಂ**

**ಚ ಶ್ರೋತವ್ಯಂ ಚ, ಘ್ರಾಣಂ ಚ ಘ್ರಾತವ್ಯಂ ಚ, ರಸಶ್ಚ ರಸಯಿತವ್ಯಂ ಚ, ತ್ವಕ್ಚ ಸ್ಪರ್ಶಯಿತವ್ಯಂಚ, ವಾಕ್ಚ ವಕ್ತವ್ಯಂ ಚ, ಹಸ್ತೌಚಾದಾತವ್ಯಂ ಚ, ಉಪಸ್ಥಶ್ಚಾನನ್ದಯಿತವ್ಯಂ ಚ, ಪಾಯುಶ್ಚ ವಿಸರ್ಜಯಿತವ್ಯಂ ಚ, ಪಾದೌ ಚ ಗನ್ತವ್ಯಂ ಚ, ಮನಶ್ಚ ಮನ್ತವ್ಯಂ ಚ, ಬುದ್ಧಿಶ್ಚ ಬೋದ್ಧವ್ಯಂಚ ಅಹಂಕಾರಾಶ್ಚಾಹಂ ಕರ್ತವ್ಯಂ ಚ, ಚಿತ್ತಂಚ ಚೇತಯಿತವ್ಯಂ ಚ, ತೇಜಶ್ಚ ವಿದ್ಯೋತಯಿತವ್ಯಂ ಚ ಪ್ರಾಣಶ್ಚ ವಿಧಾರಯಿತವ್ಯಂ ಚ ॥ 8 (49)**

ತಾ॥ ಪೃಥಿವ್ಯಾದಿ ಪಂಚಸ್ಥೂಲ ಸೂಕ್ಷ್ಮಭೂತಗಳು, ಚಕ್ಷುರಾದಿ ಜ್ಞಾನೇಂದ್ರಿಯಗಳು, ಅವುಗಳಿಂದ ಗ್ರಹಿಸಲ್ಪಡುವ ಶಬ್ದ ಸ್ಪರ್ಶಾದಿ ವಿಷಯಗಳು, ಕರ್ಮೇಂದ್ರಿಯಗಳು, ಅವುಗಳಿಂದ ಮಾಡುವಂತಹ ಕರ್ಮಗಳು, ಅಂತರಿಂದ್ರಿಯವಾದ ಮನಸ್ಸು, ಮನಸ್ಸಿನಲ್ಲಿ ಮನನ ಮಾಡತಕ್ಕ ವಿಷಯ, ಹೀಗೆ ಬುದ್ಧಿ ಚಿತ್ತ, ಅಹಂಕಾರಗಳು, ಅವುಗಳ ವಿಷಯಗಳು. ತೇಜಸ್ಸು ಅದರಿಂದಲೇ ಪ್ರಕಾಶ ಗೊಳ್ಳುತ್ತಿವೆ. ಅದರಿಂದ ಪ್ರಾಣವು ಧಾರಣವಾಗುತ್ತದೆ. ಎಲ್ಲವೂ ಪರಮೇಶ್ವರನಲ್ಲೇ ನೆಲಸಿರುತ್ತದೆ. (ಸ್ಥಿತಿ). ಸ್ಥೂಲ ಸೂಕ್ಷ್ಮ ಪ್ರಪಂಚಕ್ಕೆಲ್ಲಾ ಪರಮೇಶ್ವರನೇ ಆಧಾರ. ಈ ಸ್ಥೂಲ ಸೂಕ್ಷ್ಮಾತ್ಮಕವಾದ ಜಡ ಜಗತ್ತೇ ಅಲ್ಲದೆ ಜೀವಾತ್ಮಗಳೆಲ್ಲವೂ ಪರಮೇಶ್ವರನ ಬಳಿಯೇ ಇರುತ್ತದೆಯೆಂದು ಹೇಳುತ್ತಾರೆ. (ಇವೆಲ್ಲವೂ ಅಕ್ಷರದಲ್ಲಿ ಲೀನವಾಗುತ್ತದೆಯೆಂದು ಹಿಂದಿನ ಮಂತ್ರದೊಂದಿಗೆ ಹೇಳಿಕೊಳ್ಳಬೇಕು)

**ಮಂ.ಶ್ಲೋ.॥ ಏಷ ಹೀ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ ಸ ಪರೇಽಕ್ಷರೇ ಆತ್ಮನಿ ಸಂಪ್ರತಿಷ್ಠತೇ ॥ 9 (50)**

ತಾ॥ ಈ ಕಾರ್ಯಕರಣರೂಪೋಪಾದಿಯಲ್ಲಿ ತುಂಬಿರುವ ಈ ಜೀವನು ನೋಡುವಂತಹವನು, ಸ್ಪರ್ಶಿಸುವಂತಹವನು, ಕೇಳುವಂತಹವನು, ವಾಸನೆ ನೋಡುವವನು, ಜಿಹ್ವೆಯಿಂದ ರುಚಿ ನೋಡು-ವಂತಹವನು, ಮನಸ್ಸಿನಿಂದ ಆಲೋಚಿಸುವಂತಹವನು, ಬುದ್ಧಿಯಿಂದ ತಿಳಿದುಕೊಳಬಲ್ಲವನು. ಕಾರ್ಯಗಳನ್ನು ಮಾಡುವವನು, ವಿಜ್ಞಾನ ಸ್ವರೂಪನು, ಈ ವಿಜ್ಞಾನಾತ್ಮವು ಅತ್ಯಂತ ಸೂಕ್ಷ್ಮವು, ನಾಶ ರಹಿತವಾದುದು. ಸರ್ವವ್ಯಾಪಕವಾದ ಆ ಪರಬ್ರಹ್ಮನಲ್ಲೇ ನೆಲಸಿರುವವನಾಗಿರುತ್ತಾನೆ.

**ಮಂ.ಶ್ಲೋ.॥ ಪರಮೇವಾಕ್ಷರಂ ಪ್ರತಿಪದ್ಯತೇ ಸ ಯೋ ಹವೈ ತದಚ್ಛಾಯು ಮ ಶರೀರಮಲೋಹಿತಂ, ಶುಭ್ರಮಕ್ಷರಂ ವೇದಯತೇ ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವೋ ಭವತಿ, ತದೇಷ ಶ್ಲೋಕಃ ॥ 10 (51)**

ತಾ॥ ಓ ಗಾರ್ಗ್ಯ! ಯಾವ ವಿದ್ವಾಂಸನು ಆ ಛಾಯಾ ರಹಿತವು, ಶರೀರ ರಹಿತವೂ ರಕ್ತವರ್ಣಾದಿ ಗುಣಗಳಿಲ್ಲದಂತಹದ್ದು, ಶುದ್ಧವಾದುದಾಗಿರುವ (ಪರಮಾತ್ಮ), ಈ ಅಕ್ಷರವನ್ನು ತಿಳಿದುಕೊಳ್ಳು-ತ್ತಿದ್ದಾನೋ, ಆತನು ನಿಶ್ಚಯಪೂರ್ವಕವಾಗಿ ಆ ಅಕ್ಷರವನ್ನು ಹೊಂದುತ್ತಾನೆ. ಯಾರು ಈ ರೀತಿಯಾಗಿ ಗ್ರಹಿಸುವರೋ, ಆತ ಸರ್ವಜ್ಞನು, ಸರ್ವಸ್ವರೂಪನೂ ಆಗುತ್ತಾನೆ. ಅದಕ್ಕೆ ಈ ಮಂತ್ರ (ಶ್ಲೋಕ)ವು ಪ್ರಮಾಣ.

**ಮಂ.ಶ್ಲೋ.॥ ವಿಜ್ಞಾನಾತ್ಮಾ ಸಹದೇವೈಶ್ಚ ಸರ್ವೈಃ ಪ್ರಾಣಾ ಭೂತಾನಿ ಸಂಪ್ರತಿಷ್ಠನ್ತಿ ಯತ್ರ, ತದಕ್ಷರಂ ವೇದಯತೇ ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವಮೇವಾ ವಿವೇಶೇತಿ ॥ 11(52)**

ತಾ॥ ಓ ಸೌಮ್ಯನೇ! ವಿಜ್ಞಾನಾತ್ಮಕವಾದ ಈ ಜೀವನು ಸಮಸ್ತವಾದ ಅಗ್ನ್ಯಾದಿ ದೇವತೆ-ಗಳೊಂದಿಗೂ ಸಹ (ಸರ್ವೇಂದ್ರಿಯಗಳೊಂದಿಗೂ ಸಹ) ಪಂಚಪ್ರಾಣಗಳನ್ನು ಪೃಥಿವ್ಯಾದಿ ಪಂಚ-ಭೂತಗಳನ್ನು ಯಾವ ಅಕ್ಷರದಲ್ಲಿ ಸೇರುವಂತಾಗುವನೋ ಆ ಅಕ್ಷರವನ್ನು ಸರ್ವಜ್ಞನಾಗಿ, ಸರ್ವವನ್ನು ಪ್ರವೇಶಿಸುವಂತಹನಾಗುತ್ತಾನೆ. (ಬಂಧಮುಕ್ತನಾಗಿ ಆತ್ಮಾನಂದವನ್ನು ಅನುಭವಿಸುವಂತಾಗುತ್ತಾನೆ.) ಸರ್ವತ್ರವೂ ತಾನೇ ಆಗುತ್ತಾನೆ (ಆಗಿಬಿಡುತ್ತಾನೆ.) ಇತಿ = ಪ್ರಶ್ನೆ ಸಮಾಪ್ತಿ ಸೂಚಕ.

# ಪಂಚಮಃ ಪ್ರಶ್ನಃ

**ಮಂ.ಶ್ಲೋ.॥ ಓಂ ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ ಸಯೋ ಹ ವೈ ತದ್ಭಗವನ್ ಮನುಷ್ಯೇಷು ಪ್ರಾಯಣಾನ್ತಮೋಂಕಾರಮಭಿಧ್ಯಾಯೀತ; ಕತಮಂ ವಾ ಸ ತೇನ ಲೋಕಂ ಜಯತೀತಿ; ತಸ್ಮೈ ಸ ಹೋವಾಚ. 1 (53)**

ತಾ॥ ಗಾರ್ಗ್ಯನು ಪ್ರಶ್ನಿಸಿದ ನಂತರ ಪಿಪ್ಪಲಾದ ಮಹರ್ಷಿಯ ಹತ್ತಿರ ಶೈಬ್ಯನಾದ ಸತ್ಯಕಾಮನು ಬಂದು ಪ್ರಶ್ನಿಸಿದನು: ಭಗವನ್! ಮನುಷ್ಯರಲ್ಲಿ ಯಾರು ಮರಣಾಂತದವರೆಗೂ ಓಂಕಾರವನ್ನು ಧ್ಯಾನಿಸುತ್ತಿರುವನೋ, ಅವನು ಆ ಧ್ಯಾನದಿಂದ, ಯಾವ ಲೋಕವನ್ನು ಜಯಿಸುತ್ತಾನೆ? ಎನ್ನಲು. ಆ ಸತ್ಯಕಾಮನಿಗೆ ಪಿಪ್ಪಲಾದಾಚಾರ್ಯರು ಹೀಗೆ ಪ್ರತ್ಯುತ್ತರವನ್ನಿತ್ತರು.

**ಮಂ.ಶ್ಲೋ.॥ ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ ತಸ್ಮಾದ್ವಿದ್ವಾನೇತೇ ನೈವಾಯತನೇ ನೈಕತರಮನ್ವೇತಿ ॥ 2 (54)**

ತಾ॥ ಸತ್ಯಕಾಮಾ! ಯಾವ ಅಕ್ಷರ ಪರಬ್ರಹ್ಮ ಇರುವುದೋ ಅದು, (ಪ್ರಾಣವೆಂಬ ಹೆಸರುಳ್ಳ) ಆ ಪರಬ್ರಹ್ಮವು ಅಂದರೆ ಪರಾಪರ ಬ್ರಹ್ಮಗಳೆರಡೂ ಓಂಕಾರವೇ. ಆದ್ದರಿಂದ, ವಿದ್ವಾಂಸನು ಆತ್ಮಪ್ರಾಪ್ತಿ ಸಾಧನವಾದ ಆಲಂಬನೆಯ ಮೂಲಕ ಪರಾಪರ ಬ್ರಹ್ಮಗಳಲ್ಲಿ ಒಂದನ್ನು ಅನುಸರಿಸುತ್ತಾನೆ.

**ಮಂ.ಶ್ಲೋ.॥ ಸಯುದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ ತಮೃಚೋ ಮನುಷ್ಯಲೋಕಮುಪನಯನ್ತೇ ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ॥ 3(55)**

ತಾ॥ ಆ ಭಕ್ತನು ಒಂದು ಮಾತ್ರಾಕಾಲವನ್ನು ಹೊಂದಿದ ಓಂಕಾರವನ್ನು ಧ್ಯಾನಿಸುತ್ತಾನೆ. ಆ ಏಕಮಾತ್ರಾಬಿಧ್ಯಾನದಿಂದ, ಆ ಏಕಮಾತ್ರೆಯನ್ನೇ (ಓಂಕಾರವನ್ನೇ) ಸಾಕ್ಷಾತ್ಕರಿಸಿಕೊಂಡವನಾಗಿ, ಕೂಡಲೇ ಈ ಭೂಮಿಯಲ್ಲಿ ಸಂಪನ್ನನಾಗುವನು. ಆತನನ್ನು ಋಕ್ಕುಗಳು ಮನುಷ್ಯ ಲೋಕಕ್ಕೆ ಸೇರಿಸುವರು. ಆತ, ಆ ಮನುಷ್ಯ ಲೋಕದಲ್ಲಿ ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ಶ್ರದ್ಧೆಯಿಂದಲೂ ಕೂಡಿದವನಾಗಿ, ಮಹಿಮೆಯನ್ನು ಅನುಭವಿಸುವನು.

**ಮಂ.ಶ್ಲೋ.॥ ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽನ್ತರಿಕ್ಷಂ ಯಜುರ್ಭಿರುನ್ನೀಯತೇ ಸ ಸೋಮಲೋಕಮ್, ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ॥ 4 (56)**

ತಾ॥ ಆನಂತರ ಅಕಾರ ಉಕಾರಗಳೆನ್ನುವ ಎರಡು ಮಾತ್ರೆಗಳುಳ್ಳ ಓಂಕಾರದಿಂದ, ತತ್ತ್ವರೂಪ-ವನ್ನು ಧ್ಯಾನಿಸಿದಾಗ, ಮನಸ್ಸಿನೊಳಗೆ ಏಕಾಗ್ರತೆಯಿಂದಾಗಿ ಆತ್ಮಭಾವವನ್ನು ಹೊಂದುವನು. ಆತನು ಯಜುಸ್ಸುಗಳಿಂದ, ಅಂತರಿಕ್ಷದ ಆಧಾರವನ್ನು ಹೊಂದಿರುವ ಚಂದ್ರಲೋಕವನ್ನು ಸೇರುವನು. ಆತ ಚಂದ್ರಲೋಕದಲ್ಲಿ ಐಶ್ವರ್ಯವನ್ನು ಅನುಭವಿಸಿ, ಮತ್ತೆ ಈ ಭೂಲೋಕಕ್ಕೆ ಬರುವನು.

**ಮಂ.ಶ್ಲೋ.॥ ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇ ನೈವಾಕ್ಷರೇಣ ಪರಂ ಪುರುಷ-ಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ, ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ, ಬ್ರಹ್ಮ-ಲೋಕಂ ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ, ತದೇತೌ ಶ್ಲೋಕೌ ಭವತಃ । 5 (57)**

ತಾ॥ ಯಾರು ಈ ತ್ರಿಮಾತ್ರಾತ್ಮಕವಾದ ಓಂ ಎನ್ನುವ ಅಕ್ಷರದೊಂದಿಗೆ ಸೂಕ್ಷ್ಮಾತಿಸೂಕ್ಷ್ಮವಾದ ಪರಬ್ರಹ್ಮನ ಉಪಾಸನೆಯನ್ನು ಮಾಡುವನೋ (ಧ್ಯಾನಿಸುವನೋ) ಆತನು ತೇಜಃಪೂರ್ಣವಾದ ಮೂರ್ಧವದಲ್ಲಿನ ಪ್ರಾಣದಲ್ಲಿ (ಸೂರ್ಯನಲ್ಲಿ) ವಿಶೇಷ ಶಕ್ತಿಯಿಂದ ಸಂಪನ್ನನಾಗುತ್ತಾನೆ ಸರ್ಪವು ಪೊರೆಕಳಚಿ ಹೊರಕ್ಕೆ ಬಂದಂತೆ, ನಿಶ್ಚಯವಾಗಿಯೂ ಆತನು ಪಾಪದಿಂದ ವಿಮುಕ್ತನಾಗಿ, ಸಾಮ-ಗಳೊಂದಿಗೆ (ಪ್ರಾಣಗಳೊಂದಿಗೆ) ಸತ್ಯಲೋಕವೆಂದು ಪ್ರಸಿದ್ಧಿಯಾಗಿರುವ ಹಿರಣ್ಯಗರ್ಭನ ಲೋಕ-ವನ್ನು ಹೊಂದುತ್ತಾನೆ. ಆ ವಿದ್ವಾಂಸನು ಈ ಸ್ಥಾವರ ಜಂಗಮಗಳಿಗಿಂತ ಬೇರೆಯಾದವನು. ಆ ಹಿರಣ್ಯಗರ್ಭ ಬ್ರಹ್ಮನಿಗಿಂತ ಬೇರೆಯಾದವನು. ಸರ್ವ ಶರೀರಗಳಲ್ಲಿಯೂ ಇರುವಂತಹ ಪರಮೇಶ್ವರನನ್ನು ಕಾಣಬಲ್ಲನು. ಈ ವಿಷಯವನ್ನು ಈ ಕೆಳಗಿನ ಎರಡು ಮಂತ್ರಗಳಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

**ಮಂ.ಶ್ಲೋ.॥ ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।**
**ಕ್ರಿಯಾಸು ಬಾಹ್ಯಾಭ್ಯನ್ತರಮಧ್ಯಮಾಸು ಸಮ್ಯಕ್ಪ್ರಯುಕ್ತಾಸು ನ ಕಮ್ಪತೇ ಜ್ಞಃ॥6 (58)**

ತಾ॥ ಪರಸ್ಪರ ಸಂಬಂಧವಿದ್ದು (ಆತ್ಮಧ್ಯಾನದಲ್ಲಿ) ಪರಸ್ಪರ ಬಿಡಲಾಗದಂತಿರುವ, ನಾಶವಾಗು-ವಂತಹ (ಧ್ಯಾನದಲ್ಲಿ ಬಳಸುವಂತಹ) ಓಂಕಾರವು - ಅದರಲ್ಲಿನ - ಮೂರು ಮಾತ್ರೆಗಳು (ಅಕಾರ, ಉಕಾರ, ಮಕಾರ) ಬಾಹ್ಯಾಭ್ಯಂತರ ಮಧ್ಯಮ ಕ್ರಿಯೆಗಳಲ್ಲಿ ಚೆನ್ನಾಗಿ ಪ್ರಯೋಗಿಸಲ್ಪಟ್ಟಾಗ ಜೀವನು (ಸುಖದುಃಖಗಳಲ್ಲಿ) ವಿಚಲಿತನಾಗುವುದಿಲ್ಲ.

**ಮಂ.ಶ್ಲೋ.॥ ಋಗ್ಭಿರೇತಂ ಯಜುರ್ಭಿರನ್ತರಿಕ್ಷಂ ಸಸಾಮಭಿರ್ಯತ್ತತ್ಕವಯೋ ವೇದಯನ್ತೇ, ತಮೋಂಕಾರೇಣೈ-ವಾಯತನೇನಾನ್ವೇತಿ ವಿದ್ವಾನ್ಯತ್ತಚ್ಛಾನ್ತಮಜರಮಮೃತಮಭಯಂ ಪರಂಚೇತಿ॥7 (59)**

ತಾ॥ ಋಕ್ಕುಗಳಿಂದ ಈ ಮನುಷ್ಯ ಲೋಕವನ್ನು, ಯಜುಸ್ಸುಗಳಿಂದ ಚಂದ್ರಲೋಕವನ್ನು, ಸಾಮವೇದದಿಂದ ಮೇಧಾವಿಗಳಾದವರು ಯಾವುದನ್ನು ಅರಿಯುತ್ತಾರೆಯೋ, ಅದನ್ನು ಬ್ರಹ್ಮ ಲೋಕದಲ್ಲಿ, ಓಂಕಾರ ಸ್ವರೂಪವನ್ನು, ಆಲಂಬನದಿಂದ ವಿದ್ವಾಂಸನು ಹೊಂದುತ್ತಿದ್ದಾನೆ. ಯಾವುದು ಶಾಂತವಾದುದಾಗಿಯೂ, ಅಜರವಾದುದಾಗಿಯೂ, ಅಮೃತವಾದುದಾಗಿಯೂ, ಭಯ-

ವಿಲ್ಲದುದಾಗಿಯೂ ಆದಂತಹ (ಇರುವಂತಹ) ಪರಬ್ರಹ್ಮ ಸ್ವರೂಪವನ್ನು ಹೊಂದಿದೆಯೋ, ಅದನ್ನು ಸ್ವಸ್ವರೂಪವಾಗಿ ಅನುಭವಿಸುತ್ತಾನೆ. ಓಂಕಾರವೇ ಆ ಪರಬ್ರಹ್ಮ. ಪರಬ್ರಹ್ಮವು ಶಾಂತವು, ಅಜರ, ಅಮೃತವು, ಅಭಯವು, ಪರವು ಎಂದು ಇಲ್ಲಿ ಅಭಿವರ್ಣಿಸಲಾಗಿದೆ. ವಾಕ್ಯಾಂತದಲ್ಲಿರುವ ಇತಿ ಪದವು, ಪ್ರಶ್ನೆಯ ಸಮಾಪ್ತಿಯನ್ನು ತಿಳಿಯಪಡಿಸುತ್ತಿದೆ.

## ಷಷ್ಠಃ ಪ್ರಶ್ನಃ

**ಮಂ.ಶ್ಲೋ.॥ ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ, ಭಗವನ್ ಹಿರಣ್ಯನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೇತ್ಯೈತಂ ಪ್ರಶ್ನಮಪೃಚ್ಛತ, ಷೋಡಶಕಲಂ ಭಾರದ್ವಾಜ ಪುರುಷಂ ವೇತ್ಥ, ತಮಹಂ ಕುಮಾರಮಬ್ರುವಂ ನಾಹಮಿಮಂ ವೇದ, ಯದ್ಯಹಮಿಮಮವೇದಿಷಂ ಕಥಂ ತೇ ನಾವಕ್ಷ್ಯಮಿತಿ, ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ ತಸ್ಮಾನ್ನಾರ್ಹಾಮ್ಯನೃತಂ ವಕ್ತುಮ್, ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ, ತಂ ತ್ವಾ ಪೃಚ್ಛಾಮಿ ಕ್ವಾಸೌ ಪುರುಷ ಇತಿ ॥ 1 (60)**

ತಾ॥ ಆನಂತರ ಭರದ್ವಾಜ ಗೋತ್ರದವನಾದ ಸುಕೇಶನು, ಪಿಪ್ಪಲಾದ ಮಹರ್ಷಿಯನ್ನು ಪ್ರಶ್ನಿಸಿದನು. ಪೂಜ್ಯ ಮಹರ್ಷಿಯೇ! ಹಿರಣ್ಯನಾಭನೆಂಬ ಹೆಸರುಳ್ಳ ಕೋಸಲರಾಜಪುತ್ರನು ನನ್ನನ್ನು ಸಮೀಪಿಸಿ, ಈ ಪ್ರಶ್ನೆಯನ್ನು ಕೇಳಿದನು "ಓ ಭಾರದ್ವಾಜಾ, ಹದಿನಾರು ಕಲೆಗಳುಳ್ಳ ಪುರುಷನನ್ನು ನೀನು ಕಂಡಿರುವೆಯಾ?" ಎಂದು. ಆ ರಾಜಕುಮಾರನೊಂದಿಗೆ, ನೀನು ಕೇಳಿದ ಪುರುಷನನ್ನು ನಾನು ಅರಿಯೆ ಎಂದು ಹೇಳಿದೆ. ಈ ಷೋಡಶಕಲೆ ಪುರುಷನನ್ನು ನಾನು ಕಂಡಿದ್ದೇ ಆದರೆ ನಿನಗೆ ಹೇಳದಿರುತ್ತಿದ್ದೆನೇ? ಯಾರು ಅಸತ್ಯವನ್ನು ನುಡಿಯುತ್ತಾರೋ ಅವರು ಸಮೂಲವಾಗಿ ನಾಶವಾಗುತ್ತಾರೆ. ಆದ್ದರಿಂದ ಅಸತ್ಯವನ್ನು ನುಡಿಯುವುದಕ್ಕೆ ನಾನು ಶಕ್ತನಲ್ಲ." ಎಂದು ಹೇಳಿದೆ. ಆ ರಾಜಕುಮಾರನು ಮೌನವಾಗಿ ರಥವನ್ನೇರಿ ಹೊರಟುಹೋದ. ಆ ಷೋಡಶಕಲಾತ್ಮಕ ಪುರುಷನನ್ನು ಕುರಿತು ತಮ್ಮನ್ನು ಕೇಳುತ್ತಿದ್ದೇನೆ. ಆ ಪುರುಷನೆಲ್ಲಿರುವನು?

**ಮಂ.ಶ್ಲೋ.॥ ತಸ್ಮೈ ಸ ಹೋವಾಚ; ಇಹೈವಾನ್ತಃ ಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವನ್ತೀತಿ ॥ 2 (61)**

ತಾ॥ ಓ ಸುಕೇಶಾ, ಯಾರಲ್ಲಿ (ಮುಂದೆ ಹೇಳಲಿರುವ) ಷೋಡಶಕಲೆಗಳು ಇರುತ್ತವೆಯೋ, ಆ ಪುರುಷನು ಇಲ್ಲಿ ನಿನ್ನ ದೇಹದಲ್ಲೇ ವಾಸವಾಗಿದ್ದಾನೆ. ಈ ವಿಷಯವನ್ನು ಪಿಪ್ಪಲಾದ ಮಹರ್ಷಿ ಭಾರದ್ವಾಜನಾದ ಸುಕೇಶನಿಗೆ ಸ್ಪಷ್ಟವಾಗಿ ಹೇಳಿದ. (ಷೋಡಶ ಕಲೆಗಳು ಪರಮಾತ್ಮನ ಉಪಾಧಿ ರೂಪಗಳು.)

**ಮಂ.ಶ್ಲೋ.॥ ಸ ಈಕ್ಷಾಂ ಚಕ್ರೇ; ಕಸ್ಮಿನ್ನಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ, ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ॥ 3 (62)**

ತಾ॥ ಆ ಪುರುಷನು (ಜೀವಾತ್ಮ) ಈ ರೀತಿಯಾಗಿ ಆಲೋಚಿಸಿದ. ಈ ದೇಹದಿಂದ ಯಾವುದು

ಹೋಗುತ್ತಿರುವಾಗ ನಾನು ಸಹ ಹೊರಟು ಹೋಗುತ್ತೇನೆ? ಯಾವ ಶಕ್ತಿಯು ದೇಹದಲ್ಲಿರುವಾಗ ನಾನು ಇರುತ್ತೇನೆ? ಆ ಶಕ್ತಿ ಯಾವುದು? ಎಂದು ಆಲೋಚಿಸುತ್ತಿದ್ದನು.

**ಮಂ.ಶ್ಲೋ.॥ ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀನ್ದ್ರಿಯಂ, ಮನಃ ಅನ್ನಮನ್ನಾದ್ವೀರ್ಯಂ ತಪೋ ಮನ್ತ್ರಾಃ ಕರ್ಮಲೋಕಾ ಲೋಕೇಷು ಚ ನಾಮ ಚ ॥ 4 (63)**

ತಾ॥ ಆ ಪರಬ್ರಹ್ಮನು ಪ್ರಾಣವನ್ನು ಸೃಷ್ಟಿ ಮಾಡಿದನು. (ಅಂತರಾತ್ಮವನ್ನು) ಸೃಜಿಸಿದನು. ಪ್ರಾಣದಿಂದ, ಶ್ರದ್ಧೆಯನ್ನು (ಆ ಶ್ರದ್ಧೆಯಿಂದ) ಆಕಾಶ, ವಾಯು, ತೇಜಸ್ಸು, ಜಲ, ಭೂಮಿ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆಂಬ ಹತ್ತನ್ನು, ಮನಸ್ಸು, ಅನ್ನ (ಅನ್ನದಿಂದ) ಬಲ, ತಪಸ್ಸು, ಮಂತ್ರ, ಕರ್ಮಲೋಕ, ಲೋಕಗಳಲ್ಲಿ ಹೆಸರುಗಳು ಇವುಗಳೆಲ್ಲವನ್ನೂ ಸೃಷ್ಟಿ ಮಾಡಿದ. (ಇವೇ ಷೋಡಶ ಕಲೆಗಳು).

**ಮಂ.ಶ್ಲೋ.॥ ಸ ಯಥೇಮಾ ಛನದ್ಯಃ ಸ್ಯನ್ದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛನ್ತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ ಏವಮೇ ವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛನ್ತಿ, ಭಿದ್ಯೇತೇ ತಾಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ ಸ ಏಷೋऽ-ಕಲೋऽಮೃತೋ ಭವತಿ ತದೇಷ ಶ್ಲೋಕಃ ॥ 5 (64)**

ತಾ॥ ಯಾವ ರೀತಿ ಸಮುದ್ರವೇ ತಮ್ಮ ಗಮ್ಯವೆಂದು ಪ್ರವಹಿಸುವ ನದಿಗಳು ಸಮುದ್ರವನ್ನು ಸೇರಿ ಲೀನವಾಗಿ ಬಿಡುತ್ತವೆಯೋ, ಆ ನದಿಗಳ ನಾಮರೂಪಗಳು ಯಾವ ರೀತಿಯಲ್ಲಿ ನಶಿಸಿ-ಹೋಗುತ್ತವೆಯೋ, ಸಮುದ್ರ ಮಾತ್ರವೇ ಉಳಿದುಬಿಡುತ್ತದೆಯೋ, ಅದೇ ರೀತಿಯಾಗಿ, ಎಲ್ಲವನ್ನೂ ನೋಡುತ್ತಿರುವ, ರೂಪವಂತನಾದ ಆ ಪುರುಷನಲ್ಲಿರುವ ಷೋಡಶಕಲೆಗಳು. ಈ ಪುರುಷನನ್ನೇ ಸೇರಿ ಕಾಣಿಸದೇ ಹೋಗುವುದು. ಈ ಕಲೆಗಳ ನಾಮರೂಪಗಳು ಇಲ್ಲದಂತಾಗುತ್ತದೆ. ಪರಮಾತ್ಮ ಎಂದು ಮಾತ್ರವೇ ಹೇಳಲಾಗುತ್ತದೆ. ಈ ಜೀವನು ಅಂತಹ ಪರಮೇಶ್ವರನನ್ನು ತಿಳಿದುಕೊಂಡವನಾಗಿ, ಕಲೆಗಳ ರೂಪದ ಶರೀರದಿಂದ ವಿಮುಕ್ತನಾಗಿ ಅಮರನಾಗುತ್ತಾನೆ. ಈ ವಿಷಯವನ್ನೇ ಮುಂದಿನ ಮಂತ್ರ ಹೇಳುತ್ತಿದೆ.

**ಮಂ.ಶ್ಲೋ.॥ ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ । ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥ 6 (65)**

ತಾ॥ ರಥ (ಚಕ್ರ)ಗಳಲ್ಲಿನ ಅರೆಗಳಂತೆ ಸಮಸ್ತ ಕಲೆಗಳು ಯಾವ ಪುರುಷನಲ್ಲಿ ನೆಲೆಗೊಂಡಿ-ರುತ್ತವೆಯೋ, ತಿಳಿಯುವಂತಹ (ಆತ್ಮವನ್ನು) ಆ ಪುರುಷನನ್ನು ತಿಳಿದುಕೊಳ್ಳಬೇಕು. ನಿಮ್ಮನ್ನು ಮೃತ್ಯುವು ಬಾಧಿಸಲಾರದು.

**ಮಂ.ಶ್ಲೋ.॥ ತಾನ್ಹೋವಾಚೈತಾವದೇವಾ ಹ ಮೇತತ್ಪರಂ ಬ್ರಹ್ಮ ವೇದ ನಾತಃ ಪರಮಸ್ತೀತಿ ॥ 7(66)**

ತಾ॥ ಪಿಪ್ಪಲಾದ ಮಹರ್ಷಿಯು ಸುಕೇಶಾದಿ ಶಿಷ್ಯರನ್ನು ಉದ್ದೇಶಿಸಿ ಹೀಗೆ ಹೇಳಿದರು. "ನಾನು ಈ ಪರಬ್ರಹ್ಮನನ್ನು ಕುರಿತು ತಿಳಿದುಕೊಂಡಿದ್ದೇನೆ. ಇದಕ್ಕೆ ಮೀರಿದ ಸೂಕ್ಷ್ಮ ವಸ್ತು ಮತ್ತೊಂದು ಎಲ್ಲಿಯೂ ಇಲ್ಲ" ಎಂದು ಹೇಳಿದರು.

ಮಂ.ಶ್ಲೋ.॥ ತೇ ತಮರ್ಚಯನ್ತಸ್ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರಯಸೀತಿ । ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ॥ 8 (67)

ತಾ॥ ಸುಕೇಶಾದಿ ಆ ಶಿಷ್ಯರು, ಪಿಪ್ಪಲಾದ ಮಹರ್ಷಿಯನ್ನು ಅರ್ಚಿಸಿ (ಪೂಜಿಸಿ) "ನೀನೇ ನಮಗೆ ತಂದೆ, ರಕ್ಷಕ" ಎಂದು ಹೇಳಿದರು. ಬ್ರಹ್ಮವಿದ್ಯಾ ಸಂಪ್ರದಾಯಕರ್ತರಾದ ಪರಮ ಋಷಿಗಳಿಗೆ ನಮಸ್ಕಾರ, ಬ್ರಹ್ಮ ವಿದ್ಯಾ ಸಂಪ್ರದಾಯಕರ್ತರಾದ ಪರಮ ಋಷಿಗಳಿಗೆ ನಮಸ್ಕಾರ ಎಂದು ಪ್ರಾರ್ಥನೆ ಸಲ್ಲಿಸಿದರು.(ಪ್ರಶ್ನೋಪನಿಷತ್ತು ಸಮಾಪ್ತಿ)

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋಃ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋಃ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ



## ಮುಂಡಕೋಪನಿಷತ್ - 5

(ಅಥರ್ವ ವೇದಾಂತರ್ಗತ)

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿ ರ್ಯಜತ್ರಾಃ, ಸ್ಥಿರೈ ರಂಗೈ ಸ್ತುಷ್ಟುವಾರ್ಗಂಸ ಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿನ ಇಂದ್ರೋಃ ವೃದ್ಧಶ್ರವಾಃ । 'ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋಃ ಬೃಹಸ್ಪತಿ ರದ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ

## ಪ್ರಥಮ ಮುಂಡಕ – ಪ್ರಥಮಃ ಖಂಡಃ

ಮಂ.ಶ್ಲೋ.॥ ಓಂ ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ ವಿಶ್ವಸ್ಯಕರ್ತಾ ಭುವನಸ್ಯಗೋಪ್ತಾ, ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮ್ ಅಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ॥ 1

ತಾ॥ ಸೃಷ್ಟಿಕರ್ತನಾದ ಬ್ರಹ್ಮನು, ದೇವತೆಗಳಲ್ಲಿ (ಶ್ರೇಷ್ಠನಾಗಿ) ಮೊದಲನೆಯವನಾಗಿ ಆವಿರ್ಭವಿಸಿದ. ಆ ಬ್ರಹ್ಮನು ಪ್ರಪಂಚಕ್ಕೆ ಕರ್ತ. (ಪ್ರಪಂಚದ ಸೃಷ್ಟಿಗೆ ಕಾರಣನಾದವನು). ಪ್ರಪಂಚವನ್ನು

ರಕ್ಷಿಸುವವನು. ಆ ಬ್ರಹ್ಮನು ಸಕಲವಿದ್ಯೆಗಳಿಗೂ ಮೂಲಾಧಾರವಾದ ಬ್ರಹ್ಮವಿದ್ಯೆಯನ್ನು ಜ್ಯೇಷ್ಠಪುತ್ರನಾದ ಅಥರ್ವನಿಗೆ ಉಪದೇಶಿಸಿದ.

**ಮಂ.ಶ್ಲೋ.॥ ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾಽಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಮ್ ।**
**ಸ ಭಾರದ್ವಾಜಾಯ ಸತ್ಯವಾಹಾಯ ಪ್ರಾಹ ಭಾರದ್ವಾಜೋಂಗಿರಸೇ ಪರಾವರಾಮ್ ॥ 2**

ತಾ॥ ಆ ಬ್ರಹ್ಮ ಯಾವ ಬ್ರಹ್ಮವಿದ್ಯೆಯನ್ನು ಅಥರ್ವರಿಗೆ ಬೋಧಿಸಿದನೋ, ಆ ಬ್ರಹ್ಮವಿದ್ಯೆಯನ್ನು ಅಥರ್ವರು ಮೊಟ್ಟ ಮೊದಲಿಗೆ ಅಂಗೀರನಿಗೆ ಬೋಧಿಸಿದರು. ಆ ಅಂಗೀರನು, ಭರದ್ವಾಜ ಗೋತ್ರದವನಾದ ಸತ್ಯವಹನಿಗೆ ಬೋಧಿಸಿದ. ಆ ಸತ್ಯವಹನು ಮೇಲಿನವರಿಂದ ಕ್ರಮವಾಗಿ ಲಭ್ಯವಾದ ಪರಗಳನ್ನು ಅಪರಗಳನ್ನು ಒಳಗೊಂಡ ಸಮಸ್ತ ವಿದ್ಯೆಗಳಿಗೆ ಸಂಬಂಧಿಸಿದ ಈ ಬ್ರಹ್ಮ ವಿದ್ಯೆಯನ್ನು ಅಂಗೀ-ರಸನಿಗೆ ಉಪದೇಶಿಸಿದನು. (ಬ್ರಹ್ಮ, ಅಥರ್ವ-ಅಂಗೀರ-ಸತ್ಯವಹ-ಅಂಗೀರಸ ಇದು ಪರಂಪರೆ)

**ಮಂ.ಶ್ಲೋ.॥ ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ ।**
**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥ 3**

ತಾ॥ ಗೃಹಸ್ಥನಾದ ಶೌನಕ ಆಂಗೀರಸನನ್ನು ಶಾಸ್ತ್ರಪ್ರಕಾರವಾಗಿ ಸಮೀಪಿಸಿ ಪೂಜಿಸಿ ಪ್ರಶ್ನಿಸಿದ "ಹೇ ಭಗವನ್, ಯಾವುದನ್ನು ತಿಳಿದುಕೊಂಡರೆ ಎಲ್ಲವನ್ನೂ ತಿಳಿದುಕೊಂಡಂತಾಗುತ್ತದೆ? ಅದು ಯಾವುದು?" ಎಂದು ಕೇಳಿದ.

**ಮಂ.ಶ್ಲೋ.॥ ತಸ್ಮೈ ಸ ಹೋವಾಚ - ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್ಬ್ರಹ್ಮವಿದೋ ವದನ್ತಿ ಪರಾಚೈವಾಪರಾ ಚ ॥ 4**

ತಾ॥ ಆ ಶೌನಕನಿಗೆ ಆಂಗೀರಸನು ಹೀಗೆ ಹೇಳಿದ: ಪರವಿದ್ಯೆ, ಅಪರವಿದ್ಯೆ ಎಂದು ಎರಡು ವಿದ್ಯೆಗಳನ್ನು ತಿಳಿಯಬೇಕಾಗಿದೆಯೆಂದು ಬ್ರಹ್ಮಜ್ಞಾನಿಗಳು ಹೇಳುತ್ತಿದ್ದಾರೆ.

**ಮಂ.ಶ್ಲೋ.॥ ತತ್ರಾಽಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವ ವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛನ್ದೋ ಜ್ಯೋತಿಷಮಿತಿ, ಅಥ ಪರಾ ಯಯಾ ತದಕ್ಷರ-ಮಧಿಗಮ್ಯತೇ ॥ 5**

ತಾ॥ ಆ ವಿದ್ಯೆಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷ, ಕಲ್ಪ, ವ್ಯಾಕರಣ, ನಿರುಕ್ತ ಛಂದಸ್ಸು, ಜ್ಯೋತಿಷ್ಯ, ಇವೆಲ್ಲವೂ ಸೇರಿ ಅಪರ ವಿದ್ಯೆ, ಯಾವ ವಿದ್ಯೆಯಿಂದ ಅಕ್ಷರನಾದ ಪರಮಾತ್ಮನ ಸ್ವರೂಪವು ಪ್ರಾಪ್ತವಾಗುವುದೋ ಅದು (ಪರವಿದ್ಯೆ) ಬ್ರಹ್ಮವಿದ್ಯೆ.

**ಮಂ.ಶ್ಲೋ.॥ ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಮ್, ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ ॥ 6**

ತಾ॥ ಈ ಪರಬ್ರಹ್ಮತತ್ತ್ವವು, ದರ್ಶಿಸುವುದಕ್ಕಾಗಲಿ, ಗ್ರಹಿಸುವುದಕ್ಕಾಗಲಿ ಸಾಧ್ಯವಾಗದ್ದು, ಸಂಬಂಧವಿಲ್ಲದ್ದು. ಬಣ್ಣ ರೂಪಗಳಾಗಲಿ, ಕಣ್ಣು ಕಿವಿಗಳಾಗಲಿ, ಕೈಕಾಲುಗಳಾಗಲಿ ಇಲ್ಲದಿರು-

ವಂತಹುದು. ನಿತ್ಯವಾದುದು. ಸರ್ವ ವ್ಯಾಪಕವಾದುದು, ಸರ್ವಗತವಾದುದು, ಅತ್ಯಂತ ಸೂಕ್ಷ್ಮವು, ಅವ್ಯಯವು, ಸಮಸ್ತಭೂತಗಳ ಉತ್ಪತ್ತಿಸ್ಥಾನವು ಆಗಿರುವುದು. ಬಲ್ಲವರಾದ ಬ್ರಹ್ಮಜ್ಞಾನಿಗಳು ಎಲ್ಲೆಡೆ ಆ ಆತ್ಮವನ್ನೇ ದರ್ಶಿಸುವರು.

**ಮಂ.ಶ್ಲೋ.॥ ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವನ್ತಿ।**
**ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾ ಕ್ಷರಾತ್ಸಂಭವತೀಹ ವಿಶ್ವಮ್॥ 7**

ತಾ॥ ಜೇಡರ ಹುಳು, ಹೇಗೆ ಎಳೆಗಳನ್ನು ಸೃಷ್ಟಿಸುವುದೋ, ಮತ್ತೆ ಒಳಕ್ಕೆ ಯಾವ ರೀತಿ ಒಳಕ್ಕೆ ಎಳೆದು ಕೊಳ್ಳುತ್ತದೆಯೋ, ಅದೇ ರೀತಿಯಲ್ಲಿ ಭೂಮಿಯಲ್ಲಿ ಔಷಧಿಗಳು ಹುಟ್ಟುತ್ತವೆ. ಅದೇ ರೀತಿಯಾಗಿ ಪುರುಷರಿಗೆ ಕೇಶಗಳು, ರೋಮಗಳು ಹುಟ್ಟುತ್ತವೆ. ಹಾಗೆಯೇ ಅಕ್ಷರ ಬ್ರಹ್ಮದಿಂದ ಈ ಸರ್ವಜಗತ್ತು ಹುಟ್ಟುತ್ತದೆ. (ಕೇಶಗಳು ತಲೆಯ ಮೇಲಿರುತ್ತವೆ. ರೋಮಗಳು ಶರೀರದ ಮೇಲಿರುತ್ತವೆ.)

**ಮಂ.ಶ್ಲೋ.॥ ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಮ್ ॥ 8**

ತಾ॥ ಓ ಶೌನಕಾ! ಅಕ್ಷರ ಬ್ರಹ್ಮವು ಜ್ಞಾನ ತಪಸ್ಸಿನೊಂದಿಗೆ ಅಭಿವೃದ್ಧಿಯಾಗುತ್ತದೆ. ಆ ಬ್ರಹ್ಮದಿಂದ, ಆವ್ಯಾಕೃತವು ಹುಟ್ಟುತ್ತದೆ. ಅವ್ಯಾಕೃತ (ಅನ್ನ)ದಿಂದ ಹಿರಣ್ಯಗರ್ಭನು (ಪ್ರಾಣ) ಮನಸ್ಸು, ಆಕಾಶಾದಿ ಪಂಚಭೂತಗಳು, ಸಪ್ತಲೋಕಗಳು, ಕರ್ಮಗಳು, ಕರ್ಮಫಲಗಳು ಹುಟ್ಟುತ್ತವೆ.

**ಮಂ.ಶ್ಲೋ.॥ ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ**
**ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ ॥ 9**

ತಾ॥ ತಾನು ಬದ್ಧನಾಗಲಿರುವ (ಸ್ವೀಯ) ಸಂಕಲ್ಪವೇ ಜ್ಞಾನಸ್ವರೂಪವಾದುದರಿಂದ, ಯಾರು, ಸಮಸ್ತ ಜಗತ್ತಿನ ಪ್ರವರ್ತನೆಯನ್ನು ತಿಳಿದುಕೊಳ್ಳಲು, ಪ್ರತಿಯೊಂದು ಸ್ಥಳದಲ್ಲೂ, ಪ್ರತಿ ಕ್ಷಣವೂ ಜರುಗುತ್ತಿರುವ ಪ್ರತಿ ವಿಷಯವನ್ನು ಗ್ರಹಿಸುತ್ತಿರುವನೋ, ಅಂತಹ ಪರಮಾತ್ಮನಿಂದ ಈ ಸೃಷ್ಟಿಕರ್ತ-ನಾದ ಬ್ರಹ್ಮ, ಈ ನಾಮರೂಪಾತ್ಮಕವಾದ ಸಮಸ್ತ ವಿಶ್ವ. ಅನ್ನಾದಿ ಆಹಾರಗಳು ಮೊದಲಾದವುಗಳೆಲ್ಲವೂ ಉದ್ಭವಿಸಿದವು. (ಸಾಮಾನ್ಯ ವೃತ್ತಿಯಲ್ಲಿ ಸರ್ವಜ್ಞರು, ವಿಶೇಷ ಜ್ಞಾನದಿಂದ ಸರ್ವವೇತ್ತ ಅಂತಹವನಿಗೆ ಜ್ಞಾನವೇ ತಪಸ್ಸು, ಆ ಕಾರಣದಿಂದ ಜಗತ್ತು ವೇದ ಮೊದಲಾದವುಗಳು ಉದ್ಭವಿಸಿದವು)

## ಪ್ರಥಮ ಮುಂಡಕ – ದ್ವಿತೀಯಃ ಖಂಡಃ

**ಮಂ.ಶ್ಲೋ.॥ ಓಂ ತದೇತತ್ಸತ್ಯಂ, ಮನ್ತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂ ಸ್ತಾನಿ**
**ತ್ರೇತಾಯಾಂ ಬಹುಧಾ ಸನ್ತತಾನಿ ತಾನ್ಯಾಚರಥ ನಿಯತಂ ಸತ್ಯಕಾಮಾ**
**ಏಷ ವಃ ಪನ್ಥಾಃ ಸುಕೃತಸ್ಯ ಲೋಕೇ ॥ 1 (10)**

ತಾ॥ ಮಹಾ ವಿದ್ವಾಂಸರಾದ ವಸಿಷ್ಠಾದಿ ಋಷಿಗಳು, ಋಗ್ವೇದಾದಿ ಮಂತ್ರಗಳಲ್ಲಿ ಯಾವ ಯಜ್ಞ ಕರ್ಮಗಳನ್ನು ದರ್ಶಿಸಿದರೋ, ಅವೆಲ್ಲವೂ ಸತ್ಯವಾದವುಗಳು. ಆ ಕರ್ಮಗಳು ಋಗ್ವೇದಕ್ಕೆ

ಸಂಬಂಧಿಸಿದ ಹೌತ್ರ, ಯಜುರ್ವೇದಕ್ಕೆ ಸಂಬಂಧಿಸಿದ ಅಧ್ವರ್ಯವು, ಸಾಮವೇದಕ್ಕೆ ಸಂಬಂಧಿಸಿದ ಔದ್ಗಾತ್ರವೆನ್ನುವ ಮೂರನ್ನು ಒಳಗೊಂಡಿವೆ. ತ್ರೇತಾಯುಗದಲ್ಲಿ ಅನೇಕ ಪ್ರಕಾರಗಳಲ್ಲಿ ಪ್ರಸಿದ್ಧಿಗೊಂಡವು. ಸತ್ಯಕರ್ಮ ಫಲದಲ್ಲಿ ಕೋರಿಕೆಯುಳ್ಳ ನೀವು ತಪ್ಪದೆ ಆ ಕರ್ಮಗಳನ್ನು ಆಚರಿಸಿ. ಇದು ನಿಮಗೆ ಸತ್ಕರ್ಮದ ಫಲದ ವಿಷಯದಲ್ಲಿ ಉತ್ತಮವಾದ ಮಾರ್ಗ.

**ಮಂ.ಶ್ಲೋ.॥ ಯದಾ ಲೇಲಾಯತೇ ಹ್ಯರ್ಚಿಸ್ಸಮಿದ್ಧೇ ಹವ್ಯವಾಹನೇ**
**ತದಾಜ್ಯಭಾಗಾವನ್ತರೇಣಾಹುತೀಃ ಪ್ರತಿಪಾದಯೇಚ್ಛ್ರದ್ಧಯಾ ಹುತಮ್ ॥ 2 (11)**

ತಾ॥ ಸಮಿತ್ತುಗಳಿಂದ ಜ್ವಲಿಸಲಾದ ಅಗ್ನಿಯಲ್ಲಿ ಯಾವಾಗ ಜ್ವಾಲೆಗಳು ಮೇಲಕ್ಕೇರುತ್ತವೆಯೋ ಆಗ, ಆಜ್ಯ ಭಾಗಗಳ ಮಧ್ಯದಲ್ಲಿ ಆಹುತಿಗಳನ್ನು ಹೋಮ ಮಾಡಬೇಕು. ಹೀಗೆ ಮಾಡುವುದನ್ನು ಶ್ರದ್ಧೆಯಿಂದ ಹೋಮ ಮಾಡುವುದು ಎಂದು ಹೇಳುತ್ತಾರೆ.

**ಮಂ.ಶ್ಲೋ.॥ ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸಮಚಾತುರ್ಮಾಸ್ಯಮನಾಗ್ರಯಣ**
**-ಮತಿಥಿವರ್ಜಿತಂ ಚ, ಅಹುತಮವೈಶ್ವದೇವಮವಿಧಿನಾ ಹುತ ಮಾ ಸಪ್ತಮಾಂ**
**ಸ್ತಸ್ಯಲೋಕಾನ್ ಹಿನಸ್ತಿ ॥ 3 (12)**

ತಾ॥ ಓ ಶೌನಕಾ! ಯಾರ ಅಗ್ನಿಹೋತ್ರವು ದರ್ಶೇಷ್ಟಿಯಲ್ಲದ್ದೋ ಪೌರ್ಣಮಾಸ್ಯೆಯ ಕರ್ಮವನ್ನೊಳಗೊಂಡಿರುವುದಿಲ್ಲವೋ, ಅತಿಥಿಗಳಿಲ್ಲದ್ದೋ, ಚಾತುರ್ಮಾಸ್ಯವಲ್ಲದ್ದೋ, ಆಗ್ರಯಣವೆಂಬ ಕರ್ಮವಿಲ್ಲದ್ದೋ, ಯಥಾ ಸಮಯದಲ್ಲಿ ಹೋಮ ಇಲ್ಲದಾಗಿರುವುದೋ, ವೈಶ್ವದೇವವಿಲ್ಲದ್ದೋ, ಶಾಸ್ತ್ರ ವಿರುದ್ಧವಾಗಿ ಮಾಡಿರುವಂತಹುದೋ, ಅಂತಹ ಯಜ್ಞವು ಅವನ (ಭೂರಾದಿಸಪ್ತಲೋಕಗಳನ್ನು) ಏಳು ತಲೆಮಾರುಗಳನ್ನು ಬಾಧೆಗೀಡುಮಾಡುತ್ತದೆ.

**ಮಂ.ಶ್ಲೋ.॥ ಕಾಳೀ ಕಾರಾಳೀ ಚ ಮನೋಜವಾ ಚ, ಸುಲೋಹಿತಾ ಯಾ ಚ ಸುಧೂಮ್ರವರ್ಣಾ,**
**ಸ್ಫುಲಿಙ್ಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತಜಿಹ್ವಾಃ ॥ 4 (13)**

ತಾ॥ ಕಾಳ, ಕರಾಳ, ಮನೋಜವ, ಸುಲೋಹಿತ, ಸುಧೂಮ್ರವರ್ಣ, ಸ್ಫುಲಿಂಗಿನಿ, ಕಾಂತಿವಂತವಾದ ವಿಶ್ವರುಚಿ ಎಂದು ಅಗ್ನಿಗೆ ಹವಿರಾಹುತಿಗಳನ್ನು ಸ್ವೀಕರಿಸುವ ಏಳು ನಾಲಗೆಗಳಿವೆ.

**ಮಂ.ಶ್ಲೋ.॥ ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾ ಹುತಯೋ ಹ್ಯಾದದಾಯಾನ್,**
**ತಂ ನಯನ್ತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂಪತಿರೇಕೋಽಧಿವಾಸಃ॥**
**5 (14)**

ತಾ॥ ಯಾವ ಹೋತೃ (ಯಜಮಾನ) ಪ್ರಕಾಶಿಸುತ್ತಿರುವಂತಹ ಅಗ್ನಿ ಜ್ವಾಲೆಗಳಲ್ಲಿ ಸಕಾಲದಲ್ಲಿ ಹೋಮವನ್ನು ಮಾಡುತ್ತಾನೋ ಆ ಯಜಮಾನನಿಂದ ಈ ಆಹುತಿಗಳನ್ನು ಗ್ರಹಿಸಿ (ಸ್ವೀಕರಿಸಿ) ದಂತಹುಗಳಾಗಿ ಸೂರ್ಯರಶ್ಮಿರೂಪದಲ್ಲಿ ಸ್ವರ್ಗದಲ್ಲಿ ದೇವೇಂದ್ರನಿರುವ (ವಾಸವಾಗಿರುವ) ಸ್ಥಾನಕ್ಕೆ ತಲುಪಿಸುವುದು.

**ಮಂ.ಶ್ಲೋ.॥ ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹನ್ತಿ,**
**ಪ್ರಿಯಾಂ ವಾಚಮಭಿವದನ್ತ್ಯೋಽರ್ಚಯನ್ತ್ಯ ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ॥**
**6 (15)**

ತಾ॥ "ಇದೇ ನಿನ್ನ ಪುಣ್ಯಕರ್ಮದಿಂದ ಪ್ರಾಪ್ತವಾದ ಬ್ರಹ್ಮಲೋಕ"ವೆಂದು ಆ ಯಜಮಾನನನ್ನು ಸ್ತುತಿಸಿ ಈ ಆಹುತಿಗಳು "ಹೀಗೆ ಬನ್ನಿ" "ಹೀಗೆ ಬನ್ನಿ" ಎಂದು ಆತನನ್ನು ಸೂರ್ಯ ರಶ್ಮಿಯ ಮೂಲಕ ಆ ಲೋಕಕ್ಕೆ ಕೊಂಡೊಯ್ಯುವುವು.

**ಮಂ.ಶ್ಲೋ.॥ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ।**
**ಏತಚ್ಛ್ರೇಯೋ ಯೇಽಭಿನನ್ದನ್ತಿ ಮೂಢಾ ಜರಾಮೃತ್ಯುಂ ತೇ ಪುನರೇವಾಪಿಯನ್ತಿ ॥**
**7 (16)**

ತಾ॥ ಅಷ್ಟಾದಶಗಳಾದ ಅತ್ಯಲ್ಪ ಕರ್ಮಗಳು ಯಾವುದನ್ನು ಭರಿಸುತ್ತಿರುವುದೋ ಅಂತಹ ಯಜ್ಞಸ್ವರೂಪವಾದ ಈ ನಾವೆ ದೃಢವಾದುದಲ್ಲ. ಆದ್ದರಿಂದ ನಂಬತಕ್ಕದ್ದಲ್ಲ. ಏಕೆಂದರೆ ಮೂಢಾತ್ಮರು ಇದನ್ನೇ ತಮ್ಮ ಪರಮಾಧಾರವಾಗಿ ನಂಬಿ ಮತ್ತೆ ಈ ಜನನ ಮರಣ ರೂಪ ಸಂಸಾರಸಾಗರದಲ್ಲಿ ಬಿದ್ದುಬಿಡುತ್ತಿದ್ದಾರೆ.

**ಮಂ.ಶ್ಲೋ.॥ ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ।**
**ಜಙ್ಘನ್ಯಮಾನಾಃ ಪರಿಯನ್ತಿ ಮೂಢಾ ಅನ್ಧೇನೈವ ನೀಯಮಾನಾ ಯಥಾನ್ಧಾಃ ॥ 8 (17)**

ತಾ॥ ಅವಿದ್ಯೆಯ ಮಧ್ಯದಲ್ಲಿ ಮುಳುಗಿದಂತಹವರಾಗಿ ಪಂಡಿತರಲ್ಲದವರು ಹೆಚ್ಚುಹೆಚ್ಚಾಗಿ ಹತರಾಗಿ ಸಂಸಾರವೆಂಬ ಅಡವಿಯಲ್ಲಿ ಸುತ್ತುತ್ತಿರುತ್ತಾರೆ. ಅದು ಹೇಗೆಂದರೆ ಕುರುಡನನ್ನು ಹಿಂಬಾಲಿಸುವ ಕುರುಡನಂತೆ ಇರುತ್ತದೆ.

**ಮಂ.ಶ್ಲೋ.॥ ಅವಿದ್ಯಾಯಾಂ ಬಹುಧಾ ವರ್ತಮಾನಾಃ ವಯಂ ಕೃತಾರ್ಥಾ ಇತ್ಯಭಿಮನ್ಯನ್ತಿ ಬಾಲಾಃ।**
**ಯತ್ಕರ್ಮಿಣೋ ನಪ್ರವೇದಯನ್ತಿ ರಾಗಾತ್ ತೇನಾಽಽತುರಾಃ ಕ್ಷೀಣಲೋಕಾಶ್ಚ್ಯವನ್ತೇ ॥ 9 (18)**

ತಾ॥ ಈ ಪಂಡಿತರಲ್ಲದವರು ಹೀಗೆ ಅವಿದ್ಯೆಯಲ್ಲಿ ಮುಳುಗಿದವರಾಗಿ ತಾವು ಕೃತಾರ್ಥ-ರಾದೆವೆಂದು ಚಿಕ್ಕಮಕ್ಕಳ ಹಾಗೆ ಭಾವಿಸುತ್ತಿರುತ್ತಾರೆ. ಆದರೆ ಮೋಹರಾಗದಲ್ಲಿ ಕೂಡಿದವರಾದುದರಿಂದ ಅವರು ಆ ಪರಮಜ್ಞಾನವನ್ನು ಹೊಂದಲಾಗದೆ ಹೋಗುವರಲ್ಲದೆ ತಮ್ಮ ಪುಣ್ಯ ಕರ್ಮ ಫಲಭೋಗಗಳು ಕ್ಷೀಣಿಸಲು ಮತ್ತೆ ಅಧೋಗತಿಯನ್ನು ಹೊಂದುತ್ತಾರೆ.

**ಮಂ.ಶ್ಲೋ.॥ ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯನ್ತೇ ಪ್ರಮೂಢಾಃ,**
**ನಾಕಸ್ಯ ಪೃಷ್ಠೇತೇ ಸುಕೃತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶನ್ತಿ ॥**
**10 (19)**

ತಾ॥ ಸಂಸಾರಾಸಕ್ತಿಯಿರುವ ಮೂಢರು ಯಾಗಾದಿ ಶ್ರೌತಕರ್ಮಗಳನ್ನು (ಇಷ್ಟಾಇಷ್ಟ) ವಾಪೀಕೂಪತಟಾಕಾದಿ (ಕೆರೆ, ಬಾವಿ, ಸರೋವರಗಳಂತಹ) ಸ್ಮಾರ್ತಕರ್ಮಗಳನ್ನು (ಪೂರ್ತ)

ಎಲ್ಲದಕ್ಕಿಂತ ಉತ್ತಮ ಕರ್ಮಗಳಾಗಿ ಭಾವಿಸುತ್ತಾ, ಆತ್ಮಜ್ಞಾನವೆಂಬ ಉತ್ತಮ ಶ್ರೇಯಸಾಧನವನ್ನು ತಿಳಿಯಲಾರದವರಾಗಿದ್ದಾರೆ. ಅಂತಹವರು ಭೋಗಸ್ಥಾನವಾದ ಸ್ವರ್ಗದಲ್ಲಿ, ಕರ್ಮಫಲಗಳನ್ನು ಅನುಭವಿಸಿ, ಈ ಲೋಕದಲ್ಲಿ ಮನುಷ್ಯ ಜನ್ಮವನ್ನಾಗಲೀ, ಅದಕ್ಕಿಂತ ನೀಚ ಜನ್ಮವನ್ನಾಗಲೀ ಹೊಂದುತ್ತಿದ್ದಾರೆ.

ಮಂ.ಶ್ಲೋ.॥ **ತಪಃ ಶ್ರದ್ಧೇ ಯೇ ಹ್ಯುಪವಸನ್ತ್ಯರಣ್ಯೇ ಶಾನ್ತಾ ವಿದ್ವಾಂಸೋ ಭೈಕ್ಷಚರ್ಯಾಂ ಚರನ್ತಃ,**
**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾನ್ತಿ ಯತ್ರಾಮೃತಸ್ಸ ಪುರುಷೋಹ್ಯವ್ಯಯಾತ್ಮಾ॥**
**11 (20)**

ತಾ॥ ಯಾವ ವಿದ್ವಾಂಸರು ಭಿಕ್ಷಾಟನೆಯನ್ನು ಮಾಡುವವರಾಗಿ ತಪಸ್ಸಂಪನ್ನರಾಗಿ ಅರಣ್ಯದಲ್ಲಿ ವಾಸವಾಗಿರುತ್ತಾರೋ, ಅಂತಹ ವಾನಪ್ರಸ್ಥರು, ಸಂನ್ಯಾಸಿಗಳು, ಶಾಂತಚಿತ್ತರು (ಜ್ಞಾನವಂತರಾದ ಗೃಹಸ್ಥರು ಸಹ) ಪುಣ್ಯ ಪಾಪ ವಿಮುಕ್ತರಾಗಿ, ಸೂರ್ಯನ ಮೂಲಕ (ಉತ್ತರಾಯಣ ಮಾರ್ಗದ ಮೂಲಕ) ಅಮೃತನಾದಂತಹ, ಅವ್ಯಯನಾಗಿರುವಂತಹ ಹಿರಣ್ಯಗರ್ಭನಿರುವ ಲೋಕಕ್ಕೆ ತೆರಳುವರು.

ಮಂ.ಶ್ಲೋ.॥ **ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ।**
**ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥ 12 (21)**

ತಾ॥ ಬ್ರಹ್ಮಜ್ಞಾನಿಯು ಕರ್ಮದಿಂದ ಪ್ರಾಪ್ತವಾಗುವ ಲೋಕಗಳಲ್ಲಿನ ತಾರತಮ್ಯವನ್ನು ಪರೀಕ್ಷಿಸಿ ತಿಳಿದುಕೊಂಡು, ಮೋಕ್ಷವು ಕರ್ಮದಿಂದ ಲಭಿಸುವುದಿಲ್ಲವೆಂದು ಗ್ರಹಿಸಿ, ವೈರಾಗ್ಯವನ್ನು ತಳೆದು, ಬ್ರಹ್ಮವನ್ನು ತಿಳಿದುಕೊಳ್ಳುವುದಕ್ಕಾಗಿ, ಸಮಿತ್ತುಗಳನ್ನು ಕೈಯಲ್ಲಿ ಹಿಡಿದುಕೊಂಡವರಾಗಿ ಶ್ರೋತ್ರೀಯನಾಗಿರುವ, ಬ್ರಹ್ಮನಿಷ್ಠನಾದ ಗುರುವನ್ನು ಆಶ್ರಯಿಸಬೇಕು.

ಮಂ.ಶ್ಲೋ.॥ **ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾನ್ತಚಿತ್ತಾಯ ಶಮಾನ್ವಿತಾಯ,**
**ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್॥**
**12 (22)**

ತಾ॥ ಈ ಪ್ರಕಾರವಾಗಿ ಗುರುವನ್ನು ಸಮೀಪಿಸಿದಂತಹ ಶಾಂತ, ಶಮದಮಾದಿ ಸದ್ಗುಣಗಳನ್ನು ಹೊಂದಿದ ಶಿಷ್ಯನಿಗೆ ಆ ಗುರುವು ಅಕ್ಷರವೂ, ಸತ್ಯವೂ, ಆದ ಪರಮಾತ್ಮನನ್ನು ತಿಳಿದುಕೊಳ್ಳುವ ಸಾಧನವಾದ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು. (ಪ್ರಥಮ ಮುಂಡಕ ಸಮಾಪ್ತಿ) (ಅಂಗೀರಸನು ಶೌನಕನು ಹೀಗೆ ಬೋಧಿಸಿದನು.)

## ದ್ವಿತೀಯಮುಂಡಕ – ಪ್ರಥಮಃ ಖಂಡಃ

ಮಂ.ಶ್ಲೋ.॥ **ಓಂ ತದೇತತ್ಸತ್ಯಂ – ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ**
**ಪ್ರಭವನ್ತೇ ಸರೂಪಾಃ, ತಥಾಽಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯನ್ತೇ ತತ್ರ ಚೈವಾಪಿ-**
**ಯನ್ತಿ॥ 1(23)**

ತಾ॥ ಓ ಶೌನಕಾ! ಈ ಪರವಿದ್ಯೆಗೆ ಸಂಬಂಧಿಸುದುದೇ ಪರಮಾರ್ಥ ಸತ್ಯ. ಪ್ರಕಾಶಿಸಿ

ಪ್ರಜ್ವಲಿಸು-ತ್ತಿರುವ ಅಗ್ನಿಯಿಂದ, ಆ ಅಗ್ನಿಗೆ ಸಮಾನರೂಪವುಳ್ಳ ಬೆಂಕಿಯ ಕಿಡಿಗಳು ಸಾವಿರ ಸಂಖ್ಯೆಯಲ್ಲಿ ಹೇಗೆ ಹುಟ್ಟುತ್ತವೋ ಅದೇ ರೀತಿಯಾಗಿ ಅಕ್ಷರದಿಂದ ಅನೇಕ ವಿಧವಾದ ಜೀವಿಗಳು ಜನಿಸುತ್ತಿದ್ದಾರೆ. ಆ ಅಕ್ಷರ ಪರಬ್ರಹ್ಮದಲ್ಲೇ ಲೀನವಾಗುತ್ತಿದ್ದಾರೆ.

**ಮಂ.ಶ್ಲೋ.॥ ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯನ್ತರೋ ಹ್ಯಜಃ**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥ 2 (24)**

ತಾ॥ ಆ ಅಕ್ಷರ ಪರಬ್ರಹ್ಮವು ಜನ್ಮ ಇಲ್ಲದಿರುವಂತಹುದಾಗಿದ್ದು, ಬಾಹ್ಯಾಭ್ಯಂತರಗಳಲ್ಲಿ ತುಂಬಿರುವಂತಹುದಾಗಿ, ಸಮಸ್ತ ರೂಪರಹಿತವಾಗಿ, ಪರಿಪೂರ್ಣವಾಗಿ ಪ್ರಕಾಶಗೊಳ್ಳುತ್ತಿದೆ. ಆದುದ-ರಿಂದಲೇ ಪ್ರಾಣವಿಲ್ಲದ್ದಾಗಿದ್ದು, ಮನಸ್ಸಿಲ್ಲದ್ದಾಗಿದ್ದು, ಅವ್ಯಾಕೃತಾದಿ ಸರ್ವವಿಕಾರಗಳಗಿಂತ ಭಿನ್ನವಾಗಿದ್ದು, ನಾಮರೂಪಗಳಗಿಂತ ವಿಲಕ್ಷಣವಾಗಿದ್ದು, ಉಪಾದಿಯಿಲ್ಲದೆಯೇ ಪರಿಪೂರ್ಣವಾಗಿ ಪ್ರಕಾಶಿಸುತ್ತದೆ.

**ಮಂ.ಶ್ಲೋ.॥ ಏತಸ್ಮಾ ಜ್ಞಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ,**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯಧಾರಿಣೀ ॥ 3 (25)**

ತಾ॥ ಮಾಯೋಪಾಧಿಯೊಂದಿಗೆ ಕೂಡಿದ ಈ ಪುರುಷನಿಂದ ಪ್ರಾಣಗಳು, ಮನಸ್ಸು, ಎಲ್ಲ ಇಂದ್ರಿಯಗಳು, ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, ಇವೆಲ್ಲವೂ ಜನಿಸುತ್ತಿರುತ್ತವೆ.

**ಮಂ.ಶ್ಲೋ.॥ ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ,**
**ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾನ್ತರಾತ್ಮಾ॥**
**4(26)**

ತಾ॥ ಆ ವಿರಾಟ್ಪುರುಷನಿಗೆ ಆಕಾಶವೇ ಶಿರಸ್ಸು, ಸೂರ್ಯಚಂದ್ರರು ನೇತ್ರಗಳು, ದಿಕ್ಕುಗಳು ಶ್ರೋತ್ರಗಳು, ವಾಗ್ವಿವರಗಳು ವೇದಗಳು, ವಾಕ್ಕು, ವಾಯು, ಇವೇ ಪ್ರಾಣ. ಈ ವಿಶ್ವವೇ ಮನಸ್ಸು. ಆ ಪುರುಷನ ಪಾದಗಳಂದ ಭೂಮಿ ಹುಟ್ಟಿತು. ಆತನೇ ಸರ್ವಭೂತಾಂತರಾತ್ಮವಾಗಿ ಬೆಳಗುತ್ತಿದ್ದಾನೆ.

**ಮಂ.ಶ್ಲೋ.॥ ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ ಸೋಮಾತ್ಪರ್ಜನ್ಯ ಓಷಧಯಃ ಪೃಥಿವ್ಯಾಮ್,**
**ಪುಮಾನ್ ರೇತಃಸಿಂಚತಿ ಯೋಷಿತಾಯಾಂ ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ॥**
**5 (27)**

ತಾ॥ ಆ ಪರಬ್ರಹ್ಮದಿಂದ ಆಕಾಶ (ಪ್ರಥಮಾಗ್ನಿ) ಆ ಅಗ್ನಿಯಿಂದ ಅದಕ್ಕೆ ಸಮಿಧೆಯಾದ ಸೂರ್ಯನು ಹುಟ್ಟಿದನು. ಚಂದ್ರನಿಂದ ಪರ್ಜನ್ಯ, (ದ್ವಿತೀಯಾಗ್ನಿ), ಆ ಪರ್ಜನ್ಯದಿಂದ ಔಷಧಿಗಳು (ತೃತೀಯಾಗ್ನಿ) ಉದ್ಭವಿಸಿದವು. ಔಷಧಿಗಳಂದ ಮನುಷ್ಯರು (ಚತುರ್ತಾಗ್ನಿ) ಜನಿಸಿದರು. ಆ ಮಾನವನು ತನ್ನ ಬೀಜವನ್ನು (ಪಂಚಮಾಗ್ನಿ) ಸ್ತ್ರೀಯಲ್ಲಿಡುತ್ತಿದ್ದಾನೆ. ಈ ರೀತಿಯಾಗಿ ಸಮಸ್ತ ಪ್ರಜೆಗಳೆಲ್ಲರೂ ಆ ಪರಮಪುರುಷನಿಂದ ಜನಿಸಿದ್ದಾರೆ.

**ಮಂ.ಶ್ಲೋ.॥ ತಸ್ಮಾದೃಚಃ ಸಾಮ ಯಜೂಂಷಿ ದೀಕ್ಷಾ ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ,**
**ಸಂವತ್ಸರಶ್ಚ ಯಜಮಾನಶ್ಚ ಲೋಕಾಃ ಸೋಮೋ ಯತ್ರ ಪವತೇ ಯತ್ರ ಸೂರ್ಯಃ॥6(28)**

ತಾ॥ ಆ ಪುರುಷನಿಂದ, ಋಕ್ಕುಗಳು, ಸಾಮಗಳು, ಯಜುಸ್ಸುಗಳು ದೀಕ್ಷೆ, (ಸಮಸ್ತ) ಎಲ್ಲ ವಿಧವಾದ ಯಜ್ಞಗಳು, ಕ್ರತುಗಳು, ದಕ್ಷಿಣಗಳು, ಸಂವತ್ಸರ, ಯಜಮಾನರು ಹುಟ್ಟಿಕೊಂಡರು. ಎಲ್ಲಿ ಚಂದ್ರ ಪವಿತ್ರಗೊಳಿಸುತ್ತಿದ್ದಾನೋ, ಎಲ್ಲಿ ಸೂರ್ಯ ಪವಿತ್ರಗೊಳಿಸುತ್ತಿದ್ದಾನೋ ಅಂತಹ ಲೋಕಗಳು ಹುಟ್ಟುತ್ತಿರುತ್ತವೆ.

**ಮಂ.ಶ್ಲೋ.॥ ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ,**
**ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥ 7 (29)**

ತಾ॥ ಆ ಪರಬ್ರಹ್ಮದಿಂದಲೇ ವಿವಿಧ ದೇವತೆಗಳು, ವಸ್ವಾದಿ (ವಸುಗಳು ಮುಂತಾದ) ಗಣಗಳೊಂದಿಗೆ ಜನಿಸಿದರು. ಸಾಧ್ಯವಾದ ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಪ್ರಾಣಾಪಾನಗಳು, ವ್ರೀಹ್ರರು, ಯವಗಳು, ತಪಸ್ಸು, ಶ್ರದ್ಧೆ, ಸತ್ಯ, ಬ್ರಹ್ಮಚರ್ಯೆ, ಕರ್ಮ ವಿಧಾನಗಳೆಲ್ಲವೂ ಹುಟ್ಟಿದವು.

**ಮಂ.ಶ್ಲೋ.॥ ಸಪ್ತಪ್ರಾಣಾಃ ಪ್ರಭವನ್ತಿ ತಸ್ಮಾತ್ ಸಪ್ತಾರ್ಚಿಷಃ ಸಮಿಧಃ ಸಪ್ತಹೋಮಾಃ,**
**ಸಪ್ತ ಇಮೇ ಲೋಕಾ ಯೇಷು ಚರನ್ತಿ ಪ್ರಾಣಾ ಗುಹಾಶಯಾ ನಿಹಿತಾಃ ಸಪ್ತಸಪ್ತ ॥**
**8 (30)**

ತಾ॥ ಆ ಪರಬ್ರಹ್ಮದಿಂದ ಸಪ್ತ ಪ್ರಾಣಗಳು, ಸಪ್ತಜ್ವಾಲೆಗಳು, ಸಪ್ತ ಸಮಿತ್ತುಗಳು, ಸಪ್ತ ಹೋಮಗಳು, ತಮ್ಮ ಹೃದಯ ಗುಹೆಗಳಲ್ಲಿ ಸಂಚರಿಸುತ್ತಿರುವ ಪ್ರಾಣಗಳಿರುವ ಈ ಜೀವಿಗಳು ವಾಸಿಸುವಂತಹ ಸಪ್ತಲೋಕಗಳು ಹುಟ್ಟಿದವು.

**ಮಂ.ಶ್ಲೋ.॥ ಅತಃ ಸಮುದ್ರಾ ಗಿರಿಯಶ್ಚ ಸರ್ವೇಽಸ್ಮಾತ್ ಸ್ಯನ್ದನ್ತೇ ಸಿನ್ಧವಃ ಸರ್ವರೂಪಾಃ**
**ಅತಶ್ಚ ಸರ್ವಾ ಓಷಧಯೋ ರಸಶ್ಚ ಯೇನೈಷ ಭೂತೈ ಸ್ತಿಷ್ಠತೇ ಹ್ಯನ್ತರಾತ್ಮಾ ॥ 9 (31)**

ತಾ॥ ಈ ಪರಮಪುರುಷನಿಂದ ಸರ್ವಸಮುದ್ರಗಳು, ಸಮಸ್ತ ಪರ್ವತಗಳು ಹುಟ್ಟುತ್ತವೆ. ಅನೇಕ ರೂಪಗಳಿರುವ ನದಿಗಳು ಈ ಪುರುಷನಿಂದಲೇ ಪ್ರವಹಿಸುತ್ತವೆ. ಎಲ್ಲ ವಿಧದ ಓಷಧಿಗಳು, ರಸ, ಈ ಪುರುಷನಿಂದ ಜನಿಸುತ್ತಿರುತ್ತವೆ. ಪಂಚಮಹಾಭೂತಗಳೊಂದಿಗೆ (ಅಂತರಾತ್ಮ) ಲಿಂಗ ದೇಹವು ಕೂಡಾ ಹುಟ್ಟುತ್ತದೆ.

**ಮಂ.ಶ್ಲೋ.॥ ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್ ।**
**ಏತದ್ಯೋವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ॥**
**10(32)**

ತಾ॥ ಓ ಸೌಮ್ಯಾ! ಈ ವಿಶ್ವವು, ತಪಸ್ಸು, ಕರ್ಮ, ಎಲ್ಲವೂ ಆ ಪರಮಪುರುಷನೇ. ಅಮೃತವಾದ ಆ ಪರಮಾತ್ಮನೇ ಈ ಸಮಸ್ತವಾಗಿದೆ. ಆದ್ದರಿಂದ ಆ ಪರಬ್ರಹ್ಮವನ್ನು ಹೃದಯ ಗುಹೆಯಲ್ಲಿ ವಾಸವಾಗಿರುವವನೆಂದು ಯಾರು ತಿಳಿದುಕೊಳ್ಳುತ್ತಿರುವನೋ, ಆತನು ಈ ಲೋಕದಲ್ಲಿರುವ

ಅವಿದ್ಯೆಯೆನ್ನುವ ಗ್ರಂಥಿಯನ್ನೇ ಭೇದಿಸುವವನಾಗುತ್ತಾನೆ. ಬ್ರಹ್ಮಸ್ವರೂಪನಾಗುತ್ತಾನೆ. (ಪುರುಷನು ಮಾಯೆಯಿಂದ ಜಗದ್ರೂಪದಲ್ಲಿ ಪ್ರಕಾಶಿಸುತ್ತಿದ್ದಾನೆ. ವಸ್ತುತತ್ತ್ವಜ್ಞಾನವಿರುವವನಿಗೆ ಈ ಸರ್ವಸ್ವವು ಪುರುಷನೆಂದೇ ಗೋಚರಿಸುವುದು. ಅವಿದ್ಯೆಯ ಬಂಧವು ಆತ್ಮಬೋಧೆಯಿಂದ ಕಳಚಿಬೀಳುವುದು.)

# ದ್ವಿತೀಯಾಮುಂಡಕ – ದ್ವಿತೀಯಃ ಖಂಡಃ

**ಮಂ.ಶ್ಲೋ.॥ ಓಂ, ಆವಿಃ ಸನ್ನಿಹಿತಂ ಗುಹಾಚರಂ ನಾಮ ಮಹತ್ಪದಮತ್ರೈತತ್ಸಮರ್ಪಿತಮ್,**
**ಏಜತ್ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ ಸದಸದ್ವರೇಣ್ಯಂ ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಮ್ ॥ 1 (33)**

ತಾ॥ ಪ್ರಕಾಶವನ್ನು ಹೊಂದಿರುವಂತಹ, ಅತ್ಯಂತ ಸನ್ನಿಹಿತವಾಗಿರುವಂತಹ ಹೃದಯ ಗುಹೆಯಲ್ಲಿ ಸಂಚರಿಸುತ್ತಿರುವಂತಹುದಾಗಿರುವ, ಮಹತ್ತಾಗಿ, ಸಮಸ್ತಕ್ಕೂ ಆಧಾರವಾಗಿ, ಸಮಸ್ತ ವಿಶ್ವವನ್ನು ತನ್ನಲ್ಲಿ ಧರಿಸಿಡುವಂತಹ, ಈ ಬ್ರಹ್ಮವೇ ಚಲನೆಯನ್ನು ಹೊಂದಿ, ಪ್ರಾಣವಾಯುವನ್ನು ಹೀರಿ ನಿಮೇಷಗಳನ್ನು ಹೊಂದಿದೆ. ಈ ಪರಬ್ರಹ್ಮವನ್ನು ಸತ್ತಾಗಿಯೂ, ಅಸತ್ತಾಗಿಯೂ, ಸಕಲ ಪ್ರಜೆಗಳಲ್ಲಿ ಪ್ರತಿಷ್ಠಿತವಾಗಿರುವುದಾಗಿಯೂ, ಪರವಾದುದ್ದಾಗಿಯೂ, ಪ್ರಾಣಿಗಳ ಜ್ಞಾನಕ್ಕೆ ಅತೀತ-ವಾಗಿರುವುದೆಂದೂ ಗ್ರಹಿಸಬೇಕು.

**ಮಂ.ಶ್ಲೋ.॥ ಯದರ್ಚಿಮದ್ಯದಣುಭ್ಯೋಽಣು ಚ ಯಸ್ಮಿನ್ಲೋಕಾ ನಿಹಿತಾ ಲೋಕಿನಶ್ಚ**
**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ, ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥ 2 (34)**

ತಾ॥ ಓ ಶೌನಕಾ! ಯಾವುದು ಕಾಂತಿಯುಳ್ಳದ್ದೋ ಅಣುವಿಗಿಂತ ಅಣುವಾಗಿದೆಯೋ, ಯಾವುದರಲ್ಲಿ ಪೃಥಿವ್ಯಾದಿಲೋಕಗಳನ್ನು, ಮನುಷ್ಯರಾದಿ ಎಲ್ಲವನ್ನೂ, ಇರಿಸಲಾಗಿದೆಯೋ, ಅದೇ ಈ ಅಕ್ಷರಬ್ರಹ್ಮ, ಅದೇ ಪ್ರಾಣ, ಅದೇ ವಾಕ್ಕು. ಮನಸ್ಸು ಅಂತಹ ಈ ಪರಬ್ರಹ್ಮವೇ ಸತ್ಯ. ಅದೇ ಅಮೃತ, ನಾಶವಿಲ್ಲದ್ದು. ಅದೇ ಮನಸ್ಸಿಗೆ ಲಕ್ಷ್ಯವನ್ನು ಏರ್ಪಡಿಸುವುದು. ಅಂತಹ ಪರಬ್ರಹ್ಮವನ್ನು ಅರಿತುಕೊಳ್ಳುವವನಾಗು.

**ಮಂ.ಶ್ಲೋ.॥ ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸನ್ದಧೀತ,**
**ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯವಿದ್ಧಿ ॥ 3(35)**

ತಾ॥ ಓ ಶೌನಕಾ! ಉಪನಿಷತ್ಸಂಬಂಧವಾದ ಧನುಸ್ಸನ್ನು ತೆಗೆದುಕೊಂಡು, ಉಪಾಸನೆಯಿಂದ ಹರಿತವಾಗಿರುವ ಬಾಣವನ್ನು ಸಂಧಿಸಿ, ಬ್ರಹ್ಮಚಿಂತನೆಯೆಂಬ ವಿಜ್ಞಾನದಿಂದ ಚೆನ್ನಾಗಿ ಹಿಡಿದೆಳೆದು, ಆ ಅಕ್ಷರ ಪರಬ್ರಹ್ಮವನ್ನು ಗುರಿಯನ್ನಾಗಿ ಮಾಡಿಕೊಂಡು (ಪ್ರಯೋಗಿಸಬೇಕು) ಸಾಕ್ಷಾತ್ಕರಿಸಿ ಕೊಳ್ಳಬೇಕು.

**ಮಂ.ಶ್ಲೋ.॥ ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ,**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ 4 (36)**

ತಾ॥ ಪ್ರಣವವೇ ಧನುಸ್ಸು, ಆತ್ಮವೇ (ಮನಸ್ಸು) ಬಾಣ. ಬ್ರಹ್ಮವು ಆ ಆತ್ಮಕ್ಕೆ ಲಕ್ಷ್ಯವಾಗಿ ಹೇಳಲಾಗಿದೆ. ಪ್ರಮತ್ತತೆ ಇಲ್ಲದ ಸಾಧಕನಿಂದ, ಬ್ರಹ್ಮವನ್ನು ಹೊಂದತಕ್ಕದ್ದು, ಜ್ಞಾನಿಯು ಬಾಣದಂತೆ ಲಕ್ಷ್ಯ ಸ್ವರೂಪನಾಗಿ ಸಾಧಿಸಬೇಕು.

**ಮಂ.ಶ್ಲೋ.॥ ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥ 5 (37)**

ತಾ॥ ಯಾವುದರಲ್ಲಿ ದ್ಯುಲೋಕ, ಭೂಮಿ, ಅಂತರಿಕ್ಷ, ಸಕಲ ಪ್ರಾಣಾದಿಕರಣಗಳೊಂದಿಗೆ ಕೂಡಿದ ಮನಸ್ಸು, ಸಮರ್ಪಿತವಾಗಿದೆಯೋ, ಆ ಅಕ್ಷರ ಬ್ರಹ್ಮವನ್ನೇ ಅದ್ವಿತೀಯನನ್ನಾಗಿಯೂ, ನಿಮ್ಮ ಆತ್ಮವೆಂದೂ ತಿಳಿದುಕೊಳ್ಳಬೇಕು. ಇತರ ವಿದ್ಯೆಗಳನ್ನು ಬಿಟ್ಟುಬಿಡಬೇಕು. ಈ ಆತ್ಮಜ್ಞಾನವು ಮೋಕ್ಷಕ್ಕೆ ವಾರಧಿ ಸೇತುವೆಯಾಗಿರುತ್ತದೆ.

**ಮಂ.ಶ್ಲೋ.॥ ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽನ್ತಶ್ಚರತೇ ಬಹುಧಾಜಾಯಮಾನಃ ಓಮಿತ್ಯೇವಂ ಧ್ಯಾಯಥ ಆತ್ಮಾನಂ ಸ್ವಸ್ತಿವಃ ಪಾರಾಯತ ಮನಃ ಪರಸ್ತಾತ್ ॥ 6 (38)**

ತಾ॥ ರಥದಲ್ಲಿನ ನಾಭಿ (ಕೇಂದ್ರ ಬಿಂದು)ಯಲ್ಲಿ ಅರೆಗಳನ್ನು ಜೋಡಿಸಿರುವಂತೆ ಯಾವ ಹೃದಯದಲ್ಲಿ ನಾಡಿಗಳೆಲ್ಲವೂ ಸೇರಿರುವುದೋ, ಅಂತಹ ಹೃದಯದೊಳಗೆ, ಆ ಪರಮಾತ್ಮ ಅನೇಕ ವಿಧಗಳಾಗಿ ಜನಿಸುತ್ತಿರುವಂತೆ ಸಂಚರಿಸುತ್ತಿರುವುದು. ಅಂತಹ ಪರಬ್ರಹ್ಮವನ್ನೇ ಓಂ ಎಂದು ಧ್ಯಾನ ಮಾಡಬೇಕು. (ತಪಸ್ಸಿನ ಆಚೆಯ ತೀರವನ್ನು ಸೇರುವುದಕ್ಕೆ ನಿಮಗಿರುವ ಅಡ್ಡಿಗಳು ಇಲ್ಲದಂತಾಗಲಿ! ಶುಭವಾಗಲಿ!

**ಮಂ.ಶ್ಲೋ.॥ ಯಃ ಸರ್ವಜ್ಞಃ, ಸರ್ವವಿದ್ಯಸ್ಯೈಷ ಮಹಿಮಾ ಭುವಿ ।
ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮನ್ಯಾತ್ಮಾ ಪ್ರತಿಷ್ಠಿತಃ ॥ 7 (39)**

ತಾ॥ ಯಾರು ಸರ್ವಜ್ಞನೋ, ಸರ್ವವನ್ನೂ ತಿಳಿದವನಾಗಿದ್ದಾನೋ, ಆ ಪರಮಾತ್ಮನ ಮಹಿಮೆಯೇ ಈ ಭೂಲೋಕದಲ್ಲಿ ಕಾಣಬರುತ್ತಿದೆ. ಪಂಚಭೂತಗಳಿಗೆ, ಭೌತಿಕಗಳಿಗೆ ಸಂಬಂಧಿಸಿದ ವಿಶ್ವ ವ್ಯವಹಾರವೆಲ್ಲವೂ ಕ್ರಮಬದ್ಧವಾಗಿ ನಡೆಯುತ್ತಿರುವುದೆಂದರೆ, ಇದು ಆತ್ಮದ ಪ್ರಭಾವವೇ. ಅಂತಹ ಈ ಪರಮಾತ್ಮ ಹೃದಯಾಕಾಶದಲ್ಲಿ ಬೆಳಗುತ್ತಿದೆ.

**ಮಂ.ಶ್ಲೋ.॥ ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ।
ತದ್ವಿಜ್ಞಾನೇನ ಪರಿಪಶ್ಯನ್ತಿಧೀರಾ ಆನನ್ದರೂಪಮಮೃತಂ ಯದ್ವಿಭಾತಿ ॥ 8 (40)**

ತಾ॥ ಈ ಪರಮಾತ್ಮ ಮನೋಮಯ, ಪ್ರಾಣ ದೇಹಗಳನ್ನು ನಡೆಸುತ್ತದೆ. ಹೃದಯಾಕಾಶ-ದೊಳಗಿನಿಂದ ಅನ್ನಮಯ ಶರೀರದಲ್ಲಿ ಬೆಳಗುತ್ತಿದೆ. ಆನಂದರೂಪವಾಗಿ ಅಮೃತಮಯವಾಗಿ ಪ್ರಕಾಶಿಸುತ್ತಿದೆ. ಅಂತಹ ಆ ಆತ್ಮತತ್ತ್ವವನ್ನು ಧೀರರು (ಪಂಡಿತರು) ಜ್ಞಾನದಿಂದ ದರ್ಶಿಸುತ್ತಾರೆ.

**ಮಂ.ಶ್ಲೋ.॥ ಭಿದ್ಯತೇ ಹೃದಯಗ್ರಂಥಿಶ್ಛಿದ್ಯನ್ತೇ ಸರ್ವಸಂಶಯಾಃ ।
ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ 9 (41)**

ತಾ॥ ಹೀಗೆ ಪರಾಪರಗಳನ್ನು ವಿವೇಚನೆ ಮಾಡಿ ನೋಡುತ್ತಿದ್ದಂತೆಯೇ ಆತನ ಹೃದಯ ಗ್ರಂಥಿಗಳು ಬೇಧಿಸಲ್ಪಡುತ್ತವೆ. ಸಮಸ್ತ ಸಂಶಯಗಳು ನಿವಾರಣೆಯಾಗುತ್ತವೆ. ಸಮಸ್ತ ಕರ್ಮಗಳು ಕ್ಷಯವಾಗುತ್ತವೆ.

**ಮಂ.ಶ್ಲೋ.॥ ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥ 10 (42)**

ತಾ॥ ನಿಷ್ಕಳಂಕನಾಗಿ, ವಿರಾಜಮಾನನಾಗಿ, ಅವಿದ್ಯಾದೋಷಗಳು ಇಲ್ಲದವನಾಗಿ, ಹಿರಣ್ಮಯ ಕೋಶದಲ್ಲಿರುವ ಪರಬ್ರಹ್ಮನು ಪರಿಶುದ್ಧನು. ಸಕಲ ಜ್ಯೋತಿಗಳಿಗೂ ಜ್ಯೋತಿಯೆಂದು ಆತ್ಮಜ್ಞಾನಿಗಳು ಅರಿತುಕೊಂಡಿದ್ದಾರೆ.

**ಮಂ.ಶ್ಲೋ.॥ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋಭಾನ್ತಿ ಕುತೋಽಯಮಗ್ನಿ ।**
**ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ 11 (43)**

ತಾ॥ ಆತ್ಮಸ್ವರೂಪನಾದ ಆ ಪರಮಾತ್ಮನಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ. ಹಾಗೆಯೇ ಚಂದ್ರ, ನಕ್ಷತ್ರಗಳು, ಮಿಂಚು, ಅಗ್ನಿಯು ಪ್ರಕಾಶಿಸುವುದಿಲ್ಲ. ಆ ಸೂರ್ಯಾದಿಗಳೆಲ್ಲವೂ ಆ ಪರಮಾತ್ಮನಿಂದಲೇ ಪ್ರಕಾಶಿಸುವುವು. ಆ ಪರಮಾತ್ಮ ಪ್ರಕಾಶಿಸುತ್ತಿರುವುದರಿಂದಲೇ ಈ ಸಮಸ್ತ ಪ್ರಪಂಚವು ಪ್ರಕಾಶಿಸುತ್ತಿದೆ.

**ಮಂ.ಶ್ಲೋ.॥ ಬ್ರಹ್ಮೈ ವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ**
**ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥ 12(44)**

ತಾ॥ ಓ ಶೌನಕಾ! ಈ ದೃಶ್ಯಮಾನ ಜಗತ್ತು ಎಲ್ಲವೂ ಅಮೃತವಾದ ಆ ಬ್ರಹ್ಮದ ರೂಪವೇ. ಮುಂದೆ, ಹಿಂದೆ, ಮೇಲೆ, ಕೆಳಗೆ, ದಕ್ಷಿಣ ದಿಕ್ಕಿನಲ್ಲಿ, ಉತ್ತರ ದಿಕ್ಕಿನಲ್ಲಿ, ಎಡಪಕ್ಕದಲ್ಲಿ, ಬಲಪಕ್ಕದಲ್ಲಿ, ಎಲ್ಲೆಡೆಯೂ ಆ ಬ್ರಹ್ಮವೇ ತುಂಬಿರುವುದು. ಈ ಪ್ರಪಂಚವೆಲ್ಲವೂ ಆ ಪರಬ್ರಹ್ಮದಿಂದಲೇ ತುಂಬಿದೆ. ಎಲ್ಲ ದಿಕ್ಕುಗಳಲ್ಲಿಯೂ ಆ ಬ್ರಹ್ಮವು ಪ್ರಕಾಶಿಸುತ್ತಿದೆ. ಈ ಜಗತ್ತೆಲ್ಲವೂ ಬ್ರಹ್ಮದಲ್ಲೇ ಅಡಗಿದೆ. ಜಲದಿಂದಲ್ಲದೆ ಬೇರೆಯಾಗಿ ಅಲೆಯಿರುವುದಿಲ್ಲ. (ದ್ವಿತೀಯ ಮುಂಡಕ ಸಮಾಪ್ತಿ)

## ತೃತೀಯಮುಂಡಕ – ಪ್ರಥಮಃ ಖಂಡಃ

**ಮಂ.ಶ್ಲೋ.॥ ಓಂ, ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥ 1 (45)**

ತಾ॥ ಅನ್ಯೋನ್ಯ ಮೈತ್ರಿಯಿಂದ ಬಂಧಿಸಲಾದಂತಹುಗಳಾಗಿದ್ದು ಒಂದೇ ಮರದ ಮೇಲೆ ಎರಡು ಪಕ್ಷಿಗಳು(ಜೀವ-ಬ್ರಹ್ಮ) ವಾಸವಾಗಿವೆ. ಅವುಗಳಲ್ಲಿ ಒಂದು(ಜೀವ) ಸಂತೋಷದಿಂದ ಫಲವನ್ನು ಅನುಭವಿಸುತ್ತಿರಲು ಎರಡನೆಯ ಪಕ್ಷಿ(ಬ್ರಹ್ಮ) ತಿನ್ನದೆ ಅದನ್ನು ನೋಡುತ್ತಾ ನಿಂತಿದೆ. (ಕುಳಿತಿದೆ)

**ಮಂ.ಶ್ಲೋ.॥ ಸಮಾನೇ ವೃಕ್ಷೇ ಪುರುಷಾ ನಿಮಗ್ನೋ ಅನೀಶಯಾ ಶೋಚತಿ ಮುಹ್ಯಮಾನಃ**
**ಜುಷ್ಟಂ ಯದಾಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥ 2 (46)**

ತಾ॥ ಒಂದೇ ಮರದ ಮೇಲೆ ಕುಳಿತಿದ್ದರೂ, ಜೀವನಾದ ಒಂದು ಪಕ್ಷಿ ಅಜ್ಞಾನ ಮೋಹಗಳಲ್ಲಿ ಮುಳುಗಿ ಹೋಗಿ ದುಃಖಿಸುತ್ತಿದೆ. ಪೂಜ್ಯನಾದ ಎರಡನೆಯ ಪಕ್ಷಿಯಾದ ಬ್ರಹ್ಮನನ್ನು, ಆತನ ಮಹಿಮೆಯನ್ನು ಯಾವಾಗ ನೋಡುವುದೋ, ಮೊದಲನೆಯ ಪಕ್ಷಿಯಾದ ಜೀವನು ಸಹ ದುಃಖದಿಂದ ವಿಮುಕ್ತನಾಗುತ್ತಿದ್ದಾನೆ.

**ಮಂ.ಶ್ಲೋ.॥ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥**
**3(47)**

ತಾ॥ ತೇಜಃ ಸ್ವರೂಪನಾಗಿ ಸೃಷ್ಟಿಕರ್ತನಿಗೆ ಕೂಡಾ ಕಾರಣಭೂತನಾದ ಆ ಪರಮಾತ್ಮನನ್ನು ಜ್ಞಾನಿಯು ಯಾವಾಗ ದರ್ಶಿಸುತ್ತಾನೋ, ಆಗ ಆ ಬ್ರಹ್ಮಜ್ಞಾನಿ ಪುಣ್ಯಪಾಪ ಬಂಧಗಳಿಂದ ವಿಮುಕ್ತನಾಗಿ ನಿರಂಜನನಾಗಿ ಸರ್ವೋತ್ತಮವಾದ ಆ ಸಮಾನ ಸ್ಥಿತಿಯನ್ನು ಹೊಂದುವಂತಹವನಾಗುತ್ತಾನೆ.

**ಮಂ.ಶ್ಲೋ.॥ ಪ್ರಾಣೋಹ್ಯೇಷ ಯಃ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ಭವತೇ ನಾತಿವಾದೀ,**
**ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮಾವಿದಾಂ ವರಿಷ್ಠಃ ॥ 4 (48)**

ತಾ॥ ಪ್ರಾಣಸ್ವರೂಪನಾದ ಪರಮಾತ್ಮನು ಬ್ರಹ್ಮಾದಿ ಸ್ತಂಬಪರ್ಯಂತವಿರುವ ಸಮಸ್ತ ಪ್ರಾಣಿಗಳಲ್ಲಿ ವಿರಾಜಮಾನನಾಗಿದ್ದಾನೆ. ಆ ಆತ್ಮವೂ, ಜೀವ ರೂಪವಾಗಿರುವ ತಾನೂ ಒಂದೇ ಎಂದು ತಿಳಿದುಕೊಂಡ ಬ್ರಹ್ಮಜ್ಞಾನಿ ಅತಿಕ್ರಮಿಸಿ ಮಾತನಾಡುವುದಿಲ್ಲ. ಆತ್ಮದಲ್ಲೇ ಕ್ರೀಡಿಸುತ್ತಾನೆ. ಆತ್ಮದಲ್ಲೇ ಆಸಕ್ತಿ ಹೊಂದಿರುತ್ತಾನೆ. ಜ್ಞಾನ, ಧ್ಯಾನ, ವೈರಾಗ್ಯಾದಿ ಕರ್ಮಗಳನ್ನು ಹೊಂದಿದವನಾಗಿರುತ್ತಾನೆ. ಬ್ರಹ್ಮವೇತ್ತರಲ್ಲೇ ಶ್ರೇಷ್ಠನಾಗಿ ಪ್ರಕಾಶಿಸುತ್ತಾನೆ.

**ಮಂ.ಶ್ಲೋ.॥ ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಕ್ ಜ್ಞಾನೇನ ಬ್ರಹ್ಮಚರ್ಯೇಣನಿತ್ಯಮ್**
**ಅನ್ತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋಯಂ ಪಶ್ಯನ್ತಿ ಯತಯಃ ಕ್ಷೀಣದೋಷಾಃ ॥**
**5(49)**

ತಾ॥ ಕ್ಷೀಣ ಪಾಪಾತ್ಮರು ಯತ್ನಶೀಲರಾದ ಬ್ರಹ್ಮನಿಷ್ಠರು ಯಾವ ಆತ್ಮಸ್ವರೂಪವನ್ನು ನೋಡುತ್ತಿದ್ದಾರೋ, ತೇಜೋಮಯವಾದಂತಹ, ಪರಿಶುದ್ಧವಾದಂತಹ ಆ ಆತ್ಮಸ್ವರೂಪವು ಸತ್ಯ-ದಿಂದಲೂ, ತಪಸ್ಸಿನಿಂದಲೂ, ಉತ್ತಮ ಜ್ಞಾನದಿಂದಲೂ, ಬ್ರಹ್ಮಚರ್ಯೆಯಿಂದಲೂ ಯಾವಾಗಲೂ ಈ ದೇಹದಲ್ಲೇ ಹೊಂದಲಾಗುತ್ತದೆ.

**ಮಂ.ಶ್ಲೋ.॥ ಸತ್ಯಮೇವ ಜಯತಿ ನಾನೃತಂ ಸತ್ಯೇನ ಪನ್ಥಾ ವಿತತೋ ದೇವಯಾನಃ**
**ಯೇನಾಕ್ರಮನ್ತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥**
**6 (50)**

ತಾ॥ ಸತ್ಯವೇ ಜಯಿಸುತ್ತದೆ. ಅಸತ್ಯವು ಜಯಿಸುವುದಿಲ್ಲ. ಸತ್ಯಶೀಲರೆನ್ನುವ ಆಶಾರಹಿತರೆನ್ನುವ, ಮಹರ್ಷಿಗಳು ಯಾವ ಮಾರ್ಗದಲ್ಲಿ (ದೇವಯಾನದಲ್ಲಿ) ಮೋಕ್ಷಕ್ಕೆ ಹೋಗುತ್ತಿದ್ದಾರೋ, ಆ ಮಾರ್ಗವು ಸತ್ಯಕ್ಕೆ ಉತ್ತಮ ಸ್ಥಾನವಾಗಿದೆ.

**ಮಂ.ಶ್ಲೋ.॥ ಬೃಹಚ್ಚ ತದ್ದಿವ್ಯಮಚಿನ್ತ್ಯರೂಪಂ ಸೂಕ್ಷ್ಮಾಚ್ಚ ತತ್ಸೂಕ್ಷ್ಮತರಂ ವಿಭಾತಿ**
**ದೂರಾತ್ಸುದೂರೇ ತದಿಹಾನ್ತಿಕೇ ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಮ್ ॥ 7 (51)**

ತಾ॥ ಆ ಬ್ರಹ್ಮವು ಬಹಳ ಶ್ರೇಷ್ಠವಾದುದು. ಸರ್ವತ್ರವ್ಯಾಪಿಸಿದೆ. ದಿವ್ಯವಾದುದು. ಅಚಿಂತ್ಯವು, ಸೂಕ್ಷ್ಮಕ್ಕಿಂತ ಸೂಕ್ಷ್ಮತರವು, ದೂರವಾಗಿರುವುದಕ್ಕಿಂತ ಹೆಚ್ಚು ದೂರದಲ್ಲಿದ್ದು ಮತ್ತು ಇಲ್ಲೇ ನಮ್ಮ ಶರೀರದಲ್ಲೇ ಅತಿ ಸಮೀಪದಲ್ಲಿದೆ. ಈ ವಿಧವಾಗಿ ಈ ಆತ್ಮವು ಹೃದಯ ಕುಹರದಲ್ಲಿದೆಯೆಂದು ಮಹರ್ಷಿಗಳು ತಿಳಿದುಕೊಂಡರು.

**ಮಂ.ಶ್ಲೋ.॥ ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ**
**ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ॥ 8(52)**

ತಾ॥ ಆ ಪರಬ್ರಹ್ಮವನ್ನು ನೇತ್ರಗಳಿಂದಾಗಲಿ, ವಾಕ್ಕಿನಿಂದಾಗಲಿ, ಇಂದ್ರಿಯಗಳಿಂದಾಗಲಿ, ತಪಸ್ಸಿನಿಂದಾಗಲಿ, ಸತ್ಕರ್ಮದಿಂದಾಗಲಿ, ಗ್ರಹಿಸಲು ಸಾಧ್ಯವಿಲ್ಲ. ಆತ್ಮಜ್ಞಾನದಿಂದ ಪರಿಶುದ್ಧವಾದ ಅಂತಃಕರಣವಿರುವಂತಹವನಾಗಿ, ಆನಂತರ ಪರಬ್ರಹ್ಮನನ್ನು ನಿರಾಕಾರನಾಗಿ ಧ್ಯಾನಿಸುವವನು ಮಾತ್ರವೇ ಆತ್ಮವನ್ನು ತಿಳಿದುಕೊಳ್ಳುವವನಾಗುತ್ತಾನೆ.

**ಮಂ.ಶ್ಲೋ.॥ ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಞ್ಚಧಾ ಸಂವಿವೇಶ**
**ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ॥ 9(53)**

ತಾ॥ ಪ್ರಾಣವು, ಯಾವ ದೇಹದಲ್ಲಿ ಐದು ಪ್ರಾಣಗಳಾಗಿ ಪ್ರವೇಶಿಸುತ್ತದೆಯೋ, ಆ ಶರೀರದಲ್ಲಿನ ಹೃದಯದಲ್ಲಿ ಅತಿ ಸೂಕ್ಷ್ಮವಾದ ಈ ಆತ್ಮವು, ಚಿತ್ತದಿಂದ ತಿಳಿದುಕೊಳ್ಳುವಂತಹುದು. ಪರಿಶುದ್ಧವಾದ ಚಿತ್ತದಲ್ಲಿ, ಈ ಆತ್ಮ ಪ್ರಕಟವಾಗುತ್ತದೆ. ಪ್ರಜೆಗಳ ಚಿತ್ತವೆಲ್ಲವೂ, ಪ್ರಾಣೇಂದ್ರಿಯಾದಿಗಳೊಡನೆ ಈ ಆತ್ಮ ವ್ಯಾಪಕವಾಗಿದೆ.

**ಮಂ.ಶ್ಲೋ.॥ ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ**
**ಕಾಮಾನ್ ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇ**
**-ದ್ಭೂತಿ ಕಾಮಃ ॥ 10 (54)**

ತಾ॥ ಓ ಶೌನಕಾ! ಪರಿಶುದ್ಧಾಂತಃಕರಣವುಳ್ಳ ಆತ್ಮವೇತ್ತನು, ಮನಸ್ಸಿನಲ್ಲಿ ಯಾವ ಯಾವ ಲೋಕಗಳನ್ನು ಭಾವಿಸುತ್ತಿರುವನೋ, ಯಾವ ಯಾವ ವಾಂಛೆಗಳನ್ನು ಸಂಕಲ್ಪಿಸಿಕೊಳ್ಳುತ್ತಾನೋ, ಆಯಾ ಲೋಕಗಳನ್ನು ವಾಂಛೆಗಳನ್ನು ಹೊಂದುತ್ತಾನೆ. ಆ ಕಾರಣದಿಂದ ಐಶ್ವರ್ಯಾಕಾಂಕ್ಷಿಯು ಬ್ರಹ್ಮ ಜ್ಞಾನವನ್ನು ಹೊಂದಿದವರನ್ನು ಭಕ್ತಿಯಿಂದ ಪೂಜಿಸಬೇಕು. (ಐಶ್ವರ್ಯವನ್ನು ಕೋರಿದವನು ಐಶ್ವರ್ಯದ ಸಲುವಾಗಿ ಬ್ರಹ್ಮವೇತ್ತನನ್ನು ಸರ್ವದಾ ಪೂಜಿಸಬೇಕು. ಅದೇ ರೀತಿಯಾಗಿ ನಿಷ್ಕಾಮನಾಗಿ ಆತನನ್ನು ಸೇವಿಸುವವನು ತನ್ನಲ್ಲಿನ ಬ್ರಹ್ಮತ್ವವನ್ನು ತಿಳಿದುಕೊಳ್ಳಬೇಕು.)

# ತೃತೀಯ ಮುಂಡಕ - ದ್ವಿತೀಯಃ ಖಂಡಃ

**ಮಂ.ಶ್ಲೋ.॥ ಸವೇದೈತತ್ಪರಮಂ ಬ್ರಹ್ಮಧಾಮಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಮ್**
**ಉಪಾಸತೇ ಪುರುಷಂ ಯೇ ಹ್ಯಕಾಮಾಃ ತೇ ಶುಕ್ರಮೇತದತಿವರ್ತನ್ತಿ ಧೀರಾಃ॥ 1(55)**

ತಾ॥ ಬ್ರಹ್ಮಜ್ಞಾನಿ, ಬ್ರಹ್ಮಾಂಡಕ್ಕೆ ಆಧಾರವಾದವನನ್ನು ಸ್ವಯಂ ಪ್ರಕಾಶವಿರುವ ಆ ಪರಬ್ರಹ್ಮನೆಂದು ತಿಳಿದುಕೊಳ್ಳುತ್ತಾನೆ. ಅಂತಹ ಬ್ರಹ್ಮಜ್ಞಾನಿಯನ್ನು ಯಾರು ನಿಷ್ಕಾಮರಾಗಿ ಉಪಾಸನೆಗೈಯುತ್ತಾರೋ, ಅಂತಹ ಧೀರರು ಈ ಜನನ ಮರಣ ರೂಪದ ಸಂಸಾರಬಂಧದಿಂದ ವಿಮುಕ್ತರಾಗುತ್ತಾರೆ.

**ಮಂ.ಶ್ಲೋ.॥ ಕಾಮಾನ್ಯಃ ಕಾಮಯತೇ ಮನ್ಯಮಾನಃ ಸ ಕಾಮಭಿರ್ಜಾಯತೇ ತತ್ರ ತತ್ರ**
**ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯನ್ತಿ ಕಾಮಾಃ ॥ 2 (56)**

ತಾ॥ ಯಾರು ಅತ್ಯಂತ ಭೋಗಾಸಕ್ತನಾಗಿ ಕೋರಿಕೆಗಳನ್ನು ಕೋರುತ್ತಿರುವನೋ, ಅಂತಹವನು ಆ ಭೋಗಫಲಗಳನ್ನು ಅನುಭವಿಸುವ ಸಲುವಾಗಿ, ಆಯಾ ಪ್ರದೇಶಗಳಲ್ಲಿ ಮತ್ತೆ ಮತ್ತೆ ಹುಟ್ಟುತ್ತಿರುತ್ತಾನೆ. ಯಾರು ಆಪ್ತ ಕಾಮನಾಗಿ ಕೃತಾರ್ಥನಾದೆನೆಂದು ಭಾವಿಸುತ್ತಾನೋ, ಅವನಿಗೆ ಕಾಮುಗಳೆಲ್ಲವೂ ಈ ಶರೀರದಲ್ಲಿಯೇ ಅಣಗಿಹೋಗುವುದು. ಆತನಿಗೆ ಕೋರಿಕೆಗಳೇ ಉಂಟಾಗುವುದಿಲ್ಲ.

**ಮಂ.ಶ್ಲೋ.॥ ನಾಯಮಾತ್ಮಾ ಪ್ರವಚನೇನ ಲಭ್ಯೋ, ನ ಮೇಧಯಾ, ನ ಬಹುನಾ ಶ್ರುತೇನ,**
**ಯಮೇವೈಷ ವೃಣುತೇ, ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತಮಾಂ ಸ್ವಾಮ್ ॥**
**3 (57)**

ತಾ॥ ಈ ಆತ್ಮವು ಅಧಿಕವಾಗಿ ಪ್ರವಚನಗಳನ್ನು ಮಾಡುವುದರಿಂದ ಹೊಂದುವಂತಹುದಲ್ಲ. ಅಧಿಕವಾದ ಶ್ರವಣದಿಂದಲೂ ಲಭ್ಯವಾಗುವುದಿಲ್ಲ. ಜಿಜ್ಞಾಸೆಯುಳ್ಳವನು ಆತ್ಮವನ್ನು ಹೊಂದಬೇಕೆಂದು ವಾಂಛಿಸಿದರೆ ಆ ವಿದ್ವಾಂಸನಿಗೆ ಲಭ್ಯವಾಗುತ್ತದೆ. ಈ ಆತ್ಮ ಆ ವಿದ್ವಾಂಸನಿಗೆ, ತನ್ನ ಸ್ವರೂಪವನ್ನು ಪ್ರಕಾಶಿಸುವಂತೆ ಮಾಡುತ್ತದೆ.

**ಮಂ.ಶ್ಲೋ.॥ ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ತಪಸೋವಾಪ್ಯಲಿಂಗಾತ್**
**ಏತೈರೂಪಾಯೈರ್ಯತತೇ ಯಸ್ತು ವಿದ್ವಾಂ ಸ್ತಸ್ಯೈಷ ಆತ್ಮವಿಶತೇ ಬ್ರಹ್ಮಧಾಮ ॥ 4(58)**

ತಾ॥ ದೇಹ ಮನೋಬುದ್ಧಿಗಳಲ್ಲಿ ಆಸಕ್ತನಾದವನಾದ್ದರಿಂದಲೂ, ಪ್ರಮತ್ತನಾದ್ದರಿಂದಲೂ, ಅಜ್ಞಾನಯುತ ತಪಶ್ಚರ್ಯೆಯಿಂದಲೂ, ಈ ಆತ್ಮವು ಲಭಿಸುವುದಿಲ್ಲ. ಆದರೆ ಶ್ರದ್ಧಾಭಕ್ತಿಗಳಿಂದ ಉತ್ಸಾಹದಿಂದ, ಮನಃಪೂರ್ವಕವಾಗಿ ಯಾರು ಪ್ರಯತ್ನಿಸುತ್ತಾರೋ ಅಂತಹವರಿಗೆ ಆತ್ಮೈಕ್ಯವು ಉಂಟಾಗುತ್ತದೆ.

**ಮಂ.ಶ್ಲೋ.॥ ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮಾನೋ ವೀತರಾಗಾಃ ಪ್ರಶಾನ್ತಾಃ**
**ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಯುಕ್ತಾತ್ಮಾನಃ ಸರ್ವಮೇವಾ ವಿಶನ್ತಿ ॥ 5(59)**

ತಾ॥ ಪರಬ್ರಹ್ಮದರ್ಶನವನ್ನು ಹೊಂದಿದ ಋಷಿಗಳು, ಈ ಆತ್ಮಸ್ವರೂಪವನ್ನು ಅನುಭವಿಸಿ, ಆತ್ಮಜ್ಞಾನದಿಂದ ತೃಪ್ತಿಯನ್ನು ಹೊಂದಿದವರಾಗಿ, ಆತ್ಮಸ್ವರೂಪರು, ರಾಗ ರಹಿತರು, ಪ್ರಶಾಂತ ಮನಸ್ಕರು ಆಗುವರು. ಅಂತಹ ಆತ್ಮಜ್ಞಾನವುಳ್ಳ ಮಹಾತ್ಮರು ಸರ್ವವ್ಯಾಪಕವಾದ ಪರಬ್ರಹ್ಮವನ್ನು ಎಲ್ಲೆಡೆ ಹೊಂದಿ, ಧೀರರು ಏಕಾಗ್ರಚಿತ್ತರಾಗಿ ಸಮಸ್ತವನ್ನು ಹೊಂದುತ್ತಿದ್ದಾರೆ. (ಎಲ್ಲದರಲ್ಲೂ ಪ್ರವೇಶಿಸುತ್ತಿದ್ದಾರೆ.)

**ಮಂ.ಶ್ಲೋ.॥ ವೇದಾನ್ತವಿಜ್ಞಾನ ಸುನಿಶ್ಚಿತಾರ್ಥಾಃ ಸನ್ನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾ**
**ತೇ ಬ್ರಹ್ಮಲೋಕೇಷು ಪರಾನ್ತಕಾಲೇ ಪರಾಮೃತಾಃ ಪರಿಮುಚ್ಯನ್ತಿ ಸರ್ವೇ ॥ 6 (60)**

ತಾ॥ ವೇದಾಂತ ವಿಜ್ಞಾನದಲ್ಲಿ ನಿಸ್ಸಂದೇಹವಾದ ಸುನಿಶ್ಚಿತ ಬುದ್ಧಿಯುಳ್ಳವರಾಗಿ, ಸಂನ್ಯಾಸ-ಯೋಗದಿಂದ ಪರಿಶುದ್ಧ ಮನಸ್ಸುಳ್ಳವರಾಗಿರುವಂತಹ ಸಂಯಮಿಪರರು ಮರಣಾನಂತರ ಬ್ರಹ್ಮ ಲೋಕವನ್ನು ಸೇರಿ, ಅಲ್ಲಿ ಕಲ್ಪಾಂತರದವರೆಗೂ ಇದ್ದು, ನಂತರ ಸಂಪೂರ್ಣ ಮೋಕ್ಷವನ್ನು ಪಡೆಯುತ್ತಾರೆ.

**ಮಂ.ಶ್ಲೋ.॥ ಗತಾಃ ಕಲಾಃ ಪಞ್ಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು**
**ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವನ್ತಿ ॥ 7 (61)**

ತಾ॥ ಮೋಕ್ಷ ಸಮಯದಲ್ಲಿ ಪ್ರಾಣಾದಿಗಳಾದ ಹದಿನೈದು ಕಲೆಗಳು, ತಮ್ಮ ತಮ್ಮ ಕಾರಣಗಳನ್ನು ಸೇರಿಬಿಡುತ್ತವೆ. ಸಮಸ್ತವಾದ ಚಕ್ಷುರಾದಿ ಇಂದ್ರಿಯ ದೇವತೆಗಳು, ಪ್ರತಿದೇವತೆಗಳಾದ ಸೂರ್ಯಾದಿ-ಗಳಲ್ಲಿ ಸೇರಿಬಿಡುತ್ತವೆ. ಕರ್ಮಗಳನ್ನು ವಿಜ್ಞಾನಮಯನಾದ ಜೀವಾತ್ಮವೆಲ್ಲವೂ ಅವ್ಯಯವಾದ ಪರಬ್ರಹ್ಮದಲ್ಲ ಲೀನವಾಗಿಬಿಡುತ್ತದೆ.

**ಮಂ.ಶ್ಲೋ.॥ ಯಥಾ ನದ್ಯಃ ಸ್ಯನ್ದಮಾನಾಃ ಸಮುದ್ರೇಽಸ್ತಂಗಚ್ಛನ್ತಿ ನಾಮರೂಪೇ ವಿಹಾಯ**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್॥8 (62)**

ತಾ॥ ಪ್ರವಹಿಸುತ್ತಿರುವ ನದಿಗಳು ತಮ್ಮತಮ್ಮ ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಯಾವ ರೀತಿಯಲ್ಲಿ ಲೀನವಾಗಿಬಿಡುತ್ತದೆಯೋ, ಅದೇ ರೀತಿಯಲ್ಲಿ ಆತ್ಮಜ್ಞಾನವಂತನು ನಾಮರೂಪ-ಗಳಿಂದ ವಿಮುಕ್ತನಾಗಿ, ಪರಾತ್ಪರನಾದ ಪರಮಾತ್ಮನನ್ನು (ದಿವ್ಯ ಪುರುಷನನ್ನು) ಹೊಂದುತ್ತಿದ್ದಾನೆ.

**ಮಂ.ಶ್ಲೋ.॥ ಸ ಯೋ ಹಾ ವೈ ತತ್ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ ನಾಸ್ಯಾ ಬ್ರಹ್ಮವಿತ್ಕುಲೇ**
**ಭವತಿ । ತರತಿ ಶೋಕಂ ತರತಿ ಪಾಪ್ಮಾನಂ ಗುಹಾ ಗ್ರನ್ಥಿಭ್ಯೋ ವಿಮುಕ್ತೋಽಮೃತೋ**
**ಭವತಿ ॥ 9 (63)**

ತಾ॥ ಯಾರು ಸರ್ವೋತ್ತಮನಾದ ಪರಮಾತ್ಮನನ್ನು ತಿಳಿದಂತಹವರಾಗಿರುತ್ತಾರೋ, ಅಂತಹ ಜ್ಞಾನಿ ಸಾಕ್ಷಾತ್ ಪರಬ್ರಹ್ಮವೇ ಆಗುತ್ತಿದ್ದಾನೆ. ಆ ಆತ್ಮವೇತ್ತನ ವಂಶದಲ್ಲಿ, ಆತ್ಮವೇತ್ತನಲ್ಲದವನು ಜನಿಸುವುದಿಲ್ಲ. ಆತ್ಮಜ್ಞಾನಿ ಸಕಲ ದುಃಖಗಳನ್ನು ದಾಟಿ ಹೋಗುತ್ತಿರುತ್ತಾನೆ. ಪಾಪಗಳನ್ನು ಬಿಡಿಸಿಕೊಳ್ಳುತ್ತಿರುವನು. ಹೃದಯದಲ್ಲಿನ ಅಜ್ಞಾನ ಗ್ರಂಥಿಗಳನ್ನು ತುಂಡರಿಸಿಕೊಂಡು ಅಮೃತ

ಸ್ವರೂಪನಾಗುತ್ತಿದ್ದಾನೆ. ಬ್ರಹ್ಮವಿದನು ಬ್ರಹ್ಮವೇ ಆಗಿಬಿಡುತ್ತಾನೆ.

**ಮಂ.ಶ್ಲೋ.॥ ತದೇತದೃಚಾಽಭ್ಯುಕ್ತಮ್ ಕ್ರಿಯಾವನ್ತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯನ್ತಃ । ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ॥ 10 (64)**

ತಾ॥ ಬ್ರಹ್ಮವಿದ್ಯೆಯನ್ನು ಉಪದೇಶಿಸುವ ಪದ್ಧತಿ ಮಂತ್ರದಲ್ಲಿ ಸ್ಪಷ್ಟೀಕರಿಸಲಾಗಿದೆ. ಋಗ್ವೇದದಲ್ಲಿನ ಮಂತ್ರದಲ್ಲಿ ಈ ಕೆಳಗೆ ತಿಳಿಸಲಾದ ಸಿದ್ಧಾಂತವನ್ನೇ ಬೋಧಿಸಲಾಗಿದೆ. ಯಜ್ಞಯಾಗಾದಿಗಳನ್ನು ಮಾಡಿ ವೇದ ಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿ, ಬ್ರಹ್ಮನಿಷ್ಠರಾಗಿ ಏಕರ್ಷೀಯೆನ್ನುವ ಯಜ್ಞವನ್ನು ಶ್ರದ್ಧೆಯಿಂದ ಮಾಡಿದವರಾಗಿರುವ, ಶಿರೋವ್ರತವನ್ನು ಸಹ ಪೂರ್ತಿ ಮಾಡಿದವರಿಗೇ ಈ ಬ್ರಹ್ಮವಿದ್ಯೆಯನ್ನು ಬೋಧಿಸಬೇಕು ಎಂದು ಹೇಳಲಾಗಿದೆ.

**ಮಂ.ಶ್ಲೋ.॥ ತದೇತತ್ಸತ್ಯಮೃಷಿರಂಗಿರಾಃ ಪುರೋವಾಚ ನೈತದಚೀರ್ಣ ವ್ರತೋಽಧೀತೇ ನಮಃ ಪರಮಋಷಿಭ್ಯೋ, ನಮಃ ಪರಮಋಷಿಭ್ಯಃ ॥ 11 (65)**

ತಾ॥ ಪೂರ್ವಕಾಲದಲ್ಲಿ ಅಂಗಿರಸನೆನ್ನುವ ಮಹರ್ಷಿ ಈ ಸತ್ಯವನ್ನು ಶೌನಕನಿಗೆ ಬೋಧಿಸಿದನು. ಗ್ರಂಥರೂಪವಾದ ಈ ಸತ್ಯೋಪದೇಶವನ್ನು, ವ್ರತಾಚರಣೆಯನ್ನು ಮಾಡದವನು ಪಠಿಸಬಾರದು. ಪರಮ ಋಷಿಗಳಿಗೆ ನಮಸ್ಕಾರ, ಪರಮ ಋಷಿಗಳಿಗೆ ನಮಸ್ಕಾರ. ಸದ್ಗುರುವರೇಣ್ಯನಾದ ಅಂಗಿರಸ ಮಹರ್ಷಿ ಈ ಉಪನಿಷತ್ತನ್ನು ಬೋಧಿಸಿದನು. ಜಿಜ್ಞಾಸು ಅಲ್ಲದವನಿಗೆ ಬುದ್ಧಿಸೂಕ್ಷ್ಮತೆ ಇಲ್ಲದವನಿಗೆ ಇದನ್ನು ನೀಡಬಾರದೆಂದು ಎಚ್ಚರಿಕೆಯನ್ನು ಕೊಡಲಾಗಿದೆ. (ಮುಂಡಕೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್‌ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ**





# ಮಾಂಡೂಕ್ಯೋಪನಿಷತ್ - 6

(ಅಥರ್ವಣವೇದಾಂತರ್ಗತ)

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ.॥ ಓಮಿತ್ಯೇತದಕ್ಷರಮಿದಗ್ಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವತ್ ಭವಿಷ್ಯದಿತಿ ಸರ್ವಮೋಂಕಾರ ಏವ, ಯಚ್ಚಾನ್ಯ ತ್ರಿಕಾಲಾತೀತಂ ತದಪ್ಯೋಂಕಾರ ಏವ ॥ 1

ತಾ॥ ಓಂ ಎಂದು ಹೇಳುವಂತಹ ಅಕ್ಷರವೇ (ಜಡ ಚೇತಾತ್ಮವಾದ) ಇದೆಲ್ಲವು. ಅದರ ಉಪವ್ಯಾಖ್ಯಾನವೇನೆಂದರೆ - ಕಳೆದುಹೋದ ಭೂತಕಾಲವು ನಡೆಯುತ್ತಿರುವ ವರ್ತಮಾನ ಕಾಲವು, ಜರುಗಲಿರುವ ಭವಿಷ್ಯತ್ ಕಾಲಗಳೆಲ್ಲದರಲ್ಲೂ ಓಂಕಾರವೇ ಇದೆ. ಇದಲ್ಲದೆ ಇನ್ನೂ ಕಾಲಾತೀತ-ವಾಗಿ ಯಾವುದಿದೆಯೋ ಅದು ಕೂಡಾ ಓಂಕಾರವೇ.

ಮಂ.ಶ್ಲೋ.॥ ಸರ್ವಗ್ಂ ಹ್ಯೇತದ್ ಬ್ರಹ್ಮಾಯಮಾತ್ಮಾ ಬ್ರಹ್ಮಸೋऽಯಮಾತ್ಮಾ ಚತುಷ್ಪಾತ್ ॥ 2

ತಾ॥ ಓಂಕಾರ ರೂಪವಾದ ಈ ಸಂಪೂರ್ಣ ಜಗತ್ತು ನಿಶ್ಚಯವಾಗಿಯೂ ಬ್ರಹ್ಮರೂಪವೇ ಆಗಿದೆ. ಈ ಆತ್ಮವೇ ಬ್ರಹ್ಮ (ಅಯಮಾತ್ಮಾ ಬ್ರಹ್ಮ) ಈ ಆತ್ಮವು ನಾಲ್ಕು ಪಾದಗಳನ್ನುಳ್ಳ-ದ್ದಾಗಿದೆ.

ಮಂ.ಶ್ಲೋ.॥ ಜಾಗರಿತಸ್ಥಾನೋ ಬಹಿಃ ಪ್ರಜ್ಞಃ ಸಪ್ತಾಂಗ ಏಕೋನವಿಂಶತಿ ಮುಖಃ ಸ್ಥೂಲಭುಕ್ ವೈಶ್ವಾನರಃ ಪ್ರಥಮಃ ಪಾದಃ । 3

ತಾ॥ ಜಾಗ್ರದವಸ್ಥ ಸ್ಥಾನವಾಗಿ ಹೊಂದಿರುವವನು ಬಹಿಃ ಪ್ರಜ್ಞಾಶಾಲಿ, ಏಳು ಅಂಗಗಳನ್ನು ಹೊಂದಿರುವವನು, ಹತ್ತೊಂಬತ್ತು ಮುಖಗಳನ್ನು ಹೊಂದಿರುವಂತಹವನು, ಸ್ಥೂಲಭೋಕ್ತನಾದ ವೈಶ್ವಾನರನು ಪ್ರಥಮ ಪಾದ. ಸಪ್ತಾಙ್ಗ - ಈ ವೈಶ್ವಾನರನಿಗೆ ದ್ಯುಲೋಕವು ಶಿರಸ್ಸು, ಸೂರ್ಯನು-ನೇತ್ರ, ವಾಯುವು-ಪ್ರಾಣ, ಆಕಾಶವು ದೇಹದ ಮಧ್ಯಭಾಗ, ಉದಕವು ಮೂತ್ರಸ್ಥಾನ, ಭೂಮಿಯು ಪಾದಗಳು, ಅವಹನೀಯಾಗ್ನಿ ಮುಖವೆಂದು ಏಳು ಅಂಗಗಳವೆ. ಏಕೋನವಿಂಶತಿ ಮುಖಃ=ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣಾದಿ ವಾಯುಗಳು, ಜಾಗ್ರದವಸ್ಥೆಯನ್ನು ಸ್ಥಾನವಾಗಿ ಹೊಂದಿರುವವನು. ಮನಸ್ಸು ಬುದ್ಧಿ ಅಹಂಕಾರ, ಚಿತ್ತವೆಂಬುವ ಹತ್ತೊಂಬತ್ತು ಮುಖಗಳನ್ನು ಹೊಂದಿರುವನು.

**ಮಂ.ಶ್ಲೋ.॥ ಸ್ವಪ್ನಸ್ಥಾನೋऽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ**
**ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ 4**

ತಾ॥ ಸ್ವಪ್ನವನ್ನು ಸ್ಥಾನವಾಗಿ ಹೊಂದಿರುವವನು, ಅಂತಃಪ್ರಜ್ಞೆಯುಳ್ಳವನಾಗಿರುತ್ತಾನೆ. ಸಪ್ತಾಂಗಗಳುಳ್ಳವನು, ಹತ್ತೊಂಬತ್ತು ಮುಖಗಳುಳ್ಳವನು, ಸೂಕ್ಷ್ಮಭೋಕ್ತನೂ ಆದ ತೈಜಸನು ದ್ವಿತೀಯ ಪಾದ.

**ಮಂ.ಶ್ಲೋ.॥ ಯತ್ರಸುಪ್ತೋ ನ ಕಂಚನ ಕಾಮಂ ಕಾಮಯತೇ, ನ ಕಂಚನ ಸ್ವಪ್ನಂ ಪಶ್ಯತಿ, ತತ್ ಸುಷುಪ್ತಮ್।**
**ಸುಷುಪ್ತಸ್ಥಾನ ಏಕೀಭೂತಃ, ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್**
**ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ 5**

ತಾ॥ ಯಾವ ಸ್ಥಳದಲ್ಲಿ ಯಾವ ಸಮಯದಲ್ಲಿ ನಿದ್ರಿಸುವವನಾಗಿ ಎಂತಹ ಕೋರಿಕೆಯನ್ನೂ ಕೋರುವುದಿಲ್ಲವೋ, ಯಾವ ಸ್ವಪ್ನವನ್ನೂ ನೋಡುವುದಿಲ್ಲವೋ ಅದು ಸುಷುಪ್ತಿ. ಸುಷುಪ್ತಿಯನ್ನೇ ಸ್ಥಾನವಾಗಿ ಹೊಂದಿದವನು, ಏಕೀಭೂತನಾಗಿರುವವನು, ಕೇವಲ ಪ್ರಜ್ಞಾನಘನನಾಗಿ, ಆನಂದಮಯನಾಗಿ, ಆನಂದಭೋಕ್ತನು ಚೇತೋಮುಖನು ಆಗಿರುವ ಪ್ರಾಜ್ಞನು, ಮೂರನೆಯ ಪಾದ.

**ಮಂ.ಶ್ಲೋ.॥ ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋऽಂತರ್ಯಾಮ್ಯೇಷ**
**ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥ 6**

ತಾ॥ ಈತನೇ ಸರ್ವೇಶ್ವರನು. ಈತನೇ ಸರ್ವಜ್ಞ. ಈತನೇ ಅಂತರ್ಯಾಮಿ, ಈತನೇ ಎಲ್ಲದಕ್ಕೂ ಕಾರಣ. ಈತನೇ ಸಮಸ್ತಭೂತಗಳ ಉತ್ಪತ್ತಿ, ಲಯಗಳಿಗೆ ಸ್ಥಾನ(ವಾದವನು.) (ಮಾಂಡೂಕ್ಯಕಾರಿಕಃ; ವಿಶ್ವನು ಬಹಿಷ್ಪ್ರ ಪ್ರಜ್ಞೆಯುಳ್ಳ ಪರಮಾತ್ಮ; ತೈಜಸನು ಅಂತಃಪ್ರಜ್ಞೆಯುಳ್ಳವ ಪರಮಾತ್ಮ; ಪ್ರಾಜ್ಞನು ಘನಪ್ರಜ್ಞೆಯುಳ್ಳ ಪರಮಾತ್ಮ; ಈ ವಿಧವಾಗಿ ಏಕವಾಗಿರುವ ಆತ್ಮವನ್ನೇ ಮೂರು ಅವಸ್ಥೆಗಳಲ್ಲಿಯೂ ಮೂರು ರೂಪಗಳಾಗಿ ಪರಿಗಣಿಸಲಾಗುತ್ತದೆ.)

**ಮಂ.ಶ್ಲೋ.॥ ನಾಂತಃ ಪ್ರಜ್ಞಂ, ನ ಬಹಿಃ ಪ್ರಜ್ಞಂ, ನೋಭಯತಃ ಪ್ರಜ್ಞಂ, ನ ಪ್ರಜ್ಞಾನ ಘನಂ, ನ ಪ್ರಜ್ಞಂ, ನಾऽಪ್ರಜ್ಞಂ । ಅದೃಶ್ಯಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೋಪಶಮಂ, ಶಾಂತಂ, ಶಿವಮದ್ವೈತಂ, ಚತುರ್ಥಂ ಮನ್ಯಂತೇ, ಸ ಅತ್ಮಾ, ಸ ವಿಜ್ಞೇಯಃ॥ 7**

ತಾ॥ ಆ ತುರೀಯನು ಅಂತಃಪ್ರಜ್ಞನಲ್ಲ. ಬಹಿಃಪ್ರಜ್ಞನೂ ಅಲ್ಲ, ಉಭಯಪ್ರಜ್ಞನೂ ಅಲ್ಲ ಪ್ರಜ್ಞಾನಘನನಲ್ಲ, ಪ್ರಜ್ಞನಲ್ಲ. ಅಪ್ರಜ್ಞನಲ್ಲ, ಅದೃಶ್ಯನು, ವ್ಯವಹಾರಕ್ಕೆ ಎಟುಕದಿರುವಂತಹವನು. ಗ್ರಹಿಸುವುದಕ್ಕೆ (ಸಾಧ್ಯವಾಗ) ಆಗದಿರುವಂತಹವನು. ಲಕ್ಷಣರಹಿತನು. ಚಿಂತಿಸಲಾರದಂತಹವನು. ಶಬ್ದದಿಂದ (ಇದು ಹೀಗೇ ಎಂದು) ನಿರ್ದೇಶಿಸಲು ಸಾಧ್ಯವಿಲ್ಲದಂತಹವನು. ಏಕಾತ್ಮ ಪ್ರತ್ಯಯ-

ಸಾರನು, ಪ್ರಪಂಚೋಪಶಮನು ಶಾಂತನು, ಶಿವ, ಅದ್ವೈತನಾಗಿರುವ, ಆತನೇ ತುರೀಯನು. ಆ ವಿಧವಾಗಿ ಮಾನ್ಯತೆಯನ್ನು ನೀಡುತ್ತಾರೆ. ಆತನೇ ಆತ್ಮ, ಆತನನ್ನು ತಿಳಿದುಕೊಳ್ಳಬೇಕು.

**ಮಂ.ಶ್ಲೋ.॥ ಸೋಽಯಮಾತ್ಮಾಽಧ್ಯಕ್ಷರಮೋಂಕಾರೋಽಧಿಮಾತ್ರಂ, ಪಾದಾ ಮಾತ್ರಾ, ಮಾತ್ರಾಶ್ಚ ಪಾದಾ, ಅಕಾರ ಉಕಾರೋ ಮಕಾರ ಇತಿ ॥ 8**

ತಾ॥ ಚತುಷ್ಪಾದವೆಂದು ಹೇಳಲಾದ ಆ ಆತ್ಮ ಅಕ್ಷರ ದೃಷ್ಟಿಯಲ್ಲಿ ಓಂಕಾರವು ಮಾತ್ರ ರೂಪದಲ್ಲಿದೆ. ಅವು ಅಕಾರ, ಉಕಾರ, ಮಕಾರಗಳು. ಮಾತ್ರಗಳೇ ಪಾದಗಳು. (ಮಾಂಡೂಕ್ಯ ಕಾರಿಕೆ: ಓಂಕಾರದ ಪ್ರಥಮ ಪಾದವು ಅಕಾರವು ತದಧಿಪತಿ ವಿಶ್ವ. ಜಾಗ್ರದವಸ್ಥೆಯನ್ನು ನಡೆಸುತ್ತಾ ಸ್ಥೂಲಶರೀರಕ್ಕೆ ಅಧಿಪತಿಯಾಗಿದ್ದಾನೆ. ದ್ವಿತೀಯ ಪಾದವು ಉಕಾರವು ತದಧಿಪತಿ ತೈಜಸನು ಸ್ವಪ್ನಾವಸ್ಥೆಯುಳ್ಳ ಸೂಕ್ಷ್ಮ ಶರೀರವನ್ನು ನಡೆಸುತ್ತಿರುತ್ತಾನೆ. ಮಕಾರವು ಪ್ರಾಜ್ಞನು, ಆನಂದಮಯನು. ಕಾರಣ ಶರೀರವನ್ನು ನಡೆಸುತ್ತಿರುತ್ತಾನೆ.)

**ಮಂ.ಶ್ಲೋ.॥ ಜಾಗರಿತಸ್ಥಾನೋ ವೈಶ್ವಾನರೋಽಕಾರಃ, ಪ್ರಥಮಾ ಮಾತ್ರಾ ಆಪ್ತೇರಾದಿಮತ್ವಾ-ದ್ವಾಽಽಪ್ನೋತಿಹವೈ ಸರ್ವಾನ್ ಕಾಮನಾದಿಶ್ಚ ಭವತಿ, ಯ ಏವಂ ವೇದ॥ 9**

ತಾ॥ ವ್ಯಾಪ್ತಿಯಿಂದಾಗಲಿ, ಮೊದಲನೆಯದು ಇರುವುದರಿಂದಾಗಲಿ, ಜಾಗ್ರದವಸ್ಥೆಯಲ್ಲಿರುವ ವೈಶ್ವಾನರನು 'ಅಕಾರ'ವೆನ್ನುವ ಮೊದಲ ಮಾತ್ರೆ. ಈ ವಿಷಯವನ್ನು ಯಾರು ತಿಳಿದುಕೊಳ್ಳುತ್ತಾರೋ ಅವರಿಗೆ ಸಮಸ್ತ ಕಾಮನೆಗಳ ಪ್ರಾಪ್ತಿಯಾಗುತ್ತದೆ. ಅವನು ಪ್ರಥಮನಾಗಿಯೂ ಸಹ ಇರುತ್ತಾನೆ.

**ಮಂ.ಶ್ಲೋ.॥ ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರೋತ್ಕರ್ಷಾದುಭಯತ್ವಾದ್ವೋತ್ಕರ್ಷತಿ ಹವೈ ಜ್ಞಾನ ಸಂತತಿಂ ಸಮಾನಶ್ಚ ಭವತಿ; ನಾಸ್ಯಾ ಬ್ರಹ್ಮವಿತ್ಕುಲೇ ಭವತಿ ಯ ಏವಂ ವೇದ ॥ 10**

ತಾ॥ ಉತ್ಕರ್ಷದಿಂದಾಗಲೀ, ಇಲ್ಲವೇ ಎರಡರ ಮಧ್ಯದಲ್ಲಿರುವುದರಿಂದಾಗಲೀ ಸ್ವಪ್ನಾವಸ್ಥೆ-ಯಲ್ಲಿರುವ ತೈಜಸನು, ಉಕಾರವೆನ್ನುವ ಎರಡನೆಯ ಮಾತ್ರೆ. ಯಾರು ಈ ವಿಧವಾಗಿ ತಿಳಿಯು-ವಂತಹವರಾಗುತ್ತಾರೋ ಅವರು ಜ್ಞಾನ ಸಂತತಿಯನ್ನು ಬೆಳಸಿಕೊಳ್ಳುತ್ತಾರೆ. ಅವರ ವಂಶದಲ್ಲಿ ಬ್ರಹ್ಮವಿದ್ಯೆಯನ್ನು ತಿಳಿಯದವರ್ಯಾರೂ ಇರುವುದಿಲ್ಲ. (ಮಾಂಡೂಕ್ಯಕಾರಿಕಃ ಸೃಷ್ಟಿ ಚಿಂತನೆಯನ್ನು ಮಾಡುವ ಕೆಲವರು ಈ ಜಗತ್ತು ಈಶ್ವರ ವಿಭೂತಿಯಿಂದಲೇ ಸೃಷ್ಟಿಯಾಗಿದೆಯೆಂದು ಭಾವಿಸುತ್ತಿದ್ದಾರೆ. ಕೆಲವರು ಮಹಾತ್ಮರು ಈ ಜಗತ್ ಸೃಷ್ಟಿ ಸ್ವಪ್ನದಂತಿರುವುದೆಂದು ಮಾಯಾ ಸ್ವರೂಪವೆಂದು ಭಾವಿಸುತ್ತಿದ್ದಾರೆ.)

**ಮಂ.ಶ್ಲೋ.॥ ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ, ಮಿತೇರಪೀತೇರ್ವಾ, ಮಿನೋತಿ ಹವಾ ಇದಗ್ಂ, ಸರ್ವಮಪೀತಿಶ್ಚ ಭವತಿ ಯ ಏವಂ ವೇದ ॥ 11**

ತಾ॥ ಅಳತೆ ಮಾಡುವ ಸ್ವಭಾವವನ್ನು ಕುರಿತಾಗಲೀ, ಸಮಸ್ತವನ್ನು ಒಂದು ಮಾಡುವ ಸ್ವಭಾವವನ್ನು ಕುರಿತಾಗಲಿ, ಸುಷುಪ್ತಿ ಸ್ಥಾನದಲ್ಲಿರುವ ಪ್ರಾಜ್ಞನು ಮಕಾರವೆನ್ನುವ ಮೂರನೆಯ ಮಾತ್ರೆ. ಈ ವಿಧವಾಗಿ ಯಾರು ತಿಳಿದುಕೊಳ್ಳುವಂತಹವರಾಗುತ್ತಾರೋ, ಅವರು ಈ ಸಮಸ್ತವನ್ನು

ಅಳೆದುಬಿಡುವಂತಹವರಾಗುತ್ತಾರೆ. ಏಕೀಭಾವವನ್ನು ಹೊಂದುತ್ತಾರೆ. ಜಗತ್ಕಾರಣ, ಸ್ವರೂಪವಾಗಿ ಸಹ ಆಗಬಲ್ಲರು.

**ಮಂ.ಶ್ಲೋ.॥ ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತ, ಏವಮೋಂಕಾರ ಆತ್ಮೈವ, ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ, ಯ ಏವಂ ವೇದ॥ 12**

ತಾ॥ ಮಾತ್ರಾ ರಹಿತವಾದುದು ತುರೀಯವು. ಅದು ವ್ಯವಹಾರಾತೀತವಾದುದು. ಪ್ರಪಂಚೋಪ-ಶಮನವಾದುದು. ಮಂಗಳವು ಅದ್ವೈತವು ಆಗಿದೆ. ಹೀಗೆ ಓಂಕಾರವೇ ಆತ್ಮ. ಯಾರು ಈ ವಿಧವಾಗಿ ತಿಳಿದುಕೊಳ್ಳಬಲ್ಲರೋ ಅವರು ತನ್ನಲ್ಲಿ ತಾನು ಪ್ರವೇಶಿಸುತ್ತಾರೆ. (ಸ್ವರೂಪ ಸ್ಥಿತಿಯನ್ನು ಹೊಂದುತ್ತಾರೆ. (ಎಲ್ಲ ಅವಸ್ಥೆಗಳಲ್ಲೂ ತುರೀಯವಿರುವ ರೀತಿಯಲ್ಲಿ ಓಂಕಾರವು ಎಲ್ಲದರಲ್ಲೂ ಅಂತರ್ಯಾಮಿ-ಯಾಗಿರುತ್ತದೆ.)

**ಮಾಂಡೂಕ್ಯೋಪನಿಷತ್ ಸಮಾಪ್ತಿ**

**ಶಾಂತಿ ಮಂತ್ರ॥ ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ**



# ತೈತ್ತಿರೀಯೋಪನಿಷತ್ – 7

**(ಕೃಷ್ಣ ಯಜುರ್ವೇದಾಂತರ್ಗತ)**

**ಶಾಂತಿ ಮಂತ್ರ॥ಓಂ – ಸಹನಾವವತು – ಸಹನೌ ಭುನಕ್ತು – ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು – ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

## ಶೀಕ್ಷಾವಲ್ಲಿ – ಪ್ರಥಮಾಧ್ಯಾಯಃ –

## ಪ್ರಥಮೋಽನುವಾಕಃ

**ಮಂ.ಶ್ಲೋ.॥ ಓಮ್ ಶನ್ನೋ ಮಿತ್ರಃ ಶಂ ವರುಣಃ । ಶನ್ನೋ ಭವತ್ವರ್ಯಮಾ । ಶನ್ನ ಇಂದ್ರೋ ಬೃಹಸ್ಪತಿಃ॥ ಶನ್ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ**

**ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ। ತನ್ಮಾಮವತು । ತದ್ವಕ್ತಾರಮವತು ಅವತು ಮಾಮ್ । ಅವತು ವಕ್ತಾರಮ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ (ಸತ್ಯಂ ವದಿಷ್ಯಾಮಿ ಪಂಚಚ)**

ತಾ॥ ಮಿತ್ರನನ್ನು, ವರುಣನನ್ನು, ಆರ್ಯಮನನ್ನು, ಇಂದ್ರನನ್ನು, ಬೃಹಸ್ಪತಿಯನ್ನು ವಿಷ್ಣುವನ್ನು - ವೀರರು ಕ್ರಮವಾಗಿ ಪ್ರಾಣದಲ್ಲಿಯೂ, ಅಪಾನದಲ್ಲಿಯೂ, ನೇತ್ರದಲ್ಲಿಯೂ, ಬಲದಲ್ಲಿಯೂ ವಾಗ್ಬುದ್ಧಿಗಳಲ್ಲಿಯೂ ಪಾದಗಳಲ್ಲಿಯೂ, ಬ್ರಹ್ಮವಿದ್ಯಾ ಶ್ರವಣಧಾರಣ ಸಮರ್ಥವಂತವಾಗುವಂತೆ ನಮಗೆ ಅನುಕೂಲ ಮಾಡಿಕೊಡಲಿ. ಪರಬ್ರಹ್ಮವೇ ನಮಸ್ಕಾರ. ವಾಯುದೇವಾ ನಿನಗೆ ನಮಸ್ಕಾರ. ನೀನೇ ಪ್ರತ್ಯಕ್ಷ ಬ್ರಹ್ಮನಾಗಿದ್ದೀಯೆ. (ನಿಶ್ಚಯವಾಗಿಯೂ) ನೀನೇ ಪ್ರತ್ಯಕ್ಷ ಬ್ರಹ್ಮನೆಂದು ಹೇಳುತ್ತಿದ್ದೇನೆ. ಆ ಪ್ರಯತ್ನ ಸತ್ಯವಾಗಿ ಬರುವ ವಾಕ್ಕು ರೂಪವಾಗಿ (ನಿನ್ನನ್ನೇ) ಹೇಳುತ್ತಿದ್ದೇನೆ. ಸತ್ಯರೂಪವಾದ ವಾಕ್ಕಿನೊಂದಿಗೆ (ನಿನ್ನನ್ನೇ) ಹೇಳುತ್ತಿದ್ದೇನೆ. (ಅಂತಹ ನೀನು) ಆ ನೀನು ನನ್ನನ್ನು ರಕ್ಷಿಸುವಂತಾಗಲಿ. ಆ ನೀನು ಆಚಾರ್ಯನನ್ನು ರಕ್ಷಿಸುವಂತಹವನಾಗಲಿ, ನನ್ನನ್ನು ಕಾಪಾಡುವವನಾಗಲಿ (ಆ ನೀನು) ವಕ್ತನನ್ನು (ಮಾತಾಡುವವನನ್ನು) ರಕ್ಷಿಸುವವನಾಗಲಿ, ಓ ಪ್ರಣವ ಬ್ರಹ್ಮವೇ, ಆಧ್ಯಾತ್ಮಿಕ ಆದಿ ಭೌತಿಕ, ಆದಿದೈವಿಕವಾದ ತಾಪತ್ರಯಗಳು ನಮಗೆ ಇಲ್ಲದಂತಾಗಲಿ. ಶಾಂತಿಯನ್ನುಂಟು ಮಾಡಲಿ.

## ಶೀಕ್ಷಾವಲ್ಲಿ – ಪ್ರಥಮಾಧ್ಯಾಯಃ – ದ್ವಿತೀಯೋಽನು ವಾಕಃ

**ಮಂ.ಶ್ಲೋ.॥ ಓಂ ಸಹನಾವವತು । ಸಹನೌ ಭುನಕ್ತು, ಸಹ ವೀರ್ಯಂ ಕರವಾವಹೈ**
**ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ ಓಂ ಶಾನ್ತಿಶ್ಶಾನ್ತಿಶ್ಶಾನ್ತಿಃ**

ತಾ॥ (ಗುರು ಶಿಷ್ಯರಾದವರಿಗೆ) ನಮ್ಮನ್ನು ಆ ಪರಮಾತ್ಮ ರಕ್ಷಿಸುವಂತಾಗಲಿ. ನಮಗೆ ಪೋಷಣೆಯನ್ನುಂಟು ಮಾಡಲಿ. ನಾವು ಒಟ್ಟಿಗೆ ವಿದ್ಯೆಗೆ ಬಲವನ್ನು ಕೊಡುವಂತಾಗಲಿ, ನಾವು ಓದಿದ ವಿದ್ಯೆ ತೇಜಸ್ಸನ್ನೊಳಗೊಂಡಿರುವಂತಾಗಲಿ, ನಾವು ಪರಸ್ಪರ ದ್ವೇಷ ಮಾಡದಿರುವಂತಾಗಲಿ. (ತ್ರಿವಿಧ ತಾಪಗಳು ಶಾಂತಿ ಹೊಂದಲಿ)

**ಮಂ.ಶ್ಲೋ.॥ ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ। ವರ್ಣಸ್ಸ್ವರಃ । ಮಾತ್ರಾ ಬಲಮ್**
**ಸಾಮ ಸಂತಾನಃ। ಇತ್ಯುಕ್ತಶ್ಶೀಕ್ಷಾಧ್ಯಾಯಃ ॥ (ಶೀಕ್ಷಾಂ ಪಞ್ಚ)**

ತಾ॥ ಈ ಅಧ್ಯಾಯದಲ್ಲಿ ಅಕಾರಾದಿ ವರ್ಣಗಳನ್ನು, ಉದಾತ್ತಾದಿ ಸ್ವರಗಳನ್ನು, ಹ್ರಸ್ವದೀರ್ಘಾದಿ ಮಾತ್ರೆಗಳನ್ನು, ಇವುಗಳ ಅಭ್ಯಾಸದಲ್ಲಿ ಪ್ರಯತ್ನ ವಿಶೇಷವನ್ನು, ವರ್ಣಗಳನ್ನು ಸಂಧಿ ಮಾಡಲು ಇವೆಲ್ಲವನ್ನು ಹೇಳುವುದರಿಂದ ಇದನ್ನು ಶೀಕ್ಷಾ (ವಲ್ಲಿ) ಧ್ಯಾಯವೆಂದು ಹೇಳಲಾಗುತ್ತದೆ.

## ಶೀಕ್ಷಾವಲ್ಲಿ – ಪ್ರಥಮಾಧ್ಯಾಯಃ – ತೃತೀಯೋಽನುವಾಕಃ

**ಮಂ.ಶ್ಲೋ.॥ ಸಹನೌ ಯಶಃ ಸಹನೌ ಬ್ರಹ್ಮವರ್ಚಸಮ್ । ಅಥಾತಸ್ಸಗ್‌ಂಹಿತಾಯಾ ಉಪನಿಷದಂ**
**ವ್ಯಾಖ್ಯಾಸ್ಯಾಮಃ ಪಞ್ಚಸ್ವಧಿಕರಣೇಷು । ಅಧಿಲೋಕಮಧಿಜ್ಯೋತಿಷಮಧಿವಿದ್ಯಮಧಿ-**

-ಪ್ರಜಮಧ್ಯಾತ್ಮಮ್ । ತಾ ಮಹಾಸಗ್‌ಂಹಿತಾ ಇತ್ಯಾಚಕ್ಷತೇ । ಅಥಾಧಿಲೋಕಮ್ । ಪೃಥಿವೀ ಪೂರ್ವ್ವರೂಪಮ್। ದ್ಯೌರುತ್ತರರೂಪಮ್ । ಆಕಾಶಸ್ಸಂಧಿಃ ॥ (1) ವಾಯು-ಸ್ಸಂಧಾನಮ್ । ಇತ್ಯಧಿಲೋಕಮ್ । ಅಥಾಧಿಜ್ಯೋತಿಷಮ್ । ಅಗ್ನಿಃ ಪೂರ್ವ್ವರೂಪಮ್ ಆದಿತ್ಯ ಉತ್ತರರೂಪಮ್. ಆಪಸ್ಸಂಧಿಃ । ವೈದ್ಯುತಸ್ಸಂಧಾನಮ್ । ಇತ್ಯಧಿಜೋತಿಷಮ್। ಅಥಾಧಿವಿದ್ಯಮ್ । ಆಚಾರ್ಯಃ ಪೂರ್ವ್ವರೂಪಮ್ (2) ಅನ್ತೇವಾಸ್ಯುತ್ತರರೂಪಮ್ । ವಿದ್ಯಾಸಂಧಿಃ । ಪ್ರವಚನಂ ಸಂಧಾನಗ್‌ಮ್ । ಇತ್ಯಧಿವಿದ್ಯಮ್ । ಅಥಾಧಿಪ್ರಜಮ್ । ಮಾತಾ ಪೂರ್ವ್ವರೂಪಮ್ । ಪಿತೋತ್ತರರೂಪಮ್ ಪ್ರಜಾಸಂಧಿಃ । ಪ್ರಜನನಮ್ । ಸಂಧಾನಮ್ । ಇತ್ಯಧಿಪ್ರಜಮ್ । (3) ಅಥಾಧ್ಯಾತ್ಮಮ್ । ಅಧರಾಹನುಃ ಪೂರ್ವ್ವರೂಪಮ್। ಉತ್ತರಾ ಹನುರುತ್ತರರೂಪಮ್ । ವಾಕ್ಸಂಧಿಃ । ಜಿಹ್ವಾ ಸಂಧಾನಮ್ । ಇತ್ಯಧ್ಯಾತ್ಮಮ್। ಇತೀಮಾ ಮಹಾಸಗ್‌ಂಹಿತಾಃ । ಯ ಏವಮೇತಾ ಮಹಾಸಗ್‌ಂಹಿತಾ ವ್ಯಾಖ್ಯಾತಾ ವೇದ । ಸಂಧೀಯತೇ ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗ್ಯೇಣ ಲೋಕೇನ ॥ (4) (ಸಂಧಿರಾಚಾರ್ಯಃ ಪೂರ್ವ್ವರೂಪಮಿತ್ಯಧಿಪ್ರಜಂ ಲೋಕೇನ)

ತಾ॥ ಈ ಉಪನಿಷತ್ತಿನಲ್ಲಿ ಲೋಕಾದಿಗಳ ಪರಸ್ಪರ ಸಂಬಂಧಗಳು. ಲೋಕಗಳಿಂದ ಲಭಿಸುವ ಪ್ರಯೋಜನಗಳು, ಶಿಕ್ಷಾರೂಪದಲ್ಲಿ ವರ್ಣಿಸಲಾಗಿದೆ. ಪ್ರಪಂಚದೆಲ್ಲೆಡೆ ಸಂಹಿತೆ, ಸಂಧಿ ಸಮನ್ವಯವು ಗೋಚರಿಸುತ್ತದೆ. ಆ ಮಹಾ ಸಂಧಿಗಳ ರೂಪ ಇಲ್ಲಿವೆ.

| ಅಧಿಕರಣ | ಪೂರ್ವ ರೂಪಕ | ಉತ್ತರ ರೂಪಕ | ಸಂಧಿ | ಸಂಧಾನ |
|---|---|---|---|---|
| 1. ಅಧಿಲೋಕ | ಪೃಥಿವಿ | ದಿನ | ಆಕಾಶ | ವಾಯು |
| 2. ಅಧಿಜ್ಯೋತಿಷ | ಅಗ್ನಿ | ಸೂರ್ಯ | ಜಲ | ವಿದ್ಯುತ್ |
| 3. ಅಧಿವಿದ್ಯೆ | ಆಚಾರ್ಯ | ಶಿಷ್ಯ | ವಿದ್ಯೆ | ಪ್ರವಚನ |
| 4. ಅಧಿಪ್ರಜೆ | ಮಾತ | ಪಿತ | ಪ್ರಜೆ | ಪ್ರಜನನ |
| 5. ಅಧ್ಯಾತ್ಮ | ಕೆಳದವಡೆ | ಮೇಲ್ದವಡೆ | ವಾಣಿ | ಜಿಹ್ವೆ |

ಈ ತೈತ್ತಿರೋಯುಪನಿಷತ್ತನ್ನು ತಿಳಿದುಕೊಳ್ಳುವುದರಿಂದ ಉಂಟಾಗುವ ಯಶಸ್ಸು, ಬ್ರಹ್ಮತೇಜಸ್ಸು. ಇವು ಶಿಷ್ಯ ಆಚಾರ್ಯರೆನ್ನುವ ಇಬ್ಬರಿಗೂ ಉಂಟಾಗುವುದೆಂದು ಆಶಿಸಿ ಪ್ರಾರ್ಥನೆ ಮಾಡುವ ಶಿಷ್ಯನಿಗೆ, ಅಧ್ಯಯನ ಮುಗಿದ ಮೇಲೆ ಆ ಗ್ರಂಥವನ್ನು ಮನನ ಮಾಡುವಂತಹ ಬುದ್ಧಿ

ಅದರ ಅರ್ಥವನ್ನು ಶೀಘ್ರವಾಗಿ ಅರಿತುಕೊಳ್ಳಲು ಶಕ್ತಿಯಿಲ್ಲವಾದುದರಿಂದ ಆ ಶಕ್ತಿಯುಂಟಾಗಲು ಅಧಿಲೋಕವೆಂದು ಅಧಿಜ್ಯೋತಿಷವೆಂದು, ಅಧಿವಿದ್ಯೆಯೆಂದು, ಅಧಿಪ್ರಜೆಯೆಂದು, ಅಧ್ಯಾತ್ಮವೆಂದು ಹೇಳಲಾಗಿರುವ ಈ ವಿಷಯಗಳನ್ನು ಈ ಸಂಹಿತೆಯ ಉಪಾಸನೆಯ ಬಗ್ಗೆ ಸ್ಪಷ್ಟವಾಗಿ ಹೇಳುತ್ತಾ ಇರುತ್ತೇವೆ. ವೇದವೇತ್ತರುಗಳು ಈ ಅಧಿಲೋಕ ಮುಂತಾದ ಐದು ವಿಷಯಗಳನ್ನು ಶ್ರೇಷ್ಠ ಸಂಹಿತೆಗಳೆಂದು ಹೇಳುತ್ತಾರೆ. ಹೀಗೆ ಹೇಳಲಾದ ಐದರಲ್ಲಿ ಮೊದಲನೆಯದಾದ ಅಧಿಲೋಕವನ್ನು ಧ್ಯಾನಿಸಬೇಕಾದ ಪದ್ಧತಿಯನ್ನು ಹೇಳಲಾಗಿದೆ.

ಹೇಗೆಂದರೆ ಭೂಮಿಯೇ ಸಂಹಿತಾಪೂರ್ವ-ವರ್ಣವಾಗಿರುವ ಆಕಾರವೆಂದು. ಅಂತರಿಕ್ಷವೇ ಸಂಹಿತಾ ಉತ್ತರವರ್ಣವಾದ ಉಕಾರವೆಂದು, ಈ ಎರಡು ವರ್ಣಗಳ ಸಂಧಿಯಾದ ಓಂಕಾರವನ್ನು ಆಕಾಶವೆಂದು ಅದನ್ನು ಉಚ್ಚರಿಸುವುದಕ್ಕೆ ಅನುಕೂಲವಾದ ಪ್ರಯತ್ನ ವಿಶೇಷವಾದ ಅಗತ್ಯ ವಾಯುವನ್ನು ತಿಳಿದುಕೊಂಡು ಧ್ಯಾನಿಸುವುದೇ ಅಧಿಲೋಕೋಪಾಸನೆಯೆಂದು ಹೇಳಲಾಗಿದೆ. ಈ ಪ್ರಕಾರವಾಗಿಯೇ ಅಧಿಜ್ಯೋತಿಯನ್ನು, ಅಧಿವಿದ್ಯೆಯೆನ್ನುವ, ಅಧಿಪ್ರಜೆಯೆನ್ನುವ ಅಧ್ಯಾತ್ಮವೆನ್ನುವ ಈ ನಾಲ್ಕು ವಿಷಯಗಳನ್ನು ತಿಳಿದುಕೊಂಡು ಉಪಾಸಿಸಬೇಕು.

ಹೀಗೆ ಮಹಾಸಂಹಿತೆಗಳೆಂದು ಹೇಳಲಾದ ಇವುಗಳನ್ನು ತಿಳಿದುಕೊಂಡು ಉಪಾಸಿಸಬೇಕು. ಹೀಗೆ ಮಹಾಸಂಹಿತೆಗಳನ್ನು ಹೇಳಲಾದ ಇವನ್ನು ತಿಳಿದುಕೊಂಡು ಕಾಮಿಯಾಗಿ ಉಪಾಸನೆ ಮಾಡುವವನು ಬಯಸಿದ ಫಲವನ್ನು ಪಡೆಯುತ್ತಾನೆ. ನಿಷ್ಕಾಮಿಯಾಗಿ ಉಪಾಸನೆ ಮಾಡುವವನು ಬ್ರಹ್ಮವಿದ್ಯೆಯನ್ನು ಹೊಂದುತ್ತಾನೆ.

## ಶೀಕ್ಷಾವಲ್ಲಿ – ಪ್ರಥಮಾಧ್ಯಾಯಃ – ಚತುರ್ಥೋಽನುವಾಕಃ

ಮಂ.ಶ್ಲೋ.॥ ಯಶ್ಛನ್ದಸಾಮೃಷಭೋವಿಶ್ವರೂಪಃ ಛನ್ದೋಭ್ಯೋಽಧ್ಯಮೃತಾತ್ಸಂಬಭೂವ । ಸಮೇನ್ದ್ರೋ ಮೇಧಯಾಸ್ಪೃಣೋತು । ಅಮೃತಸ್ಯ ದೇವಧಾರಣೋ ಭೂಯಾಸಮ್ । ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಮ್ । ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ, ಶ್ರುತಂ ಮೇ ಗೋಪಾಯ । ಆವಹನ್ತೀ ವಿತನ್ವಾನಾ ॥ (1) ಕುರ್ವಾಣಾಚೀರಮಾತ್ಮನಃ । ವಾಸಾಂಸಿ ಮಮಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಸ್ಸಹಾ ಸ್ವಾಹಾ । ಆ ಮಾ ಯನ್ತು ಬ್ರಹ್ಮಚಾರಿಣಃ ಸ್ವಾಹಾ । (ವಿ ಮಾ ಯನ್ತು ಬ್ರಹ್ಮ ಚಾರಿಣಃ ಸ್ವಾಹಾ । ಪ್ರ ಮಾ ಯನ್ತು ಬ್ರಹ್ಮಚಾರಿಣಃ ಸ್ವಾಹಾ । ದಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ ಶಮಾ ಯನ್ತು ಬ್ರಹ್ಮಚಾರಿಣಃ ಸ್ವಾಹಾ) ಯಶೋ ಜನೇಽಸಾನಿಸ್ವಾಹಾ । ಶ್ರೇಯೋನ್ವಸ್ಯ ಸೋಽಸಾನಿಸ್ವಾಹಾ । ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸ ಮಾ ಭಗಪ್ರವಿಶ ಸ್ವಾಹಾ (2) ತಸ್ಮಿಂತ್ಸಹಸ್ರಶಾಖೇ । ನಿಭಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಪಃ ಪ್ರವತಾಯನ್ತಿ । ಯಥಾಮಾಸಾ ಅಹರ್ಜರಮ್ ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯಂತು ಸರ್ವತಃ ಸ್ವಾಹಾ ॥ (3) ಪ್ರತಿವೇಽಶೋಽಸಿ ಪ್ರಮಾಭಾಹಿ ಪ್ರ ಮಾ ಪದ್ಯಸ್ವ ॥ ...

ಮೇಧಾಕಾಂಕ್ಷಿಗೂ, ಶ್ರೀಕಾಂಕ್ಷಿಯಾದವನಿಗೂ, ಆ ಮೇಧೆಯನ್ನು, ಸಂಪತ್ತನ್ನು ಪಡೆಯುವುದಕ್ಕೆ ಸಾಧನವಾದ ಜಪಹೋಮಗಳನ್ನು ಹೇಳಲಾಗುತ್ತಿವೆ. ಅಮೃತ ಸ್ವರೂಪವಾದ ವೇದಗಳಿಂದ ಹುಟ್ಟಿ, ವೇದಗಳಲ್ಲೇ ಶ್ರೇಷ್ಠವಾಗಿದ್ದು, ಸರ್ವಸ್ವರೂಪವು, ಪರಮೇಶ್ವರ ಸ್ವರೂಪವು ಆದಂತಹ ಓಂಕಾರವು, ನನ್ನನ್ನು ಮರೆತುಬಿಡದಿರುವ ಬುದ್ಧಿಯೊಂದಿಗೆ ಸ್ಪರ್ಶಿಸುವಂತಾಗಲಿ! ಪ್ರಕಾಶ ಸ್ವರೂಪವಾದ ಓ ಪ್ರಣವವೇ! ಬ್ರಹ್ಮಜ್ಞಾನದ ಧಾರಣೆ ನನಗೆ ಉಂಟಾಗಲಿ! ನನ್ನ ಶರೀರ ಪರಿಶುದ್ಧವಾಗುವಂತಾಗಲಿ! ನನ್ನ ಜಿಹ್ವೆ, ಮಾಧುರ್ಯವನ್ನು ಹೊಂದಿರಲಿ! ಶ್ರೋತ್ರಗಳಿಂದ ನಾನು ಅನೇಕವನ್ನು ಆಲಿಸುವಂತಾಗಲಿ! ಓಂಕಾರವೇ! ನೀನು ಬ್ರಹ್ಮನಿಗೆ ಸ್ಥಾನವಾಗಿ ಮರೆವು ಇಲ್ಲದ ಬುದ್ಧಿಯಿಂದ ಮುಚ್ಚಿಕೊಂಡಿರುವೆ. ಆವರಿಸಿಕೊಂಡಿರುವೆ. ಇಂತಹ ನೀನು ನಾನು ಕೇಳಿದ ಆತ್ಮಜ್ಞಾನ, ಮುಂತಾದ ವಿಜ್ಞಾನವನ್ನು ರಕ್ಷಿಸು! (ಈ ಪ್ರಕಾರವಾಗಿ ಮೇಧಾಕಾಂಕ್ಷಿಯು ಈ ಮಂತ್ರಜಪದಿಂದ ಪ್ರಣವವನ್ನು ಪ್ರಾರ್ಥಿಸುವುದನ್ನು ಹೇಳಲಾಗಿದೆ.) ಹೀಗೆ ಪ್ರಾರ್ಥನೆ ಮಾಡಿ ಬ್ರಹ್ಮಪ್ರಾಪ್ತಿಗೆ ಸಾಧನವಾದ ಬುದ್ಧಿಯನ್ನು ಹೊಂದಿದ ಮೇಲೆ ನನಗೆ ವಸ್ತ್ರಗಳನ್ನು ದಯಪಾಲಿಸು, ಗೋವುಗಳನ್ನು ವೃದ್ಧಿಗೊಳಿಸು, ಸದಾಕಾಲ ಅನ್ನ ನೀರು ದೊರೆಯುವಂತಾಗಲಿ, ರೋಮಗಳುಳ್ಳ ಕುರಿ, ಮೇಕೆ ಮತ್ತಿತರ ಪಶುಗಳಿಂದ ಕೂಡಿರುವ ಮಹಾಲಕ್ಷ್ಮಿಯನ್ನು ಹೊಂದುವಂತೆ ಮಾಡು! ಪೂಜಾರ್ಹವಾದ ಓ ಪ್ರಣವವೇ! ಬ್ರಹ್ಮಚಾರಿಗಳು ನನ್ನ ಬಳಿಗೆ ಬರುವಂತಾಗಲಿ! ಸಮಸ್ತ ಜನರಲ್ಲಿ ನಾನು ಕೀರ್ತಿಗಳಿಸುವಂತಾಗಲಿ! ಧನವಂತರಲ್ಲಿ ಅತ್ಯಂತ ಶ್ರೇಷ್ಠವಂತನಾಗಲಿ! ಆ ಬ್ರಹ್ಮನಿಗೆ ಸ್ಥಾನಭೂತವಾದ, ನಿನ್ನನ್ನು ನಾನು ಪ್ರವೇಶಿಸುವಂತಾಗಲಿ! ಅಂತಹ ನೀನು ನನ್ನನ್ನು ಹೊಂದು. ಅನೇಕ ಭೇದಗಳಿರುವ ಅಂತಹ ನಿನ್ನಲ್ಲಿ ನಾನು ಪರಿಶುದ್ಧಿ ಮಾಡಿಕೊಳ್ಳುತ್ತಿದ್ದೇನೆ. ಬ್ರಹ್ಮಸ್ವರೂಪವಾದ ಓ ಪ್ರಣವವೇ! ನೀರು ತಗ್ಗು ಪ್ರದೇಶಕ್ಕೆ ಹರಿದು ಹೋಗುವಂತೆ, ತಿಂಗಳುಗಳು ಸಂವತ್ಸರವನ್ನು ಹೊಂದಿದ ರೀತಿಯಲ್ಲಿ, ಬ್ರಹ್ಮಚಾರಿಗಳು ಎಲ್ಲ ದಿಕ್ಕುಗಳಿಂದಲೂ ನನ್ನನ್ನು ಹುಡುಕಿಕೊಂಡು ಬರುವಂತಾಗಲಿ!

ಓ ಓಂಕಾರವೇ! ನೀನು ನನಗೆ ಸಮಸ್ತ ಪಾಪಗಳಿಂದಾಗಿ ಒದಗಿದ ದುಃಖವನ್ನು ಹೋಗ-ಲಾಡಿಸಲು ಶ್ರಮ ಪಡುವವರಿಗೆ ಆಶ್ರಯ ತಾಣವಾಗಿರುವೆ ಆ ಕಾರಣದಿಂದ ನನ್ನನ್ನು ಪ್ರಕಾಶಿಸುವಂತೆ ಮಾಡು. ನೀನು ನನ್ನನ್ನು ಹೊಂದು. ನನ್ನನ್ನು ನಿನ್ನ ಸ್ವಸ್ವರೂಪವನ್ನಾಗಿ ಮಾಡು. ಶ್ರೀಕಾಂಕ್ಷಿಯಾದ ಜನನು ಪ್ರಥಮದಲ್ಲಿ ಹೇಳಿದ ಜಪಕ್ಕಾಗಿ ಮಂತ್ರದಿಂದ ಆ ನಂತರ ಹೇಳಿದ ಹೋಮಕ್ಕೆಂದು ಹೇಳಿದ ಮಂತ್ರದಿಂದ ಕ್ರಮವಾಗಿ ಪ್ರಣವ ಪ್ರಾರ್ಥನೆಯನ್ನು ಮಾಡಬೇಕು. ಅಲ್ಲಿಂದ ಮುಂದಕ್ಕೆ ನೀನು ನನ್ನನ್ನು ಹೊಂದು, ನನ್ನನ್ನು ನೀನು ಸ್ವಸ್ವರೂಪವಾಗಿಯೇ ಮಾಡು. (ಇತಿ ಮೇಧಾಕಾಂಕ್ಷಿ, ಶ್ರೀಕಾಂಕ್ಷಿಗಳಿಗೆ ಜಪಹೋಮಾದಿಗಳ ಮಂತ್ರಗಳನ್ನು ಹೇಳಲಾಯಿತು. ಇವೆಲ್ಲವೂ ಕ್ರಮವಾಗಿ ಜ್ಞಾನೋಪಯೋಗಕ್ಕಾಗಿಯೇ. ಈಗ ವ್ಯಾಹೃತಿ ಸ್ವರೂಪವಾದ ಹಿರಣ್ಯಗರ್ಭನೆಂಬ ಹೆಸರುಳ್ಳ ಬ್ರಹ್ಮನನ್ನು ಹೃದಯದ ಮಧ್ಯದಲ್ಲಿ ಧ್ಯಾನಿಸಬೇಕೆಂದು ಉಪದೇಶಿಸಲಾಗುತ್ತಿದೆ.) ಭೂ, ಭುವಃ, ಸುವಃ ಎನ್ನುವ ಈ ಮೂರನ್ನು ವ್ಯಾಹೃತಗಳೆನ್ನುತ್ತಾರೆ. ಮಹಾ ಚಮಸ್ಯನೆಂಬ ಋಷಿ ಮಹಹ (ಮಹಃ) ಎನ್ನುವುದನ್ನು, ಈ ಮೂರು ವ್ಯಾಹೃತಿಗಳ ಸಂಬಂಧವಾದ ನಾಲ್ಕನೆಯ ವ್ಯಾಹೃತಿಯಾಗಿ ತಿಳಿದುಕೊಂಡ. ಈ ನಾಲ್ಕು ವ್ಯಾಹೃತಿಗಳಲ್ಲಿ ಮಹಹ (ಮಹಃ) ಎನ್ನುವ ವ್ಯಾಹೃತಿಯಲ್ಲಿ ಅಂಗಿಯೆನ್ನುವ ಬ್ರಹ್ಮನ ದೃಷ್ಟಿಯನ್ನು ಕೂಡಿಸಬೇಕು (ಅದು ಹೇಗೆಂದರೆ ದೇವದತ್ತನೆನ್ನುವವನಿಗೆ ಪಾದ ಮುಂತಾದ ಅಂಗಗಳು ಎಂದೂ, ಮಧ್ಯಭಾಗವು ಅಂಗಿಯೆಂದು, ಆ ಮಧ್ಯಭಾಗವೇ ವ್ಯಾಪಕವಾದ್ದರಿಂದ

ಇತರ ಅಂಗಗಳಿಗೆ ಆತ್ಮವೆಂದು ಯಾವ ಪ್ರಕಾರವಾಗಿ ಹೇಳಲಾಗಿದೆಯೋ, ಆ ಪ್ರಕಾರವಾಗಿಯೇ) ಮಹಹ (ಮಹಃ) ಎನ್ನುವ ವ್ಯಾಹೃತಿ, ಹಿರಣ್ಯಗರ್ಭನೆಂಬ ಹೆಸರುಳ್ಳ ಬ್ರಹ್ಮನ ಮಧ್ಯಭಾಗದಲ್ಲಿರುವ ಆತ್ಮವೆಂದು ಹೇಳಲಾಗುತ್ತಿದೆ. ಇತರ ವ್ಯಾಹೃತಿಗಳು ಪಾದ ಮೊದಲಾದ ಅವಯವಗಳಾಗಿ ಕಲ್ಪಿಸಲಾಗುತ್ತಿವೆ.

ಅದು ಹೇಗೆಂದರೆ, ಮೊದಲನೆಯದಾದ "ಭೂಃ" ಎನ್ನುವ ವ್ಯಾಹೃತಿಯು ಆ ಹಿರಣ್ಯಗರ್ಭನಿಗೆ ಪಾದಗಳಾಗಿ, ಎರಡನೆಯದಾದ "ಭುವಃ" ಎನ್ನುವ ವ್ಯಾಹೃತಿ ಆತನಿಗೆ ಬಾಹುಗಳಾಗಿಯೂ, ಮೂರನೆಯದಾದ "ಸುವಃ" ಎನ್ನುವ ವ್ಯಾಹೃತಿ ಆತನಿಗೆ ಶಿರಸ್ಸೆಂದೂ, ಈ ಪ್ರಕಾರವಾಗಿ ವ್ಯಾಹೃತಿಗಳೇ ಪಾದಾದಿ ಅವಯವಗಳಾಗಿರುವ ಬ್ರಹ್ಮವನ್ನು ಉಪಾಸಿಸಬೇಕು. ಆ ಹಿರಣ್ಯಗರ್ಭನ ಮಧ್ಯಭಾಗದಲ್ಲಿನ ಮಹಾಜ್ಮಾಹೃತಿಯೇ ಬ್ರಹ್ಮಸ್ವರೂಪವೆಂದೂ, ವ್ಯಾಪಕವಾದ ಆತ್ಮಸ್ವರೂಪವಾಗಿದೆ. ಆತ್ಮಕ್ಕೆ ಇತರ ವ್ಯಾಹೃತಿಗಳನ್ನು, ಲೋಕಗಳನ್ನು, ದೇವತೆಗಳನ್ನು, ವೇದಗಳನ್ನು, ಪ್ರಾಣಗಳನ್ನು ಅವಯವಗಳೆಂದು ಹೇಳಲಾಗಿದೆ. ಆ ಅಂಗ ವಿಶೇಷ ನಿಧಿ ಹೇಗಿರುವವೆಂದರೆ, "ಭೂಃ" ಅನ್ನುವುದೇ ಭೂತಾದಿ ಲೋಕವನ್ನು, "ಭುವಃ" ಎನ್ನುವುದೇ ಅಂತರಿಕ್ಷವನ್ನು, "ಸುವಃ" ಎನ್ನುವುದೇ ಮನುಷ್ಯಾದಿ ಪ್ರಪಂಚವನ್ನು, "ಮಹಹ" (ಮಹಃ) ಎನ್ನುವುದೇ ಸೂರ್ಯನನ್ನು, ಈ ಸೂರ್ಯನಿಂದಲೇ ಸಮಸ್ತ ಲೋಕಗಳನ್ನು ವೃದ್ಧಿಗೊಳಿಸುತ್ತವೆ.

## ಶಿಕ್ಷಾವಲ್ಲಿ – ಪ್ರಥಮಾಧ್ಯಾಯಃ – ಪಂಚಮೋಽನುವಾಕಃ

**ಮಂ.ಶ್ಲೋ.॥ ಭೂರ್ಭುವಸ್ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮು ಹ ಸ್ಮೈ ತಾಂ ಚತುರ್ಥೀಮ್ । ಮಹಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ, ಅಂಗಾನ್ಯನ್ಯಾದೇವತಾ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯನ್ತರಿಕ್ಷಮ್ । ಸುವರಿತ್ಯಸೌ ಲೋಕಃ ॥ (1) ಮಹ ಇತ್ಯಾದಿತ್ಯಃ । ಆದಿತ್ಯೇನ ವಾ ವ ಸರ್ವೇ ಲೋಕಾ ಮಹೀಯನ್ತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹಾ ಇತಿ ಚಂದ್ರಮಾಃ । ಚಂದ್ರಮನಾ ವಾ ವ ಸರ್ವಾಣಿ ಜ್ಯೋತಿಗ್ಂಷಿ । ಮಹಿಯನ್ತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಂಷಿ । (2) ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾ ವ ಸರ್ವೇ ವೇದಾ ಮಹೀಯನ್ತೇ । ಭೂರಿತಿವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹಾ ಇತ್ಯನ್ನಮ್ ॥ ಅನ್ನೇನ ವಾ ವ ಸರ್ವೇ ಪ್ರಾಣಾ ಮಹೀಯನ್ತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹನ್ತಿ । ಅಸೌ ಲೋಕೋ ಯಜೂಗ್ಂಷಿ ವೇದದ್ವೇಚ ॥ (3)**

ತಾ॥ ಭೂಃ ಎನ್ನುವುದೇ ಅಗ್ನಿಯೆಂದು, ಬುವಃ ಎನ್ನುವುದೇ ವಾಯುವೆಂದು, ಸುವಃ ಎನ್ನುವುದೇ ಸೂರ್ಯನೆಂದು, ಮಹಃ ಎನ್ನುವುದೇ ಚಂದ್ರನೆಂದು, ಈ ಚಂದ್ರನಿಂದಲೇ ಸಮಸ್ತ ತೇಜಸ್ಸುಗಳು ವೃದ್ಧಿಯಾಗುತ್ತವೆ. ಭೂಃ ಎನ್ನುವುದು ಋಕ್ಕುಗಳನ್ನು (ಗಳು) ಬುವಃ ಎನ್ನುವುದು

ನಾಮಗಳನ್ನು (ಗಳು) ಸುವಃ ಎನ್ನುವುದು ಯಜಸ್ಸುಗಳನ್ನು (ಗಳು) ಮಹಃ ಎನ್ನುವುದು ಬ್ರಹ್ಮಸ್ವರೂಪವಾದ ಓಂಕಾರವನ್ನು (ವು). ಓಂಕಾರದಿಂದಲೇ ಸಮಸ್ತ ವೇದಗಳು ವೃದ್ಧಿ ಹೊಂದುತ್ತಿವೆ. ಭೂಃ ಎನ್ನುವ ಪ್ರಾಣವನ್ನು, ಬುವಃ ಎನ್ನುವ ಅಪಾನವನ್ನು, ಸುವಃ ಎನ್ನುವ ವ್ಯಾನವನ್ನು, ಮಹಃ ಎನ್ನುವುದು ಅನ್ನವನ್ನು, ಈ ಅನ್ನದಿಂದಲೇ ಸಮಸ್ತ ಪ್ರಾಣಗಳು ವೃದ್ಧಿಯಾಗುತ್ತವೆ. ಹೀಗೆ ಹಿಂದೆ (ಇದಕ್ಕೆ ಮುಂಚೆ) ಹೇಳಲಾಗಿದೆ.

ಭೂರಾದಿ ವ್ಯಾಹೃತಿಗಳು ನಾಲ್ಕನ್ನೂ ಹದಿನಾರು ವಿಧಗಳಾಗಿ ಧ್ಯಾನಿಸಬೇಕೆಂದು ಪ್ರಾಣಾದಿ ನಾಮಾಂತದವರೆಗೂ ಇರುವ ಷೋಡಶ ಕಳೆಗಳೇ ಸ್ವರೂಪವಾಗಿರುವ ಪುರುಷನು ಉಪಾಸಿಸು-ವಂತಹವನಾಗುತ್ತಾನೆ. ಯಾರು ಅವ್ಯಾಹೃತಿಗಳನ್ನು ಈ ಪ್ರಕಾರವಾಗಿ ತಿಳಿದುಕೊಳ್ಳುತ್ತಾನೋ ಅವನು ಪರಬ್ರಹ್ಮವನ್ನು ತಿಳಿದವನಾಗುತ್ತಾನೆ. ಹೀಗೆ ತಿಳಿದುಕೊಂಡವನನ್ನು ದೇವತೆಗಳೆಲ್ಲರೂ ಪೂಜಿಸುತ್ತಾರೆ.

## ಶ್ರೀಕ್ಷಾವಲ್ಲಿ – ಪ್ರಥಮಾಧ್ಯಾಯಃ – ಷಷ್ಠೋಽನುವಾಕಃ

**ಮಂ.ಶ್ಲೋ.॥ ಸ ಯ ಏಷೋಽನ್ತಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ। ಅಮೃತೋ ಹಿರಣ್ಮಯಃ । ಅನ್ತರೇಣ ತಾಲುಕೇ । ಯ ಏಷ ಸ್ತನ ಇವಾವಲಮ್ಬತೇ । ಸೇನ್ದ್ರಯೋನಿಃ । ಯತ್ರಾಸೌ ಕೇಶಾನ್ತೋ ವಿವರ್ತತೇ । ವ್ಯಪೋಹ್ಯಶೀರ್ಷಕಪಾಲೇ । ಭೂರಿ –ತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ ॥ (1) ಸುವರಿತ್ಯಾದಿತ್ಯೇ । ಮಹಾ ಇತಿ ಬ್ರಹ್ಮಣಿ। ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ್; ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ। ಏತತ್ತತೋ ಭವತಿ । ಆಕಾಶ ಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾರಾಮಂ ಮನ ಆನನ್ದಮ್ । ಶಾನ್ತಿಸಮೃದ್ಧಮಮೃತಮ್ । (2) ಇತಿ ಪ್ರಾಚೀನಯೋಗ್ಯೋಪಾಸ್ಸ್ವ(ವಯಾ ವ ಮೃತಮೇಕಂಚ ॥)**

ತಾ॥ ಪೂರ್ವ (ಹಿಂದಿನ) ಮಂತ್ರದಲ್ಲಿ ಭೂರಾದಿ ವ್ಯಾಹೃತಿ ಸ್ವರೂಪನಾದ ಹಿರಣ್ಯಗರ್ಭನೆಂದು ಹೆಸರಿರುವ ಬ್ರಹ್ಮದ ಅಂಗಗಳನ್ನು ಹೇಳಲಾಗಿವೆ. ಆ ಬ್ರಹ್ಮವನ್ನು ಪ್ರತ್ಯಕ್ಷವಾಗಿ ಹೊಂದಲೆಂದು, ಉಪಾಸಿಸಲೆಂದು ಹೃದಯಾಕಾಶ ಸ್ಥಾನವನ್ನು ನಿರ್ದೇಶಿಸಲಾಗಿದೆ (ಹೇಳಲಾಗಿದೆ.)

ಪ್ರತ್ಯಕ್ಷವಾಗಿ ಸರ್ವಾತ್ಮಭಾವವನ್ನು ಹೊಂದಲು ಮಾರ್ಗವನ್ನು ಹೇಳಬೇಕೆಂದು ಈ ಅನುವಾಕನ್ನು ಆರಂಭಿಸಲಾಗಿದೆ. ಸರ್ವ ಪರಿಪೂರ್ಣನಾದ ಆ ಆತ್ಮ ಸರ್ವನಾಡಿಗಳಿಗೆ ಊರ್ಧ್ವ-ಭಾಗದಲ್ಲಿರುವಂತಹುದಾಗಿ, ಪ್ರಾಣಗಳಿಗೆ ಸ್ಥಾನವಾದ, ಅಧೋಮುಖವಾಗಿ ನೇತಾಡುತ್ತಿರುವ ಮಾಂಸಪಿಂಡ ರೂಪವಾದ ಹೃತ್ಪದ್ಮದಲ್ಲಿನ ಪ್ರಸಿದ್ಧವಾದ ಆಕಾಶದಲ್ಲಿ, ಮನೋಮಯನು, ಮರಣವಿಲ್ಲದವನು, ತೇಜೋಮಯನಾಗಿರುವನು, ಅಂತಹ ಪರಮಾತ್ಮನನ್ನು ಹೊಂದಲು ಮಾರ್ಗವೇನೆಂದರಿಯಲು, ಹೃದಯಕ್ಕಿಂತ ಊರ್ಧ್ವಭಾಗದಲ್ಲಿ ಸುಷುಮ್ನಾ ನಾಡಿಯಿದೆ. ಆ ಸುಷುಮ್ನಾ ನಾಡಿ ದವಡೆಗಳ ಮಧ್ಯದಲ್ಲಿರುವ ಮಾಂಸಖಂಡ ರೂಪವಾಗಿ ಸ್ತನದಂತೆ ಜೋಲಾಡುತ್ತಿದೆ. ಅದು ಯಾವ ಶಿರಃ ಪ್ರದೇಶದಲ್ಲಿ ಕೇಶಮೂಲ ವಿಭಾಗವನ್ನು ಹೊಂದಿದೆಯೋ

ಆ ಪ್ರದೇಶವನ್ನು ಹೊಂದಿ ಶಿರಃ ಕಪಾಲವನ್ನು ಸೀಳಿಕೊಂಡು ಆಚೆಗೆ ಹೋಗುತ್ತದೆ. ಅದೇ ಬ್ರಹ್ಮಪ್ರಾಪ್ತಿ ಮಾರ್ಗ.

ಆತ್ಮ ಸ್ವರೂಪವನ್ನು ತಿಳಿದುಕೊಂಡ ವಿದ್ವಾಂಸನು, ಆ ಮಾರ್ಗದ ಮೂಲಕ ಹೊರಬಂದು ಭೂರ್ಯಾದಿವ್ಯಾಹೃತಿ ಸ್ವರೂಪಗಳಾದ ಅಗ್ನಿ, ವಾಯು, ಆದಿತ್ಯ, ಬ್ರಹ್ಮಗಳಲ್ಲಿ ಆತ್ಮ ಸ್ವರೂಪನಾಗಿದ್ದು, ಸ್ವರಾಡ್ಭಾವವನ್ನು ಹೊಂದುತ್ತಾನೆ. ಹೀಗೆ ಹೊಂದಿ ಸರ್ವಸ್ವರೂಪವಾದುದರಿಂದ ಸರ್ವ ಮನಸ್ಸುಗಳಿಗೂ ಅಧಿಪತಿತ್ವವನ್ನು ಹೊಂದುತ್ತಾನೆ. ಅಂತಹವನು ಸರ್ವ ವಾಕ್ಕುಗಳಿಗೆ ಪ್ರಭುವಾಗಿ, ಸರ್ವ ಚಕ್ಷುಗಳಿಗೆ ಪ್ರಭುವಾಗಿ, ಸರ್ವ ಶ್ರೋತ್ರ (ಕಿವಿ)ಗಳಿಗೆ ಪ್ರಭುವಾಗಿ ಸರ್ವ ವಿಜ್ಞಾನಗಳಿಗೆ ಪ್ರಭುವಾಗಿ ಇರುವವನು.

ಆಕಾಶದಂತೆಯೇ ಸೂಕ್ಷ್ಮಶರೀರವನ್ನು ಹೊಂದಿ ಸರ್ವವ್ಯಾಪಕವಾದುದು. ಮೂರ್ತಾಮೂರ್ತಗಳು ಸ್ವರೂಪವಾಗಿ ಹೊಂದಿರುವಂತಹುದೆಂದು ಸರ್ವ ಪ್ರಾಣಗಳನ್ನು ಕ್ರೀಡಾ ಸ್ಥಾನವಾಗಿ ಹೊಂದಿರುವುದೆಂದು, ಸುಖಕರವಾದ ಮನಸ್ಸೇ (ಮನಸ್ಸನ್ನೇ) ಆನಂದವಾಗಿ ಹೊಂದಿದ್ದು (ಹೊಂದಿರು-ವಂತಹನಾಗಿ) ಶಾಂತಿಯಿಂದಾಗಿ ಸಮೃದ್ಧಿಯನ್ನು ಹೊಂದಿದವನಾಗಿ, ಮರಣವು ಇಲ್ಲದಂತಹ ಪರಬ್ರಹ್ಮಸ್ವರೂಪವಾಗಿರುತ್ತಾನೆ. ಆದ್ದರಿಂದ ಪ್ರಾಚೀನ ಯೋಗ್ಯನೆನ್ನುವ ಹೆಸರುಳ್ಳ ಓ ಶಿಷ್ಯನೇ! ನೀನು ಅಂತಹ ಪರಬ್ರಹ್ಮವನ್ನು ಧ್ಯಾನಿಸು.

## ಶಿಕ್ಷಾವಲ್ಲಿ – ಪ್ರಥಮಾಧ್ಯಾಯಃ – ಸಪ್ತಮೋಽನುವಾಕಃ

**ಮಂ.ಶ್ಲೋ.॥ ಪೃಥಿವ್ಯನ್ತರಿಕ್ಷಂ ದ್ಯೌರ್ದಿಶೋಽವಾನ್ತರದಿಶಾಃ । ಅಗ್ನಿರ್ವಾಯುರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ। ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್। ಪ್ರಾಣೋವ್ಯಾನೋಽಪಾನ ಉದಾನಸ್ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ತ್ವಕ್। ಚರ್ಮಮಾಗ್‌ಂಸಗ್‌ಂ ಸ್ನಾವಾಸ್ಥಿ ಮಜ್ಜಾ। ಏತದಧಿವಿಧಾಯ ಋಷಿರವೋಚತ್ ಪಾಂಕ್ತ್ಯಂ ವಾ ಇದಂ ಸರ್ವಮ್ । (1) ಪಾಂಕ್ತೇನ್ಯೈವ ಪಾಂಕ್ತ್ಯೈಗ್‌ಂಸ್ಪೃಣೋತೀತಿ। (ಸರ್ವಮೇಕಂ ಚ॥)**

ತಾ॥ ಹಿಂದೆ ವ್ಯಾಹೃತಾತ್ಮಕವಾಗಿರುವ ಯಾವ ಬ್ರಹ್ಮದ ಉಪಾಸನೆಯನ್ನು ಮಾಡಬೇಕೆಂದು ಹೇಳಲಾಗಿದೆಯೋ ಆ ಬ್ರಹ್ಮವನ್ನೇ ಈಗ ಪೃಥಿವ್ಯಾದಿ ಸ್ವರೂಪದಲ್ಲಿ ಉಪಾಸನೆ ಮಾಡಲು ಹೇಳಲಾಗುತ್ತಿದೆ. ಪೃಥಿವ್ಯಾದಿ ಪಂಚಕವನ್ನು, ಅಗ್ನ್ಯಾದಿ ಪಂಚಕವನ್ನು, ಜಲಾದಿ ಪಂಚಕವನ್ನು, ಈ ಮೂರು ಸೇರಿ ಹೊರಗಡೆ ಇರುವ ಪಾಂಙ್ಕ್ತ್ಯವೆಂದು ಹೇಳಲಾಗುತ್ತದೆ. ಈ ಬಾಹ್ಯ ಪಾಙ್ಕ್ತತ್ರಯವೇ, ಅಧಿಭೂತವನ್ನು (ಈ ಅಧಿಭೂತವೇ ಅಧಿ ದೈವತೆಗೆ ಉಪಲಕ್ಷಣ. ಅಂದರೆ ಅಧಿಭೂತದಿಂದಲೇ ಅಧಿದೈವವನ್ನು ಹೇಳಲಾಗಿದೆ.) ಈ ಅಧಿದೈವವು ಪ್ರಾಣಾದಿಪಂಚಕ, ಚರ್ಮಾದಿಪಂಚಕ, ಚಕ್ಷುರಾದಿ ಪಂಚಕಗಳಲ್ಲಿ, ಈ ಮೂರೂ ಸೇರಿ ಅಧ್ಯಾತ್ಮ ಪಾಙ್ಕ್ತತ್ರಯ-ವೆನ್ನಲಾಗುತ್ತದೆ. ಅದೇ ಅಧ್ಯಾತ್ಮ, ಪಂಚಸಂಖ್ಯಾ ವಿಶಿಷ್ಟವಾದ ಪೃಥಿವ್ಯಾಧಿಕದೊಂದಿಗೆ ಸೇರಿದ ಈ ಅಧಿಭೂತದಲ್ಲಿ ಪಂಚಸಂಖ್ಯಾವಿಶಿಷ್ಟವಾದ ಪ್ರಾಣಾಧಿಕದೊಂದಿಗೆ ಸೇರಿದ ಅಧ್ಯಾತ್ಮವನ್ನು ಕಲ್ಪಿಸಿ ವೇದವು.

ಈ ಪರಿದೃಶ್ಯಮಾನವಾಗಿರುವ ಆಕಾಶಾದಿ ಸಮಸ್ತವನ್ನು ಪೃಥಿವ್ಯಾದಿ ಪಾಙ್ಕ್ತತ್ರಯದಿಂದಲೂ ಪ್ರಾಣಾದಿಪಾಙ್ಕ್ತತ್ರಯಗಳಿಂದಲೂ ಹುಟ್ಟಿದೆಯಾದ್ದರಿಂದ ಎಲ್ಲವನ್ನು (ಸರ್ವವನ್ನು) ಪಾಙ್ಕ್ತವೆಂದು

ಹೇಳಿದೆ. ಅಧ್ಯಾತ್ಮಿಕ ಪಾಂಙ್ಕ್ತದಿಂದ ಬಾಹ್ಯದಲ್ಲಿನ ಪೃಥಿವ್ಯಾದಿ ಪಾಂಙ್ಕ್ತದಿಂದಲೇ ಇದೆಲ್ಲವೂ ಪಾಂಙ್ಕ್ತವಾಗಿಯೇ ಇರುವುದೆಂದು ತಿಳಿದುಕೊಂಡು, ಇದನ್ನು ಆ ವ್ಯಾಹೃತಾತ್ಮಕವಾದ ಹಿರಣ್ಯಗರ್ಭ-ನೆಂದು ಹೆಸರುಳ್ಳ ಬ್ರಹ್ಮವೆಂದೇ ಉಪಾಸಿಸುವವನು ಆ ಬ್ರಹ್ಮಸ್ವರೂಪವೇ ಆಗುತ್ತಾನೆ.

## ಶಿಕ್ಷಾವಲ್ಲಿ - ಪ್ರಥಮಾಧ್ಯಾಯಃ - ಅಷ್ಟಮೋಽನುವಾಕಃ

**ಮಂ.ಶ್ಲೋ.॥ ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಂ ಓಮಿತ್ಯೇತದನುಕೃತಿಹಸ್ಮ ವಾ ಅಪ್ಯೋಶ್ರಾವ ಯೇತ್ಯಾ ಶ್ರಾವಯನ್ತಿ, ಓಮಿತಿ ಸಾಮಾನಿ ಗಾಯನ್ತಿ । ಓಗ್ಂ ಶೋಮಿತಿ ಶಸ್ತ್ರಾಣಿಶಗ್ಂಸನ್ತಿ॥ ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರ ಮನುಜಾನಾತಿ ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ । ಬ್ರಹ್ಮೋಪಾಪ್ನವಾನೀತಿ ಬ್ರಹ್ಮೈವಾ-ಪಾಪ್ನೋತಿ ॥ (1) (ಓಂ ದಶ.)**

ತಾ॥ ಈಗ ಸಮಸ್ತ ಉಪಾಸನೆಗಳಿಗೆ ಅಂಗಭೂತವಾದ ಓಂಕಾರದ ಉಪಾಸನೆ ವಿಧಿಸ-ಲಾಗುತ್ತದೆ. ಈ ಓಂಕಾರವು ಪರಾಪರ ಬ್ರಹ್ಮದೃಷ್ಟಿಯಿಂದ ಉಪಾಸಿಸುವಂತಹುದಾಗಿ ಪರಬ್ರಹ್ಮ ಪ್ರಾಪ್ತಿ ಸಾಧನವಾಗುತ್ತಿದೆ. ಮನಸ್ಸಿನಿಂದ ಈ ಓಂಕಾರವೆನ್ನುವ ಬ್ರಹ್ಮವನ್ನು ಧ್ಯಾನಿಸಬೇಕಾಗಿದೆ. ಲೋಕದಲ್ಲೆಲ್ಲಾ ಶಬ್ದ ಸ್ವರೂಪವೆಲ್ಲವೂ ಓಂಕಾರದಿಂದಲೇ ವ್ಯಾಪ್ತಿಯಾಗುತ್ತದೆ. ಅಂತಹ ಶಬ್ದ ಸ್ವರೂಪದಿಂದ ಹೇಳಲಾದ ಸಮಸ್ತವೆಲ್ಲ ಈ ಶಬ್ದಾಧೀನವಾದುದರಿಂದ ಈ ಸಮಸ್ತವೆಲ್ಲವೂ ಓಂಕಾರವಾಗಿಯೇ ಇದೆ. ಈ ಓಂಕಾರವು ಉಪಾಸ್ಯಯಾಗುವುದರಿಂದ ಸಮಸ್ತವು ಅನುಕರಿ-ಸುತ್ತದೆ. ಆದ್ದರಿಂದಲೇ ವೇದವೇತ್ತರ ಸಮಸ್ತ ಕ್ರಿಯೆಗಳು ಓಂಕಾರೋಚ್ಚಾರಣೆ ಪೂರ್ವಕವಾಗಿಯೇ ಪ್ರವರ್ತಿಸಿರುತ್ತವೆ. ಅದು ಹೇಗೆಂದರೆ ಯಜ್ಞದಲ್ಲಿ ಬ್ರಹ್ಮ, ಅಧ್ವರ್ಯು ಮುಂತಾದವರೆಲ್ಲರೂ ಓಂಕಾರೋಚ್ಚಾರಣ ಪೂರ್ವಕವಾಗಿಯೇ ವಿಧಿ ನಿಷೇಧಾತ್ಮಕವಾದ, ಸಮಸ್ತ ಕರ್ಮಗಳನ್ನು ಪ್ರವರ್ತನೆಗೊಳಪಡಿಸುತ್ತಾರೆ. ಬ್ರಾಹ್ಮಣನು ವೇದ ಸ್ವರೂಪವನ್ನು ಹೊಂದುವನೆಂದು, (ಪರಮಾತ್ಮನನ್ನು ಹೊಂದುವನೆಂದು), ಓಂ ಎಂದು ಉಚ್ಚರಿಸುತ್ತಾ ವೇದಾಧ್ಯಯನಾದಿಗಳನ್ನು ಮಾಡುತ್ತಾ ಪರಬ್ರಹ್ಮವನ್ನು ಹೊಂದುತ್ತಾನೆ. ಹೀಗೆ ಓಂಕಾರಪೂರ್ವಕವಾದ ಸಮಸ್ತ ಕ್ರಿಯೆಗಳೂ ಯಾವ ಕಾರಣದಿಂದಾಗಿ ಹೆಚ್ಚಿನ ಫಲವನ್ನುಳ್ಳದ್ದಾಗಿವೆಯೋ, ಯಾವ ಕಾರಣದಿಂದ ಓಂಕಾರರಹಿತವಾಗಿ ಸಮಸ್ತ ಕ್ರಿಯೆಗಳು ಫಲರಹಿತಗಳಾಗಿ ವ್ಯರ್ಥವಾಗುತ್ತಿವೆಯೋ ಆ ಕಾರಣದಿಂದ ಓಂಕಾರವನ್ನು ಪರಬ್ರಹ್ಮಸ್ವರೂಪವೆಂದು ಉಪಾಸನೆ ಮಾಡಬೇಕು.

## ಶಿಕ್ಷಾವಲ್ಲಿ - ಪ್ರಥಮಾಧ್ಯಾಯಃ - ನವಮೋಽನುವಾಕಃ

**ಮಂ.ಶ್ಲೋ.॥ ಋತಂ ಚ ಸ್ವಾಧ್ಯಾಯ ಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ । ತಪಶ್ಚ ಸ್ವಾಧ್ಯಾಯ ಪ್ರವಚನೇ ಚ । ದಮಶ್ಚ ಸ್ವಾಧ್ಯಾಯ ಪ್ರವಚನೇ ಚ। ಶಮಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯ**

**ಪ್ರವಚನೇ ಚ। ಪ್ರಜಾ ಚ ಸ್ವಾಧ್ಯಾಯ ಪ್ರವಚನೇ ಚ (1) ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾಪತಿಶ್ಚ ಸ್ವಾಧ್ಯಾಯ ಪ್ರವಚನೇ ಚ । ಸತ್ಯಮಿತಿ ಸತ್ಯವಚಾರಾಥೀತರಃ। ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ। ತದ್ಧಿತಪಸ್ತದ್ಧಿತಪಃ (ಪ್ರಜಾ ಚ ಸ್ವಾಧ್ಯಾಯ ಪ್ರಚನೇಚ ಷಟ್ಚ॥)**

ತಾ॥ ಈ ಹಿಂದೆ ಜನನು ಕೇವಲ ವಿಜ್ಞಾನದಿಂದಲೇ ಸ್ವರಾಜ್ಯವನ್ನು ಹೊಂದುತ್ತಿದ್ದಾನೆಂದು ಹೇಳಿದ್ದರಿಂದ ಶ್ರೌತಸ್ಮಾರ್ತಾದಿ ಕರ್ಮಗಳು ವ್ಯರ್ಥವೆಂದು ಸಂದೇಹವುಂಟಾಗುತ್ತದೆ. ವ್ಯರ್ಥ-ವಾಗದಂತೆ ಕರ್ಮಗಳು ಪುರುಷಾರ್ಥವನ್ನು ಕುರಿತು ಸಾಧನಗಳೆಂದು ತೋರಿಸಲು ವಿಜ್ಞಾನ ಸಾಧನವಾದ ಕರ್ಮ ಮಾಡಬೇಕೆಂದು ಇಲ್ಲಿ ತಿಳಿಯಪಡಿಸಲಾಗಿದೆ. ಜನನು ಈ ಮಂತ್ರದಲ್ಲಿ ಹೇಳಲಾದ ಋತ ಮುಂತಾದ ಉಪಾಸನೆಗಳೆಲ್ಲವನ್ನೂ ಹೆಚ್ಚಿನ ಪ್ರಯತ್ನದಿಂದ ಉಪಾಸಿಸುತ್ತ ಅಧ್ಯಯನ, ಅಧ್ಯಾಪನೆಗಳೇ ಮುಖ್ಯವಾಗಿ ಅನುಷ್ಠಾನ ಮಾಡಬೇಕು. ಹೀಗೆ ಅನುಷ್ಠಾನ ಮಾಡಲು ಮೂವರು ಋಷಿಗಳ ಮತಭೇದವನ್ನು ಸೂಚಿಸುತ್ತಾ ಆ ಮತಭೇದದಲ್ಲಿ ಸ್ವಾಧ್ಯಾಯ ಪ್ರವಚನಗಳೇ ಪ್ರಯತ್ನದಲ್ಲಿ ಅತಿ ಮುಖ್ಯವಾಗಿ ಅನುಷ್ಠಾನ ಮಾಡಬೇಕೆಂದು ಹೇಳಲಾಗಿದೆಯೆಂದು ತಿಳಿಸ-ಲ್ಪಡಲಾಗಿದೆ. ಅದು ಹೇಗೆಂದರೆ ರಥೀತರ ಗೋತ್ರೋದ್ಭವನಾದ ಸತ್ಯವಚನನೆನ್ನುವ ಆಚಾರ್ಯನು, ಸ್ವಾಧ್ಯಾಯ ಪ್ರವಚನವನ್ನೇ ಪ್ರಧಾನವಾಗಿ ಮಾಡಿಕೊಂಡು ಸತ್ಯವನ್ನು ಅನುಷ್ಠಾನಗೊಳಿಸಿಕೊಂಡು, ಪುರುಶಿಷ್ಟನ ಪುತ್ರನಾದ ತಪೋನಿತ್ಯನೆನ್ನುವ ಆಚಾರ್ಯನು ಸ್ವಾಧ್ಯಾಯ ಪ್ರವಚನಗಳನ್ನೇ ಪ್ರಧಾನ-ವಾಗಿ ಮಾಡಿಕೊಂಡು ತಪಸ್ಸನ್ನು ಅನುಷ್ಠಾನಗೊಳಿಸಬೇಕೆಂದು, ಮುದ್ಗಲನ ಪುತ್ರನಾದ ನಾಕನೆನ್ನುವ ಆಚಾರ್ಯನು ಸ್ವಾಧ್ಯಾಯ ಪ್ರವಚನಗಳನ್ನೇ ಪ್ರಧಾನವಾಗಿ ಅತಿ (ಹೆಚ್ಚಿನ) ಪ್ರಯತ್ನದಿಂದ, ಅನುಷ್ಠಿಸ ಬೇಕಾಗಿದೆಯೆಂದು ಹೇಳಿರುವನು. ಹೀಗೆ ಈ ಮಂತ್ರದಲ್ಲಿರುವುದೆಲ್ಲವನ್ನೂ ಗ್ರಹಿಸಿದಾಗ ಸ್ವಾಧ್ಯಾಯ ಪ್ರವಚನಗಳೇ ಪ್ರಧಾನವಾಗಿ ಹೇಳಿರುವುದರಿಂದ ಆತ್ಮಜ್ಞಾನವು, ಸ್ವಾಧ್ಯಾಯಧೀನವೆಂದು ಪರಮ ಶ್ರೇಯಸ್ಸು ಆತ್ಮಜ್ಞಾನಾಧೀನವೆಂದು, ಈ ಆತ್ಮಜ್ಞಾನ ಹಾಗೂ ಪರಮ ಶ್ರೇಯಸ್ಸುಗಳಿಗೆ ಕಾರಣವಾದ ಸ್ವಾಧ್ಯಾಯವನ್ನು ಮರೆಯದೆ ಇರುವುದಕ್ಕಾಗಿಯೂ, ಧರ್ಮಾಭಿವೃದ್ಧಿಗಾಗಿಯೂ, ಪ್ರವಚನವೆನ್ನುವು-ದನ್ನು ಮುಖ್ಯವಾದ ತಪಸ್ಸೆಂದು ಹೇಳಲಾಗಿದೆ. ಹೀಗೆ ಸ್ವಾಧ್ಯಾಯ ಪ್ರವಚನಗಳನ್ನೇ ಜನನು ಅನುಷ್ಠಾನ ಗೈದನೆಂದು ಆತ್ಮಜ್ಞಾನವನ್ನು ಹೊಂದಿ ಮುಕ್ತನಾಗಿ ಬ್ರಹ್ಮಸ್ವರೂಪನಾಗುತ್ತಾನೆಂದು ತಿಳಿಸಲಾಗಿದೆ.

## ಶಿಕ್ಷಾವಲ್ಲಿ – ಪ್ರಥಮಾಧ್ಯಾಯಃ – ದಶಮೋಽನುವಾಕಃ

**ಮಂ.ಶ್ಲೋ.॥ ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವಪವಿತ್ರೋ ವಾಜಿನೀವಸ್ವಮೃತಮಸ್ಮಿ । ದ್ರವಿಣಗ್ಂ ಸವರ್ಚಸಮ್ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋರ್ವೇದಾನುವಚನಮ್ ॥ (ಅಹಗ್ಂ ಷಟ್)**

ತಾ॥ ನಾನು ನಾಶಸ್ವರೂಪನಾಗಿ, ಜನ್ಮ ಜರಾಮರಣಾದಿರೂಪವಾದ ದೇಹದಲ್ಲಿ ಸಂಸಾರ-ವೃಕ್ಷದಲ್ಲಿ ಅಂತರ್ಯಾಮಿಯಾಗಿದ್ದುಕೊಂಡು, ಪ್ರೇರಕನಾಗಿ; ಪರ್ವತ ಪೃಷ್ಠಭಾಗದಂತೆ ಖ್ಯಾತಿ ಹೊಂದಿದವನಾಗಿದ್ದೇನೆ. ಜ್ಞಾನದಿಂದ ಪ್ರಕಾಶಿಸುತ್ತಾ ಬ್ರಹ್ಮ ರೂಪವನ್ನು ಹೊಂದಿದ್ದೇನೆ. ಸೂರ್ಯ-

ನಂತೆಯೇ ಪ್ರಸಿದ್ಧವಾದ ಪರಿಶುದ್ಧವಾದ ಆತ್ಮತತ್ತ್ವ ಸ್ವರೂಪನು ನಾನು. ಮೋಕ್ಷ ಸುಖ ಹೇತು-ವಾದುದರಿಂದ ಸಂಪತ್ತಿನಂತಹ ಪ್ರಕಾಶಾತ್ಮಕವಾದ ಆತ್ಮತತ್ತ್ವ ಸ್ವರೂಪನು, ಸಂಸಾರ ಸ್ಥಿತಿ, ಉತ್ಪತ್ತಿ, ಸಂಹಾರಗಳಲ್ಲಿ ನಿಪುಣನಾಗಿ ಸರ್ವಜ್ಞತೆಯ ಲಕ್ಷಣರೂಪವಾದ ಒಳ್ಳೆಯ ಬುದ್ಧಿಯನ್ನು ಹೊಂದಿದವನು. ಮರಣಧರ್ಮವಿಲ್ಲದವನು. ಕ್ಷೀಣಿಸದಿರುವಂತಹವನು. ಈ ಪ್ರಕಾರ ತ್ರಿಶಂಕು ಮಹಾಋಷಿಯ ಆತ್ಮೈಕ್ಯತ್ವಜ್ಞಾನಾನುಕೂಲವಾದ ವಾಕ್ಯವು ಇದೆ. ತ್ರಿಶಂಕು ಋಷಿಯನ್ನು, ಪಂಕ್ತಿ ಛಂದಸ್ಸನ್ನು, ಪರಮಾತ್ಮ ದೇವತೆಯನ್ನು ಬ್ರಹ್ಮವಿದ್ಯಾರ್ಥ ರೂಪವಾದ ಜಪದಲ್ಲಿ ವಿನಿಯೋಗ, ಈ ರೀತಿ ಋಷಿ ದೇವತಾ ಛಂದಸ್ಸುಗಳೊಂದಿಗೆ ಉಪಾಸಿಸುವವನು ಸ್ವಾಧ್ಯಾಯ ಪ್ರಾಪ್ತಿಯ ಮೂಲಕ ಅಂತಃಕರಣ ಪರಿಶುದ್ಧತೆಯನ್ನು ಹೊಂದಿ ಬ್ರಹ್ಮವಿದ್ಯಾಪ್ರಾಪ್ತಿಯನ್ನು ಹೊಂದುತ್ತಾನೆ.

## ಶಿಕ್ಷಾವಲ್ಲಿ - ಪ್ರಥಮಾಧ್ಯಾಯಃ - ಏಕಾದಶೋಽನುವಾಕಃ

ಮಂ.ಶ್ಲೋ.॥ ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ - ಸತ್ಯಂ ವದ। ಧರ್ಮಂ ಚರ। ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ। ಸತ್ಯಾನ್ನ ಪ್ರಮದಿತವ್ಯಮ್। ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್ । ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್ ॥ (1) ದೇವಪಿತೃಕಾರ್ಯಾಭ್ಯಾಂ ನ ಪ್ರಮುದಿತವ್ಯಮ್ । ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ। ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ ॥ (2) ನೋ ಇತರಾಣಿ, ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ। ತೇಷಾಂ ತ್ವಯಾಸನೇ ನ ಪ್ರಶ್ವಸಿತವ್ಯಂ । ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ । ಶ್ರಿಯಾ ದೇಯಮ್। ಹ್ರಿಯಾ ದೇಯಮ್। ಭಿಯಾ ದೇಯಮ್। ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾಸ್ಯಾತ್॥ (3) ಯೇ ತತ್ರ ಬ್ರಾಹ್ಮಣಾಸ್ಸಮ್ಮರ್ಶಿನಃ । ಯುಕ್ತಾ ಅಯುಕ್ತಾಃ ಅಲೂಕ್ಷಾ ಧರ್ಮಕಾಮಾಸ್ಸ್ಯುಃ ಯಥಾತೇ ತತ್ರ ವರ್ತೇರನ್ । ತಥಾತತ್ರವರ್ತೇಥಾಃ ಅಥಾಭ್ಯಾಖ್ಯಾತೇಷು। ಯೇತತ್ರ ಬ್ರಾಹ್ಮಣಾಸ್ಸಂಮರ್ಶಿನಃ । ಯುಕ್ತಾ ಅಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಸ್ಯುಃ। ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ ಏಷ ಆದೇಶಃ ಏಷ ಉಪದೇಶಃ ಏಷಾ ವೇದೋಪನಿಷತ್। ಏತದನುಶಾಸನಮ್॥ ಏವಮುಪಾಸಿತವ್ಯಮ್ । ಏವಮುಚೈತ-ದುಪಾಸ್ಯಮ್ । ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ, ತಾನಿ ತ್ವಯೋಪಾಸ್ಯಾನಿ ವಿಚಿಕಿತ್ಸಾ ವ್ಯಾಸ್ಯಾತ್ತೇಷು ವರ್ತೇರನ್ ಸಪ್ತಚ ॥ (4)

ತಾ॥ ಈ ಅನುವಾಕದಲ್ಲಿ ಆಚಾರ್ಯನು ವೇದಾಧ್ಯಯನದ ನಂತರ ಶಿಷ್ಯನಿಗೆ ಬ್ರಹ್ಮಜ್ಞಾನಕ್ಕಿಂತ ಮೊದಲು ಶ್ರೌತ ಸ್ಮಾರ್ತಾದಿಕರ್ಮಗಳನ್ನು ಮಾಡತಕ್ಕದ್ದೆಂದು ಉಪದೇಶಿಸುತ್ತಿದ್ದಾನೆ. "ಓ ಶಿಷ್ಯನೇ!

ನೀನು ಸತ್ಯವನ್ನು ನುಡಿ, ಧರ್ಮದಂತೆ ನಡೆ. ಅಧ್ಯಯನದ ವಿಷಯವಾಗಿ ಪ್ರಮಾದವನ್ನು ಮಾಡದಿರು. ನಿನ್ನ ಆಚಾರ್ಯನಾದ ನನಗಾಗಿ, ಬಯಸಿದಂತಹ ಧನವನ್ನು ತಂದುಕೊಟ್ಟು ಸಂತಾನಕ್ಕೆ ವಿಚ್ಛೇದನ ಮಾಡದೆ ಪುತ್ರೋತ್ಪತ್ತಿಯಲ್ಲಿ ಪುತ್ರಕಾಮ್ಯಾದಿಕರ್ಮಗಳ ಮೂಲಕ ಪ್ರಯತ್ನವನ್ನು ಮಾಡು. ಸತ್ಯದಿಂದಿದ್ದು, ಧರ್ಮದಿಂದಿದ್ದು, ಆತ್ಮನ ರಕ್ಷಣೆಗಾಗಿ ಕರ್ಮದಿಂದಲೂ, ಐಶ್ವರ್ಯಕ್ಕಾಗಿ ಮಂಗಳ-ಮಯವಾದ ಕರ್ಮವನ್ನಾಚರಿಸುತ್ತಾ, ದೇವಪಿತೃಕಾರ್ಯಗಳಿಂದಲೂ, ಪ್ರಮಾದವನ್ನು ಮಾಡಬೇಡ. ತಂದೆ ತಾಯಿಗಳನ್ನು, ಆಚಾರ್ಯರನ್ನು, ಅತಿಥಿಯನ್ನು ದೇವರೆಂದು ಭಾವಿಸು. ಅನಿಂದಿತವಾದ ಕಾರ್ಯಗಳನ್ನು ಮಾಡುತ್ತಾ, ನಿಂದಿತ ಕಾರ್ಯದಿಂದ ದೂರವಿರು. ನಮಗೆ ಅತಿ ಹೆಚ್ಚಿನ ಶುಭವನ್ನುಂಟು ಮಾಡುವ ಆಚಾರಗಳನ್ನು ನಿರ್ವಹಿಸುತ್ತಾ ಅಶುಭವಾದುದನ್ನು ಬಿಡುವಂತಹವನಾಗು. ಆಚಾರ್ಯತ್ವಾದಿ ಧರ್ಮಗಳ ಮೂಲಕ ನಮಗಿಂತ ಪ್ರಶಸ್ತವಾಗಿರುವ ಬ್ರಾಹ್ಮಣರ್ಯಾರಿರುವರೋ ಅವರಿಗೆ ಆಸನಾದಿ ದಾನಗಳಿಂದ ಶ್ರಮವನ್ನು ಹೋಗಲಾಡಿಸುತ್ತ, ಅವರು ಹೇಳಿದಂತಹ ಧರ್ಮವನ್ನು ಮಾತ್ರವೇ ಗ್ರಹಿಸುತ್ತಾ. ಅವರು ಏನನ್ನಾದರೂ ಕೆಲವು ಧರ್ಮ ವಿಷಯಗಳನ್ನು ಕುರಿತು ಮಾತನಾಡುತ್ತಿರುವಾಗ ಅತಿ ವಿನಯದಿಂದ ಕೂಡಿ, ಆ ಧರ್ಮಸಾರವನ್ನು ಮಾತ್ರ ಗ್ರಹಿಸು. ಅವರಿಗೆ ವಿರೋಧವಾಗಿ ನಿಟ್ಟುಸಿರನ್ನು ಸಹ ಬಿಡಬಾರದು.

ಅಂತಹವರಿಗೆ ಏನಾದರೂ ಕೊಡುವ ಅವಕಾಶ ಪ್ರಾಪ್ತವಾದಾಗ ಅವರಿಗೆ ಅದನ್ನು ಅತಿ ಹೆಚ್ಚಿನ ಶ್ರದ್ಧೆಯಿಂದ, ಸಂಕೋಚದಿಂದ, ಲಜ್ಜಾಶೀಲನಾಗಿ, ಭಯಭೀತಿಗಳಿಂದ, ಇನ್ನೂ ಹೆಚ್ಚಿನ ಮೈತ್ರಾದಿ ಜ್ಞಾನದಿಂದ ಕೊಡಬೇಕು. ಅಶ್ರದ್ಧೆಯಿಂದ ಮಾತ್ರ ಕೊಡಬಾರದು. ನಿನಗೆ ಕರ್ಮದಲ್ಲಾಗಲಿ, ಆಚಾರದಲ್ಲಾಗಲಿ ಏನಾದರೂ ಸಂದೇಹವುಂಟಾದರೆ, ಆ ಕಾಲದಲ್ಲಿ ಆ ದೇಶದಲ್ಲಿ ಧರ್ಮಾಧರ್ಮ ಸಮರ್ಥರೂ, ಆಚಾರ್ಯರೂ, ಸ್ವತಂತ್ರರೂ, ಕ್ರೂರಿಗಳಾಗಿಲ್ಲದವರು, ಕಾಮಕ್ಕೆ ವಶರಾಗದಂತಹ ಬ್ರಾಹ್ಮಣ ಶ್ರೇಷ್ಠರು ಆ ಕರ್ಮಾಚಾರಗಳಲ್ಲಿ ಹೇಗೆ ಪ್ರವರ್ತಿಸುವರೋ ನೀನು ಕೂಡಾ ಹಾಗೆಯೇ ಪ್ರವರ್ತಿಸು. ಧರ್ಮಾಧರ್ಮ ವಿಚಾರಣ ಸಮರ್ಥರೂ, ಆಚಾರ್ಯರೂ, ಸ್ವತಂತ್ರರೂ, ಅಕ್ರೂರರು ಅಕಾಮಹತರಾಗಿ ಆಯಾ ಕಾಲದಲ್ಲಿ, ಆಯಾ ಪ್ರದೇಶದಲ್ಲಿರುವಂತಹ ಬ್ರಾಹ್ಮಣ ಶ್ರೇಷ್ಠರು ಕರ್ಮಾಚಾರದಲ್ಲಿ ಹೇಗೆ ಪ್ರವರ್ತಿಸುವರೋ, ನೀನೂ ಹಾಗೆಯೇ ಪ್ರವರ್ತಿಸು. ಇದೇ ಉಪದೇಶ. ಇದೇವೇದ ರಹಸ್ಯ. ಈ ಪ್ರಕಾರವಾಗಿಯೇ ಉಪಾಸನೆಯನ್ನು ಮಾಡಬೇಕು.

## ಶಿಕ್ಷಾವಲ್ಲಿ – ಪ್ರಥಮಾಧ್ಯಾಯಃ – ದ್ವಾದಶೋಽನುವಾಕಃ

**ಮಂ.ಶ್ಲೋ.॥ ಶಂ ನೋ ಮಿತ್ರಶ್ಶಂ ವರುಣಃ । ಶಂನೋ ಭವತ್ವರ್ಯಮಾ। ಶಂ ನ ಇಂದ್ರೋ ಬೃಹಸ್ಪತಿಃ। ಶಂ ನೋ ವಿಷ್ಣುರುರುಕ್ರಮಃ। ನಮೋ ಬ್ರಹ್ಮಣೇ ನಮಸ್ತೇ ವಾಯೋ। ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ। ತ್ವಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್। ಋತಮವಾದಿಷಮ್। ಸತ್ಯಮ-ವಾದಿಷಮ್॥(1) ತನ್ಮಾಮಾವೀತ್ ತದ್ವಕ್ತಾರಮಾವೀತ್। ಆವೀನ್ಮಾಮ್ । ಆವಿದ್ವಕ್ತಾರಮ್। ಓಂ ಶಾಂತಿಃ ಶಾಂತಿಃ ಶಾಂತಿಃ ॥**

**(ಸತ್ಯಮವಾದಿಷಂ ಪಞ್ಚಾಚ)**

ತಾ॥ ಮಿತ್ರನನ್ನು, ವರುಣನನ್ನು, ಆರ್ಯಮನನ್ನು, ಇಂದ್ರನನ್ನು, ಬೃಹಸ್ಪತಿಯನ್ನು, ವಿಷ್ಣುವನ್ನು-ವೀರರು ಕ್ರಮವಾಗಿ ಪ್ರಾಣದಲ್ಲಿಯೂ, ಅಪಾನದಲ್ಲಿಯೂ, ನೇತ್ರದಲ್ಲಿಯೂ, ಬಲದಲ್ಲಿಯೂ, ವಾಗ್ಬುದ್ಧಿ-ಗಳಲ್ಲಿಯೂ ಪಾದಗಳಲ್ಲಿಯೂ, ವಿದ್ಯಾಶ್ರವಣಧಾರಣೋಪಯೋಗವಾಗುವಂತೆ ನಮಗೆ ಸುಖವನ್ನು ಕೊಡುವಂತಹವರಾಗಲಿ! ವಾಯುದೇವಾ! ಪರಬ್ರಹ್ಮಸ್ವರೂಪವಾದ ನಿನಗೆ ನಮಸ್ಕಾರ. ಯಾವ ಕಾರಣದಿಂದ ನೀನು ಪ್ರತ್ಯಕ್ಷವಾದಂತಹ ಬ್ರಹ್ಮಸ್ವರೂಪಿಯಾಗುತ್ತಿದ್ದೀಯೋ, ಆ ಕಾರಣದಿಂದ ನಿನ್ನನ್ನು ಪ್ರತ್ಯಕ್ಷ ಬ್ರಹ್ಮವೆಂದೂ, ಶಾಸ್ತ್ರ ಕರ್ತವ್ಯಗಳನ್ನು ಅತಿಕ್ರಮಿಸಿದ ಬುದ್ಧಿ ನಿಶ್ಚಿತವಾದ ಅರ್ಥವುಳ್ಳ ಋತುವನ್ನಾಗಿಯೂ, ವಾಕ್ಕಾಯಗಳ ಮೂಲಕ ಸಂಪಾದಿಸತಕ್ಕಂತಹ ಸತ್ಯವನ್ನಾಗಿಯೂ ಹೇಳಿದ್ದೇನೆ. ಹೀಗೆ ವಾಯುವೆನ್ನುವ ಹೆಸರುಳ್ಳ (ವಾಯುವೆಂದು ಕರೆಯುವ) ನನ್ನಿಂದ ಸ್ತುತಿಸಲ್ಪಡುತ್ತಿರುವ ಆ ಪರಬ್ರಹ್ಮವು ನನ್ನನ್ನು ವಿದ್ಯೆಯಲ್ಲಿ (ಅಡಕ) ಸೇರಿಸುವುದರಿಂದಲೂ, ಆಚಾರ್ಯನ ವ್ಯಕ್ತಿತ್ವ ಸಾಮರ್ಥ್ಯದೊಡನೆ ಸೇರಿಸಿರಲು, ಕಾಪಾಡುವಂತಾಗಲಿ! ಎಂದು ವಿದ್ಯಾರ್ಥಿಯಾದ ಪುರುಷನು ಪ್ರಾರ್ಥಿಸುತ್ತಿದ್ದಾನೆ. ಈ ಶಾಂತಿತ್ರಯವು ಆಧ್ಯಾತ್ಮಿಕಾದಿ ತಾಪತ್ರಯ ನಿವಾರಣೆಗಾಗಿ ಹೇಳಲಾಗಿದೆ.

ಶಿಕ್ಷಾವಲ್ಲಿ ಸಮಾಪ್ತಿ – ಪ್ರಥಮಾಧ್ಯಾಯ ಸಮಾಪ್ತಿ.

# ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಪ್ರಥಮೋಽನುವಾಕಃ

ಮಂ.ಶ್ಲೋ.॥ ಹರಿಃ ಓಂ॥ ಸಹ ನಾವವತು। ಸಹ ನೌ ಭುನಕ್ತು, ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ। ಓಂ ಶಾಂತಿ ಶ್ಶಾಂತಿ ಶ್ಶಾಂತಿಃ ।

ಮಂ.ಶ್ಲೋ.॥ ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನನ್ತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ॥ (1) ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ । ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ। ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧಿಭ್ಯೋಽನ್ನಮ್ । ಅನ್ನಾತ್ಪುರುಷಃ (2) ಸ ವಾ ಏಷ ಪುರುಷೋಽನ್ನರಸ-ಮಯಃ, ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ। ಅಯಮುತ್ತರಃ ಪಕ್ಷಃ । ಅಯಮಾತ್ಮಾ ಇದಂ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ (3)

ತಾ॥ (ಉಪಾದಿರಹಿತ ಶುದ್ಧಾತ್ಮ ದರ್ಶನಕ್ಕಾಗಿ ಈ ಬ್ರಹ್ಮವಲ್ಲಿ ಆರಂಭವಾಗುತ್ತಿದೆ.) ಪರಬ್ರಹ್ಮ ಸ್ವರೂಪವನ್ನು ತಿಳಿದುಕೊಂಡ ಜ್ಞಾನಿ ಪರಬ್ರಹ್ಮವನ್ನು ಹೊಂದುತ್ತಿದ್ದಾನೆ. ಈ ಅರ್ಥವನ್ನೇ ಈ ಋಕ್ಕು ಹೇಳುತ್ತದೆ. ಬ್ರಹ್ಮವು ನಿತ್ಯವಾಗಿಯೂ, ಜ್ಞಾನವಾಗಿಯೂ, ಅನಂತವಾಗಿಯೂ ಇದೆ. ಇಂತಹ ಪರಬ್ರಹ್ಮವು ಶ್ರೇಷ್ಠವಾದ ಅವ್ಯಾಕೃತವೆನ್ನುವ ಹೆಸರುಳ್ಳ ಹೃದಯಾಕಾಶದಲ್ಲಿನ ಬುದ್ಧಿ ಗುಹೆಯಲ್ಲಿದೆ. ಇದನ್ನು ಯಾರು ತಿಳಿದುಕೊಳ್ಳುತ್ತಾನೋ ಅವನು ಸರ್ವಜ್ಞ ಸ್ವರೂಪವೆನ್ನುವ ಆ ಪರಬ್ರಹ್ಮದಲ್ಲಿ ಕೂಡಾ ಸಮಸ್ತಕಾಮಗಳನ್ನು ಪಡೆಯುತ್ತಾನೆ. ಇದುವರೆಗೂ "ಬ್ರಹ್ಮವಿದಾಪ್ನೋತಿಪರಂ"ಎನ್ನುವ ವಾಕ್ಯವನ್ನು ವಿವರಿಸಿ ತಿರುಗಿ ಮತ್ತೆ ಆ ಅರ್ಥವನ್ನೇ ಇನ್ನೂ ವಿವರಿಸುವುದಕ್ಕೆ ಉತ್ತರ ಗ್ರಂಥವು ಪ್ರಾರಂಭ-

ವಾಗುತ್ತಿದೆ. ಆತ್ಮಶಬ್ದ ವಾಚ್ಯವನ್ನು ಈ ಮಂತ್ರದಲ್ಲಿ ಹೇಳಲಾದ ಸತ್ಯಜ್ಞಾನಾನಂತ ಸ್ವರೂಪವಾದ ಆ ಪರಬ್ರಹ್ಮದಲ್ಲಿ ಶಬ್ದವೇ ಗುಣವಾಗುಳ್ಳದ್ದಾಗಿ ಸಮಸ್ತ ಭೂತಗಳಿಗೂ ಅವಕಾಶವನ್ನು ಕೊಡುತ್ತಿರುವ ಆಕಾಶವು ಹುಟ್ಟಿತು. ಆ ಆಕಾಶದಿಂದ ಶಬ್ದಸ್ಪರ್ಶಗಳೆನ್ನುವ ಎರಡು ಗುಣಗಳಿರುವ ವಾಯು ಹುಟ್ಟಿತು. ಆ ವಾಯುವಿನಿಂದ ಶಬ್ದ ಸ್ಪರ್ಶ ಸ್ವರೂಪಗಳೆನ್ನುವ ಮೂರು ಗುಣಗಳೆನ್ನುವ ಅಗ್ನಿ ಹುಟ್ಟಿತು. ಆ ಅಗ್ನಿಯಿಂದ ಶಬ್ದ ಸ್ಪರ್ಶ ರೂಪ ರಸಗಳೆನ್ನುವ ನಾಲ್ಕು ಗುಣಗಳುಳ್ಳ ಉದಕ ಹುಟ್ಟಿತು. ಆ ಉದಕದಿಂದ ಶಬ್ದ ಸ್ಪರ್ಶ ರೂಪ ರಸ ಗಂಧಗಳೆನ್ನುವ ಐದು ಗುಣಗಳುಳ್ಳ ಭೂಮಿಯು ಹುಟ್ಟಿತು.

ಈ ಭೂಮಿಯಿಂದ ತರುಗುಲ್ಮಲತಾದಿಗಳು, ಸಮಸ್ತ ಸಸ್ಯಗಳು, ಇವೇ ಸ್ವರೂಪವಾಗುಳ್ಳ ಓಷಧಿಗಳು ಹುಟ್ಟಿದವು. ಆ ಓಷಧಿಗಳಿಂದ ಅನ್ನ ಹುಟ್ಟಿತು. ರೇತೋರೂಪವಾಗಿ ಮಾರ್ಪಟ್ಟು ಆ ಅನ್ನದಿಂದ ಶಿರಸ್ಸು ಹಸ್ತಗಳು ಮುಂತಾದವುಗಳು ಕೂಡಿದ ಆಕೃತಿಯುಳ್ಳ ಪುರುಷನು ಹುಟ್ಟಿದ. ಆ ಪುರುಷನು ಅನ್ನರಸಸ್ವರೂಪ (ಸರ್ವಾವಯವಗಳಿಂದ ಪುರುಷಾಕೃತಿ ಭಾವಿತವಾಗಿ ತೇಜಸ್ವರೂಪ-ವಾದ ರೇತಸ್ಸಿನಿಂದ ಹುಟ್ಟಿದವನು) ಈ ಪ್ರಕಾರ ರೇತಸ್ಸಿನಿಂದ, ಹುಟ್ಟಿದ ಅನ್ನರಸವಾದ ಆ ಪುರುಷನಿಗೆ ಸಮಸ್ತ ಅವಯವಗಳಲ್ಲಿ ಮುಖ್ಯವಾಗಿರುವುದೇ ಶಿರಸ್ಸು. ಈ ದೇಹದ ಮಧ್ಯಭಾಗವೇ ಆತ್ಮ. ಗೋವಿನ ಪುಚ್ಛ (ಹಸುವಿನ ಬಾಲ)ದ ಆಕಾರದಲ್ಲಿರುವ ಈ ದೇಹದ ನಾಭಿಯ ಕೆಳಗಿನ ಪ್ರದೇಶವು ಪಾದಾದಿಕ ಮುಂತಾದವುಗಳು. ಈ ದೇಹವು ನೇರವಾಗಿ ನಿಲ್ಲುವುದಕ್ಕಾಗಿ ಆಧಾರವಾಗಿ ಪುಚ್ಛದ ರೀತಿಯಲ್ಲಿದೆ. ಹೀಗಿರುವಾಗ ಈ ಪುರುಷಾಕೃತಿಯನ್ನು ಪ್ರಧಾನವನ್ನಾಗಿ ಮಾಡಿಕೊಂಡು ಉತ್ತರದಲ್ಲಿ ಹೇಳುವಂತಹ ಪ್ರಾಣಮಯಾದಿ ಕೋಶಗಳ ಸ್ವರೂಪತ್ವ ಸಿದ್ಧಿಯು, ಮೂಸೆಯಲ್ಲಿ ಕರಗಿಸಿ ಸುರಿಯಲಾದ ತಾಮ್ರದ ವಿಗ್ರಹದಂತಿರುತ್ತದೆ. ಹೀಗೆ ಬ್ರಾಹ್ಮಣೋಕ್ತವಾದ ಅರ್ಥದಲ್ಲಿ ಅನ್ನಮಯವಾದ ಆತ್ಮವನ್ನು ಪ್ರಕಾಶಪಡಿಸುವಂತಹುದು ಈ ಮಂತ್ರದಲ್ಲಿದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ದ್ವಿತೀಯೋಽನುವಾಕಃ

ಮಂ.ಶ್ಲೋ.॥ **ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿಯಂತ್ಯಂತತಃ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ಸರ್ವೌಷಧಮುಚ್ಯತೇ ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ। ಅನ್ನಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ಸರ್ವೌಷಧಮುಚ್ಯತೇ॥ (1) ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ ಅದ್ಯತೇಽತ್ತಿ ಚ ಭೂತಾನಿ; ತಸ್ಮಾದನ್ನಂ ತದುಚ್ಯತ ಇತಿ ತಸ್ಮಾದ್ವಾ ಏತಸ್ಮಾದನ್ನರಸಮಯಾತ್, ಅನ್ಯೋಽಂತರ ಆತ್ಮಾ ಪ್ರಾಣಮಯಃ ತೇನೈವ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಮ್ । ಅನ್ವಯಂ ಪುರುಷವಿಧಃ ॥ (2) ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ ತದಪ್ಯೇಷ ಶ್ಲೋಕೋ ಭವತಿ॥ (3)**

ತಾ॥ ಅನ್ನದಿಂದಲೇ ಜನರು (ಸಮಸ್ತ ಪ್ರಜೆಗಳು) ಹುಟ್ಟುತ್ತಿದ್ದಾರೆ. ಈ ಭೂಮಿಯನ್ನು ಆಶ್ರಯಿಸಿರುವ ಎಲ್ಲವೂ ಅನ್ನದಿಂದಲೇ (ಆಹಾರ) ಜೀವಧಾರಣೆ ಮಾಡುತ್ತಿವೆ. ಜೀವಿತಕಾಲದ ಅಂತ್ಯದಲ್ಲಿ ಮತ್ತೆ ಎಲ್ಲವೂ ಅನ್ನವನ್ನೇ ಹೊಂದುತ್ತಿವೆ. ಹೀಗೆ ಅನ್ನವು ಎಲ್ಲದರ ಜನ್ಮಸ್ಥಿತಿಲಯಗಳ ಹೇತು ಕಾರಣದಿಂದಲೇ ಸಮಸ್ತ ಭೂತಗಳಿಗೂ ಕಾರಣವಾಗಿದೆ. ಆ ಕಾರಣದಿಂದಲೇ ಅದು ಎಲ್ಲದಕ್ಕೂ ಔಷಧಿಯಾಗಿದೆ. ಹೀಗೆ ಸರ್ವಕಾರಣವಾದ ಅನ್ನವನ್ನು ಪರಬ್ರಹ್ಮ ಸ್ವರೂಪವಾಗಿ ಉಪಾಸಿಸುವವನು ಸಮಸ್ತ ಸ್ವರೂಪವಾದ ಅನ್ನವನ್ನು ಪಡೆಯುತ್ತಾನೆ. ಸಮಸ್ತಕ್ಕೂ ಔಷಧರೂಪವಾದ ಅನ್ನವು ಸರ್ವಕ್ಕೂ ಕಾರಣವಾಗಿ ಎಲ್ಲಕ್ಕಿಂತ ಮೊದಲೇ ಹುಟ್ಟಿದ್ದಾಗಿ ಹೇಳಲಾಗುತ್ತದೆ. ಆದ್ದರಿಂದ ಆ ಅನ್ನದಿಂದಲೇ ಸಮಸ್ತ ಭೂತಗಳು ಹುಟ್ಟುತ್ತಿರುತ್ತವೆ. ಹುಟ್ಟಿದ ಈ ಭೂತಗಳೆಲ್ಲವೂ ಅನ್ನದಿಂದಲೇ ವೃದ್ಧಿಯಾಗುತ್ತವೆ. (ಪೋಷಣೆ) ಈಗ ಇದಕ್ಕೆ ಅನ್ನವೆಂದು ಹೆಸರು ಬರಲು ಕಾರಣವನ್ನು ಹೇಳಲಾಗುತ್ತಿದೆ. ಏನೆಂದರೆ, ಇದರಿಂದಲೇ ಸರ್ವಭೂತಗಳು ರಕ್ಷಿಸಲ್ಪಡುತ್ತವೆ. ಭೂತಗಳೆಲ್ಲವೂ ಇದನ್ನು ಭಕ್ಷಿಸುತ್ತವೆ. (ತಿನ್ನುತ್ತವೆ.) ಆದ್ದರಿಂದಲೇ ಇದನ್ನು ಅನ್ನವೆಂದು ಕರೆಯಲಾಗುತ್ತದೆ.

ಇದು ಅನ್ನಮಯಾತ್ಮಕ್ಕಿಂತ ಬೇರೆಯಾಗಿ ಅಂತರ್ಗತವಾದ ಆತ್ಮಸ್ವರೂಪವಾದ ಪ್ರಾಣಮಯದಿಂದ ಈ ಅನ್ನಮಯ (ಕೋಶ)ವು ತುಂಬಿಕೊಂಡಿದೆ. ಈ ಅಂತಹ ಈ ಪ್ರಾಣಮಯವು ಅನ್ನರಸ ವಿಕಾರವಾದ ಕರಚರಣಾದ್ಯಾಕೃತಿಯುಳ್ಳ ಪುರುಷ ರೂಪ.(ವೇ) ಈ ಪ್ರಾಣಮಯಕ್ಕೆ ಪುರುಷಾಕಾರ (ವಿದೆ.) ಆ ಅನ್ನಮಯವು ಪುರುಷಾಕಾರವನ್ನು ಅನುಸರಿಸಿಯೇ ಉಂಟಾಗಿದೆ. ಸರ್ವಪ್ರಾಣಮಯಕ್ಕೂ ಪುರುಷಾಕೃತಿಯನ್ನು ನಿರೂಪಿಸಲಾಗುತ್ತಿದೆ. ಅದು ಹೇಗೆಂದರೆ, ಆ ಪ್ರಾಣಮಯಕ್ಕೆ ಮುಖ ನಾಸಿಕಗಳ ಮೂಲಕ ಹೊರಬರುವಂತಹ ವಾಯುಭೇದವಾಗಿರುವ ಪ್ರಾಣವೃತ್ತಿಯೇ ಶಿರಸ್ಸು. ವ್ಯಾನವಾಯು ವೃತ್ತಿಯು ದಕ್ಷಿಣ ಪಾರ್ಶ್ವ ಅಪಾನವಾಯು ವೃತ್ತಿಯು ಉತ್ತರ ಪಕ್ಷ. ಆಕಾಶದಲ್ಲಿರುವ ಸಮಾನವೆಂದು ಹೆಸರುಳ್ಳ ವಾಯುವೃತ್ತಿ (ಸಮತ್ವೇನ) ಮಧ್ಯದಲ್ಲಿರುವುದರಿಂದ ಆತ್ಮಸ್ವರೂಪವಾಯಿತು. ಈ ಎಲ್ಲದಕ್ಕೂ ಎಲ್ಲದಕ್ಕೂ ಸ್ಥಿತಿಹೇತುವಾದ ಭೂಮಿ ಪ್ರಾಣಾತ್ಮಕವಾದ ಪುಚ್ಛಾಕೃತಿಯಲ್ಲಿದೆ. ಹೀಗೆ ಮೂಸೆಯಲ್ಲಿ ಕರಗಿಸಿ ಹೊಯ್ದ ತಾಮ್ರದ ಗ್ರಹಾದಿಗಳಂತೆಯೇ ಪುರುಷಾಕೃತಿಯೆನ್ನುವ ಅನ್ನಮಯದಲ್ಲಿ ತುಂಬಿ ಕೊಂಡಿದೆ. ಪ್ರಾಣಮಯಕ್ಕೂ, ಅನ್ನಮಯಕ್ಕೂ ಇರುವಂತೆಯೇ (ಶಿರಸ್ಸು) ಶಿರಃ ಪ್ರಾಣಾದ್ಯಾಕೃತಿ ಯತ್ತ್ವವು ಇದೆ. ಈ ಅರ್ಥದಲ್ಲಿ ಈ ಮಂತ್ರವು ಇದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ತೃತೀಯೋಽನುವಾಕಃ

ಮಂ.ಶ್ಲೋ.॥ **ಪ್ರಾಣಂ ದೇವಾ ಅನುಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾ–ಮಾಯುಃ । ತಸ್ಮಾತ್ಸರ್ವಾಯುಷಮುಚ್ಯತೇ । ಸರ್ವಮೇವ ತ ಆಯುರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ಸರ್ವಾಯುಷ–ಮುಚ್ಯತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ (1) ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾತ್ ಅನ್ಯೋಽಂತರ ಆತ್ಮಾ ಮನೋಮಯಃ ತೇನೈಷ ಪೂರ್ಣಃ । ಸ**

**ವಾ ಏಷ ಪುರುಷವಿಧ ಏವ ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ ॥ (2) ಅಥರ್ವಾಙ್ಗಿರಸಃ ಪುಚ್ಛಂ ಪ್ರತಿಷ್ಠಾ ತದಪ್ಯೇಷ ಶ್ಲೋಕೋ ಭವತಿ ॥**

ತಾ॥ ಅಗ್ನಿ ಮುಂತಾದ ದೇವತೆಗಳನ್ನು ಆ ಯಾವ ದೇವತೆಗಳೇ ಅಧಿಷ್ಠಾನಗಳಾಗಿ ಹೊಂದಿರುವ ಚಕ್ಷುರಾದೀಂದ್ರಿಯಗಳನ್ನು, ಮನುಜರು, ಪಶುಗಳು, ಈ ಮುಂತಾದವುಗಳೆಲ್ಲವೂ ವಾಯು ಸ್ವರೂಪ. ಚಲನಾದಿ ಪ್ರಾಣ ವ್ಯಾಪಾರವಿರುವ ಪ್ರಾಣವನ್ನು ಅನುಸರಿಸಿಯೇ ಪ್ರಾಣ ವ್ಯಾಪಾರ-ವನ್ನು ನಡೆಸುತ್ತವೆ. ಆದ್ದರಿಂದ ಜೀವಿಗಳು ಪರಿಚ್ಛಿನ್ನವಾದ ಅನ್ನಮಯದಿಂದಲೇ ಆತ್ಮಸ್ವರೂಪವನ್ನು ಹೊಂದಿದವರಲ್ಲ. ಆ ಕಾರಣದಿಂದಲೇ ಮನುಷ್ಯ ದೇಹಗಳೆಲ್ಲದರಲ್ಲೂ ವ್ಯಾಪಿಸಿರುವ ಸಾಧಾರಣವಾದ ಅಂತರ್ಗತವಾದ ಪ್ರಾಣದಿಂದಲೇ ಆತ್ಮ ಸ್ವರೂಪಗಳು ಉಂಟಾಗುತ್ತಿರುತ್ತವೆ. ಈ ಪ್ರಕಾರವಾಗಿ ಪೂರ್ವಪೂರ್ವದಲ್ಲಿ ವ್ಯಾಪಿಸಿರುವುವು. ಉತ್ತರೋತ್ತರದಲ್ಲಿ ಸೂಕ್ಷ್ಮಗಳನ್ನು ಆನಂದಮಯಗಳನ್ನು ಅಂತ್ಯದಲ್ಲಿ ಹೊಂದಿರುವುದು.

ಆಕಾಶಾದಿಭೂತಗಳಿಂದಾಗಿ, ಅಜ್ಞಾನದಿಂದ ನಿರ್ಮಿತವಾದ ಮನೋಮಯಾದಿಗಳಿಂದ ಮನುಷ್ಯಾದಿಗಳೆಲ್ಲರೂ ಆತ್ಮಸ್ವರೂಪವನ್ನು ಹೊಂದಿದವರಾಗುತ್ತಿರುವರು. ಅದು ಹೇಗೆಂದರೆ, ನಿತ್ಯವೆಂದು, ವಿಕಾರವಿಲ್ಲದಿರುವುದಾಗಿಯೂ, ಸರ್ವವನ್ನು ಹೊಂದಿರುವಂತಹುದಾಗಿಯೂ, ಸತ್ಯ ಜ್ಞಾನಾನಂತ ಲಕ್ಷಣವನ್ನು, ಕಾರಣವನ್ನು, ನಿತ್ಯವು ವಿಕಾರವಿಲ್ಲದ್ದು, ಸರ್ವವನ್ನು ಹೊಂದಿದಂತಹುದಾಗಿ ಸತ್ಯಜ್ಞಾನಾನಂತ ಲಕ್ಷಣವನ್ನು, ಪಂಚಕೋಶಾತೀತವಾದ ಸರ್ವಾತ್ಮದಿಂದಲೇ ಮನುಷ್ಯಾದಿಗಳು ಆತ್ಮಸ್ವರೂಪವನ್ನು ಹೊಂದಿದವರಾಗುತ್ತಿದ್ದಾರೆ.

ಎಲ್ಲರಿಗೂ ಪರಮಾರ್ಥವೆಂದಿರುವುದೇ ಅದೇ ಬ್ರಹ್ಮ. ಈ ಅರ್ಥಕ್ಕೋಸ್ಕರವಾಗಿಯೇ ಪ್ರಾಣಾ-ದ್ಯಾತ್ಮಗಳನ್ನು ಹೇಳಲಾಗಿದೆ. ಎಲ್ಲಿಯವರೆಗೆ ಈ ದೇಹದಲ್ಲಿ ಪ್ರಾಣವಿರುವುದೋ ಅಲ್ಲಿಯವರೆಗೆ ಮಾತ್ರ ಜೀವವಿರುತ್ತದೆ. ಆದ್ದರಿಂದ ಪ್ರಾಣವೇ ಎಲ್ಲದಕ್ಕೂ ಜೀವವೆಂದು ಹೇಳಲಾಗಿದೆ. ಇಂತಹ ಪ್ರಾಣವನ್ನು ಯಾರು ಬ್ರಹ್ಮಸ್ವರೂಪವಾಗಿ ಉಪಾಸಿಸುತ್ತಾರೋ ಅವರು ಸಮಸ್ತ ಆಯಸ್ಸನ್ನು ನೂರು ವರ್ಷಗಳ ಆಯುರ್ದಾಯವನ್ನು ಹೊಂದುವರು. ಅಂತಹವರು ಆಯಸ್ಸು ಮುಗಿಯುವುದಕ್ಕೆ ಮೊದಲೇ ಅಪಮೃತ್ಯುವಿನ ಪಾಲಾಗುವುದಿಲ್ಲ ಈ ಕಾರಣದಿಂದಲೇ ಪ್ರಾಣವು ಸರ್ವಕ್ಕೂ ಆಯಸ್ಸೆಂದು ಕರೆಯುತ್ತಿರುವುದು. ಹೀಗೆ ಪ್ರಾಣಮಯ ಕೋಶ ನಿರ್ಣಯವು ಪೂರ್ವೋಕ್ತವಾದ ಈ ಅನ್ನಮಯ-ವನ್ನು ಅಂತರ್ಗತದಲ್ಲಿ ಆತ್ಮಸ್ವರೂಪವಾದ ಪ್ರಾಣಮಯವಾದುದಕ್ಕಿಂತ ಅನ್ಯವಾದ ಮನೋಮಯದ ಅಂತರ್ಗತವಾಗಿರುವ ಆತ್ಮ ಸ್ವರೂಪ ಅಂತಹ ಮನೋಮಯಾತ್ಮದಿಂದಲೇ ಈ ಪ್ರಾಣಮಯವು ತುಂಬಿದೆ.

ಆದ್ದರಿಂದ ಆ ಪ್ರಾಣಮಯದಲ್ಲಿನ ಪುರುಷಾಕೃತಿಯನ್ನು ಅನುಸರಿಸಿಯೇ ಈ ಮನೋಮಯ-ದಲ್ಲಿ ಪುರುಷಾಕೃತಿಯಾಗಿದೆ. ಈ ಪ್ರಕಾರವಾಗಿ ಪುರುಷಾಕೃತಿಯಾದ ಮನೋಮಯಕ್ಕೆ ಶಿರಃ ಪಾಣ್ಯಾದಿಮ ತತ್ವವನ್ನು ನಿರೂಪಿಸಲಾಗಿದೆ. ಹೇಗೆಂದರೆ, ಇಂತಹ ಮನೋಮಯಕ್ಕೆ ಯಜುರ್ವೇದ-ಶಿರಸ್ಸು; ಋಗ್ವೇದವು ದಕ್ಷಿಣ ಪಾರ್ಶ್ವ. ಸಾಮವೇದವು ಉತ್ತರ ಪಾರ್ಶ್ವ, ಉಪದೇಶಕ್ಕೆ ಅರ್ಹವಾದ ವಿಶೇಷಗಳನ್ನು ಹೇಳುವಂತಹುದು ಬ್ರಾಹ್ಮಣವು ಆತ್ಮಸ್ವರೂಪ! ಇಂತಹ ಪುರುಷಾಕೃತಿಯಾದ

ಮನೋಮಯವನ್ನು, ಅಥರ್ವಾಂಗಿರಸರನ್ನು ಋಷಿಗಳ ಮೂಲಕ ದರ್ಶಿಸಲಾದ ಮಂತ್ರ ವಿಶೇಷಗಳು ಗೋಪುಚ್ಛಾಕೃತಿಯಾಗಿ ನಿಲ್ಲಲು ಆಧಾರವಾಗಿದೆ. ಹೀಗೆ ಮನೋಮಯ ಪ್ರಕಾಶವಾದ ಮಂತ್ರವಾಗುತ್ತಿದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಚತುರ್ಥೋಽನುವಾಕಃ

ಮಂ.ಶ್ಲೋ.॥ ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋವಿದ್ವಾನ್। ನ ಬಿಭೇತಿ ಕದಾಚನೇತಿ । ತಸ್ಯೈಷ ಏವ ಶರೀರ ಆತ್ಮಾ । ಯಃ ಪೂರ್ವಸ್ಯ ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ । ತೇನೈಷ ಪೂರ್ಣಃ। ಸವಾ ಏಷ ಪುರುಷವಿಧ ಏವ ॥ (1) ತಸ್ಯ ಪುರುಷ ವಿಧತಾಮ್ । ಅನ್ವಯಂ ಪುರುಷವಿಧಃ। ತಸ್ಯ ಶ್ರದ್ಧೈವ ಶಿರಃ ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥

ತಾ॥ ವಾಕ್ಕುಗಳು ವಾಙ್ಮನೋ ವಿಶಿಷ್ಟವಾದ ಮನೋಮಯದಿಂದ ಬ್ರಹ್ಮಾನಂದವನ್ನು ಹೊಂದಲಾರದೆ ಮನಸ್ಸಿನೊಂದಿಗೆ ಸಹ ಹಿಂದಿರುಗುತ್ತಿವೆ. ಇಂತಹ ಮನೋಮಯ ಬ್ರಹ್ಮಕ್ಕೆ ಉಪಾಸನ ಫಲಭೂತವಾದ ಅಧಿದೈವಿಕಾನಂದವನ್ನು ತಿಳಿದುಕೊಂಡ ವಿದ್ವಾಂಸನು ಎಂದಿಗೂ ಗರ್ಭವಾಸಾದಿ ದುಃಖಗಳಿಂದ ಭಯಪಡುವುದಿಲ್ಲ. ಇಂತಹ ವೇದಾತ್ಮಕವಾದ ಮನೋಮಯಾತ್ಮವೇ ಪೂರ್ವದಲ್ಲಿ ಹೇಳಿದ ಪ್ರಾಣಮಯಕ್ಕೆ ಆತ್ಮಸ್ವರೂಪವಾಗಿರುತ್ತದೆ. ಇದು ಮನೋಮಯಾತ್ಮ, ಇಂತಹ ಮನೋಮಯಕ್ಕಿಂತ ಅನ್ಯವಾದ ವಿಜ್ಞಾನಮಯಾತ್ಮ ಅಭ್ಯಂತರವಾಗಿರುವ ಆತ್ಮಸ್ವರೂಪ. ಅಂತಹ ಈ ವಿಜ್ಞಾನಮಯಾತ್ಮವು, ಆ ಮನೋಮಯವೆಂಬ ಪುರುಷಾಕೃತಿಯನ್ನು ಅನುಸರಿಸಿ ಅಂತರ-ವಾಗಿರುವ ವಿಜ್ಞಾನಮಯಾತ್ಮದಿಂದ ಮನೋಮಯವು ತುಂಬಿದೆ. ಅಂತಹ ಪುರುಷಾಕೃತಿಯನ್ನು ಹೊಂದಿ ನಿಶ್ಚಯಾತ್ಮಕವು. ವೇದಾರ್ಥ ವಿಷಯಕ್ಕೆ ಬುದ್ಧಿ ಸ್ವರೂಪವಾದ ವಿಜ್ಞಾನಾತ್ಮಕಕ್ಕೆ ಶಿರಃ ಪಾರ್ಶ್ವಾದಿಗಳಿಲ್ಲದಂತಹ ಆಸಕ್ತಿಯೇ ಶಿರಸ್ಸು, ಯಥಾಶಾಸ್ತ್ರಕರ್ತವ್ಯವಾಗಿ ಬುದ್ಧಿ ನಿಶ್ಚಿತವಾದ ಋತುವು ದಕ್ಷಿಣ ಪಾರ್ಶ್ವ. ಸತ್ಯಸ್ವರೂಪವು ಎಡಪಾರ್ಶ್ವ, ಉತ್ತರವು ಆತ್ಮ ಸ್ವರೂಪ. ಇಂತಹ ಶಿರಃ ಪ್ರಾಣ್ಯಾದಿಗಳ ವಿಜ್ಞಾನಮಯಕ್ಕೆ ಮಹತ್ತತ್ವವು ಪುಚ್ಛಾಕೃತಿಯಾಗಿ ನಿಲ್ಲಿಸುತ್ತದೆ. ಹೀಗೆ ವಿಜ್ಞಾನಮಯವು ಪ್ರಕಾಶಿಸುತ್ತದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಪಂಚಮೋಽನುವಾಕಃ

ಮಂ.ಶ್ಲೋ.॥ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಸ್ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ವೇದ । ತಸ್ಮಾಚ್ಚೇನ್ನಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ। ಸರ್ವಾನ್ ಕಾಮಾನ್ ಸಮಶ್ನುತ ಇತಿ । ತಸ್ಯೈಷ ಏವ ಶಾರೀರ

ಆತ್ಮಾ । ಯಃ ಪೂರ್ವಸ್ಯ ॥ (1) ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ । ಅನ್ಯೋಽನ್ತರ ಆತ್ಮಾನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ (2) ಬ್ರಹ್ಮಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥

ತಾ॥ ಲೋಕದಲ್ಲಿ ವಿಜ್ಞಾನವುಳ್ಳವನೇ ಶ್ರದ್ಧಾಪೂರ್ವಕವಾಗಿ ಯಜ್ಞವನ್ನು ಮಾಡುವವನು. ಆದರೆ ವಿಜ್ಞಾನವೇ ಯಜ್ಞಾದಿ ಸಮಸ್ತಕರ್ಮಗಳಿಗೆ ಕರ್ತೃವಾಗಿರುತ್ತದೆ. ಸಮಸ್ತಕ್ಕೆ ಮೊದಲನೆಯದಾದ ಈ ವಿಜ್ಞಾನವನ್ನೇ ಇಂದ್ರಾದಿ ದೇವತೆಗಳೆಲ್ಲರೂ ಬ್ರಹ್ಮ ಸ್ವರೂಪವಾಗಿ ಧ್ಯಾನಿಸುತ್ತಾರೆ. ಇಂತಹ ಮಹತ್ ಸ್ವರೂಪವಾದ ಬ್ರಹ್ಮನ ಉಪಾಸನೆಯಿಂದಲೇ ಆ ಇಂದ್ರಾದಿಗಳು ಜ್ಞಾನ ಐಶ್ವರ್ಯಗಳನ್ನು ಹೊಂದುವಂತಹವರಾಗುತ್ತಿದ್ದಾರೆ. ಅಂತಹ ವಿಜ್ಞಾನವನ್ನು ಬ್ರಹ್ಮವಾಗಿ ತಿಳಿದುಕೊಂಡು, ಈ ಹಿಂದೆ ಹೇಳಿದ ಐಶ್ವರ್ಯಾದಿಗಳಲ್ಲಿ ಆತ್ಮಭಾವನೆಯನ್ನು ಬಿಟ್ಟು ಬ್ರಹ್ಮಸ್ವರೂಪವಾದ ವಿಜ್ಞಾನಮಯದಲ್ಲಿ ಆತ್ಮಭಾವನೆಯನ್ನು ಬೆಳಸಿಕೊಳ್ಳುವ ಪ್ರಮಾದವಿದೆ. ಅಂತಹವನು ಈ ಶರೀರದಲ್ಲೇ ಪಾಪಗಳನ್ನು ತೊರೆದು (ಅಂದರೆ ಶರೀರವು ಹೋಗುತ್ತಲೇ ಶರೀರದಲ್ಲಿ ಹುಟ್ಟಿದ ಪಾಪಗಳೆಲ್ಲವೂ ಛತ್ರಾಪಾಯದಲ್ಲಿ ನೆರಳಿದ್ದಂತೆ ತೊರೆದು ಬ್ರಹ್ಮ ಸ್ವರೂಪವಾದ ವಿಜ್ಞಾನಾನಮಯಾತ್ಮದೊಂದಿಗೆ ಎಲ್ಲ ಕೋರಿಕೆಗಳನ್ನು ಅನುಭವಿಸುತ್ತಾನೆ. ಅದೇ ವಿಜ್ಞಾನಮಾಯಾತ್ಮ ಈ ವಿಜ್ಞಾನಮಯಾತ್ಮವೇ, ಈ ಹಿಂದೆ ಹೇಳಿರುವ ಮನೋಮಯಾತ್ಮಕ್ಕೆ ಅಂತರಂಗವಾದ ಆತ್ಮ ಸ್ವರೂಪ. ಇಂತಹ ಆನಂದಾತ್ಮದಿಂದಲೇ ಈ ವಿಜ್ಞಾನಾತ್ಮವು ತುಂಬಿದೆ. ಆ ವಿಜ್ಞಾನಾತ್ಮದ ಪುರುಷಾಕೃತಿಯನ್ನು ಹೊಂದಿದ ಆನಂದಾತ್ಮಕ್ಕೆ ಶಿರಃ ಪ್ರಾಣ್ಯಾದಿಗಳು ಇಲ್ಲವಾದುದರಿಂದ ಪುತ್ರಾದಿದರ್ಶನದಿಂದ ಹುಟ್ಟಿದ ಪ್ರೇಮವೇ ಶಿರಸ್ಸು. ಪ್ರಿಯಲಾಭ ನಿಮಿತ್ತವಾದ ಹರ್ಷವು ಬಲಭಾಗ; ಇನ್ನೂ ಹೆಚ್ಚಿನ ಆ ಪ್ರಿಯರಾದಂತಹವರ ನಿಮಿತ್ತ ಆಗಿರುವ ಹರ್ಷವೇ ಎಡಪಾರ್ಶ್ವ. ಸುಖಸಾಮಾನ್ಯವು ಆತ್ಮಸ್ವರೂಪವು; ಈ ಪ್ರಕಾರ ಶಿರಃ ಪ್ರಾಣ್ಯಾದಿಗಳಿರುವ ಆನಂದಮಯವನ್ನು ವಿದ್ಯಾ ಪರಿಕಲ್ಪಿತವಾದ ದ್ವೈತ ಪ್ರಪಂಚಕ್ಕೆ ಅವಸಾನಭೂತವು, ಅದ್ವೈತವೆನ್ನುವ ಪರಬ್ರಹ್ಮ ಪುಚ್ಛಾಕೃತಿಯಾಗಿ ನಿಲ್ಲಲು ಆಧಾರವಾಗಿದೆ. ಹೀಗೆ ಆನಂದಮಯ ಪ್ರಕಾಶವಾದ ಮಂತ್ರವಾಗುತ್ತದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಷಷ್ಠೋಽನುವಾಕಃ

ಮಂ.ಶ್ಲೋ.॥ ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್ । ಅಸ್ತಿಬ್ರಹ್ಮೇತಿ ಚೇದ್ವೇದ । ಸಂತಮೇನಂ ತತೋ ವಿದುರಿತಿ ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ಅಥಾತೋಽನು ಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ । 3 ಅಹೋ ವಿದ್ವಾನಮುಂ ಲೋಕಂ ಪ್ರೇತ್ಯ ॥ (1) ಕಶ್ಚಿತ್ಸಮಶ್ನುತಾ3ಉ । ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ। ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್ ಸರ್ವಮಸೃಜತ ।

ಯದಿದಂ ಕಿಂ ಚ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನುಪ್ರವಿಶ್ಯ ॥ (2)
ಸಚ್ಚತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ ।
ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂ ಚ।
ತತ್ಸತ್ಯಮಿತ್ಯಾಚಕ್ಷತೇ । ತದಪ್ಯೇಷ ಶ್ಲೋಕೋ ಭವತಿ ॥

ತಾ॥ ಪರಬ್ರಹ್ಮ ಇಲ್ಲವೆಂದು ತಿಳಿದುಕೊಂಡವನು ಇಲ್ಲದವನಂತಾಗಿಯೇ (ಪುರುಷಾರ್ಥ ವಿಹೀನನಾಗಿಯೇ) ಆಗುತ್ತಾನೆ. ಪರಬ್ರಹ್ಮವು ಇದೆಯೆಂದು ತಿಳಿದುಕೊಂಡ ಪಕ್ಷದಲ್ಲಿ (ಬ್ರಹ್ಮವೇತ್ತರು) ಈ ತಿಳಿದುಕೊಂಡವನನ್ನು, ಇರುವವನಂತೆ ಬ್ರಹ್ಮಸ್ವರೂಪದೊಂದಿಗೆ ಇರುವವನಂತೆ ತಿಳಿದು-ಕೊಂಡಿರುವರು. ಹಿಂದೆ ಹೇಳಲಾದ ಆ ವಿಜ್ಞಾನಮಯಕ್ಕೂ, ವಿಜ್ಞಾನಮಯ ಕೋಶದಲ್ಲಿನ ಆತ್ಮ ಸ್ವರೂಪವೂ ಈ ಆನಂದಮಯವೇ! ಆ ಕಾರಣದಿಂದಲೇ (ಆಚಾರ್ಯರು ಹೇಳಿದ ಮಾತನ್ನು) ಅನುಸರಿಸಿರುವ ಪ್ರಶ್ನೆಗಳನ್ನು ಕೇಳುತ್ತಿರುವನು. ವಿದ್ವಾಂಸನಲ್ಲದವನು ಮರಣ ಹೊಂದಿದ ಮೇಲೆ ಈ ಲೋಕವನ್ನು (ಈ ಪರಮಾತ್ಮನನ್ನು) ಹೊಂದುತ್ತಿದ್ದಾನೆಯೇ? ಒಬ್ಬಾನೊಬ್ಬ ವಿದ್ವಾಂಸನು ಮರಣವನ್ನು ಹೊಂದಿ ಈ ಲೋಕವನ್ನು (ಈ ಪರಮಾತ್ಮನನ್ನು) ಹೊಂದುತ್ತಿದ್ದಾನೆಯೇ? ಈ ಪ್ರಶ್ನೆಗೆ ಉತ್ತರವನ್ನು ಹೇಳಲು ಉತ್ತರಗ್ರಂಥವು ಪ್ರಾರಂಭಿಸಲಾಗುತ್ತದೆ. ಆ ಪರಮಾತ್ಮನು ತಪಸ್ಸನ್ನು ಮಾಡಿದ. (ಆತ್ಮವು ಸೃಜಿಸಲಾದ, ಜಗತ್ತಿನ ರಚನಾ ವಿಷಯವಾದ ಆಲೋಚನೆಯನ್ನು ಮಾಡಿದ.) ಆ ಪರಮಾತ್ಮ ತಪಸ್ಸು ಮಾಡಿ ಈ ಸಮಸ್ತವಾದ ಜಗತ್ತನ್ನು ಸೃಜಿಸಿದ. ಈ ಸಮಸ್ತವಾದ ಜಗತ್ತನ್ನು ಸೃಜಿಸಲಾದ ಈ ಜಗತ್ತನ್ನೇ, ಅನುಸರಿಸಿ ಪ್ರವೇಶಿಸಿದನು. ಸೃಜಿಸಲಾದ ಆ ಜಗತ್ತನ್ನು ಅನುಸರಿಸಿ, ಪ್ರವೇಶಿಸಿ, ಮೂರ್ತ ಸ್ವರೂಪವಾಗಿಯೂ, ಅಮೂರ್ತಸ್ವರೂಪವಾಗಿಯೂ, ತಾನೇ ಆದ. (ಈಗ) ಹೇಳುವಂತಹ ನಿರುಕ್ತಾದಿ ಶಬ್ದಗಳು ಕ್ರಮವಾಗಿ ಆ ಮೂರ್ತಾಮೂರ್ತಗಳಿಗೆ ವಿಶೇಷಣಗಳಾಗಿ ತಿಳಿದುಕೊಳ್ಳಬೇಕು. ನಿಷ್ಕೃಷ್ಟವಾದಂತಹುದು, ಆಶ್ರಯವಾದುದು, ಚೇತನರೂಪವಾಗಿರುವುದು. ಸತ್ಯಸ್ವರೂಪವಾಗಿರುವುದು ಆದಂತಹ ಮೂರ್ತ ಸ್ವರೂಪವನ್ನು, ಅಮೂರ್ತ ಸ್ವರೂಪವನ್ನು, ಆಶ್ರಯವಲ್ಲದ್ದನ್ನು ಚೇತನ ರೂಪವಲ್ಲದ್ದನ್ನು (ಅಮೂರ್ತ ಸ್ವರೂಪವನ್ನು) ತಿಳಿದುಕೊಂಡರೆ ಇವು ಈ ಸಮಸ್ತದಲ್ಲಿರುವ ಪರಮಾರ್ಥ ಸತ್ಯಗಳು. ಸತ್ಯಜ್ಞಾನಾನಂದಾತ್ಮಕವಾದ ಪರಮಾರ್ಥ ಸತ್ವವಾದ ಪರಬ್ರಹ್ಮವು ಈ ಹೇಳಲಾದ ಸಮಸ್ತವೇ! (ಮೂರ್ತಾ ಮೂರ್ತಾದಿ ಕರ್ಮಜಾತವೆಲ್ಲವು) ಬ್ರಹ್ಮವೇತ್ತರು ಆ ಸತ್ಯರೂಪವಾದ ಆ ಪರಬ್ರಹ್ಮವನ್ನು ಹೇಳುತ್ತಿದ್ದಾರೆ. ಆ ಅರ್ಥದಲ್ಲಿ ಈ ಮಂತ್ರವಾಗುತ್ತಿದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಸಪ್ತಮೋಽನುವಾಕಃ

ಮಂ.ಶ್ಲೋ.॥ ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ ತದಾತ್ಮಾನಗ್ಂ ಸ್ವಯಮಕುರುತ।
ತಸ್ಮಾತ್ತತ್ಸುಕೃತಮುಚ್ಯತ ಇತಿ । ಯದ್ವೈತತ್ಸುಕೃತಮ್ । ರಸೋ ವೈ ಸಃ । ರಸಗ್ಂ
ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ । ಕೋ ಹ್ಯೇವಾಽನ್ಯಾತ್ಕಃ ಪ್ರಾಣ್ಯಾತ್ ಯದೇಷ
ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ ॥ (1)

**ಯದಾಹ್ಯೇವೈಷ ಏತಸ್ಮಿನ್ನದೃಶ್ಯೇನಾತ್ಮ್ಯೇಽನಿರುಕ್ತೇಽನಿಲಯೇನೇಽಭಯಂ ಪ್ರತಿಷ್ಠಾಂ ವಿಂದತೇ। ಅಥಸೋಽಭಯಂ ಗತೋ ಭವತಿ। ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ । ತದಪ್ಯೇಷ ಶ್ಲೋಕೋ ಭವತಿ ॥ (2)**

ತಾ॥ ಹಿಂದೆ ಪೂರ್ವದಲ್ಲಿ ಪರಬ್ರಹ್ಮ ಸ್ವರೂಪವಾಗಿ ಹೇಳಲಾದ ಈ ಪ್ರಪಂಚದ ಸೃಷ್ಟಿಗೆ ಪೂರ್ವದಲ್ಲಿ ವ್ಯಾಕೃತವಾಗಿ ನಾಮರೂಪವಿಶೇಷಗಳಿಗೆ ವಿಪರೀತವಾದಂತಹ ಅವ್ಯಾಕೃತವಾದ ಪರಬ್ರಹ್ಮವಾಗೇ ಇತ್ತು. ಅಂತಹ ಅವ್ಯಾಕೃತ ಪರಬ್ರಹ್ಮದಿಂದಲೇ ಪ್ರವಿವಿಕ್ತವಾದ ನಾಮರೂಪ ವಿಶೇಷವುಳ್ಳ ಜಗತ್ತು ಹುಟ್ಟಿತು. ಯಾವ ಕಾರಣದಿಂದ ಆ ಪರಬ್ರಹ್ಮವು ಈ ಪ್ರಕಾರವಾಗಿ ತನ್ನನ್ನು ತಾನು ಮಾಡಿಕೊಂಡಿತೋ ಆ ಕಾರಣದಿಂದಲೇ ಬ್ರಹ್ಮವು ಸ್ವಕತೃಕವಾಯಿತೆಂದು ಹೇಳಲಾಗುತ್ತಿದೆ. ಇಂತಹ ಸ್ವಕತೃಕವಾದ ಆ ಪರಬ್ರಹ್ಮವು, ತೃಪ್ತಿ ಹೇತುವಾದ ಆನಂದಕರವಾದ ರಸ ಸ್ವರೂಪವಾಗಿ ಇದೆ. ಇಂತಹ ರಸ ಸ್ವರೂಪವನ್ನು ಜೀವಿಯು ಹೊಂದಿ ಸುಖವಾಗಿರುತ್ತಾನೆ. ಆ ಸುಖ ಸ್ವರೂಪನಾದ ಪರಮಾತ್ಮ ಹೃದಯಾಕಾಶದಲ್ಲಿ ಇಲ್ಲದೆ ಹೋದರೆ ಯಾರು ಪ್ರಾಣಾಪಾನಾದಿ ವ್ಯಾಪಾರವನ್ನು ನಡೆಸುವರು? ಆ ಪರಮಾತ್ಮನೇ ಲೋಕವನ್ನು ಸುಖವಾಗಿಟ್ಟಿದ್ದಾನೆ. ಸಾಧಕನಿಗೆ ಈ ಜೀವನು ಕಾಣಿಸದಂತಹ, ಶರೀರವಿಲ್ಲದಂತಹ, ವರ್ಣಿಸಲು ಸಾಧ್ಯವಾಗದಂತಹ ನಿರಾಧಾರವಾದಂತಹ ಈ ಪರಬ್ರಹ್ಮದಲ್ಲಿ ಭಯರಹಿತವಾದ ಆತ್ಮಭಾವವನ್ನು ಯಾವಾಗ ಹೊಂದುವನೋ, ಆಗಲೇ ಭಯ-ರಹಿತವಾದ ಪರಬ್ರಹ್ಮವನ್ನು ಹೊಂದಿದಂತಹವನಾಗುತ್ತಾನೆ. ಈ ಜೀವವು ಯಾವಾಗ ಈ ಪರಬ್ರಹ್ಮದಲ್ಲಿ ಭೇದವನ್ನು ಉಂಟುಮಾಡಿಕೊಳ್ಳುತ್ತಿರುವನೋ, ಆ ಜೀವನಿಗೆ ಭಯವೇ ಉಂಟಾಗುವುದು. (ಈ ಅರ್ಥದಲ್ಲೇ ಈ ಮಂತ್ರವು ಇರುತ್ತದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)

## ದ್ವಿತೀಯಾಧ್ಯಾಯಃ – ಅಷ್ಟಮೋಽನುವಾಕಃ

ಮಂ.ಶ್ಲೋ.॥ **ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಽಸ್ಮಾದಗ್ನಿಶ್ಚೇನ್ದ್ರಶ್ಚ । ಮೃತ್ಯುರ್ಧಾವತಿ ಪಞ್ಚಮ ಇತಿ । ಸೈಷಾಽಽನನ್ದಸ್ಯ ಮೀಮಾಗ್ಂಸಾ ಭವತಿ । ಯುವಾ ಸ್ಯಾತ್ಸಾಧು ಯುವಾಧ್ಯಾಯಕಃ ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾಸ್ಯಾತ್ । ಸ ಏಕೋ ಮಾನುಷ ಆನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ (1) ತೇ ಯೇ ಶತಂ ಮಾನುಷಾ ಆನನ್ದಾಃ । ಸ ಏಕೋ ಮನುಷ್ಯ-ಗನ್ಧರ್ವಾಣಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯ-ಗನ್ಧರ್ವಾಣಾಮಾನನ್ದಃ। ಸ ಏಕೋ ದೇವಗನ್ಧರ್ವಾಣಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಗನ್ಧರ್ವಾಣಾಮಾನನ್ದಃ । ಸ ಏಕಃ ಪಿತೄಣಾಂ ಚಿರಲೋಕಲೋಕಾನಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ**

ಪಿತ್ರೂಣಾಂ ಚಿರಲೋಕ-ಲೋಕಾನಾಮಾನನ್ದಃ । (2) ಸ ಏಕ ಅಜಾನಜಾನಾಂ ದೇವಾನಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಮಾಜಾನಜಾನಾಂ ದೇವಾನಾಮಾನನ್ದಾಃ । ಸ ಏಕಃ ಕರ್ಮದೇವಾನಾಂ ದೇವಾನಾಮಾನನ್ದಃ। ಯೇ ಕರ್ಮಣಾ-ದೇವಾನಪಿಯನ್ತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನನ್ದಾಃ । ಸ ಏಕೋ ದೇವಾನಾಮಾನನ್ದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ದೇವಾನಾಮಾನನ್ದಾಃ ॥ (3) ಸ ಏಕ ಇನ್ದ್ರಸ್ಯಾನನ್ದಃ ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಿನ್ದ್ರಸ್ಯಾನನ್ದಾಃ । ಸ ಏಕೋಬೃಹಸ್ಪತೇರಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪತೇರಾನನ್ದಃ । ಸ ಏಕಃ ಪ್ರಜಾಪತೇರಾನನ್ದಃ ಶ್ರೋತ್ರಿಯಸ್ಯ ಚಾಕಾಮಹಾತಸ್ಯ । ತೇ ಯೇ ಶತಂ ಪ್ರಜಾಪತೇ-ರಾನನ್ದಾಃ । ಸ ಏಕೋ ಬ್ರಹ್ಮಣ ಆನಂದಃ ॥ (4) ಶ್ರೋತ್ರಿಯಸ್ಯ ಚಾಕಾಮಹತಸ್ಯ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ। ಸ ಯ ಏವಂ ವಿತ್ ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯ ಮಾತ್ಮಾನಮುಪಸಂಕ್ರಾಮತಿ। ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂ-ಕ್ರಾಮತಿ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ। ಏತಂ ಮನೋಮಯ-ಮಾತ್ಮಾನಮುಪಸಂಕ್ರಾಮತಿ ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ ॥ (5) ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ । ತದಪ್ಯೇಷಶ್ಲೋಕೋ ಭವತಿ ॥

ತಾ॥ ವಾಯುವು ಪರಬ್ರಹ್ಮದ ಭಯದಿಂದ ಬೀಸುತ್ತಿದೆ; ಸೂರ್ಯನು ಭಯದಿಂದ ಉದಯಿಸುತ್ತಾನೆ. ಪರಬ್ರಹ್ಮದ ಭಯದಿಂದ ಅಗ್ನಿ, ಇಂದ್ರ ಮತ್ತು ಐದನೆಯವನಾದ ಯಮ ಇವರುಗಳು ಪ್ರವರ್ತಿಸುತ್ತಾರೆ. (ಈಗ ಬ್ರಹ್ಮಾನಂದದ ಬಗ್ಗೆ ತಿಳಿದುಕೊಳ್ಳೋಣ.)

ಯೌವನ, ಸಾಧುತ್ವ, ವೇದಾಧ್ಯಯನ, ಪರಿಜನರು, ಶರೀರದೃಢತ್ವ, ಧೈರ್ಯ, ಬಲ, ಭೂತಲವನೆಲ್ಲ ಆಳುವಂತಹ ಶಕ್ತಿಯನ್ನು ಹೊಂದಿ, ಈ ಭೂಮಿಯೆಲ್ಲವೂ ಧನದಿಂದ ತುಂಬಿರಲು ಅದನ್ನು ಒಂದು ಮನುಷ್ಯಾನಂದವೆಂದು ಹೇಳುವರು. (ಇಂತಹ ಆನಂದವು ವೇದಾರ್ಥವನ್ನು ತಿಳಿದುಕೊಂಡ ಶ್ರೋತ್ರೀಯನೂ, ಕಾಮರಹಿತನೂ, ಆದ ಬ್ರಹ್ಮವೇತ್ತನಿಗೆ ಸಹ ಇರುವುದು.)

ಇಂತಹ ಮನುಷ್ಯಾನಂದಕ್ಕೆ ನೂರುಪಟ್ಟು ಹೆಚ್ಚಾಗಿರುವಂತಹುದು ಮನುಷ್ಯ ಗಂಧರ್ವಾನಂದ. ಅದಕ್ಕೆ ನೂರು ಪಟ್ಟು ಹೆಚ್ಚಾಗಿರುವಂತಹುದು ದೇವಗಂಧರ್ವಾನಂದ. ಅದಕ್ಕೆ ನೂರ್ಮಡಿ ಹೆಚ್ಚಾಗಿರುವುದು ಪಿತೃದೇವತೆಗಳ ಆನಂದ. ಅದಕ್ಕೆ ನೂರರಷ್ಟು ಹೆಚ್ಚಿಗೆ ಉಂಟಾಗುವುದು ದೇವಾನಂದ. ಅದಕ್ಕೆ ನೂರು ಪಟ್ಟು ಹೆಚ್ಚಿನದು ಇಂದ್ರಾನಂದ. ಅದಕ್ಕೆ ನೂರುಪಟ್ಟು ಹೆಚ್ಚಿನದು ಬೃಹಸ್ಪತಿ ಆನಂದ. ಅದಕ್ಕೆ ನೂರರಷ್ಟು ಪ್ರಜಾಪತಿ ಆನಂದ. ಅದಕ್ಕೆ ನೂರರಷ್ಟು ಅಧಿಕವಾಗಿರುವುದು ಬ್ರಹ್ಮಾನಂದ. ಆ ಬ್ರಹ್ಮವು ಮನುಜನ ಹೃದಯದಲ್ಲಿದೆ. ಆನಂದವೆಲ್ಲವೂ ವೇದಾರ್ಥ ತಿಳಿದ ಶ್ರೋತ್ರೀಯನಿಗೂ, ಕಾಮರಹಿತನಿಗೂ ಸಹ ಇದೆ. ಮನುಷ್ಯನಲ್ಲಿರುವ ಆ ಆನಂದರೂಪ ಬ್ರಹ್ಮವು ಯಾವುದಿದೆಯೋ,

ಸೂರ್ಯನಲ್ಲಿಯೇ ಬ್ರಹ್ಮವಿದೆಯೋ, ಆ ಎರಡೂ ಒಂದೇ. ಹೀಗೆ ತಿಳಿದುಕೊಂಡವನು ವಿಷಯಗಳಲ್ಲಿ ಅಪೇಕ್ಷೆ ಪಡದೆ ಅನ್ನಮಯ ಕೋಶವನ್ನು ದಾಟುವನು (ಆತ್ಮಕ್ಕಿಂತ ಅದು ಬೇರೆಯೆಂದು ತಿಳಿದು ಕೊಂಡವನು. ಹಾಗೆಯೇ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಕೋಶಗಳನ್ನು ಸಹಾ ಆತ್ಮವಲ್ಲವೆಂದು ತಿಳಿದವನಾಗುತ್ತಾನೆ. ಈ ಅರ್ಥವನ್ನೇ ಈ ಮಂತ್ರವು ಹೇಳುತ್ತಿದೆ.

## ಆನಂದವಲ್ಲಿ – (ಬ್ರಹ್ಮಾನಂದವಲ್ಲಿ)
## ದ್ವಿತೀಯಾಧ್ಯಾಯಃ – ನವಮೋಽನುವಾಕಃ

**ಮಂ.ಶ್ಲೋ.॥ ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾ ಸಹಾ । ಆನನ್ದಂ ಬ್ರಹ್ಮಣೋ ವಿದ್ವಾನ್। ನ ಬಿಭೇತಿ ಕುತಶ್ಚನೇತಿ । ಏತಗ್ಂ ಹವಾವ ನ ತಪತಿ । ಕಿಮಹಗ್ಂ ಸಾಧು ನಾಕರವಮ್। ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನಗ್ಂ ಸ್ಪೃಣುತೇ । ಉಭೇಹ್ಯೇವೈಷ ಏತೇ ಆತ್ಮಾನಗ್ಂ ಸ್ಪೃಣುತೇ । ಯ ಏವಂ ವೇದ ॥ (1) ಇತ್ಯುಪನಿಷತ್॥**

**– ಇತ್ಯಾನನ್ದವಲ್ಲೀ ದ್ವಿತೀಯೋಽಧ್ಯಾಯಃ ಸಮಾಪ್ತಃ –**

ತಾ॥ ಯಾವ ಪರಬ್ರಹ್ಮದಿಂದ ವಾಕ್ಕುಗಳು ಮನಸ್ಸಿನಲ್ಲಿಯೂ ಸಹ ಹೊಂದದೆಯೇ ಹಿಂದಕ್ಕೆ ಹೋಗುತ್ತಿದೆಯೋ, ಆ ಪರಬ್ರಹ್ಮದ ಆನಂದವನ್ನು ಅರಿತುಕೊಂಡವನು ಯಾವುದರಿಂದಲೂ ಸಹ ಭಯಪಡಲಾರ. ಈ ಪ್ರಕಾರವಾಗಿ ವಾಕ್ಕು ಮನಸ್ಸುಗಳಿಗೆ ವಿಷಯವಾಗದೆ ಅತೀಂದ್ರಿಯವಾಗಿ-ರುವಂತಹ ಪರಬ್ರಹ್ಮವನ್ನು ಈ ಹಿಂದೆ ಹೇಳಿದ ಪ್ರಕಾರ ತಿಳಿದುಕೊಂಡವನಿಗೆ ಯಾವುದರಿಂದಲೂ ಭಯವೆನ್ನುವುದು ಇರುವುದಿಲ್ಲ. ಆ ವಿದ್ವಾಂಸನು ಪುಣ್ಯಪಾಪಗಳನ್ನು ಆತ್ಮಭಾವನೆಯೊಂದಿಗೇ ನೋಡುತ್ತಾ ಆನಂದವನ್ನು ಹೊಂದುವುದರಿಂದ ಅಂತಹವನಿಗೆ ಮರಣಕಾಲದಲ್ಲಿ ಈ ಪುಣ್ಯಪಾಪಗಳು ದುಃಖವನ್ನುಂಟು ಮಾಡುವುದಿಲ್ಲ.

**ಮಂ.ಶ್ಲೋ.॥ ಬ್ರಹ್ಮವಿದಿದಮಯಮಿದಮೇಕವಿಂಶತಿಃ ಅನ್ನಾದನ್ನರಸಮಯಾತ್, ಅನ್ನಾತ್ ಪ್ರಾಣೋವ್ಯಾನೋಽಪಾನ ಆಕಾಶಃ ಪೃಥಿವೀಪುಚ್ಛಂ ಷಡ್ವಿಂಶತಿಃ, ಪ್ರಾಣಂ ಯಜುರ್ ಋುಕ್ ಸಾಮಾದೇಶೋಽಥರ್ವಾಂಗಿರಸಃ ಪುಚ್ಛಂ ದ್ವಾವಿಂಶತಿಃ ಯತಃ ಶ್ರದ್ಧರ್ತಂ ಸತ್ಯಂ ಯೋಗೋ ಮಹೋಷ್ಟಾದಶ; ವಿಜ್ಞಾನಪ್ರಿಯಂ ಮೋದಃ ಪ್ರಮೋದ ಆನಂದೋ ಬ್ರಹ್ಮ ಪುಚ್ಛಂ ದ್ವಾವಿಂಶತಿಃ; ಅಸನ್ನೇವಾಥಾಷ್ಟಾವಿಂಶತಿಃ; ಅಸತ್ ಷೋಡಶ; ಭೀಷಾಽಸ್ಮಾ-ನ್ಮಾನುಷೋಮನುಷ್ಯಗಂಧರ್ವಾಣಾಂ ದೇವಗಂಧರ್ವಾಣಾಂ ಪಿತ್ರೂಣಾಂ ಚಿರಲೋಕ ಲೋಕಾನಮಾಜಾನಜಾನಾಂ ಕರ್ಮದೇವಾನಾಂ ಯೇ ಕರ್ಮಣಾದೇವಾನಾ-ಮಿಂದ್ರಸ್ಯ ಬೃಹಸ್ಪತೇ ಪ್ರಜಾಪತೇರ್‌ಬ್ರಹ್ಮಣಃ ಸಯಶ್ಚ ಸಂಕ್ರಾಮತ್ಯೇಕಪಂಚಾಶತ್; ಯತಃ ಕುತಶ್ಚನೈಕಮೇಕಾದಶನವ**

## ಭೃಗುವಲ್ಲಿ – ತೃತೀಯಾಧ್ಯಾಯಃ – ಪ್ರಥಮೋಽನುವಾಕಃ

ಮಂ.ಶ್ಲೋ.॥ ಓಂ॥ ಸಹ ನಾವವತು। ಸಹ ನೌ ಭುನಕ್ತು। ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು। ಮಾ ವಿದ್ವಿಷಾವಹೈ। ಓಂ ಶಾಂತಿಃ ಶ್ಶಾಂತಿಃ ಶ್ಶಾಂತಿಃ।

ಮಂ.ಶ್ಲೋ.॥ ಭೃಗುರ್ವೈವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ । ತಗ್ಂ ಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ ಪ್ರಯನ್ತ್ಯಭಿಸಂವಿಶನ್ತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ । ಸ ತಮೋಽತಪ್ಯತ। ಸತಪಸ್ತಪ್ತ್ವಾ ॥

ತಾ॥ ಭೃಗುವೆಂಬ ಹೆಸರುಳ್ಳ ವರುಣಪುತ್ರನು ಬ್ರಹ್ಮವಿದ್ಯೆಯನ್ನು ತಿಳಿದುಕೊಳ್ಳುವ ಇಚ್ಛೆಯುಳ್ಳವನಾಗಿ ತಂದೆಯಾದ ವರುಣನ ಹತ್ತಿರಕ್ಕೆ ತೆರಳಿ ಓ ಪೂಜ್ಯನೇ! ಬ್ರಹ್ಮವಿದ್ಯೆಯನ್ನು ನನಗೆ ಬೋಧಿಸಬೇಕೆಂದು ಕೇಳಲು ಆ ವರುಣನು, ಪುತ್ರನಾದ ಭೃಗುವಿಗಾಗಿ ಪರಬ್ರಹ್ಮ ವಿದ್ಯಾಪ್ರಾಪ್ತಿಯಲ್ಲಿ ದೇಹ, ಪ್ರಾಣ, ನೇತ್ರ, ಶ್ರೋತ್ರ ಮನಸ್ಸು, ವಾಕ್ಕು, ಇವೆಲ್ಲವೂ ಸಾಧನಗಳಾಗಿ ದ್ವಾರಗಳೆಂದು ಹೇಳಿದ. ಹೀಗೆ ಬ್ರಹ್ಮ ಪ್ರಾಪ್ತಿಯ ಮೂಲಕ ಭೂತಗಳಾದ ಅನ್ನಾದಿಗಳನ್ನು ಹೇಳಿ ಬ್ರಹ್ಮಲಕ್ಷಣಗಳನ್ನು ಹೇಳುತ್ತಿದ್ದಾನೆ. ಬ್ರಹ್ಮಾದಿ ಸ್ತಂಬ ಪರ್ಯಂತವಿರುವಂತಹ ಸಮಸ್ತ ಭೂತಗಳು ಯಾವ ಪರಬ್ರಹ್ಮದಿಂದ ಹುಟ್ಟಿ ಯಾವ ಪರಬ್ರಹ್ಮದಿಂದ ಜೀವಿಸುತ್ತಾ, ಅಂತ್ಯದಲ್ಲಿ ಯಾವ ಪರಬ್ರಹ್ಮದಲ್ಲಿ ಪ್ರವೇಶಿಸಿ ಎಲ್ಲೆಡೆಯೂ ಆ ಪರಬ್ರಹ್ಮ ಸ್ವರೂಪವೇ ತಾವಾಗಿ ಅದನ್ನು ಬಿಡುವುದಿಲ್ಲವೋ, ಅಂತಹ ಪರಬ್ರಹ್ಮದ ಕುರಿತಾದ ಈ ಹೇಳಲಾದ ಲಕ್ಷಣವನ್ನು ವಿಶೇಷವಾಗಿ ತಿಳಿದುಕೊಳ್ಳಲು ಬಯಸುವವರು. ಅದೇ ಪರಬ್ರಹ್ಮ ಸ್ವರೂಪವೆಂದು ಹೇಳಲು, ಆ ಭೃಗುವು ತಂದೆಯಿಂದ ಆಲಿಸಿದ ತಂದೆಯಿಂದ ಹೇಳಲಾದ (ತಂದೆಯು ನುಡಿದ) ಪರಬ್ರಹ್ಮವನ್ನು ಕುರಿತು ಏಕಾಗ್ರಚಿತ್ತನಾಗಿ ಬುದ್ಧಿಪೂರ್ವಕವಾಗಿ ಆಲೋಚಿಸಿದನು. ಹೀಗೆ ಚಿಂತನೆ ಮಾಡಿ.

## ಭೃಗುವಲ್ಲಿ – ತೃತೀಯಾಧ್ಯಾಯಃ – ದ್ವಿತೀಯೋಽನುವಾಕಃ

ಮಂ.ಶ್ಲೋ.॥ ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ। ಅನ್ನೇನ ಜಾತಾನಿ ಜೀವನ್ತಿ । ಅನ್ನಂ ಪ್ರಯನ್ತ್ಯಭಿಸಂವಿಶಂತೀತಿ। ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂಹೋವಾಚ। ತಪಸಾ ಬ್ರಹ್ಮಾ ವಿಜಿಜ್ಞಾಸಸ್ವ॥ ತಪೋ ಬ್ರಹ್ಮೇತಿ। ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥

ತಾ॥ ಆ ಭೃಗುವು ಹೀಗೆ ಚಿಂತನೆ ಮಾಡಿ ಈ ಅನ್ನವನ್ನೇ ಬ್ರಹ್ಮಸ್ವರೂಪವಾಗಿ ತಿಳಿದನು. ಬ್ರಹ್ಮಾದಿ ಸ್ತಂಬ ಪರ್ಯಂತವೂ ಇರುವ ಸಮಸ್ತಭೂತಗಳು ಅನ್ನದಿಂದಲೇ ಹುಟ್ಟಿ, ಅನ್ನದಿಂದಲೇ ಜೀವಿಸುತ್ತಾ, ಅಂತ್ಯದಲ್ಲಿ ಅನ್ನವನ್ನೇ ಹೊಂದಿ ಎಲ್ಲದರಲ್ಲೂ ಪ್ರವೇಶಿಸುತ್ತವೆ. ಆದ್ದರಿಂದ ಅನ್ನವೆಂದರೆ

ಸ್ಥೂಲದೇಹಾಕಾರವಾದ ವಿರಾಜನೆನ್ನುವ ಭೂತ ಪಂಚಕವೇ ಬ್ರಹ್ಮವೆಂದು ತಿಳಿದು ಅದನ್ನು ಅರಿತುಕೊಳ್ಳಬೇಕು. ಆದರೆ ಹಿಂದೆ ಹೇಳಿದ, ಯತೋವಾಇವ್ಯನಿ ಎನ್ನುವ. ಬ್ರಹ್ಮಲಕ್ಷಣವೂ ಇದರಲ್ಲಿ ಪೂರ್ಣರೂಪದಲ್ಲಿ ಇಲ್ಲದಿದ್ದುರಿಂದ, ಮತ್ತೆ ಆ ಭೃಗುವು, ತಂದೆಯಾದ ವರುಣನ ಬಳಿಗೆ ಹೋಗಿ, ಓ ಪೂಜ್ಯನೇ ಆ ಬ್ರಹ್ಮ ಸ್ವರೂಪವನ್ನು ನನಗೆ ತಿಳಿಸು ಎಂದು ಕೇಳಿದ. ಆ ವರುಣನು ಭೃಗುವನ್ನು ಕುರಿತು ನಿಶ್ಚ ಜ್ಞಾನದಿಂದ ಬ್ರಹ್ಮವನ್ನು ತಿಳಿಯಬೇಕೆಂದನು. ಜ್ಞಾನವೇ ಸ್ವರೂಪವೆಂದು ಹೇಳಲು ಆ ಭೃಗು ಮಹರ್ಷಿ ನಿಶ್ಚಲ ಜ್ಞಾನದಿಂದ ಚಿಂತನೆ ಮಾಡಿದ.

## ಭೃಗುವಲ್ಲಿ – ತೃತೀಯಾಧ್ಯಾಯಃ – ತೃತೀಯೋಽನುವಾಕಃ

**ಮಂ.ಶ್ಲೋ.॥ ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಪ್ರಾಣೇನ ಜಾತಾನಿ ಜೀವನ್ತಿ । ಪ್ರಾಣಂ ಪ್ರಯನ್ತ್ಯಭಿಸಂವಿಶನ್ತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹೀ ಭಗವೋ ಬ್ರಹ್ಮೇತಿ ತಗ್ಂ ಹೋವಾಚ। ತಪಸಾ ಬ್ರಹ್ಮವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ। ಸ ತಪೋಽತಪ್ಯತ। ಸ ತಪಸ್ತಪ್ತ್ವಾ ॥**

ತಾ॥ ಪ್ರಾಣದಿಂದಲೇ ಸರ್ವ ಭೂತಗಳು ಹುಟ್ಟಿ ಆ ಹುಟ್ಟಿದ ಭೂತಗಳು ಪ್ರಾಣಗಳಿಂದ ಜೀವಿಸುತ್ತಾ ಅದಕ್ಕೆ ಮೊದಲು ಪ್ರಾಣವನ್ನು ಕುರಿತು ಹೋಗಿ, ಸರ್ವತ್ರ ಪ್ರಾಣಸ್ವರೂಪವಾಗಿ ಪ್ರವೇಶಿಸುತ್ತಿರುತ್ತವೆ. ಆದ್ದರಿಂದ ಪ್ರಾಣವನ್ನು ಬ್ರಹ್ಮ ಸ್ವರೂಪವಾಗಿ ತಿಳಿದುಕೊಳ್ಳಬೇಕು. ಪ್ರಾಣಶಬ್ದ ಲಕ್ಷ್ಯವಾದ ಹಿರಣ್ಯ ಗರ್ಭವನ್ನು ಬ್ರಹ್ಮಸ್ವರೂಪವಾಗಿ ತಿಳಿದುಕೊಂಡಾಗ (ಹೀಗೆ ಆ ಪ್ರಾಣವನ್ನು ತಿಳಿದುಕೊಂಡು) ಈ ಹಿಂದೆ ಹೇಳಿದ "ಯತೋವಾ ಇಮಾನಿ" ಎನ್ನುವ ಬ್ರಹ್ಮ ಲಕ್ಷಣವು ಇದರಲ್ಲಿ ಸಂಪೂರ್ಣವಾಗದಿರುವುದರಿಂದ, ಆ ಭೃಗುವು, ಓ ಪೂಜ್ಯನೇ! ಬ್ರಹ್ಮ ಸ್ವರೂಪವನ್ನು ನನಗೆ ತಿಳಿಸಿಕೊಡು' ಎಂದು ತಂದೆಯಾದ ವರುಣನ ಬಳಿಗೆ ಪುನಃ ತೆರಳಿ "ತಪಸ್ಸೇ ಬ್ರಹ್ಮ ಸ್ವರೂಪವು. ತಪಸ್ಸಿನಿಂದಲೇ ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳಬೇಕು'' ಎಂದು ಹೇಳಲು ಆ ಭೃಗುವು ಚಿಂತನೆ ಮಾಡಿದ. ನಿಶ್ಚಲ ಜ್ಞಾನದಿಂದ ಆಲೋಚಿಸಿ,

## ಭೃಗುವಲ್ಲಿ – ತೃತೀಯಾಧ್ಯಾಯಃ – ಚತುರ್ಥೋಽನುವಾಕಃ

**ಮಂ.ಶ್ಲೋ.॥ ಮನೋ ಬ್ರಹ್ಮೇತಿ ವ್ಯಜಾನಾತ್ । ಮನಸೋ ಹ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ। ಮನಸಾ ಜಾತಾನಿ ಜೀವನ್ತಿ । ಮನಃ ಪ್ರಯನ್ತ್ಯಭಿಸಂವಿಶನ್ತೀತಿ । ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ । ಅಧೀಹೀ ಭಗವೋ ಬ್ರಹ್ಮೇತಿ । ತಗ್ಂಹೋವಾಚ ತಪಸಾ ಬ್ರಹ್ಮವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ॥**

ತಾ॥ ಮನಸ್ಸಿನಿಂದಲೇ ಸಮಸ್ತ ಭೂತಗಳು ಹುಟ್ಟಿ, ಆ ಹುಟ್ಟಿದ ಭೂತಗಳು ಮನಸ್ಸಿನಿಂದಲೇ ಜೀವಿಸುತ್ತಾ ಕೊನೆಯಲ್ಲಿ ಮನಸ್ಸಿನಲ್ಲೇ ಪ್ರವೇಶಿಸಿ, ಎಲ್ಲವೂ ಮನೋರೂಪವೇ ಆಗುತ್ತಿದೆ. ಆದ್ದರಿಂದಲೇ ಮನಸ್ಸನ್ನು ಬ್ರಹ್ಮಸ್ವರೂಪವಾಗಿ ತಿಳಿಯಬೇಕು. ಹೀಗೆ ಆ ಮನಸ್ಸನ್ನು ತಿಳಿದುಕೊಂಡು ಹಿಂದೆ ಹೇಳಿದ "ಯತೋವಾ ಇಮಾನಿ" ಎನ್ನುವ ಬ್ರಹ್ಮ ಲಕ್ಷಣವು ಇದರಲ್ಲಿ ಪೂರ್ತಿಯಾಗಿ ಇಲ್ಲದಿದ್ದುರಿಂದ, ಆ ಭೃಗುವು "ಓ ಪೂಜ್ಯನೇ ಬ್ರಹ್ಮ ಸ್ವರೂಪವನ್ನು ನನಗೆ ಹೇಳು" ಎಂದು ಪುನಃ

ತಂದೆಯನ್ನು ಕೇಳಲು ಆ ವರುಣನು, "ಆ ತಪಸ್ಸೇ ಬ್ರಹ್ಮ ಸ್ವರೂಪ. ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಬೇಕು" ಎಂದು ಭೃಗುವಿಗೆ ಹೇಳಿದ. ಆಗ ಭೃಗುವು ಚಿಂತನೆ ನಡೆಸಿದ. ಹೀಗೆ ನಿಶ್ಚಲ ಜ್ಞಾನದಿಂದ ಚಿಂತನೆ ಮಾಡಿ....

## ಭೃಗುವಲ್ಲಿ – ತೃತೀಯಾಧ್ಯಾಯಃ – ಪಂಚಮೋಽನುವಾಕಃ

**ಮಂ.ಶ್ಲೋ.॥ ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ವಿಜ್ಞಾನೇನ ಜಾತಾನಿ ಜೀವನ್ತಿ । ವಿಜ್ಞಾನಂ ಪ್ರಯನ್ತ್ಯಭಿಸಂವಿಶನ್ತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್‍ಂಹೋವಾಚ। ತಪಸಾ ಬ್ರಹ್ಮ ವಿಜಿಜ್ಞಾಸಸ್ವ ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ॥**

ತಾ॥ ವಿಜ್ಞಾನದಿಂದಲೇ ಸಮಸ್ತ ಭೂತಗಳು ಹುಟ್ಟಿ ಆ ಹುಟ್ಟಿದ ಭೂತಗಳು ವಿಜ್ಞಾನದಿಂದಲೇ ಬದುಕುತ್ತಾ ಅಂತ್ಯದಲ್ಲಿ ವಿಜ್ಞಾನವನ್ನು ಕುರಿತು ಹುಡುಕುತ್ತಾ ಹೋಗಿ ಎಲ್ಲೆಡೆಯೂ ವಿಜ್ಞಾನ ಸ್ವರೂಪವಾಗಿ ಪ್ರವೇಶಿಸುತ್ತವೆಯಾದ್ದರಿಂದ, ಹಿಂದೆ ಹೇಳಿದ "ಯತೋವಾ ಇಮಾನಿ" ಎನ್ನುವ ಬ್ರಹ್ಮ ಲಕ್ಷಣವು ಇದರಲ್ಲಿ ಪೂರ್ತಿಯಾಗಿಲ್ಲವಾದುದರಿಂದ ಭೃಗುವು ತಂದೆಯನ್ನು ಕುರಿತು "ಪೂಜ್ಯನೇ, ಬ್ರಹ್ಮಸ್ವರೂಪವನ್ನು ನನಗೆ ಹೇಳು" ಎಂದು ಮತ್ತೆ ಪ್ರಾರ್ಥಿಸಲು, ವರುಣನು "ತಪಸ್ಸೇ ಬ್ರಹ್ಮ ಸ್ವರೂಪ. ತಪಸ್ಸಿನಿಂದಲೇ ಬ್ರಹ್ಮ ಸ್ವರೂಪವನ್ನರಿಯಬೇಕು." ಎಂದು ಭೃಗುವಿಗೆ ಹೇಳಿದ; ಆಗ ಭೃಗುವು ನಿಶ್ಚಲ ಮನಸ್ಸಿನಿಂದ ವಾಕ್ಯಾರ್ಥವನ್ನು ತಿಳಿದುಕೊಂಡು ತಾತ್ಪರ್ಯವನ್ನು ಗ್ರಹಿಸಿ ವಿಜ್ಞಾನ ಲಕ್ಷ್ಯವಾದ ಬ್ರಹ್ಮಸ್ವರೂಪವನ್ನು ಚಿಂತನೆ ಮಾಡಿದ. ಹೀಗೆ ನಿಶ್ಚಲಜ್ಞಾನದಿಂದ ಚಿಂತನೆ ನಡೆಸಿ...

## ಭೃಗುವಲ್ಲಿ – ತೃತೀಯಾಧ್ಯಾಯಃ – ಷಷ್ಠೋಽನುವಾಕಃ

**ಮಂ.ಶ್ಲೋ.॥ ಆನನ್ದೋ ಬ್ರಹ್ಮೇತಿ ವ್ಯಜಾನಾತ್ । ಆನನ್ದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಆನನ್ದೇನ ಜಾತಾನಿ ಜೀವನ್ತಿ । ಆನನ್ದಂ ಪ್ರಯನ್ತ್ಯಭಿಸಂವಿಶನ್ತೀತಿ । ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್ ಪ್ರತಿಷ್ಠಿತಾ । ಸ ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ । ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥**

ತಾ॥ ಆನಂದದಿಂದಲೇ ಸಮಸ್ತ ಭೂತಗಳು ಹುಟ್ಟಿ ಆ ಹುಟ್ಟಿದ ಭೂತಗಳು ಆನಂದದಿಂದಲೇ ಜೀವಿಸುತ್ತಾ ಅದಕ್ಕೆ ಮುಂಚೆ ಆನಂದವನ್ನು ಕುರಿತು ಹುಡುಕಲಾಗಿ, ತಾವೇ ಆನಂದ ಸ್ವರೂಪವಾಗಿ ಪ್ರವೇಶಿಸಿ ಆನಂದವೇ ಆಗಿಬಿಡುತ್ತವೆ. ಆದ್ದರಿಂದ ಆನಂದವೇ ಪರಬ್ರಹ್ಮಸ್ವರೂಪವೆಂದು ತಿಳಿದು ಕೊಳ್ಳಬೇಕು. (ಅರಿಯಬೇಕು) ಹೀಗೆ ಭೃಗುವು ತಪಸ್ಸಿನಿಂದ ಪರಿಶುದ್ಧಾಂತರಂಗನಾಗಿ ಪ್ರಾಣಾದಿಗಳು ಸಂಪೂರ್ಣವಾಗಿ 'ಯತೋ ತಮ ಇಮಾನಿ'ಯೆನ್ನುವ ಶ್ರುತಿಯಿಂದ ಹೇಳಲ್ಪಟ್ಟಿರುವ ಬ್ರಹ್ಮಲಕ್ಷಣವನ್ನು ಕಾಣದವನಾಗಿ ಮೆಲ್ಲಮೆಲ್ಲನೆ ಅಂತರತಮವನ್ನು ಪ್ರವೇಶಿಸಿ. ಅಂತರವೆನ್ನುವ ಆನಂದ ಸ್ವರೂಪವಾದ ಪರಬ್ರಹ್ಮನನ್ನು ತಪಸ್ಸಿನ ಸಾಧನವಾಗಿಯೇ ತಿಳಿಯಬೇಕು. ಹೀಗೆ ವರುಣನಿಂದ ಹೇಳಲ್ಪಟ್ಟ ಈ

ಪರಬ್ರಹ್ಮವಿದ್ಯೆಯನ್ನು ಶ್ರೇಷ್ಠವಾದ ಹೃದಯಾಕಾಶದಲ್ಲಿ ಹೇಳಲಾಗಿದೆ. ಹೃದಯ ಗುಹೆಯಲ್ಲಿನ ಪರಮಾಕಾಶದಲ್ಲಿ ಇಡಲಾಗಿದೆ. ಈ ಪರಬ್ರಹ್ಮವಿದ್ಯೆಯನ್ನು ಈ ಹಿಂದೆ ಹೇಳಿದ ತಪಸ್ಸಿನಿಂದ ತಿಳಿದುಕೊಂಡವನು ಬ್ರಹ್ಮದಲ್ಲಿನ ಸ್ಥಿತಿಯನ್ನು ಹೊಂದಿ ಪರಬ್ರಹ್ಮನಾಗುತ್ತಿದ್ದಾನೆ. ಇಂತಹ ಬ್ರಹ್ಮವೇತ್ತನಿಗೆ ದೃಷ್ಟ ಫಲವೇನೆಂದರೆ, ಆ ಬ್ರಹ್ಮವೇತ್ತನು, ಅನ್ನವನ್ನುಳ್ಳವನಾಗಿಯೂ, ತೇಜೋವಂತ-ನಾಗಿಯೂ, ಪುತ್ರಾದಿ ಸಂತಾನದಿಂದಲೂ ಗವಾಶ್ವಾದಿಪಶು ಸಂಪತ್ತಿನಿಂದಲೂ ಶಮದಮಾದಿಗಳಿಂದ ಹುಟ್ಟಿದ ತೇಜಸ್ಸಿನಿಂದಲೂ ಲೋಕದಲ್ಲಿ ಅತಿ ಶ್ರೇಷ್ಠನಾಗುತ್ತಾನೆ.

## ಭೃಗುವಲ್ಲಿ - ತೃತೀಯಾಧ್ಯಾಯಃ - ಸಪ್ತಮೋಽನುವಾಕಃ

**ಮಂ.ಶ್ಲೋ.॥ ಅನ್ನಂ ನ ನಿನ್ದ್ಯಾತ್ । ತದ್ವ್ರತಮ್ । ಪ್ರಾಣೋ ವಾ ಅನ್ನಮ್ । ಶರೀರಮನ್ನಾದಮ್। ಪ್ರಾಣೇ ಶರೀರಂ ಪ್ರತಿಷ್ಠಿತಮ್ । ಶರೀರೇ ಪ್ರಾಣಃ ಪ್ರತಿಷ್ಠಿತಃ। ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ಭವತಿ । ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ॥**

ತಾ॥ ಅನ್ನವನ್ನು ನಿಂದಿಸಬಾರದು. ಅದು ಬ್ರಹ್ಮವೇತ್ತನಿಗೆ ಮುಖ್ಯವ್ರತವಾಗಿ ಉಪದೇಶ ಮಾಡಲಾಗುತ್ತದೆ. ಅನ್ನಪ್ರಾಣಗಳು ಎರಡೂ ಒಂದರೊಳಗೊಂದು ಇರುವುದರಿಂದ, ಅನ್ನ ಸ್ವರೂಪವಾಗಿ ಒಂದಕ್ಕೊಂದು ಆಧಾರವಾಗುವುದರಿಂದ ಅನ್ನಾದವೆನ್ನುವ ಪ್ರಾಣ ಸ್ವರೂಪವಾಗಿ ಇರುತ್ತವೆ. ಹೀಗೆ ಶರೀರ ಪ್ರಾಣಗಳೆರಡನ್ನು ಆಧಾರವಾಗಿರುವುದರಿಂದ ಅನ್ನಾದಿಗಳಾಗಿ ತಿಳಿದು-ಕೊಂಡವನು. ಅನ್ನ ಅನ್ನಾದಿ ಸ್ವರೂಪನಾಗಿ ಪುತ್ರಾದಿಸಂತಾನ ಸಮೃದ್ಧಿಯಿಂದಲೂ, ಸಂಪತ್ತಿ-ನಿಂದಲೂ, ಬ್ರಹ್ಮತೇಜಸ್ಸಿನಿಂದಲೂ ಲೋಕದಲ್ಲಿ ಖ್ಯಾತಿಪಡೆದುಕೊಳ್ಳುವುದರಿಂದಲೂ ಅತಿ ಹೆಚ್ಚಿನ ಶ್ರೇಷ್ಠನಾಗುತ್ತಾನೆ. ಅನ್ನಾದಮ್ - ಅನ್ನವನ್ನು ತಿನ್ನುವಂತಹುದು. ಪ್ರಾಣವು ಅನ್ನವಾದಾಗ ಶರೀರವು ಅನ್ನಾದವಾಗುತ್ತದೆ. ಶರೀರವು ಅನ್ನವಾದಾಗ ಪ್ರಾಣವು ಅನ್ನಾದವಾಗುತ್ತದೆ.

## ಭೃಗುವಲ್ಲಿ - ತೃತೀಯಾಧ್ಯಾಯಃ - ಅಷ್ಟಮೋಽನುವಾಕಃ

**ಮಂ.ಶ್ಲೋ.॥ ಅನ್ನಂ ನ ಪರಿಚಕ್ಷಿತ । ತದ್ವ್ರತಮ್। ಆಪೋವಾ ಅನ್ನಮ್ । ಜ್ಯೋತಿರನ್ನಾದಮ್। ಅಪ್ಸುಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್। ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದಪ್ರತಿತಿಷ್ಠತಿ ಅನ್ನವಾನನ್ನಾದೋ ಭವತಿ। ಮಹಾನ್ಭವತಿ, ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ ಮಹಾನ್ಕೀರ್ತ್ಯಾ ॥**

ತಾ॥ ಅನ್ನವನ್ನು ಪರಿಹಾಸಿಸಬಾರದು. ಇದು ಸಹ ಬ್ರಹ್ಮವೇತ್ತನಿಗೆ ವ್ರತವಾಗಿ ಉಪದೇಶಿಸ-ಲಾಗುತ್ತದೆ. ಆಪ್‌ಜ್ಯೋತಿಗಳೆರಡು, ಒಂದರಲ್ಲೊಂದು ಇರುತ್ತಾ ಅನ್ನಸ್ವರೂಪವಾಗಿಯೂ, ಒಂದಕ್ಕೊಂದು ಆಧಾರವಾಗಿರುವುದರಿಂದ ಅನ್ನಾದ ಸ್ವರೂಪವಾಗಿಯೂ ಇರುತ್ತವೆ. ಹೀಗೆ ಆಪ್ ಜ್ಯೋತಿಗಳೆರಡನ್ನೂ ಅನ್ನ ಅನ್ನಾದಗಳನ್ನಾಗಿ ತಿಳಿದುಕೊಂಡವನು. ಅನ್ನ ಸ್ವರೂಪವಾಗಿಯೂ, ಅನ್ನಾದ ಸ್ವರೂಪನಾಗಿಯೂ, ಪುತ್ರಾದಿ ಸಂತಾನ ಸಮೃದ್ಧಿಯಿಂದಲೂ, ಗವಾಶ್ವಾದಿ ಸಂಪತ್ತಿನಿಂದಲೂ, ಬ್ರಹ್ಮತೇಜಸ್ಸಿನಿಂದಲೂ, ಲೋಕದಲ್ಲಿ ಸುವಿಖ್ಯಾತನಾಗಿ ಹೆಚ್ಚಿನ ಶ್ರೇಷ್ಠನಾಗುವನು. (ಆಪಃ=ಜಲ.)

## ಭೃಗುವಲ್ಲಿ – ತೃತೀಯಾಧ್ಯಾಯಃ – ನವಮೋಽನುವಾಕಃ

**ಮಂ.ಶ್ಲೋ.॥ ಅನ್ನಂ ಬಹುಕುರ್ವೀತ । ತದ್ವ್ರತಮ್ । ಪೃಥಿವೀವಾಽನ್ನಮ್ । ಆಕಾಶೋಽನ್ನಾದಃ। ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ। ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ। ಅನ್ನವಾನನ್ನಾದೋ ಭವತಿ । ಮಹಾನ್‌ಭವತಿ। ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥**

ತಾ॥ ಅನ್ನವನ್ನು ಬಹುಮಾನಿಸಬೇಕು. ಇದನ್ನೂ ಸಹ ಬ್ರಹ್ಮವೇತ್ತನಿಗೆ ವ್ರತವಾಗಿ ಉಪದೇಶಿಸಲಾಗಿದೆ. ಪೃಥಿವ್ಯಾಕಾಶಗಳೆರಡೂ ಒಂದರಲ್ಲೊಂದು ಇರುವುದರಿಂದ ಅನ್ನಸ್ವರೂಪವಾಗಿ ಒಂದಕ್ಕೊಂದು ಆಧಾರವಾಗುವುದರಿಂದ ಅನ್ನಾನ್ನಾದ ಸ್ವರೂಪವಾಗಿಯೂ ಇವೆ. ಹೀಗೆ ಪೃಥಿವ್ಯಾಕಾಶಗಳೆರಡನ್ನೂ ಅನ್ನನ್ನಾದಗಳಾಗಿ ತಿಳಿದುಕೊಂಡವನು, ಆತ್ಮಸ್ವರೂಪನಾಗಿ ಪುತ್ರಾದಿ ಸಂತಾನಸಮೃದ್ಧಿಯನ್ನು ಗವಾಶ್ವಾದಿ ಪಶುಸಂಪತ್ತಿನಿಂದಲೂ, ಬ್ರಹ್ಮ ತೇಜಸ್ಸಿನಿಂದಲೂ ಲೋಕದಲ್ಲಿ ಪಡೆದ ಖ್ಯಾತಿಯಿಂದಲೂ ಅತ್ಯಂತ ಶ್ರೇಷ್ಠನಾಗುತ್ತಿದ್ದಾನೆ.

## ಭೃಗುವಲ್ಲಿ – ತೃತೀಯಾಧ್ಯಾಯಃ – ದಶಮೋಽನುವಾಕಃ

**ಮಂ.ಶ್ಲೋ.॥ ನ ಕಂಚನ ವಸತೌ ಪ್ರತ್ಯಾಚಕ್ಷೀತ। ತದ್ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್। ಆರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ ಏತದ್ವೈ ಮುಖತೋಽನ್ನಂರಾದ್ಧಮ್ । ಮುಖತೋಽಸ್ಮಾ ಅನ್ನಗ್‌ಂರಾಧ್ಯತೇ । ಏತದ್ವೈ ಮಧ್ಯತೋಽನ್ನಗ್‌ಂ ರಾದ್ಧಮ್। ಮಧ್ಯತೋಽಸ್ಮ ಅನ್ನಗ್‌ಂ ರಾಧ್ಯತೇ। ಏತದ್ವಾ ಅಂತತೋಽನ್ನಗ್‌ಂ ರಾದ್ಧಮ್। ಅಂತತೋಽಸ್ಮಾ ಅನ್ನಗಂ ರಾಧ್ಯತೇ ॥ (1)**

ತಾ॥ ವಾಸಕ್ಕಾಗಿ ತನ್ನ ಗೃಹಕ್ಕೆ ಬಂದವರನ್ನು ನಿರಾಕರಿಸದೆ ಸ್ಥಳ ನೀಡಬೇಕು. ಇದು ಬ್ರಹ್ಮವೇತ್ತನಿಗೆ ಮುಖ್ಯವಾದ ವ್ರತ. ಅನ್ನವಂತರಾದ ವಿದ್ವಾಂಸರು ಅನ್ನಾರ್ಥಿಯಾಗಿ ತಮ್ಮ ಮನೆಗೆ ಬಂದವನಿಗೆ ಅನ್ನವು ಸಿದ್ಧವಾಗಿದೆಯೆಂದು ಹೇಳಬೇಕು. ವಿದ್ವಾಂಸನಾದ ಜನರು ಯಾವ ಪ್ರಕಾರವಾಗಿಯಾದರೂ ವಿಶೇಷವಾಗಿ ಅನ್ನವನ್ನು ಸಂಪಾದಿಸಬೇಕು. ಹೀಗೆ ಸಂಪಾದಿಸಿ ನೀಡುವವನಿಗೆ ಫಲವೇನೆಂದರೆ, ಅನ್ನಾರ್ಥಿಯಾದ ಯಾಚಕನಿಗಾಗಿ ಪೂಜಾಪೂರ್ವಕವಾಗಿ ತಾನು ಸಮರ್ಪಿಸುವ ಈ ಅನ್ನವು ಆ ಪ್ರಕಾರವಾಗಿಯೇ ಮತ್ತೆ ಪ್ರಥಮ ವಯಸ್ಸಿನಲ್ಲಿಯೂ, ಮಧ್ಯಮ ವಯಸ್ಸಿನಲ್ಲಿಯೂ, ಮಧ್ಯಮೋಪಚಾರದೊಂದಿಗೆ ತಾನು ನೀಡುವಂತಹ ಈ ಅನ್ನವು ಮತ್ತೆ ಮಧ್ಯ ವಯಸ್ಸಿನಲ್ಲಿಯೂ ಅಂತ್ಯ ವಯಸ್ಸಿನಲ್ಲಿಯೂ, ನೀಚೋಪಚಾರದಿಂದ ತಾನು ನೀಡುವ ಈ ಅನ್ನವು ಆ ಪ್ರಕಾರವಾಗಿಯೇ ಮತ್ತೆ ಅಂತ್ಯ ವಯಸ್ಸಿನಲ್ಲಿ ತನ್ನನ್ನು ಹೊಂದುತ್ತದೆ.

**ಮಂ.ಶ್ಲೋ.॥ ಯ ಏವಂ ವೇದ। ಕ್ಷೇಮ ಇತಿ ವಾಚಿ। ಯೋಗಕ್ಷೇಮ ಇತಿ ಪ್ರಾಣಾಪಾನಯೋಃ। ಕರ್ಮೇತಿ ಹಸ್ತಯೋಃ। ಗತಿರಿತಿ ಪಾದಯೋಃ। ವಿಮುಕ್ತಿರಿತಿ ಪಾಯೌ। ಇತಿ ಮಾನುಷೀಃ ಸಮಾಜ್ಞಾಃ। ಅಥ ದೈವೀಃ। ತೃಪ್ತಿರಿತಿ ವೃಷ್ಟೌ। ಬಲಮಿತಿ ವಿದ್ಯುತಿ॥ (2) ಯಶ ಇತಿ**

ಪಶುಷು। ಜ್ಯೋತಿರಿತಿ ನಕ್ಷತ್ರೇಷು। ಪ್ರಜಾತಿರಮೃತಮಾನಂದ ಇತ್ಯುಪಸ್ಥೆ। ಸರ್ವಮಿತ್ಯಾಕಾಶೇ। ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ಭವತಿ। ತನ್ಮಹ ಇತ್ಯುಪಾಸೀತ। ಮಹಾನ್ಭವತಿ। ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ । (3)

ತಾ॥ (ಈಗ ಬ್ರಹ್ಮೋಪಾಸನಾ ಪ್ರಕಾರದಲ್ಲಿ ಹೇಳಲಾಗುತ್ತಿದೆ) ಹೇಗೆಂದರೆ ಬ್ರಹ್ಮವು ವಾಕ್ಕಿನಲ್ಲಿ ಕ್ಷೇಮರೂಪವಾಗಿರುವುದ್ದಾಗಿಯೂ ಪ್ರಾಣಾಪಾನಗಳಲ್ಲಿ ಯೋಗಕ್ಷೇಮ ರೂಪವಾಗಿರುವಂತಹುದಾಗಿಯೂ, ಹಸ್ತಗಳಲ್ಲಿ ಕರ್ಮರೂಪವಾಗಿರುವಂತಹುದಾಗಿಯು, ಪಾದಗಳಲ್ಲಿ ಗಮನರೂಪವಾಗಿರುವಂತಹುದಾಗಿಯೂ, ಗುದದಲ್ಲಿ ಮಲೋತ್ಸರ್ಜನ ರೂಪವಾಗಿರುವಂತಹುದಾಗಿಯೂ ಉಪಾಸಿಸುವಂತಹುದ್ದಾಗಿದೆ. ಇದೇ ಮನುಷ್ಯರಲ್ಲಿನ ಜ್ಞಾನಗಳು. ದೇವರ ಬಗ್ಗೆ ದೈವ ಜ್ಞಾನ ಇಲ್ಲವಾದರೆ ಬ್ರಹ್ಮವು ಮಳೆಯಲ್ಲಿ ಅನ್ನಾದಿ ಮೂಲಕ ತೃಪ್ತಿ ರೂಪದ್ದಾಗಿಯೂ, ಮಿಂಚಿನಲ್ಲಿ ಬಲರೂಪವಾಗಿಯೂ, ಪಶುಗಳಲ್ಲಿ ಯಶೋರೂಪವಾಗಿಯೂ, ನಕ್ಷತ್ರಗಳ ರೂಪದಲ್ಲಿ ತೇಜೋರೂಪವಾಗಿಯೂ, ಉಪಸ್ಥದಲ್ಲಿ ಪುತ್ರೋತ್ಪತ್ತಿ ರೂಪವಾದ ಆನಂದರೂಪವಾಗಿಯೂ ಉಪಾಸಿಸುವಂತಹುದು. ಸಮಸ್ತಕ್ಕೂ ಪ್ರತಿಷ್ಠಾಕಾರಣವಾದ ಆಕಾಶವನ್ನು ಬ್ರಹ್ಮವೆಂದು, ಆ ಬ್ರಹ್ಮಸ್ವರೂಪವಾದ ಆಕಾಶವು ಸರ್ವಕ್ಕೂ ಪ್ರತಿಷ್ಠಾರೂಪವಾಗಿದೆಯೆಂದು ಉಪಾಸಿಸಬೇಕಾಗಿದೆ. ಹೀಗೆ ಪ್ರತಿಷ್ಠಾ ರೂಪವಾದ ಉಪಾಸನೆಯಿಂದ ಪ್ರತಿಷ್ಠೆಯುಳ್ಳವನಾಗುವನು. ಸರ್ವಪ್ರತಿಷ್ಠಾರೂಪವಾದ ಆ ಆಕಾಶವನ್ನು ಮಹತ್ವರೂಪವೆಂದು ಉಪಾಸಿಸಬೇಕು. ಹೀಗೆ ಮಹತ್‌ಸ್ವರೂಪೋಪಾಸನೆಯಿಂದ ಮಹತ್ಸ್ವರೂಪವನ್ನು ಹೊಂದಿದವನಾಗುತ್ತಿದ್ದಾನೆ. ಮತ್ತು ಅದನ್ನು ಮನನರೂಪವಾಗಿರುವಂತೆ ಉಪಾಸಿಸಬೇಕು. ಹೀಗೆ ಮನನ ಉಪಾಸನೆಯಿಂದ ಮನನ ಸಾಮರ್ಥ್ಯವನ್ನು ಹೊಂದಿದವನಾಗುತ್ತಾನೆ.

ಮಂ.ಶ್ಲೋ.॥ ತನ್ನಮ ಇತ್ಯುಪಾಸೀತ। ನಮ್ಯಂತೇಽಸ್ಮೈ ಕಾಮಾಃ। ತದ್ಬ್ರಹ್ಮೇತ್ಯುಪಾಸಿತ। ಬ್ರಹ್ಮವಾನ್ಭವತಿ। ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ। ಪರ್ಯೇಣಂ ಮ್ರಿಯನ್ತೇ ದ್ವಿಷಂತಸ್ಸಪತ್ನಾಃ। ಪರಿಯೇಽಪ್ರಿಯಾ ಭ್ರಾತೃವ್ಯಾಃ। ಸ ಯಶ್ಚಾಯಂ ಪುರುಷೇ। ಯಶ್ಚಾಸಾವಾದಿತ್ಯೇ ಸ ಏಕಃ (4)

ತಾ॥ ಬ್ರಹ್ಮ ಸ್ವರೂಪವಾದ ಆಕಾಶಕ್ಕೆ ನಮಸ್ಕಾರವೆಂದು ಹೇಳಿ ಉಪಾಸಿಸಬೇಕು. ಈ ರೀತಿಯಾಗಿ ಧ್ಯಾನಿಸುವವನಿಗೆ ಭೋಗಗಳು ನಮ್ರವಾಗುತ್ತವೆ. ಅದನ್ನು ಪರಬ್ರಹ್ಮವೆಂದು ಉಪಾಸಿಸಬೇಕು. ಹೀಗೆ ಉಪಾಸಿಸುವುದರಿಂದ ಪರಬ್ರಹ್ಮಸ್ವರೂಪವನ್ನು ಹೊಂದಿದವನಾಗುತ್ತಿದ್ದಾನೆ. ಅದು, ಬ್ರಹ್ಮನ ಸಂಹಾರ ಸಾಧನವೆಂದು ತಿಳಿದು ಉಪಾಸಿಸಬೇಕು. (ವಾಯುಸ್ವರೂಪವಾದ ಆ ಆಕಾಶವನ್ನು ಬ್ರಹ್ಮನ ಸಂಹಾರ-ಸಾಧನವೆಂದು ಉಪಾಸಿಸಬೇಕು) ಹೀಗೆ ತಿಳಿದುಕೊಂಡು ಉಪಾಸಿಸುವವನನ್ನು ಕುರಿತು ದ್ವೇಷಿ-ಸುವಂತಹ ಶತ್ರುಗಳು ಮರಣವನ್ನು ಹೊಂದುತ್ತಿರುತ್ತಾರೆ. ಇಷ್ಟರಲ್ಲದವರು ಆದ ಶತ್ರುಗಳು ಮರಣವನ್ನು ಹೊಂದುತ್ತಿರುತ್ತಾರೆ. "ಪ್ರಾಣೋವಾ ಅನ್ನ"ವೆಂದು ಮೊದಲ್ಗೊಂಡು ಆಕಾಶಾಂತವಾದ ಕಾರ್ಯಗಳಿಗೆ ಅನ್ನನಾದತ್ವವನ್ನು ಹೇಳುವುದರಿಂದಲೇ- ಭೋಜ್ಯಭೋಕ್ತೃತವಾದ ಸಂಸಾರವು ಕಾರ್ಯ ವಿಷಯವಾದುದೇ ಅದು. ಆತ್ಮದಲ್ಲಿ ಇಲ್ಲ. ಆತ್ಮವು ಏಕಸ್ವರೂಪವಾದುದು. ಅದು ಹೇಗೆಂದರೆ ಕರಚರಣ್ಯಾದಿ ಅವಯವಗಳಿಂದ ಕೂಡಿದ ಪುರುಷಸ್ವರೂಪವಾದ ದೇಹದಲ್ಲಿನ ಆತ್ಮವೆಂದು ಪ್ರಕಾಶ ಸ್ವರೂಪವಾದ ಸೂರ್ಯಮಂಡಲದಲ್ಲಿನ ಆತ್ಮವೆನ್ನುವ ಎರಡೂ ಅದ್ವಿತೀಯವಾದ ಒಂದೇ ಆದ ಆ ಪರಮಾತ್ಮ ಸ್ವರೂಪವೇ ಆಗಿದೆ.

**ಮಂ.ಶ್ಲೋ.॥ ಸ ಯ ಏವಂವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ ಏತಮನ್ನಮಯಮಾತ್ಮಾನಮುಪಸಙ್ಕ್ರಮ್ಯ। ಏತಂ ಪ್ರಾಣಮಯಮಾತ್ಮಾನಮುಪಸಙ್ಕ್ರಮ್ಯ। ಏತಂ ಮನೋಮಯಮಾತ್ಮಾನಮುಪ -ಸಙ್ಕ್ರಮ್ಯ। ಏತಂ ವಿಜ್ಞಾನಮಯಮಾತ್ಮಾನಮುಪಸಙ್ಕ್ರಮ್ಯ। ಏತಮಾನಂದಮಯಾತ್ಮಾನ -ಮುಪಸಙ್ಕ್ರಮ್ಯ ಇಮಾನ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಞ್ಚರನ್ । ಏತತ್ಸಾಮ -ಗಾಯನ್ನಾಸ್ತೇ। ಹಾ೩ ವುಹಾ೩ ವುಹಾ೩ ವು ॥ (೫)**

ತಾ॥ ಈ ಹಿಂದೆ ಹೇಳಿದ ಪ್ರಕಾರ ತಿಳಿದುಕೊಂಡು ಬ್ರಹ್ಮವೇತ್ತನಾದವನು ಈ ಲೋಕದಿಂದ ಮರಣವನ್ನು ಹೊಂದಿ, ಈ ಅನ್ನಮಯಾತ್ಮವನ್ನು, ಈ ಪ್ರಾಣಮಯಾತ್ಮವನ್ನು, ಈ ಮನೋ-ಮಯಾತ್ಮವನ್ನು, ಈ ವಿಜ್ಞಾನಮಯಾತ್ಮವನ್ನು, ಆನಂದಮಯಾತ್ಮವನ್ನು ಕ್ರಮವಾಗಿ ಹೊಂದಿ, ಇಷ್ಟದಿಂದಿರುವ ಅನ್ನರೂಪವನ್ನು ಹೊಂದಿದವನಾಗಿ ಈ ಭೂರಾದಿಲೋಕಗಳಲ್ಲಿ ತಿರುಗುತ್ತಾ ಆಶ್ಚರ್ಯವಾಗುವಂತೆ ಸಾಮಗಾನವನ್ನು ಮಾಡುತ್ತಾ ಆನಂದರೂಪನಾಗಿರುತ್ತಾನೆ.

**ಮಂ.ಶ್ಲೋ.॥ ಅಹಮನ್ನಮಹಮನ್ನಮಹಮನ್ನಮ್। ಅಹಮನ್ನಾದೋಽಹಮನ್ನಾದೋಽಹಮನ್ನಾದಃ। ಅಹಗ್ಂಶ್ಲೋಕಕೃದಹಗ್ಂಶ್ಲೋಕಕೃದಹಗ್ಂಶ್ಲೋಕಕೃತ್ । ಅಹಮಸ್ಮಿಪ್ರಥಮಜಾ ಋತಾ೩ -ಸ್ಯ। ಪೂರ್ವಂ ದೇವೇಭ್ಯೋ ಅಮೃತಸ್ಯನಾ೩ಭಾ೩ಯಿಃ ಯೋಮಾ ದದಾತಿ ಸ ಇದೇವ ಮಾ೩ಽಽವಾಃ। ಅಹಮನ್ನಮನ್ನಮದನ್ತಮಾದ್ಮಿ। ಅಹಂ ವಿಶ್ವಂ ಭುವನಮಭ್ಯಭವಾ೩ಮ್। ಸುವರ್ನಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥ (6)**

**(ತೈತ್ತಿರೀಯೋಪನಿಷತ್ಸಮಾಪ್ತಾ)**

ತಾ॥ ಅನ್ನವು ಅನ್ನಾದಿಯು, ಅನ್ನಾನಾದಿಗಳ ಸಂಘಾತಗಳು ನಾನೇ ಆಗಿದ್ದೇನೆ. ಅನ್ನರೂಪನಾದ ನಾನು ಮೂರ್ತಾಮೂರ್ತ ಸ್ವರೂಪವಾದ ಜಗತ್ತಿಗೆ ಪ್ರಥಮನಾದ ಹಿರಣ್ಯಗರ್ಭನು, ವ್ಯಷ್ಟಿರೂಪವಾದ ಸಮಸ್ತ ದೇವತೆಗಳಿಗಿಂತ ಮೊದಲನೆಯವನಾದ ವಿರಾಟ್ ಸ್ವರೂಪವಾಗಿದ್ದೇನೆ. ಇಂತಹ (ಅನ್ನವನ್ನು) ನನ್ನನ್ನು ಯಾರ ಅನ್ನಾರ್ಥಿಗಳಿಗೆ ನೀಡುತ್ತಿದ್ದಾನೋ, ಅವನೇ ನನ್ನನ್ನು ಈ ಪ್ರಕಾರ ನಶಿಸದಂತೆ ರಕ್ಷಿಸುತ್ತಿದ್ದಾನೆ. ಯಾರು ನನ್ನನ್ನು ಅನ್ನಾರ್ಥಿಗಳಿಗೆ ಕೊಡದೆ ತಾನು ತಿನ್ನುವನೋ (ಭಕ್ಷಿಸುವನೋ) ಅವನನ್ನು ನಾನು ಭಕ್ಷಿಸುತ್ತೇನೆ. ಬ್ರಹ್ಮವಿದ್ಯಾಕಾರ್ಯವಾದ ಸರ್ವಭಾವದಲ್ಲಿನ ಸ್ತುತಿಗಾಗಿ ಹೀಗೆ ಹೇಳಿ, ಈ ಹೇಳಿದ್ದೆಲ್ಲವೂ ಕಾರ್ಯಭೂತವಾದುದೇ, ಹೊರತು ಪರಮಾರ್ಥ ವಸ್ತುವಲ್ಲ. ಈಶ್ವರ ರೂಪದಲ್ಲಿ ಕಾರ್ಯಭೂತವಾದ ಸಮಸ್ತ ಪ್ರಪಂಚವನ್ನು ತಿರಸ್ಕರಿಸಿದವನಾಗಿ ಉಕ್ತನಾಗುತ್ತಿದ್ದಾನೆ. ಹೀಗೆ ಸಕೃದ್ವಿಭಾತವಾದ ನನ್ನ ತೇಜಸ್ಸು ಸೂರ್ಯನಂತೆ ಪ್ರಕಾಶಿಸುತ್ತಿದೆ. ಹೀಗೆ ತಿಳಿದುಕೊಂಡವನಿಗೆ ಈ ಹಿಂದೆ ಹೇಳಿದ ಫಲವು ಪ್ರಾಪ್ತಿಯಾಗುತ್ತದೆ. ಈ ಪ್ರಕಾರವಾಗಿ ಪರಮಾತ್ಮ ಜ್ಞಾನಭೂತವಾದ ಉಪನಿಷತ್ ಸಮಾಪ್ತಿ (ಅನ್ನದಾನವು ಶ್ರೇಷ್ಠವೆಂದು ತಿಳಿಯಬೇಕು.) (ಈ ಸಂಸ್ಕೃತ ಪದಗಳು ದಶಮಾನುವಾಕದಲ್ಲಿ ಖಂಡಾಂತಗಳನ್ನು ಸೂಚಿಸುತ್ತಿವೆ.)

ಮೂಲ: ರಾಧ್ಯತೇ, ವಿದ್ಯುತಿ, ಮಾನವಾನ್ ಭವ, ತ್ಯೇಕೋ, ಹಾತಿವು, ಯ ಏವಂ ವೇದೈಕಂಚ॥

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**



# ಐತರೇಯೋಪನಿಷತ್ - ೮

(ಋಗ್ವೇದಾಂತರ್ಗತ)

ಶಾಂತಿ ಮಂತ್ರ॥ಓಂ ವಾಙ್ಮೇಮನಸಿ ಪ್ರತಿಷ್ಠಿತಾ - ಮನೋಃ ಮೇಃ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಅಣೀಸ್ಥಃ - ಶ್ರುತಂ ಮೇಃ ಮಾ ಪ್ರಹಾಸಿಃ ಅನೇನಾಧಿತೇಃನ ಅಹೋಃರಾತ್ರಾನ್ ಸಂದಧಾಮಿ - ಋತಂ ವದಿಷ್ಯಾಮಿ - ಸತ್ಯಂ ವದಿಷ್ಯಾಮಿ - ತನ್ಮಾಮವತು - ತದ್ವಕ್ತಾರಮವತು -ಅವತುಮಾಂ ಅವತು-ವಕ್ತಾರಂ. ಓಂ ಶಾಂತಿಃ ಶಾಂತಿಃ ಶಾಂತಿಃ

## ಪ್ರಥಮಾಧ್ಯಾಯಃ - ಪ್ರಥಮ ಖಂಡ

**ಮಂ.ಶ್ಲೋ.॥ ಓಂ ಆತ್ಮಾವಾ ಇದಮೇಕ ಏವಾಗ್ರ ಆಸೀತ್**
**ನಾನ್ಯತ್ ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥ 1**

ತಾ॥ ಈ ಅನಂತಸೃಷ್ಟಿಗೆ ಪೂರ್ವದಲ್ಲಿಯೇ ನಿತ್ಯ ಸತ್ಯ ಶುದ್ಧ ಬುದ್ಧ ಸ್ವರೂಪನಾದ ಪರಮಾತ್ಮನೇ ಪ್ರಕಾಶಿಸುತ್ತಿದ್ದನು. ಆತ್ಮವೇ ಹೊರತು ಬೇರೊಂದು ಇಲ್ಲ. ಈ ಪರಿಣಾಮ ಜಗತ್ತು ಆಗ ಇರಲಿಲ್ಲ. ಈ ಪರಮಾತ್ಮನೇ ಎಲ್ಲ ಲೋಕಗಳನ್ನು ಸೃಷ್ಟಿ ಮಾಡಲು ಸಂಕಲ್ಪಿಸಿದ.

**ಮಂ.ಶ್ಲೋ.॥ಸ ಇಮಾಂಲ್ಲೋಕಾ ಸಸೃಜತ। ಅಮ್ಭೋ ಮರೀಚೀರ್ಮರಮಾಪೋಽಮ್ಭಃಪರೇಣ ದಿವಂ**
**ದ್ಯೌಃ ಪ್ರತಿಷ್ಠಾಽನ್ತರಿಕ್ಷಂ ಮರೀಚಯಃ। ಪೃಥಿವೀ ಮರೋ ಯಾಅಧಸ್ತಾತ್ ತಾ ಆಪಃ॥2**

ತಾ॥ಆ ಪರಮಾತ್ಮ ಈ ಜಗತ್ತುಗಳನ್ನು ಸೃಷ್ಟಿಸಬೇಕೆಂದು ಆಲೋಚಿಸಿ ಕ್ರಮವಾಗಿ ನಾಲ್ಕು ಲೋಕಗಳನ್ನು ಸೃಷ್ಟಿಸಿದನು. ಅಂಭೋಲೋಕ, ಮರೀಚಿಲೋಕ, ಮರಲೋಕ, ಜಲಲೋಕ ಎಂದು. ಅಂಭೋಲೋಕವು (ಸ್ವರ್ಗವು) ದ್ಯುಲೋಕಕ್ಕಿಂತ ಮೇಲುಗಡೆಯಿದೆ. ದ್ಯುಲೋಕವು ಈ ಅಂಭೋ-ಲೋಕಕ್ಕೆ ಆಧಾರವಾಗಿದೆ. ಆಕಾಶವು ಮರೀಚಿಲೋಕ. ಈ ಭೂಲೋಕಕ್ಕಿಂತಲೂ ಕೆಳಗಿರುವ ಲೋಕವೇ ಜಲಲೋಕ. ಈ ಪೃಥ್ವಿಲೋಕ ಮರಲೋಕವು (ಮರಣವನ್ನೇ ಸ್ವಭಾವವಾಗಿ ಹೊಂದಿರುವುದು)

**ಮಂ.ಶ್ಲೋ.॥ ಸ ಈಕ್ಷತ ಇಮೇನು ಲೋಕಾ ಲೋಕಪಾಲಾ ನ್ನು ಸೃಜಾ ಇತಿ**
**ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಽಮೂರ್ಛಯತ್ ॥ 3**

ತಾ॥ ಆ ಪರಮಾತ್ಮನಿಂದ ಲೋಕಗಳೆಲ್ಲವೂ ಸೃಜಿಸಲ್ಪಟ್ಟವು. ಇನ್ನು ಈ ಲೋಕಗಳನ್ನು ಪರಿಪಾಲಿಸುವವರನ್ನು ಸೃಷ್ಟಿಮಾಡಬೇಕು ಎಂದು ಆಲೋಚಿಸಿದ. ಈ ರೀತಿಯಾಗಿ ಯೋಚನೆ ಮಾಡಿ ಆ ಜಲದ ಮಧ್ಯದಿಂದ ಒಬ್ಬ ಪುರುಷನನ್ನು ಸೃಷ್ಟಿಮಾಡಿ, ಒಳ್ಳೆಯ ರೂಪವಿರುವಂತೆ ಅವನನ್ನು ತಿದ್ದಿದ.

**ಮಂ.ಶ್ಲೋ.॥ ತಮಭ್ಯತಪತ್, ತಸ್ಯಾಭಿತಪ್ತಸ್ಯ ಮುಖಂ ನಿರಭಿದ್ಯತ, ಯಥಾಽಣ್ಡಮ್ । ಮುಖಾದ್ವಾಕ್ ವಾಚೋಽಗ್ನಿಃ, ನಾಸಿಕೇ ನಿರಭಿದ್ಯೇತಾಂ, ನಾಸಿಕಾಭ್ಯಾಂ ಪ್ರಾಣಃ। ಪ್ರಾಣಾದ್ವಾಯುಃ। ಅಕ್ಷಿಣಿ ನಿರಭಿದ್ಯೇತಾಂ । ಅಕ್ಷಿಭ್ಯಾಂ ಚಕ್ಷುಶ್ಚಕ್ಷುಷ ಆದಿತ್ಯಃ ಕರ್ಣೌ ನಿರಭಿದ್ಯೇತಾಂ, ಕರ್ಣಾಭ್ಯಾಂ ಶ್ರೋತ್ರಂ, ಶ್ರೋತ್ರಾದ್ದಿಶಃ, ತ್ವಙ್ನಿರಭಿದ್ಯತ, ತ್ವಚೋ ಲೋಮಾನಿ। ಲೋಮಭ್ಯ ಓಷಧಿ ವನಸ್ಪತಯಃ ಹೃದಯಂ ನಿರಭಿದ್ಯತ, ಹೃದಯಾನ್ಮನಃ, ಮನಸಶ್ಚಂದ್ರಮಾಃ, ನಾಭಿರ್ನಿರಭಿದ್ಯತ, ನಾಭ್ಯಾ ಅಪಾನಃ ಅಪಾನಾನ್ಮೃತ್ಯುಃ, ಶಿಶ್ನಂ ನಿರಭಿದ್ಯತ, ಶಿಶ್ನಾದ್ರೇತಃ, ರೇತಸ ಆಪಃ ॥ 4**

ತಾ॥ ಆ ಪರಮಾತ್ಮ ಪುರುಷ ರೂಪದಲ್ಲಿರುವವನನ್ನು ಕುರಿತು ಹೆಚ್ಚು ಹೆಚ್ಚಾಗಿ ಸಂಕಲ್ಪಿಸಿದ. ಆ ವಿಧವಾಗಿ ಆಲೋಚಿಸಿದ ದೇವನ ಬಾಯಿ ಮೊಟ್ಟೆಯೊಡೆದಂತೆ ವಿಕಸಿತವಾಯಿತು. ಮುಖದಿಂದ ವಾಕ್ಕು, ವಾಕ್ಕಿನಿಂದ ಅಗ್ನಿ ಹುಟ್ಟಿದವು. ನಾಸಿಕಾರಂಧ್ರಗಳು ವಿಕಸಿಸಿದವು. ಆ ನಾಸಿಕಾ ರಂಧ್ರಗಳಿಂದ ಪ್ರಾಣ, ಪ್ರಾಣದಿಂದ ವಾಯು ಹುಟ್ಟಿದವು. ಎರಡು ನೇತ್ರಗಳು ವಿಕಸಿಸಿದವು. ಕಣ್ಣುಗಳಿಂದ ಚಕ್ಷುರಿಂದ್ರಿಯ, ಅದರಿಂದ ಆದಿತ್ಯನು ಜನಿಸಿದನು. ಕಿವಿಗಳೆರಡೂ ವಿಕಸಿಸಿದವು. ಕಿವಿಗಳಿಂದ ಶ್ರೋತ್ರೇಂದ್ರಿಯ, ಅದರಿಂದ ದಿಕ್ಕುಗಳು ಹುಟ್ಟಿದವು. ಚರ್ಮವು ವಿಕಸಿಸಿತು. ಚರ್ಮದಿಂದ ಕೂದಲು, ಅದರಿಂದ ಓಷಧಗಳು, ಮಹಾ ವೃಕ್ಷಗಳು ಹುಟ್ಟಿದವು. ಹೃದಯವು ವಿಕಸಿಸಿತು. ಹೃದಯದಿಂದ ಮನಸ್ಸು. ಅದರಿಂದ ಚಂದ್ರನು ಹುಟ್ಟಿದರು. ನಾಭಿ ವಿಕಸಿಸಲು ನಾಭಿಯಿಂದ ಅಪಾನ. ಅದರಿಂದ ಮೃತ್ಯುವು ಹುಟ್ಟಿದವು. ಶಿಶ್ನವು ವಿಕಸಿಸಿತು. ಅದರಿಂದ ರೇತಸ್ಸು, ರೇತಸ್ಸಿನಿಂದ ಜಲವು ಹುಟ್ಟಿದವು. (ಈ ರೀತಿಯಾಗಿ ವಿರಾಟ್ ಪುರುಷನ ಅವಯವಗಳಿಂದ ಇಂದ್ರಿಯಗಳು, ಇಂದ್ರಿಯಾಭಿಮಾನ ದೇವತೆಗಳು ಜನಿಸಿದರು. ಜಲದಿಂದ ಸೃಷ್ಟಿಯು ಪ್ರಾರಂಭವಾಗಿ ಜಲಪ್ರಳಯದಲ್ಲಿ ಸಮಾಪ್ತಿ-ಯಾಗುವುದು ಗೋಚರಿಸುತ್ತದೆ.)

## ಪ್ರಥಮಾಧ್ಯಾಯಃ – ದ್ವಿತೀಯ ಖಂಡ

**ಮಂ.ಶ್ಲೋ.॥ ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ ಮಹತ್ಯರ್ಣವೇ ಪ್ರಾಪತಂ ಸ್ತಮಶನಾಯಾ ಪಿಪಾಸಾಭ್ಯಾ ಮನ್ವವಾರ್ಜತ್ । ತಾ ಏನಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ ಪ್ರತಿಷ್ಠಿತಾ ಅನ್ನಮದಾಮೇತಿ॥ 1 (೫)**

ತಾ॥ ಈ ರೀತಿಯಾಗಿ ಜನಿಸಿದ ದೇವತೆಗಳೆಲ್ಲರೂ ಮಹಾ ಸಮುದ್ರದಂತೆ ಈ ವಿಶಾಲವಾದ ವಿಶ್ವಕ್ಕೆ ಇಳಿದುಬಂದರು. ಆತ್ಮೇಶನು ಕಾರಣ ರೂಪನಾದ ಪುರುಷನನ್ನು ಹಸಿವು ನೀರಡಿಕೆಗಳುಳ್ಳವ-ನನ್ನಾಗಿ ಮಾಡಿದ. ಆಗಲೇ ದೇವತೆಗಳು ಆತ್ಮೇಶನನ್ನು ಕಂಡು ನಾವು ಎಲ್ಲಿ ನೆಲೆಸಿದರೂ ಅಲ್ಲಿ ಅನ್ನವನ್ನು ಭುಜಿಸಲು ಸಾಧ್ಯವಾಗುವಂತಹ ಸ್ಥಳವನ್ನು ನಮಗೆ ನಿರ್ದೇಶಿಸಿ ಕೊಡಿ ಎಂದು ಕೋರಿದರು.

**ಮಂ.ಶ್ಲೋ.॥ ತಾಭ್ಯೋ ಗಾಮಾನಯತ್ತಾ ಅಬ್ರುವನ್ ನ ವೈನೋಽಯಮಲಮಿತಿ**
**ತಾಭ್ಯೋಽಶ್ವಮಾನಯತ್ತಾ ಅಬ್ರುವನ್ ನ ವೈನೋಽಯಮಲಮಿತಿ । 2 (6)**

ತಾ॥ ದೇವತೆಗಳಿಗಾಗಿ ಆ ಪರಮಾತ್ಮ ಒಂದು ವೃಷಭವನ್ನು ತಂದುಕೊಟ್ಟನು. ಆ ಎತ್ತು ನಮಗೆ ಸಾಲದು ಎಂದು ದೇವತೆಗಳು ಹೇಳಿದರು. ಆನಂತರ ಪರಮಾತ್ಮನು ಅಶ್ವವನ್ನು ತಂದುಕೊಟ್ಟ. ಅದೂ ಕೂಡ ತಮಗೆ ಸಾಲದೆಂದರು ದೇವತೆಗಳು.

**ಮಂ.ಶ್ಲೋ.॥ ತಾಭ್ಯಃ ಪುರುಷಮಾನಯತ್ ತಾ ಅಬ್ರುವನ್ ಸುಕೃತಂ ಬತ ಇತಿ**
**ಪುರುಷೋ ವಾವ ಸುಕೃತಂ ತಾ ಅಬ್ರವೀದ್ಯಥಾऽऽಯತನಂ ಪ್ರವಿಶತೇತಿ॥ 3 (7)**

ತಾ॥ ಆ ಪರಮಾತ್ಮನು ಆ ದೇವತೆಗಳಿಗಾಗಿ ಹಿಂದೆ ನೀರಿನಿಂದ ಹುಟ್ಟಿದ (ತಮಗೆ) ಮೂಲಭೂತವಾದ ಪುರುಷನನ್ನು ತಂದನು. ಅವರು ಪುರುಷನನ್ನು ನೋಡಿ ಆ ಪುರುಷನು ಚೆನ್ನಾಗಿ ಸೃಷ್ಟಿಸಲ್ಪಟ್ಟಿದ್ದಾನೆಂದರು. ಈ ಪುರುಷನೇ ಅಚ್ಚುಕಟ್ಟಾಗಿ ನಿರ್ಮಿಸಲ್ಪಟ್ಟಿದ್ದಾನೆಂದು ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ಆ ದೇವತೆಗಳನ್ನು ನೋಡಿ ಪರಮಾತ್ಮನು ತಮ್ಮ ತಮ್ಮ ಸ್ಥಾನಗಳಿಗೆ ತೆರಳಲು ಆದೇಶಿಸಿದ.

**ಮಂ.ಶ್ಲೋ.॥ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೌ ಭೂತ್ವಾ ನಾಸಿಕೇ ಪ್ರಾವಿಶದಾದಿತ್ಯ-**
**ಶ್ಚಕ್ಷುರ್ಭೂತ್ವಾऽಕ್ಷಿಣೀ ಪ್ರಾವಿಶದ್ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ನೋಷಧೀ ವನಸ್ಪತಯೋ**
**ಲೋಮಾನಿ ಭೂತ್ವಾ ತ್ವಚಂ ಪ್ರಾವಿಶಂಶ್ಚಂದ್ರಮಾ ಮನೋ ಭೂತ್ವಾ ಹೃದಯಂ ಪ್ರಾವಿಶನ್**
**ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶದಾಪೋ ರೇತೋ ಭೂತ್ವಾ ಶಿಶ್ನಂ ಪ್ರಾವಿಶನ್॥**
**4 (8)**

ತಾ॥ ಆ ದೇವತೆಗಳೆಲ್ಲರನ್ನೂ ಪರಮಾತ್ಮ ಅವರವರ ಸ್ಥಾನಕ್ಕೆ ಅವರು ಹೋಗಲು ಆಜ್ಞಾಪಿಸುತ್ತಲೇ, ಅಗ್ನಿಯು ವಾಕ್ಕು ಆಗಿ ಮುಖವನ್ನು ಪ್ರವೇಶಿಸಿದ. ವಾಯುವು ಪ್ರಾಣವಾಗಿ ಮಾರ್ಪಟ್ಟು ನಾಸಾ ರಂಧ್ರಗಳನ್ನು ಪ್ರವೇಶಿಸಿದ. ಸೂರ್ಯನು ನೇತ್ರೇಂದ್ರಿಯವಾಗಿ ಮಾರ್ಪಟ್ಟು ನೇತ್ರಗಳಲ್ಲಿ ಪ್ರವೇಶಿಸಿದ. ದಿಕ್ಕುಗಳು ಶ್ರೋತ್ರೇಂದ್ರಿಯವಾಗಿ ಕರ್ಣ ದ್ವಾರಗಳೊಳಕ್ಕೆ ಪ್ರವೇಶಿಸಿದವು. ಓಷಧಗಳು ವನಸ್ಪತಿಗಳನ್ನು ಕೂದಲಾಗಿ ಮಾಡಿಕೊಂಡು ಚರ್ಮವನ್ನು ಪ್ರವೇಶಿಸಿದವು. ಚಂದ್ರನು ಮನಸ್ಸಾಗಿ ಮಾರ್ಪಟ್ಟು ಹೃದಯವನ್ನು ಪ್ರವೇಶಿಸಿದ. ಮೃತ್ಯುವು ಅಪಾನವಾಗಿ ಮಾರ್ಪಟ್ಟು ನಾಭಿಯನ್ನು ಪ್ರವೇಶಿಸಿತು. ಜಲಗಳು ರೇತಸ್ಸಾಗಿ ಮಾರ್ಪಟ್ಟು ಶಿಶ್ನ ಸ್ಥಾನವನ್ನು ಪ್ರವೇಶಿಸಿತು.

**ಮಂ.ಶ್ಲೋ.॥ ತಮಶನಾಯಾ ಪಿಪಾಸೇ ಅಬ್ರೂತಾಮಾವಾಭ್ಯಾಮಭಿ ಪ್ರಜಾನೀಹೀತಿ । ತೇ**
**ಅಬ್ರವೀದೇತಾಸ್ವೇವ ವಾಂ ದೇವತಾ ಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ ।**
**ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾ ವೇವಾಸ್ಯಾಮಶನಾಯಾ**
**ಪಿಪಾಸೇ ಭವತಃ॥ 5 (9)**

ತಾ॥ ಆ ಹಸಿವು ನೀರಡಿಕೆಗಳು ಪರಬ್ರಹ್ಮವನ್ನು ನೋಡಿ, ನಮ್ಮಿಬ್ಬರಿಗೂ ಸ್ಥಾನ ನಿರ್ದೇಶವನ್ನು ಮಾಡಿ ಆಜ್ಞಾಪಿಸಬೇಕೆಂದು ಹೇಳಿದವು. ಅದನ್ನು ಕೇಳಿ ಆ ಪರಮಾತ್ಮನು ಆ ಕ್ಷುತ್ ಪಿಪಾಸೆಗಳನ್ನು ನೋಡಿ ಈ ದೇವತೆಗಳಲ್ಲೇ ನಿಮ್ಮಿಬ್ಬರನ್ನೂ ಭಾಗಸ್ವಾಮಿಯಾಗಿ, ಮಾಡುತ್ತಿದ್ದೇನೆ. ಎಂದು ಹೇಳಿದ. ಅದರಿಂದ ಯಾವುದೋ ಒಂದು ದೇವತೆಯನ್ನು ಉದ್ದೇಶಿಸಿ ಹವಿಸ್ಸುಗ್ರಹಿಸಿದಾಗ, ಈ ಹಸಿವು

ನೀರಡಿಕೆಗಳು ಅದರ ಭಾಗವಾಗಿರುತ್ತವೆ. ಈ ರೀತಿಯಾಗಿ ಕ್ಷುತ್ ಪಿಪಾಸುಗಳು ಪ್ರತಿ ಇಂದ್ರಿಯಾಧಿಷ್ಠಾನ ದೇವತೆಯಲ್ಲೂ ಭಾಗಸ್ವಾಮಿಯಾಗಿ ಪ್ರಕಟವಾಗಿದೆ.

## ಪ್ರಥಮಾಧ್ಯಾಯಃ – ತೃತೀಯ ಖಂಡ

**ಮಂ.ಶ್ಲೋ.॥ ಸ ಈಕ್ಷತ "ಇಮೇ ನು ಲೋಕಾಶ್ಚ ಲೋಕಪಾಲಾಶ್ಚ ಅನ್ನಮೇಭ್ಯಃ ಸೃಜಾ" ಇತಿ। 1 (10)**

ತಾ॥ ಇದೋ ಇವೆಲ್ಲ ಲೋಕಗಳು ಲೋಕಪಾಲಕರನ್ನು, ಅವರಿಗಾಗಿ ಅನ್ನವನ್ನು ಸೃಜಿಸಬೇಕೆಂದು ಆ ಪರಮಾತ್ಮನು ಆಲೋಚಿಸಿದನು.

**ಮಂ.ಶ್ಲೋ.॥ ಸೋಽಪೋಽಭ್ಯತಪತ್, ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ**
**ಯಾ ವೈ ಸಾ ಮೂರ್ತಿರಜಾಯತ, ಅನ್ನಂ ವೈ ತತ್ ॥ 2 (11)**

ತಾ॥ ಆ ಪರಮೇಶ್ವರನು ಜಲವನ್ನು(ಗಳನ್ನು) ಕುರಿತು ತಪಸ್ಸು ಮಾಡಿದ. ಆ ಜಲದಿಂದ ಒಂದು ಮೂರ್ತಿಯುದಯಿಸಿತು. ಯಾವ ಮೂರ್ತಿಯು ಜಲದಿಂದ ಹುಟ್ಟಿತೋ ಅದೇ ಅನ್ನವಾಗಿದೆ.

**ಮಂ.ಶ್ಲೋ.॥ ತದೇನತ್ ಸೃಷ್ಟಂ ಪರಾಙ್ತ್ಯಜಿಘಾಂಸತ್ತದ್ವಾಚಾಜಿಘೃಕ್ಷತ್**
**ತನ್ನಾಶಕ್ನೋದ್ವಾಚಾಽಗ್ರಹೀತುಮ್ । ಸಯದ್ಧೈನದ್ವಾಚಾಽಗ್ರಹೈಷ್ಯದಭಿವ್ಯಾಹೃತ್ಯ**
**ಹೈವಾನ್ನಮತ್ರಪ್ಸ್ಯತ್ ॥ 3 (12)**

ತಾ॥ ಆಗ ತಾನೇ ಹುಟ್ಟಿದ ಆ ಅನ್ನವು ಹಿಂದಕ್ಕೆ ಓಡಿತು. ಆದಿ ಪುರುಷನು ಪರಮಾತ್ಮನು ಆ ಅನ್ನವನ್ನು ವಾಕ್ಕಿನಿಂದ ಹಿಡಿದುಕೊಳ್ಳಬೇಕೆಂದುಕೊಂಡ. ಆದರೆ ಅದನ್ನು ವಾಗೀಂದ್ರಿಯದಿಂದ ಹಿಡಿದುಕೊಳ್ಳಲು ಸಾಧ್ಯವಿಲ್ಲ. ಅದೇನಾದರೂ ವಾಕ್ಕಿನಿಂದ ಗ್ರಹಿಸುವಂತಾಗಿದ್ದರೆ, ಕೇವಲ ಅನ್ನವನ್ನು ಮಾತಿನಿಂದಲೇ ತೃಪ್ತಿಪಡಿಸಬೇಕಾಗುತ್ತಿತ್ತು. ಅಂದರೆ ಅನ್ನ ಎನ್ನುವ ಮಾತು ಮಾತ್ರವೇ ಅನ್ನವನ್ನಾಗಿ ಮಾಡಿ ತೃಪ್ತಿಪಡಬೇಕಾಗಿತ್ತು.

**ಮಂ.ಶ್ಲೋ.॥ ತತ್ ಪ್ರಾಣೇನಾಜಿಘೃಕ್ಷತ್ ತನ್ನಾಶಕ್ನೋತ್ ಪ್ರಾಣೇನ ಗ್ರಹೀತುಮ್**
**ಸ ಯದ್ಧೈನತ್ ಪ್ರಾಣೇನಾ ಗ್ರಹೈಷ್ಯದಭಿಪ್ರಾಣ್ಯಹೈವಾಽನ್ನಮತ್ರಪ್ಸ್ಯತ್॥ 4(13)**

ತಾ॥ ಆ ಅನ್ನವನ್ನು ಪ್ರಾಣದಿಂದ (ವಾಸನೆಯಿಂದ) ಗ್ರಹಿಸಲು ಪ್ರಯತ್ನಪಡಲಾಯಿತು. ಆದರೆ ಸಾಧ್ಯವಾಗಲಿಲ್ಲ. ಪ್ರಾಣದಿಂದ ಆ ಅನ್ನವನ್ನು ಗ್ರಹಿಸದಿದ್ದರೆ, ಅದನ್ನು ಪುರುಷನು ವಾಸನೆ ನೋಡಿ ಮಾತ್ರವೇ ಸಂತೃಪ್ತಿ ಹೊಂದುತ್ತಿದ್ದ (ಹೊಂದಬೇಕಾಗಿತ್ತು.)

**ಮಂ.ಶ್ಲೋ.॥ ತಚ್ಚಕ್ಷುಷಾಽಜಿಘೃಕ್ಷತ್, ತನ್ನೋಽಶಕ್ನೋಚ್ಚಕ್ಷುಷಾ ಗ್ರಹೀತುಮ್**
**ಸ ಯದ್ಧೈವ ಚಕ್ಷುಷಾ ಗ್ರಹೈಷ್ಯದ್ ದೃಷ್ಟ್ವಾಹೈವಾನ್ನಮತ್ರಪ್ಸ್ಯತ್ ॥ 5 (14)**

ತಾ॥ ಆಗ ಪುರುಷನು ಅನ್ನವನ್ನು ನೇತ್ರೇಂದ್ರಿಯದಿಂದ ಹಿಡಿದುಕೊಳ್ಳಲು ಪ್ರಯತ್ನಿಸಿದ. ಆದರೆ ಆ ಅನ್ನವನ್ನು ನೇತ್ರೇಂದ್ರಿಯದಿಂದ ಗ್ರಹಿಸಲು ಶಕ್ಯವಾಗಲಿಲ್ಲ. ಆ ಪುರುಷನು ಒಂದು

ವೇಳೆ ಅದನ್ನು ನೇತ್ರೇಂದ್ರಿಯದಿಂದ ಹಿಡಿದುಕೊಂಡಿದ್ದರೆ (ಗ್ರಹಿಸಿದ್ದು) ಕೇವಲ ನೋಡುವುದರಿಂದಲೇ ಸಂತೃಪ್ತಿ ಹೊಂದಲಾಗುತ್ತಿತ್ತು.

**ಮಂ.ಶ್ಲೋ.॥ ತತ್ ಶ್ರೋತ್ರೇಣಾऽಜಿಘೃಕ್ಷತ್, ತನ್ನಾಶಕ್ನೋಚ್ಛ್ರೋತ್ರೇಣ ಗ್ರಹೀತುಮ್**
**ಸ ಯದ್ಧೈನಚ್ಛ್ರೋತ್ರೇಣಾऽಗ್ರಹೈಷ್ಯತ್ ಶ್ರುತ್ವಾ ಹೈವಾನ್ನಮತ್ರಪ್ಸ್ಯತ್॥ 6(15)**

ತಾ॥ ಆಗ ಪುರುಷನು ಅನ್ನವನ್ನು ಶ್ರವಣೇಂದ್ರಿಯದಿಂದ ಹಿಡಿದುಕೊಳ್ಳಲು ಪ್ರಯತ್ನಿಸಿದ. ಆದರೆ ಅದು ಸಾಧ್ಯವಾಗಲಿಲ್ಲ. ಶ್ರವಣೇಂದ್ರಿಯದಿಂದ ಏನಾದರೂ ಹಿಡಿದುಕೊಂಡಂತಾಗಿದ್ದರೆ, ಅನ್ನವನ್ನು ಕೇವಲ ವಚನವನ್ನು ಆಲಿಸುವುದರಿಂದಲೇ ಸಂತೃಪ್ತಿ ಹೊಂದುವಂತಾಗಿ ಬಿಡುತ್ತಿತ್ತು.

**ಮಂ.ಶ್ಲೋ.॥ ತತ್ತ್ವಚಾऽಜಿಘೃಕ್ಷತ್, ತನ್ನಾ ಶಕ್ನೋತ್ತ್ವಚಾ ಗ್ರಹೀತುಮ್**
**ನ ಯದ್ಧೈನತ್ತ್ವಚಾऽಗ್ರಹೈಷ್ಯತ್ ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥ 7 (16)**

ತಾ॥ ಆ ಅನ್ನವನ್ನು ತ್ವಗಂದ್ರಿಯದಿಂದ (ತ್ವಕ್ ಚರ್ಮ) ಹಿಡಿದುಕೊಳ್ಳಲು ಪ್ರಯತ್ನಿಸಿದ. ಆದರೆ ಅದನ್ನು ತ್ವಗಿಂದ್ರಿಯದಿಂದ ಹಿಡಿದುಕೊಳ್ಳಲು ಸಾಧ್ಯವಾಗಲಿಲ್ಲ. ಆತನೊಂದು ವೇಳೆ ತ್ವಗಿಂದ್ರಿಯದಿಂದ ಅನ್ನವನ್ನು ಗ್ರಹಿಸುವಂತಾಗಿದ್ದಿದ್ದರೆ ಅನ್ನವನ್ನು ಸ್ಪರ್ಶಿಸು(ಮುಟ್ಟಿ)ವುದರಿಂದಲೇ ಸಂತೃಪ್ತಿ ಹೊಂದಬೇಕಾಗುತ್ತಿತ್ತು.

**ಮಂ.ಶ್ಲೋ.॥ ತನ್ಮನಸಾऽಜಿಘೃಕ್ಷತ್, ತನ್ನಾಶಕ್ನೋನ್ಮನಸಾ ಗ್ರಹೀತುಮ್**
**ಸ ಯದ್ಧೈನನ್ಮನಸಾ ಗ್ರಹೈಷ್ಯತ್ ಧ್ಯಾತ್ವಾ ಹೈವಾನ್ನಮತ್ರಪ್ಸ್ಯತ್ ॥ 8 (17)**

ತಾ॥ ಆಗ ಆ ಅನ್ನವನ್ನು ಮನಸ್ಸಿನಲ್ಲಿ ಹಿಡಿದುಕೊಳ್ಳಲು ಮುಂದಾದ. ಆದರೆ ಸಾಧ್ಯವಾಗಲಿಲ್ಲ. ಆತನೊಂದು ವೇಳೆ ಮನಸ್ಸಿನಿಂದ ಅನ್ನವನ್ನು ಹಿಡಿದುಕೊಳ್ಳುವಂತಾಗಿದ್ದರೆ, ಅನ್ನವನ್ನು ಧ್ಯಾನಿಸಿಯೇ ಸಂತೃಪ್ತಿಗೊಳ್ಳಬೇಕಾಗಿತ್ತು.

**ಮಂ.ಶ್ಲೋ.॥ ತಚ್ಛಿಶ್ನೇನಾऽಜಿಘೃಕ್ಷತ್, ತನ್ನೋಽಶಕ್ನೋಚ್ಛಿಶ್ನೇನ ಗ್ರಹೀತುಮ್**
**ಸ ಯದ್ಧೈನಚ್ಛಿಶ್ನೇನಾಗ್ರಹೈಷ್ಯತ್ ವಿಸೃಜ್ಯ ಹೈವಾನ್ನಮತ್ರಪ್ಸ್ಯತ್ ॥ 9 (18)**

ತಾ॥ ಆ ಅನ್ನವನ್ನು ಶಿಶ್ನದಲ್ಲಿ (ಹಿಡಿದು) ಹಿಡಿದಿಟ್ಟುಕೊಳ್ಳಲು ಪ್ರಯತ್ನಿಸಿದ. ಆದರೆ ಸಾಧ್ಯವಾಗಲಿಲ್ಲ. ಆತ ಆ ಅನ್ನವನ್ನು ಶಿಶ್ನದಲ್ಲಿ ಹಿಡಿದುಕೊಳ್ಳುವಂತಾಗಿದ್ದರೆ, ಅನ್ನವನ್ನು ವಿಸರ್ಜಿಸುವುದರಿಂದಲೇ ತೃಪ್ತಿಗೊಳ್ಳಬೇಕಾಗುತ್ತಿತ್ತು.

**ಮಂ.ಶ್ಲೋ.॥ ತದಪಾನೇನಾऽಜಿಘೃಕ್ಷತ್, ತದಾವಯತ್। ಸ ಏಷೋನ್ನಸ್ಯ**
**ಗ್ರಹೋ ಯದ್ವಾಯುಃ ಅನ್ನಮಾಯುರ್ವಾ ಏಷ ಯದ್ವಾಯುಃ ॥ 10 (19)**

ತಾ॥ ಆ ಪರಬ್ರಹ್ಮವು ಅನ್ನವನ್ನು ಅಪಾನದಲ್ಲಿ ಹಿಡಿದಿಟ್ಟುಕೊಳ್ಳಲೆತ್ನಿಸಿದ. ಅದು ಅನ್ನವನ್ನು ಹಿಡಿದಿಟ್ಟುಕೊಂಡಿತು. ಹಾಗೆ ಆ ಅನ್ನವನ್ನು ಹಿಡಿದಿಟ್ಟುಕೊಳ್ಳಲು ಸಾಧ್ಯವಾದುದು ವಾಯು. ಆ ವಾಯುವೇ ಅನ್ನದ ಮೂಲಕ ಪ್ರಾಣಧಾರಣೆ ಮಾಡುವಂತಹುದಾಗುತ್ತದೆ.

**ಮಂ.ಶ್ಲೋ.॥ ಸ ಈಕ್ಷತ 'ಕಥಂನ್ವಿದಂ ಮದೃತೇ ಸ್ಯಾತ್' ಇತಿ। ಸ ಈಕ್ಷತ - 'ಕತರೇಣ ಪ್ರಪದ್ಯಾ' ಇತಿಃ ಸ ಈಕ್ಷತ 'ಯದಿ ವಾಚಾಽಭಿವ್ಯಾಹೃತಂ, ಯದಿ ಪ್ರಾಣೇನಾಭಿ ಪ್ರಾಣಿತಂ, ಯದಿ ಚಕ್ಷುಸಾ ದೃಷ್ಟಂ, ಯದಿ ಶ್ರೋತ್ರೇಣ ಶ್ರುತಂ, ಯದಿ ತ್ವಚಾ ಸ್ಪೃಷ್ಟಂ। ಯದಿ ಮನಸಾ ಧ್ಯಾತಂ, ಯದ್ಯಪಾನೇನಾಽಭ್ಯಪಾನಿತಂ, ಯದಿ ಶಿಶ್ನೇನ ವಿಸೃಷ್ಟಂ, ಅಥ ಕೋಽಹಂ ಇತಿ ॥ (20)**

ತಾ॥ ಆ ಪರಮಾತ್ಮ ಈ ವಿಧವಾದ ಪಿಂಡ ಶರೀರವು ನನ್ನನ್ನು ಬಿಟ್ಟು ಯಾವ ರೀತಿ ಇರಲಾಗುವುದೆಂದು ಆಲೋಚಿಸಿದ. ಯಾವ ವಿಧವಾಗಿ ನಾನು ಈ ಪಿಂಡ ಶರೀರವನ್ನು ಪ್ರವೇಶಿಸಬಹುದೆಂದು ಆ ಪರಮಾತ್ಮ ದೀರ್ಘವಾಗಿ ಆಲೋಚಿಸಿದ. ನನ್ನನ್ನು ಬಿಟ್ಟು (ಅಂದರೆ ನನ್ನ ಇಷ್ಟವಿಲ್ಲದೆ). ವಾಕ್ಕಿನಿಂದ ಮಾತನಾಡಿಸಿದರೆ, ನೇತ್ರದಿಂದ ನೋಡುವಂತಾದರೆ, ಕಿವಿಯಿಂದ ಕೇಳುವಂತಾದರೆ, ತ್ವಕ್ಕಿನಿಂದ ಸ್ಪರ್ಶ ಮಾಡುವಂತಾದರೆ, ಮನಸ್ಸಿನಿಂದ ಧ್ಯಾನ ಮಾಡುವಂತಾದರೆ, ಅಪಾನದಿಂದ ಬಿಡು (ಬಿಟ್ಟುಬಿಡು)ವಂತಾದರೆ, ಶಿಶ್ನದಿಂದ ವಿಸರ್ಜಿಸುವಂತಾದರೆ, ಆಗ ನಾನು ಯಾರು? ಅಂದರೆ ನನ್ನಿಂದ ಪ್ರಯೋಜನವೇನು? ಎಂದು ಬಹುದೀರ್ಘವಾಗಿ ಆಲೋಚಿಸಿದ.

**ಮಂ.ಶ್ಲೋ.॥ ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ। ಸೈಷಾ ವಿದೃತಿರ್ನಾಮ ದ್ವಾಃ ತದೇತನ್ನಾಂದನಂ। ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾಃ । ಅಯಮಾ- ವಸಥೋಽಯಮಾವಸಥೋಽಯಮಾವಸಥ ಇತಿ॥ 12 (21)**

ತಾ॥ ಆ ಪರಮಾತ್ಮನು ಈ ಕೊನೆಯ ಭಾಗವಾದ ಶಿರಸ್ಸನ್ನು ಭೇದಿಸುವ ದ್ವಾರದಿಂದ ಒಳಕ್ಕೆ ಪ್ರವೇಶಿಸಿದ. ಅಂತಹ ಈ ಮಾರ್ಗಕ್ಕೆ "ವಿದೃತಿಯೆಂದು" ಹೆಸರು. ಇದು ಆನಂದಸ್ಥಾನ. ಆ ಆತ್ಮಕ್ಕೆ ನಿವಾಸ ಸ್ಥಾನಗಳು ಮೂರು. ನಿದ್ರಿಸುವುದಕ್ಕೆ ವಿಶ್ರಾಂತಿಗಾಗಿ ಸ್ಥಾನಗಳು ಮೂರು ಇವೆ. ಇದು (ನೇತ್ರ) ನಿವಾಸ ಸ್ಥಾನ, ಇದು (ಕಂಠ) ನಿವಾಸ ಸ್ಥಾನ. ಇದು (ಹೃದಯ) ನಿವಾಸಸ್ಥಾನ.

**ಮಂ.ಶ್ಲೋ.॥ ಸ ಜಾತೋ ಭೂತಾನ್ಯಭಿವ್ಯೈಖ್ಯತ್। ಕಿಮಿಹಾನ್ಯಂ ವಾ ವದಿಷದಿತಿ ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯದಿದಮದರ್ಶಮಿತಿ ॥ 13 (22)**

ತಾ॥ ಆ ಪರಮಾತ್ಮನು ಈ ರೀತಿಯಾಗಿ ಪುರುಷದೇಹವನ್ನು ಪ್ರವೇಶಿಸಿ, ಜೀವರೂಪನಾಗಿ ಭೂತಗಳನ್ನು ತಾದಾತ್ಮ್ಯಭಾವನೆಯೊಂದಿಗೆ ಗ್ರಹಿಸಿದ್ದನು. ಆನಂತರ ಇಲ್ಲಿ ನಾನು ಅಲ್ಲದೆ ಮತ್ತ್ಯಾವುದು? ಎಂದು ಕೇಳಿದ. ಇದನ್ನು ತಿಳಿದುಕೊಂಡೆನೆಂದು ಆತನು ಈ ಪುರುಷನೇ ಸರ್ವೋತ್ಕೃಷ್ಟನು ಹಾಗೂ ವ್ಯಾಪಕವಾಗಿರುವವನು ಎಂದು ಗ್ರಹಿಸಿದ.

**ಮಂ.ಶ್ಲೋ.॥ ತಸ್ಮಾದಿದಂ ದ್ರೋನಾಮೇದಂದ್ರೋ ಹ ವೈನಾಮ। ತಮಿದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ। ಪರೋಕ್ಷಪ್ರಿಯಾ ಇವ ಹಿ ದೇವಾಃ ಪರೋಕ್ಷಪ್ರಿಯಾ ಇವ ಹಿ ದೇವಾಃ ॥ 14 (23)**

ತಾ॥ ಮೇಲೆ ಹೇಳಿದ ಕಾರಣಗಳಿಂದ ಈಶ್ವರನಿಗೆ ಇಂದ್ರನೆನ್ನುವ ಹೆಸರು ಬಂತು. ಈತನಿಗೆ

ದೇವೇಂದ್ರನೆನ್ನುವ ಹೆಸರು ಪ್ರಸಿಧ್ಧಿ ಪಡೆಯಿತು. ಹೀಗೆ ಇಂದ್ರನಾದಾಗಲೂ ಈತನಿಗೆ ಪರೋಕ್ಷತಾ ರೂಪಕಾರಣದಿಂದ ಇಂದ್ರನೆಂದು ಹೇಳುತ್ತಾರೆ. ಏಕೆಂದರೆ ದೇವತೆಗಳು ಪರೋಕ್ಷ-ಪ್ರಿಯರಲ್ಲವೇ. ದೇವತೆಗಳು ಪರೋಕ್ಷತೆಯಲ್ಲೇ ಪ್ರೀತಿಯುಳ್ಳವರಲ್ಲವೆ (ನಾನೇ ಬ್ರಹ್ಮ ಎಂದು ತಿಳಿದುಕೊಳ್ಳುವುದಕ್ಕೆ ಸೃಷ್ಟಿ ವಿಷಯವಾಗಿ ಪರಮಾರ್ಥವನ್ನು ಹೇಳಲಾಗಿದೆ.)

(ಪ್ರಥಮೋಧ್ಯಾಯ ಸಮಾಪ್ತಿ)

# ದ್ವಿತೀಯಾಧ್ಯಾಯಃ – ಪ್ರಥಮಃ ಖಂಡಃ

(ಅಪಕ್ರಾಮಂತು ಗರ್ಭಿಣ್ಯಃ)

**ಮಂ.ಶ್ಲೋ.॥ ಓಂ ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ। ಯದೇತದ್ರೇತಸ್ತದೇತತ್ ಸರ್ವೇಭ್ಯೋಽಂಗೇಭ್ಯಸ್ತೇಜಃ । ಸಂಭೂತಮಾತ್ಮನ್ಯೇವಾತ್ಮಾನಂ ಬಿಭರ್ತಿ। ತದ್ಯದಾ ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ । ತದಸ್ಯ ಪ್ರಥಮಂ ಜನ್ಮ ॥ 1 (24)**

**(ಗರ್ಭಿಣಿ ಹೆಂಗಸರು ಈ ಮಂತ್ರವನ್ನು ಕೇಳಬಾರದು)**

ತಾ॥ ವಾಸ್ತವವಾಗಿ ಪುರುಷನಲ್ಲೇ ಮೊಟ್ಟ ಮೊದಲು ಗರ್ಭವು ಉಂಟಾಗುತ್ತದೆ. ಯಾವುದನ್ನು ರೇತಸ್ಸೆಂದು ಕರೆಯುತ್ತಾರೋ ಆ ವೀರ್ಯವು ಪುರುಷನ ಸರ್ವಾಂಗಗಳಿಂದ ಒಟ್ಟುಗೂಡಿ ಒಂದು ಕಡೆ ಸೇರಿದ ತೇಜಸ್ಸು ಅಥವಾ ಸಾರವೇ ಆಗಿದೆ. ಪುರುಷನು ತನ್ನಲ್ಲೇ ಶುಕ್ರರೂಪನಾದ ಆತ್ಮವನ್ನು ಅಂತರಾಳದಲ್ಲಿ ಧರಿಸಿರುತ್ತಾನೆ. ಯಾವಾಗ ಆ ವೀರ್ಯವನ್ನು ಆ ವೀರ್ಯರೂಪವಾದ ಆತ್ಮವು ಪುರುಷ ಶರೀರದಿಂದ ಹೊರಕ್ಕೆ ಬಂದು ಸ್ತ್ರೀದೇಹವನ್ನು ಸೇರುವುದೋ ಅದೇ ಪ್ರಥಮ ಜನ್ಮ.

# ದ್ವಿತೀಯಾಧ್ಯಾಯಃ ದ್ವಿತೀಯ ಖಂಡಃ

**ಮಂ.ಶ್ಲೋ.॥ ತತ್ ಸ್ತ್ರೀಯಾ ಆತ್ಮಭೂಯಂ ಗಚ್ಛತಿ, ಯಥಾ॥ ಸ್ವಮಂಗಂ ತಥಾ। ತಸ್ಮಾದೇನಾಂ ನ ಹಿನಸ್ತಿ ಸಾಽಸ್ಯೈನಮಾತ್ಮಾನಮತ್ರ ಗತಂ ಭಾವಯತಿ ॥ 2 (25)**

ತಾ॥ ಸ್ತ್ರೀಯು ತನ್ನ ಅವಯವಗಳು ತನ್ನ ಶರೀರ ಭಾಗವಾಗಿ ಭಾವಿಸಿದಂತೆ, ಆ ವೀರ್ಯವನ್ನು ಸಹ ಒಂದು ಭಾಗವಾಗಿ ಸ್ತ್ರೀಯು ತಾದಾತ್ಮ್ಯವನ್ನು ಹೊಂದುತ್ತಾಳೆ. ಸ್ತನಗಳು ಮುಂತಾದವುಗಳು ಹೇಗೆ ಶರೀರದ ಒಂದು ಭಾಗವಾಗಿದೆಯೆಂಬುದು ತಾತ್ಪರ್ಯ. ಆದ್ದರಿಂದಲೇ ಈ ಸ್ತ್ರೀಯನ್ನು ಆ ವೀರ್ಯವು ಬಾಧೆಗೀಡುಮಾಡುವುದಿಲ್ಲ. ನಿಜವಾದ ಅಂಗಗಳು ಯಾವ ರೀತಿಯಾಗಿ ದೇಹದ ಭಾಗಗಳಾಗಿ, ಶರೀರಕ್ಕೆ ತೊಂದರೆ ಕೊಡುವುದಿಲ್ಲವೋ, ಹಾಗೆಯೇ ಆ ಪುರುಷ ವೀರ್ಯವು ಕೂಡಾ ಸ್ತ್ರೀಯ ಶರೀರವನ್ನು ತೊಂದರೆಗೀಡುಮಾಡುವುದಿಲ್ಲ. ಅದು ಸ್ತನಗಳಂತೆಯೇ ಬೆಳೆಯುತ್ತದೆ. ಆದರೆ ಕುರುವಿನಂತೆ ಅಲ್ಲ. ಆ ಸ್ತ್ರೀ ಪತಿಯ ಆತ್ಮರೂಪವಾದ ಪುತ್ರನನ್ನು ಗರ್ಭದಲ್ಲಿದ್ದಾನೆಂದು ಗ್ರಹಿಸಿ ಪ್ರೇಮದಿಂದ ಬೆಳೆಸುತ್ತಾಳೆ.

**ಮಂ.ಶ್ಲೋ.॥ ಸಾ ಭಾವಯಿತ್ರೀ ಭಾವವಯಿತವ್ಯಾಭವತಿ, ತಂ ಸ್ತ್ರೀಗರ್ಭಂ ಬಿಭರ್ತಿ ಸೋಽಗ್ರ ಏವಕುಮಾರಂ ಜನ್ಮನೋಽಗ್ರೇಽಧಿಭಾವಯತಿ। ಸ ಯತ್ ಕುಮಾರಂ ಜನ್ಮನೋಽಗ್ರೇಧಿಭಾವಯತಿ । ಆತ್ಮಾನಮೇವ ತದ್ಭಾವಯತ್ಯೇಷಾಂ ಲೋಕಾನಾಂ ಸಂತತ್ಯಾ। ಏವಂ ಸಂತತಾ ಹಿಮೇ ಲೋಕಾಃ ತದಸ್ಯ ದ್ವಿತೀಯಂ ಜನ್ಮ॥ 3 (26)**

ತಾ॥ ಗರ್ಭದಲ್ಲಿರುವ ಪತಿಯ ಆತ್ಮವನ್ನು ಪೋಷಿಸುತ್ತಿರುವ ಆ ಸ್ತ್ರೀ ಅಧಿಕವಾಗಿ ಪೋಷಣೆ-ಗೊಳಪಡಬೇಕಾಗಿದೆ. ಸ್ತ್ರೀಯು ಆ ಗರ್ಭಸ್ಥ ಪಿಂಡವನ್ನು ಧರಿಸುತ್ತಿರುವಳು. ಆ ಗರ್ಭಸ್ಥ ಶಿಶುವಿನ ತಂದೆ ಶಿಶುವಿನ ಜನನಕ್ಕೆ ಮುನ್ನ ಆನಂತರವೂ ಸಹ ಹಲವು ರೀತಿಯ ಸಂಸ್ಕಾರಗಳೊಂದಿಗೆ ವಿಶೇಷ ರೀತಿಯಲ್ಲಿ ಪೋಷಿಸುತ್ತಿದ್ದಾನೆ. ಆತ ಯಾವ ಕಾರಣಕ್ಕಾಗಿ ಪುತ್ರಜನ್ಮಕ್ಕೆ ಮೊದಲೇ ಪೋಷಿಸಲ್ಪಡುತ್ತಾನೋ, ಆ ಕಾರಣದಿಂದಲೇ ತನ್ನನ್ನು ತಾನೇ ಪೋಷಿಸಿಕೊಳ್ಳುತ್ತಾನೆ. ಆ ಪ್ರಜಾ ಸಂತತಿ ವೃದ್ಧಿಗಾಗಿ ಈ ರೀತಿಯಾಗಿ ಮಾಡುತ್ತಾನೆ. ಈ ವಿಧವಾಗಿ ಈ ಜನರು ವೃದ್ಧಿಯಾಗುತ್ತಾರಲ್ಲವೆ! ಅದು ಈ ಆತ್ಮದ ದ್ವಿತೀಯವಾದ ಜನ್ಮ.

## ದ್ವಿತೀಯಾಧ್ಯಾಯಃ – ತೃತೀಯಃ ಖಂಡಃ

**ಮಂ.ಶ್ಲೋ.॥ ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ। ಅಥಾಽಸ್ಯಾಽಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ। ಸ ಇತಃ ಪ್ರಯನ್ನೇವ ಪುನರ್ಜಾಯತೇ। ತದಸ್ಯ ತೃತೀಯಂ ಜನ್ಮ ತದುಕ್ತಮೃಷಿಣಾ॥4 (27)**

ತಾ॥ ಪುತ್ರರೂಪದಲ್ಲಿರುವ ಆ ತಂದೆಯ ಆತ್ಮವು, ಸತ್ಕರ್ಮಾನುಷ್ಠಾನಗಳ ನಿಮಿತ್ತವಾಗಿ ಗೃಹದಲ್ಲಿ ತಂದೆಯ ಸ್ಥಾನದಲ್ಲಿ ಪ್ರತಿನಿಧಿಯಾಗಿ ಪ್ರತಿಷ್ಠಿಸಲ್ಪಡುತ್ತಿದ್ದಾನೆ ಮತ್ತು ಇತರವಾದ (ತಂದೆಯ) ಆತ್ಮವು, ತನ್ನ ಪೂರ್ಣಾಯುಸ್ಸನ್ನು ಹೊಂದಿ ಕೃತಕೃತ್ಯನಾಗಿ ಈ ಲೋಕವನ್ನು ಬಿಡುವನು. ಆತನು ಈ ಲೋಕದಿಂದ ಹೋಗುತ್ತಲೇ ಮತ್ತೆ ಜನ್ಮವನ್ನು ಹೊಂದುತ್ತಾನೆ. ಇದು ಮತ್ತೆ ಮೂರನೇ ಜನ್ಮ. ಈ ವಿಧವಾಗಿ ಮಹರ್ಷಿ ಹೇಳುತ್ತಿದ್ದಾನೆ.

## ದ್ವಿತೀಯಾಧ್ಯಾಯಃ – ಚತುರ್ಥ ಖಂಡ

**ಮಂ.ಶ್ಲೋ.॥ "ಗರ್ಭೇನುಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ಶತಂ ಮಾಪುರ ಆಯಸೀರರಕ್ಷನ್ನಥಃ ಶ್ಯೇನೋ ಜವಸಾ ನಿರದೀಯಮ್ ಇತಿಃ; ಗರ್ಭ ಏವ್ಯೆ ತಚ್ಛಯಾನೋ ವಾಮದೇವ ಏವಮುವಾಚ ॥ 5 (28)**

ತಾ॥ ಮಾತೃಗರ್ಭದಲ್ಲಿ ವಾಸಮಾಡುತ್ತಾ, ನಾನು ಈ ಸಕಲದೇವತೆಗಳ ಜನ್ಮ ವೃತ್ತಾಂತವನ್ನು ತಿಳಿದುಕೊಂಡೆನು. ಮೊದಲಿಗೆ ತತ್ತ್ವಜ್ಞಾನವೇರ್ಪಡುವ ಮುನ್ನ ಲೋಹಮಯವಾದ ಅನೇಕ ಪೊಳೆಗಳು ನನ್ನನ್ನು ರಕ್ಷಿಸುತ್ತಿದ್ದವು. ತತ್ತ್ವಜ್ಞಾನ ಪ್ರಾಪ್ತಿಯಾದ ನಂತರ ಹದ್ದಿನಂತೆ ವೇಗವಾಗಿ ಅವುಗಳನ್ನು ಭೇದಿಸಿಕೊಂಡು ತಿರುಗುತ್ತಾ ಹೊರಕ್ಕೆ ಬಂದೆ. ಎಂದು ಗರ್ಭದಲ್ಲೇ ಶಯನಿಸಿದ್ದ ವಾಮದೇವ ಮಹರ್ಷಿ ಇದರ ವಿವರಗಳನ್ನು ವರ್ಣಿಸಿ ಹೇಳಿದ.

**ಮಂ.ಶ್ಲೋ.॥ ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಽಮುಷ್ಮಿನ್ಸ್ವರ್ಗೇಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್, ಸಮಭವತ್ ॥ 6 (29)**

ತಾ॥ ಬ್ರಹ್ಮಜ್ಞಾನಿಯಾದ ವಾಮದೇವ ಮಹರ್ಷಿ ಈ ರೀತಿಯಾಗಿ ದೇಹನಾಶದ ಕಾರಣಕ್ಕಾಗಿ ಮೇಲಕ್ಕೆ ಹಾರಿ ಆ ಸ್ವರ್ಗಲೋಕದಲ್ಲಿ ಸಕಲಭೋಗಗಳನ್ನು ಅನುಭವಿಸಿ, ಅಮೃತತ್ವವನ್ನು ಶಾಶ್ವತವಾಗಿ ಹೊಂದಿದ.

**(ದ್ವಿತೀಯಾಧ್ಯಾಯ ಸಮಾಪ್ತವಾದುದು)**

# ತೃತೀಯಾಧ್ಯಾಯಃ

**(ಯಥಾಸ್ಥಾನಂತು ಗರ್ಭಿಣ್ಯಃ)**

**ಮಂ.ಶ್ಲೋ.॥ ಕೋಽಯಮಾತ್ಮೇತಿ ವಯಮುಪಾಸ್ಮಹೇ, 'ಕತರಃ ಸ ಆತ್ಮಾ' ಯೇನ ವಾ ರೂಪಂ ಪಶ್ಯತಿ, ಯೇನ ವಾ ಶಬ್ದಂ ಶೃಣೋತಿ, ಯೇನ ವಾ ಗಂಧಾ ನಾಜಿಘ್ರತಿ, ಯೇನ ವಾ ವಾಚಂ ವ್ಯಾಕರೋತಿ, ಯೇನ ವಾ ಸ್ವಾದುಚಾಸ್ವಾದು ಚ ವಿಜಾನಾತಿ 1 (30)**

ತಾ॥ (ಗರ್ಭಿಣಿಯರು ಅವರವರ ಸ್ಥಾನಗಳಿಗೆ ಬರಬಹುದು. ಅಂದರೆ ಈ ನಂತರ ಗರ್ಭಿಣಿ ಸ್ತ್ರೀಯರು ಶ್ರವಣವನ್ನು ಮಾಡಬಹುದು.)

ತಾ॥ ಆತ್ಮವೆಂದು ನಾವು ಯಾರನ್ನು ಉಪಾಸಿಸುತ್ತಿದ್ದೇವೆಯೋ, ಆ ಆತ್ಮ ಎಂತಹವನು? ಯಾವುದರಿಂದ ರೂಪವನ್ನು ನೋಡುತ್ತಿರುವನೋ, ಯಾವುದರಿಂದ ಶಬ್ದವನ್ನು ಕೇಳುತ್ತಿದ್ದಾನೋ, ಯಾವುದರಿಂದ ವಾಸನೆಯನ್ನು ಗ್ರಹಿಸುತ್ತಿದ್ದಾನೋ, ಯಾವುದರಿಂದ ಬಾಯಿಂದ ಮಾತನಾಡುತ್ತಿ-ದ್ದಾನೋ, ಯಾವುದರಿಂದ ರುಚಿ ಅರುಚಿಯೆಂದು ತಿಳಿಯುತ್ತಾನೋ (ಅವನ ಆತ್ಮವು) ಯಾವ ಕಾರಣದಿಂದ ವಾಕ್ಕನ್ನು ವಿವರಿಸುತ್ತಿದ್ದಾನೋ, ಯಾವ ಕಾರಣದಿಂದ ಮಧುರಮಧುರೇತರ ವಸ್ತುಗಳನ್ನು ಗುರುತಿಸುತ್ತಿದ್ದಾನೆಯೋ, ಅಂತಹ ಶ್ರುತಿ ಪ್ರತಿಪಾದಿತ ಆತ್ಮದಲ್ಲಿ, ನಿನ್ನ ಆತ್ಮ ಯಾರು?

**ಮಂ.ಶ್ಲೋ.॥ ಯದೇತದ್ಧೃದಯಂ ಮನಶ್ಚೈತತ್ । ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ। ಸರ್ವಾಣ್ಯೇವೈ ತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ ॥ 2 (31)**

ತಾ॥ ಈ ಹೃದಯ, ಈ ಮನಸ್ಸು, ಈ ಚೇತನತ್ವ, ಈಶ್ವರತ್ವ, ಸಮಸ್ತ ವಿವೇಕ, ಸದ್ಜ್ಞಾನ, ಶಾಸ್ತ್ರಜ್ಞಾನ, ಸಕಲವನ್ನು ಅರಿತಂತಹ ಜ್ಞಾನ, ಧೈರ್ಯ, ಮನನ, ಮನೋಧಾರ್ಢ್ಯ, ಸ್ಮರಣೆ, ರೂಪಾದಿಗಳನ್ನು ವಿಕಲ್ಪವಾಗಿ ಹೊಂದುವುದು, ನಿಶ್ಚಯ, ಪ್ರಾಣವೃತ್ತಿ, ಆಸೆ, ಸ್ವಾಧೀನತೆ, ಎನ್ನುವುದೆಲ್ಲವೂ ಪ್ರಜ್ಞಾನದ ಹೆಸರುಗಳೇ, ನಾಮಗಳೇ ಆಗುತ್ತವೆ.

**ಮಂ.ಶ್ಲೋ.॥ ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇದೇವಾ ಇಮಾನಿ ಚ ಪಂಚಮಹಾಭೂತಾನಿ ಪೃಥಿವೀವಾಯುರಾಕಾಶಆಪೋಜ್ಯೋತೀಂಷೀತ್ಯೇತಾನೀಮಾನಿ ಚಕ್ಷುದ್ರಮಿಶ್ರಾಣೀವ।**

**ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜರಾಯುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ ಕಿಂಚೇದಂ ಪ್ರಾಣಿ ಜಂಗಮಮಂ ಚ। ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ ಪ್ರಜ್ಞಾ ನೇತ್ರಂ ಪ್ರಜ್ಞಾನ್ ಪ್ರತಿಷ್ಠಿತತ್ । ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ; ಪ್ರಜ್ಞಾನಂ ಬ್ರಹ್ಮ॥ 3(32)**

ತಾ॥ ಆತನೇ ಬ್ರಹ್ಮ. ಆತನೇ ಇಂದ್ರ, ಆತನೇ ಪ್ರಜಾಪತಿ. ಈ ದೇವತೆಗಳೆಲ್ಲರೂ ಆತನೇ. ಭೂಮಿ, ಜಲ, ಅಗ್ನಿ, ವಾಯು, ಆಕಾಶವೆನ್ನುವ ಪಂಚಭೂತಗಳು, ಅಲ್ಪವಾದ ಜಂತುಗಳು, ಬೀಜಗಳು, ಉಳಿದ ಸ್ಥಾವರ ಜಂಗಮಗಳು, ಅಂಡಜಗಳು, ಜರಾಯುಜಗಳು, ಸ್ವೇದಜಗಳು, ಉದ್ಭಿಜ್ಜಗಳು, ಕುದುರೆ, ಹಸು, ಆನೆ, ಮನುಷ್ಯ ಇವೇ ಅಲ್ಲದೆ ಜಂಗಮಗಳಾದ ಪ್ರಾಣವಿಲ್ಲದಿರುವುದರಲ್ಲೂ, ಪಕ್ಷಿಗಳು ಮತ್ತಿತರ ಸ್ಥಾವರಗಳೆಲ್ಲವೂ ಆಪ್ರಜ್ಞಾನೇತ್ರವೇ! ಪ್ರಜ್ಞಾನದಿಂದಲೇ ವಿಕಸಿತವಾದಂತಹುಗಳು. ಲೋಕಗಳು ಪ್ರಜ್ಞಾನೇತ್ರವಾಗಿಯೇ ಇವೆ. ಪ್ರಜ್ಞಾನವನ್ನೇ ಆಧಾರವಾಗಿ ಹೊಂದಿರುವಂತಹುದು. ಪ್ರಜ್ಞಾನವೇ ಬ್ರಹ್ಮ. ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಬ್ರಹ್ಮವೇ. ಶಿಲಾದಿಸ್ಥಾವರಗಳು, ಪಕ್ಷಿಗಳು, ಮತ್ತಿತರ ಸಮಸ್ತ ಜೀವಿಗಳು ಆ ಬ್ರಹ್ಮವಾಗಿಯೇ ಇವೆ. ಸಮಸ್ತವೂ ಪ್ರಜ್ಞಾನೇತ್ರವು. ಸಮಸ್ತವೂ ಪ್ರಜ್ಞಾನದಲ್ಲಿ ಸ್ಥಾಪಿತವಾಗಿದೆ. ಲೋಕವೆಲ್ಲವೂ ಪ್ರಜ್ಞಾನೇತ್ರ ಪ್ರಜ್ಞೆಯೇ ಪ್ರತಿಷ್ಠಾಪಿಸಲ್ಪಟ್ಟಿರುವಂತಹುದು. ಪ್ರಜ್ಞಾನವೇ ಬ್ರಹ್ಮ.

**ಮಂ.ಶ್ಲೋ.॥ ಸ ಏತೇನ ಪ್ರಜ್ಞಾನಾತ್ಮನಾಽಸ್ಮಾಲ್ಲೋಕಾದುತ್ಕ್ರಮ್ಯಾಽಮುಷ್ಮಿನ್ ಸ್ವರ್ಗೇಲೋಕೇ, ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್; ಸಮಭವತ್; ಇತ್ಯೋಮ್॥4 (33)**

ತಾ॥ ಈ ಪ್ರಜ್ಞಾನ ರೂಪನಾದ ಪರಮಾತ್ಮನಿಂದ ಆ ವಾಮದೇವನು ಈ ಜಗತ್ತಿನಿಂದ ಹೊರಟು ಆ ಸ್ವರ್ಗಲೋಕದಲ್ಲಿ ಸಮಸ್ತವಾದ ಮನೋವಾಂಛೆಗಳನ್ನು ಅನುಭವಿಸಿ ಅಮೃತ ಸ್ವರೂಪನಾದನು. (ಐತರೇಯೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ಓಂ ವಾಙ್ಮೇಮನಸಿ ಪ್ರತಿಷ್ಠಿತಾ – ಮನೋಃ ಮೇಃ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಆಣೀಸ್ಥಃ – ಶ್ರುತಂ ಮೇಃ ಮಾ ಪ್ರಹಾಸೀಃ ಅನೇನಾಧಿತೇನ ಅಹೋಃರಾತ್ರಾನ್ ಸಂದಧಾಮಿ – ಋತಂ ವದಿಷ್ಯಾಮಿ – ಸತ್ಯಂ ವದಿಷ್ಯಾಮಿ – ತನ್ಮಾಮವತು – ತದ್ವಕ್ತಾರಮವತು –ಅವತುಮಾಂ ಅವತು–ವಕ್ತಾರಂ. ಓಂ ಶಾಂತಿಃ ಶಾಂತಿಃ ಶಾಂತಿಃ**





# ಛಾಂದೋಗ್ಯೋಪನಿಷತ್-1

(ಸಾಮವೇದಾಂತರ್ಗತ)

**ಶಾಂತಿ ಮಂತ್ರ॥ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋ ಬಲ ಮಿಂದ್ರಿಯಾಣಿಚ ಸರ್ವಾಣಿ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು; ತದಾತ್ಮನಿ: ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ**

**ಮಂ.ಶ್ಲೋ.॥ ಓಮ್, ಓಮಿತ್ಯೇತದಕ್ಷರಮುದ್ಗೀಥಮುಪಾಸೀತ, ಓ'ಮಿತ್ಯುದ್ಗಾಯತಿ ತಸ್ಯೋಪ ವ್ಯಾಖ್ಯಾನಮ್. (1) ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸಃ। ಆಪಾಮೋಷಧಯೋ ರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯ ವಾಗ್ರಸೋ, ವಾಚ ಋಗ್ರಸ ಋಚಸ್ಸಾಮ ರಸ ಸ್ಸಾಮ್ನ ಉದ್ಗೀಥೋ ರಸಃ (2) ಸ ಏಷ ರಸಾನಾಗ್ಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದುದ್ಗೀಥಃ ॥ (3)**

ತಾ॥ ಓಂ ಎನ್ನುವ ಅಕ್ಷರವೇ ಉದ್ಗೀಥ. ಓಂಕಾರವನ್ನು ಉಪಾಸಿಸಬೇಕು. ಇದು ಪ್ರಣವದ ವಿವರಣೆ. ಈ ಸಮಸ್ತ ಸೃಷ್ಟಿಯಲ್ಲಿನ ಸಾರ ಪೃಥಿವಿ. ಪೃಥಿವಿ ರಸಮಯವಾಗಿದೆ. ಜಲವು ಭೂಮಿಯ ಸಾರ. ಓಷಧಗಳು ಜಲದ ಸಾರ. ಪುರುಷನು ಓಷಧಗಳ ಸಾರ. ವಾಕ್ಕು ಪುರುಷನ ಸಾರ. ಋಕ್ಕು, ಋಗ್ವೇದ ಮಂತ್ರಗಳು ವಾಕ್ಸಾರವಾಗಿದೆ. ಸಾಮವು ಸಾಮವೇದ ಮಂತ್ರವೂ ಋಕ್ಕುಗಳ ಸಾರ. ಓಂಕಾರವು ಸಾಮವೇದದ ಸರ್ವಸ್ವವಾಗಿದೆ. ಈ ಓಂಕಾರವೇ ಸಮಸ್ತಕ್ಕೂ ಸಾರಭೂತವಾಗಿ ಸರ್ವೋತ್ಕೃಷ್ಟವಾಗಿದೆ. ಸಾರಗಳಲ್ಲಿ ಎಂಟನೆಯದಾದ ಓಂಕಾರವು ಪರಮಾತ್ಮನಲ್ಲಿರಲು ಸಮರ್ಥವಾಗಿದೆ.

**ಮಂ.ಶ್ಲೋ.॥ ಕತಮಾ ಕತಮರ್ಕತಮತ್ಕತಮತ್ಸಾಮ ಕತಮಃ ಕತಮ ಉದ್ಗೀಥ ಇತಿ ವಿಮೃಷ್ಟಂ ಭವತಿ। (4) ವಾಗೇವ ಋಕ್ ಪ್ರಾಣಸ್ಸಾಮೋಮಿತ್ಯೇತದಕ್ಷರಮುದ್ಗೀಥಸ್ತದ್ವಾ ಏತನ್ಮಿಥುನಂ ಯದ್ವಾಕ್ಚ ಪ್ರಾಣಶ್ಚರ್ಕ್ಚ ಸಾಮ ಚ(5) ತದೇತನ್ಮಿಥುನಮೋಮಿತ್ಯೇತಸ್ಮಿನ್ನಕ್ಷರೇ ಸಂಸೃಜ್ಯತೇ, ಯದಾವೈ ಮಿಥುನೌ ಸಮಾಗಚ್ಛತ ಆಪಯತೋ ವೈ ತಾವನ್ಯೋನ್ಯಸ್ಯ ಕಾಮಮ್॥ (6)**

ತಾ॥ ಋಕ್ ಎಂದರೆ ಯಾವುದು? ಸಾಮವ್ಯಾವುದು? ಉದ್ಗೀಥವೆಂದರೆ ಏನು? ಎನ್ನುವ ವಿಷಯವನ್ನೆಲ್ಲ ವಿವರಿಸಲಾಗಿದೆ. ವಾಕ್ಕೇ ಋಕ್ಕು, ಪ್ರಾಣವೇ ಸಾಮ. ಓಂಕಾರವೇ ಉದ್ಗೀಥ. ಇದೇ ಸೇರುವಿಕೆ-ಮಿಥುನ-.ಋಕ್ಕು ಸ್ಥಾನವಾದ ವಾಕ್ಕು ಮತ್ತು ಸಾಮದ ಸ್ಥಾನವಾದ ಪ್ರಾಣ - ಈ ಎರಡರ ಒಟ್ಟುಗೂಡುವಿಕೆಯೇ ಮಿಥುನ. ಓಂಕಾರದಲ್ಲಿ ಈ ಮಿಥುನ ಸಂಯೋಗವಾಗುವುದು. ಹೇಗೆಂದರೆ ಪ್ರಕೃತಿ ಪುರುಷರ ಸಮಾಗಮದಂತೆಯೇ ಪರಸ್ಪರೇಚ್ಛೆ ಪೂರ್ಣವಾಗುವುದು.

**ಮಂ.ಶ್ಲೋ.॥ ಆಪಯಿತಾ ಹವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರ -ಮುದ್ಗೀಥಮುಪಾಸ್ತೇ (7) ತದ್ವಾ ಏತದನುಜ್ಞಾಕ್ಷರಂ ಯದ್ಧಿ ಕಿಂಚಾನುಜಾನಾತ್ಯೋ- ಮಿತ್ಯೇವ ತದಾಹ ಏಷಾ ಏವ ಸಮೃದ್ಧಿರ್ಯದನುಜ್ಞಾ ಸಮರ್ಧಯಿತಾ ಹವೈ ಕಾಮಾನಾಂ ಭವತಿ ಯ ಏತ ದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತೇ ॥ (8)**

ತಾ॥ ಹೀಗೆ ತಿಳಿದುಕೊಂಡು ಓಂಕಾರೋಪಾಸನೆಯನ್ನು ಮಾಡಿದಾಗ ಮಾಡುವವನು ಸರ್ವ ಅಭೀಷ್ಟಗಳನ್ನು ಹೊಂದುವನು. ಲೋಕದಲ್ಲಿ ಯಾವುದಕ್ಕಾದರೂ "ಓಂ" ಎಂದೇ ಅನುಜ್ಞೆ ಅನುಮತಿ ಪಡೆಯುವುದರಿಂದ ಇದಕ್ಕೆ ಅನುಜ್ಞಾಕ್ಷರವೆಂದು ಸಹ ಹೇಳುತ್ತಾರೆ. ಅನುಜ್ಞೆ ಪಡೆದಾಗ ಮನುಷ್ಯನು ಓಂ ಎಂದು ಹೇಳುತ್ತಾನೆ. ಅನುಜ್ಞೆಯಿಂದ ವೃದ್ಧಿಯಾಗುತ್ತಾನೆ. ಆದ್ದರಿಂದ ಇದಕ್ಕೆ ಸಂವೃದ್ಧಿಯೆಂದು ಹೆಸರು. ಈ ರೀತಿಯಾಗಿ ಗ್ರಹಿಸಿದ ಯಾವ ವಿದ್ವಾಂಸನು ಓಂಕಾರವನ್ನು ಉಪಾಸಿಸುವನೋ ಅಂತಹವನಿಗೆ ಸರ್ವವಾಂಛೆಗಳು ನೆರವೇರುತ್ತಿರುತ್ತವೆ.

**ಮಂ.ಶ್ಲೋ.॥ ತೇನೇಯಂ ತ್ರಯೀ ವಿದ್ಯಾವರ್ತತೇ ಓಮಿತ್ಯಾಶ್ರಾವಯತ್ಯೋಮಿತಿ ಶಂ ಸತ್ಯೋ- ಮಿತ್ಯುದ್ಗಾಯತ್ಯೇತಸ್ಯೈವಾಕ್ಷರಸ್ಯಾವಚಿತ್ಯೈ ಮಹಿಮ್ನಾ ರಸೇನ । (9) ತೇನೋಭೌ ಕುರುತೋಯಶ್ಚೈತದೇವಂ ವೇದ ಯಶ್ಚ ನ ವೇದ। ನಾನಾ ತು ವಿದ್ಯಾ ಚಾವಿದ್ಯಾಚ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತೀತಿ ಖಲ್ವೇತಸ್ಯೈವಾಕ್ಷರಸ್ಯೋಪವ್ಯಾಖ್ಯಾನಂ ಭವತಿ॥ (10)**

ತಾ॥ ಆ ಓಂಕಾರದೊಂದಿಗೆ ಈ ತ್ರಯೀ ವಿದ್ಯೆಯ ಪ್ರವೃತ್ತಿ ಉಂಟಾಗುತ್ತದೆ. ಓಂ ಎಂಬ ಅಧ್ವರ್ಯನು ಆ ಶ್ರವಣ ಕರ್ಮ (ಋಗ್ವೇದ) ಮಾಡುವನು. ಹಾಗೂ ಹೋತೃವು (ಹೋತ) ಓಂ ಎಂದು ಶಂಸನ ಕರ್ಮ (ಯಜುರ್ವೇದ) ಮಾಡುವನು. ಮತ್ತು ಉದ್ಗಾತನು ಸಾಮಗಾನವನ್ನು ಮಾಡುವನು. ಈ ಅಕ್ಷರದ ಮಹಿಮೆಯಿಂದಲೇ ಸರ್ವಕರ್ಮಗಳು ಪ್ರವರ್ತಿಸುತ್ತಿರುತ್ತವೆ. ಈ ಓಂಕಾರ ರಹಸ್ಯ(ವು)ವನ್ನು ತಿಳಿದುಕೊಂಡವನು ತಿಳಿಯದವನು ಇಬ್ಬರೂ ಕರ್ಮ ಮಾಡುವರು. ಜ್ಞಾನಯುಕ್ತ ಕರ್ಮಗಳು, ಜ್ಞಾನರಹಿತಕರ್ಮಗಳು ಬೇರೆ ಬೇರೆಯಾಗಿವೆ. ಜ್ಞಾನದೊಂದಿಗೆ ಶ್ರದ್ಧೆಯಿಂದ ಆಚರಿಸುವ ಕರ್ಮವೇ ವೀರ್ಯವಂತವಾದುದು. ಇದು ಓಂಕಾರದ ವ್ಯಾಖ್ಯಾನ.

## ಪ್ರಥಮ ಪ್ರಪಾಠಕ - ದ್ವಿತೀಯ ಖಂಡ

**ಮಂ.ಶ್ಲೋ.॥ ದೇವಾಸುರಾ ಹ ವೈ ಯತ್ರ ಸಂಯೇತಿರೇ ಉಭಯೇ ಪ್ರಾಜಾಪತ್ಯಾಸ್ತದ್ಧದೇವಾ ಉದ್ಗೀಥ ಮಾಜಹ್ರುಂ ರಸೇನೈನಾನಭಿಭವಿಷ್ಯಾಮ ಇತಿ। (1) ತೇಹ ನಾಸಿಕ್ಯಂ ಪ್ರಾಣಮುದ್ಗೀಥ ಮುಪಾಸಾಞ್ಚಕ್ರಿರೇ ತಗ್ಂಹಾ ಸುರಾಃ ಪಾಪ್ಮನಾ ವಿವಿಧುಃ ತಸ್ಮಾತ್ತೇನೋಭಯಂ ಜಿಘ್ರತಿ ಸುರಭಿ ಚ ದುರ್ಗನ್ಧಿ ಚ ಪಾಪ್ಮನಾ ಹ್ಯೇಷ ವಿದ್ಧಃ ॥ (2)**

ತಾ॥ ಪ್ರಜಾಪತಿ ಪುತ್ರರಾದ ದೇವಾಸುರರು ಉಭಯರನ್ನು ಒಂದೊಮ್ಮೆ ತಮ್ಮಲ್ಲಿ ತಾವು ವೈರವನ್ನು ಬೆಳೆಸಿಕೊಂಡು ಯುದ್ಧ ಮಾಡತೊಡಗಿದರು. ಅಸುರರನ್ನು ಜಯಿಸಬೇಕೆಂದು

ದೇವತೆಗಳು ಉದ್ಗೀಥೋಪಾಸನೆಯನ್ನು ಓಂಕಾರೋಪಾಸನೆಯನ್ನು ಮಾಡಿದರು. ದೇವತೆಗಳು ಘ್ರಾಣೇಂದ್ರಿಯದಲ್ಲಿರುವ ಪ್ರಾಣವನ್ನು ಅವಲಂಬಿಸಿರುವ ಉದ್ಗೀಥೆಯನ್ನು ಉಪಾಸಿಸಿದರು. ಆದರೆ ಅಸುರರು ಅದನ್ನು ಪಾಪದಿಂದ ಪೀಡಿಸಿದರು. ಆದ್ದರಿಂದ (ಲೇ) ಘ್ರಾಣೇಂದ್ರಿಯಕ್ಕೆ ಸುಗಂಧ ದುರ್ಗಂಧಗಳೆನ್ನುವ ಮಿಶ್ರ ಕರ್ಮಗಳ ಅನುಭವವು ಉಂಟಾಗುವುದು.

ಮಂ.ಶ್ಲೋ.॥ **ಅಥ ಹ ವಾಚಮುದ್ಗೀಥಮುಪಾಸಾಞ್ಚಕ್ರಿರೇ ತಾಂಹಾ ಸುರಾಃ ಪಾಪ್ಮನಾ ವಿವಿಧುಃ ತಸ್ಮಾತ್ತಯೋಽಭಯಂ ವದತಿ ಸತ್ಯಂ ಚಾನೃತಂ ಚ ಪಾಪ್ಮನಾ ಹ್ಯೇಷಾ ವಿದ್ಧಾ। (3) ಅಥಹಾ ಚಕ್ಷುರುದ್ಗೀಥಮುಪಾಸಾಞ್ಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋ-ಭಯಂ ಪಶ್ಯತಿ ದರ್ಶನೀಯಂ ಚಾದರ್ಶನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಮ್। (4) ಅಥಹ ಶ್ರೋತ್ರಮುದ್ಗೀಥಮುಪಾಸಾಞ್ಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧು-ಸ್ತಸ್ಮಾತ್ತೇನೋಭಯಗ್ಂ ಶೃಣೋತಿ, ಶ್ರವಣೀಯಂಚಾಽಶ್ರವಣೀಯಂಚ ಪಾಪ್ಮನಾ ಹ್ಯೇತ-ದಿದ್ಧಮ್॥ (5)**

ತಾ॥ ದೇವತೆಗಳು ಕ್ರಮವಾಗಿ ವಾಕ್ಕು, ಚಕ್ಷುಸ್ಸು, ಶ್ರೋತ್ರ ಮತ್ತು ಮನಸ್ಸು ಇವುಗಳನ್ನು ಅವಲಂಬಿಸಿ ಉದ್ಗೀಥೋಪಾಸನೆಯನ್ನು ಮಾಡಿದರು. ಆದರೆ ಅಸುರರು ಈ ಎಲ್ಲವನ್ನೂ ಪಾಪದಿಂ-ದಲೇ ಅಟ್ಟಿಬಿಟ್ಟರು. ಅದು ಹೇಗೆಂದರೆ, ವಾಕ್ಕು ಸತ್ಯಾಸತ್ಯಗಳನ್ನು ಹೇಳುವುದು. ನೇತ್ರಗಳು ಸುರೂಪ, ಕುರೂಪಗಳನ್ನೊಳಗೊಂಡಿರುವ ಒಳ್ಳೆಯದು ಕೆಟ್ಟದ್ದನ್ನು ದರ್ಶಿಸುತ್ತದೆ. ಶ್ರೋತ್ರವು ಒಳ್ಳೆಯದು, ಕೆಟ್ಟದ್ದನ್ನು ಆಲಿಸುತ್ತದೆ. ಅದಕ್ಕೇ ಇವೆಲ್ಲವೂ ಪಾಪದಿಂದ ಪೆಟ್ಟು ತಿಂದಿದೆಯೆಂದು ತಿಳಿಯುವಂತಾಗಿದೆ.

ಮಂ.ಶ್ಲೋ.॥ **ಅಥಹ ಮನ ಉದ್ಗೀಥಮುಪಾಸಾಞ್ಚ ಕ್ರಿರೇತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋ-ಭಯಮ್ । ಸಙ್ಕಲ್ಪಯತೇ ಸಙ್ಕಲ್ಪನೀಯಂ ಚಾಸಙ್ಕಲ್ಪನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಮ್॥ (6) ಅಥ ಹ ಯ ಏವಾಯಂ ಮುಖ್ಯಃಪ್ರಾಣಸ್ತಮುದ್ಗೀಥಮುಪಾಸಾಞ್ಚಕ್ರಿರೇ ತಂಹಾಸುರಾ ಋತ್ವಾ ವಿದಧ್ವಂಸುರ್ಯಥಾಽಶ್ಮಾನಮಾಖಣಮೃತ್ವಾ ವಿಧ್ವಂಸೇತೈವಮ್॥(7)**

ತಾ॥ ಆಗ ದೇವತೆಗಳು ಮನಸ್ಸನ್ನು ಉದ್ಗೀಥವಾಗಿ ಉಪಾಸಿಸಿದರು. ಆದರೆ ಅಸುರರು ಮನಸ್ಸನ್ನು ಸಹಾ ಬಾಧಿಸಿದರು. ಮನಸ್ಸು ಪುಣ್ಯಪಾಪಗಳನ್ನು ಆಲೋಚಿಸುವುದರಿಂದ ರಾಕ್ಷಸರ ಬಾಧೆಗೆ ಗುರಿಯಾಯಿತು. ಕೊನೆಗೆ ದೇವತೆಗಳು ಮುಖ್ಯಪ್ರಾಣವನ್ನು ಆಧಾರವನ್ನಾಗಿ ಮಾಡಿಕೊಂಡು ಉದ್ಗೀಥೋಯೋಪಾಸನೆ ಮಾಡಿದರು. (ಬ್ರಹ್ಮನನ್ನು ಉಪಾಸಿಸಿದರು.) ಆಗ ರಾಕ್ಷಸರು (ದೇವತೆಗಳನ್ನು ಜಯಿಸಲಾರದೆ ಮಣ್ಣಿನ ಉಂಡೆಯು ಕಲ್ಲಿನೇಟಿನಿಂದ ನಾಶವಾಗುವಂತೆ ನಶಿಸಿಹೋದರು.)

ಮಂ.ಶ್ಲೋ.॥ **ಯಥಾಽಶ್ಮಾನಮಾಖಣಮೃತ್ವಾ ವಿಧ್ವಂಸತ ಏವಗ್ಂ ಹೈವ ಸವಿಧ್ವಂಸತೇ ಯ ಏವಂ ವಿದಿ ಪಾಪಂ ಕಾಮಯತೇ ಯಶ್ಚೈನಮಭಿದಾಸತಿ ಸ ಏಷೋಽಶ್ಮಾಖಣಃ। (8) ನೈವೈತೇ ನನುರಭಿನದುರ್ಗನ್ಧಿ ವಿಜಾನಾತ್ಯಪಹತಪಾಪ್ಮಾ ಹ್ಯೇಷ ತೇನ ಯದಶ್ನಾತಿ ಯತ್ಪಿಬತಿ ತೇನೇ-ತರಾನ್ ಪ್ರಾಣಾನವತ್ಯೇತಮು ಏವಾನ್ತತೋಽವಿತ್ತ್ವೋತ್ಕ್ರಾಮತಿವ್ಯಾದದಾತ್ಯೇವಾಸ್ತತ**

**ಇತಿ। (9) ತಂ ಹಙ್ಗೇರಾ ಉದ್ಗೀಥಮುಪಾಸನಾಞ್ಚಕ್ರ ಏತಮು ಏವಾಙ್ಗೇರಸಂ ಮನ್ಯಂತೇ, ಅಂಗಾನಾಂ ಯದ್ರಸಃ (10)**

ತಾ॥ ಮುಖ್ಯಪ್ರಾಣದ ವಿಷಯವಾಗಿ ಜ್ಞಾನವಿದ್ದವನಿಗೆ, ಪಾಪದೂಷಣೆ ಇಲ್ಲದವನಿಗೆ, ಅಪಕಾರ ಮಾಡಲು ಪ್ರಯತ್ನಿಸಿದವನು, ಕಲ್ಲು ಬಂಡೆಯ ಮೇಲೆ ಹೊಡೆಯಲಾದ ಮೃತ್ಪಿಂಡದಂತೆ ನಾಶವಾಗುವನು. ಏಕೆಂದರೆ, ಅವನು ನಿರ್ವಿಕಾರಿ. ಅದ್ವಿತೀಯವಾದ ಆತ್ಮಾನುಭವವನ್ನುಳ್ಳವನು, ಮನುಕುಲದಂತೆ ಅಚಲ, ಸುಗಂಧ, ದುರ್ಗಂಧ ಜ್ಞಾನವುಂಟಾಗಲು, ಜನರಿಗೆ ಮುಖ್ಯಪ್ರಾಣವು ಕಾರಣವಲ್ಲ. ಮುಖ್ಯ ಪ್ರಾಣವು ನಿಷ್ಪಾಪವಾದುದು. ಮಾನವನು ತನ್ಮೂಲವಾಗಿ ಭುಜಿಸುವ ಅನ್ನ-ದಿಂದಲೂ, ಕುಡಿಯುವ ನೀರಿನಿಂದಲೂ ಅನ್ಯವಾದ ಅಪಾನವ್ಯಾನಾದಿ ಪ್ರಾಣಗಳನ್ನು ರಕ್ಷಿಸುವನು. ಮರಣ ಸಮಯದಲ್ಲಿ ಅನ್ನಪಾನಗಳು ಲಭಿಸದಿರುವುದರಿಂದ ದೇಹವನ್ನು ತೊರೆದು ಪ್ರಾಣ ಹೋಗುವುದು. ಅಂಗೀರಸನೆನ್ನುವ ಋಷಿ ಪ್ರಾಣ ರೂಪೋದ್ಗೀಥೋಪಾಸನೆಯನ್ನು ಮಾಡಿದನು. ಪ್ರಾಣವು ದೇಹದಲ್ಲಿನ ಸಾರ ಸರ್ವಸ್ವವಾಗಿರುವುದರಿಂದ ಅದನ್ನು ಅಂಗೀರಸವೆನ್ನುವರು.

**ಮಂ.ಶ್ಲೋ.॥ ತೇನ ತಂ ಹ ಬೃಹಸ್ಪತಿರುದ್ಗೀಥಮುಪಾಸಾಞ್ಚಕ್ರ ಏತಮು ಏವ ಬೃಹಸ್ಪತಿಂ ಮನ್ಯನ್ತೇ ವಾಗ್ಘಿ ಬೃಹತೀ ತಸ್ಯಾ ಏಷ ಪತಿಃ (11) ತೇನ ತಂ ಹಾ ಯಾಸ್ಯ ಉದ್ಗೀಥಮುಪಾಸಾಞ್ಚಕ್ರ ಏತಮು ಏವಾಯಾಸ್ಯಂ ಮನ್ಯನ್ತ ಆಸ್ಯಾದ್ಯದಯತೇ (12) ತೇನ ತಂಹ ಬಕೋ ದಾಲ್ಭ್ಯೋ ವಿದಾಞ್ಚಕಾರ। ಸಹನೈಮಿಷೀಯಾಣಾಮುದ್ಗಾತಾ ಬಭೂವ ಸಹಸ್ಮೈಭ್ಯಃ ಕಾಮಾನಾಗಾಯತಿ । (13) ಆಗಾತಾ ಹವೈ ಕಾಮಾನಾಂ ಭವತಿ ಯ ಏತ ದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತ ಇತ್ಯಧ್ಯಾತ್ಮಮ್ ॥ (14)**

ತಾ॥ ಆದ್ದರಿಂದ ಬೃಹಸ್ಪತಿಯು ಆ ಉದ್ಗೀಥೋಪಾಸನೆ (ಪ್ರಾಣೋಪಾಸನೆ) ಮಾಡಿದ. ಈ ಪ್ರಾಣಕ್ಕೆ ಬೃಹಸ್ಪತಿಯೆಂದು ಹೇಳುವರು. ಏಕೆಂದರೆ ವಾಕ್ಕು ಬೃಹದ್ರೂಪವು (ದೊಡ್ಡದು) ಮತ್ತು ಪ್ರಾಣವು ಅದರ ಪತಿಯಾಗಿದೆ. ಆದ್ದರಿಂದ ಆಯಾಸ್ಯನೆಂಬ ಋಷಿ, ಈ ಉದ್ಗಿಥೋಪಾಸನೆ ಮಾಡಿದ. ಆದ್ದರಿಂದ ಪ್ರಾಣವನ್ನು ಆಯಾಸ್ಯವೆಂದು ಹೇಳುವರು. ಏಕೆಂದರೆ ಅದು ಮುಖ(ಬಾಯಿ)ಯಿಂದ ಹೊರಬೀಳುತ್ತದೆ. ದಾಲ್ಭ್ಯನ ಮಗನಾದ ಬಕುನೆನ್ನುವ ಋಷಿಯು ಉದ್ಗೀಥವು ಇಂತಹದೆಂದು ತಿಳಿದುಕೊಂಡನು. ಆತ ನೈಮಿಷಾರಣ್ಯದಲ್ಲಿರುವ ಋಷಿಗಳಿಗೆ ಉದ್ಗಾತನಾಗಿದ್ದ. ಆತನು ಅವರ ಇಚ್ಛಾಪೂರ್ತಿಗಾಗಿ ಉದ್ಗಾನವನ್ನು ಮಾಡಿದ. ಈ ಓಂಕಾರವೆನ್ನುವ ಉದ್ಗೀಥವನ್ನು ಜ್ಞಾನಮಯವಾಗಿ ಉಪಾಸಿಸುವವನು ಸರ್ವ-ವಾಂಛೆಗಳನ್ನು ಹೊಂದುತ್ತಾನೆ. ಇದು ಪ್ರಣವದಲ್ಲಿನ ಅಧ್ಯಾತ್ಮ, ಪರಬ್ರಹ್ಮಧಾರವಾಗಿರುವ ದೇಹಸ್ಥ ಪ್ರಾಣವೇ ಓಂಕಾರವೆಂದು ತಾತ್ಪರ್ಯ.

## ಪ್ರಥಮಃ ಪ್ರಪಾಠಕ – ತೃತೀಯಃ ಖಂಡ

**ಮಂ.ಶ್ಲೋ.॥ ಅಥಾಧಿದೈವತಂ ಯ ಏವಾಸೌ ತಪತಿ ತಮುದ್ಗೀಥಮುಪಾಸೀತೋದ್ಯನ್ವಾ ಏಷ ಪ್ರಜಾಭ್ಯ ಉದ್ಗಾಯತಿ ಉದ್ಯಂಸ್ತಮೋಭಯಮಪಹಸ್ತ್ಯಪಹನ್ತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ (1) ಸಮಾನ ಉ ಏವಾಯಂ ಚಾಸೌ ಚೋಷ್ಣೋsಯ ---**

**-ಮುಷ್ಣೋಽಸೌ ಸ್ವರ ಇತೀಮಮಾಚಕ್ಷತೇ ಸ್ವರ ಇತಿ ಪ್ರತ್ಯಾಸ್ವರ ಇತ್ಯಮುಂ ತಸ್ಮಾದ್ವಾ ಏತಮಿಮಮಮುಂಚೋದ್ಗೀಥಮುಪಾಸೀತ ॥ (2)**

ತಾ॥ ಈಗ ಉದ್ಗೀಥದಲ್ಲಿನ ಅಧಿದೈವಿಕ ರೂಪೋಪಾಸನೆಯನ್ನು ಹೇಳಲಾಗುತ್ತಿದೆ. ತಪಿಸುವಂತೆ ಮಾಡುವ ಈ ಸೂರ್ಯನನ್ನು ಉದ್ಗೀಥವನ್ನಾಗಿ ಉಪಾಸಿಸಬೇಕು. ಈ ಸೂರ್ಯನುದಯಿಸಿ ಸಮಸ್ತ ಜನರಿಗಾಗಿ ಉದ್ಗಾನವನ್ನು ಮಾಡುತ್ತಿದ್ದಾನೆ. ಅಂಧಕಾರ ಭಯವನ್ನು ಹೋಗಲಾಡಿಸುತ್ತಿರುವನು. ಇದನ್ನು ತಿಳಿದವನು ಅಂಧಕಾರ ಭಯವನ್ನು ಹೋಗಲಾಡಿಸುತ್ತಾನೆ. ಈ ಪ್ರಾಣವು ದೇಹದಲ್ಲಿರುವ ಉದ್ಗೀಥ. ಲೋಕದ್ರಷ್ಟನಾದ ಸೂರ್ಯನು ಸಹಾ ಉದ್ಗೀಥವೇ. ಈ ಎರಡೂ ಸಮಾನವಾಗಿವೆ. ಗುಣಸಾದೃಶ್ಯದಲ್ಲಿ ಈ ಎರಡೂ ಒಂದೇ. ಇದೂ ಶಾಖವುಳ್ಳದ್ದು. ಅದೂ ಶಾಖವುಳ್ಳದ್ದು ಈ ಪ್ರಾಣಕ್ಕೆ "ಸ್ವರ"ವೆಂದು ಹೆಸರು. ಆ ಸೂರ್ಯನಿಗೆ, "ಸ್ವರ ಪ್ರತ್ಯಾಸ್ವರ"ವೆಂದು ಹೆಸರು. ಆದ್ದರಿಂದ ಪ್ರಾಣವು ಮತ್ತು ಸೂರ್ಯನು ಈ ಎರಡರಲ್ಲೂ ಎರಡು ರೂಪಗಳಲ್ಲಿಯೂ ಉದ್ಗೀಥೋಪಾಸನೆ ಮಾಡಬೇಕು.

**ಮಂ.ಶ್ಲೋ.॥ ಅಥ ಖಲು ವ್ಯಾನಮೇವೋದ್ಗೀಥಮುಪಾಸೀತ ಯದ್ವೈ ಪ್ರಾಣಿತಿ ಸಪ್ರಾಣೋ ಯದಪಾನಿತಿ ಸೋಽಪಾನಃ । ಅಥ ಯಃ ಪ್ರಾಣಾಪಾನಯೋಸ್ಸನ್ಧಿಃ ಸ ವ್ಯಾನೋ ಯೋ ವ್ಯಾನಸ್ಸಾ ವಾಕ್ । ತಸ್ಮಾದಪ್ರಾಣನ್ನನಪಾನನ್ವಾಚಮಭಿವಾಹರತಿ । (3) ಯಾ ವಾಕ್ಸರ್ತ್ಕಸ್ಮಾದ ಪ್ರಾಣನ್ನನಪಾನನ್ನೃಚಮಭಿವ್ಯಾಹರತಿ ಯರ್ತ್ಕತ್ಸಾಮ ತಸ್ಮಾದಪ್ರಾಣನ್ನನಪಾನಸ್ಸಾಮಗಾಯತಿ ಯತ್ಸಾಮ ಸ ಉದ್ಗೀಥಸ್ತಸ್ಮಾದಪ್ರಾಣನನ್ನಪಾನನ್ನುದ್ಗಾಯತಿ॥ (4)**

ತಾ॥ ಇನ್ನು ವ್ಯಾನ ರೂಪ ಉದ್ಗೀಥೋಪಾಸನೆಯನ್ನು ಮಾಡಬೇಕು. ಪ್ರಾಣಿಯು ಹೊರಕ್ಕೆ ಬಿಡುವಂತಹ ವಾಯುವಿಗೆ ಪ್ರಾಣವೆಂದೂ, ಒಳಕ್ಕೆ ಸೆಳೆದುಕೊಳ್ಳುವ ವಾಯುವಿಗೆ ಅಪಾನವೆಂದೂ. ಈ ಎರಡರ ಸಂಧಿಯೇ ವ್ಯಾನ ವಾಯು. ವ್ಯಾನವಾಯು ವಾಕ್ಕು. ಆದ್ದರಿಂದ ಉಚ್ವಾಸ ನಿಶ್ವಾಸ ಕ್ರಿಯೆಗಳನ್ನು ತಡೆದುನಿಲ್ಲಿಸಿ ಉಸಿರನ್ನು ಬಿಗಿಹಿಡಿದೇ ಮಾತನಾಡಬೇಕು.

ವಾಕ್ಕೇ ಋಕ್ಕು. ಆದ್ದರಿಂದಲೇ ಉಸಿರು ಆಡಿಸದೆಯೇ ಋಕ್ಕುಗಳನ್ನು ಹೇಳುವುದು. ಋಕ್ಕೇ ಸಾಮ, ಆದ್ದರಿಂದ ಶ್ವಾಸೋಚ್ವಾಸಗಳನ್ನು ಮಾಡದೆಯೇ ಮಾನವನು ಸಾಮಗಾನವನ್ನು ಮಾಡುವನು. ಸಾಮವೇ ಉದ್ಗೀಥ. ಆದ್ದರಿಂದ ಉಸಿರಾಡದೆಯೇ ಮನುಷ್ಯನು ಉದ್ಗಾನವನ್ನು ಮಾಡುವನು.

**ಮಂ.ಶ್ಲೋ.॥ ಅತೋ ಯಾನ್ಯನ್ಯಾನಿ ವೀರ್ಯವನ್ತಿ ಕರ್ಮಾಣಿ ಯಥಾಽಗ್ನೇರ್ಮನ್ಥನಮಾಜೇಸ್ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಗ್ಂ ಸ್ತಾನಿ ಕರೋತ್ಯೇತಸ್ಯ ಹೇತೋರ್ವ್ಯಾನ ಮೇವೋದ್ಗೀಥಮುಪಾಸೀತ । (5) ಅಥ ಖಲೂದ್ಗೀಥಾಕ್ಷರಾಣ್ಯುಪಾಸೀತೋದ್ಗೀಥ ಇತಿ ಪ್ರಾಣ ಏವೋತ್ಪ್ರಾಣೇನ ಹ್ಯುತ್ತಿಷ್ಠತಿ ವಾಗ್ಗೀರ್ವಾಚೋಹ ಗಿರ ಇತ್ಯಾಚಕ್ಷತೇಽನ್ನಂಥಮನ್ನೇಹೇದಂ ಸರ್ವಂ ಸ್ಥಿತಮ್ । (6) ದ್ಯೌರೇವೋದನ್ತರಿಕ್ಷಂ ಗೀಃ ಪೃಥಿವೀಥ ಮಾದಿತ್ಯೇವೋದ್ವಾಯುರ್ಗೀರಗ್ನಿಸ್ಥಂ ಸಾಮವೇದ ಏವೋದ್ಯಜುರ್ವೇದೋ ಗೀಃ ಋಗ್ವೇದಸ್ಥಂ ದುಗ್ಧೇಸ್ಮೈ ವಾಗ್ದೋಹಂ ಯೋ ವಾಚೋ ದೋಹಃ ಅನ್ನವಾನನ್ನಾದೋ ಭವತಿ ಯ ಏತಾನ್ಯೇವಂ ವಿದ್ವಾನುದ್ಗೀಥಾಕ್ಷರಾಣ್ಯುಪಾಸ್ತ ಉದ್ಗೀಥ ಇತಿ ॥ (7)**

ತಾ॥ ಇದೇ ಅಲ್ಲದೆ, ಕಟ್ಟಿಗೆ ತುಂಡುಗಳನ್ನು ಉಜ್ಜಿ ಮಥಿಸುವುದು. ಓಡುವುದು, ದೃಢವಾದ ಧನುಸ್ಸನ್ನು ಎತ್ತಿ ಬಗ್ಗಿಸುವುದು. ಇತ್ಯಾದಿ ಬಲಪ್ರಯೋಗ ಕಾರ್ಯಗಳಲ್ಲಿ ಮಾನವನು ಪ್ರಾಣವನ್ನು ಬಳಸದೆಯೇ ಉಸಿರು ಬಿಗಿ ಹಿಡಿದೇ ಮಾಡುವನು. ಆದ್ದರಿಂದ ವ್ಯಾನವಾಯುರೂಪದಲ್ಲಿಯೇ ಉದ್ಗೀಥವನ್ನು ಉಪಾಸಿಸಬೇಕು. ಇದು ಉದ್ಗೀಥವೆಂದು, ಉದ್ಗೀಥಾಕ್ಷರಗಳಲ್ಲಿ ಉಪಾಸಿಸಬೇಕು. ಪ್ರಾಣವೇ 'ಉತ್' ಏಕೆಂದರೆ, ಪ್ರಾಣದಿಂದಲೇ ಮನುಷ್ಯನು ಮೇಲಕ್ಕೇಳುವನು ವಾಕ್ಕೇ 'ಗೀ' ವಾಕ್ಕನ್ನೇ 'ಗೀರ್' ಎಂದು ಹೇಳುವರು. ಅನ್ನವೇ 'ಥಮ್' ಏಕೆಂದರೆ ಅನ್ನಾಧಾರದಿಂದಲೇ ಎಲ್ಲವೂ ನಿಂತಿರುವುದು. ದ್ಯುಲೋಕವೇ 'ತ್' (ವಾಯು) ಆಕಾಶವೇ 'ಗೀಃ' ಅಗ್ನಿಯೇ 'ಥಂ' ಸಾಮವೇದವೇ 'ಉತ್' ಯಜುರ್ವೇದವೇ 'ಗೀಃ' ಋಗ್ವೇದವೇ 'ಥಮ್' ಋಗ್ವೇದಾದಿಗಳ ಅಭ್ಯಾಸವು ತಕ್ಕ ರೀತಿಯಲ್ಲಿ ಫಲವನ್ನೀಯುತ್ತದೆ. ಉದ್ಗೀಥಾಕ್ಷರಗಳ ಜ್ಞಾನವಿರುವ ಉಪಾಸಕನು, ಅನ್ನವನ್ನು ಹೊಂದಿರು-ವಂತಹವನು. ಅನ್ನವನ್ನು ಉಪಭೋಗಿಸುವಂತಹವನಾಗುತ್ತಾನೆ. (ಉಪಾಸನೆಯ ವಿಧಾನಗಳು = ಉಪಾಸನಾ ದೃಷ್ಟಿ; ಉತ್, ಗಿಥ; ಪ್ರಾಣದೃಷ್ಟಿ; ಪ್ರಾಣ, ವಾಕ್ಕು, ಅನ್ನ; ಲೋಕದೃಷ್ಟಿ; ದ್ಯುಲೋಕ, ಅಂತರಿಕ್ಷ, ಪೃಥಿವಿ; ದೇವದೃಷ್ಟಿ; ಆದಿತ್ಯ, ವಾಯು, ಅಗ್ನಿ; ವೇದ ದೃಷ್ಟಿ; ಸಾಮ, ಯಜುಸ್ಸು, ಋಕ್ಕು)

ಮಂ.ಶ್ಲೋ.॥ **ಅಥ ಖಲ್ವಾಶೀಸ್ಸಮೃದ್ಧಿರುಪಸರಣಾನೀತ್ಯುಪಾಸೀತ ಯೇನ ಸಾಮ್ನಾಸ್ತೋಷ್ಯನ್ಸ್ಯಾತ್ತತ್ಸಾ-ಮೋಪಧಾವೇತ್ । (8) ಯಸ್ಯಾಮೃಚಿ ತಾಮೃಚಂ ಯದಾರ್ಷೇಯಂ ತಮೃಷಿಂ ಯಾಂ ದೇವತಾಮಭಿಷ್ಟೋಷ್ಯನ್ಸ್ಯಾತ್ತಾಂ ದೇವತಾಮುಪಧಾವೇತ್ । (9) ಯೇನಚ್ಛಂದಸಾಸ್ತೋಷ್ಯ-ನ್ಸ್ಯಾತ್ತಚ್ಛಂದ ಉಪಧಾವೇದ್ಯೇನಸ್ತೋಮೇನಸ್ತೋಷ್ಯಮಾಣಸ್ಯಾಃತ್ತಗ್ಂ ಸ್ತೋಮ-ಮುಪಧಾವೇತ್ । (10)**

ತಾ॥ ಇನ್ನು ಇಷ್ಟಕಾಮ್ಯಾ ಸಿದ್ಧಿಗಾಗಿ ಉಪಾಸಿಸಬೇಕು. ಯಾವ ಯಾವ ಸಾಮಗಳಿಂದ ಉದ್ಗಾತನು ಸ್ತೋತ್ರ ಮಾಡುವನೋ, ಆಯಾ ಸಾಮಗಳ ಉಪಾಸನೆಯನ್ನು ಮಾಡಬೇಕು. ಯಾವ ಋಕ್ಕುಗಳಲ್ಲಿ ಆ ಸಾಮವಿರುವುದೋ, ಆ ಋಕ್ಕಿನ ಕರ್ತನಾದ ಋಷಿಯನ್ನು, ಅಧಿಷ್ಠಾನ ದೇವತೆಯನ್ನು ಧ್ಯಾನ ಮಾಡಬೇಕು. ಆ ನಾಮದ ಛಂದಸ್ಸನ್ನು, ಅದರ ಮಂತ್ರ ಸ್ವರೂಪವನ್ನು ಉಪಾಸಿಸಬೇಕು.

ಮಂ.ಶ್ಲೋ.॥ **ಯಾಂ ದಿಶಮಭಿಷ್ಟೋಷ್ಯನ್ಸ್ಯಾತ್ತಾಂ ದಿಶಮುಪಧಾವೇತ್ । (11) ಆತ್ಮಾನಮನ್ತತ ಉಪಸೃತ್ಯ ಸ್ತುವೀತ ಕಾಮಂ ಧ್ಯಾಯನ್ನಪ್ರಮತ್ತೋಽಭ್ಯಾಶೋ ಹ ಯದಸ್ಮೈ ಸಕಾಮಸ್ಸಮೃಧ್ಯೇತ ಯತ್ಕಾಮಃ ಸ್ತುವೀತೇತಿ ಯತ್ಕಾಮಃಸ್ತುವೀತೇತಿ ॥ (12)**

ತಾ॥ ಉದ್ಗಾತನು ಯಾವ ದಿಕ್ಕನ್ನು ಸ್ತುತಿಸುತ್ತಿರುವನೋ, ಆ ದಿಕ್ಕನ್ನು ಧ್ಯಾನ ಮಾಡಬೇಕು. ನಂತರ ತನ್ನ ಗೋತ್ರವರ್ಣಾಶ್ರಮಾದಿಗಳನ್ನು ಉಚ್ಚರಿಸಿ, ಧ್ಯಾನ ಮಾಡಬೇಕು. ತನ್ನ ವಾಂಛೆಗಳನ್ನು ಸ್ಮರಿಸುತ್ತಾ, ತಪ್ಪುಗಳು ಉಂಟಾಗದಂತೆ, ಧ್ಯಾನ ಮಾಡಬೇಕು. ಉದ್ಗಾತನು ಯಾವ ಕಾಮನೆಗಳನ್ನು ಕುರಿತು ಸ್ತೋತ್ರಗೈಯುತ್ತಾನೋ, ಆ ಕಾಮನೆಗಳು (ಅಭೀಷ್ಟಗಳು) ಆತನಿಗೆ ಕೂಡಲೇ ಸಿದ್ಧಿಸುತ್ತವೆ. ಸ್ವರವರ್ಣೋಚ್ಚಾರಣೆ ಮುಂತಾದವುಗಳಲ್ಲಿ ಪ್ರಮಾದ ಬಾರದಂತೆ ಏಕಾಗ್ರಚಿತ್ತದೊಂದಿಗೆ ಗಾನರೂಪ-ವಾಗಿ ಸ್ತೋತ್ರ ಮಾಡಬೇಕು.

# ಪ್ರಥಮ ಪ್ರಪಾಠಕಃ - ಚತುರ್ಥಃ ಖಂಡ

**ಮಂ.ಶ್ಲೋ.॥ ಓಮಿತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಮ್। (1) ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಂ ಸ್ತೇ ಛನ್ದೋಭಿರಚ್ಛಾದಯನ್ಯ -ದೇಭಿರಚ್ಛಾದಯಗ್^ಂ ಸ್ತಚ್ಛನ್ದಸಾಂಛಸ್ತ್ವಮ್। (2) ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇದೇವಂ ಪರ್ಯಪಶ್ಯದೃಚಿಸಾಮ್ನಿಯಜುಷಿ । ತೇನುವಿದಿತ್ವೋರ್ಧ್ವಾ ಋಚಸ್ಸಾಮ್ನೋಯಜುಷಃ ಸ್ವರಮೇವ ಪ್ರಾವಿಶನ್॥ (3)**

ತಾ॥ "ಓಂ" ಎನ್ನುವ ಅಕ್ಷರವನ್ನು ಉಪಾಸಿಸಬೇಕು. ಓಂ ಎಂದು ದೀರ್ಘವಾಗಿ ಗಾನ ಮಾಡಬೇಕು. ಓಂಕಾರದ ವ್ಯಾಖ್ಯಾನವೇ ಇದು. ದೇವತೆಗಳು ಮರಣಕ್ಕೆ ಭಯಪಟ್ಟು ತ್ರಯೀ ವಿದ್ಯೆಗಳಾದ ಋಗ್ಯಜುಸ್ಸಾಮ ಮಂತ್ರಗಳನ್ನು ಆಶ್ರಯಿಸಿ ವೇದ ಛಂದಸ್ಸುಗಳಿಂದ ಆಚ್ಛಾದಿಸಲ್ಪಟ್ಟರು. ಆ ವೇದಮಂತ್ರಗಳೊಂದಿಗೆ ಕರ್ಮಾನುಷ್ಠಾನಗಳನ್ನು ಮಾಡಿದಂತಹವರಾಗಿ, ತಮ್ಮನ್ನು ತಾವು ಮರೆತು, ಪರಮಾತ್ಮ ತತ್ತ್ವವನ್ನು ಅರಿಯಲಾರದೆ ಹೋದರು. ವೇದಗಳಿಗೆ ಛಂದಸ್ಸುಗಳೆಂದು ಹೆಸರು. ಮೀನುಗಳನ್ನು ನೀರಿನಲ್ಲಿ ಸ್ಪಷ್ಟವಾಗಿ ನೋಡುವಂತೆ, ಮೃತ್ಯುದೇವತೆಯು, ದೇವತೆ-ಗಳೆಲ್ಲರನ್ನೂ ಋಗ್ಯಜುಸ್ಸಾಮ ಮಂತ್ರಗಳಿಂದ ನೋಡಿದಳು. ಈ ವಿಷಯವನ್ನು ದೇವತೆಗಳು ಗ್ರಹಿಸಿ ವೇದೋಕ್ತ ಕರ್ಮಗಳಿಗಿಂತ ಉತ್ತಮವಾದ ಓಂಕಾರವನ್ನು ಆಶ್ರಯಿಸಿದರು.

**ಮಂ.ಶ್ಲೋ.॥ ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾತಿ ಸ್ವರತ್ಯೇವಂ ಸಾಮೈವಂ ಯಜುರೇಷ ಉ ಸ್ವರೋಯದೇತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭಯಾಅಭವನ್ (4) ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ ಸ್ವರಮಮೃತಮಭಯಂ ಪ್ರವಿಶತಿ ತತ್ ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ ॥ (5)**

ತಾ॥ ಋಗ್ವೇದವನ್ನು ಅಧ್ಯಯನ ಮಾಡುವಾಗ ಓಂ ಎಂದು ಹೆಚ್ಚಿನ ಆದರದಿಂದ ಹೇಳಿರಿ. ಅದೇ ರೀತಿಯಾಗಿ ಯಜುರ್ವೇದ ಸಾಮವೇದಗಳನ್ನು ಓಂ ಎನ್ನುವ ಗಾನದಿಂದ ಪ್ರಾರಂಭಿಸಿರಿ. ಈ ಓಂಕಾರವೇ ಸರ್ವವೂ ಅಕ್ಷರವೂ, ಅಮೃತವೂ, ಅಭಯಗಳಾಗಿವೆ. ಈ ಓಂಕಾರವನ್ನಾಶ್ರಯಿಸಿ ದೇವತೆಗಳು ಅಮೃತ ಸ್ವರೂಪರಾದರು. ಅಭಯ ಸ್ವರೂಪರಾದರು. ಯಾವ ವಿದ್ವಾಂಸನು ಈ ರೀತಿಯಾಗಿ ಅಮೃತವಾದ, ಅಭಯಪ್ರದವಾದ ಓಂಕಾರವನ್ನು ಉಪಾಸಿಸುತ್ತಿರುವನೋ, ಆತ ದೇವತೆಗಳಂತೆಯೇ ಅಮೃತತ್ವವನ್ನು ಹೊಂದುವನು.

# ಪ್ರಥಮ ಪ್ರಪಾಠಕ _ ಪಂಚಮಃ ಖಂಡ

**ಮಂ.ಶ್ಲೋ.॥ ಅಥ ಖಲು ಯ ಉದ್ಗಿಥಸ್ಸಪ್ರಣವೋ ಯಃ ಪ್ರಣವಸ್ಸ ಉದ್ಗೀಥ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ । (1) ಏತಮು ಏವಾಹಮಭ್ಯಗಾಸಿಷಂ**

ತಸ್ಮಾನ್ಮಮತ್ವಮೇಕೋಽಸೀತಿ ಮಾ ಕೌಷೀತಕಿಃ ಪುತ್ರಮುವಾಚ. ರಶ್ಮೀಂ ಸ್ತ್ವಂ ಪರ್ಯಾವರ್ತಯಾದ್ಬಹವೋ ವೈ ತೇ ಭವಿಷ್ಯನ್ತೀತ್ಯಧಿದೈವತಮ್ । (2) ಅಥಾಧ್ಯಾತ್ಮಂ ಯ ಏವಾಯಂ ಮುಖ್ಯಃಪ್ರಾಣಸ್ತಮುದ್ಗೀಥಮುಪಾಸೀತೋಮಿತಿ ಹ್ಯೇಷ ಸ್ವರನ್ನೇತಿ ॥ (3) ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮತ್ವಮೇಕೋಽಸೀತಿ ಹ ಕೌಷೀತಕಿಃ ಪುತ್ರ-ಮುವಾಚ ಪ್ರಾಣಂ ಸ್ತ್ಯಂಭೂಮಾನಮಭಿಗಾಯತಾದ್ಬಹವೋ ಮೇ ಭವಿಷ್ಯಂತೀತಿ। (4) ಅಥ ಖಲು ಯ ಉದ್ಗೀಥಸ್ಸ ಪ್ರಣವೋ ಯಃ ಪ್ರಣವ ಸ್ಸ ಉದ್ಗೀಥ ಇತಿ ಹೋತೃಷದನಾದ್ಧೈ-ವಾಪಿದುರುದ್ಗೀಥಮನುಸಮಾಹರತೀತ್ಯನುಸಮಾಹರತೀತಿ (5)

ತಾ॥ ಪ್ರಣವವೇ ಉದ್ಗೀಥ, ಉದ್ಗೀಥವೇ ಪ್ರಣವ. ಪ್ರಕಾಶಿಸುವ ಭಾನುವೇ ಉದ್ಗೀಥ ಮತ್ತು ಪ್ರಣವ. ಸೂರ್ಯನು ಓಂಕಾರ ಜಪದೊಂದಿಗೆ ಸಂಚರಿಸುತ್ತಿದ್ದಾನೆ. ಸೂರ್ಯನು ತನ್ನ ಪುತ್ರನಾದ ಕೌಷೀತಕಿ ಮಹರ್ಷಿಗೆ ಹೀಗೆ ಹೇಳಿದನು. "ನಾನು ಪ್ರಣವ ಗಾನವನ್ನು ಮಾಡುವ ರೀತಿಯಲ್ಲೇ ನೀನೂ ಮಾಡು. ನನ್ನ ಕಿರಣಗಳನ್ನು ಉದ್ಗೀಥವಾಗಿ ಭಾವಿಸು" ದೇವತೆಗಳು ಮಾಡುವ ಪ್ರಣವಗಾನವು (ಧ್ಯಾನವು) ಇದೇ. ಅಧ್ಯಾತ್ಮವಾಗಿ ಶರೀರಕ್ಕೆ ಸಂಬಂಧಿಸಿದ ಉಪಾಸನೆ, ಬಾಯಿಂದ ಉಚ್ಛರಿಸುವ ಪ್ರಣವ ಗಾನವೇ ಉದ್ಗೀಥವೆನ್ನುವ ಪ್ರಾಣ. ಕೌಷೀತಕಿ ಮಹರ್ಷಿಯು ಪ್ರಾಣವನ್ನು ಪುತ್ರನನ್ನಾಗಿ ಭಾವಿಸಿ ಪ್ರಣವೋಪಾಸನೆಯನ್ನು ಮಾಡಿದ. "ನಾನು ಇನ್ನೂ ಪುತ್ರನೆಂದೆನಿಸಿಕೊಂಡಿದ್ದೇನೆ" ಎಂದು ಭಾವಿಸಿ ಪ್ರಾಣವು, ಉದ್ಗೀಥಗಾನವನ್ನು ಮಾಡಿತು. ಈಗ ಉದ್ಗೀಥಗಾನವೇ ಪ್ರಣವ ಗಾನ. ಪ್ರಣವವೇ ಉದ್ಗೀಥ. ಈ ರೀತಿಯಾಗಿ ಭಾವಿಸಬೇಕು. ಈ ರೀತಿಯಾಗಿ ಭಾವಿಸಿ ಗಾನವನ್ನು ಮಾಡಿದುದರಿಂದ, ತಪ್ಪುಗಳು ಉಂಟಾದಾಗ ಹೋತೃವು ಬಂದು ಸರಿಪಡಿಸುತ್ತಾನೆ. ದೋಷಗಳು ಉಂಟಾಗುವುದಿಲ್ಲ.

## ಪ್ರಥಮಃ ಪ್ರಪಾಠಕ – ಷಷ್ಠಃ ಖಂಡ

ಮಂ.ಶ್ಲೋ.॥ ಇಯಮೇವರ್ಗಗ್ನಿಸ್ಸಾಮತದೇತದೇತಸ್ಯಾಮೃಚ್ಯಧ್ಯೂಢಂ ಸೋಮ ತಸ್ಮಾ ದೃಚ್ಯಧ್ಯೂಢಂ ಸಾಮ ಗೀಯತೇ ಇಯಮೇವ ಸಾಽಗ್ನಿ ರಮಸ್ತತ್ಸಾಮ। (1) ಅನ್ತರಿಕ್ಷಮೇವರ್ಗ್ವಾಯುಸ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮಗೀ-ಯತೇಽನ್ತರಿಕ್ಷಮೇವ ಸಾ ವಾಯು ರಮಸ್ತತ್ಸಾಮಃ (2) ದ್ಯೌರೇವರ್ಗಾದಿತ್ಯ ಸ್ಸಾಮ ತದೇತ ದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ದ್ಯೌರೇ-ವಸಾಽದಿತ್ಯೋಽಮಸ್ತತ್ಸಾಮ।(3) ನಕ್ಷತ್ರಾಣ್ಯೇವರ್ಕ್ಚನ್ದ್ರಮಾಸ್ಸಾಮ ತದೇತ ದೇತಸ್ಯಾ-ಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚನ್ದ್ರಮಾ ಅಮಸ್ತತ್ಸಾಮ ॥ (4)

ತಾ॥ ಭೂಮಿ ಋಗ್ವೇದ, ಅಗ್ನಿ ಸಾಮವೇದ. ಈ ಸಾಮವು 'ಋಕ್'ನ ಮೇಲೆ ಆಧಾರವಾಗಿದೆ. 'ಸಾ' ಎಂದರೆ ಭೂಮಿ. 'ಅಮ' ಎಂದರೆ ಅಗ್ನಿ. ಈ ರೀತಿಯಾಗಿ 'ಸಾಮ'ವಾಗುತ್ತದೆ. ಆಕಾಶವು 'ಋಕ್', ವಾಯುವು ಸಾಮ. ಈ ಸಾಮವು 'ಋಕ್' ಮೇಲೆ ಆಧಾರವಾಗಿದೆ.– ಈ ಋಕ್ ಮೇಲೆ

ಆಧಾರವಾದ ಸಾಮವನ್ನು ಗಾನ ಮಾಡಲಾಗುತ್ತದೆ. ಸಾ ಎಂದರೆ ಆಕಾಶ. ಅಮ ಎಂದರೆ ವಾಯು. ಈ ಎರಡೂ ಸೇರಿ ಸಾಮ. ಸ್ವರ್ಗವು ಋಕ್; ಸೂರ್ಯನು ಸಾಮ. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿದೆ. ಆದ್ದರಿಂದ ಆ ಋಕ್ಕಿನ ಮೇಲೆ ಸಾಮವು ಗಾನವನ್ನು ಮಾಡಲ್ಪಡುತ್ತದೆ. ಸಾ ಅಂದರೆ ಸ್ವರ್ಗ, ಅಮ ಎಂದರೆ ಸೂರ್ಯ. ಈ ಎರಡರ ಸೇರ್ಪಡೆಯೆ ಸಾಮ. ನಕ್ಷತ್ರಗಳು ಋಕ್, ಚಂದ್ರನು ಸಾಮ. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿದೆ. ಆದ್ದರಿಂದ ಆ ಋಕ್ಕಿನ ಆಧಾರದಿಂದ ಗಾನವನ್ನು ಮಾಡಲಾಗುತ್ತದೆ. ಸಾ ಎಂದರೆ ನಕ್ಷತ್ರಗಳು. ಅಮ ಎಂದರೆ ಚಂದ್ರ. ಈ ಎರಡೂ ಸೇರಿ ಸಾಮ.

**ಮಂ.ಶ್ಲೋ.॥ ಅಥ ಯದೇತದಾದಿತ್ಯಸ್ಯ ಶುಕ್ಲಂ ಭಾಸ್ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮಗೀಯತೇ। (5) ಅಥ ಯದೇವೈತದಾದಿತ್ಯಸ್ಯ ಶುಕ್ಲಂ ಭಾಸ್ಸೈವ ಸಾऽಥಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮಾಥ ಯ ಏಷೋऽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ। (6) ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯಾದಿತಿನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ (7) ತಸ್ಯರ್ಕ್ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಸ್ತಸ್ಮಾತ್ತ್ವೇವೋದ್ಗಾತೈ ತಸ್ಯ ಹಿಗಾತಾಸ ಏಷ ಯೇಚಾಮುಷ್ಮಾತ್ಪರಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚೇತ್ಯಧಿದೈವತಮ್ ॥ (8)**

ತಾ॥ ಸೂರ್ಯದೇವನ ಬೆಳ್ಳಗಿನ ಕಾಂತಿ 'ಸಾ' ಕಪ್ಪನೆಯ ಕಾಂತಿ 'ಮಾ', ಈ ಎರಡೂ ಬೆರೆತಾಗ ಸಾಮವಾಗುತ್ತದೆ. ಸೂರ್ಯನಲ್ಲಿ ಪ್ರಕಾಶಿಸುವ ಪುರುಷನೇ ಹಿರಣ್ಮಯನು. ಆತ ಚಿನ್ನದ ಕೇಶಗಳಿಂದ, ಬಂಗಾರದ ಬಣ್ಣದಿಂದ ಬಂಗಾರದ ಉಗುರುಗಳಿಂದ ಸುವರ್ಣ ಪಕ್ಷಿಯಂತೆ ಕಾಣಿಸುವನು. ಆತನ ಕಣ್ಣುಗಳು ಕೆಂಪು ಬಣ್ಣದಿಂದ ಪುಂಡರೀಕದಂತೆ ಹೊಳೆಯುತ್ತಿರುವುದು. ಆತನ ಹೆಸರು 'ಉತ್' ಆತ ಎಲ್ಲ ಪಾಪಗಳನ್ನು ಹೋಗಲಾಡಿಸುತ್ತಾನೆ. ಈ ವಿಷಯವನ್ನು ತಿಳಿದವನು ಪಾಪಗಳಿಂದ ವಿಮುಕ್ತನಾಗುವನು. ಋಗ್ವೇದ, ಸಾಮವೇದಗಳು ಆ ಹಿರಣ್ಯಗರ್ಭನೇ. ಆತನೇ ಉದ್ಗೀಥ. ಹೋತೃವೇ (ಹೋತ) ಉದ್ಗೀಥ. ಹಿರಣ್ಯ ಗರ್ಭನೇ ಸೂರ್ಯನಿಗೆ ಮೇಲಿರುವ ಲೋಕಗಳನ್ನು, ಅಲ್ಲಿರುವವರ ಕೋರಿಕೆಗಳನ್ನು ಕಾಪಾಡುತ್ತಿರುವನು. ದೇವತೆಗಳೆಲ್ಲರೂ ಹಿರಣ್ಯ ಗರ್ಭನ ಮೇಲೆ ಆಧಾರವಾಗಿದ್ದಾರೆ. ಇದೇ ಅಧಿದೈವತ.

## ಪ್ರಥಮ ಪ್ರಪಾಠಕ – ಸಪ್ತಮ ಖಂಡ

**ಮಂ.ಶ್ಲೋ.॥ ಅಥಾಧ್ಯಾತ್ಮಂ ವಾಗೇವ ಋಕ್ಪ್ರಾಣಸ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮಗೀಯತೇ ವಾಗೇವ ಸಾ ಪ್ರಾಣೋऽಮಸ್ತತ್ಸಾಮ। (1) ಚಕ್ಷುರೇವರ್ಗಾತ್ಮಾ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ಚಕ್ಷುರೇವ ಸಾತ್ಮಾऽಮಸ್ತತ್ಸಾಮ। (2) ಶ್ರೋತ್ರಮೇವರ್ಙ್ಮನಃ ಸಾಮ**

**ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ಶ್ರೋತ್ರ -ಮೇವ ಸಾಮನೋಽಮಸ್ತತ್ಸಾಮ । (3)**

ತಾ॥ ಶರೀರಕ್ಕೆ ಸಂಬಂಧಿಸಿದ ಅಧ್ಯಾತ್ಮ ಧ್ಯಾನವು ವಾಕ್ಕು ಋಕ್ಕು; ಪ್ರಾಣವು ಸಾಮ. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿದೆ. ಆದ್ದರಿಂದ ಆ ಋಕ್ಕಿನ ಆಧಾರದಿಂದ ಸಾಮಗಾನವನ್ನು ಮಾಡಲಾಗಿದೆ. 'ಸಾ' ಎಂದರೆ ವಾಕ್ಕು. ಅಮ ಎಂದರೆ ಪ್ರಾಣ. ಈ ಎರಡು ಸೇರಿದರೆ ಸಾಮ. ಕಣ್ಣು ಋಕ್ಕು, ನೇತ್ರೇಂದ್ರಿಯವು ಸಾಮವು. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿರುವುದು. ಆದ್ದರಿಂದ ಆ ಋಕ್ಕಿನ ಆಧಾರದಿಂದ ಸಾಮಗಾನ ಮಾಡಲಾಗಿದೆ. ನೇತ್ರವು 'ಸಾ' ನೇತ್ರಾತ್ಮ 'ಅಮ' ಈ ಎರಡೂ ಸೇರಿದಾಗ ಸಾಮ. ಶ್ರೋತ್ರವು (ಕಿವಿಯು) ಋಕ್ಕು, ಮನಸ್ಸು ಸಾಮ. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿದೆ. ಕಿವಿಯು 'ಸಾ' ಮನಸ್ಸು 'ಅಮ' ಎರಡೂ ಸೇರಿದರೆ ಸಾಮ.

ಮಂ.ಶ್ಲೋ.॥ **ಅಥ ಯದೇತ ದಕ್ಷಶ್ಶುಕ್ಲಂ ಭಾಸ್ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮತದೇತ-ದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ। ಅಥ ಯದೇ -ವೈತದಕ್ಷ್ಣಂ ಶುಕ್ಲಂ ಭಾಸ್ಸೈವ ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮ (4) ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ತತ್ಸಾಮ ತದುಕ್ಥಂ ತದ್ಯಜುಸ್ತದ್ ಬ್ರಹ್ಮಾ ತಸ್ಯೈತಸ್ಯ ತದೇವರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ಯನ್ನಾಮ ತನ್ನಾಮ॥ (5)**

ತಾ॥ ಕಣ್ಣಿನ ಬಿಳಿಯ ಬಣ್ಣ ಋಕ್ಕು. ಕರಿಯ ಬಣ್ಣ ಸಾಮ. ಈ ಸಾಮವು ಆ ಋಕ್ಕಿನ ಮೇಲೆ ಆಧಾರವಾಗಿರುತ್ತದೆ. ಆ ಋಕ್ಕಿನ ಆಧಾರವಾಗಿಯೇ ಸಾಮಗಾನ ರಚಿತವಾಗಿದೆ. ಕಣ್ಣಿನ ಬಿಳಿಯ ಬಣ್ಣ 'ಸಾ' ಕಪ್ಪು ಬಣ್ಣ 'ಅಮ' ಈ ಎರಡೂ ಸೇರಿ 'ಸಾಮ'. ನೇತ್ರಗಳಲ್ಲಿ ವಾಸವಾಗಿರುವ ಪುರುಷನು ಋಕ್ಕು ಆತನೇ ಸಾಮ. ಆತನೇ ಉಕ್ಥ. ಆತನೇ ಯಜುಸ್ಸು, ಆತನೇ ವೇದಗಳು. ಈ ನೇತ್ರಗಳಲ್ಲಿ ವಾಸವಾಗಿರುವ ಪುರುಷನೇ ಆ ಸೂರ್ಯನಲ್ಲಿ ನಿವಸಿಸುವ ಪುರುಷ. ನೇತ್ರದಲ್ಲಿ ವಾಸವಾಗಿರುವವನ ಹೆಸರು, ಸೂರ್ಯನಲ್ಲಿ ವಾಸವಾಗಿರುವವನ ಹೆಸರೂ ಒಂದೇ ಆಗಿದೆ.

ಮಂ.ಶ್ಲೋ.॥ **ಸ ಏಷ ಯೇ ಚೈತಸ್ಮಾ ದರ್ವಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚೇತಿ ತದ್ಯ ಇಮೇ ವೀಣಾಯಾಂ ಗಾಯನ್ತ್ಯೇತಂ ತೇ ಗಾಯನ್ತಿ ತಸ್ಮಾ ತೇ ಧನಸನಯಃ। (6) ಅಥ ಯ ಏತದೇವಂ ವಿದ್ವಾನ್ಸಾಮಗಾಯತ್ಯುಭೌ ಸ ಗಾಯತಿ ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ಪರಾಞ್ಚಲೋಕಾಸ್ತಾಂಗ್ಂಶ್ಚಾಪ್ನೋತಿ ದೇವಕಾಮಾಂಶ್ಚ । (7) ಅಥಾನೇನೈವ ಯೇ ಚೈತಸ್ಮಾದರ್ವಾಞ್ಚೋಲೋಕಾಸ್ತಾಂಶ್ಚಾಪ್ನೋತಿ ಮನುಷ್ಯಕಾಮಾಂಶ್ಚ ತಸ್ಮಾದು ಹೈವಂ ವಿದುದ್ಗಾತಾ ಬ್ರೂಯಾತ್ । (8) ಕಂ ತೇ ಕಾಮಮಾಗಾಯಾನೀ-ತ್ಯೇಷ ಹ್ಯೇವ ಕಾಮಾ ಗಾನಸ್ಯೇಷ್ಟೇ ಯ ಏತದೇವಂ ವಿದ್ವಾಸ್ಸಾಮಗಾಯತಿ ಸಾಮ ಗಾಯತಿ॥ (9)**

ತಾ॥ ನೇತ್ರದಲ್ಲಿ ವಾಸಿಸುವ ಆ ಪುರುಷನೇ ಸರ್ವಲೋಕಗಳಿಗೂ ಪ್ರಭು, ಅಲ್ಲದೆ ಮಾನವರ ವಾಂಛಿತ ಪದಾರ್ಥಗಳಾಗಿದ್ದಾನೆ. ಯಾರು ಆ ದೇವನನ್ನು ವೀಣಾಗಾನದಿಂದ ಕೀರ್ತಿಸುತ್ತಿದ್ದಾರೋ ಅವರು ಸರ್ವಸಂಪತ್ತುಗಳನ್ನು ಹೊಂದುವರು. ಯಾರು ಆ ಪರಮಾತ್ಮನನ್ನು ಉದ್ಗೀಥದೇವರನ್ನಾಗಿ ತಿಳಿದುಕೊಂಡು ಸಾಮಗಾನ ಮಾಡುತ್ತಿದ್ದಾರೋ, ಅವರು ಎರಡು ವಿಧವಾದ ಗಾನವನ್ನು ಮಾಡಿದವರಾಗುತ್ತಾರೆ. ಆ ರೀತಿಯಾಗಿ ಗಾನ ಮಾಡಿದವರಿಗೆ ಸೂರ್ಯನಲ್ಲಿರುವ ಹಿರಣ್ಯಗರ್ಭನು, ದಿವ್ಯಲೋಕ ಪ್ರಾಪ್ತಿಯನ್ನು, ದಿವ್ಯ ಲೋಕ ಭೋಗಗಳನ್ನು ಪ್ರಸಾದಿಸುವನು. ಇದೇ ರೀತಿಯಾಗಿ, ನೇತ್ರಗಳಲ್ಲಿ ವಾಸಿಸುವ ಪುರುಷನು ಕೂಡಾ ದಿವ್ಯ ಲೋಕಗಳನ್ನು, ಮಾನವನು ಅನುಭವಿಸುವ ದಿವ್ಯ ಭೋಗಗಳನ್ನು ಪ್ರಸಾದಿಸುವನು. ಈ ಯಜ್ಞವನ್ನು ತಿಳಿದ (ಉದ್ಗಾತ) ಯಜಮಾನನು 'ಈ ಸಾಮಗಾನವನ್ನು ಮಾಡಿ ಯಾವ ಯಾವ ಭೋಗಗಳನ್ನು (ವಾಂಛೆಗಳನ್ನು) ಸಂಪಾದಿಸಿಕೊಳ್ಳಬೇಕು." ಎಂದು ಪ್ರಶ್ನಿಸುವನು. ಈ ಉದ್ಗಾತ ಈ ವಿಧವಾಗಿ ಸಾಮಗಾನವನ್ನು ಮಾಡಿ ವಾಂಛಿತಗಳನ್ನು ತೀರಿಸುವುದರಲ್ಲಿ ಪ್ರವೀಣನು. (ದೇವತೆಗಳಿಗೆ ಸಂಬಂಧಿಸಿದ ಉದ್ಗೀಥೋಪಾಸನೆಯನ್ನು ಇಲ್ಲಿ ಹೇಳಲಾಗಿದೆ.)

## ಪ್ರಥಮ ಪ್ರಪಾಠಕ – ಅಷ್ಟಮ ಖಂಡ

**ಮಂ.ಶ್ಲೋ.॥ ತ್ರಯೋ ಹೋದ್ಗಿಥೇ ಕುಶಲಾ ಬಭೂವುಶ್ಶಿಲಕಶ್ಶಾಲಾವತ್ಯಶ್ಚೈಕಿತಾಯನೋ ದಾಲ್ಭ್ಯಃ ಪ್ರವಾಹಣೋ ಜೈಬಲಿರಿತಿ ತೇ ಹೋಚುರುದ್ಗೀಥೇ ವೈ ಕುಶಲಾಃ ಸ್ಮೋ ಹನ್ತೋದ್ಗೀಥೇ ಕಥಾಂ ವದಾಮ ಇತಿ। (1) ತಥೇತಿ ಹಸಮುಪವಿವಿಶುಃ ಸಹ ಪ್ರವಾಹಣೋ ಜೈಬಲಿರುವಾಚ ಭಗವನ್ತಾವಗ್ರೇ ವದತಾಂ ಬ್ರಾಹ್ಮಣಯೋರ್ವದತೋಽರ್ವಾಚಂ ಶ್ರೋಷ್ಯಾಮೀತಿ॥ (2)**

ತಾ॥ ಪ್ರಾಚೀನ ಕಾಲದಲ್ಲಿ ಉದ್ಗೀಥಗಾವನ್ನು ನೈಪುಣ್ಯದಿಂದ ಮಾಡುವಂತಹ ಮಹರ್ಷಿಗಳು ಮೂವರಿದ್ದರು. ಶಾಲವತ್ಯನ ಪುತ್ರ ಶಿಲಕಮುನಿ, ದಾಲ್ಭ್ಯವಂಶೀಯನಾದ ಚೈಕಿತಾಯನ, ಮತ್ತು ಜೀಬಲ ಪುತ್ರನಾದ ಪ್ರವಾಹಣನು. ಆ ಮೂವರು ಮುನಿಗಳು ಈ ರೀತಿಯಾಗಿ ಹೇಳಿದರು. "ನಾವು ಉದ್ಗೀಥಗಾನದಲ್ಲಿ ಪ್ರವೀಣರು. ನೀವು ಅಂಗೀಕರಿಸಿದಲ್ಲಿ ಈ ವಿಷಯವಾಗಿ ನಾವು ಚರ್ಚೆಗೆ ಸಿದ್ಧ." ಹಾಗೆ ಅಂಗೀಕರಿಸಿದಾಗ ಆ ಮೂವರು ಮುನಿಗಳು ಆಸೀನರಾದರು. ಪ್ರವಾಹಣ ಜೈಬಲಿ ಹೀಗೆ ಹೇಳಿದ "ನೀವಿಬ್ಬರೂ ವಂದನೀಯರು. ಮೊದಲು ನೀವು ಎರಡು ಬ್ರಾಹ್ಮಣಗಳನ್ನು ಗಾನಮಾಡಿ, ನಾನು ಕಿವಿಗೊಟ್ಟು ಕೇಳುತ್ತೇನೆ."

**ಮಂ.ಶ್ಲೋ.॥ ಸಹಾ ಶಿಲಕಶ್ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚ ಹನ್ತ ತ್ವಾ ಪೃಚ್ಛಾನೀತಿ ಪೃಚ್ಛೇತಿ ಹೋವಾಚ । (3) ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ, ಸ್ವರಸ್ಯ ಕಾ ಗತಿರಿತಿ ಪ್ರಾಣ ಇತಿ ಹೋವಾಚ, ಪ್ರಾಣಸ್ಯ ಕಾ ಗತಿರಿತ್ಯನ್ನಮಿತಿ ಹೋವಾಚಾನ್ನಸ್ಯ ಕಾಗತಿರಿತ್ಯಾಪ ಇತಿ ಹೋವಾಚ । (4) ಅಪಾಂ ಕಾ ಗತಿರಿತ್ಯಸಾಲೋಕ ಇತಿ ಹೋವಾಚ, ಅಮುಷ್ಯ ಲೋಕಸ್ಯ ಕಾ ಗತಿರಿತಿ ಸ ಸ್ವರ್ಗಂಲೋಕಮತಿನಯೇದಿತಿ ಹೋವಾಚ ಸ್ವರ್ಗಂ ವಯಂ ಲೋಕಂ ಸಾಮಾಭಿಸಂಸ್ಥಾಪಯಾಮಃ ಸ್ವರ್ಗ ಸಂಸ್ತಾವಂ ಹಿ ಸಾಮೇತಿ ॥ (೫)***

ತಾ॥ ಆಗ ಶಿಲಕ ಶಾಲಪತ್ಯನು ಚೈಕಿತಾ ಯಾನದಾಲ್ಭ್ಯನೊಂದಿಗೆ ಹೇಳಿದ: "ನಿಮ್ಮ ಅನುಮತಿಯೊಂದಿಗೆ ನಾನು ಪ್ರಶ್ನಿಸುತ್ತೇನೆ." ಪ್ರಶ್ನಿಸಲು ಅಂಗೀಕಾರ ದೊರೆಯಿತು. ಶಿಲಕ: ಸಾಮದ ಸಾರವು ಯಾವುದು? ದಾಲ್ಭ್ಯನು ನುಡಿದ : ಸ್ವರ: ಶಿಲಕನ ಪ್ರಶ್ನೆ : ಸ್ವರದ ಸಾರವ್ಯಾವುದು? ದಾಲ್ಭ್ಯ: ಪ್ರಾಣ ಎಂದು ಹೇಳಿದ. ಶಿಲಕ: ಕೇಳಿದ: ಪ್ರಾಣದಲ್ಲಿನ ಸಾರವ್ಯಾವುದು? ದಾಲ್ಭ್ಯ ಉತ್ತರ ಕೊಟ್ಟ: ಆಹಾರ: ಅನ್ನ: ಶಿಲಕ: ಅನ್ನದೊಳಗಿನ ಸಾರವ್ಯಾವುದು? ದಾಲ್ಭ್ಯ: ಜಲ: ಶಿಲಕ: ಜಲದೊಳಗಿನ ಸಾರವೆಲ್ಲಿಯದು? ದಾಲ್ಭ್ಯ: ಸ್ವರ್ಗ(ದ್ದು); ಶಿಲಕ: ಸ್ವರ್ಗದ ಸಾರವೆಲ್ಲಿಯದು? ದಾಲ್ಭ್ಯ: ಸ್ವರ್ಗದಿಂದ ಎತ್ತಲೋ ತೆಗೆದುಕೊಂಡು ಹೋಗಲಾರದ ಸಾಮಗಾನ. ಸಾಮವನ್ನು ಸ್ವರ್ಗವೆಂದು ವರ್ಣಿಸಿದ್ದಾರೆ. ಸ್ವರ್ಗದಲ್ಲಿಯೇ ಸಾಮವನ್ನು ಹುಡುಕಬೇಕು.

**ಮಂ.ಶ್ಲೋ.॥ ತಂ ಹ ಶಿಲಕಶ್ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚಾ ಪ್ರತಿಷ್ಠಿತಂ ವೈ ಕಿಲ ತೇ ದಾಲ್ಭ್ಯ ಸಾಮಯಸ್ತ್ವೇತತರ್ಹಿ ಬ್ರೂಯಾನ್ಮೂರ್ಧಾತೇ ವಿಪತಿಷ್ಯತೀತಿ ಮೂರ್ಧಾತೇ ವಿಪತೇ -ದಿತಿ । (6)**

**ಹಸ್ತಾಽಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚಾಮುಷ್ಯ- ಲೋಕಸ್ಯ ಕಾ ಗತಿರಿತ್ಯಯಂ ಲೋಕ ಇತಿ ಹೋವಾಚಾಸ್ಯ ಲೋಕಸ್ಯ ಕಾಗತಿರಿತಿ ಸಪ್ರತಿಷ್ಠಾಂ ಲೋಕಮತಿನಯೇದಿತಿ ಹೋವಾಚ ಪ್ರತಿಷ್ಠಾಂ ವಯಂ ಲೋಕಂ ಸಾಮಾಭಿ ಸಂಸ್ಥಾಪಯಾಮಃ ಪ್ರತಿಷ್ಠಾ ಸಂಸ್ತಾವಂಹಿ ಸಾಮೇತಿ। (7)**

**ತಗ್ಂ ಮಾ ಪ್ರವಾಹಣೋ ಜೈಬಲಿರುವಾಚಾನ್ತವದ್ವೈ ಕಿಲ ತೇ ಶಾಲಾವತ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾತೇ ವಿಪತಿಷ್ಯತೀತಿ ಮೂರ್ಧಾತೇ ವಿಪತೇದಿತಿ ಹಸ್ತಾಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚ ॥ (8)**

ತಾ॥ ಚೈಕಿತಾಯನನಾದ ದಾಲ್ಭ್ಯ ಮುನಿಗೆ ಶಾಲಾವತ್ಯನೆನ್ನುವ ಶಿಲಕಮುನಿ ಹೀಗೆ ಹೇಳಿದ: ನೀನು ಹೇಳಿದ ಸಾಮಗಾನದಲ್ಲಿ ದೋಷವಿದೆ. ಇದನ್ನು ಕೇಳಿದವರ್ಯಾರಾದರೂ ನಿನ್ನ ತಲೆ ಕೆಳಗೆ ಬೀಳಲೆಂದು ಹೇಳುವರು. ಓ ದಾಲ್ಭ್ಯಾ! ನಿನ್ನ ಶಿರಸ್ಸು ಈಗ ಕೆಳಗೆ ಬಿದ್ದುಬಿಡುವುದು ಎಂದು. (ಎಂದು ನುಡಿದಾಗ) ದಾಲ್ಭ್ಯನು: "ಭಗವನ್ ದಯವಿಟ್ಟು ನನಗೆ ನೀವು ವಿದ್ಯೆಯನ್ನು ಬೋಧಿಸುತ್ತೀರಾ? ಶಿಲಕ: ಕಲಿಸಿಕೊಡುವೆನು. ಕಲಿತುಕೊಳ್ಳುವವನಾಗು; ದಾಲ್ಭ್ಯ: ಸ್ವರ್ಗದ ಸಾರವ್ಯಾವುದು? ಶಿಲಕ: ಈ ಭೂಮಿ; ದಾಲ್ಭ್ಯ; ಈ ಭೂಮಿಯ ಸಾರಾಂಶವೆಲ್ಲಿಯದು? ಶಿಲಕ: ಈ ಸಾಮಗಾನವನ್ನು ಈ ಲೋಕದಿಂದ ಯಾರೂ ತೆಗೆದುಕೊಂಡು ಹೋಗಲಾರರು. ಸಾಮಗಾನವನ್ನು ಈ ಲೋಕದಲ್ಲಿಯೇ ಸಾಧಿಸಬೇಕು. ಸಾಮಗಾನ ಸಾರಾಂಶವೇ ಈ ಪೃಥವಿ. ಪ್ರವಾಹಣ ಜೈಬಲಿ ಈ ವಿಧವಾಗಿ ಹೇಳಿದ: "ಓ ಶಾಲಾವತ್ಯಾ! ನಿನ್ನ ಸಾಮಗಾನವು ಮತ್ತೊಂದು ರೀತಿಯಾಗಿದೆ. ಇದನ್ನು ಕೇಳಿದವರು ನಿನ್ನ ತಲೆ ಕೆಳಗೆ ಬೀಳಲಿ ಎನ್ನುವರು. ನಿನ್ನ ಶಿರಸ್ಸು ಕೆಳಗೆ ಬಿದ್ದುಬಿಡಬಹುದು. ಶಾಲಾವತ್ಯ : ಭಗವಂತಾ! ಈ ವಿದ್ಯಾಕ್ರಮವನ್ನು ನೀವೇ ನನಗೆ ಹೇಳಿಕೊಡಬೇಕು ಎಂದು ಪ್ರಾರ್ಥಿಸಿದ. ಜೈಬಲಿಮುನಿ ಹೇಳಿದ "ಹೇಳಿಕೊಡುತ್ತೇನೆ. ಕಲಿತುಕೊೋ."

## ಪ್ರಥಮ ಪ್ರಪಾಠಕ - ನವಮ ಖಂಡ

ಮಂ.ಶ್ಲೋ.॥ **ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹವಾ ಇಮಾನಿ ಭೂತಾ -ನ್ಯಾಕಾಶಾದೇವ ಸಮುತ್ಪದ್ಯಸ್ತ ಆಕಾಶಂ ಪ್ರತ್ಯಸ್ತಂ ಯನ್ತ್ಯಾಕಾಶೋ ಹ್ಯೇ ವೈಭ್ಯೋಜ್ಯಾಯಾನಾಕಾಶಃ ಪರಾಯಣಂ(1) ಸ ಏಷ ಪರೋವರೀಯಾನುದ್ಗೀಥಸ್ಸ ಏಷೋನನ್ತಃ ಪರೋವರೀಯೋಹಾಸ್ಯ ಭವತಿ ಪರೋವರೀಯಸೋ ಹ ಲೋಕಾಞ್ಜಯತಿ ಯ ಏತದೇವಂ ವಿದ್ವಾನ್ಪರೋವರೀಯಾಂ ಸಮುದ್ಗೀಥಮುಪಾಸ್ತೇ ॥ (2)**

ತಾ॥ ಶಾಲಾವತ್ಯ: ಈ ಲೋಕದಲ್ಲಿ ಸಾರಭೂತವಾದುದು ಯಾವುದು? ಪ್ರವಾಹಣ: ಆಕಾಶ. ಈ ಜೀವಿಗಳೆಲ್ಲರೂ ಆಕಾಶದಿಂದಲೇ ಹುಟ್ಟುತ್ತಿದ್ದಾರೆ. ಕೊನೆಗೆ ಆಕಾಶದಲ್ಲಿಯೇ ಲೀನವಾಗುತ್ತಿದ್ದಾರೆ. ಆಕಾಶ ಎಲ್ಲ ಭೂತಗಳಿಗಿಂತ ದೊಡ್ಡದು. ಮತ್ತು ಸರ್ವದಾ ಎಲ್ಲದಕ್ಕೂ ಆಧಾರವಾಗಿದೆ. ಉದ್ಗೀಥ ಗಾನವು ಎಲ್ಲಕ್ಕಿಂತ ಶ್ರೇಷ್ಠವಾದುದು, ಉತ್ತಮವಾದುದು. ಮತ್ತು ಇದು ಅನಂತವಾದುದು. ಈ ಉದ್ಗೀಥ ಗಾನವನ್ನು ಅರಿತವರು ಉತ್ತಮೋತ್ತಮ ಉದ್ಗೀಥವನ್ನೇ ಧ್ಯಾನಿಸುವರು. ಅಂತಹ ವಿದ್ವಾಂಸರು ಉತ್ತಮ ಜೀವನವನ್ನು ನಿರ್ವಹಿಸಿ, ಉತ್ತಮವಾದ ದಿವ್ಯಲೋಕಗಳನ್ನು ಹೊಂದುವರು. "ಆಕಾಶಸ್ತಲ್ಲಿಂಗಾತ್" ಎನ್ನುವ ಬ್ರಹ್ಮ ಸೂತ್ರಾಧಿಕರಣದಲ್ಲಿಯೂ ಸಹ ಇದರ ವಿವರಣೆಯಿದೆ.

ಮಂ.ಶ್ಲೋ.॥ **ತಂ ಹೈತಮತಿಧನ್ವಾ ಶೌನಕ ಉದರ ಶಾಣ್ಡಿಲ್ಯಾಯೋಕ್ತ್ವೋವಾಚ । ಯಾವತ್ತ ಏನಂ ಪ್ರಜಾಯಾಮುದ್ಗೀಥಂ ವೇದಿಷ್ಯನ್ತೇ ಪರೋವರೀಯೋ ಹೈಭ್ಯಸ್ತಾವದಸ್ಮಿನ್ಲೋಕೇ ಜೀವನಂ ಭವಿಷ್ಯತಿ । (3)ತಥಾಽಮುಷ್ಮಿನ್ಲೋಕೇ ಲೋಕ ಇತಿ ಸ ಯ ಏತದೇವಂ ವಿದ್ವಾನುಪಾಸ್ತೇ ಪರೋವರೀಯ ಏವ ಹಾ ಸ್ಯಾಸ್ಮಿನ್ ಲೋಕೇ ಇತಿ ಸ ಏತದೇವಂ ವಿದ್ವಾನುಪಾಸ್ತೇ ಪರೋವರೀಯ ಏವ ಹಾ ಸ್ಯಾಸ್ಮಿನ್ ಲೋಕೇ ಜೀವನಂ ಭವತಿ ತಥಾಽಮುಷ್ಮಿನ್ ಲೋಕೇ ಲೋಕ ಇತಿ ಲೋಕೇ ಲೋಕ ಇತಿ ॥ (4)**

ತಾ॥ ಶುನಕ ಪುತ್ರನಾದ ಅತಿಧನ್ವಮುನಿ, ಉದರಶಾಂಡಿಲ್ಯನಿಗೆ ಬೋಧಿಸಿ ಹೀಗೆ ಹೇಳಿದ: "ನಿಮ್ಮ ಶಿಷ್ಯರು ಉದ್ಗೀಥಗಾನವನ್ನು ಪರಂಪರೆಯಾಗಿ ಮಾಡಿದಷ್ಟು ಕಾಲ ಅವರ ಜೀವನ ಇತರರ ಜೀವನಕ್ಕಿಂತ ಉತ್ತಮೋತ್ತಮವಾಗಿ ಪ್ರಕಾಶಿಸುವುದು." ಮತ್ತು ಸ್ವರ್ಗ ಲೋಕದಲ್ಲಿಯೂ ಅವರ ಕೀರ್ತಿ ಪ್ರಕಾಶಿಸುವುದು. ಈ ರೀತಿಯಾಗಿ ತಿಳಿದುಕೊಂಡವರು ಈ ಲೋಕದಲ್ಲಿ ಮಾನ್ಯರಾಗುತ್ತಾರೆ. ಇತರ ಲೋಕಗಳಲ್ಲಿಯೂ ಸಹ ಪ್ರಕಾಶಿಸುವರು. (ಇದು ಉದ್ಗೀಥಗಾನ ನಿಮಿತ್ತ ಹೇಳಿದ ವಿಷಯ.)

## ಪ್ರಥಮ ಪ್ರಪಾಠಕ - ದಶಮ ಖಂಡ

ಮಂ.ಶ್ಲೋ.॥ **ಮಟಚೀಹ ತೇಷು ಕುರುಷ್ವಾಟಿಕ್ಯಾ ಸಹ ಜಾಯಯೋಷಸ್ತಿರ್ಹ ಚಾಕ್ರಾಯಣ ಇಭ್ಯಗ್ರಾಮೇ ಪ್ರದ್ರಾಣಕ ಉವಾಸ । (1) ಸ ಹೇಭ್ಯಂ ಕುಲ್ಮಾಷಾನ್ ಖಾದನ್ತಂ ಬಿಭಿಕ್ಷೇ ತಂ ಹೋವಾಚ,**

**ನೇತೋನ್ಯೇ ವಿದ್ಯಂತೇ ಯಚ್ಚ ಯೇ ಮ ಇಮ ಉಪನಿಹಿತಾ ಇತಿ । (2) ಏತೇಷಾಂ ಮೇ ದೇಹೀತಿ ಹೋವಾಚ ತಾನಸ್ಮೈ ಪ್ರದದೌ ಹನ್ತಾನುಪಾನಮಿತ್ಯುಚ್ಛಿಷ್ಟಂ ನೈಮೇ ಪೀತಂಸ್ಯಾದಿತಿ ಹೋವಾಚ॥ (3)**

ತಾ॥ ಕುರುದೇಶದಲ್ಲಿ ಬಿರುಗಾಳಿ, ಪ್ರವಾಹಗಳಿಂದಾಗಿ ಬೆಳೆಗಳೆಲ್ಲವೂ ಹಾಳಾಗಿಹೋದ ದಿನಗಳಲ್ಲಿ ಚಾಕ್ರಾಯಣನೆನ್ನುವ ಉಷಸ್ತಿ ಮುನಿಯು ಯೌವನವತಿಯಾದ ಪತ್ನಿಯೊಂದಿಗೆ ವಾಸವಾಗಿದ್ದ. ಅವರು ವಾಸಿಸುತ್ತಿದ್ದ ಚಿಕ್ಕ ಗ್ರಾಮವು ಮಾವಟಿಗರು ವಾಸಿಸುತ್ತಿದ್ದ ಗ್ರಾಮ. ಅದು ಬಡವರಿದ್ದ ಹಳ್ಳಿ. ಒಬ್ಬ ಮಾವಟಿಗನು ತೀರಾ ಕಳಪೆಯಾದ ಹುರುಳಿಯ ಉಸಲಿಯನ್ನು ಮೆಲ್ಲುತ್ತಿರಲು, ಅವನ ಬಳಿಗೆ ಉಷಸ್ತಿ ಮುನಿ ಹೋಗಿ ಅನ್ನವನ್ನು ಬೇಡಿದ. ಆಗ ಆ ಮಾವಟಿಗನು ಹೀಗೆ ಹೇಳಿದ: "ಈ ಹುರುಳಿಯ ಉಸಲಿಯಲ್ಲದೆ ಬೇರೇನೂ ಆಹಾರ ನನ್ನ ಬಳಿಯಿಲ್ಲ." "ಆ ಹುರುಳಿಯ ಉಸಲಿಯನ್ನೇ ಸ್ವಲ್ಪ ಕೊಡು" ಎಂದು ಮುನಿ ಹೇಳಿದ. ಮಾವಟಿಗನು ಸ್ವಲ್ಪ ಉಸಲಿಯನ್ನು ಕೊಟ್ಟು, ಎಂಜಲಾದ ನೀರನ್ನು ಕೂಡಾ ಕುಡಿಯಲು ನೀಡಿದ. "ನಾನು ಈ ಪಾನೀಯವನ್ನು ಕುಡಿಯುವುದಿಲ್ಲ." ಎಂದು ಉಷಸ್ತಿ ಮುನಿಯು ಹೇಳಿದ.

ಮಂ.ಶ್ಲೋ.॥ **ನಸ್ವಿದೇತೇಽಪ್ಯುಚ್ಛಿಷ್ಟಾ ಇತಿ ನವಾ ಅಜೀವಿಷ್ಯಮಿಮಾಗಖಾದನ್ನಿತಿ ಹೋವಾಚ ಕಾಮೋ ಮ ಉದಪಾನಮಿತಿ । (4) ಸಹ ಖಾದಿತ್ವಾಽತಿಶೇಷಾಂಜಾಯಾಯಾ ಅಜಹಾರಸಾಗ್ರ ಏವ ಸುಭಿಕ್ಷಾ ಬಭೂವ ತಾನ್ ಪ್ರತಿಗೃಹ್ಯ ನಿದಧೌ। (5) ಸಹ ಪ್ರಾತಃ ಸಞ್ಜಿಹಾನ ಉವಾಚ ಯದ್ಬ ತಾನ್ನಸ್ಯ ಲಭೇಮಹಿ ಲಭೇಮಹಿ ಧನಮಾತ್ರಾಂ ರಾಜಾಸೋ ಯಕ್ಷ್ಯತೇ ಸ ಮಾ ಸರ್ವೈರಾರ್ತ್ವಿಜ್ಯೈರ್ವೃಣೀತೇತಿ ॥ (6)**

ತಾ॥ "ಈ ಹುರುಳಿಯ ಉಸಲಿ ಆಹಾರವಲ್ಲವೇ? ಈ ಗುಗ್ಗರಿ (ಉಸಲಿ)ಯನ್ನು ತಿಂದಲ್ಲಿ ನಾನು ಜೀವಿಸಿರಲು ಸಾಧ್ಯ. ಇಲ್ಲವಾದಲ್ಲಿ ನಾನು ಬದುಕಿರಲಾರೆ. ಪಾನೀಯವು ಮಾತ್ರ ಸುಲಭವಾಗಿ ದೊರೆಯುವಂತಹುದಲ್ಲವೇ? ಎಂದು ಉಷಸ್ತಿ ಮುನಿ ಹೇಳಿದ. ಆ ಮುನಿಯು ಸ್ವಲ್ಪ ಉಸಲಿಯನ್ನು ತನ್ನ ಹೆಂಡತಿಗಾಗಿ ತೆಗೆದುಕೊಂಡು ಹೋದ. ಆ ಉಷಸ್ತಿ ಮುನಿ ಪತ್ನಿ ಭಿಕ್ಷೆ ಬೇಡುತ್ತಾ ಆಹಾರವನ್ನು ಸಂಪಾದಿಸುತ್ತಿದ್ದುದರಿಂದ ಗಂಡ ತಂದು ಕೊಟ್ಟ ಹುರುಳಿ ಗುಗ್ಗರಿಯನ್ನು ಜೋಪಾನವಾಗಿ ಎತ್ತಿಟ್ಟಳು. ಮಾರನೆಯ ದಿನ ಬೆಳಗ್ಗೆಯೇ ಉಷಸ್ತಿ ಮುನಿ ನಿದ್ರೆಯಿಂದೆದ್ದು ಹೀಗೆ ಹೇಳಿದ. "ಅಬ್ಬಾ! ಹೊಟ್ಟೆಗೆ ಮತ್ತಷ್ಟು ಆಹಾರ ಬಿದ್ದರೆ ಸ್ವಲ್ಪ ಹಣವನ್ನು ಸಂಪಾದಿಸುವೆನು. ಇಲ್ಲಿಗೆ ಸಮೀಪದಲ್ಲಿರುವ ರಾಜನು ಒಂದು ಯಜ್ಞವನ್ನು ಮಾಡುತ್ತಿದ್ದಾನೆ. ನನ್ನನ್ನು ಕೂಡಾ ಒಬ್ಬ ಋತ್ವಿಕ್ಕನಾಗಿ ಸ್ವೀಕರಿಸುತ್ತಾನೆ" ಎಂದ.

ಮಂ.ಶ್ಲೋ.॥ **ತಂ ಜಾಯೋವಾಚ ಹನ್ತ ಪತ ಇಮ ಏವ ಕುಲ್ಮಾಷಾ ಇತಿ ತಾನ್ ಖಾದಿತ್ವಾಽಮುಂ ಯಜ್ಞಂ ವಿತತಮೇಯಾಯ। (7) ತತ್ರೋದ್ಗಾತೃನಾಸ್ತಾವೇ ಸ್ತೋಷ್ಯಮಾಣಾ- --- ನುಪೋಪವಿವೇಶ ಸಹ ಪ್ರಸ್ತೋತಾರಮುವಾಚ। (8) ಪ್ರಸ್ತೋತರ್ಯಾ ದೇವತಾ ಪ್ರಸ್ತಾವ -ಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ । (9) ಏವಮೇವೋದ್ಗಾತಾರಮುವಾಚೋದ್ಗಾತರ್ಯಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇ-**

ದವಿದ್ವಾನುದ್ಗಾಸ್ಯಸಿ ಮೂರ್ಧಾತೇ ವಿಪತಿಷ್ಯತೀತಿ । (10) ಏವಮೇವ ಪ್ರತಿಹರ್ತಾರಮುವಾಚ ಪ್ರತಿಹರ್ತರ್ಯಾದೇವತಾ ಪ್ರತಿಹಾರಮನ್ವಾಯುತ್ತಾತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ತೇಹ ಸಮಾರತಾಸ್ತೂಷ್ಣೀಮಾಸಾಞ್ಚಕ್ರಿರೇ ॥ (11)

ತಾ॥ ಆಗ ಆತನ ಹೆಂಡತಿ ಜ್ಞಾಪಕ ಮಾಡಿಕೊಂಡು ತಾನು ಎತ್ತಿಟ್ಟಿದ್ದ ಹುರುಳಿ ಗುಗ್ಗರಿಯನ್ನು ಪತಿಗೆ ನೀಡಿದಳು. ಆ ಮುನಿಯು ಅದನ್ನು ಭುಜಿಸಿ ಯಜ್ಞವನ್ನು ಮಾಡುತ್ತಿದ್ದ ರಾಜನ ಬಳಿಗೆ ಹೋದ. ಅಲ್ಲಿ ಸ್ತೋತ್ರಗಳನ್ನು ಹಾಡುತ್ತಿದ್ದ ಋತ್ವಿಕರ ಬಳಿ ಉಷಸ್ತಿಯೂ ಸಹ ಕುಳಿತುಕೊಂಡ. ಅಲ್ಲಿ ಉಷಸ್ತಿಮುನಿ ಪ್ರಸ್ತೋತನೊಂದಿಗೆ ಹೀಗೆ ನುಡಿದ "ಓ ಪ್ರಸ್ತೋತನೇ, ಪ್ರಸ್ತಾವ ದೇವತೆಯನ್ನು ಸರಿಯಾಗಿ ತಿಳಿದುಕೊಳ್ಳದೆ, ಪ್ರಸ್ತಾವನೆಯನ್ನು ಗಾನ ಮಾಡಿದಲ್ಲಿ ನಿನ್ನ ಶಿರಸ್ಸು ಕೆಳಕ್ಕೆ ಬೀಳುತ್ತದೆ" ಅದೇ ರೀತಿ ಉದ್ಗಾತ ಋತ್ವಿಕ್ಕಿನೊಂದಿಗೆ ಹೀಗೆ ಹೇಳಿದ. "ಎಲೈ ಉದ್ಗಾತನೇ! ಉದ್ಗೀಥಗಾನ ದೇವತೆಯನ್ನು ಸರಿಯಾಗಿ ತಿಳಿದುಕೊಳ್ಳದೆ, ಉದ್ಗೀಥಗಾನ ಮಾಡಿದಲ್ಲಿ ನಿನ್ನ ಶಿರಸ್ಸು ಕೆಳಗೆ ಬೀಳುವುದು" ಅದೇ ವಿಧವಾಗಿ ಪ್ರತಿಹರ್ತ ಋತ್ವಿಕ್ಕನೊಂದಿಗೆ ಹೀಗೆ ಹೇಳಿದ. "ಎಲೈ ಪ್ರತಿಹರ್ತನೇ ಪ್ರತಿಹಾರ ದೇವತೆಯನ್ನು ಸರಿಯಾಗಿ ತಿಳಿದುಕೊಳ್ಳದೆ, ಪ್ರತಿಹಾರ ಗಾನವನ್ನು ಮಾಡಿದಲ್ಲಿ ನಿನ್ನ ಶಿರಸ್ಸು ಕೆಳಗುರುಳುವುದು" ಆಗ ಅಲ್ಲಿದ್ದವರೆಲ್ಲರೂ ಅವರವರ ಕರ್ತವ್ಯಗಳನ್ನು ನಿಲ್ಲಿಸಿ ಮೌನ ವಹಿಸಿದರು. (ಉಷಸ್ತಿಮುನಿಯು ಸಾಮಗಾನ ಪರಿಣತ. (ತನ್ನ ಅನುಮತಿ ಪಡೆಯದೆ ಪ್ರಸ್ತಾವನೆ-ಯನ್ನು ವಹಿಸಿದ್ದು ತಪ್ಪು ಎಂದು ತಿಳಿಯಪಡಿಸಿದ.)

## ಪ್ರಥಮ ಪ್ರಪಾಠಕ - ಏಕಾದಶ ಖಂಡ

ಮಂ.ಶ್ಲೋ.॥ ಅಥ ಹೈನಂ ಯಜಮಾನ ಉವಾಚ ಭಗವನ್ತಂ ವಾ ಅಹಂ ವಿವಿದಿಷಾಣೀತ್ಯುಷಸ್ತಿರಸ್ಮಿ ಚಾಕ್ರಾಯಣ ಇತಿ ಹೋವಾಚ। (1) ಸ ಹೋವಾಚ ಭಗವನ್ತಂ ವಾ ಅಹಮೇಭಿಸ್ಸರ್ವೈ-ರಾರ್ತ್ವಿಜ್ಯೈಃ ಪರ್ಯೈಷಿಷಂ ಭಗವತೋ ವಾ ಅಹಮವಿತ್ತ್ಯಾಽನ್ಯಾನವೃಷಿ। (2) ಭಗವಾಗ್ಂ ಸ್ತ್ವೇವ ಮೇ ಸರ್ವೈರಾರ್ತ್ವಿಜ್ಯೈರಿತಿ ತಥೇತ್ಯತ ತರ್ಹ್ಯೇತ ಏವಸಮತಿಸೃಷ್ಟಾಃ ಸ್ತುವತಾಂ ಯಾವತ್ತೇಭ್ಯೋ ಧನಂ ದದ್ಯಾಸ್ತಾವನ್ಮನದದ್ಯಾ ಇತಿ ತಥೇತಿ ಹ ಯಜಮಾನ ಉವಾಚ॥ (3)

ತಾ॥ ಆಗ ಮುಖ್ಯ ಋತ್ವಿಕ್ಕು, "ತಾವು ಯಾರು ಎಂದು ಪರಿಚಯ ಮಾಡಿಕೊಡಿ" ಎಂದು ಕೇಳಿದ. "ನಾನು ಚಾಕ್ರಾಯಣನೆನ್ನುವವನು." ಎಂದು ಉಷಸ್ತಿ ಹೇಳಿದ. ಮುಖ್ಯ ಋತ್ವಿಕ್ಕು ಹೀಗೆ ಹೇಳಿದ. "ಅಯ್ಯಾ ನಿಮಗಾಗಿ ನಾವು ಎಷ್ಟು ಹುಡುಕಾಡಿದೆವು. ತಾವು ದೊರಕದೆ ಹೋಗಲು ಇವರೆಲ್ಲರನ್ನೂ ನೇಮಿಸಿಕೊಂಡೆವು" ಭಗವನ್, ತಾವೇ ಮುಂದೆ ನಿಂತು ಈ ಯಜ್ಞವನ್ನು ಸಂತೃಪ್ತಿಯಾಗಿ ನಿರ್ವಹಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ. ಎಂದು ಯಜಮಾನ ಭಿನ್ನವಿಸಿದ. ಉಷಸ್ತಿಯು, "ಸರಿ ನಾನು ಈ ಯಜ್ಞವನ್ನು ನಿರ್ವಹಿಸುತ್ತೇನೆ. ಈ ಋತ್ವಿಕರೆಲ್ಲರೂ ನನ್ನ ಸಲಹೆಯ ಪ್ರಕಾರ ವೇದಗಾನವನ್ನು ಮಾಡುವಂತಾಗಲಿ! ಇವರೆಲ್ಲರಿಗೂ ಎಷ್ಟು ಹಣವನ್ನು ಕೊಡುವಿರೋ ಅಷ್ಟು ಹಣವನ್ನು ನನಗೂ ಕೊಡಬೇಕು" ಎಂದ. ಯಜಮಾನ ಅದಕ್ಕೆ ಒಪ್ಪಿಕೊಂಡ.

**ಮಂ.ಶ್ಲೋ.॥ ಅಥಹೈನಂ ಪ್ರಸ್ತೋತೋಪಸಸಾದ ಪ್ರಸ್ತೋತರ್ಯ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸೀ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ । (4) ಪ್ರಾಣ ಇತಿ ಹೋವಾಚ। ಸರ್ವಾಣಿ ಹವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾಪಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಾಸ್ತೋಷ್ಯೋ ಮೂರ್ಧಾತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ॥ (5)**

ತಾ॥ ಆಗ ಪ್ರಸ್ತೋತ ಋತ್ವಿಕ್ಕು ಹೀಗೆ ಹೇಳಿದ, "ಉಷಸ್ತಿ ಭಗವಂತಾ! ಪ್ರಸ್ತಾವ ದೇವತೆಯನ್ನು ತಿಳಿದುಕೊಳ್ಳದೆ ಪ್ರಸ್ತಾವವನ್ನು ಗಾನ ಮಾಡಿದಲ್ಲಿ ನನ್ನ ಶಿರಸ್ಸು ಕೆಳಕ್ಕೆ ಬೀಳುತ್ತದೆಯೆಂದು ಹೇಳಿದಿರಿ. ಅಲ್ಲವೇ? ಆ ದೇವತೆ ಯಾರು? "ಪ್ರಾಣದೇವತೆ" ಎಂದು ಉಷಸ್ತಿ ನುಡಿದ. ಈ ಸೃಷ್ಟಿಯಲ್ಲಿ ಚರಾಚರಗಳೆಲ್ಲವೂ, ಪ್ರಳಯ ಕಾಲದಲ್ಲಿ ಪ್ರಾಣದೊಂದಿಗೆ ಲಯವಾಗುತ್ತದೆ. ಸೃಷ್ಟಿ ಜರುಗುವಾಗ ಪ್ರಾಣದಿಂದಲೇ ಉದ್ಭವಿಸುತ್ತದೆ. ಪ್ರಸ್ತಾವ ಗಾನಕ್ಕೆ ಪ್ರಾಣವೇ ದೇವತೆಯಾಗಿರುತ್ತದೆ. ಈ ಪ್ರಾಣ ದೇವತೆಯನ್ನು ತಿಳಿದುಕೊಳ್ಳದೆ (ನಾನು ಸಹ ಹೇಳದೆ ಹೋಗಿದ್ದರೆ) ಪ್ರಸ್ತಾವ ಗಾನವನ್ನು ಮಾಡಿದ್ದಲ್ಲಿ ನಿನ್ನ ಶಿರಸ್ಸು ಕೆಳಗೆ ಬಿದ್ದುಬಿಡುತ್ತಿತ್ತು ಎಂದು ಉಷಸ್ತಿ ಹೇಳಿದ. (ಮತ್ತು ಸೂರ್ಯೋದಯವಾಗುತ್ತಲೇ ಈ ಚರಾಚರ ಪ್ರಕೃತಿಯೆಲ್ಲವೂ ಸೂರ್ಯದೇವನನ್ನು ಸ್ತುತಿಸುತ್ತದೆ. ಉದ್ಗೀಥಗಾನಕ್ಕೆ ಭಾನುದೇವತೆ, ನಾನು ಈ ವಿಷಯವನ್ನು ಹೇಳದೆ ಹೋದ ಪಕ್ಷದಲ್ಲಿ ಆ ಸೂರ್ಯದೇವತೆಯನ್ನು ತಿಳಿದುಕೊಳ್ಳದೆ ನೀನು ಉದ್ಗೀಥಗಾನವನ್ನು ಮಾಡುವಂತಾಗಿದ್ದರೆ ನಿನ್ನ ಶಿರಸ್ಸು ಕೆಳಗೆ ಬಿದ್ದುಬಿಡುತ್ತಿತ್ತು" ಎಂದ.)

**ಮಂ.ಶ್ಲೋ.॥ ಅಥ ಹೈನಮುದ್ಗಾತೋಪಸದೋದ್ಗಾತರ್ಯ್ಯಾ ದೇವತೋದ್ಗೀಥ ಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ । (6) ಆದಿತ್ಯ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಆದಿತ್ಯ-ಮುಚ್ಚೈಸ್ಸನ್ತಂ ಗಾಯನ್ತಿ ಸೈಷಾ ದೇವತೋದ್ಗೀಥಮನ್ವಾಯತ್ತಾತಾಂ ಚೇದವಿದ್ವಾನುದ-ಗಾಸ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ । (7)**

ತಾ॥ ಆಗ ಉದ್ಗಾತ ಋತ್ವಿಕ್ಕು ಸಹ ಉಷಸ್ತಿ ಮುನಿಯನ್ನು ಹೀಗೆ ಪ್ರಶ್ನಿಸಿದ. ಭಗವನ್! ಉದ್ಗೀಥ ದೇವತೆಯನ್ನು ತಿಳಿದುಕೊಳ್ಳದೆ ಉದ್ಗೀಥಗಾನ ಮಾಡಿದಲ್ಲಿ ನನ್ನ ಶಿರಸ್ಸು ಕೆಳಕ್ಕೆ ಬೀಳುತ್ತದೆಯೆಂದು ಹೇಳಿದಿರಿ. ಅಲ್ಲವೆ? ಆ ಉದ್ಗೀಥಗಾನದಲ್ಲಿರುವ ದೇವತೆ ಯಾರು? "ಸೂರ್ಯ ಭಗವಾನನೇ ದೇವತೆ" ಎಂದು ಉಷಸ್ತಿ ನುಡಿದ. ಮತ್ತು ಸೂರ್ಯೋದಯವಾಗುತ್ತಲೇ ಈ ಚರಾಚರ ಪ್ರಕೃತಿಯೆಲ್ಲವೂ ಸೂರ್ಯದೇವನನ್ನು ಸ್ತುತಿಸುತ್ತದೆ. ಉದ್ಗೀಥಗಾನಕ್ಕೆ ಭಾನು ದೇವತೆ. ನಾನು ಈ ವಿಷಯವನ್ನು ಹೇಳದೆಹೋದ ಪಕ್ಷದಲ್ಲಿ ಆ ಸೂರ್ಯ ದೇವತೆಯನ್ನು ತಿಳಿದುಕೊಳ್ಳದೆ ನೀನು ಉದ್ಗೀಥಗಾನವನ್ನು ಮಾಡುವಂತಾಗಿದ್ದರೆ ನಿನ್ನ ಶಿರಸ್ಸು ಕೆಳಕ್ಕೆ ಬಿದ್ದುಬಿಡುತ್ತಿತ್ತು ಎಂದನಾ ಮುನಿ.

**ಮಂ.ಶ್ಲೋ.॥ ಅಥ ಹೈನಂ ಪ್ರತಿಹರ್ತೋಪಸಸಾದ ಪ್ರತಿಹರ್ತರ್ಯ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತೀಷ್ಯತೀತಿ ಮಾ ಭಗವಾ-**

ನವ್ಯೋಚತ್ಕತಮಾ ಸಾ ದೇವತೇತಿ (8) ಅನ್ನಮಿತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯನ್ನಮೇವ ಪ್ರತಿಹರಮಾಣಾನಿ ಜೀವನ್ತಿ ಸೈಷಾ ದೇವತಾ ಪ್ರತಿಹಾರ-ಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತ್ಯಹರಿಷ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ತಥೋಕ್ತಸ್ಯ ಮಯೇತಿ ॥ (9)

ತಾ॥ ಪ್ರತಿಹರ್ತ ಋತ್ವಿಕ್ಕು ಸಹ ಅವರನ್ನು ಹೀಗೆ ಪ್ರಶ್ನಿಸಿದ - "ಭಗವನ್! ಪ್ರತಿಹಾರ ದೇವತೆಯನ್ನು ತಿಳಿಯದೆ ಪ್ರತಿಹಾರಗಾನವನ್ನು ಮಾಡಿದಲ್ಲಿ ನನ್ನ ಶಿರಸ್ಸು ಕೆಳಗೆ ಬೀಳುವುದೆಂದು ಹೇಳಿದರಲ್ಲವೆ? ಆ ಪ್ರತಿಹಾರಗಾನಕ್ಕೆ ದೇವತೆ ಯಾರು?" ಉಷಸ್ತಿ ಮುನಿ ಹೇಳಿದ. "ಅನ್ನವೇ ದೇವತೆ. ಈ ಚರಾಚರಗಳೆಲ್ಲವೂ ಅನ್ನವನ್ನು ಭುಜಿಸುವುದರಿಂದಲೇ ಜೀವಿಸುತ್ತಿವೆ. ಪ್ರತಿಹಾರ ಗಾನಕ್ಕೆ ಅನ್ನವು ದೇವತೆ. ನಾನು ಈ ವಿಷಯವನ್ನು ಹೇಳುವುದಕ್ಕೆ ಮೊದಲೇ ಪ್ರತಿಹಾರ ದೇವತೆ-ಯನ್ನು ತಿಳಿದುಕೊಳ್ಳದೆ ಗಾನವು ಮಾಡಿದ್ದಲ್ಲಿ ನಿನ್ನ ಶಿರಸ್ಸು ಕೂಡಾ ಕೆಳಕ್ಕೆ ಬಿದ್ದುಬಿಡುತ್ತಿತ್ತು ಎಂದು ನುಡಿದ. (ಉಷಸ್ತಿ ಮಹರ್ಷಿ ಸಾಮವೇದ ಪಂಡಿತನೆಂದು, ಬ್ರಹ್ಮವಿದ್ಯಾ ಪಾರಂಗತನೆಂದು ಋತ್ವಿಕರೆಲ್ಲರೂ ಕೇಳಿದ್ದರು. ಆದ್ದರಿಂದ ಅವರು ಉಷಸ್ತಿ ಮಹರ್ಷಿ ಸಲಹೆಯನ್ನು ಭಕ್ತಿಯಿಂದ ಸ್ವೀಕರಿಸಿದರು.)

## ಪ್ರಥಮ ಪ್ರಪಾಠಕ - ದ್ವಾದಶ ಖಂಡ

ಮಂ.ಶ್ಲೋ.॥ ಅಥಾತ ಶ್ಶೌವ ಉದ್ಗೀಥಸ್ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಸ್ವಾಧ್ಯಾಯ ಮುದ್ವವ್ರಾಜ। (1) ತಸ್ಮೈ ಶ್ವಾಶ್ವೇತಃ ಪ್ರಾದುರ್ಬಭೂವ ತ ಮನ್ಯೇ ಶ್ವಾನ ಉಪಸಮೇತ್ಯೋಚು -ರನ್ನಂ ನೋ ಭಗವಾನಾಗಾಯತ್ವಶನಾಯಾಮ ವಾ ಇತಿ। (2) ತಾನ್ಹೋವಾಚೇ ಹೈವ ಮಾ ಪ್ರಾತರುಪಸಮೀಯತೇತಿ ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಪ್ರತಿಪಾಲಯಾಞ್ಚಕಾರ। (3) ತೇಹ ಯಥೈವೇದಂ ಬಹಿಷ್ಪವಮಾನೇನ ಸ್ತೋಷ್ಯಮಾಣಾಃ ಸಂರಬ್ಧಾಸ್ಸರ್ಪನ್ತೀತ್ಯೇವ ಮಾಸಸೃವು ಸ್ತೇಹನಮುಪವಿಶ್ಯಹಿಙ್ಚಕ್ರುಃ (4) ಓ3ಮದಾ3 ಮೋ೦3ಪಿಬಾ3ಮೋ೦3 ದೇವೋ ವರುಣಃ ಪ್ರಜಾಪತಿಃ ಸವಿತಾ2ssನ್ನಮಿಹಾ2ಹರದ2s -ನ್ನಪತೇನ್ನಮಿಹಾ ಹಾ2ssರಾಹರೋ3ಮಿತಿ ॥ (5)

ತಾ॥ (ಶೌವಸಾಮ ಸಂಬಂಧವಾದ ಉಪಾಖ್ಯಾನ) ಅನಂತರ ಉದ್ಗೀಥೆಯ ಗಾನವನ್ನು ಶುನಕಗಳು ಸಹ ಮಾಡಬಲ್ಲವು. ಒಂದು ಸಲ ದಾಲ್ಭ್ಯಬಕ ಮುನಿಯು ಮೈತ್ರೇಯಗ್ಲಾವ ಋಷಿಯ ಬಳಿಗೆ ಹೋದ. ಅಲ್ಲಿದ್ದ ಗ್ರಾಮದ ಸಮೀಪದಲ್ಲಿ ವೇದಾಭ್ಯಾಸ ಮಾಡಲು ತೆರಳಿದರು. ಅಲ್ಲಿ ನಾಯಿಗಳ ರೂಪದಲ್ಲಿ ವೇದಗಾನ ದೇವತೆಗಳು ಪ್ರತ್ಯಕ್ಷರಾದರು. ಅದರಲ್ಲಿ ಒಂದು ಬಿಳಿಯ ನಾಯಿ ಅವರನ್ನು ನೋಡಿ "ನಾವು ಗಾನ ಮಾಡಿ ಆಯಾಸಗೊಂಡಿದ್ದೇವೆ. ನಮಗೆ ಅನ್ನವನ್ನು ತೆಗೆದುಕೊಂಡು ಬನ್ನಿ" ಎಂದು ಹೇಳಿತು. "ನಾಳೆ ನಮ್ಮ ಬಳಿಗೆ ಬರಬಹುದು" ಎಂದಿತು. ಆ ಬಿಳಿಯ ನಾಯಿ. ದಾಲ್ಭ್ಯ ಬಕ ಬಹಿಷ್ಪಮಾನ ಮುನಿ, ಮೈತ್ರೇಯ ಗ್ಲಾವ ಋಷಿ ಅಲ್ಲೇ ಸಮೀಪದಲ್ಲೇ ಇದ್ದು ನಿರೀಕ್ಷಿಸುತ್ತಿದ್ದರು. ಋತ್ವಿಕರು ಗಾನ ಮಾಡಿದಂತೆಯೇ ಸ್ತೋತ್ರಗಳನ್ನು ಆ ಶುನಕಗಳು ಅವಯವಗಳನ್ನಾಡಿಸುತ್ತಾ.

ಋತ್ವಿಕ್ಕರು ಕೈಗಳನ್ನು ಆಡಿಸುವುದನ್ನು ನೆನಪಿಗೆ ತಂದುಕೊಡುತ್ತಾ ಮಧುರವಾಗಿ ಗಾನ ಮಾಡಿದವು. ನಂತರ ಆ ಶುನಕಗಳು ಮಂತ್ರಗಳನ್ನು ಪಠಿಸುತ್ತಾ ಕುಳಿತುಬಿಟ್ಟವು. "ಓಂ ಅನ್ನವನ್ನು ತಿನ್ನುವಂತಾಗಲಿ, ಓಂ ಪಾನೀಯವನ್ನು ಸೇವಿಸುವಂತಾಗಲಿ! ವರುಣ ದೇವ, ಪ್ರಜಾಪತಿ, ಸೂರ್ಯಭಗವಾನನು ನಮಗೆ ಅನ್ನವನ್ನು ಒದಗಿಸುವಂತಾಗಲಿ! ಓ ಅನ್ನಪೂರ್ಣೆ! ನಮಗಿಲ್ಲಿ ಆಹಾರವನ್ನು ಒದಗಿಸಿಕೊಡು" "ಓಂ" (ಬಿಳಿಯ ನಾಯಿಯು ಪ್ರಧಾನವಾದ ಋಷಿ, ಶುನಕಗಳೆಲ್ಲವೂ ಋಷಿಗಳೇ, ಉದ್ಗಾತನಂತೆಯೇ ಶುನಕಗಳು ಸಾಮಗಾನವನ್ನು ಮಾಡಿದವು.)

## ಪ್ರಥಮ ಪ್ರಪಾಠಕ – ತ್ರಯೋದಶ ಖಂಡ

ಮಂ.ಶ್ಲೋ.॥ **ಅಯಃ ವಾವ ಲೋಕೋ ಹಾ ಉಕಾರೋ ವಾಯುರ್ಹಾ ಇಕಾರಶ್ಚನ್ದ್ರಮಾ ಅಥಕಾರಃ ಆತ್ಮೇ ಹಕಾರೋಽಗ್ನಿರೀಕಾರಃ । (1) ಆದಿತ್ಯ ಊಕಾರಃ ನಿಹವ ಏಕಾರೋ ವಿಶ್ವೇದೇವಾ ಔ ಹೌ ಯಿಕಾರಃ, ಪ್ರಜಾಪತಿರ್ಹಿಙ್ಕಾರಃ, ಪ್ರಾಣಸ್ಸ್ವರೋಽನ್ನಂ ಯಾ ವಾಗ್ವಿರಾಟ್ । (2) ಅನಿರುಕ್ತ ಸ್ತ್ರಯೋದಶ ಸ್ತೋಭಃ ಸಞ್ಚರೋ ಹುಙ್ಕಾರಃ । (3) ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೇಹೋಽನ್ನವಾನನ್ನಾದೋ ಭವತಿ ಯ ಏತಾಮೇವಂ ಸಾಮ್ನಾ-ಮುಪನಿಷದಂ ವೇದೋಪನಿಷದಂ ವೇದೇತಿ ॥ (4)**

ತಾ॥ ಸ್ತೋಭಾಕ್ಷರಗಳು, ಅಧಿಷ್ಠಾನಗಳು : 1) ಹಾ ಉಕಾರ= ಈ ಲೋಕ 2) ಹಾ ಇಕಾರ= ವಾಯು. 3. ಅಥಕಾರ = ಚಂದ್ರ 4. ಇಹಕಾರ = ಆತ್ಮ 5. ಈಕಾರ = ಅಗ್ನಿ 6. ಉಕಾರ = ಆದಿತ್ಯ 7. ಏಕಾರ = ನಿವಹ = ಆಹ್ವಾನ; 8. ಔ ಹೌ ಇಕಾರ = ವಿಶ್ವೇದೇವತೆಗಳು 9. ಹಿಂಕಾರ = ಪ್ರಜಾಪತಿ 10. ಸ್ವರ = ಪ್ರಾಣ 11. ಯಾ = ಅನ್ನ 12. ವಾಕ್ಕು= ವಿರಾಟ್ 13. ಹುಂಕಾರ = ಅವ್ಯಾಕೃತ. ಈ ಲೋಕ "ಹಾ ಉಕಾರ", "ವಾಯವು "ಹಾ ಇ"ಕಾರ ಚಂದ್ರನು" "ಅಥ" ಆತ್ಮ "ಇಹ" ಅಗ್ನಿ, 'ಈ' ಆದಿತ್ಯ. ಉಕಾರ ನಿಹವಮು ಏಕಾರ; ವಿಶ್ವ ದೇವತೆಗಳು "ಔಹೋಇ" ಕಾರಗಳು. ಪ್ರಜಾಪತಿ ಹಿಂಕಾರ, ಪ್ರಾಣವು ಸ್ವರ, ಅನ್ನ (ಸ್ತೋಭ) ಯಾ? ಮತ್ತು ವಿರಾಟ್, "ವಾಕ್ಕು" ಹುಂಕಾರ, ಅನಿರ್ವಾಚ್ಯವಾದ ಹದಿಮೂರನೆಯ ಅಕ್ಷರವು ಸ್ತೋಭ. ಈ ಸಾಮಗಾನವನ್ನು ಮಾಡುವವರ ವಾಕ್ಕು ಅಮೃತ. ಆತನಿಗೆ ಅನ್ನವು ಯಥೇಚ್ಛವಾಗಿ ಲಭಿಸುವುದು. ತೃಪ್ತಿಯಾಗಿ ಭುಜಿಸುವನು. ಈ ಪವಿತ್ರಗಾನವನ್ನು ಮಾಡುವವರು ಪೂತಾತ್ಮರು. (ಪುಣ್ಯಾತ್ಮರು) (ಮೊದಲನೆಯ ಪ್ರಪಾಠಕದಲ್ಲಿ 13 ಖಂಡಗಳು, 104 ಮಂತ್ರಗಳು ಇವೆ.)

## ದ್ವಿತೀಯ ಪ್ರಪಾಠಕ – ಪ್ರಥಮ ಖಂಡ

ಮಂ.ಶ್ಲೋ.॥ **ಓಮ್, ಸಮಸ್ತಸ್ಯ ಖಲು ಸಾಮ್ನ ಉಪಾಸನಂ ಸಾಧು ಯತ್ಖಲು ಸಾಧು ತತ್ಸಾಮೇತ್ಯಾ-ಚಕ್ಷತೇ ಯದಸಾಧು ತದಸಾಮೇತಿ। (1) ತದುತಾಪ್ಯಾಹುಃ ಸಾಮ್ನೈನಮುಪಾಗಾದಿತಿ ಸಾಧು -ನೈನಮುಪಾಗಾದಿತ್ಯೇವ ತದಾಹುರಸಾಮ್ನೈನಮುಪಾಗಾದಿತ್ಯ ಸಾಧುನೈನ-ಮುಪಾಗಾದಿತ್ಯೇವ ತದಾಹುಃ। (2) ಅಥೋತಾಪ್ಯಾಹುಃ ಸಾಮನೋ ಬತೇತಿ ಯತ್ಸಾಧು**

**ಭವತಿ ಸಾಧುಬತೇತ್ಯೇವ ತದಾಹು ರಸಾಮನೋ ಬತೇತಿ ಯದಸಾಧುಭವತ್ಯಸಾಧು ಬತೇತ್ಯೇವ ತದಾಹುಃ । (3) ಸ ಯ ಏತದೇವಂ ವಿದ್ವಾನ್ಸಾಧುಸಾಮೇತ್ಯುಪಾಸ್ತೇಽ-ಭ್ಯಾಶೋ ಹ ಯದೇನಂ ಸಾಧವೋ ಧರ್ಮಾ ಆಚಗಚ್ಛೇಯುರುಪಚ ಸ ಮೇಯುಃ। (4)**

ತಾ॥ ಸಾಮಗಾನದೊಂದಿಗೆ ಧ್ಯಾನ ಮಾಡುವುದು ಸರ್ವಶ್ರೇಷ್ಠವಾದುದು. ಸಾಧುವಾದ ಎಲ್ಲವೂ ಸಾಮವೇ. ಸಾಧುವಲ್ಲದ್ದು ಅಸಾಮವಾಗುತ್ತದೆ. ಸಾಮಗಾನದೊಂದಿಗೆ ಅಭ್ಯರ್ಥಿಸುತ್ತಿದ್ದಾರೆಂದು ಯಾರಾದರೂ ಹೇಳಿದಲ್ಲಿ, ಅಂತಹವರು ಸಮೃದ್ಧಿಯೊಂದಿಗೆ ಅರ್ಥಿಸುತ್ತಿರುತ್ತಾರೆಂದು ಗ್ರಹಿಸಬೇಕು. ಅಸಾಮದೊಂದಿಗೆ ಅರ್ಥಿಸುತ್ತಿದ್ದಾರೆಂದರೆ, ಯಾರಾದರೂ ಹಾಗೆ ಹೇಳಿದರೆ, ಅಂತಹವರು ಕಾಮ್ಯ ಬುದ್ಧಿಯೊಂದಿಗೆ ಅರ್ಥಿಸುತ್ತಿದ್ದಾರೆಂದು ಗ್ರಹಿಸಬೇಕು "ಇದು ಸಾಮಗಾನ. ಇವರು ಸದ್ಬುದ್ಧಿಯಿಂದ ಗಾನ ಮಾಡುತ್ತಿದ್ದಾರೆ. ಈ ಗಾನ ಶ್ರವಣವು ನಮಗೆ ಕೂಡಾ ಪುಣ್ಯಪ್ರದವಾದುದು" ಎಂದು ಜನಗಳು ತಿಳಿಯುತ್ತಾರೆ. ಅಸಾಮಗಾನವನ್ನು ಆಲಿಸಿದಾಗ, "ಇದು ಅಸಾಮಗಾನ. ಇವರು ಕಾಮ್ಯಬುದ್ಧಿಯೊಂದಿಗೆ ಗಾನ ಮಾಡುತ್ತಿದ್ದಾರೆ. ಈ ಶ್ರವಣವು ನಮಗೆ ಪಾಪವನ್ನುಂಟು ಮಾಡುತ್ತದೆ", ಎಂದು ಗ್ರಹಿಸುತ್ತಾ ಈ ವಿವರಗಳನ್ನು ಸರಿಯಾಗಿ ತಿಳಿದುಕೊಂಡು ಸಾಮಗಾನವನ್ನು ಮಾಡುವವರು ಸರ್ವ ಶುಭಗಳನ್ನು, ಸಂಪತ್ತುಗಳನ್ನು ಹೊಂದುವರು. ಆ ಶುಭಗಳೇ ಅವರನ್ನು ಕಾಪಾಡುತ್ತದೆ.

## ದ್ವಿತೀಯ ಪ್ರಪಾಠಕ – ದ್ವಿತೀಯ ಖಂಡ

ಮಂ.ಶ್ಲೋ.॥ **ಲೋಕೇಷು ಪಞ್ಚ ವಿಧಂ ಸಾಮೋಪಾಸೀತ ಪೃಥಿವೀ ಹಿಙ್ಕಾರಃ ಅಗ್ನಿಃ ಪ್ರಸ್ತಾವೋಽನ್ತರಿಕ್ಷ-ಮುದ್ಗೀಥ ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತ್ಯೂರ್ಧ್ವೇಷು। (1) ಅಥಾವೃತ್ತೇಮ ದ್ಯೌ -ರ್ಹಿಂಕಾರ ಆದಿತ್ಯಃ ಪ್ರಸ್ತಾವೋಽನ್ತರಿಕ್ಷಮುದ್ಗೀಥೋಽಗ್ನಿಃ ಪ್ರತಿಹಾರಃ ಪೃಥಿವೀ ನಿಧನಮ್। (2) ಕಲ್ಪನ್ತೇ ಹಾಸ್ಮೈಲೋಕಾ ಊರ್ಧ್ವಾಶ್ಚಾವೃತ್ತಾಶ್ಚ ಯ ಏತದೇವಂ ವಿದ್ವಾನ್ಲೋಕೇಷು ಪಞ್ಚವಿಧಂ ಸಾಮೋಪಾಸ್ತೇ ॥ (3)**

ತಾ॥ ಲೋಕದಲ್ಲಿ ಸಾಮಗಾನ ಧ್ಯಾನವನ್ನು ಐದು ವಿಧಗಳಾಗಿ ಮಾಡಬೇಕು. ಪೃಥಿವಿ ಹೀಂಕಾರ, ಅಗ್ನಿ ಪ್ರಸ್ತಾವ, ಆಕಾಶ ಉದ್ಗೀಥ, ಸೂರ್ಯಪ್ರತಿಹಾರ, ಸ್ವರ್ಗ ನಿಧನ. ಈ ರೀತಿಯಲ್ಲಿ ಗ್ರಹಿಸಿಕೊಂಡು ಊರ್ಧ್ವಲೋಕಗಳನ್ನು ಕುರಿತು ಧ್ಯಾನ ಮಾಡಬೇಕು. ಕೆಳಗಿರುವ ಲೋಕಗಳಲ್ಲಿ ಸ್ವರ್ಗದ ಸ್ವರವು ಹೀಂಕಾರ; ಸೂರ್ಯ ಸ್ವರವು ಪ್ರಸ್ತಾವ, ಆಕಾಶ ಸ್ವರವು ಉದ್ಗೀಥ, ಅಗ್ನಿ ಸ್ವರವು ಪ್ರತಿಹಾರ, ಭೂಮಿಯ ಸ್ವರವು ನಿಧನ. ಊರ್ಧ್ವಲೋಕಗಳನ್ನು, ಅಧೋಲೋಕಗಳನ್ನು, ಗುರುತಿಸಿದ ಧರ್ಮ ಸ್ವರೂಪರು, ಪಂಚವಿಧಗಳಲ್ಲಿರುವ ಸಾಮವನ್ನು ಗಾನ ಮಾಡಿದರು.

## ದ್ವಿತೀಯ ಪ್ರಪಾಠಕ – ತೃತೀಯ ಖಂಡ

ಮಂ.ಶ್ಲೋ.॥ **ವೃಷ್ಟೌ ಪಂಚವಿಧಂ ಸಾಮೋಪಾಸೀತ ಪುರೋ ವಾತೋ ಹಿಙ್ಕಾರೋ ಮೇಘೋಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ (1)**

**ಉದ್ಗೃಹ್ಣಾತಿ ತನ್ನಿಧನಮ್, ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತದೇವಂ ವಿದ್ವಾನ್ ವೃಷ್ಟೌ ಪಞ್ಚವಿಧಂ ಸಾಮೋಪಾಸ್ತೇ ॥ (2)**

ತಾ॥ ಪಂಚವಿಧ ಸಾಮವನ್ನು ಮಳೆಯನ್ನಾಗಿ ಭಾವಿಸಿ ಮಾಡಬೇಕು. ವಾಯುವನ್ನು ಹೀಂಕಾರವಾಗಿ ಗಾನ ಮಾಡಬೇಕು. ಮೇಘವನ್ನು ಪ್ರಸ್ತಾವವನ್ನಾಗಿಯೂ, ವರ್ಷವನ್ನು ಉದ್ಗೀಥ-ವೆಂದೂ, ಮಿಂಚು, ಗುಡುಗು, ಸಿಡಿಲುಗಳನ್ನು ಪ್ರತಿಹಾರವೆಂದೂ, ನಿಧನವನ್ನು ವಿರಮಿಸುವುದು ಎಂದು ಗಾನವಾಗಿ ಮಾಡಬೇಕು. ಈತನು ಕಾರಣವಾಗುವುದರಿಂದ ಮಳೆ ಸುರಿಯುತ್ತದೆ. ಈ ವಿವರಗಳನ್ನು ತಿಳಿದುಕೊಂಡವರು ಪಂಚವಿಧ ಸಾಮಗಾನವೇ ವರ್ಷವೆಂದು ಗುರುತಿಸಿದರು.

## ದ್ವಿತೀಯ ಪ್ರಪಾಠಕ - ಚತುರ್ಥ ಖಂಡ

**ಮಂ.ಶ್ಲೋ.॥ ಸರ್ವಾಸ್ವಪ್ಸು ಪಞ್ಚವಿಧಂ ಸಾಮೋಪಾಸೀತ ಮೇಘೋ ಯತ್ಸಂಪ್ಲವತೇ ಸ ಹಿಙ್ಕಾರೋ ಯದ್ವರ್ಷತಿ ಸಪ್ರಸ್ತಾವೋ ಯಾಃ ಪ್ರಾಚ್ಯಃ ಸ್ಯನ್ದನ್ತೇ ಸ ಉದ್ಗೀಥೋ ಯಾಃ ಪ್ರತೀಚ್ಯಸ್ಸ ಪ್ರತಿಹಾರಸ್ಸಮುದ್ರೋ ನಿಧನಮ್ । (1) ಸ ಹಾಪ್ಸು ಪ್ರೈತ್ಯಪ್ಸುಮಾನ್ಭವತಿ ಯ ಏತ-ದೇವಂ ವಿದ್ವಾನ್‌ಸರ್ವಾಸ್ವಪ್ಸು ಪಞ್ಚವಿಧಂ ಸಾಮೋಪಾಸ್ತೇ ॥ (2)**

ತಾ॥ ಎಲ್ಲ ರೀತಿಯ ನೀರಿನಲ್ಲಿಯೂ ಪಂಚವಿಧ ಸಾಮಗಾನವನ್ನು ಮಾಡಬೇಕು. ಮೇಘಗಳು ಕೂಡಿಕೊಳ್ಳುತ್ತಿರುವಾಗ ಹೀಂಕಾರವೆನ್ನುತ್ತಾರೆ. ವರ್ಷಿಸುವಾಗ ಮೇಘವೇ ಪ್ರಸ್ತಾವವು. ಜಲವು ಪೂರ್ವ ದಿಕ್ಕಿನ ಕಡೆ ಪ್ರವಹಿಸುವಾಗ ಉದ್ಗೀಥ, ಪಶ್ಚಿಮಕ್ಕೆ ಹರಿದಾಗ ಪ್ರತಿಹಾರ, ಸಮುದ್ರವೇ ನಿಧನ. ಈ ವಿವರಗಳನ್ನು ತಿಳಿದುಕೊಂಡ ಧರ್ಮಾತ್ಮನು ಎಲ್ಲ ವಿಧವಾದ ಜಲಗಳಲ್ಲಿಯೂ ಪಂಚವಿಧ ಸಾಮಗಾನ ಮಾಡುವನು. ಅಂತಹವರಿಗೆ ನೀರಿನಿಂದ ಪ್ರಮಾದವಿರುವುದಿಲ್ಲ. ನೀರಿನಿಂದಲೇ ಧನವಂತರಾಗುವರು. ಅನಿಚ್ಛಾ ಪೂರ್ವಕವಾಗಿ ಮರಣವು ಸಂಭವಿಸುವುದಿಲ್ಲ. ಪ್ರಸಿದ್ಧವಾದ ಉದಕ ಸಮೃದ್ಧಿಯು ಉಂಟಾಗುತ್ತದೆ.

## ದ್ವಿತೀಯ ಪ್ರಪಾಠಕ - ಪಂಚಮ ಖಂಡ

**ಮಂ.ಶ್ಲೋ.॥ ಋತುಷು ಪಞ್ಚವಿಧಂ ಸಾಮೋಪಾಸೀತ ವಸಂತೋ ಹಿಙ್ಕಾರೋ, ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಶ್ಶರತ್ ಪ್ರತಿಹಾರೋ ಹೇಮನ್ತೋ ನಿಧನಮ್। (1) ಕಲ್ಪನ್ತೇಹಸ್ಮಾ ಋತವ ಋತುಮಾನ್ಭವತಿ ಯ ಏತದೇವಂ ವಿದ್ವಾನೃತುಷು ಪಞ್ಚವಿಧಂ ಸಾಮೋಪಾಸ್ತೇ॥ (2)**

ತಾ॥ ಪಂಚವಿಧ ಸಾಮಗಾನವನ್ನು ಋತುಗಳನ್ನಾಗಿ ಭಾವಿಸಿ ಧ್ಯಾನವನ್ನು ಮಾಡಬೇಕು. ವಸಂತ ಋತುವು ಹೀಂಕಾರ, ಗ್ರೀಷ್ಮ ಋತುವು ಪ್ರಸ್ತಾವ. ವರ್ಷ ಋತುವು ಉದ್ಗೀಥ, ಶರದೃತು ಪ್ರತಿಹಾರ. ಹೇಮಂತ ಋತುವು ನಿಧನವು. ಯಾರು ಈ ವಿವರಗಳನ್ನು ತಿಳಿದುಕೊಂಡು, ಎಲ್ಲ ಋತುಗಳಲ್ಲಿಯೂ ಪಂಚವಿಧ ಸಾಮಗಾನವನ್ನು ಮಾಡುವರೋ ಅವರನ್ನು, ಎಲ್ಲ ಋತುಗಳೂ ರಕ್ಷಿಸುತ್ತವೆ. ಅಂತಹವರು ಎಲ್ಲ ಋತುಗಳಲ್ಲೂ ಧನವಂತರಾಗುತ್ತಾರೆ.' (ಹೇಮಂತ ಶಿಶಿರ ಋತುಗಳನ್ನು ಶ್ರುತಿಗಳಲ್ಲಿ ಅನೇಕ ಭಾಗಗಳಲ್ಲಿ ಒಂದಾಗಿಯೇ ಒಂದೇ ಎಂದು ಪರಿಗಣಿಸಲಾಗಿದೆ. ಇಲ್ಲಿ ಕೂಡಾ ಋತುಗಳನ್ನು ಐದು ಎಂದೇ ಹೇಳಲಾಗಿದೆ.)

# ದ್ವಿತೀಯ ಪ್ರಪಾಠಕ - ಷಷ್ಟ ಖಂಡ

**ಮಂ.ಶ್ಲೋ.॥ ಪಶುಷು ಪಞ್ಚವಿಧಂ ಸಾಮೋಪಾಸೀತಾಜಾ ಹಿಙ್ಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಮ್ । (1) ಭವನ್ತಿಹಾಸ್ಯ ಪಶವಃ ಪಶುಮಾನ್ಭವತಿ ಯ ಏತದೇವಂ ವಿದ್ವಾನ್ಪಶುಷು ಪಞ್ಚವಿಧಂ ಸಾಮೋಪಾಸ್ತೇ॥ (2)**

ತಾ॥ ಪಂಚವಿಧ ಸಾಮಗಾನವನ್ನು ಪಶುಸಂಪತ್ತಾಗಿ ಧ್ಯಾನ ಮಾಡಬೇಕು. ಅಜಗಳಲ್ಲಿ (ಮೇಕೆ-ಗಳು) ಹೀಂಕಾರವು. ಕುರಿಗಳು ಪ್ರಸ್ತಾವ, ಗೋವುಗಳು ಉದ್ಗೀಥ, ಅಶ್ವಗಳು ಪ್ರತಿಹಾರ ಪುರುಷನು ನಿಧನ. ಯಾರು ಈ ವಿವರಗಳನ್ನು ತಿಳಿದುಕೊಂಡು ಪಂಚವಿಧ ಸಾಮಗಾನವನ್ನು, ಪಶುಗಳಲ್ಲಿ ಮಾಡು ತ್ತಿದ್ದಾರೋ, ಅವರಿಗೆ ಪಶುಸಂಪತ್ತು ವೃದ್ಧಿಸುತ್ತದೆ. ಪಶುಸಂಪತ್ತಿನಿಂದ ಅವರು ಶ್ರೀಮಂತರಾಗುತ್ತಾರೆ.

# ದ್ವಿತೀಯ ಪ್ರಪಾಠಕ - ಸಪ್ತಮ ಖಂಡ

**ಮಂ.ಶ್ಲೋ.॥ ಪ್ರಾಣೇಷು ಪಞ್ಚವಿಧಂ ಪರೋವರೀಯಸ್ಸಾಮೋಪಾಸಿತ ಪ್ರಾಣೋ ಹಿಙ್ಕಾರೋ ವಾಕ್ ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರೋ ಮನೋ ನಿಧನಂ ಪರೋವರೀಯಾಂಸಿ ವೈತಾನಿ । (1) ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾ-ಞ್ಜಯತಿ ಯ ಏತದೇವಂ ವಿದ್ವಾನ್ ಪ್ರಾಣೇಷು ಪಞ್ಚವಿಧಂ ಪರೋವರೀಯಸ್ಸಾಮೋಪಾಸ್ತ ಇತಿ ತು ಪಂಚವಿಧಸ್ಯ ॥ (2)**

ತಾ॥ ಅತ್ಯುತ್ತಮವಾದ, ಶ್ರೇಷ್ಠವಾದ ಪಂಚವಿಧ ಸಾಮಗಾನವನ್ನು ಪ್ರಾಣಗಳನ್ನಾಗಿ ಭಾವಿಸಿ ಧ್ಯಾನ ಮಾಡಬೇಕು. ಪ್ರಾಣದಲ್ಲಿ ಘ್ರಾಣ ಹೀಂಕಾರ, ವಾಕ್ಕು ಪ್ರಸ್ತಾವ, ನೇತ್ರಗಳು ಉದ್ಗೀಥ, ಶ್ರೋತ್ರುಗಳು ಪ್ರತಿಹಾರ. ಮನಸ್ಸು ನಿಧನ. ಇವೆಲ್ಲವೂ ಕ್ರಮವಾಗಿ ಅತ್ಯುತ್ತಮವಾದ ಸಾಮಗಾನಗಳು. ಯಾರು ಈ ವಿವರಗಳನ್ನರಿತು ತಿಳಿದುಕೊಂಡು ಪಂಚವಿಧ ಸಾಮಗಾನವನ್ನು ಮಾಡುವರೋ, ಅತ್ಯುತ್ತಮ-ವಾದ ಶ್ರೇಷ್ಠವಾದ ಈ ಗಾನವನ್ನು ಪ್ರಾಣಗಳೊಂದಿಗೆ ಧ್ಯಾನವನ್ನು ಮಾಡುವರೋ ಅಂತಹವರಿಗೆ ಸರ್ವೋತ್ತಮವಾದ ಜೀವನ ಲಭಿಸುವುದು. ಅಂತಹವರು ದಿವ್ಯ ಲೋಕಗಳನ್ನು ಹೊಂದುವರು. ಪಂಚವಿಧ ಸಾಮಗಾನವು ಅಂತಹ ಮಹಿಮೆಯನ್ನು ಹೊಂದಿದೆ.

# ಪಂಚವಿಧ ಸಾಮೋಪಾಸನೆಯ ವಿಧಾನ

| ಉಪಾಸನಾ | ದೃಷ್ಟಿ | ಹಿಂಕಾರ | ಪ್ರಸ್ತಾವ | ಉದ್ಗೀಥ | ಪ್ರತಿಹಾರ | ನಿಧನ |
|---|---|---|---|---|---|---|
| ಲೋಕಗಳು | ಊರ್ಧ್ವ ದೃಷ್ಟಿ | ಪೃಥಿವಿ | ಅಗ್ನಿ | ಅಂತರಿಕ್ಷ | ಆದಿತ್ಯ | ದ್ಯುಲೋಕ |
| ಲೋಕಗಳು | ನಿಮ್ನ ದೃಷ್ಟಿ | ದ್ಯುಲೋಕ | ಆದಿತ್ಯ | ಅಂತರಿಕ್ಷ | ಅಗ್ನಿ | ಪೃಥಿವಿ |
| ವೃಷ್ಟಿ | ವೃಷ್ಟಿಗೆ ಪೂರ್ವ | ವಾಯು | ಮೇಘೋತ್ಪತ್ತಿ | ವರ್ಷಿಸುವುದು | ಮಿಂಚು | ಜಲಗ್ರಹಣ |
| ಜಲ | ಮೇಘವು | ಘನೀಭವಿಸುವುದು | | ದಿಕ್ಕಿಗೆ | ಪಶ್ಚಿಮ ದಿಕ್ಕಿಗೆ | ಸಮುದ್ರಕ್ಕೆ ಸೇರುವುದು |
| ಋತುಗಳು | ವಸಂತ | ಗ್ರೀಷ್ಮ | ವರ್ಷ | ಶರದೃತು | ಹೇಮಂತ | ಶಿಶಿರ |
| ಪಶುಗಳು | | ಮೇಕೆಗಳು | ಕುರಿಗಳು | ಗೋವುಗಳು | ಅಶ್ವ ಗಜ | ಪುರುಷ |
| ಪ್ರಾಣಗಳು | ಘ್ರಾಣ | ವಾಕ್ಕು | ಚಕ್ಷಸ್ಸು | ಶ್ರೋತ್ರ | ಮನಸ್ಸು | ಇಂದ್ರಿಯ |

## ದ್ವಿತೀಯ ಪ್ರಪಾಠಕ - ಅಷ್ಟಮ ಖಂಡ

ಮಂ.ಶ್ಲೋ.॥ ಅಥ ಸಪ್ತವಿಧಸ್ಯ ವಾಚಿ ಸಪ್ತವಿಧಂ ಸಾಮೋಪಾಸೀತ ಯತ್ಕಿಞ್ಚ ವಾಚೋಹುಮಿತಿ ಸ ಹಿಙ್ಕಾರೋ ಯತ್ಪ್ರೇತಿ ಸಪ್ರಸ್ತಾವೋ ಯದೇತಿ ಸ ಆದಿಃ। (1) ಯದುದಿತಿ ಸ ಉದ್ಗೀಥೋ ಯತ್ ಪ್ರತೀತಿ ಸ ಪ್ರತಿಹಾರೋ ಯದುಪೇತಿ ಸ ಉಪದ್ರವೋ ಯನ್ನೀತಿ ತನ್ನಿಧನಮ್। (2) ದುಗ್ಧೇಸ್ಮೈ ವಾಗ್ದೋಹಂ ಯೋ ವಾಚೋ ದೋಹೋನ್ನವಾನನ್ನಾದೋಭವತಿ ಯ ಏತದೇವಂ ವಿದ್ವಾನ್ವಾಚಿ ಸಪ್ತವಿಧಂ ಸಾಮೋಪಾಸ್ತೇ ॥ (3)

ತಾ॥ ಆನಂ'ರ ಸಪ್ತವಿಧ ಸಾಮಗಾನವನ್ನು ವಾಕ್ಕು ಎಂದು ಭಾವಿಸಿ ಮಾಡಬೇಕು. ವಾಕ್ಕಿನಲ್ಲಿರುವ "ಹುಮ್" ಎನ್ನುವ ಸ್ವರವೇ ಹೀಂಕಾರ. "ಪ್ರ" ಎನ್ನುವ ಸ್ವರವೇ ಪ್ರಸ್ತಾವ; "ಅ" ಎನ್ನುವ ಸ್ವರವೇ ಅದು (ಓಂ); "ಉತ್" ಎನ್ನುವ ಅನುಸ್ವರವೇ ಉದ್ಗೀಥ. "ಪ್ರತಿ" ಎನ್ನುವ ಸ್ವರ ಪ್ರತಿಹಾರ; "ಉಪ" ಎನ್ನುವ ಸ್ವರ ಉಪದ್ರವ. "ನೀ" ಎನ್ನುವ ಸ್ವರ ನಿಧನ. ಯಾರು ಈ ವಿವರವನ್ನು ತಿಳಿದುಕೊಂಡು ಸಪ್ತವಿಧ ಗಾನವನ್ನು ವಾಕ್ಕು ಎಂದು ಧ್ಯಾನವನ್ನು ಮಾಡುತ್ತಿದ್ದಾರೋ, ಅಂತಹವರಿಗೆ ವಾಗಮೃತ ಲಭಿಸುವುದು. ಅಂತಹವರು ಒಳ್ಳೆಯ ಅನ್ನವನ್ನು ಭುಜಿಸುವರು. ಅನ್ನ ಸಂಪತ್ತು ಅವರಿಗೆ ಸಮೃದ್ಧಿಯಾಗಿ ಲಭಿಸುವುದು.

## ದ್ವಿತೀಯ ಪ್ರಪಾಠಕ - ನವಮ ಖಂಡ

ಮಂ.ಶ್ಲೋ.॥ ಅಥ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸೀತ ಸರ್ವದಾ ಸಮಸ್ತೇನ ಸಾಮ ಮಾಂ ಪ್ರತಿಮಾಂ ಪ್ರತೀತಿ ಸರ್ವೇಣ ಸಮಸ್ತೇನ ಸಾಮ। (1) ತಸ್ಮಿನ್ನಿಮಾನಿ ಸರ್ವಾಣಿ ಭೂತಾನ್ಯ-ನ್ವಾಯತ್ತಾನೀತಿ ವಿದ್ಯಾತ್ತಸ್ಯ ಯತ್ಪುರೋದಯಾತ್ಸ ಹಿಙ್ಕಾರಸ್ತದಸ್ಯ ಪಶವೋಽನ್ವಾಯತ್ತಾ-ಸ್ತಸ್ಮಾತ್ತೇ ಹಿಂ ಕುರ್ವನ್ತಿ ಹಿಙ್ಕಾರಭಾಜಿನೋ ಹ್ಯೇತಸ್ಯ ಸಾಮ್ನಃ। (2)

ತಾ॥ ಆಮೇಲೆ ಸಪ್ತವಿಧ ಸಾಮಗಾನವನ್ನು ಪ್ರಕಾಶಿಸುವ ಸೂರ್ಯನನ್ನಾಗಿ, ಧ್ಯಾನಿಸಬೇಕು. ಆತನೇ ಸಾಮಗಾನ "ಆತ ನನ್ನನ್ನು ಸಮೀಪಿಸುತ್ತಿದ್ದಾನೆ" ಎಂದು ಪ್ರತಿಯೊಬ್ಬರೂ ಭಾವಿಸುತ್ತಿದ್ದಾರೆ. ಆದ್ದರಿಂದ ಆ ಸೂರ್ಯನೇ ಸಾಮಗಾನ. ಆತನು ಎಲ್ಲರಿಗೂ ಸಮಾನವಾಗಿ ಪ್ರಕಾಶಿಸುತ್ತಿದ್ದಾನೆ. ಈ ಜೀವಿಗಳೆಲ್ಲರೂ ಆತನ ಮೇಲೆ ಆಧಾರವಾಗಿದ್ದಾರೆಂದು ಗ್ರಹಿಸಬೇಕು. ಉದಯಿಸುವುದಕ್ಕೆ ಮೊದಲಿನ ಸೂರ್ಯ ಹಿಂಕಾರ. ಎಲ್ಲ ಜಂತುಗಳು ಆ ಹಿಂಕಾರದ ಮೇಲೆ ಆಧಾರವಾಗಿರುತ್ತದೆ. ಜಂತುಗಳೆಲ್ಲವೂ ಸಾಮದಲ್ಲಿರುವ ಹಿಂಕಾರ ಶಬ್ದವನ್ನು ಮಾಡುತ್ತಿವೆ. ಸೂರ್ಯೋದಯಕ್ಕೆ ಮೊದಲು ಹಿಂಕಾರವನ್ನು ಮಾಡುತ್ತಿವೆ.

ಮಂ.ಶ್ಲೋ.॥ ಅಥ ಯತ್ ಪ್ರಥಮೋದಿತೇ ಸ ಪ್ರಸ್ತಾವಸ್ತದಸ್ಯ ಮನುಷ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರಸ್ತುತಿಕಾಮಾಃ ಪ್ರಶಂಸಾಕಾಮಾಃ ಪ್ರಸ್ತಾವಭಾಜಿನೋ ಹ್ಯೇತಸ್ಯ ಸಾಮ್ನಃ। (3) ಅಥ ಯತ್ಸಙ್ಗವ ವೇಳಾಯಾಂ ನ ಆದಿಸ್ತದಸ್ಯ ವಯಾಂಸ್ಯನ್ವಾಯತ್ತಾನಿ ತಸ್ಮಾತ್ತಾನ್ಯನ್ತರಿಕ್ಷೇ-ನಾರಮ್ಭಣಾನ್ಯಾದಾಯಾತ್ಮಾನಂ ಪರಿಪತನ್ತ್ಯಾದಿ ಭಾಜೀನಿ ಹ್ಯೇತಸ್ಯ ಸಾಮ್ನಃ । (4) ಅಥ

**ಯತ್ಸಂಪ್ರತಿ ಮಧ್ಯನ್ದಿನೇ ಸ ಉದ್ಗೀಥಸ್ತದಸ್ಯ ದೇವಾ ಅನ್ವಾಯತ್ತಾಸ್ತಸ್ಮಾತ್ತೇ ಸತ್ತಮಾಃ ಪ್ರಾಜಾಪತ್ಯಾನಾಮುದ್ಗೀಥಭಾಜಿನೋ ಹ್ಯೇತಸ್ಯ ಸಾಮ್ನಃ (5) ಅಥ ಯದೂರ್ಧ್ವಂ ಮಧ್ಯನ್ದಿ-ನಾತ್ ಪ್ರಾಗಪರಾಹ್ಣಾತ್ಸ ಪ್ರತಿಹಾರಸ್ತದಸ್ಯ ಗರ್ಭಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರತಿಹೃತಾ-ನಾವಪದ್ಯನ್ತೇ ಪ್ರತಿಹಾರಭಾಜಿನೋ ಹ್ಯೇತಸ್ಯ ಸಾಮ್ನಃ । (6)**

ತಾ॥ ಸೂರ್ಯೋದಯವಾದ ಕೂಡಲೇ ಪ್ರಕಾಶಿಸುವ ಸೂರ್ಯನು ಪ್ರಸ್ತಾವ. ಮಾನವರು ಆ ಉದಯಭಾನುವಿನ ಮೇಲೆ ಆಧಾರವಾಗಿರುತ್ತಾರೆ. ಪ್ರಸ್ತಾವ ಭಾಗಗಳಾಗಿರುವ ಸಾಮಗಾನಗಳನ್ನು, ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ವಾಂಛಿತಾರ್ಥಗಳ ನಿಮಿತ್ತವಾಗಿ ಮಾಡುತ್ತಿದ್ದಾರೆ. ಸೂರ್ಯ ಕಿರಣಗಳೆಲ್ಲವೂ ಪೂರ್ಣವಾಗಿ ವಿಜೃಂಭಿಸುವಾಗ (ಪ್ರಕಾಶಿಸುವಾಗ), ಆ ಸೂರ್ಯನನ್ನು 'ಆದಿ' ಎನ್ನುವರು. ಅಂತಹ ಸೂರ್ಯಾಕಾರದ ಮೇಲೆ ಪಕ್ಷಿಗಳು ಆಧಾರವಾಗಿರುತ್ತವೆ. ಆದಿ ಭಾಗಗಳಾದ ಸಾಮಗಾನ ಬಲದಿಂದ ಪಕ್ಷಿಗಳು ಆಕಾಶದಲ್ಲಿ ಹಾರುತ್ತಾ ತಿರುಗಾಡುತ್ತಿವೆ. ಮಧ್ಯಂದಿನ ಸೂರ್ಯ ಉದ್ಗೀಥ, ಅಂತಹ ಮಧ್ಯಂದಿನ ಸೂರ್ಯಾಕಾರದ ಮೇಲೆ ದೇವತೆಗಳು ಆಧಾರವಾಗಿದ್ದಾರೆ. ಉದ್ಗೀಥ ಭಾಗಗಳಾದ ಸಾಮಗಳನ್ನು ಗಾನವನ್ನು ಮಾಡುವ ದೇವತೆಗಳು ಪ್ರಜಾಪತಿ ಬ್ರಹ್ಮಪುತ್ರರಾಗಿ ಪ್ರಕಾಶಿಸುತ್ತಿದ್ದಾರೆ. ಮಧ್ಯಾಹ್ನ ಕಳೆದ ಕೂಡಲೇ ಪ್ರಕಾಶಿಸುವ ಸೂರ್ಯ ಪ್ರತಿಹಾರ. ಪ್ರತಿಹಾರರೂಪ ಸೂರ್ಯನ ಮೇಲೆ ಗರ್ಭ ಪಿಂಡಗಳಾಧಾರವಾಗಿದೆ. ಪ್ರತಿಹಾರ ಭಾಗ ಸಾಮಗಾನಗಳಿಂದಾಗಿಯೇ ಗರ್ಭಸ್ಥ ಪಿಂಡಗಳು ಕೆಳಗೆ ಬೀಳದೆ ಪೋಷಿಸಲ್ಪಡುತ್ತಿವೆ.

ಮಂ.ಶ್ಲೋ.॥ **ಅಥ ಯದೂರ್ಧ್ವಮಪರಾಹ್ಣಾತ್ ಪ್ರಾಗಸ್ತಮಯಾತ್ಸ ಉಪದ್ರವಸ್ತದಸ್ಯಾರಣ್ಯಾ ಅನ್ವಾಯತ್ತಾ-ಸ್ತಸ್ಮಾತ್ತೇ ಪುರುಷಂ ದೃಷ್ಟ್ವಾ ಕಕ್ಷಗ್‌ಂಶ್ವಭ್ರಮಿತ್ಯುಪದ್ರವನ್ತಿ, ಉಪದ್ರವಭಾಜಿನೋ ಹ್ಯೇತಸ್ಯ ಸಾಮ್ನಃ । (7) ಅಥ ಯತ್ ಪ್ರಥಮಾಸ್ತಮಿತೇ ತನ್ನಿಧನಂ ತದಸ್ಯ ಪಿತರೋಽನ್ವಾಯತ್ತಾ-ಸ್ತಸ್ಮಾತ್ತಾನ್ನಿದಧತಿ ನಿಧನಭಾಜಿನೋ ಹ್ಯೇತಸ್ಯ ಸಾಮ್ನ ಏವಂ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸ್ತೇ ॥ (8)**

ತಾ॥ ಅಸ್ತಮಿಸುವುದಕ್ಕೆ ಸ್ವಲ್ಪ ಮುಂಚಿತವಾಗಿ ಪ್ರಕಾಶಿಸುವ ಸೂರ್ಯನು ಉಪದ್ರವ. ಉಪದ್ರವ ರೂಪ ಸೂರ್ಯನ ಮೇಲೆ ಮಹಾ ಕ್ರೂರ ಮೃಗಗಳು ಆಧಾರವಾಗಿರುತ್ತವೆ. ಉಪದ್ರವ ರೂಪ ಸಾಮಭಾಗಗಳಿಂದಲೇ ಕ್ರೂರ ಮೃಗಗಳು ಶಕ್ತಿ ಹೊಂದಿದವುಗಳಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತಿದೆ. ಅಸ್ತಮಯವು ಕಳೆದ ಕೂಡಲೇ ಪ್ರಕಾಶಿಸುವ ಸೂರ್ಯನು ನಿಧನ. ನಿಧನ ರೂಪ ಸೂರ್ಯನ ಮೇಲೆ ಪಿತೃಗಳು ಆಧಾರವಾಗಿದ್ದಾರೆ. ನಿಧನ ಭಾಗವು ಸಾಮ. ಅದರಿಂದಲೇ, ಪಿಂಡರೂಪದಲ್ಲಿರುವ ಪಿತೃಗಳು ಪೋಷಿಸಲ್ಪಡುತ್ತಿದ್ದಾರೆ. ಈ ರೀತಿಯಾಗಿ ಸಪ್ತವಿಧ ಸಾಮಗಾನಗಳನ್ನು ಪ್ರಕಾಶಿಸುತ್ತಿರುವ ಸೂರ್ಯನನ್ನು ಕುರಿತು ಗಾನ ಮಾಡುತ್ತಿದ್ದಾರೆ.

## ದ್ವಿತೀಯ ಪ್ರಪಾಠಕ – ದಶಮ ಖಂಡ

ಮಂ.ಶ್ಲೋ.॥ **ಅಥ ಖಲ್ವಾತ್ಮ ಸಮ್ಮಿತಮತಿಮೃತ್ಯು ಸಪ್ತವಿಧಂ ಸಾಮೋಪಾಸೀತ ಹಿಙ್ಕಾರ ಇತಿ ತ್ರ್ಯಕ್ಷರಂ, ಪ್ರಸ್ತಾವ ಇತಿ ತ್ರ್ಯಕ್ಷರಂ ತತ್ಸಮಮ್ (1) ಆದಿರಿತಿ ದ್ವ್ಯಕ್ಷರಂ, ಪ್ರತಿಹಾರ ಇತಿ ಚತುರಕ್ಷರಂ,**

ತತ ಇಹ್ಯೈಕಂ ತತ್ಸಮಮ್ । (2) ಉದ್ಗೀಥ ಇತಿ ತ್ರ್ಯಕ್ಷರಮುಪದ್ರವ ಇತಿಚತುರಕ್ಷರಂ ತ್ರಿಭಿಸ್ತ್ರಿಭಿಸ್ಸಮಂ ಭವತ್ಯಕ್ಷರಮತಿಶಿಷ್ಯತೇ ತ್ರ್ಯಕ್ಷರಂ ತತ್ಸಮಮ್ । (3) ನಿಧನಮಿತಿ ತ್ರ್ಯಕ್ಷರಂ ತತ್ಸಮಮೇವ ಭವತಿ ತಾನಿ ಹವಾ ಏತಾನಿ ದ್ವಾವಿಂಶತಿರಕ್ಷರಾಣಿ। (4) ಏಕವಿಂಶತ್ಯಾದಿತ್ಯ-ಮಾಪ್ನೋತ್ಯೇಕವಿಂಶೋ ವಾ ಇತೋಽಸಾವಾದಿತ್ಯೋ ದ್ವಾವಿಂಶೇನ ಪರಮಾದಿತ್ಯಾಜ್ಜಿ-ಯತಿ ತನ್ನಾಕಂ ತದ್ವಿಶೋಕಮ್ ॥ (5) ಆಪ್ನೋತಿಹಾದಿತ್ಯಸ್ಯ ಜಯಂ ಪರೋ ಹಾ ಸ್ಯಾದಿತ್ಯಜಯಾಜ್ಜಯೋ ಭವತಿ ಯ ಏತದೇವಂ ವಿದ್ವಾನಾತ್ಮಸಮ್ಮಿತಮತಿಮೃತ್ಯು ಸಪ್ತವಿಧಂ ಸಾಮೋಪಾಸ್ತೇ ಸಾಮೋಪಾಸ್ತೇ (6)

ತಾ॥ ಸಪ್ತವಿಧ ಸಾಮಗಳನ್ನು ಗಾನ ಮಾಡಬೇಕು. ಎಲ್ಲ ಭಾಗಗಳು ಸಮಾನವಾಗಿಯೇ ಇರುವುದು. ಸಪ್ತ ವಿಧ ಸಾಮಗಾನವು ಮೃತ್ಯುವನ್ನು ದಾಟಿ ಹೋಗುತ್ತಿದೆ. ಹಿಂಕಾರಕ್ಕೆ ಮೂರು ಅಕ್ಷರಗಳಿವೆ. ಪ್ರಸ್ತಾವಕ್ಕೆ ಮೂರು ಅಕ್ಷರಗಳಿವೆ. ಆದ್ದರಿಂದ ಅವೆರಡೂ ಸಮಾನ ಶಕ್ತಿ ಹೊಂದಿರು-ವಂತಹುದು. ಆದಿಗೆ ಎರಡು ಅಕ್ಷರಗಳು, ಪ್ರತಿಹಾರಕ್ಕೆ ನಾಲ್ಕು ಅಕ್ಷರಗಳು. ಪ್ರತಿಹಾರದಿಂದ ಒಂದು ಅಕ್ಷರವನ್ನು ತೆಗೆದುಕೊಂಡು ಆದಿಗೆ ಸೇರಿಸಬೇಕು. ಆಗ ಎರಡು ಸಮಾನವಾಗುವುದು. ಉದ್ಗೀಥಕ್ಕೆ ಮೂರು ಅಕ್ಷರಗಳು. ಉಪದ್ರವಕ್ಕೆ ನಾಲ್ಕು ಅಕ್ಷರಗಳು.

ಮೂರಕ್ಕೆ ಮೂರು ಸೇರಿದರೆ ಸಮಾನವಾಗುತ್ತದೆ. ಆದರೆ ಒಂದು ಅಕ್ಷರ ಉಳಿಯುತ್ತದೆ. ಆ ಅಕ್ಷರವು ವಿಭಾಗ ನಿಮಿತ್ತ. ಆದ್ದರಿಂದ ಅದು ಸಮಾನವಾಗಿವೆ. ನಿಧನಕ್ಕೆ ಮೂರು ಅಕ್ಷರಗಳಿವೆ. ಆದ್ದರಿಂದ ಉಳಿದವುಗಳೊಂದಿಗೆ ಅದು ಕೂಡಾ ಸಮಾನವೇ. ಸಪ್ತವಿಧ ಸಾಮಗಾನದಲ್ಲಿ ಮೊತ್ತ 22 ಅಕ್ಷರಗಳು. ಯಾರು ಈ ವಿವರಗಳೆಲ್ಲವನ್ನೂ ತಿಳಿದುಕೊಂಡು ಸಪ್ತವಿಧ ಸಾಮಗಳನ್ನು ಗಾನ ಮಾಡುತ್ತಾರೋ ಅವರು ಭಾಗ್ಯವಂತರು. ಈ ಸಾಮದಲ್ಲಿರುವ ಭಾಗಗಳೆಲ್ಲವೂ ಸಮಾನವಾಗಿವೆ. ಈ ಸಾಮಗಾನಗಳು ಮೃತ್ಯುವನ್ನು ದಾಟಿ ಹೋಗುವುದು. ಇಪ್ಪತ್ತೊಂದು ಅಕ್ಷರಗಳೊಂದಿಗೆ ಸೂರ್ಯನನ್ನು ಸೇರುವುದು. ಈ ಲೋಕದಿಂದ ಪ್ರಕಾಶಿಸುತ್ತಿರುವ ಸೂರ್ಯನಿಗೆ 21 ಅಕ್ಷರಗಳಿವೆ. 22ನೆಯ ಅಕ್ಷರ ಸೂರ್ಯನ ಮೇಲಿರುವ ಲೋಕಕ್ಕೆ ಸೇರಿದಂತಹುದು. ಈ ದೇವಲೋಕದಲ್ಲಿ ಆನಂದ ಮಾತ್ರ ಇದೆ. ದುಃಖವಿಲ್ಲ ಸಪ್ತವಿಧ ಸಾಮಗಾನವನ್ನು ಮಾಡುವವರು, ಆ ದೇವಲೋಕ-ವನ್ನು ಹಾಗೂ ಇನ್ನೂ ಮೇಲಿನ ದಿವ್ಯಲೋಕಗಳನ್ನು ಸೇರುವರು.

(ಈ ಸಪ್ತವಿಧ ಸಾಮಪರಿಚ್ಛೇದವು ಪೂರ್ತಿಯಾಯಿತೆಂದು ಹೇಳಲು ದ್ವಿರುಕ್ತಿ ಹೇಳಲಾಗಿದೆ.)

## ದ್ವಿತೀಯ ಪ್ರಪಾಠಕ – ಏಕಾದಶ ಖಂಡ

ಮಂ.ಶ್ಲೋ.॥ ಮನೋಹಿಙ್ಕಾರೋ ವಾಕ್ ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರಃ ಪ್ರಾಣೋ ನಿಧನ-ಮೇತದ್ಗಾಯತ್ರಂ ಪ್ರಾಣೇಷು ಪ್ರೋತಮ್ । (1) ಸ ಯ ಏವಮೇತದ್ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಮಹಾಮನಾಃ ಸ್ಯಾತ್ತದ್ವ್ರತಮ್ । (2)

ತಾ॥ ಮನಸ್ಸು ಹಿಂಕಾರ, ವಾಕ್ಕು, ಪ್ರಸ್ತಾವ, ನೇತ್ರಗಳು, ಉದ್ಗೀಥ, ಶ್ರೋತ್ರಗಳು (ಕಿವಿಗಳು)

ಪ್ರತಿಹಾರ, ಪ್ರಾಣವು, ನಿಧನ, ಪ್ರಾಣೇಂದ್ರಿಯಗಳಲ್ಲಿ ಸಂಚರಿಸುತ್ತವೆ. ಗಾಯತ್ರಿ ಸಾಮ, ಯಾರು ಈ ಗಾಯತ್ರಿ ಸಾಮವನ್ನು ಪ್ರಾಣೇಂದ್ರಿಯಗಳಲ್ಲಿ ಸಂಚರಿಸುತ್ತಿರುವುದೆಂದು ತಿಳಿದುಕೊಂಡು ಗಾನ ಮಾಡುವರೋ ಅಂತಹವರಿಗೆ ಸರ್ವೇಂದ್ರಿಯ ಶಕ್ತಿಯುಂಟಾಗುವುದು, ಪೂರ್ಣಾಯುರ್ದಾಯವು ಲಭಿಸುವುದು. ಸರ್ವಶುಭಗಳು ಉಂಟಾಗುವವು. ಒಳ್ಳೆಯ ಸಂತಾನ, ಪಶುಸಂಪತ್ತು ಲಭಿಸುವುದು. ಹಾಗೂ ಸತ್ಕೀರ್ತಿ ಲಭಿಸುವುದು. ಸಮೃದ್ಧಿಯನ್ನು ಹೊಂದಿರುವುದೇ ಅಂತಹವರ ವ್ರತ.

## ದ್ವಿತೀಯ ಪ್ರಪಾಠಕ – ದ್ವಾದಶ ಖಂಡ

ಮಂ.ಶ್ಲೋ.॥ **ಅಭಿಮನ್ಥತಿ ಸ ಹಿಙ್ಕಾರೋ ಧೂಮೋ ಜಾಯತೇ ಸಪ್ರಸ್ತಾವೋ ಜ್ವಲತಿ ಸ ಉದ್ಗೀಥೋಽಙ್ಗಾರಾ ಭವನ್ತಿ ಸ ಪ್ರತಿಹಾರ ಉಪಶಾಮ್ಯತಿ ತನ್ನಿಧನಂ ಸಂಶಾಮ್ಯತಿ ತನ್ನಿಧನಮೇತದ್ರಥನ್ತರಮಗ್ನೌ ಪ್ರೋತಮ್।(1) ಸ ಯ ಏವಮೇತದ್ರಥನ್ತರಮಗ್ನೌ ಪ್ರೋತಂ ವೇದ ಬ್ರಹ್ಮವರ್ಚಸ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನಪ್ರತ್ಯಙ್ಙಗ್ನಿಮಾಚಮೇನ್ನ ನಿಷ್ಠೀವೇತ್ತದ್ವ್ರತಮ್॥** (2)

ತಾ॥ ಅರಣಿ ಕಟ್ಟಿಗೆಗಳನ್ನು ಮಥಿಸುವುದೇ ಹಿಂಕಾರ. ಧೂಮವು ಹುಟ್ಟುವುದೇ ಪ್ರಸ್ತಾವ. ಜ್ವಾಲೆಯು ಮೇಲಕ್ಕೇಳುವುದೇ ಉದ್ಗೀಥ. ಕಿಡಿಗಳು ಹಾರುವಂತಾಗುವುದೇ ಪ್ರತಿಹಾರ. ಅಗ್ನಿಯು ಉಪಶಮಿಸುವುದೇ ನಿಧನ. ಅಗ್ನಿ ಪೂರ್ತಿಯಾಗಿ ತಣ್ಣಗಾಗುವುದು ಸಹ ನಿಧನ. ಅಗ್ನಿಯಲ್ಲಿ ಉದ್ಭವಿಸುವಂತಹುದು ರಥಂತರ ಸಾಮ. ಅಗ್ನಿಯಲ್ಲಿ ಉದ್ಭವಿಸುವ ಈ ರಥಂತರ ಸಾಮವನ್ನು ಯಾರು ಈ ವಿಧವಾಗಿ ಅರಿತುಕೊಂಡು ಗಾನ ಮಾಡುತ್ತಿರುವರೋ, ಅವರು ಬುದ್ಧಿ ಬಲದಿಂದ ಪ್ರಕಾಶಿಸುವರು. ಒಳ್ಳೆಯ ಜೀರ್ಣ ಶಕ್ತಿಯನ್ನು ಹೊಂದಿ ಪೂರ್ಣಾಯುಷ್ಯದೊಂದಿಗೆ ಜೀವಿಸುವರು. ಉತ್ತಮ ಸಂತಾನ, ಪಶುಸಂಪತ್ತುಗಳನ್ನು ಹೊಂದಿರುವರು. ಹಾಗೂ ಅಪಾರ ಯಶಸ್ಸನ್ನು ಗಳಿಸುವರು. ಅಗ್ನಿಯನ್ನು ಪವಿತ್ರವಾಗಿ ಅರ್ಚಿಸುವುದು ಅವರ ವ್ರತ. (ಅಗ್ನಿಯ ಕಡೆ ಮುಖಮಾಡಿ ಏನನ್ನೂ ತಿನ್ನಬಾರದು. ಎಂಜಲನ್ನು ಸಹ ನುಂಗಬಾರದು. (ಉಗಿಯಬಾರದು.)

## ದ್ವಿತೀಯಃ ಪ್ರಪಾಠಕ – ತ್ರಯೋದಶ ಖಂಡ

ಮಂ.ಶ್ಲೋ.॥ **ಉಪಮನ್ತ್ರಯತೇ ಸ ಹಿಂಕಾರೋ ಜ್ಞಪಯತೇ ಸ ಪ್ರಸ್ತಾವಃ ಸ್ತ್ರಿಯಾ ಸಹ ಶೇತೇ ಸ ಉದ್ಗೀಥಃ ಪ್ರತಿಸ್ತ್ರೀಂ ಸಹ ಶೇತೇ ಸ ಪ್ರತಿಹಾರಃ, ಕಾಲಂ ಗಚ್ಛತಿ ತನ್ನಿಧನಂ ಪಾರಂ ಗಚ್ಛತಿ ತನ್ನಿಧನಮೇತದ್ವಾಮದೇವ್ಯಂ ಮಿಥುನೇ ಪ್ರೋತಮ್ (1) ಸ ಯ ಏವಮೇತದ್ವಾಮದೇವ್ಯಂ ಮಿಥುನೇ ಪ್ರೋತಂ ವೇದ ಮಿಥುನೀಭವತಿ, ಮಿಥುನಾನ್ಮಿಥುನಾತ್ ಪ್ರಜಾಯತೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನ ಕಾಞ್ಚನ ಪರಿಹರೇತ್ತದ್ವ್ರತಮ್** ॥ (2)

ತಾ॥ ವಾಮದೇವ್ಯಸಾಮವು (ಗಾಳಿ, ನೀರು) ಮಿಥುನದಿಂದ ಹುಟ್ಟಿದೆ. (ಪುರುಷನು ಸ್ತ್ರೀಯನ್ನು) ಸಂಕೇತ ಮಾಡುವುದು ಹಿಂಕಾರ. ವಸ್ತ್ರಾಭರಣಗಳಿಂದ ಪ್ರಸನ್ನಳನ್ನಾಗಿ ಮಾಡುವುದು ಪ್ರಸ್ತಾವ.

ಜೊತೆಯಲ್ಲಿರುವುದು ಉದ್ಗೀಥ. ಸ್ತ್ರೀಗೆ ಎದುರಾಗುವುದು (ಸಮ್ಮುಖ) ಪ್ರತಿಹಾರ. ಮೈಥುನದಿಂದ ಕೋರಿಕೆಯನ್ನು ತೀರಿಸಿಕೊಳ್ಳುವುದು ನಿಧನ. ವಾಮದೇವ್ಯಸಾಮವು ಮಿಥುನದಿಂದ ಹುಟ್ಟಿರುವುದೆಂದು ಯಾರು ತಿಳಿದುಕೊಳ್ಳುವರೋ ಅವರು ಉತ್ತಮ ದಂಪತಿಗಳಾಗಿ ಶ್ರೇಷ್ಠ ಸಂತತಿಯನ್ನು ಪಡೆಯುತ್ತಾರೆ. ಅಂತಹವರು ಪೂರ್ಣಾಯುಸ್ಸಿನೊಂದಿಗೆ ಬದುಕುತ್ತಾರೆ. ಪ್ರಕಾಶದೊಂದಿಗೆ ಜೀವಿಸುತ್ತಾರೆ. ಉತ್ತಮ ಸಂತಾನವನ್ನು ಪಶುಸಂಪತ್ತನ್ನು ಹೊಂದಿದವರಾಗುತ್ತಾರೆ. ಸತ್‌ಕೀರ್ತಿಯನ್ನು ಹೊಂದುವರು. ಪರಸ್ತ್ರೀಯರನ್ನು, ಪರಧನವನ್ನು ಆಶಿಸದೆ ಇರುವುದೇ ಅವರ ವ್ರತ.

## ದ್ವಿತೀಯ ಪ್ರಪಾಠಕ - ಚತುರ್ದಶ ಖಂಡ

**ಮಂ.ಶ್ಲೋ.॥ ಉದ್ಯನ್ಹಿಂಕಾರ ಉದಿತಃ ಪ್ರಸ್ತಾವೋ ಮಧ್ಯಂದಿನ ಉದ್ಗೀಥೋಽಪರಾಹ್ಣಃ ಪ್ರತಿಹಾರೋಽಸ್ತಂಯನ್ನಿಧನಮೇತದ್‌ಬೃಹದಾದಿತ್ಯೇ ಪ್ರೋತಮ್ । (1) ಸ ಯ ಏವಮೇತದ್ ಬೃಹದಾದಿತ್ಯೇ ಪ್ರೋತಂ ವೇದ ತೇಜಸ್ವ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ತಪನ್ತಂ ನನಿನ್ದೇತ್ತದ್ ವ್ರತಮ್ । (2)**

ತಾ॥ ಉದಯಿಸುವ ಸೂರ್ಯನು ಹಿಂಕಾರ. ಉದಯಿಸಿದ ನಂತರ ಇರುವ ಸೂರ್ಯ ಪ್ರಸ್ತಾವ. ಮಧ್ಯಾಹ್ನದ ಸೂರ್ಯ ಉದ್ಗೀಥ. ಮಧ್ಯಾಹ್ನದ ನಂತರ ಸೂರ್ಯ ಪ್ರತಿಹಾರ. ಅಸ್ತಮಯ ಸೂರ್ಯನು ನಿಧನ. ಇವು ಬೃಹತ್ಸಾಮದಲ್ಲಿ ತಿಳಿದುಬಂದಿರುವ ಹೆಸರುಗಳು. ಇದನ್ನು ತಿಳಿದುಕೊಂಡವರು ಉತ್ತಮ ಸಂತಾನದೊಂದಿಗೆ, ಪಶುಸಂಪತ್ತಿನೊಂದಿಗೆ ಕೀರ್ತಿಯನ್ನು ಗಳಿಸುತ್ತಾರೆ. ಇದನ್ನು ನಿಂದಿಸದೆ ಇರುವುದೇ ವ್ರತ. ಇದನ್ನು ಗ್ರಹಿಸಿದವರು ತೇಜೋವಂತರು ಅನ್ನಭೋಕ್ತರು ಹಾಗೂ ಪೂರ್ಣಾಯುಷ್ಯವಂತರಾಗುತ್ತಾರೆ.

## ದ್ವಿತೀಯ ಪ್ರಪಾಠಕ - ಪಂಚದಶ ಖಂಡ

**ಮಂ.ಶ್ಲೋ.॥ ಅಭ್ರಾಣಿ ಸಂಪ್ಲವನ್ತೇ ಸ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರ ಉದ್ಗೃಹ್ಣಾತಿ ತನ್ನಿಧನಮೇತದ್ವೈರೂಪಂ ಪರ್ಜನ್ಯೇ ಪ್ರೋತಮ್ । (1) ಸ ಯ ಏವಮೇತದ್ವೈರೂಪಂ ಪರ್ಜನ್ಯೇ ಪ್ರೋತಂ ವೇದ ವಿರೂಪಾಂಶ್ಚ ಸುರೂಪಾಂಶ್ಚ ಪಶೂನವರುನ್ಧೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ವರ್ಷನ್ತಂ ನನಿನ್ದೇತ್ತದ್ ವ್ರತಮ್ ॥ (2)**

ತಾ॥ ಒಟ್ಟುಗೂಡಿರುವ ಬಿಳಿಯ ಮೋಡಗಳು ಹಿಂಕಾರ. ಮಳೆಯಿಂದ (ನೀರಿನಿಂದ) ತುಂಬಿರುವ ನೀಲಮೇಘಗಳು ಪ್ರಸ್ತಾವ. ಮಳೆ ಸುರಿಸುವ ಮೇಘಗಳು ಉದ್ಗೀಥ. ಗುಡುಗು, ಮಿಂಚುಗಳನ್ನೊಳಗೊಂಡ ಮೇಘಗಳು ಪ್ರತಿಹಾರ. ಮಳೆ ಸುರಿಸಿದ ನಂತರದ ಮೋಡಗಳು ನಿಧನ. ಇದು ಮೇಘಗಳಿಗೆ ಸಂಬಂಧಿಸಿದ ವೈರೂಪ ಸಾಮಗಾನ. ಯಾರು ಮಳೆಗರೆಯುವ ಮೋಡಗಳಿಗೆ ಸಂಬಂಧಿಸಿದ ವೈರೂಪಸಾಮಗಾನವನ್ನು ಮಾಡುವರೋ, ಅವರು ಪಂಚ ಸಂಪತ್ತನ್ನು ಯಥೇಚ್ಛವಾಗಿ

ಹೊಂದಿ, ದೀರ್ಘಕಾಲ ಬಾಳುತ್ತಾರೆ. ಹಾಗೂ ಸುಸಂತಾನದಿಂದ ಪಶುಸಂತತಿಯೊಡನೆ ಬಹುವಾಗಿ ಕೀರ್ತಿಯನ್ನು ಗಳಿಸುತ್ತಾರೆ. ಸುರಿಯುವ ಮಳೆಯಲ್ಲಿ ದೋಷವನ್ನು ಕಾಣದೆ ಇರುವುದೇ ಅವರ ವ್ರತ. ಮೇಘಗಳು ವಿವಿಧ ರೂಪಗಳಾಗಿ ವರ್ಣಗಳಾಗಿ ಕಾಣಿಸುವುದರಿಂದ ವೈರೂಪ್ಯಸಾಮವಾಗಿ ವರ್ಣಿಸಲಾಗಿದೆ.

## ದ್ವಿತೀಯ ಪ್ರಪಾಠಕ – ಷೋಡಶ ಖಂಡ

**ಮಂ.ಶ್ಲೋ.॥ ವಸನ್ತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಶ್ಶರತ್ ಪ್ರತಿಹಾರೋ ಹೇಮನ್ತೋ ನಿಧನಮೇತದ್ವೈರಾಜಮೃತುಷು ಪ್ರೋತಮ್ (1) ಸ ಯ ಏವಮೇತದ್ವೈರಾಜಮೃತುಷು ಪ್ರೋತಂ ವೇದ ವಿರಾಜತಿ ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯರ್ತೂನ್ನನಿನ್ದೇತ್ತದ್ ವ್ರತಮ್॥ (2)**

ತಾ॥ ವಸಂತ ಋತುವು ಹಿಂಕಾರ. ಗ್ರೀಷ್ಮ ಋತು ಪ್ರಸ್ತಾವ. ವರ್ಷ ಋತು ಉದ್ಗೀಥ. ಶರದೃತು ಪ್ರತಿಹಾರ. ಹೇಮಂತ ಋತು ನಿಧನ. ಋತುಗಳಿಗೆ ಸಂಬಂಧಿಸಿದ ವೈರಾಜ ಸಾಮಗಾನವು ಇದೇ. ಋತುಗಳಲ್ಲಿ ತಿಳಿಸಲಾದ ಈ ವೈರಾಜಸಾಮಗಾನವನ್ನು ಯಾರು ಮಾಡುವರೋ ಅಂತಹವರಿಗೆ ಉತ್ತಮ ಸಂತಾನ, ಪಶುಸಂಪತ್ತು ಉಂಟಾಗುವುದು. ಬುದ್ಧಿ ಬಲದಿಂದ ವಿಜ್ಞಾನದಲ್ಲಿ ಮುಂದುವರೆದವರಾಗಿ, ಪೂರ್ಣಾಯುಸ್ಸಿನೊಂದಿಗೆ ತೇಜೋವಂತರಾಗಿ ಬಾಳುತ್ತಾರೆ. ವಿಶೇಷವಾದ ಕೀರ್ತಿಯನ್ನು ಗಳಿಸುತ್ತಾರೆ. ಋತು ಧರ್ಮಗಳಲ್ಲಿ ದೋಷವನ್ನು ಎಣಿಸದೆ ಇರುವುದು ಅವರ ವ್ರತವಾಗಿರುತ್ತದೆ. (ಈ ವೈರಾಜಸಾಮವು ಋತುಗಳೊಂದಿಗೆ ಆಧಾರವನ್ನು ಹೊಂದಿರುತ್ತದೆ.)

## ದ್ವಿತೀಯ ಪ್ರಪಾಠಕ – ಸಪ್ತದಶ ಖಂಡ

**ಮಂ.ಶ್ಲೋ.॥ ಪೃಥಿವೀ ಹಿಙ್ಕಾರೋನ್ತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥೋ ದಿಶಃ ಪ್ರತಿಹಾರಸ್ಸಮುದ್ರೋ ನಿಧನಮೇತಾಶ್ಶಕ್ವರ್ಯೋ ಲೋಕೇಷು ಪ್ರೋತಾಃ । (1) ಸ ಯ ಏವಮೇತಾಶ್ಶಕ್ವರ್ಯೋ-ಲೋಕೇಷು ಪ್ರೋತಾ ವೇದ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಲೋಕಾನ್ನನಿನ್ದೇತ್ತದ್ ವ್ರತಮ್ (2)**

ತಾ॥ ಪೃಥಿವಿಯೇ ಹ್ರೀಂಕಾರ. ಆಕಾಶವು ಪ್ರಸ್ತಾವ. ಸ್ವರ್ಗವು ಉದ್ಗೀಥ. ದಿಕ್ಕುಗಳು ಪ್ರತಿಹಾರ. ಸಮುದ್ರವು ನಿಧನ. ಲೋಕದಲ್ಲಿ ಅದನ್ನು ಶಕ್ವರೀ ಸಾಮಗಾನವೆನ್ನುತ್ತಾರೆ. ಯಾರು ಲೋಕಗಳಿಗೆ ಸಂಬಂಧಿಸಿದ ಈ ಶಕ್ವರೀ ಸಾಮಗಾನವನ್ನು ಮಾಡುತ್ತಿರುವರೋ ಅವರು ಲೋಕಸಂಪತ್ತನ್ನೆಲ್ಲವನ್ನೂ ಹೊಂದುವರು. ಸಂಪೂರ್ಣ ಜೀವಿತವನ್ನು ಅನುಭವಿಸುತ್ತಾರೆ. ಒಳ್ಳೆಯ ಮಕ್ಕಳನ್ನು ಪಡೆದು ಪಶುಸಂಪತ್ತನ್ನು ಹೊಂದಿ ಸತ್ಕೀರ್ತಿಯನ್ನು ಗಳಿಸಿ ಬಾಳುವರು. ಲೋಕಗಳಲ್ಲಿ(ನ) ದೋಷಗಳನ್ನು ಎಣಿಸದಿರುವುದೇ ಅವರ ವ್ರತ.

(ಶಕ್ವರೀ ಸಾಮೋಪಾಸನೆಯನ್ನು ಇದರೊಂದಿಗೆ ಹೇಳಲಾಗಿದೆ.)

## ದ್ವಿತೀಯ ಪ್ರಪಾಠಕ - ಅಷ್ಟಾದಶ ಖಂಡ

ಮಂ.ಶ್ಲೋ.॥ ಅಜಾ ಹಿಙ್ಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಮೇತಾ ರೇವತ್ಯಃ ಪಶುಷು ಪ್ರೋತಾಃ । (1) ಸ ಯ ಏವಮೇತಾ ರೇವತ್ಯಃ ಪಶುಷು ಪ್ರೋತಾ ವೇದ ಪಶುಮಾನ್ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಪಶೂನ್ನನಿನ್ದೇತ್ತದ್ ವ್ರತಮ್ ॥ (2)

ತಾ॥ ಮೇಕೆಗಳು ಹಿಂಕಾರ, ಕುರಿಗಳು ಪ್ರಸ್ತಾವ. ಗೋವುಗಳು ಉದ್ಗೀಥ. ಅಶ್ವಗಳು ಪ್ರತಿಹಾರ, ಮಾನವನು ನಿಧನ. ಪಶುಗಳಿಗೆ ಸಂಬಂಧಿಸಿದಂತಹ ಇದು ರೇವತೀ ಸಾಮಗಾನ ಯಾರು ಪಶುಸಂತತಿಗೆ ಸಂಬಂಧಿಸಿದ ಈ ರೇವತೀ ಸಾಮವನ್ನು ಗಾನವನ್ನು ಮಾಡುವರೋ ಅವರಿಗೆ ಪಶು ಸಂಪತ್ತು ಲಭಿಸುತ್ತದೆ. ಪೂರ್ಣಾಯುಸ್ಸು ಉಂಟಾಗುತ್ತದೆ. ಒಳ್ಳೆಯ ಸಂತಾನ ಮತ್ತು ಪಶುಸಂಪತ್ತು ಮಾತ್ರವಲ್ಲದೆ ಹೆಚ್ಚಿನ ಕೀರ್ತಿಯು ಲಭ್ಯವಾಗುವುದು. ಪಶುಗಳಲ್ಲಿ ದೋಷವನ್ನು ಕಾಣದಿರುವುದೇ ಅವರ ವ್ರತ.

## ದ್ವಿತೀಯ ಪ್ರಪಾಠಕ - ಏಕೋನವಿಂಶ ಖಂಡ

ಮಂ.ಶ್ಲೋ.॥ ಲೋಮ ಹಿಙ್ಕಾರ ಸ್ತ್ವಕ್ ಪ್ರಸ್ತಾವೋ ಮಾಂಸಮುದ್ಗೀಥೋಽಸ್ಥಿಪ್ರತಿಹಾರೋ ಮಜ್ಜಾ ನಿಧನ-ಮೇತದ್ಯಜ್ಞಾ ಯಜ್ಞೀಯಮಙ್ಗೇಷು ಪ್ರೋತಮ್ । (1) ಸ ಯ ಏವಮೇತದ್ಯಜ್ಞಾ ಯಜ್ಞೀಯಮಙ್ಗೇಷು ಪ್ರೋತಂ ವೇದಾಙ್ಗೀಭವತಿ ಸಾಙ್ಗೇನ ವಿಹಾರ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಸಂವತ್ಸರಂ ಮಜ್ಞೋ ನಾಶ್ನೀಯಾತ್ತದ್ವ್ರತಂ ಮಜ್ಞೋ ನಾಶ್ನೀಯಾದಿತಿ ವಾ॥ (2)

ತಾ॥ ರೋಮಗಳು (ಕೂದಲು) ಹಿಂಕಾರ, ಚರ್ಮವು ಪ್ರಸ್ತಾವ, ಮಾಂಸವು ಉದ್ಗೀಥ, ಮೂಳೆಗಳು ಪ್ರತಿಹಾರ. ಮಜ್ಜೆ ನಿಧನ. ಶರೀರಾವಯವಗಳಿಗೆ ಸಂಬಂಧಿಸಿದಂತಹ ಇದು ಯಜ್ಞಾಯಜ್ಞೀಯ ಸಾಮಗಾನ. ಶರೀರಾವಯವಗಳಿಗೆ ಸಂಬಂಧಿಸಿದ ಈ ಯಜ್ಞಾಯಜ್ಞೀಯ ಸಾಮಗಾನವನ್ನು ಯಾರು ತಿಳಿದುಕೊಳ್ಳುವರೋ, ಅವರು ಒಳ್ಳೆಯದೇ ದೇಹೇಂದ್ರಿಯ ಬಲವನ್ನು ಹೊಂದುತ್ತಾರೆ. ಪೂರ್ಣಾಯುಸ್ಸಿನೊಂದಿಗೆ ಜೀವಿಸುತ್ತಾರೆ. ಉತ್ತಮ ಸಂತಾನದೊಂದಿಗೆ, ಪಶುಸಂಪತ್ತಿನೊಂದಿಗೆ, ಕೀರ್ತಿ ಗಳಿಸಿ ಬಾಳುವರು. ಒಂದು ಸಂವತ್ಸರ ಅಥವಾ ಜೀವನ ಪರ್ಯಂತ ಮತ್ಸ್ಯಮಾಂಸಗಳನ್ನು ಭುಜಿಸದಿರುವುದೇ ಅವರ ವ್ರತ.

## ದ್ವಿತೀಯ ಪ್ರಪಾಠಕ - ವಿಂಶ ಖಂಡ

ಮಂ.ಶ್ಲೋ.॥ ಅಗ್ನಿರ್ಹಿಙ್ಕಾರೋ ವಾಯುಃ ಪ್ರಸ್ತಾವ ಆದಿತ್ಯ ಉದ್ಗಿಥೋ ನಕ್ಷತ್ರಾಣಿ ಪ್ರತಿಹಾರಶ್ಚನ್ದ್ರಮಾ ನಿಧನಮೇತದ್ರಾಜನಂ ದೇವತಾಸು ಪ್ರೋತಮ್ । (1) ಸ ಯ ಏನಮೇತದ್ರಾಜನಂ ದೇವತಾಸು ಪ್ರೋತಂ ವೇದೈ ತಾಸಾಮೇವ ದೇವತಾನಾಂ ಸ ಲೋಕತಾಂ ಸಾರ್ಷ್ಟಿತಾಂ

**ಸಾಯುಜ್ಯಂ ಗಚ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿ-ರ್ಭವತಿ ಮಹಾನ್ಕೀರ್ತ್ಯಾ ಬ್ರಾಹ್ಮಣಾನ್ನನಿನ್ದೇತ್ ತದ್ವ್ರತಮ್ ॥ (2)**

ತಾ॥ ಅಗ್ನಿ ಹಿಂಕಾರ, ವಾಯು ಪ್ರಸ್ತಾವ, ಸೂರ್ಯನು ಉದ್ಗೀಥ, ನಕ್ಷತ್ರಗಳು ಪ್ರತಿಹಾರ, ಚಂದ್ರನು ನಿಧನ. ದೇವತೆಗಳಿಗೆ ಸಂಬಂಧಿಸಿದಂತಹ ಇದು ರಾಜನ ಸಾಮಗಾನ. ದೇವತೆಗಳಿಗೆ ಸಂಬಂಧಿಸಿದ ಈ ರಾಜನ ಸಾಮಗಾನವನ್ನು ಯಾರು ತಿಳಿದುಕೊಂಡಿದ್ದಾರೋ ಅವರು ಈ ಲೋಕದಲ್ಲೇ ವಾಸಮಾಡುವರು. ಇಲ್ಲವೇ ದೇವತೆಗಳಂತೆಯೇ ಭೋಗಗಳನ್ನು ಅನುಭವಿಸುವರು. ಇಲ್ಲವೇ ಆ ದೇವತಾತ್ಮರಲ್ಲಿ ಲೀನವಾಗುವರು. ಪೂರ್ಣಾಯುಸ್ಸಿನೊಂದಿಗೆ ಬದುಕುವರು; ಒಳ್ಳೆಯ ಸಂತಾನ, ಪಶುಸಂಪತ್ತಿನೊಂದಿಗೆ ಕೀರ್ತಿಗಳಿಸಿ ಜೀವಿಸುವರು. ಬ್ರಾಹ್ಮಣರಲ್ಲಿ ದೋಷವನ್ನು ಎಣಿಸದಿರುವುದೇ ಇವರ ವ್ರತ.

# ದ್ವಿತೀಯ ಪ್ರಪಾಠಕ _ ಏಕವಿಂಶ ಖಂಡ

**ಮಂ.ಶ್ಲೋ.॥ ತ್ರಯೀ ವಿದ್ಯಾ ಹಿಙ್ಕಾರಸ್ತ್ರಯ ಇಮೇ ಲೋಕಾಸ್ಸ ಪ್ರಸ್ತಾವೋಽಗ್ನಿರ್ವಾಯುರಾದಿತ್ಯಸ್ಸ ಉದ್ಗೀಥೋ ನಕ್ಷತ್ರಾಣಿ ವಯಾಂಸಿ ಮರೀಚಯಸ್ಸ ಪ್ರತಿಹಾರಸ್ಸರ್ಪಾ ಗನ್ಧರ್ವಾಃ ಪಿತರಸ್ತನ್ನಿಧನ-ಮೇತತ್ಸಾಮಸರ್ವಸ್ಮಿನ್ ಪ್ರೋತಮ್ ॥ (1) ಸ ಯ ಏವಮೇತತ್ಸಾಮ ಸರ್ವಸ್ಮಿನ್ ಪ್ರೋತಂ ವೇದ ಸರ್ವಂ ಹ ಭವತಿ। (2) ತ ದೇಷಶ್ಲೋಕಃ, ಯಾನಿ ಪಞ್ಚಧಾ ತ್ರೀಣಿ, ತ್ರೀಣಿ ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ । (3) ಯಸ್ತದ್ವೇದ ಸವೇದ ಸರ್ವಂ ಸರ್ವಾ ದಿಶೋ ಬಲಿಮಸ್ಮೈ ಹರನ್ತಿ, ಸರ್ವಮಸ್ಮೀತ್ಯುಪಾಸೀತ ತದ್ವ್ರತಂ, ತದ್ವ್ರತಂ॥**

ತಾ॥ ಮೂರು ವೇದಗಳು ಹಿಂಕಾರ; ಮೂರು ಲೋಕಗಳು ಪ್ರಸ್ತಾವ; ಅಗ್ನಿ ವಾಯು ಸೂರ್ಯ, ಉದ್ಗೀಥ, ನಕ್ಷತ್ರಗಳು, ಪಕ್ಷಿಗಳು, ಸೂರ್ಯಕಿರಣಗಳು, ಪ್ರತಿಹಾರ; ನಾಗರು, ಗಂಧರ್ವರು ಪಿತೃಗಳು, ನಿಧನ, ಇದು ಸರ್ವರಿಗೂ ಸಂಬಂಧಿಸಿದ ಸಾಮಗಾನ. ಸರ್ವವಸ್ತುಗಳಿಗೂ ಸಂಬಂಧಿಸಿದ ಈ ಸಾಮಗಾನವನ್ನು ಯಾರು ಮಾಡುತ್ತಿರುವರೋ ಅವರಿಗೆ ಸರ್ವಸಂಪತ್ತುಗಳೂ ಲಭಿಸುತ್ತವೆ. ಈ ಗಾನವು ಇವುಗಳಿಗೆ ಸಂಬಂಧಿಸಿದ ಮಂತ್ರ. ಇದು ಐದು ವಿಧಗಳಾಗಿ ಮೂರು ಭಾಗಗಳಾಗಿ ಇದೆ. ಈ ಹದಿನೈದು ಬಗೆಯ ಸಾಮಗಾನಕ್ಕೆ ಮೀರಿದ ಗಾನ ಮತ್ತೊಂದು ಇಲ್ಲ. ಈ ವಿವರಗಳನ್ನು ತಿಳಿದುಕೊಂಡವರು ಸರ್ವಜ್ಞರು. ಎಲ್ಲ ದಿಕ್ಕುಗಳು ಇವರಿಗೆ ಸಹಾಯ ಮಾಡುತ್ತವೆ. "ಸರ್ವವು ನಾನೇ ಆಗಿದ್ದೇನೆ" ಎಂದು ಧ್ಯಾನ ಮಾಡುವುದೇ ಇವರ ವ್ರತ. (ವೇದಗಳು ಮೂರು, ಲೋಕಗಳು ಮೂರು, ದೇವತೆಗಳು ಮೂವರು, ನಕ್ಷತ್ರ, ಖಗ ಕಿರಣಗಳು, ಸರ್ಪ, ಗಂಧರ್ವ, ಪಿತೃಗಳು ಈ ಎಲ್ಲವೂ ಮೂರೇ ಆಗಿದೆ.)

# ದ್ವಿತೀಯ ಪ್ರಪಾಠಕ _ ದ್ವಾವಿಂಶ ಖಂಡ

**ಮಂ.ಶ್ಲೋ.॥ ವಿನರ್ದಿಸಾಮ್ನೋ ವೃಣೇಪಶವ್ಯಮಿತ್ಯಗ್ನೇರುದ್ಗೀಥೋಽನಿರುಕ್ತಃ ಪ್ರಜಾಪತೇರ್ನಿರುಕ್ತ-ಸ್ಸೋಮಸ್ಯ ಮೃದುಶ್ಲಕ್ಷ್ಣಂ ವಾಯೋಶ್ಲಕ್ಷ್ಣಂ ಬಲವದಿನ್ದ್ರಸ್ಯ ಕ್ರೌಞ್ಚಂ ಬೃಹಸ್ಪತೇರಪ -**

**-ಧ್ಯಾನ್ತಂ ವರುಣಸ್ಯತಾಸ್ಸರ್ವಾನೇವೋಪಸೇವೇತ ವಾರುಣಂತ್ವೇವ ವರ್ಜಯೇತ್। (1) ಅಮೃತತ್ವಂ ದೇವೇಭ್ಯ ಆಗಾಯಾನೀತ್ಯಾಗಾಯೇತ್ ಸ್ವಧಾಂ ಪಿತೃಭ್ಯ ಆಶಾಂ ಮನುಷ್ಯೇಭ್ಯ ಸ್ತೃಣೋದಕಂ ಪಶುಭ್ಯಃ ಸ್ವರ್ಗಂ ಲೋಕಂ ಯಜಮಾನಾಯಾನ್ನಮಾತ್ಮನ ಆಗಾಯಾನಿತ್ಯೇತಾನಿ ಮನಸಾಧ್ಯಾಯನ್ನ ಪ್ರಮತ್ತಃ ಸ್ತುವೀತ ॥ (2)**

ತಾ॥ ಸಾಮಗಾನದಲ್ಲಿ ಕೆಲವರು ಭಾವಿಸಿರುವ ರೀತಿಯಲ್ಲಿ (.....ವಿನರ್ದಿ ಗುಣದಿಂದ ಕೂಡಿದ ಸಾಮೋಪಾಸನೆಯನ್ನು ವಿವರಿಸುತ್ತಿದ್ದಾರೆ.) ಪಶುಸಂತತಿಗಾಗಿ ಈ ಕೆಳಗೆ ಹೇಳಿರುವಂತಹ ಗಾನ ಮಾಡಬೇಕು. ಅಗ್ನಿಗಾಗಿ ಉದ್ಗೀಥ, ಪ್ರಜಾಪತಿಗಾಗಿ ಅನಿರುಕ್ತ, ಚಂದ್ರನಿಗಾಗಿ ನಿರುಕ್ತ, ವಾಯುವಿಗಾಗಿ ಮೃದುವಾಗಿ ಮತ್ತು ಕಠಿಣವಾಗಿಯೂ, ಸಹ, ಇಂದ್ರನಿಗಾಗಿ ಮೃದುವಾಗಿ, ಶಕ್ತಿಯುತವಾಗಿ, ಬೃಹಸ್ಪತಿಗಾಗಿ ಕ್ರೌಂಚದಂತೆ ವರುಣದೇವನಿಗಾಗಿ ಹೀನ (ಕ್ಷೀಣ) ಸ್ವರದಲ್ಲಿ, ಸಾಮಗಳನ್ನು ಗಾನ ಮಾಡಬೇಕು. ಮೇಲೆ ಹೇಳಿರುವುದೆಲ್ಲ ಸಾಧನೆ ಮಾಡಬೇಕು. ವರುಣದೇವನಿಗಾಗಿ ಇರುವ ಗಾನವನ್ನು ಸಾಧನೆ ಮಾಡಬೇಕಾಗಿಲ್ಲ." ಈ ದೇವತೆಗಳನ್ನು ಗಾನ ಮಾಡಿದ್ದರಿಂದ ನನಗೆ ಅಮರತ್ವ ಬರಲಿ" ಎಂದು ಭಾವಿಸುತ್ತಾ ಸಾಮಗಾನವನ್ನು ಮಾಡಬೇಕು. "ಈ ಸಾಮಗಾನದಿಂದ ದೇವತೆಗಳಿಗೆ ಅಮೃತತತ್ವ, ಪಿತೃಗಳಿಗೆ ತೃಪ್ತಿ ಭೋಜನ, ಮಾನವರಿಗೆ ವಾಂಛಿತಗಳು, ಪಶುಸಂತತಿಗೆ ಒಳ್ಳೆ ಹುಲ್ಲು ನೀರು, ಯಜಮಾನಿಗೆ ಸ್ವರ್ಗಲೋಕ, ನನಗೆ ಉತ್ತಮ ಆಹಾರ ಒದಗುವಂತಾಗಲಿ" ಎಂದು ಭಾವಿಸುತ್ತಾ ಸ್ತೋತ್ರಗಳನ್ನು ಶ್ರದ್ಧೆಯಿಂದ ಗಾನ ಮಾಡಬೇಕು.

**ಮಂ.ಶ್ಲೋ.॥ ಸರ್ವೇ ಸ್ವರಾ ಇನ್ದ್ರಸ್ಯಾತ್ಮಾನಃ ಸರ್ವ ಊಷ್ಮಾಣಃ ಪ್ರಜಾಪತೇರಾತ್ಮಾನಃ ಸರ್ವೇ ಸ್ಪರ್ಶಾ ಮೃತ್ಯೋ-ರಾತ್ಮಾನಸ್ತಂ ಯದಿ ಸ್ವರೇಷೂಪಾಲಭೇ ತೇನ್ದ್ರಂ ಶರಣಂ ಪ್ರಪನ್ನೋಽಭೂವಂ ಸತ್ವಾ ಪ್ರತಿವಕ್ಷ್ಯತೀತ್ಯೇನಂ ಬ್ರೂಯಾತ್ । (3) ಅಥ ಯದ್ಯೇನಮೂಷ್ಮಸೂಪಾಲಭೇತ ಪ್ರಜಾಪತಿಂ ಶರಣಂ ಪ್ರಪನ್ನೋಽಭೂವಂ ಸತ್ವಾಪ್ರತಿಪೇಕ್ಷ್ಯತೀತ್ಯೇನಂ ಬ್ರೂಯಾದಥ ಯದ್ಯೇನಂ ಸ್ಪರ್ಶೇಷೂಪಾಲಭೇತ ಮೃತ್ಯುಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಧಕ್ಷ್ಯತೀತ್ಯೇನಂ ಬ್ರೂಯಾತ್ । (4) ಸರ್ವೇ ಸ್ವರಾ ಘೋಷವನ್ತೋ ಬಲವನ್ತೋ ವಕ್ತವ್ಯಾ ಇನ್ದ್ರೇ ಬಲಂ ದದಾನೀತಿ ಸರ್ವ ಊಷ್ಮಾಣೋಽಗ್ರಸ್ತಾ ಅನಿರಸ್ತಾ ವಿವೃತಾ ವಕ್ತವ್ಯಾಃ ಪ್ರಜಾಪತೇರಾತ್ಮಾನಂ ಪರಿದದಾನೀತಿ ಸರ್ವೇ ಸ್ಪರ್ಶಾ ಲೇಶೇನಾನಭಿನಿಹಿತಾ ವಕ್ತವ್ಯಾ ಮೃತ್ಯೋರಾತ್ಮಾನಂ ಪರಿಹಾರಾಣೀತಿ ॥ (5)**

ತಾ॥ ಎಲ್ಲ ಸ್ವರಗಳೂ ದೇವೇಂದ್ರನ ರೂಪಗಳು. ಎಲ್ಲ ಊಷ್ಮಗಳು ಪ್ರಜಾಪತಿರೂಪಗಳು. ಎಲ್ಲ ಸ್ಪರ್ಶಗಳು ಮೃತ್ಯುದೇವತೆಯ ರೂಪಗಳು. ಸ್ವರಗಾನದಲ್ಲಿ ಯಾರಾದರೂ ದೋಷಗಳನ್ನು ಕುರಿತು ಹೇಳಿದ್ದೇ ಆದರೆ "ಇಂದ್ರನ ಶರಣು ಬೇಡಿ ಗಾನ ಮಾಡಿದೆ. ಇಂದ್ರನೇ ಉತ್ತರವನ್ನೀಯಲಿ" ಎಂದು ಹೇಳಬೇಕು. ಊಷ್ಮಗಳಲ್ಲಿ ಯಾರಾದರೂ ದೋಷವನ್ನು ತಿಳಿಯುವಂತಾದರೆ "ನಾನು ಪ್ರಜಾಪತಿ-ಯನ್ನು ಶರಣುಬೇಡಿ ಬಂದಿದ್ದೇನೆ. ಮೃತ್ಯುವು ನಿನ್ನನ್ನು ದಹಿಸುವುದು" ಎಂದು ಹೇಳಬೇಕು. ಸಮಸ್ತ ಸ್ವರಗಳನ್ನು ಜೋರಾಗಿ (ಗಟ್ಟಿಯಾಗಿ) ಸುಶಬ್ದದಲ್ಲಿ ಭಾವಪೂರಿತವಾಗಿ ಗಾನ ಮಾಡಬೇಕು.

"ಇಂದ್ರನಿಗೆ ಒಳ್ಳೆಯ ಬಲ ಬರಲಿ." ಎಲ್ಲ ಊಷ್ಮಗಳು ಅಗ್ರಸ್ತಗಳಾಗಿ, ಅನಿರಸ್ತಗಳಾಗಿ, ವಿವೃತಗಳಾಗಿ ಭಾವಿಸಿ ಉಚ್ಚರಿಸಬೇಕು. ಪ್ರಜಾಪತಿಗೆ (ವಿರಾಟ್‌ಗೆ) ಆತ್ಮ ಸಮರ್ಪಣವನ್ನು ಮಾಡುತ್ತಿದ್ದೇನೆ. ಎಲ್ಲಾ ಸ್ಪರ್ಶಗಳನ್ನು ನಿಧಾನವಾಗಿ, ಅಕ್ಷರಗಳು ಒಂದರಲ್ಲೊಂದು ಬೆರೆತು ಹೋಗದಂತೆ ಭಾವನೆ ಮಾಡಿ ಗಾನ ಮಾಡಬೇಕು."ಮೃತ್ಯುವಿನಿಂದ ನಾನೇ ರಕ್ಷಿಸುವಂತಾಗಲಿ" ಎಂದು ಭಾವಿಸುತ್ತಾ ಉಚ್ಚರಿಸ-ಬೇಕು. (ಎಲ್ಲಾ ಅಕ್ಷರಗಳನ್ನು ಘೋಷಯುಕ್ತವಾಗಿ ಪ್ರತಿಧ್ವನಿಸುವಂತೆ ಗಟ್ಟಿಯಾಗಿ ಉಚ್ಚರಿಸ ಬೇಕು.)

## ದ್ವಿತೀಯ ಪ್ರಪಾಠಕ – ತ್ರಯೋವಿಂಶ ಖಂಡ

**ಮಂ.ಶ್ಲೋ.॥ ತ್ರಯೋ ಧರ್ಮಸ್ಕನ್ಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ, ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲವಾಸೀ, ತೃತೀಯೋಽತ್ಯಸ್ತಮಾತ್ಮಾನಮಾಚಾರ್ಯಕುಲೇಽ-ವಸಾದಯಸ್ಸರ್ವ ಏತೇ ಪುಣ್ಯಲೋಕಾ ಭವನ್ತಿ ಬ್ರಹ್ಮಸಂಸ್ಥೋಽಮೃತತ್ವಮೇತಿ। (1) ಪ್ರಜಾಪತಿರ್ಲೋಕಾ ಸಭ್ಯತಪತ್ತೇಭ್ಯೋಽಭಿತಪ್ತೇಭ್ಯ ಸ್ತ್ರಯೀ ವಿದ್ಯಾ ಸಮ್ಪ್ರಾ ಸ್ರವತ್ತಾ-ಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾ ಸ್ರವನ್ತ ಭೂರ್ಭುವಃಸ್ವರಿತಿ। (2) ತಾನ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯ ಓಙ್ಕಾರಸ್ಸಂಪ್ರಾ ಸ್ರವತ್ತದ್ಯಥಾಶಂಕುನಾ ಸರ್ವಾಣಿ ವರ್ಣಾನಿ ಸಂತೃಣ್ಣಾನ್ಯೇವ ಮೋಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಓಂಕಾರ ಏವೇದಂ ಸರ್ವಮೋಂಕಾರ ಏ ವೇದಂ ಸರ್ವಮ್ ॥ (3)**

ತಾ॥ ಯಜ್ಞಧರ್ಮಗಳು ಮೂರು ರೂಪಗಳಾಗಿ ಇವೆ. ಮೊದಲ ಧರ್ಮ ಅಧ್ಯಯನ, ದಾನ, ಇದನ್ನು ಮೊಟ್ಟಮೊದಲು ಮಾಡಬೇಕು. ಎರಡನೆಯ ಧರ್ಮ ಬ್ರಹ್ಮಚರ್ಯ. ಮೂರನೆಯ ಧರ್ಮ ಗುರುಕುಲವಾಸ. ಆಚಾರ್ಯರ ಸೇವೆ ಮಾಡುವುದು; ಇವುಗಳನ್ನು ಆಚರಿಸುವುದರಿಂದ ಪುಣ್ಯಲೋಕ ಪ್ರಾಪ್ತಿ. ಬ್ರಹ್ಮಸನ್ನಿಧಾನದಲ್ಲಿ ಅಮೃತಪದವಿ ಲಭಿಸುವುದು. ಪ್ರಜಾಪತಿಯು ಲೋಕಗಳನ್ನು ಸೃಷ್ಟಿಸಿದ. ಆ ಲೋಕಗಳಿಂದ ತ್ರಯಿವಿದ್ಯೆಗಳನ್ನೊಳಗೊಂಡ ವೇದಗಳನ್ನು ಸೃಷ್ಟಿಸಿದ. ಆ ವೇದಗಳಿಂದ ಭೂಃ, ಭುವಃ, ಸುವಃ ಎನ್ನುವ ಅಕ್ಷರಗಳನ್ನು ಸೃಷ್ಟಿಸಿದ. ಪ್ರಜಾಪತಿಯನ್ನು ಆ ಅಕ್ಷರಗಳಿಂದ ಭಾವಿಸಿದ. ಅವುಗಳಿಂದ ಸಾರವತ್ತಾದ "ಓಂ" ಎನ್ನುವ ಪ್ರಣವ ಹುಟ್ಟಿತು. ವರ್ಣದಲ್ಲಿನ ಜೀವಕಣಗಳು ವರ್ಣಗಳಲ್ಲೆಲ್ಲ ವ್ಯಾಪಿಸಿರುವಂತೆ ಎಲ್ಲ ಅಕ್ಷರಗಳಲ್ಲೂ ಓಂಕಾರವು ವ್ಯಾಪಿಸಿದೆ. ಆದ್ದರಿಂದ ಈ ಸರ್ವಸ್ವವೂ ಓಂಕಾರವೇ ಆಗಿದೆ.

## ದ್ವಿತೀಯ ಪ್ರಪಾಠಕ – ಚತುರ್ವಿಂಶ ಖಂಡ

**ಮಂ.ಶ್ಲೋ.॥ ಬ್ರಹ್ಮವಾದಿನೋ ವದನ್ತಿ ಯದ್ವಸೂನಾಂ ಪ್ರಾತಸ್ಸವನಂ ರುದ್ರಾಣಾಂ ಮಾಧ್ಯನ್ದಿನಂ ಸವನ-ಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ ತೃತೀಯ ಸವನಮ್। (1) ಕ್ವತರ್ಹಿ ಯಾಜಮಾನಸ್ಯ ಲೋಕ ಇತಿ ಸಯಸ್ತನ್ನವಿದ್ಯಾತ್ಕಥಂ ಕುರ್ಯಾದಥ ವಿದ್ವಾನ್ಕುರ್ಯಾತ್। (2) ಪುರಾ ಪ್ರಾತರನುವಾಕಸ್ಯಾಪಾಕರಣಾಜ್ಜಘನೇನ ಗಾರ್ಹಪತ್ಯಸ್ಯೋದಙ್ಮುಖ ಉಪವಿಶ್ಯ ಸವಾಸವಂ ಸಾಮಾಭಿಗಾಯತಿ। (3) ಲೋ೩ಕದ್ವಾರಮಪಾವಾ೩ರ್ಣೂ೩-೩ಪಶ್ಯೇಮತ್ವಾ**

**ವಯಂರಾ 3-3-3-3-3 ಹುಂ3 ಆ3-3ಜ್ಯಾ3ಯೋ3 ಆ3-2-1-1-1- ಇತಿ। (4) ಅಥ ಜುಹೋತಿ ನಮೋಽಗ್ನಯೇ ಪೃಥಿವೀಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿನ್ದೈಷವೈ ಯಜಮಾನಸ್ಯ ಲೋಕ ಏತಾಸ್ಮಿ ॥ (3)**

ತಾ॥ ಉದಯಸವನವು ವಸುಗಳ ನಿಮಿತ್ತವಾಗಿ, ಮಧ್ಯಾಹ್ನದ ಸವನವು ರುದ್ರರ ನಿಮಿತ್ತವಾಗಿ, ಮತ್ತು ಮೂರನೆಯ ಸವನವು ಆದಿತ್ಯರಿಗಾಗಿ ವಿಶ್ವ ದೇವತೆಗಳ ನಿಮಿತ್ತವಾಗಿ ಮಾಡಬೇಕೆಂದು ಬ್ರಹ್ಮವಾದಿಗಳು ಹೇಳುತ್ತಿದ್ದಾರೆ. ಯಜಮಾನನ ಲೋಕವು ಎಲ್ಲಿದೆ? ಈ ಯಜ್ಞವಿಧಿಗಳನ್ನು ತಿಳಿಯದಿದ್ದವರು ಯಜ್ಞವನ್ನು ಹೇಗೆ ಮಾಡಬೇಕು? ಯಜ್ಞ ವಿಧಿಗಳನ್ನು ಸರಿಯಾಗಿ ತಿಳಿದುಕೊಂಡ ಮೇಲೆಯೇ ಯಜಮಾನನು ಈ ಯಜ್ಞವನ್ನು ಮಾಡಬೇಕು." ಉದಯ ಸವನವನ್ನು ಪ್ರಾರಂಭಿಸುವುದಕ್ಕೆ ಮೊದಲು, ಯಜಮಾನನು ಗಾರ್ಹ್ಯಪತ್ಯಾಗ್ನಿಗೆ ಪಕ್ಕದಲ್ಲಿ ಉತ್ತರ ದಿಕ್ಕನ್ನು ನೋಡಿಕೊಂಡು ಕುಳಿತು ವಸುಗಳನ್ನು ಕುರಿತು ಸಾಮಗಾನ ಮಾಡಬೇಕು. "ಓ ಅಗ್ನಿದೇವಾ! ಈ ಲೋಕಕ್ಕೆ ದ್ವಾರವನ್ನು ತೆರೆ. ಭೂಲೋಕ ರಾಜ್ಯವನ್ನು ಹೊಂದುವುದಕ್ಕೆ ನಿನ್ನ ದರ್ಶನವನ್ನು ಮಾಡಬೇಕು." ಆನಂತರ ಮಂತ್ರಗಳೊಂದಿಗೆ ಆಹುತಿಗಳನ್ನು ಅರ್ಪಿಸಬೇಕು. "ಭೂಲೋಕದಲ್ಲಿ ವಾಸ ಮಾಡುತ್ತಿರುವ ಅಗ್ನಿ ದೇವನಿಗೆ ನಮಸ್ಕಾರಗಳು. ಯಜಮಾನನಾಗಿರುವ ನನಗೆ ನಿನ್ನ ದರ್ಶನವನ್ನು ನೀಡು. ಈ ಸ್ಥಾನವನ್ನು ಯಜಮಾನ ಹೊಂದಬೇಕು. ಈ ಜೀವಮಾನದ ಕೊನೆಯವರೆಗೂ, ಆನಂತರವೂ ಸಹ ಯಜಮಾನನಾದ ನಾನು ಇಲ್ಲಿಗೆ ಬರುವಂತಾಗಲಿ ಸ್ವಾಹಾ" (ಸಾಮಾದಿ ಉಪಾಯಗಳನ್ನು ಚೆನ್ನಾಗಿ ಗ್ರಹಿಸಿ ಯಜ್ಞಕರ್ಮಗಳನ್ನು ಆಚರಿಸಬೇಕು.)

**ಮಂ.ಶ್ಲೋ.॥ ಅತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಽಪಜಹಿ ಪರಿಘಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ವಸವಃ ಪ್ರಾತಸ್ಸವನಂ ಸಂಪ್ರಯಚ್ಛನ್ತಿ । (6) ಪುರಾ ಮಾಧ್ಯನ್ದಿನಸ್ಯ ಸವನಸ್ಯೋಪಾಕರಣಾಜ್ಜಘನೇನಾಗ್ನೀ ಧ್ರೀಯಸ್ಯೋದಙ್ಮುಖ ಉಪವಿಶ್ಯ ಸ ರೌದ್ರಂ ಸಾಮಾಭಿಗಾಯತಿ। (7) ಲೋ3ಕದ್ವಾರಮಪಾವಾ3ರ್ಣೂ3-3 ಪಶ್ಯೇಮ ತ್ವಾ ವಯಂ ವೈ ರಾ3-3-3-3-3 ಹುಂ3-ಅ3-3 ಜ್ಯಾ3 ಯೋ3 ಆ3-3-1-1-1 ಇತಿ। (8) ಅಥ ಜುಹೋತಿ ನಮೋ ವಾಯುವೇಽನ್ತರಿಕ್ಷಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿನ್ದೈಷ ವೈ ಯಜಮಾನಸ್ಯ ಲೋಕಏತಾಸ್ಮಿ॥ (9)**

ತಾ॥ "ಈ ಸ್ಥಾನದ ದ್ವಾರದಲ್ಲಿಯೇ" ಎಂದು ಹೇಳುತ್ತಾ ಯಜಮಾನ ಎಚ್ಚರಗೊಳ್ಳುವನು. ಆದ್ದರಿಂದಲೇ ಉದಯ ಸವನದಲ್ಲಿ ವಸುಗಳು ವಾಂಛೆ (ಕೋರಿಕೆ)ಗಳನ್ನು ತೀರಿಸುತ್ತಾರೆ. ಮಧ್ಯಾಹ್ನ ಸವನವನ್ನು ಪ್ರಾರಂಭಿಸುವುದಕ್ಕೆ ಮೊದಲು ಯಜಮಾನ "ಅಗ್ನಿ ಧೀರಯಾಗ್ನಿಯ ಪಕ್ಕದಲ್ಲಿ ಕುಳಿತು ಉತ್ತರ ದಿಕ್ಕನ್ನು ನೋಡುತ್ತಾ ರುದ್ರರನ್ನು ಕುರಿತ ಸಾಮಗಾನವನ್ನು ಮಾಡುವನು. 'ಅಗ್ನಿ ದೇವಾ! ಆಕಾಶಕ್ಕೆ ಸಂಬಂಧಿಸಿದ ದ್ವಾರದ ಬಾಗಿಲನ್ನು ತೆರೆ. ನಾವು ನಿನ್ನನ್ನು ದರ್ಶಿಸಬೇಕು. ಆಕಾಶದ ಸೌಂದರ್ಯವನ್ನು ನೋಡಬೇಕು." ಆಗ ಮಂತ್ರಗಳೊಂದಿಗೆ ಹವಿಸ್ಸುಗಳನ್ನು ಆಹುತಿ ಮಾಡಬೇಕು. "ಆಕಾಶದಲ್ಲಿ ವಾಸವಾಗಿರುವ ವಾಯುದೇವನಿಗೆ ನಮಸ್ಕಾರಗಳು. ನನಗೆ ನಿನ್ನ ಸ್ಥಾನವನ್ನು ಪ್ರಸಾದಿಸು. ಯಜಮಾನನಾದ ನಾನು ನಿನ್ನ ಸ್ಥಾನವನ್ನು ಸೇರಿಕೊಳ್ಳಬೇಕು. ಈ ಜೀವಿತಾಂತ್ಯ-

ದಲ್ಲಿಯೂ ಸಹ ನಾನು ಇಲ್ಲಿಗೆ ಬರಬೇಕೆಂದು ನನ್ನ ಕೋರಿಕೆ! ಸ್ವಾಹಾ" (ಮಂತ್ರದಲ್ಲಿ "ಹುಮ್" ಎನ್ನುವುದು ಸ್ತೋಭಾಕ್ಷರವಾಗಿದೆ. ಅಂಕಿಗಳೆಲ್ಲವೂ ಆಲಾಪನೆಗೆ ತೆಗೆದುಕೊಳ್ಳಬೇಕಾದ ಸಮಯವನ್ನು ತಿಳಿಸುತ್ತದೆ.)

**ಮಂ.ಶ್ಲೋ.॥ ಅತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾ ಅಪಜಹಿ ಪರಿಘಮಿತ್ಯುಕ್ತೋತ್ತಿಷ್ಠತಿ ತಸ್ಮೈ ರುದ್ರಾ ಮಾಧ್ಯನ್ದಿನಂ ಸವನಂ ಸಂಪ್ರಯಚ್ಛನ್ತಿ । (10) ಪುರಾ ತೃತೀಯ ಸವನಸ್ಯೋಪಾಕರಣಾಜ್ಜಘನೇನಾಹಾವನೀಯಸ್ಯೋದಙ್ಮುಖ ಉಪವಿಶ್ಯ ಸ ಆದಿತ್ಯಂ ಸ ವೈಶ್ವದೇವಂ ಸಾಮಾಭಿಗಾಯತಿ । (11) ಲೋ೩ಕದ್ವಾರಮಪಾವಾ೩ರ್ಣೂ೩-3 ಪಶ್ಯೇಮ ತ್ವಾವಯಗ್ಂ ಸ್ವಾರಾ3-3-3-3-3 ಹುಂ3 ಆ3-3 ಜ್ಯಾ3ಯೋ3 ಆ3-2-1-1-1 ಇತಿ॥ ಆದಿತ್ಯಮ್ (12) ಅಥ ವೈಶ್ವದೇವಂ ಲೋ೩ಕದ್ವಾರಮಪಾವಾ೩ರ್ಣೂ-3-3ಪಶ್ಯೇಮ ತ್ವಾಯವಗ್ಂ ಸಾಮ್ರಾ3-3-3-3-3 ಹುಂ3 ಆ3-3 ಜ್ಯಾ3ಯೋ3 ಆ3-2-1-1-1 ಇತಿ ॥ ಆದಿತ್ಯಮ್ (13) ಅಥ ವೈಶ್ವದೇವಂ ಲೋ೩ಕದ್ವಾರಮಪಾವಾ೩ರ್ಣೂ-3-3 ಪಶ್ಯೇಮ ತ್ವಾಯವಗ್ಂ ಸಾಮ್ರಾ3-3-3-3-3 ಹುಂ3 ಆಜ್ಯಾ3 ಯೋ3 ಅ3-2-1-1-1 ಇತಿ॥ (13)**

ತಾ॥ "ಈ ಸ್ಥಾನಕ್ಕೆ ದ್ವಾರ" ಎನ್ನುತ್ತಾ ಯಜಮಾನನು ನಿದ್ರೆಯಿಂದ ಏಳುವನು. ಆದ್ದರಿಂದ ರುದ್ರರು ಮಧ್ಯಾಹ್ನದ ಸೌಕರ್ಯಗಳನ್ನು ಪ್ರಸಾದಿಸುತ್ತಾರೆ. ಮೂರನೆಯ ಯಜ್ಞವನ್ನು ಪ್ರಾರಂಭಿಸುವುದಕ್ಕೆ ಮೊದಲು ಯಜಮಾನ ಆಹವನೀಯಾಗ್ನಿಯ ಪಕ್ಕದಲ್ಲಿ ಉತ್ತರ ದಿಕ್ಕಿಗೆ ಮುಖ ಮಾಡಿ ಕುಳಿತು, ಆದಿತ್ಯರನ್ನು ಕುರಿತು, ವಿಶ್ವ ದೇವತೆಗಳನ್ನು ಕುರಿತು ಸಾಮಗಾನವನ್ನು ಮಾಡಬೇಕು. "ಓ ಅಗ್ನಿದೇವಾ ಸ್ವರ್ಗತಲದ ಬಾಗಿಲನ್ನು ತೆರೆ. ದೇವಲೋಕದ ಸೌಖ್ಯಗಳನ್ನು ಹೊಂದುವುದಕ್ಕಾಗಿ (ನಾನು) ನಾವು ನಿನ್ನನ್ನು ದರ್ಶಿಸಬೇಕು." ಆದಿತ್ಯರಿಗೆ ಸಂಬಂಧಿಸಿದ ಸಾಮಗಾನವು ಇದೇ. "ಅಗ್ನಿದೇವಾ, ಸ್ವರ್ಗ ಭೂಮಿಯ ಬಾಗಿಲುಗಳನ್ನು ತೆರೆ. ದೇವಲೋಕದ ಭಾಗ್ಯಗಳಿಗಾಗಿ ನಾವು ನಿನ್ನನ್ನು ದರ್ಶಿಸಬೇಕು."

**ಮಂ.ಶ್ಲೋ.॥ ಅಥ ಜುಹೋತಿ ಸಮ ಆದಿತ್ಯೇಭ್ಯಶ್ಚ ವಿಶ್ವೇಭ್ಯಶ್ಚ ದೇವೇಭ್ಯೋ ದಿವಿ ಕ್ಷಿದ್ಭ್ಯೋಯ ಲೋಕಕ್ಷಿದ್ಭ್ಯೋ ಲೋಕಂ ಮೇ ಯಜಮಾನಾಯ ವಿನ್ದತ। (14) ಏಷವೈ ಯಾಜಮಾನಸ್ಯ ಲೋಕ ಏತಾಸ್ಮ್ಯತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾ ಅಪಹತ ಪರಿಘುಮಿತ್ಯುಕ್ತ್ವೋತ್ತಿಷ್ಠತಿ । (15) ತಸ್ಮಾ ಆದಿತ್ಯಾಶ್ಚ ವಿಶ್ವೇ ಚ ದೇವಾಃ ತೃತೀಯ ಸವನಂ, ಸಂಪ್ರಯಚ್ಛನ್ತ್ಯೇಷ ಹ ವೈ ಯಜ್ಞಸ್ಯ ಮಾತ್ರಾಂ ವೇದ ಯ ಏವಂ ವೇದ ಯ ಏವಂ ವೇದ॥ (16)**

ತಾ॥ ಆನಂತರ, ಯಜಮಾನಿ ಮಂತ್ರಗಳಿಂದ ಆಹುತಿಗಳನ್ನು ನೀಡು(ಕೊಡು)ತ್ತಾರೆ. "ಸ್ವರ್ಗ ಭೂತಗಳಲ್ಲಿ ವಾಸವಾಗಿರುವ ಆದಿತ್ಯರಿಗೆ ವಿಶ್ವೇದೇವತೆಗಳಿಗೆ ನಮಸ್ಕಾರಗಳು. ಯಜಮಾನನಾದ

ನನಗೆ ಸ್ವರ್ಗಲೋಕ ಪ್ರಾಪ್ತಿಯಾಗುವಂತಾಗಲಿ! ಈ ಸ್ಥಾನವು ಖಂಡಿತವಾಗಿ ಯಜಮಾನನು ಹೊಂದುವಂತಹುದು. ಜೀವನದ ಕೊನೆಯಲ್ಲಿ (ಆನಂತರ) ಸ್ವರ್ಗಲೋಕಕ್ಕೆ ಹೋಗಬೇಕೆನ್ನುವ ಕೋರಿಕೆಯಿದೆ ಸ್ವಾಹಾ "ಇದೇ ಸ್ವರ್ಗ ದ್ವಾರ" ಎಂದು ಹೇಳುತ್ತಾ ಯಜಮಾನನು ಏಳುವನು.- ಆದಿತ್ಯರು, ವಿಶ್ವೇದೇವತೆಗಳು ಮೂರನೆಯ ಯಜ್ಞಕ್ಕೆ ಸಂಬಂಧಿಸಿದ ಭಾಗ್ಯವನ್ನು ಪ್ರಸಾದಿಸುವರು. ಈ ಯಜ್ಞಕ್ಕೆ ಸಂಬಂಧಿಸಿದ ಪ್ರವರ್ತನೆಗಳೆಲ್ಲವೂ ಯಜಮಾನನು ಪೂರ್ಣವಾಗಿ ತಿಳಿದು-ಕೊಂಡಿರುವನು. (ಎರಡನೆಯ ಪ್ರಪಾಠಕದಲ್ಲಿ 24 ಖಂಡಗಳು, 82 ಮಂತ್ರಗಳು ಇವೆ.)

# ತೃತೀಯ ಪ್ರಪಾಠಕ - ಪ್ರಥಮ ಖಂಡ

**ಮಂ.ಶ್ಲೋ.॥ ಓಮ್ ಅಸೌ ವಾ ಆದಿತ್ಯೋ ದೇವ ಮಧು ತಸ್ಯ ದ್ಯೌ ರೇವ ತಿರಶ್ಚೀನ ವಂಶೋಽನ್ತರಿಕ್ಷ-ಮಪೂಪೋ ಮರೀಚಯಃ ಪುತ್ರಾಃ। (1) ತಸ್ಯ ಯೇ ಪ್ರಾಞ್ಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಂ ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಃ। ತಾ ವಾ ಏತಾ ಋಚಃ। (2) ಏತಮೃಗ್ವೇದಮಭ್ಯತಪಂ ಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ। (3) ತದ್ವ್ಯಕ್ಷರತ್ತದಾದಿತ್ಯ-ಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಂ ರೂಪಮ್ ॥ (4)**

ತಾ॥ (ಆದಿತ್ಯನಲ್ಲಿ ಮಧುವನ್ನು ಆರೋಪಿಸಿ) ಪ್ರಕಾಶಿಸುವ ಸೂರ್ಯನೇ ದೇವತೆಗಳಿಗೆ ಮಧು. ಆ ಮಧುವಿನೊಂದಿಗೆ ಸ್ವರ್ಗವನ್ನು ಸೇರಬಹುದು. ಆಕಾಶವೇ ಮಧುವಿಗೆ ಆಧಾರ, ಸೂರ್ಯ ಕಿರಣಗಳು ಮಧುಪುತ್ರರು. ಸೂರ್ಯನ ಪೂರ್ವ ದಿಕ್ಕಿನ ಕಿರಣಗಳು ಪೂರ್ವದಿಕ್ಕಿನಲ್ಲಿರುವ ಮಧು-ನಾಡಿಗಳು, ಋಕ್ಕುಗಳು ಮಧುಪಗಳು, ಋಗ್ವೇದ ಯಜ್ಞವು ಪುಷ್ಪವು. ಅದರಲ್ಲಿನ ಜಲವೇ ಅಮೃತ. ಆ ಜೇನುಹುಳುಗಳು (ಋಕ್ಕುಗಳು) ಋಗ್ವೇದವನ್ನು ನುಡಿಯುವುವು. ಹಾಗೆ ನುಡಿಯುವ ಮಧುಪ-ಗಳಿಂದ ರಸ, ಕೀರ್ತಿ, ಪ್ರಕಾಶ, ಇಂದ್ರಿಯ ಬಲ, ಭುಜಿಸಲು ಆಹಾರ ಲಭಿಸುವುದು. ಈ ರಸವು ಉಕ್ಕಿ ಹೋಗುತ್ತದೆ; ಸೂರ್ಯನಷ್ಟು ಅಗಲಕ್ಕೂ ಹರಡಿಕೊಳ್ಳುತ್ತದೆ. ಸೂರ್ಯನ ಸುತ್ತಲೂ ಇರುವ ಆ ರಸವು ಆದಿತ್ಯನ ಅರುಣ ರೂಪದಂತೆ ಕಾಣುವುದು. ಅಮೃತವೆಂದರೆ ಹೋಮವನ್ನು ಮಾಡುವುದರಿಂದ ಜನಿಸಿದ ಕಾಣಿಸದಿರುವ ಫಲವದು. ಆ ಅದೃಷ್ಟ ಫಲವು ಕ್ರಮವಾಗಿ ಮೋಕ್ಷಕ್ಕೆ ದಾರಿಯಾಗುತ್ತದೆ.

# ತೃತೀಯ ಪ್ರಪಾಠಕ - ದ್ವಿತೀಯ ಖಂಡ

**ಮಂ.ಶ್ಲೋ.॥ ಅಥ ಯೇಽಸ್ಯದಕ್ಷಿಣಾ ರಶ್ಮಯ ಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯೋ ಯಜೂಂಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ॥ (1) ತಾನಿ ವಾ ಏತಾನಿ ಯಜೂಂಷ್ಯೇತಂ ಯಜುರ್ವೇದಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯ-ಮನ್ನಾದ್ಯಂ ರಸೋಽಜಾಯತ (2) ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತಾದ್ವಾ ಏತದ್ಯ-ದೇತದಾದಿತ್ಯಸ್ಯ ಶುಕ್ಲಂ ರೂಪಮ್ ॥ (3)**

ತಾ|| ಸೂರ್ಯದೇವನ ದಕ್ಷಿಣ ಕಿರಣಗಳು ದಕ್ಷಿಣ ಮಧುನಾಡಿಗಳು. ಯಜಸ್ಸುಗಳೇ ಭ್ರಮರಗಳು. (ಜೇನು ಹುಳುಗಳು) ಯಜುರ್ವೇದವೇ ಪುಷ್ಪ, ಅಲ್ಲಿರುವ ಜಲವೇ ಅಮೃತ - ಯಜುಸ್ಸುನಲ್ಲಿರುವ ಗೀತೆಗಳು ಯಜುರ್ವೇದವನ್ನು ಆಲಿಂಗನ ಮಾಡಿಕೊಳ್ಳುತ್ತಿವೆ. ಆ ಆಲಿಂಗನದಿಂದ ರಸ, ಕೀರ್ತಿ, ವೈಭವ, ಇಂದ್ರಿಯಬಲ, ಉತ್ಸಾಹ, ಭುಜಿಸಲು ಅನ್ನ ದೊರೆಯುತ್ತವೆ. ಈ ಯಜುಸ್ಸುಗಳಲ್ಲಿನ ಗೀತೆಗಳು (ಪ್ರವಾಹದಂತೆ ಮೇಲೇರಿ ಬಂದು) ಉಕ್ಕಿಹರಿಯುತ್ತಾ ಸೂರ್ಯನನ್ನು ಆವರಿಸುತ್ತದೆ. ಆ ದೃಶ್ಯವು ಆದಿತ್ಯನ ಬೆಳ್ಳಗಿನ ರೂಪವಾಗಿ ಕಾಣಿಸುತ್ತದೆ.

# ತೃತೀಯ ಪ್ರಪಾಠಕ - ತೃತೀಯ ಖಂಡ

ಮಂ.ಶ್ಲೋ.|| **ಅಥಯೇಽಸ್ಯ ಪ್ರತ್ಯಞ್ಚೋ ರಶ್ಮಯಸ್ತಾ ಏವಾಸ್ಯ ಪ್ರತೀಚ್ಯೋ ಮಧುನಾಡ್ಯಸ್ಸಾಮಾನ್ಯೇವ ಮಧುಕೃತಃ ಸಾಮವೇದ ಏವ ಪುಷ್ಪಂ ತಾ ಅಮೃತಾ ಆಪಃ (1) ತಾನಿ ವಾ ಏತಾನಿ ಸಾಮಾನ್ಯೇತಂ ಸಾಮವೇದಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯ-ಮನ್ನಾದ್ಯಂ ರಸೋಽಜಾಯತ (2) ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯ-ದೇತದಾದಿತ್ಯಸ್ಯ ಕೃಷ್ಣಂ ರೂಪಮ್ ॥ (3)**

ತಾ|| ಸೂರ್ಯ ದೇವನ ಪಶ್ಚಿಮ ದಿಕ್ಕಿನ ಕಿರಣಗಳು ಪಶ್ಚಿಮ ಮಧುನಾಡಿಗಳು. ಸಾಮಗಳೇ ಭ್ರಮರಗಳು. (ಜೇನುಹುಳುಗಳು), ಸಾಮವೇದವೇ ಪುಷ್ಪ. ಅಲ್ಲಿರುವ ಜಲಗಳೇ ಅಮೃತ. ಆ ಸಾಮಗಳು ಸಾಮವೇದವನ್ನು ಆಲಿಂಗನ ಮಾಡುತ್ತಿವೆ. ಆ ಆಲಿಂಗನದಿಂದ ರಸ, ಕೀರ್ತಿ, ಅವಯವ ಸೌಂದರ್ಯ, ಇಂದ್ರಿಯಗಳ ಉತ್ಸಾಹ, ವೀರ್ಯ ಭುಜಿಸಲು ಅನ್ನ ಪ್ರಾಪ್ತಿಯಾಗುತ್ತವೆ. ಆ ಮಧು ಉಕ್ಕಿ ಹರಿಯುತ್ತಾ ಸೂರ್ಯನ ಸುತ್ತಲೂ ಬಿದ್ದಿದೆ. ಆ ದೃಶ್ಯ ಆದಿತ್ಯನ ಕಪ್ಪಗಿನ ರೂಪವಾಗಿ ಕಾಣಿಸುತ್ತಿದೆ.

# ತೃತೀಯ ಪ್ರಪಾಠಕ - ಚತುರ್ಥ ಖಂಡ

ಮಂ.ಶ್ಲೋ.|| **ಅಥ ಯೇಽಸ್ಯೋದಞ್ಚೋ ರಶ್ಮಯಸ್ತಾ ಏವಾಸ್ಯೋದೀಚ್ಯೋ ಮಧುನಾಡ್ಯೋಽಥರ್ವಾಙ್ಗಿರಸ ಏವ ಮಧುಕೃತ ಇತಿಹಾಸಪುರಾಣಂ ಪುಷ್ಪಂ ತಾ ಅಮೃತಾ ಆಪಃ (1) ತೇವಾ ಏತೇಽ-ಥರ್ವಾಙ್ಗೀರಸ ಏತದಿತಿಹಾಸಪುರಾಣಮಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ (2) ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಪರಂ ಕೃಷ್ಣಂ ರೂಪಮ್ ॥ (3)**

ತಾ|| ಸೂರ್ಯನ ಉತ್ತರ ದಿಕ್ಕುಗಳ ಕಿರಣಗಳು ಉದೀಚೀ ಮಧುನಾಡಿಗಳು ಅಥರ್ವ ವೇದದ ಮಂತ್ರಗಳೇ ಭ್ರಮರಗಳು ಇತಿಹಾಸಗಳು, ಪುರಾಣಗಳು, ಪುಷ್ಪಗಳು. ಅಲ್ಲಿನ ಜಲವು ಅಮೃತ - ಅಥರ್ವವೇದ ಮಂತ್ರಗಳು ಇತಿಹಾಸ ಪುರಾಣಗಳನ್ನು ಆಲಿಂಗನ ಮಾಡಿಕೊಂಡವು. ಆ ಆಲಿಂಗನದಿಂದ ರಸ, ಕೀರ್ತಿ, ಅವಯವ ಸೌಂದರ್ಯ, ಇಂದ್ರಿಯಗಳ ಉತ್ಸಾಹ, ವೀರ್ಯ, ಭುಜಿಸಲು ಅನ್ನ ಲಭಿಸುವವು. ಆ ಮಧು ಉಕ್ಕಿ ಹರಿಯಿತು. ಸೂರ್ಯನ ಸುತ್ತಲೂ ಸೇರಿತು. ಆ

ದೃಶ್ಯವು ಕಪ್ಪಗಿನ ನೀಲವರ್ಣವಾಗಿ ಕಾಣಿಸುತ್ತ ಇದೆ. (ಆ ಮಧುರಸವು ಸೂರ್ಯನ ಉತ್ತರ ದಿಶೆಯಲ್ಲಿ ಸೇರಿತೆಂದು ವರ್ಣಿಸಲಾಗಿದೆ.)

## ತೃತೀಯ ಪ್ರಪಾಠಕ - ಪಞ್ಚಮ ಖಂಡ

ಮಂ.ಶ್ಲೋ.॥ ಅಥ ಯೇಽಸ್ಯೋರ್ಧ್ವಾ ರಶ್ಮಯಸ್ತಾ ಏವಾಸ್ಯೋರ್ಧ್ವಾ ಮಧುನಾಡ್ಯೋ ಗುಹ್ಯಾ ಏವಾದೇಶಾ ಮಧುಕೃತೋ ಬ್ರಹ್ಮೈವ ಪುಷ್ಪಂ ತಾ ಅಮೃತಾ ಆಪಃ (1) ತೇ ವಾ ಏತೇ ಗುಹ್ಯಾ ಆದೇಶಾ ಏತದ್ಬ್ರಹ್ಮಾಭ್ಯತಪಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ (2) ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತ-ದಾದಿತ್ಯಸ್ಯ ಮಧ್ಯೇ ಕ್ಷೋಭತ ಇವ (3) ತೇವಾ ಏತೇ ರಸಾನಾಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾಹ್ಯಮೃತಾ-ಸ್ತೇಷಾಮೇತಾನ್ಯಮೃತಾನಿ ॥ (4)

ತಾ॥ ಸೂರ್ಯದೇವನ ಊರ್ಧ್ವಕಿರಣಗಳೇ, ಮೇಲಿರುವ ಮಧುನಾಡಿಗಳು. (ಜೇನುಗೂಡು-ಗಳು) ರಹಸ್ಯ ಬೋಧೆಗಳು, ಜೇನುಹುಳುಗಳು, ಪ್ರಣವವು (ಬ್ರಹ್ಮವು) ಪುಷ್ಪ. ಆ ಜಲಗಳು (ಪ್ರಣವಗಾನ ಫಲಿತಗಳು) ಅಮೃತವು, ಆ ರಹಸ್ಯ ಬೋಧೆಗಳು ಪ್ರಣವವನ್ನು ಆಲಿಂಗನ ಮಾಡುತ್ತಿವೆ. ಆ ಆಲಿಂಗನದಿಂದ ರಸ, ಕೀರ್ತಿ, ಅವಯವ ಸೌಂದರ್ಯ, ಇಂದ್ರಿಯಗಳ ಉತ್ಸಾಹ, ವೀರ್ಯ, ಭುಜಿಸಲು ಆಹಾರ ದೊರೆಯುತ್ತದೆ. ಆ ಮಧುವು ಉಕ್ಕಿ ಹರಿದು ಸೂರ್ಯನ ಸುತ್ತಲೂ ಬಿದ್ದಿದೆ. ಆ ಮಧುವು ಸೂರ್ಯನ ಮಧ್ಯಭಾಗದಲ್ಲಿ ಕ್ಷೋಭಿಸುತ್ತಿರುವಂತೆ ಕಾಣಿಸುತ್ತದೆ. ಆ ಮಧುನಾಡಿಗಳೇ ರಸಗಳು, ವೇದಗಳೇ ರಸಗಳು. ಇವೆಲ್ಲವೂ ವೇದಾಮೃತಗಳು. ಈ ಮಧುನಾಡಿಗಳೆಲ್ಲವೂ ಮಧುವಿನಲ್ಲಿರುವ ಅಮೃತ. ವೇದಗಳೆಲ್ಲವೂ ಆ ಮಧುವಿನಲ್ಲಿರುವ ಅಮೃತ. (ಇದಕ್ಕೆ ಮೊದಲೇ ಹೇಳಿರುವ ಲೋಹಿತಾದಿ ರೂಪಗಳೇ ರಸಗಳಿಗೆ ರಸವಾದುದು. ಲೋಕಗಳಿಗೆ ಸಾರಭೂತವಾದ ವೇದಗಳು ರಸಗಳು.)

## ತೃತೀಯ ಪ್ರಪಾಠಕ - ಷಷ್ಠ ಖಂಡ

ಮಂ.ಶ್ಲೋ.॥ ತದ್ಯತ್ ಪ್ರಥಮಮಮೃತಂ ತದ್ವಸವ ಉಪಜೀವನ್ತ್ಯಗ್ನಿನಾ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ (1) ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾ-ದ್ರೂಪಾದುದ್ಯನ್ತಿ (2) ಸ ಯ ಏತದೇವಮಮೃತಂ ವೇದ ವಸೂನಾಮೇವೈ-ಕೋಭೂತ್ವಾಽಗ್ನಿನೈವಮುಖೇನ್ಯೆತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪ-ಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ (3) ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾ-ದಸ್ತಮೇತಾ ವಸೂನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ॥ (4)

ತಾ॥ ಅರುಣ ರೂಪದಲ್ಲಿರುವುದು ಮೊದಲ ಅಮೃತ. ಅಗ್ನಿ ದೇವನು ನಾಯಕನಾಗಿ, ಆ ಅಮೃತವನ್ನು ವಸುಗಳು ಅನುಭವಿಸುತ್ತಿದ್ದಾರೆ. ದೇವತೆಗಳು ಆ ಅಮೃತ ಪಾನವನ್ನು ನೋಡಿ

ಆನಂದಪಡುತ್ತಿದ್ದಾರೆ. ದೇವತೆಗಳು ಅಮೃತವನ್ನು ಭುಜಿಸುತ್ತಿಲ್ಲ. ಪಾನ ಮಾಡುತ್ತಿಲ್ಲ. ಅವರು ಆ ರೂಪದಲ್ಲೇ ಲೀನವಾಗುತ್ತಿದ್ದಾರೆ. ಆ ರೂಪದಲ್ಲೇ ಮುಳುಗಿ ತೃಪ್ತಿ ಹೊಂದುತ್ತಿದ್ದಾರೆ. ಯಾರು ಈ ವಿಷಯವನ್ನು ತಿಳಿದುಕೊಳ್ಳುವರೋ, ಅವರು ವಸುಗಳ ರೂಪವನ್ನು ಹೊಂದುತ್ತಿದ್ದಾರೆ. ಅಗ್ನಿ-ದೇವನನ್ನು ನಾಯಕನೆಂದು ತಿಳಿದುಕೊಂಡು, ಅಮೃತಪಾನವನ್ನು ನೋಡಿ ತೃಪ್ತಿ ಹೊಂದುತ್ತಿದ್ದಾರೆ. ಅಂತಹವರು ಈ ರೂಪದಲ್ಲಿ ಲೀನವಾಗಿ ಆ ರೂಪವನ್ನೇ ಹೊಂದುತ್ತಿದ್ದಾರೆ. ಎಷ್ಟು ಕಾಲ ಸೂರ್ಯ ಭಗವಾನನು ಪೂರ್ವ ದಿಕ್ಕಿನಲ್ಲಿ ಉದಯಿಸುತ್ತಾ, ಪಶ್ಚಿಮದಲ್ಲಿ ಅಸ್ತಮಿಸುವನೋ ಅಷ್ಟು ಕಾಲ ವಸುಗಳ ಐಶ್ವರ್ಯದಂತೆ, ಸ್ವರಾಜ್ಯವನ್ನು, ಆಧಿಪತ್ಯವನ್ನೂ ಆ ವಿದ್ವಾಂಸ ಅನುಭವಿಸುತ್ತಾನೆ. (ದೇವತೆಗಳಿಗೆ ಹಸಿವು ಬಾಯಾರಿಕೆಗಳು ಇಲ್ಲ. ಅವರು ಇಂದ್ರಿಯಗಳೊಂದಿಗೆ ನೋಡಿ ಆನಂದಿಸುತ್ತಾರೆ. ತೃಪ್ತಿ ಹೊಂದುತ್ತಾರೆ.)

## ತೃತೀಯ ಪ್ರಪಾಠಕ - ಸಪ್ತಮ ಖಂಡ

**ಮಂ.ಶ್ಲೋ.॥ ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವನ್ತೀನ್ದ್ರೇಣ ಮುಖೇನ ನ ವೈ ದೇವಾ ಅಶ್ನನ್ತಿನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ (1) ತ ಏತದೇವ ರೂಪಮಭಿಸಂವಿಶ-ನ್ತ್ಯೇತಸ್ಮಾದ್ರೂಪಾದುದ್ಯನ್ತಿ (2) ಸ ಯ ಏತದೇವಮಮೃತಂ ವೇದ ರುದ್ರಾಣಾಮೇವೈಕೋ ಭೂತ್ವೇನ್ದ್ರೇಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿ-ಸಂವಿಶತ್ಯೇತಸ್ಮಾದ್ರೂಪಾದುದೇತಿ (3) ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾ-ದಸ್ತಮೇತಾದ್ವಿಸ್ತಾವದ್ದಕ್ಷಿಣತ ಉದೇತೋತ್ತರತೋಽಸ್ತಮೇತಾ ರುದ್ರಾಣಾಮೇವ ತಾವ-ದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ (4)**

ತಾ॥ ಸೂರ್ಯನ ಬೆಳ್ಳಗಿನ ರೂಪ ಎರಡನೆಯ ಅಮೃತ. ಇಂದ್ರನು ನಾಯಕನಾಗಿರಲು ಆ ಅಮೃತವನ್ನು ರುದ್ರರು ಅನುಭವಿಸುತ್ತಿದ್ದಾರೆ. ದೇವತೆಗಳು ಆ ಅಮೃತವನ್ನು ಭುಜಿಸುತ್ತಿಲ್ಲ. ಪಾನ ಮಾಡುತ್ತಿಲ್ಲ. ನೋಡಿಯೇ ತೃಪ್ತಿ ಹೊಂದುತ್ತಿದ್ದಾರೆ. ಅವರು ಈ ರೂಪದಲ್ಲಿ ಲೀನವಾಗಿ ಈ ರೂಪ-ವನ್ನೇ ಹೊಂದುತ್ತಿದ್ದಾರೆ. ಯಾರು ಈ ವಿಷಯವನ್ನು ತಿಳಿದುಕೊಳ್ಳುತ್ತಾರೋ ಅವರು ರುದ್ರರಲ್ಲಿ ಒಬ್ಬರಾಗುತ್ತಾರೆ. ಇಂದ್ರನು ಅವರ ನಾಯಕನಾಗಿರಲು, ಆ ಅಮೃತ ಪಾನವನ್ನು ನೋಡಿದ ಮಾತ್ರಕ್ಕೇ ತೃಪ್ತಿ ಹೊಂದುತ್ತಿದ್ದಾರೆ. ಆತ ಈ ರೂಪದಲ್ಲಿ ಲೀನವಾಗಿ ಈ ರೂಪವನ್ನೇ ಹೊಂದುತ್ತಿದ್ದಾನೆ. ಎಲ್ಲಿಯವರೆಗೆ ಸೂರ್ಯ ದೇವನು ಪೂರ್ವ ದಿಕ್ಕಿನಲ್ಲಿ ಉದಯಿಸುತ್ತಾ ಪಶ್ಚಿಮ ದಿಕ್ಕಿನಲ್ಲಿ ಅಸ್ತಮಿಸು-ತ್ತಿರುತ್ತಾನೋ, ಅಲ್ಲಿಯವರೆಗೆ ಅಥವಾ ಅದಕ್ಕೆ ಎರಡರಷ್ಟು ಕಾಲ ದಕ್ಷಿಣ ದಿಕ್ಕಿನಲ್ಲಿ ಉದಯಿಸಿ ಉತ್ತರ ದಿಕ್ಕಿನಲ್ಲಿ ಅಸ್ತಮಿಸುವ ಕಾಲ ರುದ್ರರ ದೇಶರಾಜ್ಯದಂತೆ ವಿದ್ವಾಂಸನು ಐಶ್ವರ್ಯಗಳನ್ನು ಅನುಭವಿಸುವನು.

## ತೃತೀಯ ಪ್ರಪಾಠಕ - ಅಷ್ಟಮ ಖಂಡ

**ಮಂ.ಶ್ಲೋ.॥ ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವನ್ತಿ ವರುಣೇನ ಮುಖೇನ ನ ವೈ ದೇವಾ ಅಶ್ನನ್ತಿ ನಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ (1) ತ ಏತ ದೇವರೂಪ-**

**ಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ (2) ಸ ಯ ಏತದೇವಮಮೃತಂ ವೇದಾದಿತ್ಯಾನಾ-ಮೇವೈಕೋ ಭೂತ್ವಾ ವರುಣೇನೈವಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ (3) ನ ಯಾವದಾದಿತ್ಯೋ ದಕ್ಷಿಣತ ಉದೇತೋತ್ತರತೋಽಸ್ತಮೇತಾದ್ವಿಸ್ತಾವತ್ಪಶ್ಚಾದುದೇತಾ ಪುರಸ್ತಾದಸ್ತಮೇತಾ ಆದಿತ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ॥ (4)**

ತಾ॥ ಸೂರ್ಯ ಭಗವಾನನ ತೃತೀಯ ರೂಪವೇ ಮೂರನೆಯ ಅಮೃತ; ವರುಣನು ನಾಯಕನಾಗಿ, ಆದಿತ್ಯರು ಆ ಅಮೃತವನ್ನು ಅನುಭವಿಸುತ್ತಿದ್ದಾರೆ. ದೇವತೆಗಳು ಆ ಅಮೃತವನ್ನು ಭುಜಿಸುತ್ತಿಲ್ಲ. ಪಾನ ಮಾಡುತ್ತಿಲ್ಲ. ಆ ಅಮೃತಪಾನವನ್ನು ವೀಕ್ಷಿಸುತ್ತಾ ತೃಪ್ತಿ ಹೊಂದುತ್ತಿದ್ದಾರೆ. ಅವರು ಆ ರೂಪದಲ್ಲಿ ಲೀನವಾಗಿ ಈ ರೂಪವನ್ನೇ ಹೊಂದುತ್ತಿದ್ದಾರೆ. ಯಾರು ಆ ವಿವರಗಳನ್ನು ತಿಳಿದುಕೊಳ್ಳುತ್ತಿರುವರೋ ಅವನು ಆದಿತ್ಯರಲ್ಲಿ ಒಬ್ಬರಾಗುತ್ತಿದ್ದಾರೆ. ಮತ್ತು ವರುಣನು ನಾಯಕನಾಗಿ ಆ ಅಮೃತಪಾನವನ್ನು ನೋಡುವ ಮಾತ್ರದಿಂದಲೇ ತೃಪ್ತಿ ಹೊಂದುತ್ತಿದ್ದಾನೆ. ಆತ ಈ ರೂಪದಲ್ಲಿ ಲೀನವಾಗಿ ಈ ರೂಪವನ್ನೇ ಹೊಂದುತ್ತಿದ್ದಾನೆ. ಎಷ್ಟು ಕಾಲ ಸೂರ್ಯ ದೇವನು ದಕ್ಷಿಣ ದಿಕ್ಕಿನಲ್ಲಿ ಉದಯಿಸುತ್ತಾ ಉತ್ತರ ದಿಕ್ಕಿನಲ್ಲಿ ಅಸ್ತಮಿಸುವನೋ, ಅಥವಾ ಎರಡು ಪರ್ಯಾಯಗಳಷ್ಟು ಕಾಲ ಪಶ್ಚಿಮ ದಿಕ್ಕಿನಲ್ಲಿ ಉದಯಿಸುತ್ತಾ ಪೂರ್ವ ದಿಕ್ಕಿನಲ್ಲಿ ಅಸ್ತಮಿಸುವನೋ ಅಷ್ಟು ಕಾಲ ಆತ ಆದಿತ್ಯರ ದೇವ ರಾಜ್ಯ ಭೋಗಗಳಂತೆಯೇ ಅಧಿಕ ಸಂಪತ್ತನ್ನು ಅನುಭವಿಸುತ್ತಾನೆ.

# ತೃತೀಯ ಪ್ರಪಾಠಕ - ನವಮ ಖಂಡ

ಮಂ.ಶ್ಲೋ.॥ **ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವನ್ತಿ ಸೋಮೇನ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ (1) ತ ಏತದೇವ ರೂಪ-ಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ (2) ಸ ಯ ಏತ ದೇವ ಮಮೃತಂ ವೇದ ಮರುತಾ ಮೇವೈಕೋ ಭೂತ್ವಾ ಸೋಮೇನೈವಮುಖೇನೈತ ದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತ ದೇವ ರೂಪಮಭಿಸಂವಿಶ ತ್ಯೇತಸ್ಮಾ ದ್ರೂಪಾದುದೇತಿ (3) ಸಯಾವ ದಾದಿತ್ಯಃ ಪಶ್ಚಾದುದೇತಾ ಪುರಸ್ತಾ ದಸ್ತ ಮೇತಾ ದ್ವಿಸ್ತಾವ ದುತ್ತರತ ಉದೇತಾ ದಕ್ಷಿಣತೋಽಸ್ತ ಮೇತಾ ಮರುತಾ ಮೇವ ತಾವ ದಾಧಿ ಪತ್ಯಂ ಸ್ವಾರಾಜ್ಯಂ ಪರ್ಯೇತಾ॥ (4)**

ತಾ॥ ಸೂರ್ಯ ಭಗವಾನನ ಕಪ್ಪಗಿನ ರೂಪ ನಾಲ್ಕನೆಯ ಅಮೃತ; ಸೋಮನು ನಾಯಕನಾಗಿ, ಮರುತ್ತುಗಳು ಆ ಅಮೃತವನ್ನು ಅನುಭವಿಸುತ್ತಿದ್ದಾರೆ. ದೇವತೆಗಳು ಆ ಅಮೃತವನ್ನು ಭುಜಿಸುತ್ತಿಲ್ಲ. ಪಾನ ಮಾಡುತ್ತಿಲ್ಲ. ನೋಡುವ ಮಾತ್ರದಿಂದ ತೃಪ್ತಿ ಹೊಂದುತ್ತಿದ್ದಾರೆ. ಅವರು ಈ ರೂಪದಲ್ಲಿ ಲೀನವಾಗಿ ಈ ರೂಪವನ್ನೇ ಹೊಂದುತ್ತಿರುವರು. ಈ ವಿವರಗಳನ್ನು ಯಾರು ತಿಳಿದುಕೊಳ್ಳು-ತ್ತಿರುವರೋ ಅವರು, ಮರುತ್ತುಗಳಲ್ಲಿ ಒಬ್ಬನಾಗಿರುವರು. ಮತ್ತು ಅವರು, ಸೋಮನು ನಾಯಕನಾಗಲು ಆ ಅಮೃತವನ್ನು ನೋಡಿ ಮಾತ್ರವೇ ತೃಪ್ತಿಹೊಂದುತ್ತಿದ್ದಾರೆ. ಎಷ್ಟು ಕಾಲ ಸೂರ್ಯ ಭಗವಾನನು ಪಶ್ಚಿಮ ದಿಕ್ಕಿನಲ್ಲಿ ಉದಯಿಸಿ, ಪೂರ್ವ ದಿಕ್ಕಿನಲ್ಲಿ ಅಸ್ತಮಿಸುತ್ತಿರುವನೋ, ಅಷ್ಟು ಕಾಲ ಅಥವಾ

ಅದರ ಎರಡರಷ್ಟು ಸಮಯ ಎಷ್ಟು ಕಾಲ ಉತ್ತರ ದಿಕ್ಕಿನಲ್ಲಿ ಉದಯಿಸಿ ದಕ್ಷಿಣ ದಿಕ್ಕಿನಲ್ಲಿ ಅಸ್ತಮಿಸುತ್ತಾನೋ ಅಷ್ಟು ಕಾಲ ಆತ ಮರುತ್ತರ ದೇವ ರಾಜ್ಯಭೋಗಗಳನ್ನು ಪಡೆದಂತೆ, ಐಶ್ವರ್ಯಗಳನ್ನು ಅನುಭವಿಸುವನು. (ಈ ಖಂಡದಲ್ಲಿ ಮರುದ್ಗಣಗಳ ಜೀವನಾಶ್ರಯಭೂತವಾದ ಚತುರ್ಥ ಅಮೃತೋಪಾಸನೆಯನ್ನು ಹೇಳಲಾಗಿದೆ.)

## ತೃತೀಯ ಪ್ರಪಾಠಕ – ದಶಮ ಖಂಡ

**ಮಂ.ಶ್ಲೋ.॥ ಅಥ ಯತ್ಪಞ್ಚಮಮಮೃತಂ ತತ್ಸಾಧ್ಯಾ ಉಪಜೀವನ್ತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ (1) ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ (2) ಸಯ ಏತದೇವಮಮೃತಂ ವೇದಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ (3) ಸ ಯಾವದಾದಿತ್ಯ ಉತ್ತರ ಉದೇತಾ ದಕ್ಷಿಣತೋಽಸ್ತಮೇತಾದ್ವಿಸ್ತಾವದೂರ್ಧ್ವ ಉದೇತಾಽ-ರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ (4)**

ತಾ॥ ಸೂರ್ಯ ಭಗವಾನನ ಒಳಗಿರುವ ರೂಪವು ಐದನೆಯ ಅಮೃತ. ಆ ಅಮೃತವನ್ನು ಸಾಧ್ಯರು, ಪ್ರಣವವನ್ನು ನಾಯಕನನ್ನಾಗಿ ಮಾಡಿಕೊಂಡು ಅನುಭವಿಸುತ್ತಿದ್ದಾರೆ. ದೇವತೆಗಳು ಆ ಅಮೃತವನ್ನು ಭುಜಿಸುತ್ತಿಲ್ಲ. ಪಾನ ಮಾಡುತ್ತಿಲ್ಲ. ನೋಡುವ ಮಾತ್ರದಿಂದ ತೃಪ್ತಿ ಹೊಂದುತ್ತಿದ್ದಾರೆ. ಅವರು ಈ ರೂಪದಲ್ಲಿ ಲೀನವಾಗಿ ಈ ರೂಪವನ್ನೇ ಹೊಂದುತ್ತಿದ್ದಾರೆ. ಈ ಅಮೃತವನ್ನು ಯಾರು ತಿಳಿದು ಕೊಳ್ಳುವರೋ ಅವರು ಸಾಧ್ಯರಲ್ಲಿ ಒಬ್ಬರಾಗುತ್ತಿದ್ದಾರೆ. ಆತ ಪ್ರಣವವನ್ನು ನಾಯಕನನ್ನಾಗಿ ಮಾಡಿ ಕೊಂಡು, ಅಮೃತವನ್ನು ನೋಡಿಯೇ ತೃಪ್ತಿ ಹೊಂದುತ್ತಾನೆ. ಸೂರ್ಯ ಭಗವಾನನು ಎಷ್ಟು ಕಾಲ ಉತ್ತರ ದಿಕ್ಕಿನಲ್ಲಿ ಉದಯಿಸುತ್ತಾ, ದಕ್ಷಿಣ ದಿಕ್ಕಿನಲ್ಲಿ ಅಸ್ತಮಿಸುತ್ತಿರುವನೋ ಅಷ್ಟು ಕಾಲ ಅಥವಾ ಅದರ ಎರಡರಷ್ಟು ಕಾಲ, ಎಷ್ಟು ಕಾಲ ಊರ್ಧ್ವನಾಗಿ ಉದಯಿಸುತ್ತಾ, ಕೆಳಭಾಗದಲ್ಲಿ ಅಸ್ತಮಿಸುತ್ತಿರುವನೋ ಅಷ್ಟು ಕಾಲ ಆತ ಸಾಧ್ಯರ ದೇವರಾಜ್ಯ ಭೋಗಗಳಂತೆ ಐಶ್ವರ್ಯವನ್ನು ಅನುಭವಿಸುತ್ತಾನೆ.

## ತೃತೀಯ ಪ್ರಪಾಠಕ – ಏಕಾದಶ ಖಂಡ

**ಮಂ.ಶ್ಲೋ.॥ ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ನಾಸ್ತಮೇತ್ಯೈಕಲ ಏವಮಧ್ಯೇ ಸ್ಥಾತಾ ತದೇಷ ಶ್ಲೋಕಃ (1) ನ ವೈ ತತ್ರ ಸ ನಿಮ್ಲೋಚನೋದಿಯಾಯ ಕದಾಚನ ದೇವಾ ಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೇತಿ (2) ನ ಹ ವಾ ಅಸ್ಮಾ ಉದೇತಿ ನನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ (3) ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯಸ್ತದ್ಧೈತ-ದುದ್ದಾಲಕಾಯಾರುಣಯೇ ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರೋವಾಚ (4) ಇದಂ**

**ವಾ ವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾತ್ ಪ್ರಾಣಾಯ್ಯಾಯವಾಽನ್ತೇ ವಾಸಿನೇ (5) ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇಮಾಮದ್ಭಿಃ ಪರಿಗೃಹೀತಾಂ ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋ ಭೂಯ ಇತ್ಯೇತದೇವ ತತೋ ಭೂಯ ಇತಿ॥(6)**

ತಾ॥ ಆಮೇಲೆ ಊರ್ಧ್ವವಾಗಿ ಸಾಕಷ್ಟು ದೂರ ಹೋಗಿ ಅಲ್ಲಿ ಉದಯಿಸದೆ, ಅಸ್ತಮಿಸದೆ ಪ್ರಕಾಶಿಸುತ್ತಿರುವನು. ಆಮೇಲಿನ ಮಧ್ಯಭಾಗದಲ್ಲಿ ಅಲ್ಲಿಯೇ ನಿವಸಿಸಿರುವನೆಂದು ಈ ಮಂತ್ರವು ತಿಳಿಸುತ್ತಿದೆ. ಸೂರ್ಯನು ಅಲ್ಲಿ ಏನೂ ಮಾಡುವುದಿಲ್ಲ. ಅಲ್ಲಿ ಉದಯಿಸುವುದು. ಅಸ್ತಮಿಸುವುದು ಎನ್ನುವ ಕಾರ್ಯಗಳು ನಡೆಯುವುದಿಲ್ಲ. ಓ ದೇವತೆಗಳೇ! ನಾನು ಈ ಯಥಾರ್ಥವನ್ನು ಹೇಳದುದರಿಂದ ಬ್ರಹ್ಮನಿಂದ ಕೆಳಕ್ಕೆ ಬರದಿರುವಂತಾಗಲಿ!" ಆತನಿಗಾಗಿ ಸೂರ್ಯ ಉದಯಿಸುವುದಿಲ್ಲ, ಅಸ್ತಮಿಸುವುದಿಲ್ಲ. ಈ ವೇದ ರಹಸ್ಯವನ್ನು ಯಾರು ತಿಳಿಯುವರೋ, ಆತನ ದಿನವೆಲ್ಲವೂ ಪ್ರಕಾಶವೇ. ಈ ಮಧುವಿನ ಸಿದ್ಧಾಂತವನ್ನು ಹಿರಣ್ಯಗರ್ಭನು ಪ್ರಜಾಪತಿಗೆ ಬೋಧಿಸಿದನು. ಪ್ರಜಾಪತಿ ಮನುವಿಗೆ ಬೋಧಿಸಿದ. ಮನುವು ಪ್ರಜೆಗಳಿಗೆ (ಶಿಷ್ಯರಿಗೆ) ಬೋಧಿಸಿದ. ಈ ಬ್ರಹ್ಮ ಜ್ಞಾನವನ್ನು ಬ್ರಹ್ಮನು ಪ್ರಥಮ ಪುತ್ರನಾದ ಉದ್ಧಾಲಕ ಆರುಣಿಗೆ ಬೋಧಿಸಿದ. ಈ ಮಧು ವಿಜ್ಞಾನವನ್ನು ತಂದೆಯು, ತನ್ನ ಪ್ರಥಮ ಪುತ್ರನಿಗಾಗಲೀ, ಮುಖ್ಯ ಶಿಷ್ಯನಿಗಾಗಲೀ ಬೋಧಿಸಬಹುದು. ಸಮುದ್ರದ ಸುತ್ತಲೂ ಇರುವ ರಾಜ್ಯವನ್ನು ಕೊಟ್ಟರೂ, ಅನಂತ ಧನವನ್ನು ನೀಡಿದರೂ ಬೇರೆಯವರಿಗೆ ಈ ಮಧು ವಿಜ್ಞಾನವನ್ನು ಬೋಧಿಸಬಾರದು.

# ತೃತೀಯ ಪ್ರಪಾಠಕ – ದ್ವಾದಶ ಖಂಡ

**ಮಂ.ಶ್ಲೋ.॥ ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಞ್ಚ ವಾಗ್ವೈ ಗಾಯತ್ರೀ ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ಚ ತ್ರಾಯತೇ ಚ (1) ಯಾ ವೈ ಸಾ ಗಾಯತ್ರೀ ಯಂ ವಾ ವಸಾಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ-ನಾತಿಶೀಯತೇ (2) ಯಾವೈ ಸಾ ಪೃಥಿವೀ ಇಯಂ ವಾವಸಾಯದಿದಮಸ್ಮಿನ್ಪುರುಷೇ ಶರೀರಮಸ್ಮಿನ್ ಹೀ ಮೇ ಪ್ರಾಣಾಃ ಪ್ರತಿಷ್ಠಿತಾಃ ಏತದೇವ ನಾತಿಶೀಯನ್ತೇ (3) ಯದ್ವೈ ತತ್ಪುರುಷೇ ಶರೀರಮಿದಂ ವಾವತದ್ಯದಿದಮಸ್ಮಿನ್ನನ್ತಃ ಪುರುಷೇ ಹೃದಯಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯನ್ತೇ (4) ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯಸೂಕ್ತಮ್ (5) ತವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ, ಪಾದೋಽಸ್ಯ ಸರ್ವಾಭೂತಾನಿ ತ್ರಿಪಾದಸ್ಯಾಽಮೃತಂ ದಿವೀತಿ ॥ (6)**

ತಾ॥ ನಾವು ತಿಳಿದುಕೊಂಡ ಈ ಸರ್ವವೂ ಗಾಯತ್ರಿಯೇ, ವಾಕ್ಕು ಗಾಯತ್ರಿ, ಎಲ್ಲ ವಿಧವಾದ ಭಯಗಳನ್ನು ಹೋಗಲಾಡಿಸಿ ವಾಕ್ಕು ಗಾನ ಮಾಡುತ್ತಿದೆ. ಈ ಪೃಥಿವಿಯೆಲ್ಲವೂ ಗಾಯತ್ರಿಯೇ; ಈ ಭೂಮಿಯ ಮೇಲೆಯೇ ಸರ್ವ ಜೀವಿಗಳು ವಾಸವಾಗಿವೆ. ಮತ್ತೆಲ್ಲಿಗೂ ಹೋಗುವುದಿಲ್ಲ. ಈ ಪೃಥಿವಿಯಲ್ಲಿನ ಸರ್ವವೂ ಗಾಯತ್ರಿಯೇ. ಈ ದೇಹ ಗಾಯತ್ರಿ. ಈ ದೇಹದಲ್ಲಿರುವ ಇಂದ್ರಿಯಗಳು

ಪೃಥಿವಿಗೆ ಸಂಬಂಧಿಸಿದುವುಗಳೇ; ಮತ್ತೆಲ್ಲಿಗೂ ಹೋಗಲಾರವು. ಈ ದೇಹದಲ್ಲಿರುವ ಹೃದಯ, ಪ್ರಾಣ, ಇಂದ್ರಿಯಗಳೆಲ್ಲವೂ ಗಾಯತ್ರಿಯೇ; ಅವು ಮತ್ತೆಲ್ಲಿಗೂ ಹೋಗಲಾರವು. ಈ ಪ್ರಶಸ್ತವಾದ ಗಾಯತ್ರಿಯು, ನಾಲ್ಕು ವೇದಗಳಾಗಿಯೂ, ಆರು ಅಕ್ಷರಗಳನ್ನೊಳಗೊಂಡಿರುವಂತಹದ್ದಾಗಿದೆ. ಈ ಗಾಯತ್ರೀ ಬ್ರಹ್ಮವು ಈ ಕೆಳಗಿನ ಋಕ್ಕುಗಳಲ್ಲಿ ವಿಪುಲವಾಗಿ ತಿಳಸಲಾಗುತ್ತಿದೆ. ಗಾಯತ್ರೀ ಬ್ರಹ್ಮನಷ್ಟು ವಿಶೇಷ ಮಹಿಮೆಯುಳ್ಳದ್ದು. ಪುರುಷನು ಇದಕ್ಕಿಂತ ಮಹಿಮೆಯುಳ್ಳವನು. ಈ ಸಮಸ್ತ ಜಗತ್ತು ಆ ದೇವದೇವನ (ಪುರುಷನ) ನಾಲ್ಕನೆಯ ಭಾಗವಾಗಿದೆ. ಉಳಿದ ಮೂರು ಭಾಗಗಳು ಆ ದೇವದೇವನ ಲೋಕದಲ್ಲಿ ಅಮೃತವಾಗಿ ಇದೆ. (ಗಾಯತ್ರೀ ಮಂತ್ರದಲ್ಲಿ 24 ಅಕ್ಷರಗಳಿವೆ. ಪಾದವೊಂದಕ್ಕೆ ಆರು ಅಕ್ಷರಗಳಂತೆ ನಾಲ್ಕು ಪಾದಗಳನ್ನೊಳಗೊಂಡಿದೆ. ಗಾಯತ್ರಿಯು ಎಲ್ಲ ಮಂತ್ರಗಳಿಗಿಂತಲೂ ಉತ್ತಮವಾದುದೆಂಬ ಭಾವನೆ. ಗಾಯತ್ರಿ ಮುಖಾಂತರ ಬ್ರಹ್ಮೋಪಾಸನೆಯನ್ನು ಹೇಳುತ್ತಾರೆ.)

**ಮಂ.ಶ್ಲೋ.॥ ಯದ್ವೈ ತದ್ ಬ್ರಹ್ಮೇತೀದಂ ವಾ ವತದ್ಯೋಽಯಂ ಬಹಿರ್ಧಾ ಪುರುಷಾದಾಕಾಶೋ ಯೋವೈ ಸ ಬಹಿರ್ಧಾ ಪುರುಷಾದಾಕಾಶಃ (7) ಅಯಂ ವಾವಸಯೋಽಯಮನ್ತಃ ಪುರುಷ ಆಕಾಶೋ ಯಾವೈ ಸೋಽನ್ತಃ ಪುರುಷ ಆಕಾಶಃ (8) ಅಯಂ ವಾವಸ ಯೋಽಯ-ಮನ್ತರ್ಹೃದಯ ಆಕಾಶಸ್ತದೇತತ್ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಂ ಶ್ರಿಯಂ ಲಭತೇ ಯ ಏವಂ ವೇದ॥ (9)**

ತಾ॥ ಆ ಪರಬ್ರಹ್ಮವೇ, ಈ ಶರೀರದ ಸುತ್ತಲೂ ವ್ಯಾಪಿಸಿರುವ ಆಕಾಶವಾಗಿದೆ. ಬ್ರಹ್ಮ ರೂಪದಲ್ಲಿರುವ ಆಕಾಶವು ಶರೀರದೊಳಗೂ ಸಹ ವ್ಯಾಪಿಸಿರುತ್ತದೆ. ಶರೀರದೊಳಗೆ ವ್ಯಾಪಿಸಿರುವ ಬ್ರಹ್ಮಾಕಾಶವೇ ಹೃದಯದಲ್ಲಿ ಸಹ ವಾಸವಾಗಿರುತ್ತದೆ. ಈ ಬ್ರಹ್ಮವು ಎಲ್ಲೆಡೆಯೂ ತುಂಬಿದೆ. ಯಾವುದೇ ಬದಲಾವಣೆ ಇಲ್ಲದಂತಹುದು. ಈ ರೀತಿಯಾಗಿ ಪರಬ್ರಹ್ಮವನ್ನು ಯಾರು ಅರಿತು ಕೊಳ್ಳುತ್ತಿರುವರೋ, ಅವರು ಎಲ್ಲೆಲ್ಲೂ ತುಂಬಿರುವಂತಹ, ಬದಲಾವಣೆ ಇಲ್ಲದಂತಹ ಪರಮ ಭಾಗ್ಯಗಳನ್ನು ಹೊಂದುವರು.

## ತೃತೀಯ ಪ್ರಪಾಠಕ – ತ್ರಯೋದಶ ಖಂಡ

**ಮಂ.ಶ್ಲೋ.॥ ತಸ್ಯ ಹವಾ ಏತಸ್ಯ ಹೃದಯಸ್ಯ ಪಞ್ಚ ದೇವಸುಷಯಃ ಸಯೋಽಸ್ಯ ಪ್ರಾಙ್ಸುಷಿ॥ ಸಪ್ರಾಣಸ್ತಚ್ಚಕ್ಷುಸ್ಸ ಆದಿತ್ಯ ಸ್ತದೇತತ್ತೇಜೋಽನ್ನಾದ್ಯಮಿತ್ಯುಪಾಸೀತ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ (1) ಅಥಯೋಽಸ್ಯ ದಕ್ಷಿಣಸ್ಸುಷಿಃ ಸ ವ್ಯಾನ ಸ್ತತ್ ಶ್ರೋತ್ರಂ ಸ ಚನ್ದ್ರಮಾಸ್ತದೇತಚ್ಛ್ರೀಶ್ಚ ಯಶಶ್ಚೇತ್ಯುಪಾಸೀತ ಶ್ರೀಮಾನ್ಯಶಸ್ವೀ ಭವತಿ ಯ ಏವಂ ವೇದ॥(2)**

ತಾ॥ ಈಗ ಹೇಳಿದ ಆ ಹೃದಯಕ್ಕೆ, ದೇವತೆಗಳಿಂದ ರಕ್ಷಿಸಲಾದ ಐದು ದ್ವಾರಗಳಿವೆ. ಆ ದ್ವಾರಗಳಲ್ಲಿ ಪೂರ್ವ ದ್ವಾರದಲ್ಲಿ ವಾಸಿಸುವವನು ಪ್ರಾಣ. ಆತನೇ ನೇತ್ರ. ಆತನೇ ಸೂರ್ಯ. ಈ ಪ್ರಾಣ ಬ್ರಹ್ಮವನ್ನು ಪ್ರಕಾಶವಾಗಿ ಧ್ಯಾನಿಸಬೇಕು. ಆಹಾರದಾತನಾಗಿ ಧ್ಯಾನಿಸಬೇಕು. ಯಾರು ಇದನ್ನು (ಈ ವಿಧವಾಗಿ) ಅರಿತು ಧ್ಯಾನವನ್ನು ಮಾಡುವನೋ, ಆತ ತೇಜೋವಂತನಾಗುತ್ತಾನೆ ಮತ್ತು ಅನ್ನವನ್ನು ತೃಪ್ತಿಯಾಗಿ ತಿನ್ನುವಂತಹವನಾಗುತ್ತಾನೆ. ಹೃದಯದ ದಕ್ಷಿಣ ದ್ವಾರದಲ್ಲಿ

ವಾಸವಾಗಿರುವವನು ವ್ಯಾನ. ಆತನೇ ಕಿವಿ. ಹಾಗೂ ಚಂದ್ರ. ಈ ವ್ಯಾನ ಬ್ರಹ್ಮವನ್ನು ಐಶ್ವರ್ಯವಾಗಿ, ಕೀರ್ತಿ ಪ್ರದಾತನಾಗಿ, ಧ್ಯಾನಿಸಬೇಕು. ಈ ರೀತಿಯಾಗಿ ಧ್ಯಾನಿಸುವವನು ಸಂಪತ್ತನ್ನು ಹೊಂದುವನು. ಕೀರ್ತಿಯನ್ನು ಗಳಿಸುವನು.

**ಮಂ.ಶ್ಲೋ.॥ ಅಥ ಯೋಽಸ್ಯ ಪ್ರತ್ಯಙ್ಸುಷಿಃ ಸೋಽಪಾನಃ ಸಾ ವಾಕ್ಸೋಽಗ್ನಿ ಸ್ತದೇತದ್ ಬ್ರಹ್ಮ ವರ್ಚಸ-ಮನ್ನಾದ್ಯಮಿತ್ಯುಪಾಸೀತ ಬ್ರಹ್ಮವರ್ಚಸ್ಯನ್ನಾದೋ ಭವತಿ ಯ ಏವಂ ವೇದ (3) ಅಥ ಯೋಽಸ್ಯಾದಙ್ ಸುಷಿಃ ಸಸಮಾನಸ್ತನ್ಮನಃ ಸಪರ್ಜನ್ಯಸ್ತದೇತತ್ಕೀರ್ತಿಶ್ಚ ಮಷ್ಟಿ ಶ್ಚೇತ್ಯುಪಾಸಿತ ಕೀರ್ತಿಮಾನ್ವ್ಯಷ್ಟಿಮಾನ್ಭವತಿ ಯ ಏವಂ ವೇದ (4) ಅಥ ಯೋಽಸ್ಯೋರ್ಧ್ವಸ್ಸುಷಿಃ ಸ ಉದಾನಃ ಸ ವಾಯುಸ್ಸ ಆಕಾಶ ಸ್ತದೇತದೋಜಶ್ಚಮಹಶ್ಚೇತ್ಯುಪಾಸೀತ ಓಜಸ್ವೀ ಮಹಸ್ವಾನ್ಭವತಿ ಯ ಏವಂ ವೇದ (5) ತೇವಾ ಏತೇ ಪಞ್ಚಬ್ರಹ್ಮಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ಸ ಯ ಏತಾನೇವಂ ಪಞ್ಚಬ್ರಹ್ಮ ಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದಾಸ್ಯಕುಲೇ ವೀರೋ ಜಾಯತೇ ಪ್ರತಿಪದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಞ್ಚಬ್ರಹ್ಮ ಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದ॥ (6)**

ತಾ॥ ಹೃದಯದ ಪಶ್ಚಿಮ ದ್ವಾರದಲ್ಲಿ ವಾಸ ಮಾಡುವವನು ಅಪಾನ. ಈತನೇ ವಾಕ್ಕು. ಈತನೇ ಅಗ್ನಿ. ಈ ಅಪಾನ ಬ್ರಹ್ಮವನ್ನು ವರ್ಚಸ್ಸಿನಂತೆಯೂ, ಅನ್ನದಾತನಾಗಿಯೂ ಧ್ಯಾನಿಸಬೇಕು. ಯಾರು ಈ ವಿಧವಾಗಿ ಧ್ಯಾನಿಸುವರೋ ಆತ ಬ್ರಹ್ಮ ವರ್ಚಸ್ಸನ್ನು ಹೊಂದಿದವನಾಗುತ್ತಾನೆ. ಅನ್ನವನ್ನು ಸಂತೃಪ್ತಿಯಾಗಿ ಭುಜಿಸುವಂತಹವನಾಗುತ್ತಾನೆ. ಹೃದಯದ ಉತ್ತರ ದ್ವಾರದಲ್ಲಿ ವಾಸವಾಗಿರುವವನು ಸಮಾನನು. ಈತನೇ ಮನಸ್ಸು ಹಾಗೂ ಪರ್ಜನ್ಯನು. ಸಮಾನ ಬ್ರಹ್ಮವನ್ನು ಕೀರ್ತಿಯಾಗಿಯೂ, ಅನುಗ್ರಹವಾಗಿಯೂ ಧ್ಯಾನಿಸಬೇಕು. ಯಾರು ಈ ವಿಧವಾಗಿ ಧ್ಯಾನಿಸುವರೋ, ಆತ ಕೀರ್ತಿ ಹೊಂದಿದವನಾಗುತ್ತಾನೆ. ಅನುಗ್ರಹ ಪಡೆದವನಾಗುತ್ತಾನೆ. ಹೃದಯದಲ್ಲಿನ ಊರ್ಧ್ವ ದ್ವಾರದಲ್ಲಿ ವಾಸಿಸುವವನು ಉದಾನ. ಈತನೇ ವಾಯು ಹಾಗೂ ಆಕಾಶ. ಈ ಉದಾನ ಬ್ರಹ್ಮವನ್ನು ಬಲ ಮತ್ತು ವಿನಯವೆಂದು ಭಾವಿಸಿ ಉಪಾಸನೆ ಮಾಡಬೇಕು. ಈ ವಿಧವಾಗಿ ಧ್ಯಾನಿಸುವವನು ಬಲವಂತನಾಗುವನು. (ಶಕ್ತಿಶಾಲಿ) ವಿನಯವಂತನಾಗುವನು. ಈ ಐವರು ಬ್ರಹ್ಮ ಪುರುಷರು, ಸ್ವರ್ಗಲೋಕದ ದ್ವಾರಪಾಲಕರು. ಯಾರು ಈ ಬ್ರಹ್ಮ ಪುರುಷರನ್ನು ಭಕ್ತಿಯಿಂದ ಪ್ರಾರ್ಥಿಸುವರೋ ಅವರ ವಂಶದಲ್ಲಿ ವೀರ್ಯವಂತನು ಜನಿಸುವನು. ಯಾರು ಈ ಬ್ರಹ್ಮ ಪುರುಷರನ್ನು ಧ್ಯಾನಿಸುವನೋ ಆತ ಸ್ವರ್ಗಲೋಕವನ್ನು ಸೇರುತ್ತಾನೆ. (ಚಕ್ಷುಸ್ಸು= ಪ್ರಾಣ; ಶ್ರೋತ್ರ=ವ್ಯಾನ, ವಾಕ್ಕು =ಅಪಾನ, ಮನಸ್ಸು=ಸಮಾನ, ಆಕಾಶ = ಉದಾನ.)

**ಮಂ.ಶ್ಲೋ.॥ ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃಪೃಷ್ಠೇ-ಷ್ವನುತ್ತಮೇಮಾತ್ತಮೇಷು ಲೋಕೇಷ್ವಿದಂ ವಾವತದ್ಯದಿದಮಸ್ಮಿನ್ನನ್ತಃ ಪುರುಷೇ ಜ್ಯೋತಿಃ (7) ತಸ್ಯೈಷಾ ದೃಷ್ಟಿರ್ಯತ್ರೈತದಸ್ಮಿನ್ಶರೀರೇ ಸಂಸ್ಪರ್ಶೇ ನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿರ್ಯತ್ರೈತತ್ಕರ್ಣಾವಪಿ ಗೃಹ್ಯ ನಿನದಮಿವ ನದಥುರಿವಾಗ್ನೇರಿವ ಜ್ವಲತ ಉಪಶೃಣೋತಿ**

**ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ॥ (8)**

ತಾ॥ ಯಾವ ಬ್ರಹ್ಮದ ಜ್ಯೋತಿಯು, ಸ್ವರ್ಗಕ್ಕಿಂತ ಮೇಲೆ; ಎಲ್ಲದಕ್ಕಿಂತ ಮೇಲೆ; ವಿಶ್ವಕ್ಕಿಂತ ಮೇಲೆ; ಉತ್ತಮ ಲೋಕಗಳಲ್ಲಿಯೂ, ಅನುತ್ತಮ ಲೋಕಗಳಲ್ಲಿಯೂ ಎಲ್ಲೆಡೆಯೂ ಪ್ರಕಾಶಿಸುತ್ತಿರು-ವುದೋ, ಆ ಜ್ಯೋತಿಯೇ ಮಾನವ ಶರೀರದೊಳಗಡೆ ಸಹ ಪ್ರಕಾಶಿಸುತ್ತಿರುತ್ತದೆ. ಈ ಶರೀರವನ್ನು ಮತ್ತೊಬ್ಬರು ಸ್ಪರ್ಶಿಸಿದಾಗ ಆ ಪ್ರಕಾಶವನ್ನು ಗುರುತಿಸಲಾಗುತ್ತದೆ. ಈ ಪ್ರಕಾಶವು ಕಿವಿಗಳನ್ನು ಮುಚ್ಚಿಕೊಂಡಾಗಲೂ ಸಹ ಒಳಗೆ ಸುನಾದದ ಮೂಲಕ ಕೇಳ ಬರುತ್ತಿರುತ್ತದೆ. ಇಲ್ಲವೇ ಅಗ್ನಿ ಜ್ವಾಲೆಯ ಶಬ್ದದಂತೆ ಕೇಳಬರುವುದು. ಮಾನವನು ಒಳಗೆ ನೋಡಿದ ವಿಧವಾಗಿ, ಕೇಳದ ವಿಧವಾಗಿ ಧ್ಯಾನವನ್ನು ಮಾಡಬೇಕು. ಯಾರು ಈ ವಿಧವಾಗಿ ಧ್ಯಾನ ಮಾಡುವರೋ, ಅವರು ಸೌಂದರ್ಯವಂತರಾಗಿ, ಪ್ರಕಾಶವಂತರಾಗಿ ಇರುವರು.

## ತೃತೀಯ ಪ್ರಪಾಠಕ - ಚತುರ್ದಶ ಖಂಡ

ಮಂ.ಶ್ಲೋ.॥ **ಸರ್ವಂಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾನ್ತ ಉಪಾಸೀತ ಅಥ ಖಲು ಕ್ರತುಮಯಃ ಪುರುಷೋ ಯಥಾ ಕ್ರತುರಸ್ಮಿಂಲ್ಲೋಕೇ ಪುರುಷೋ ಭವತಿ ತಥೇತಃಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ (1) ಮನೋಮಯಃ ಪ್ರಾಣಶರೀರೋ ಭಾರೂಪಸ್ಸತ್ಯಸಙ್ಕಲ್ಪ ಆಕಾಶಾತ್ಮಾ ಸರ್ವಕರ್ಮಾ ಸರ್ವಕಾಮಸ್ಸರ್ವಗನ್ಧ ಸರ್ವರಸ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ (2)**

ತಾ॥ ನಾಮರೂಪಾತ್ಮಕವಾದ ಈ ಜಗತ್ತೆಲ್ಲವೂ ಪರಬ್ರಹ್ಮವೇ ಆಗಿದೆ. ಸೃಷ್ಟಿ ಸ್ಥಿತಿ ಲಯಗಳು ಬ್ರಹ್ಮದಿಂದಲೇ ಉಂಟಾಗುತ್ತವೆ. ಆದ್ದರಿಂದ ಶಾಂತ ಮನಸ್ಸಿನಿಂದ ಬ್ರಹ್ಮವನ್ನು ಉಪಾಸಿಸಬೇಕು. ಪರಮಾತ್ಮನು ಯಜ್ಞಮಯನು. ಈ ಲೋಕದಲ್ಲಿ ಮಾನವನು ಎಂತಹ ಪುಣ್ಯ ಕರ್ಮಗಳನ್ನಾಚರಿಸು-ವನೋ, ಅದಕ್ಕೆ ತಕ್ಕ ಪುಣ್ಯಲೋಕಗಳನ್ನು ಮರಣಾನಂತರ ಹೊಂದುವನು. ಆ ಬ್ರಹ್ಮನು ಮನೋಮಯ. ಪ್ರಾಣ ಶರೀರನು, ಮಹಾಕಾಂತಿಯುಳ್ಳವನು; ಸತ್ಯ ಸಂಕಲ್ಪನು. ಆಕಾಶವೇ ಆತ್ಮವಾಗಿ ಉಳ್ಳವನು, ಸರ್ವಕರ್ಮಗಳು ಸರ್ವಕಾಮಗಳು (ಶಬ್ದ, ಸ್ಪರ್ಶ, ರೂಪ) ಸರ್ವ ರಸಗಂಧಗಳು ಬ್ರಹ್ಮವೇ. ಸರ್ವವ್ಯಾಪಕನು ವಾಗಾದಿ ಇಂದ್ರಿಯಗಳು ಇಲ್ಲದಿದ್ದರೂ ಎಲ್ಲ ಇಂದ್ರಿಯಗಳ ಕೆಲಸವನ್ನು ಮಾಡಬಲ್ಲವನು. ಆಪ್ತಕಾಮನಾದುದರಿಂದ ಆಗ್ರಹ (ಸಂಭ್ರಮ) ಶೂನ್ಯನು.

ಮಂ.ಶ್ಲೋ.॥ **ಏಷ ಮ ಆತ್ಮಾಽನ್ತರ್‌ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕ ತಣ್ಡುಲಾದ್ವೈಷ ಮ ಆತ್ಮಾನ್ತರ್‌ಹೃದಯೇ ಜ್ಯಾಯಾನ್ ಪೃಥಿವ್ಯಾ ಜ್ಯಾಯಾನನ್ತರಿಕ್ಷಾಜ್ಜ್ಯಾಯಾನ್ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ (3) ಸರ್ವಕರ್ಮಾ ಸರ್ವಕಾಮಸ್ಸರ್ವಗನ್ಧ ಸರ್ವರಸಸ್ಸರ್ವಮಿದಮಭ್ಯಾತ್ತೋಽವಾಕ್ಯನಾದರ ಏಷ ಮ ಆತ್ಮಾನ್ತರ್‌ಹೃದಯ ಏತದ್ಬ್ರಹ್ಮೈತಮಿತಃ ಪ್ರೇತ್ಯಾಭಿಸಮ್ಭವಿತಾಽಸ್ಮೀತಿ ಯಸ್ಯಸ್ಯಾದದ್ಧಾನ ವಿಚಿಕಿತ್ಸಾಸ್ತೀತಿ ಹ ಸ್ಮಾಹ ಶಾಂಡಿಲ್ಯಃ ಶಾಂಡಿಲ್ಯಃ (4)**

ತಾ॥ ಹೃದಯದ ಅಂತರಾಳದಲ್ಲಿ ವಾಸಿಸುವ ಈ ಆತ್ಮವು ನೀವಾರ (ಕಾಡಿನ ಭತ್ತ) ತೂಕಕ್ಕಿಂತ, ಬತ್ತದ ಮೊನೆಗಿಂತ ಸಾಸುವೆ ಕಾಳನೊಳಗಿನ ಮೊಳಕೆಗಿಂತ ಅತ್ಯಂತ ಸೂಕ್ಷ್ಮವಾಗಿದೆ. ನನ್ನ ಹೃದಯ ಕಮಲದಲ್ಲಿ ವಾಸವಾಗಿರುವ ಈ ಆತ್ಮ ಭೂಮಂಡಲಕ್ಕಿಂತಲೂ ದೊಡ್ಡದು. ಆಕಾಶಕ್ಕಿಂತ ಹಿರಿದಾದುದು. ದೇವಲೋಕಕ್ಕಿಂತ ದೊಡ್ಡದು. ಎಲ್ಲ ಲೋಕಗಳಿಗಿಂತಲೂ (ವಿಸ್ತಾರ) ದೊಡ್ಡದು. ಈ ಹೃದಯ ಕಮಲದಲ್ಲಿ ವಾಸಿಸುವ ಬ್ರಹ್ಮವೇ ಸೃಷ್ಟಿಕರ್ತ. ಸರ್ವಕಾಮಗಳು, ಸರ್ವಗಂಧಗಳು, ಸರ್ವರಸಗಳನ್ನು, ಸ್ವರೂಪವಾಗಿ ಹೊಂಗಿರುವಂತಹವನು. ಆತನೇ ಪರಬ್ರಹ್ಮ. ಈ ಸತ್ಯವಾದ ಶ್ರದ್ಧೆಯನ್ನು ಯಾರು ಹೊಂದಿರುವರೋ ಅವರಿಗೆ ಯಾವ ವಿಧವಾದ ಸಂದೇಹಗಳೂ ಇರುವುದಿಲ್ಲ. ಶಾಂಡಿಲ್ಯ ಮಹಾ ಮುನಿಯು ಈ ವಿಧವಾಗಿ ಪ್ರಕಟಿಸಿರುವನು.

## ತೃತೀಯ ಪ್ರಪಾಠಕ - ಪಞ್ಚದಶ ಖಂಡ

ಮಂ.ಶ್ಲೋ.॥ **ಅನ್ತರಿಕ್ಷೋದರಃಕೋಶೋ ಭೂಮಿ ಬುಧ್ನೋ ನ ಜೀರ್ಯತಿ ದಿಶೋ ಹ್ಯಸ್ಯಸ್ರಕ್ತಯೋದ್ಯೌ ರಸ್ಯೋತ್ತರಂ ಬಿಲಂ ಸ ಏಷ ಕೋಶೋ ವಸುಧಾ ಸಸ್ತಸ್ಮಿನ್ ವಿಶ್ವಮಿದಂ ಶ್ರಿತಮ್ (1) ತಸ್ಯ ಪ್ರಾಚೀದಿಗ್ಜುಹೂರ್ನಾಮ ಸಹಮಾನಾ ನಾಮ ದಕ್ಷಿಣಾ ರಾಜ್ಞೀನಾಮ ಪ್ರತೀಚೀ ಸುಭೂತಾ ನಾಮೋದೀಚೀ ತಾಸಾಂ ವಾಯುರ್ವತ್ಸಃ ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದಂ ರೋದಿತಿ ಸೋಽಹ ಮೇತಮೇವಂ ವಾಯುಂ ದಿಶಾಂ ವತ್ಸಂ ವೇದ ಮಾ ಪುತ್ರ ರೋದಂ ರುದಮ್ (2) ಅರಿಷ್ಟಂ ಕೋಶಂ ಪ್ರಪದ್ಯೇಽ ಮುನಾಽಮುನಾ-ಮುನಾ ಪ್ರಾಣಂ ಪ್ರಪದ್ಯೇಽಮುನಾಮುನಾಽಮುನಾ ಭೂಃ ಪ್ರಪದ್ಯೇಽಮುನಾಽ-ಮುನಾಽಮುನಾ ಭುವಃ ಪ್ರಪದ್ಯೇಽಮುನಾಽಮುನಾಽಮುನಾ ಸುವಃ ಪ್ರಪದ್ಯೇಽ-ಮುನಾಽಮುನಾಽಮುನಾ (3)**

ತಾ॥ ಆಕಾಶವನ್ನು ಉದರವಾಗಿ, ಭೂಮಿಯನ್ನು ಪೀಠವಾಗಿ ಹೊಂದಿರುವ ಈ ವಿಶ್ವವು ಎಂದಿಗೂ ನಾಶವಾಗುವುದಿಲ್ಲ. ಈ ವಿಶ್ವವನ್ನು ದಿಕ್ಕುಗಳು, ಮೂಲೆಗಳು, ಸ್ವರ್ಗ, ಮೇಲ್ಭಾಗ ಈ ರೀತಿಯಾಗಿ ತಿಳಿಸಲಾದ ವಿಶ್ವವು ಸರ್ವಸಂಪತ್ತುಗಳಿಗೆ ಆಧಾರವಾಗಿದೆ. ಎಲ್ಲ ಭೂತಗಳು ವಿಶ್ವದಲ್ಲಿ ವಿಶ್ರಮಿಸುತ್ತಿವೆ. ಈ ವಿಶ್ವದಲ್ಲಿನ ಪೂರ್ವ ದಿಕ್ಕಿನ ಹೆಸರು ಜುಹೂ. ದಕ್ಷಿಣ ದಿಕ್ಕಿನ ಹೆಸರು ಸಹಮಾನ. ಪಶ್ಚಿಮ ದಿಕ್ಕಿನ ಹೆಸರು ರಾಜ್ಞೀ. ಉತ್ತರ ದಿಕ್ಕಿನ ಹೆಸರು ಸುಭೂತ. ವಾಯುವು ವತ್ಸ, ದಿಕ್ಕುಗಳ ಕರುವಾದ (ವತ್ಸ) ವಾಯುವನ್ನು ಅಮರವೆಂದು ಯಾರು ತಿಳಿಯುವರೋ, ಅವರು ಪುತ್ರನ ಕ್ಷೇಮವನ್ನು ಕೋರಿದರೂ ಅದಕ್ಕಾಗಿ ಚಿಂತೆ ಮಾಡುವುದಿಲ್ಲ. ನನ್ನ ಪುತ್ರನ ಆಯುಸ್ಸನ್ನು ಕೋರಿದವ-ನಾಗಿ, ದಿಕ್ಕುಗಳ ವತ್ಸನಾದ ವಾಯುವನ್ನು ಆರಾಧಿಸುತ್ತಿದ್ದೇನೆ. ನನ್ನ ಪುತ್ರನ ಆಯುರ್ದಾಯವನ್ನು ಕೋರಿದಂತಹವನಾಗಿ, ನನಗೆ ಅವಶ್ಯಕವಾದ ಎಲ್ಲ ವಾಂಛೆಗಳ ನಿಮಿತ್ತವಾಗಿ ಅಮರವಾಗಿರುವ ಈ ವಿಶ್ವವನ್ನು ಶರಣು ಬೇಡಿದೆನು. ನನ್ನ ಎಲ್ಲ ಕೋರಿಕೆಗಳು ನೆರವೇರುವುದಕ್ಕಾಗಿ ಪ್ರಾಣದೇವತೆ-ಯನ್ನು ಶರಣು ಬೇಡಿದೆನು. ನನ್ನ ಅಭೀಪ್ಸಿತಗಳಿಗಾಗಿ ಭೂಲೋಕವನ್ನು ಶರಣು ಕೋರಿದೆನು. ನನ್ನ ಅಗತ್ಯಗಳಿಗಾಗಿ ಭುವರ್ಲೋಕವನ್ನು ಶರಣು ಬೇಡಿದೆ. ನನ್ನ ವಾಂಛೆಗಳಿಗಾಗಿ ಸ್ವರ್ಗ-ಲೋಕವನ್ನು ಶರಣು ಬೇಡಿದೆ. (13ನೆಯ ಖಂಡದಲ್ಲಿ ವೀರಪುತ್ರನ ಜನ್ಮವನ್ನು ಕುರಿತು ಹೇಳಲಾಗಿದೆ.

ತಂದೆಗೆ ಪುಣ್ಯಲೋಕ ಪ್ರಾಪ್ತಿಯನ್ನುಂಟು ಮಾಡುವುದಕ್ಕೆ ವೀರನಾದ ಪುತ್ರನು ಸಮರ್ಥನಲ್ಲವೆಂದು, ಜ್ಞಾನವಂತನಾದ ಪುತ್ರನಿಂದಲೇ ಪುಣ್ಯಲೋಕಗಳು ಲಭಿಸುವ ಅವಕಾಶವಿದೆಯೆಂದು ಶ್ರುತಿಗಳು ಹೇಳುತ್ತಿವೆ. ಈ ಖಂಡದಲ್ಲಿ ತಂದೆಗೆ ಪುಣ್ಯಲೋಕಗಳು ಪ್ರಾಪ್ತಿಯಾಗಲು ತಾನು ದೀರ್ಘಾಯುಸ್ಸನ್ನು ಹೊಂದಲು ಉಪಾಸನೆಯನ್ನು ವಿಸ್ತಾರವಾಗಿ ಹೇಳಲಾಗಿದೆ.)

**ಮಂ.ಶ್ಲೋ.॥ ಸ ಯದವೋಚಂ ಪ್ರಾಣಂ ಪ್ರಪದ್ಯ ಇತಿ ಪ್ರಾಣೋ ವಾ ಇದಂ ಸರ್ವಂ ಭೂತಂ ಯದಿದಂ ಕಿಞ್ಚ ತಮೇವ ತತ್ಪ್ರಾಪತ್ಸಿ (4) ಅಥ ಯದವೋಚಂ ಭೂಃ ಪ್ರಪದ್ಯ ಇತಿ ಪೃಥಿವೀಂ ಪ್ರಪದ್ಯೇಽನ್ತರಿಕ್ಷಂ ಪ್ರಪದ್ಯೇ ದಿವಂ ಪ್ರಪದ್ಯೇ ಇತ್ಯೇವ ತದವೋಚಮ್ (5) ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನಿಂ ಪ್ರಪದ್ಯೇ ವಾಯುಂ ಪ್ರಪದ್ಯ ಆದಿತ್ಯಂ ಪ್ರಪದ್ಯ ಇತ್ಯೇವ ತದವೋಚಮ್ (6) ಅಥ ಯದವೋಚಂ ಸುವಃ ಪ್ರಪದ್ಯ ಇತಿ ಋಗ್ವೇದಂ ಪ್ರಪದ್ಯೇ ಯಜುರ್ವೇದಂ ಪ್ರಪದ್ಯೇ ಸಾಮವೇದಂ ಪ್ರಪದ್ಯ ಇತ್ಯೇವ ತದವೋಚಂ ತದವೋಚಮ್ (7)**

ತಾ॥ ಸೃಷ್ಟಿಯಲ್ಲಿ ಕಂಡುಬರುವ ಪ್ರಾಣಿಗಳೆಲ್ಲವೂ ಪ್ರಾಣವೇ. ಆದ್ದರಿಂದಲೇ ಪ್ರಾಣವನ್ನೇ ಶರಣು ಬೇಡಿದೆ ಎಂದು ಹೇಳಿದೆ. ಪ್ರಾಣವನ್ನು ಮಾತ್ರವೇ ಶರಣು ಹೋಗುತ್ತಿದ್ದೇನೆ. ಭೂಲೋಕವನ್ನು ಶರಣು ಹೋದೆ ಎಂದು ಹೇಳಿದ್ದೆ. ಭೂಲೋಕವನ್ನು, ಆಕಾಶವನ್ನು, ಸ್ವರ್ಗವನ್ನು, ಶರಣು ಬೇಡಿದೆ ಎಂದು ಮಾತ್ರವೇ ಹೇಳಿದ್ದೆ. ಭುವರ್ಲೋಕವನ್ನು ಕೂಡಾ ಶರಣು ಹೋದೆ ಎಂದು ಹೇಳಿದ್ದೆ. ಅಗ್ನಿಯನ್ನು, ವಾಯುವನ್ನು, ಸೂರ್ಯನನ್ನು ಮಾತ್ರವೇ ಶರಣು ಹೋದೆನೆಂದು ಹೇಳಿದ್ದೆ. ಸ್ವರ್ಗವನ್ನು ಕೂಡಾ ಶರಣು ಹೋದೆನೆಂದು ಹೇಳಿದ್ದೆ. ಋಗ್ವೇದವನ್ನು, ಯಜುರ್ವೇದವನ್ನು, ಸಾಮವೇದವನ್ನು ಮಾತ್ರವೇ ಶರಣು ಹೋದೆ ಎಂದು ಮಾತ್ರ ಹೇಳಿದ್ದೆ.

## ತೃತೀಯ ಪ್ರಪಾಠಕ – ಷೋಡಶ ಖಂಡ

**ಮಂ.ಶ್ಲೋ.॥ ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ ತತ್ಪ್ರಾತಸ್ಸವನಂ ಚತುರ್ವಿಂಶತ್ಯಕ್ಷರಾ ಗಾಯತ್ರೀ, ಗಾಯತ್ರಂ ಪ್ರಾತಸ್ಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾವಾವ ವಸವ ಏತೇಹೀದಂ ಸರ್ವಂ ವಾಸಯನ್ತಿ (1) ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ ಪ್ರಾಣಾ ವಸವ ಇದಂ ಮೇ ಪ್ರಾತಸ್ಸವನಂ ಮಾಧ್ಯನ್ದಿನಂ ಸವನಮನುಸನ್ತನುತೇತಿ ಮಾಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋ-ಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ (2)**

ತಾ॥ ಪುರುಷನೇ ಯಜ್ಞವಾಗಿದ್ದಾನೆ. ತಾನು ಕಳೆದಿರುವ ಇಪ್ಪತ್ತನಾಲ್ಕು ಸಂವತ್ಸರಗಳು ಪ್ರಾತಃಕಾಲ ಯಜ್ಞವಾಗಿದೆ. ಅದರಿಂದಲೇ ಗಾಯತ್ರೀ ಮಂತ್ರಕ್ಕೆ 24 ಅಕ್ಷರಗಳಿವೆ. ಉದಯ ಸವನವು ಗಾಯತ್ರೀ ಮಂತ್ರಕ್ಕೆ ಸಂಬಂಧಿಸಿದುದು. ಈ ಮಂತ್ರದೊಂದಿಗೆ ವಸುಗಳಿಗೆ ಸಂಬಂಧವಿದೆ. ಎಲ್ಲೆಡೆ ವ್ಯಾಪಿಸಿರುವುದರಿಂದಲೇ ಪ್ರಾಣಗಳೇ ವಸುಗಳು. ಉದಯ ಸಮಯದಲ್ಲಿ ಏನಾದರೂ

ವ್ಯಾಧಿಯಿಂದ ಬಾಧೆಯುಂಟಾದರೆ ಈ ರೀತಿ ಪ್ರಾರ್ಥಿಸಬೇಕು. "ವಸು ರೂಪದಲ್ಲಿರುವ ಪ್ರಾಣ ದೇವತೆಗಳಿರಾ! ಈ ಉದಯ ಸವನವನ್ನು, ಮಧ್ಯಾಹ್ನದ ಯಜ್ಞದೊಂದಿಗೆ ಸೇರಿಸಿ ನನ್ನಿಂದ ಮಾಡಿಸಿ! ನಾನೇ ಯಜ್ಞವು. ನಿಮ್ಮ ಮಧ್ಯದಲ್ಲಿ ನಾನು ನಶಿಸಿ ಹೋಗಬಾರದು" ಎಂದು ಆಗ ಖಂಡಿತವಾಗಿ ಆ ವ್ಯಾಧಿಯಿಂದ ಗುಣಮುಖನಾಗಿ ಆರೋಗ್ಯವಂತನಾಗುವನು.

**ಮಂ.ಶ್ಲೋ.॥ ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯನ್ದಿನಂ ಸವನಂ, ಚತುಶ್ಚತ್ವಾರಿಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯನ್ದಿನಂ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾವಾವ ರುದ್ರಾ ಏತೇ ಹೀದಗ್ಂ ಸರ್ವಗ್ಂ ರೋದಯನ್ತಿ (3) ತಂ ಚೇದೇತಸ್ಮಿನ್ವಯಸಿ ಕಿಂಚಿದುಪತ -ಪೇತ್ ಸ ಬ್ರೂಯಾತ್ ಪ್ರಾಣಾ ರುದ್ರಾ ಇದಂ ಮೇ ಮಾಧ್ಯನ್ದಿನಗ್ಂ ಸವನಂ ತೃತೀಯಸವನಮನುಸನ್ತನುತೇತಿ ಮಾಽಹಂ ಪ್ರಾಣಾನಾಂ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋಪ್ಸಿಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ (4) ಅಥ ಯಾನ್ಯಷ್ಟಾಚತ್ವಾರಿಂಶ-ದ್ವರ್ಷಾಣಿ ತತ್ತೃತೀಯಸವನಮಷ್ಟಾಚತ್ವಾರಿಂಶದಕ್ಷರಾ ಜಗತೀ ಜಾಗತಂ ತೃತೀಯಸವನಂ ತದಸ್ಯಾದಿತ್ಯಾ ಅನ್ವಾಯತ್ತಾಃ ಪ್ರಾಣಾವಾವಾದಿತ್ಯಾ ಏತೇ ಹೀದಂ ಸರ್ವಮಾದದತೇ (5)**

ತಾ॥ ಆತನಿಗೆ ಆನಂತರದ ನಲವತ್ತ ನಾಲ್ಕು ಸಂವತ್ಸರಗಳು ಮಾಧ್ಯಂದಿನ ಸವನ. ಆದ್ದರಿಂದಲೇ ತ್ರಿಷ್ಟುಪ್ ಛಂದಸ್ಸು 44 ಅಕ್ಷರಗಳೊಂದಿಗೆ ಇರುವ ಮಾಲೆಯಾಗಿದೆ. ಮಾಧ್ಯಂದಿನ ಸವನವು ತ್ರಿಷ್ಟುಪ್ ಛಂದಸ್ಸಿಗೆ ಸಂಬಂಧಿಸಿದೆ. ತ್ರಿಷ್ಟುಪ್ ಛಂದಸ್ಸು(ಗಳು) ರುದ್ರರಿಗೆ ಸಂಧಿಸಿದುದು. ಈ ವಿಶ್ವಕ್ಕೆ ರೋದನವನ್ನು ಉಂಟುಮಾಡಿದುದರಿಂದ ಪ್ರಾಣಗಳೇ ರುದ್ರರು. ಈ ಜೀವಮಾನದಲ್ಲಿ ವ್ಯಾಧಿಗಳು, ಬಾಧೆಗಳು ಸಂಭವಿಸಿದಾಗ ಈ ರೀತಿಯಾಗಿ ಪ್ರಾರ್ಥಿಸಬೇಕು "ಪ್ರಾಣದೇವತೆಗಳೇ! ರುದ್ರರೇ! ಈ ಮಧ್ಯಾಹ್ನ ಯಜ್ಞವನ್ನು ಮೂರನೆಯ ಯಜ್ಞವಾಗಿ ಸ್ವೀಕರಿಸಿ! ಯಜ್ಞವಾಗಿರುವ ನಾನು ಪ್ರಾಣ ದೇವತೆಗಳಾದ ರುದ್ರರ ಮಧ್ಯದಲ್ಲಿ ನಶಿಸಿ ಹೋಗದಿರುವಂತಾಗಲಿ" ಎಂದು. ಹಾಗೆ ಪ್ರಾರ್ಥಿಸಿದವನು ಖಂಡಿತವಾಗಿ ಆ ಬಾಧೆಯಿಂದ ವಿಮುಕ್ತಿಯನ್ನು ಹೊಂದಿ ಆರೋಗ್ಯವಂತ-ನಾಗುತ್ತಾನೆ. ಆತನಿಗೆ ಆಮೇಲೆ ನಲವತ್ತೆಂಟು ವರ್ಷಗಳು, ಮೂರನೆಯ ಯಜ್ಞವಾದ ಜಗತೀ ಛಂದಸ್ಸು ಮಾಡಲು ಬರುತ್ತದೆ. ಜಗತೀ ಛಂದಸ್ಸಿಗೆ ನಲವತ್ತೆಂಟು (48) ಅಕ್ಷರಗಳು. ಈ ಮೂರನೆಯ ಯಜ್ಞವು ಜಗತೀ ಛಂದಸ್ಸಿಗೆ ಸಂಬಂಧಿಸಿದುದಂತಹುದು. ಈ ಜಗತೀ ಛಂದಸ್ಸು ಆದಿತ್ಯರಿಗೆ ಸಂಬಂಧಿಸಿದಂತಹುದು. ಸರ್ವವನ್ನು ಗ್ರಹಿಸುವುದರಿಂದ ಪ್ರಾಣ ದೇವತೆಗಳೇ ಆದಿತ್ಯರು.

**ಮಂ.ಶ್ಲೋ.॥ ತಂ ಚೇದೇತಸ್ಮಿನ್ವಯಸಿ ಕಿಞ್ಚಿದುಪತಪೇತ್ಸಬ್ರೂಯಾತ್ ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನುಸನ್ತನುತೇತಿ ಮಾಽಹಂ ಪ್ರಾಣಾನಾಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹೈವ ಭವತಿ (6) ಏತ ದ್ಧಸ್ಮವೈ ತದ್ವಿದ್ವಾನಾಹ ಮಹಿದಾಸ ಐತರೇಯಃ ಸ ಕಿಂ ಮ ಏತದುಪತಪಸಿ ಯೋಽಹಮನೇನ ನ ಪ್ರೇಷ್ಯಾಮೀತಿ ಸ ಷೋಡಶಂವರ್ಷಶತಮಜೀವತ್ಸ ಹ ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ ಯ ಏವಂ ವೇದ (7)**

ತಾ॥ ಈ 48 ಸಂವತ್ಸರಗಳಲ್ಲಿ ಏನಾದರೂ ಬಾಧೆಗಳುಂಟಾದಾಗ ಈ ರೀತಿಯಾಗಿ ಪ್ರಾರ್ಥಿಸಬೇಕು. "ಓ ಪ್ರಾಣಗಳೇ! ಆದಿತ್ಯರೇ! ಈ ಮೂರನೆಯ ಯಜ್ಞವು ಪೂರ್ತಿ ಜೀವನದವರೆಗೂ ಆಚರಿಸುವಂತಾಗಲಿ! ಯಜ್ಞವಾಗಿರುವ ನಾನು, ಪ್ರಾಣ ರೂಪ ಆದಿತ್ಯರ ಮಧ್ಯದಲ್ಲಿ ನಶಿಸಿ ಹೋಗದಿರುವಂತಾಗಲಿ!" ಎಂದು. ಆತ ಬಾಧೆಗಳಿಂದ ವಿಮುಕ್ತನಾಗಿ ಆರೋಗ್ಯವಂತನಾಗುವನು. ಈ ಯಜ್ಞ ಸಿದ್ಧಾಂತವನ್ನು ಪೂರ್ತಿಯಾಗಿ ಗ್ರಹಿಸಿ ಐತರೇಯ ಮಹಿದಾಸಮುನಿಯು ಈ ರೀತಿಯಾಗಿ ಹೇಳಿದ "ಮರಣಿಸದೆ ಇಷ್ಟು ವರ್ಷ ಜೀವಿಸಿದ್ದಕ್ಕೆ ನನ್ನನ್ನು ಏಕೆ ಪ್ರಶ್ನಿಸುವಿರಿ?" ಎಂದು. ಆ ಋಷಿ 116 ವರ್ಷ ಬದುಕಿದ್ದ. ಈ ಸಿದ್ಧಾಂತವನ್ನು ಯಾರು ತಿಳಿದುಕೊಳ್ಳುತ್ತಾರೋ ಅವರು ಸಹ ನೂರಾಹದಿನೆಂಟು ವರ್ಷ ದಷ್ಟಪುಷ್ಟರಾಗಿ ಬಾಳುವರು. (ಆರೋಗ್ಯವಾಗಿ ಬಾಳುವರು.)

## ತೃತೀಯ ಪ್ರಪಾಠಕ – ಸಪ್ತದಶ ಖಂಡ

**ಮಂ.ಶ್ಲೋ.॥ ಸ ಯದಶಿಶಿಷತಿ ಯತ್ಪಿಪಾಸತಿ ಯನ್ನ ರಮತೇ ತಾ ಅಸ್ಯ ದೀಕ್ಷಾಃ (1) ಅಥ ಯದಶ್ನಾತಿ ಯತ್ಪಿಬತಿ ಯದ್ರಮತೇ ತದುಸನದ್ಯೈರೇತಿ (2) ಅಥ ಯದ್ಧಸತಿ ಯಜ್ಜಕ್ಷತಿ ಯನ್ಮೈಥುನಂ ಚರತಿ ಸ್ತುತಶಸ್ತ್ರೈರೇವ ತದೇತಿ (3) ಅಥ ಯತ್ತಮೋದಾನಮಾರ್ಜವಮಹಿಂಸಾ ಸತ್ಯವಚನ-ಮಿತಿ ತಾ ಅಸ್ಯದಕ್ಷಿಣಾಃ (4) ತಸ್ಮಾದಾಹುಃ ಸೋಷ್ಯತ್ಯಸೋಷ್ಟೇತಿ ಪುನರುತ್ಪಾದನ ಮೇ ವಾಸ್ಯ ತನ್ಮರಣಮೇವಾವಭೃಥಃ (5) ತದ್ಧೈತದ್ಘೋರ ಆಙ್ಗಿರಸಃ ಕೃಷ್ಣಾಯ ದೇವಕೀ ಪುತ್ರಾಯೋಕ್ತೋ ವಾಚಾ ಪಿಪಾಸ ಏವ ಸ ಬಭೂವ ಸೋಽನ್ತವೇಳಾಯಾಮೇತತ್ತ್ರಯಂ ಪ್ರತಿಪದ್ಯೇತಾಕ್ಷಿತಮಸ್ಯಚ್ಯುತಮಸಿ ಪ್ರಾಣಸಂಶಿತಮಸೀತಿ ತತ್ರೈತೇದ್ವೇ ಋಚೌ ಭವತಃ (6) ಆದಿತ್ಪ್ರತ್ನಸ್ಯ ರೇತಸಃ ಉದ್ವಯಂತಮಸಸ್ಪರಿ ಜ್ಯೋತಿಃ ಪಶ್ಯನ್ತ ಉತ್ತರಂ ಸ್ವಃ ಪಶ್ಯನ್ತ ಉತ್ತರಂ ದೇವಂ ದೇವತ್ರಾ ಸೂರ್ಯಮಗನ್ಮಜ್ಯೋತಿರುತ್ತಮಮಿತಿ ಜ್ಯೋತಿರುತ್ತಮಮಿತಿ (7) (ಜ್ಯೋತಿಃ ಪಶ್ಯನ್ತಿ ವಾಸರಮ್। ಪರೋಯದಿಧ್ಯತೇ ದಿವಿ.)**

ತಾ॥ ಆತ ಹಸಿವನ್ನು ಅನುಭವಿಸುವನು. ಬಾಯಾರಿಕೆಯಾಗುತ್ತದೆ. ರಮಿಸಲು ಅವಕಾಶ-ವಾಗುವುದಿಲ್ಲ. ಇವೆಲ್ಲವೂ ಯಜ್ಞ ದೀಕ್ಷೆಗಳು. ಆತ ಭೋಜನ ಮಾಡುವುದು, ನೀರು ಕುಡಿಯುವುದು, ರಮಿಸುವುದು ಇವೆಲ್ಲವೂ ಉಪಸದಗಳು. ಆತ ನಗುವುದು, ಭುಜಿಸುವುದು, ಮೈಥುನ ಮಾಡುವುದು, ಅವೆಲ್ಲವೂ ಸ್ತೋತ್ರಗಳು. ಶಸ್ತ್ರಗಳು, ಆತನ ತಪಸ್ಸು, ದಾನಗಳು, ಆರ್ಜನೆಗಳು, ಅಹಿಂಸಾವ್ರತ, ಸತ್ಯವಚನಗಳು, ಇವೆಲ್ಲವೂ ಯಜ್ಞ ದಕ್ಷಿಣೆಗಳು ಆದ್ದರಿಂದ ಪ್ರಜೆಗಳು ಹೀಗೆ ಹೇಳುವರು. "ಫಲಿಸುತ್ತವೆ. ಫಲಿಸಿರುವಂತಹುದು" ಎಂದು. ಇವೆಲ್ಲವೂ ಯಜ್ಞದ ಸತ್ಫಲಿತ. ಅಂತಹವನಿಗೆ ಮರಣವೇ ಅವಭೃಥಸ್ನಾನ. ಘೋರ ಆಂಗೀರಸಮುನಿ ಈ ಯಜ್ಞ ವಿಧಾನವನ್ನು ದೇವಕೀಪುತ್ರನಾದ ಶ್ರೀಕೃಷ್ಣನಿಗೆ ಬೋಧಿಸಿದ. ಮತ್ತು ಕೃಷ್ಣನಲ್ಲಿ ಈ ರೀತಿಯಾಗಿ ಬಿನ್ನವಿಸಿಕೊಂಡ. "ನೀನು ಚ್ಯುತಿಯಿಲ್ಲದವನು. ನೀನು ಬದಲಾವಣೆಯಿಲ್ಲದವನು. ನೀನು ಪ್ರಾಣದ ಸೂಕ್ಷ್ಮತನು. "ಆ ಪ್ರಾರ್ಥನೆ ಕೇಳಿ ಆತ ಹಸಿವು ನೀರಡಿಕೆಗಳಿಲ್ಲದವನಾದನು. ಈ ಎರಡು ಋಕ್ಕುಗಳು ಈ ಯಜ್ಞಕ್ಕೆ ಸಂಬಂಧಿಸಿದಂತಹುದು. ಜಿತೇಂದ್ರಿಯರಾಗಿ ಬ್ರಹ್ಮಚರ್ಯವನ್ನು ವ್ರತವಾಗಿರಿಸಿಕೊಂಡ ಬ್ರಹ್ಮಜ್ಞಾನಿಗಳು ಪುರಾತನನು, ವಿಶ್ವ

ಬೀಜವನ್ನು ಹೊಂದಿರುವವನು. ಮಹಾಪ್ರಕಾಶವಾಗಿರುವಂತಹ ಪರಬ್ರಹ್ಮವನ್ನು ಸರ್ವತ್ರಾ ದರ್ಶಿಸುವರು. ಈ ಜ್ಞಾನವನ್ನು ಉಪಾರ್ಜಿಸಿ ನಾವು ಸಹ ಅಜ್ಞಾನಾಂಧಕಾರವನ್ನು ಹೋಗಲಾಡಿಸುವಂತಹ ಆ ಮಹಾ ಪ್ರಕಾಶವನ್ನು ಸೇರಿಕೊಳ್ಳಬೇಕು. ಆ ಮಹಾ ಪ್ರಕಾಶವನ್ನು ಹೃದಯದಲ್ಲೇ ದರ್ಶಿಸಿ ಪ್ರಾಣದೊಂದಿಗೆ ಪ್ರಕಾಶಿಸುವಂತಹ ಸರ್ವ ದೇವತೆಗಳಲ್ಲಿ ಪ್ರಕಾಶಿಸುವಂತಹ, ಅಜ್ಞಾನಾಂಧಕಾರವನ್ನು ಹೋಗಲಾಡಿಸುವಂತಹ ಆ ಮಹಾ ಪ್ರಕಾಶವನ್ನು ಸೇರಿಕೊಳ್ಳುವಂತಹವರಾಗುತ್ತೇವೆ.

## ತೃತೀಯ ಪ್ರಪಾಠಕ – ಅಷ್ಟಾದಶ ಖಂಡ

**ಮಂ.ಶ್ಲೋ.॥ ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತ್ಯುಭಯಮಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ (1) ತದೇತಚ್ಚತುಷ್ಪಾದ್ಬ್ರಹ್ಮ ವಾಕ್ಪಾದಃ ಪ್ರಾಣಃ ಪಾದಶ್ಚಕ್ಷುಃ ಪಾದಃ ಶ್ರೋತ್ರಂ ಪಾದ ಇತ್ಯಧ್ಯಾತ್ಮಮಥಾಧಿದೈವತಮಗ್ನಿಃ ಪಾದೋ ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದ ಇತ್ಯುಭಯಮ್ ವಾದಿಷ್ಟಂ ಭವತ್ಯಧ್ಯಾತ್ಮಂ ಚೈವಾಧಿದೈವತಂ ಚ (2) ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ (3)**

ತಾ॥ ಮನಸ್ಸೇ ಬ್ರಹ್ಮ. ಆದ್ದರಿಂದ ದೇಹದಲ್ಲಿರುವ ಮನಸ್ಸನ್ನೇ ಧ್ಯಾನಿಸಬೇಕು. ಆ ನಂತರ ದೇವತೆಗಳನ್ನು ಕುರಿತಾದ ಧ್ಯಾನ, ದೇವತೆಗಳು ಸಂತೋಷಪಡುವ ರೀತಿಯಲ್ಲಿ ದೇವತೆಗಳನ್ನು ದೇಹವನ್ನು ಕೂಡಾ ಧ್ಯಾನಿಸಬೇಕು. ಈ ಬ್ರಹ್ಮಕ್ಕೆ ನಾಲ್ಕು ಪಾದಗಳಿವೆ. ವಾಗೀಂದ್ರಿಯವೊಂದು ಪಾದ, ಪ್ರಾಣವು ಒಂದು ಪಾದನೇತ್ರವು ಒಂದು ಪಾದ, ಮತ್ತು ಶ್ರೋತ್ರವು ಒಂದು ಪಾದ. ಇದು ದೇಹಕ್ಕೆ ಸಂಬಂಧಿಸಿದಂತಹುವು. ದೇವತೆಗಳಿಗೆ ಸಂಬಂಧಿಸಿದಂತಹವುಗಳು. ಅಗ್ನಿ ಒಂದು ಪಾದ, ವಾಯು ಒಂದು ಪಾದ, ಆದಿತ್ಯನೊಂದು ಪಾದ ಮತ್ತು ದಿಕ್ಕುಗಳು ಒಂದು ಪಾದ. ಈ ವಿಧವಾಗಿ ದೇಹಕ್ಕೆ ಸಂಬಂಧಿಸಿದ ಧ್ಯಾನ, ದೇವತೆಗಳಿಗೆ ಸಂಬಂಧಿಸಿದ ಧ್ಯಾನ ಎರಡು ಧ್ಯಾನಗಳು ಜರುಗುತ್ತಿವೆ. ವಾಗೀಂದ್ರಿಯವು ಬ್ರಹ್ಮದ ನಾಲ್ಕು ಪಾದಗಳಲ್ಲಿ ಒಂದು ಪಾದವಾಗಿದೆ. ಅಗ್ನಿ ತನ್ನ ಪ್ರಕಾಶದಿಂದ ಬೆಳಗುತ್ತಾನೆ. ಶಾಖವನ್ನು ನೀಡುವನು. ಯಾರು ಈ ರೀತಿ ಗ್ರಹಿಸುತ್ತಾರೋ ಅವರು ಬ್ರಹ್ಮ ವರ್ಚಸ್ಸಿನೊಂದಿಗೆ ಬಾಳುತ್ತಾರೆ. ಕೀರ್ತಿವಂತರಾಗಿ ಜೀವಿಸುತ್ತಾರೆ.

**ಮಂ.ಶ್ಲೋ.॥ ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ (4) ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ (5) ಶ್ರೋತ್ರಮೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ದಿಗ್ಭಿರ್ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ಯ ಏವಂ ವೇದ (6)**

ತಾ॥ ಬ್ರಹ್ಮನ ನಾಲ್ಕು ಪಾದಗಳಲ್ಲಿ ಪ್ರಾಣವು ಒಂದು ಪಾದವಾಗಿದೆ. ಆ ಪ್ರಾಣವು ವಾಯುವಿನ

ಚೈತನ್ಯದಿಂದ ಕಾಂತಿಯನ್ನು ಶಾಖವನ್ನು ಹೊಂದಿದೆ. ಯಾರು ಈ ವಿವರಗಳನ್ನು ತಿಳಿದು ಕೊಳ್ಳುವರೋ, ಅವರು ಕೀರ್ತಿಯೊಂದಿಗೆ, ಯಶಸ್ಸಿನೊಂದಿಗೆ, ಬ್ರಹ್ಮ ವರ್ಚಸ್ಸಿನೊಂದಿಗೆ ಜೀವಿಸುವರು. ಬ್ರಹ್ಮನ ನಾಲ್ಕು ಪಾದಗಳಲ್ಲಿ ನೇತ್ರವೊಂದು ಪಾದ. ಸೂರ್ಯನ ತೇಜಸ್ಸಿನಿಂದ ನೇತ್ರವು ಪ್ರಕಾಶವನ್ನು, ಚೈತನ್ಯವನ್ನು ಹೊಂದಿರುತ್ತದೆ. ಯಾರು ಈ ರೀತಿಯಾಗಿ ಅರಿತುಕೊಳ್ಳುವರೋ, ಅವರು ಕೀರ್ತಿಯೊಂದಿಗೆ, ಬ್ರಹ್ಮ ವರ್ಚಸ್ಸಿನೊಂದಿಗೆ, ಯಶಸ್ಸಿನೊಂದಿಗೆ ಜೀವಿಸುತ್ತಾರೆ. ಬ್ರಹ್ಮನ ನಾಲ್ಕು ಪಾದಗಳಲ್ಲಿ ಶ್ರೋತ್ರವೊಂದು ಪಾದ, ದಿಕ್ಕುಗಳ ಚೈತನ್ಯದೊಂದಿಗೆ ಶ್ರೋತ್ರವು ಪ್ರಕಾಶವನ್ನು ಹೊಂದಿ ಕೆಲಸ ಮಾಡುವುದು. ಯಾರು ಈ ರೀತಿಯಾಗಿ ತಿಳಿದುಕೊಳ್ಳುವರೋ ಅವರು ಕೀರ್ತಿವಂತರಾಗಿ, ಯಶಸ್ಸಿನೊಂದಿಗೆ ಬ್ರಹ್ಮವರ್ಚಸ್ಸಿನೊಂದಿಗೆ ಬಾಳುತ್ತಾರೆ.

## ತೃತೀಯ ಪ್ರಪಾಠಕ – ಏಕೋನವಿಂಶ ಖಂಡ

**ಮಂ.ಶ್ಲೋ.॥ ಆದಿತ್ಯೋ ಬ್ರಹ್ಮೇತ್ಯಾದೇಶಸ್ತಸ್ಯೋಪವ್ಯಾಖ್ಯಾನಮಸದೇವೇದಮಗ್ರ ಆಸೀತ್, ತತ್ಸದಾಸೀತ್ ತತ್ಸಮಭವತ್ತದಾಣ್ಡಂ ನಿರವರ್ತತ ತತ್ಸಂವತ್ಸರಸ್ಯ ಮಾತ್ರಾಮಶಯತ ತನ್ನಿರಭಿದ್ಯ ತತೇ ಆಣ್ಡಕಪಾಲೇ ರಜತಂ ಚ ಸುವರ್ಣಂ ಚಾ ಭವತಾಮ್ (1) ತದ್ಯದ್ರಜತಂ ಸೇಯಂ ಪೃಥಿವೀ ಯತ್ಸುವರ್ಣಂ ಸಾದ್ಯೌರ್ಯಜ್ಜರಾಯುತೇ ಪರ್ವತಾ ಯದುಲ್ಬಂ ಸ ಮೇಘೋ ನೀಹಾರೋ ಯಾ ಧಮನಯಸ್ತಾ ಸದ್ಯೋ ಯದ್ವಾ ಸ್ತೇಯಮುದಕಂ ಸ ಸಮುದ್ರಃ (2) ಅಥಯತ್ತದಜಾಯತ ಸೋಽಸಾವಾದಿತ್ಯಸ್ತಂಜಾಯಮಾನಂ ಘೋಷಾ ಉಲೂಲ-ವೋಽನೂದತಿಷ್ಟನ್ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಸ್ತಸ್ಮಾತ್ತಸ್ಯೋದಯಂ ಪ್ರತಿ ಪ್ರತ್ಯಾಯನಂ ಪ್ರತಿ ಘೋಷಾ ಉಲೂಲವೋಽನೂತ್ತಿಷ್ಟನ್ತಿ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ (3) ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್.(4)**

ತಾ॥ ಸೂರ್ಯನೇ ಬ್ರಹ್ಮ. ಇದೇ ಆದೇಶ. ಮಿಕ್ಕ ವಿವರಗಳೆಲ್ಲವೂ ವ್ಯಾಖ್ಯಾನಗಳು ಮಾತ್ರವೇ. ಈ ಸೃಷ್ಟಿಗೆ ಮೊದಲೇ ಈ ಭೂಮಿಯೆಲ್ಲವೂ ಅವ್ಯಕ್ತವಾಗಿತ್ತು. ಆನಂತರ ವ್ಯಕ್ತವಾಗಿ ಪ್ರಕಟವಾಯಿತು. ಈ ಭೂಮಿ ಬೆಳೆಯಿತು. ಅಂಡಾಕಾರವನ್ನು ಹೊಂದಿತು. ಅಂಡವಾಗಿಯೇ ಒಂದು ಸಂವತ್ಸರ ಕಾಲವಿತ್ತು. ನಂತರ ಅಂಡವು ಒಡೆಯಿತು. ಅಂಡವು ಎರಡು ಭಾಗಗಳಾದವು. ಒಂದು ಬೆಳ್ಳಿ ಮತ್ತೊಂದು ಬಂಗಾರವಾಗಿ ಕಾಣಿಸಿದವು. ಬೆಳ್ಳಿಯಾಗಿ ಕಾಣಿಸಿದ್ದೇ ಭೂಮಿ. ಸ್ವರ್ಣವಾಗಿದ್ದ ಭಾಗವೇ ಸ್ವರ್ಗ. ಬಾಹ್ಯವಾಗಿದ್ದ ಭಾಗಗಳೇ ಪರ್ವತಗಳು. ಮಧ್ಯಭಾಗದಲ್ಲಿ ವ್ಯಾಪಿಸಿರುವುದೇ ಮೇಘಗಳು. ಆ ಅಂಡದಲ್ಲಿ ನರಗಳಾಗಿದ್ದ (ಧಮನಿ) ಭಾಗಗಳೆಲ್ಲವೂ ನದಿಗಳು. ಕೆಳಗಿರುವ ಭಾಗಗಳೆಲ್ಲವೂ ಸಮುದ್ರಗಳು. ಸೂರ್ಯ ಭಗವಾನನು ಆ ಅಂಡದಿಂದಲೇ ಜನಿಸಿದ. ಸೂರ್ಯನು ಜನಿಸಿದ ನಂತರ ಶಬ್ದ ಘೋಷಗಳು ಜೋರಾಗಿ ಕೇಳಿಸಿದವು. ಸರ್ವ ಜೀವಿಗಳು ಸರ್ವ ವಿಷಯಗಳು ಸಹ ಹುಟ್ಟಿದವು. ಆದ್ದರಿಂದಲೇ ಸೂರ್ಯನ ಉದಯ ಕಾಲದಲ್ಲೂ, ಅಸ್ತಮದ ವೇಳೆಗಳಲ್ಲೂ, ಸರ್ವ ವಿಧವಾದ ಗಟ್ಟಿಯಾದ ಶಬ್ದಗಳು ಕೇಳಬರುತ್ತವೆ. ಸರ್ವಜೀವಿಗಳು, ವಿಷಯಗಳು ಪ್ರಕಾಶಿಸುತ್ತವೆ.

ಯಾರು ಈ ವಿಧವಾಗಿ ತಿಳಿದುಕೊಂಡು ಸೂರ್ಯನನ್ನು ಪರಬ್ರಹ್ಮವಾಗಿ ಧ್ಯಾನಿಸುತ್ತಿರುವರೋ ಅವರಿಗೆ ಸುಶಬ್ದಗಳು (ವೇದಘೋಷಗಳು) ಆನಂದವನ್ನುಂಟು ಮಾಡುವವು. ಸರ್ವದಾ ಆನಂದವನ್ನು ಉಂಟುಮಾಡುವುದು. (ಮೂರನೆಯ ಪ್ರಪಾಠಕದಲ್ಲಿ 19 ಖಂಡಗಳನ್ನು ತೊಂಬತ್ತೈದು ಮಂತ್ರಗಳನ್ನು ಹೊಂದಿವೆ.)

## ಚತುರ್ಥ ಪ್ರಪಾಠಕ – ಪ್ರಥಮ ಖಂಡ

**ಮಂ.ಶ್ಲೋ.॥ ಓಮ್ ಜಾನ ಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ ಸಹ ಸರ್ವತ ಅವಸಥಾನ್ಮಾಪಯಾಞ್ಚಕ್ರೇ ಸರ್ವತ ಏವಮೇಽನ್ನಮತ್ಸ್ಯಂತೀತಿ (1) ಅಥ ಹ ಹಂಸಾ ನಿಶಾಯಾಮತಿಪೇತುಸ್ತದ್ಧೈವಂ ಹಂಸೋ ಹಂಸಮಭ್ಯುವಾದಹೋ ಹೋಯಿ ಭಲ್ಲಾಕ್ಷ ಭಲ್ಲಾಕ್ಷ ಜಾನಶ್ರುತೇಃ ಪೌತ್ರಾಯಣಸ್ಯ ಸಮಂ ದಿವಾಜ್ಯೋತಿರಾತತಂ ತನ್ಮಾ ಪ್ರಸಾಂಕ್ಷೀಸ್ತತ್ತ್ವಾ ಮಾ ಪ್ರಧಾಕ್ಷೀರಿತಿ (2) ತ ಮು ಹ ಪರಃಪ್ರತ್ಯುವಾಚ ಕಮ್ವರ ಏನಮೇತತ್ಸನ್ತಂ ಸಯುಗ್ವಾನಮಿವ ರೈಕ್ವಮಾತ್ಥೇತಿ ಯೋಽನುಕಥಂ ಸಯುಗ್ವಾ ರೈಕ್ವ ಇತಿ ॥ (3)**

ತಾ॥ ಜಾನಶ್ರುತಿ ಪೌತ್ರಾಯಣನು ಜನಶ್ರುತ ವಂಶಜಾತನಾದ ಮುನಿಯ ಓರ್ವ ಮೊಮ್ಮಗನು. ವಿಶೇಷ ಶ್ರದ್ಧೆಯಿಂದ ದಾನ ಮಾಡುವ ಅನ್ನದಾತನಾಗಿದ್ದವನು. ತಾನು ದಾನ ಮಾಡಿದ ಅನ್ನವನ್ನೇ ಜನರು ಎಲ್ಲೆಲ್ಲೂ ಭುಜಿಸುವಂತಾಗಲಿ! ಎನ್ನುವ ಸದ್ಭಾವನೆಯಿಂದ ಆತ ಎಲ್ಲೆಲ್ಲೂ ಧರ್ಮಶಾಲೆಗಳನ್ನು, ಅನ್ನಛತ್ರಗಳನ್ನು, ಕಟ್ಟಿಸಿದ. ಒಂದು ದಿನ ರಾತ್ರಿಯ ವೇಳೆ ಎರಡು (2) ಹಂಸ ಪಕ್ಷಿಗಳು ಆತನ ಎದುರಿನಿಂದ ಹಾರಿ ಹೋದವು. ಹಾಗೆ ಹಾರಿ ಹೋಗುವಾಗ ಒಂದು ಪಕ್ಷಿ ಎರಡನೆಯ ಪಕ್ಷಿಯನ್ನು ಕುರಿತು ಹೀಗೆ ಹೇಳಿತು. "ಓ ಭಲ್ಲಾಕ್ಷನೇ! ದೃಷ್ಟಿ ಲೋಪವಿರುವವನೇ, ದ್ಯುಲೋಕ ಜ್ಯೋತಿಯಂತೆ ಜಾನ ಶ್ರುತಿ ಪೌತ್ರಾಯಣನ ತೇಜಸ್ಸು ವ್ಯಾಪಿಸಿದೆ. ಅದನ್ನು ಮುಟ್ಟಹೋಗಬೇಡ. ಅದು ನಿನ್ನನ್ನು ಸುಟ್ಟು ಬಿಡುವುದು. ಎಚ್ಚರಿಕೆ." ಕೂಡಲೇ ಎರಡನೆಯ ಹಂಸವು ಹೀಗೆ ಹೇಳಿತು. "ಓ ಅಜ್ಞಾನಿ! ಈತನಲ್ಲಿ ಘನತೆಯೇನಿದೆ? ಈ ಅಲ್ಪನನ್ನು ಕುರಿತು ಏಕೆ ಹೇಳುತ್ತಿದ್ದೀಯೆ. ಆ ಮಹಾತ್ಮನಾದ ಬಂಡಿರೈಕ್ವನನ್ನು ಕೀರ್ತಿಸಿದಂತೆ ಕೀರ್ತಿಸುತ್ತಿದೆಯಲ್ಲಾ." ಆಗ ಆ ಮೊದಲ ಪಕ್ಷಿಯು "ಅಯ್ಯಾ ಆ ರೈಕ್ವನ್ಯಾರು? ಎಂತಹ ಕೀರ್ತಿಯುಳ್ಳವನು? ವಿವರವಾಗಿ ಹೇಳು" ಎಂದು ಕೋರಿತು. (ಯೋಗಿ ಸಿದ್ಧರಾದ ಮಹರ್ಷಿಗಳು ರಾಜಹಂಸ ರೂಪಗಳನ್ನು ಗ್ರಹಿಸಿ ಹೇಳಿದರು.)

**ಮಂ.ಶ್ಲೋ.॥ ಯಥಾಕೃತಾಯ ವಿಜಿತಾ ಯಾ ಧರೇಽಯಾಃ ಸಂಯನ್ತ್ಯೈವಮೇನಂ ಸರ್ವಂ ತದಭಿಸಮ್ಮೈತಿ ಯತ್ಕಿಂ ಚ ಪ್ರಜಾಸ್ಸಾಧು ಕುರ್ವನ್ತಿ ಯಸ್ತದ್ವೇದ ಯತ್ಸವೇದ ಸ ಮಯ್ಯೈತದುಕ್ತ ಇತಿ (4) ತದುಪಾಜಾನಶ್ರುತಿಃ ಪೌತ್ರಾಯಣ ಉಪಶುಶ್ರಾವ ಸಹ ಸಂಜಿಹಾನ ಏವ ಕ್ಷತ್ತಾರ-ಮುವಾಚಾಜ್ಗಾರೇ ಹ ಸಯುಗ್ವಾನಮಿವ ರೈಕ್ವಮಾತ್ಥೇತಿ ಸಯೋಽನುಕಥಂ ಸಯುಗ್ವಾ ರೈಕ್ವ ಇತಿ (5) ಯಥಾ ಕೃತಾಯ ವಿಜಿತಾ ಯಾ ಧರೇಽಯಾಸ್ಸಂಯನ್ತ್ಯೇವಮೇನಂ ಸರ್ವಂತದಭಿಸಮ್ಮೈತಿ ಯತ್ಕಿಂ ಚ ಪ್ರಜಾಸ್ಸಾಧು ಕುರ್ವನ್ತಿ ಯಸ್ತದ್ವೇದ ಯತ್ಸವೇದ ಸ ಮಯ್ಯೈತ-ದುಕ್ತ ಇತಿ (6) ಸ ಹ ಕ್ಷತ್ತಾಽನ್ವಿಷ್ಯ ನಾವಿದಮಿತಿ ಪ್ರತ್ಯೇಯಾಯ ತಂ ಹೋವಾಚ**

**ಯತ್ರಾರೇ ಬ್ರಾಹ್ಮಣಸ್ಯಾನ್ವೇಷಣಾ ತದೇನಮರ್ಛೇತಿ (7) ಸೋ ದಸ್ತಾಚ್ಛಕಟಸ್ಯ ಪಾಮಾನಂ ಕಷಮಾಣಮುಪೋಪವಿವೇಶ ತಂ ಹಾಭ್ಯುವಾದ ತ್ವಂ ನು ಭಗವಸ್ಸಯುಗ್ವಾ ರೈಕ್ವ ಇತ್ಯಹಾಂ ಹ್ಯರಾ3 ಇತಿ ಹ ಪ್ರತಿಜಜ್ಞೇ ಸ ಹ ಕ್ಷತ್ತಾಽವಿದಮಿತಿ ಪ್ರತ್ಯೇಯಾಯ (8)**

ತಾ॥ ಜೂಜಿನಲ್ಲಿ 'ಕೃತ' ಎನ್ನುವ ಆಟವನ್ನು ಗೆದ್ದವನು, ಮಿಕ್ಕವರೆಲ್ಲರೂ ಗೆದ್ದ ಎಲ್ಲ ಆಟಗಳನ್ನೂ ಗೆದ್ದಂತೆಯೇ ಆಗುವುದು. ಜನರೆಲ್ಲರೂ ಮಾಡಲಿರುವ ಎಲ್ಲ ಪುಣ್ಯಗಳು ಆ ರೈಕ್ವನನ್ನೇ ಸೇರುವವು. ರೈಕ್ವನಿಗಿರುವ ಆತ್ಮಜ್ಞಾನವು ಯಾರಿಗೆ ಇರುವುದೋ ಆತನು ನಿಜವಾದ ಆತ್ಮಜ್ಞಾನಿ. ಈ ರೀತಿಯಾಗಿ ಮಾತನಾಡಿಕೊಳ್ಳುತ್ತಿದ್ದ ಈ ಹಂಸಗಳ ಸಂಭಾಷಣೆಯನ್ನು ಜಾನಶ್ರುತಿಯು ಕೇಳಿ. ತನ್ನ ಸಾರಥಿಯನ್ನು ಕರೆದು ಹೀಗೆ ಹೇಳಿದನು. "ಓ ಸಾರಥಿ! (ಎಲೈ ಸಾರಥಿಯೇ!) ರೈಕ್ವನನ್ನು ಕರೆದುಕೊಂಡು ಬಾ" ಎನ್ನಲು, ಆ ರೈಕ್ವನ್ಯಾರು? ರಾಜಾ? ಎಂದು ಸಾರಥಿಯು ಪ್ರಶ್ನಿಸಿದ. ಜೂಜಿನಲ್ಲಿ ಕೃತವೆನ್ನುವ ಆಯ (ಪಗಡೆಯ ಕಾಯಿ)ವನ್ನು ಗೆದ್ದರೆ ಉಳಿದ ಕಾಯಿಗಳನ್ನೆಲ್ಲ ಗೆದ್ದವನಾಗುವನು. ಪ್ರಜೆಗಳೆಲ್ಲರೂ ಮಾಡುವ ಪುಣ್ಯವೆಲ್ಲವೂ ಆ ರೈಕ್ವನಿಗೇ ಸೇರುತ್ತದೆ. ಆತನಿಗಿರುವಷ್ಟು ಜ್ಞಾನ ಯಾರಿಗಿರುವುದೋ ಅವನು ಜ್ಞಾನಿಯೆನ್ನಿಸಿಕೊಳ್ಳುತ್ತಾನೆ. ಎಲ್ಲರಿಗಿಂತ ಸುಕೃತಾತ್ಮಜನೆನ್ನುವ ಜ್ಞಾನವಂತನಾಗುತ್ತಾನೆ. ಆತನನ್ನು ಕರೆದುಕೊಂಡು ಬಾ ಎಂದು ಹೇಳಿದ. ರಾಜಾಜ್ಞೆಯ ಮೇರೆಗೆ ಆ ಸೇವಕನು ರೈಕ್ವನನ್ನು ಹುಡುಕಲು ಹೊರಟ. ಎಲ್ಲಿಯೂ ಕಾಣಿಸಲಿಲ್ಲ.

ಆಗ ಆ ಸಾರಥಿ ಹಿಂದಿರುಗಿ ಬಂದು "ಅಯ್ಯಾ, ನನಗೆ ಆತನು ಕಾಣಿಸಲಿಲ್ಲ" ಎಂದು ಹೇಳಿದ. ಆಗ ಮತ್ತೆ ರಾಜನು ಬ್ರಾಹ್ಮಣರು ಅಥವಾ ಬ್ರಹ್ಮಜ್ಞಾನಿಗಳಾದ ಹಿರಿಯರನ್ನು ಎಲ್ಲಿ ಹುಡುಕಬೇಕು ಎನ್ನುವುದನ್ನು ತಿಳಿಸಿ ಆ ಜಾಗಗಳಿಗೆ ಹೋಗಿ ಹುಡುಕು ಎಂದು ಹೇಳಿದನು. ಬಂಡಿಯ ಕೆಳಗೆ ಕಜ್ಜಿಯನ್ನು ಕೆರೆದುಕೊಳ್ಳುತ್ತಾ ಕುಳಿತಿದ್ದ ರೈಕ್ವನನ್ನು ಕಂಡು ಆತನ ಬಳಿಗೆ ಹೋಗಿ "ಭಗವನ್? ಸಯುಗ್ವ (ಬಂಡಿಯನ್ನು ಹೊಂದಿರುವ) ರೈಕ್ವರು ತಾವೇನಾ" ಎಂದು ಸಾರಥಿಯು ಪ್ರಶ್ನಿಸಿದ. ಅದಕ್ಕಾತ ಹೌದು ನಾನೇ, ಏಕೆ? ಎನ್ನಲು ಆತನೇ ಎಂದು ಗ್ರಹಿಸಿದ ಸಾರಥಿ ಕೂಡಲೇ ರಾಜನ ಬಳಿಗೆ ಹೋಗಿ ವಿಷಯವನ್ನು ತಿಳಿಸಿದ.

(ಆ ರೈಕ್ವನಿರುವ ಜಾಗವನ್ನು ತಿಳಿದುಕೊಂಡು ಬಿಟ್ಟೆನೆಂಬ ಆನಂದವು ಸಾರಥಿಗೆ-ಯುಂಟಾಯಿತು.)

## ಚತುರ್ಥ ಪ್ರಪಾಠಕ – ದ್ವಿತೀಯ ಖಂಡ

ಮಂ.ಶ್ಲೋ.॥ **ತದ ಹ ಜಾನಶ್ರುತಿಃ ಪೌತ್ರಾಯಣಃ ಷಟ್ಛತಾನಿ ಗವಾಂ ನಿಷ್ಕಮಶ್ವತರೀರಥಂ ತದಾಽದಾಯ ಪ್ರತಿಚಕ್ರಮೇ ತಂ ಹಾಭ್ಯುವಾದ (1) ರೈಕ್ವೇಮಾನಿ ಷಟ್ಛತಾನಿ ಗವಾಮಯಂ ನಿಷ್ಕೋಽಯ-ಮಶ್ವತರೀರಥೋಽನು ಮ ಏತಾಂ ಭಗವೋ ದೇವತಾಂ ಶಾಧಿಯಾಂ ದೇವತಾಮುಪಾಸ್ಸ ಇತಿ (2) ತಮುಹ ಪರಃ ಪ್ರತ್ಯುವಾಚಾಹ ಹರೇತ್ವಾ ಶೂದ್ರ ತವೈವ ಸಹ ಗೋಭಿರಸ್ತ್ವಿತಿ ತದು ಹ ಪುನರೇವ ಜಾನಶ್ರುತಿಃ ಪೌತ್ರಾಯಣಸ್ಸಹಸ್ರಂ ಗವಾಂ ನಿಷ್ಕಮಶ್ವತರೀ ರಥಂ ದುಹಿತರಂ ತದಾಽದಾಯ ಪ್ರತಿಚಕ್ರಮೇ (3) ತಂ ಹಾಭ್ಯುವಾದ ರೈಕ್ವೇದಂ ಸಹಸ್ರಂ**

**ಗವಾಮಯಂ ನಿಷ್ಕೋಽಯಮಶ್ವತರೀರಥ ಇಯಂ ಜಾಯಾಽಯಂ ಗ್ರಾಮೋಯಸ್ಮಿ-ನ್ನಾಸ್ಸೇಽನ್ವೇವ ಮಾ ಭಗವಶ್ಶಾಧೀತಿ (4) ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚಾ ಜಹಾರೇಮಾಶ್ಶೂದ್ರಾಽನೇನೈವ ಮುಖೇನಾಲಾಪಯಿಷ್ಯಥಾ ಇತಿ ತೇ ಹೈತೇ ರೈಕ್ವಪರ್ಣಾ ನಾಮ ಮಹಾವೃಷೇಷು ಯತ್ರಾಸ್ಮಾ ಉವಾಸ ನ ತಸ್ಮೈ ಹೋವಾಚ (5)**

ತಾ॥ ಜಾನಶ್ರುತಿಯು ಸಾರಥಿ ಹೇಳಿದ ಆ ಮಾತುಗಳನ್ನು ಕೇಳಿ, (ಆರು ನೂರು) ಗೋವುಗಳನ್ನು, ಭೂಷಣಗಳನ್ನು, ರಥಗಳನ್ನು ತೆಗೆದುಕೊಂಡು ಸಂಪದ್ಭರಿತನಾಗಿ, ರೈಕ್ವನ ಬಳಿಗೆ ಹೋಗಿ ಹೀಗೆ ಬಿನ್ನವಿಸಿಕೊಂಡ. "ಓ ಮಹಾನುಭಾವ(ನಾದ)! ರೈಕ್ವಾ! ಈ 600 ಗೋವುಗಳನ್ನು, ಕಂಠ ಭೂಷಣವನ್ನು, ರಥವನ್ನು ಸ್ವೀಕರಿಸಿ, ನೀನು ಯಾವ ದೇವತೆಯನ್ನು ಉಪಾಸನೆ ಮಾಡುತ್ತಿರು-ವಿಯೋ, ಆ ದಿವ್ಯಜ್ಞಾನವನ್ನು ನನಗೆ ಬೋಧಿಸುವಂತಹವನಾಗು ಎಂದು ಪ್ರಾರ್ಥಿಸಿದನು. ರೈಕ್ವನು:- "ಎಲೈ ಶೂದ್ರನೇ! ಈ ಗೋವುಗಳು ಮುಂತಾದ ಐಶ್ವರ್ಯಗಳನ್ನು ನಿನ್ನ ಬಳಿಯೇ ಇಟ್ಟುಕೋ ಎಂದು ಹೇಳಿದ. ಆಗ ಜಾನಶ್ರುತಿಯು ಮತ್ತೆ ಸಾವಿರ ಗೋವುಗಳನ್ನು, ಕಂಠಭೂಷಣವನ್ನು, ರಥಾಶ್ವಗಳನ್ನು, ತನ್ನ ಮಗಳನ್ನು ಕರೆದುಕೊಂಡು ಹೋಗಿ ಸಿದ್ಧನಾಗಿ ಹೋದ. ಓ ರೈಕ್ವ ಮಹಾತ್ಮಾ! ಈ ಸಾವಿರ ಗೋವುಗಳನ್ನು, ರಥಾಶ್ವಗಳನ್ನು ನಿನ್ನ ಭಾರ್ಯೆಯಾಗಿ ನನ್ನ ಮಗಳನ್ನು ನೀನು ವಾಸವಾಗಿರುವ ಗ್ರಾಮ ಇವೆಲ್ಲವನ್ನೂ ನಿನಗೆ ಸಮರ್ಪಿಸುತ್ತಿದ್ದೇನೆ. ನನ್ನನ್ನು ಕರುಣಿಸಿ ನನಗೆ ಬ್ರಹ್ಮಜ್ಞಾನವನ್ನು ಬೋಧಿಸು" ಎಂದು ಪ್ರಾರ್ಥಿಸಿದ. ಆಗ ರೈಕ್ವನು ಜಾನಶ್ರುತಿಯ ಮಗಳ ನಿರ್ಮಲವಾದ ಮುಖವನ್ನು ನೋಡಿ, ಇದು ವಿದ್ಯಾವಂತಳಾದ (ವಿದ್ಯಾಸಂಪತ್ತಿರುವ) ಮುಖವೆಂದು ಗ್ರಹಿಸಿ, ಸಂತೋಷಪಟ್ಟು ಜಾನಶ್ರುತಿಗೆ ವಿದ್ಯಾದಾನವನ್ನು ಮಾಡಲು ಅಂಗೀಕರಿಸಿದ. ಅಂದಿನಿಂದ ಮಹಾವೃಷಲ ದೇಶದಲ್ಲಿರುವ ಆ ಗ್ರಾಮಕ್ಕೆ "ರೈಕ್ವಪರ್ಣ" ವೆಂಬ ಹೆಸರು ಬಂತು. ಇಲ್ಲಿಯೇ ರೈಕ್ವನು ವಾಸವಾಗಿದ್ದ. ಈ ಕೆಳಗೆ ಹೇಳಿರುವಂತೆ ರೈಕ್ವನು ಬೋಧಿಸಿದನು.

## ಚತುರ್ಥ ಪ್ರಪಾಠಕ - ತೃತೀಯ ಖಂಡ

**ಮಂ.ಶ್ಲೋ.॥ ವಾಯುರ್ವಾವ ಸಂವರ್ಗೋ ಯದಾ ವಾ ಅಗ್ನಿರುದ್ವಾಯತಿ ವಾಯುಮೇವಾಪ್ಯೇತಿ ಯದಾ ಸೂರ್ಯೋಽಸ್ತಮೇತಿ ವಾಯುಮೇವಾಪ್ಯೇತಿ ಯದಾ ಚಂದ್ರೋಽಸ್ತಮೇತಿ ವಾಯು-ಮೇವಾಪ್ಯೇತಿ (1) ಯದಾವ ಉಚ್ಛುಷ್ಯನ್ತಿ ವಾಯುಮೇವಾಪಿಯನ್ತಿ ವಾಯುರ್ಹ್ಯೇವೈತಾನ್ ಸರ್ವಾನ್ಸಂ ವೃಙ್ಕ್ತ ಇತ್ಯಧಿದೈವತಮ್ (2) ಅಥಾಽಧ್ಯಾತ್ಮಂ ಪ್ರಾಣೋ ವಾವ ಸಂವರ್ಗಃ ಸ ಯದಾ ಸ್ವಪಿತಿ ಪ್ರಾಣಮೇವ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಂ ಶ್ರೋತ್ರಂ ಪ್ರಾಣಂ ಮನಃ ಪ್ರಾಣೋ ಹ್ಯೇವೈತಾಸ್ಸರ್ವಾಸ್ಸಂವೃಙ್ಕ್ತ ಇತಿ (3)**

ತಾ॥ ವಾಯುವೇ ಸಂವರ್ಗ ಅಂದರೆ ಕೊನೆಯ ಆಶ್ರಯ. ಅಗ್ನಿಯನ್ನು ತಣ್ಣಗಾಗಿಸುವ ವಾಯುವನ್ನೇ ಆಶ್ರಯಿಸುವುದು. ಸೂರ್ಯನು ಅಸ್ತಮಿಸಿದಾಗ ವಾಯುವನ್ನೇ ಸೇರುವನು. ಚಂದ್ರನು ಅಸ್ತಮಿಸಿದಾಗ ವಾಯುವಿನಲ್ಲೇ ಲೀನವಾಗುವನು. ಜಲವು ಇಂಗಿ ಹೋಗಲು ವಾಯುವನ್ನೇ ಆಶ್ರಯಿಸುವುದು. ವಾಯುವೇ ಈ ಸಮಸ್ತವನ್ನೂ ನುಂಗುವುದು ಇದು ಅಧಿದೈವತವು. ಈ

ವಿಷಯವು ವಿಶ್ವದಲ್ಲಿರುವ ಶಕ್ತಿಗಳನ್ನು ಕುರಿತಾದುದು ಎಂದು ಅರ್ಥ. ಇನ್ನು ಅಧ್ಯಾತ್ಮವೆಂದರೆ ಶರೀರಸ್ಥವಾದ ಶಕ್ತಿಗಳ ಕುರಿತಾದ ವಿಷಯ. ಪ್ರಾಣವೇ ಸಂವರ್ಗ. ಮನುಷ್ಯ ಮಲಗಿದ್ದಾಗ ಅವನ ವಾಕ್ಕು, ನೀತಿ, ಶ್ರೋತ್ರ, ಮಾನಸಾದಿ ಸರ್ವೇಂದ್ರಿಯಗಳು ಪ್ರಾಣದೊಂದಿಗೆ ಸೇರುತ್ತವೆ. ಈ ಪ್ರಾಣವೇ ಸರ್ವವನ್ನು ಭುಜಿಸುತ್ತಿದೆ. (ಸಂವರ್ಗವಿದ್ಯೋಪದೇಶ. ಸಂವರ್ಗವೆಂದರೆ ವಿಲೀನವಾಗುವುದು.)

**ಮಂ.ಶ್ಲೋ.॥ ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು (4) ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಪರಿವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ ತಸ್ಮಾ ಉಹ ನ ದದತುಃ (5) ಸ ಹೋವಾಚ ಮಹಾತ್ಮನಶ್ಚತುರೋ ದೇವ ಏಕಃ ಕಸ್ಸ ಜಗಾರ ಭುವನಸ್ಯ ಗೋಪಾಃ, ತಂ ಕಾಪೇಯನಾಭಿಪಶ್ಯನ್ತಿಮರ್ತ್ಯಾ ಅಭಿ ಪ್ರತಾರಿನ್ ಬಹುಧಾ ವಸನ್ತಮ್, ಯಸ್ಮೈ ವಾ ಏತದನ್ನಂ ತಸ್ಮಾ ಏತನ್ನ ದತ್ತಮಿತಿ (6)**

ತಾ॥ ದೇವತೆಗಳಲ್ಲಿ ವಾಯು, ಜೀವಿಗಳಲ್ಲಿ ಪ್ರಾಣ - ಸಂವರ್ಗಗಳು. ಪೂರ್ವಕಾಲದಲ್ಲಿ ಕಪಿಗೋತ್ರದವನಾದ ಶೌನಕನು, ಕಕ್ಷಸೇನಾತ್ಮಜನಾದ ಅಭಿಪ್ರತಾರಿಯು ಭೋಜನ ಮಾಡುತ್ತಿರುವಾಗ ಅಡಿಗೆಯವನು ಪದಾರ್ಥಗಳನ್ನು ಬಡಿಸುತ್ತಿದ್ದ. ಆ ಸಮಯದಲ್ಲಿ ಒಬ್ಬ ಬ್ರಹ್ಮಚಾರಿಯು ಬಂದು ಭಿಕ್ಷೆಯನ್ನು ಬೇಡಿದ. ಅವರು ಆ ಬ್ರಹ್ಮಚಾರಿಗೆ ಭಿಕ್ಷೆಯನ್ನು ನೀಡಲಿಲ್ಲ. ಆ ಬ್ರಹ್ಮಚಾರಿ ಹೀಗೆ ಹೇಳಿದ. "ಓ ಶೌನಕ ಮುನೀ! ಅಗ್ನ್ಯಾದಿ ನಾಲ್ವರು ದೇವತೆಗಳನ್ನು ನುಂಗಿರುವ ಭುವನ ರಕ್ಷಕನನ್ನು, ಪ್ರಜಾಪತಿ, ಮಾನವರಾದ ನೀವು ಗುರುತಿಸದೆ ಹೋಗಿದ್ದೀರಿ. ಓ ಅಭಿಪ್ರತಾರೀ! ಅನಂತ ರೂಪಗಳಲ್ಲಿರುವ ಪ್ರಜಾಪತಿಗೆ ನಿರಂತರವಾಗಿ ಯಜ್ಞಾದಿಗಳಲ್ಲಿ ಅನ್ನವನ್ನು ತೃಪ್ತಿಯಾಗಿ ಸಮರ್ಪಿಸಲಾಗುತ್ತಿದೆ. ಅಂತಹನಿಗೆ ನೀವು ಈಗ ಅನ್ನವನ್ನು ನೀಡಲಿಲ್ಲ. ಈ ಅನ್ನವೆಲ್ಲವೂ ಅವನ ಪ್ರಸಾದ. ಅವನಿಗೇ ಇಲ್ಲವೆನ್ನುತ್ತಿದ್ದೀರಿ. (ಬ್ರಹ್ಮಚಾರಿಯು ಆ ಋಷಿಗಳಲ್ಲಿರುವ ಅಜ್ಞತ್ಯ (ತಿಳುವಳಿಕೆ ಇಲ್ಲದಿರುವುದನ್ನು) ಸೂಚಿಸುತ್ತಾ ನಿಂದೆ ಮಾಡಿದ.)

**ಮಂ.ಶ್ಲೋ.॥ ತ ದು ಹ ಶೌನಕಃ ಕಾಪೇಯಃ ಪ್ರತಿಮನ್ವಾನಃ ಪ್ರತ್ಯೇಯಾಯ ಆತ್ಮಾದೇವಾನಾಂ ಜನಿತಾ ಪ್ರಜಾನಾಂ ಹಿರಣ್ಯದಂಷ್ಟ್ರೋ. ಬಭಸೋನಸೂರಿಃ ಮಹಾನ್ತಮಸ್ಯ ಮಹಿಮಾನ-ಮಾಹುರನದ್ಯಮಾನೋ ಯದನನ್ನಮತ್ತೀತಿ ವೈ ವಯಂ ಬ್ರಹ್ಮಚಾರಿನ್ನೇದಮುಪಾಸ್ಮಹೇ -ದತ್ತಾಸ್ಮೈಭಿಕ್ಷಾಮಿತಿ (7) ತಸ್ಮಾ ಉ ಹ ದದುಸ್ತೇ ವಾ ಏತೇ ಪಂಚಾನ್ಯೇ ಪಂಚಾನ್ಯೇ ದಶಸನ್ತಸ್ತತ್ಕೃತಂ ತಸ್ಮಾತ್ಸರ್ವಾಸು ದಿಕ್ಷ್ವನ್ನಮೇವ ದಶಕೃತಂ ಸೈಷಾ ವಿರಾಡನ್ನಾದೀ ತ ಯೇದಂ ಸರ್ವಂ ದೃಷ್ಟಂ ಸರ್ವಮಸ್ಯೇದಂ ದೃಷ್ಟಂ ಭವತ್ಯನ್ನಾದೋ ಭವತಿ ಯ ಏಂ ವೇದ ಯ ಏವಂ ವೇದ (8)**

ತಾ॥ ಆ ನಂತರ ಶೌನಕನು ಚಿಂತಿಸಿ ಬ್ರಹ್ಮಚಾರಿಯ ಕಡೆಗೆ ಧಾವಿಸಿ ಹೋಗಿ, ಹೀಗೆ ಹೇಳಿದನು: ಆತ ಆ ಪ್ರಜಾಪತಿ ದೇವತೆಗಳ ಆತ್ಮ. ಪ್ರಜೆಗಳನ್ನು ಸೃಷ್ಟಿಸುವವನು. ಚಿನ್ನದ ಹಲ್ಲುಗಳುಳ್ಳವನು. ಸರ್ವವನ್ನೂ ಭುಜಿಸುವ ಸಾಮರ್ಥ್ಯವಿರುವವನು. ಮಹಾಮೇಧಾಸಂಪನ್ನನೆಂದು ಆತನ ಮಹಾತ್ಮ್ಯೆಯನ್ನು ಹೇಳುವರು. ಆತನನ್ನು ಯಾರೂ ಭಕ್ಷಿಸಲಾರರು. ಆತ ಅನ್ನವನ್ನು ಮಾತ್ರವೇ

ಅಲ್ಲದೆ ಅನ್ನವಲ್ಲದ್ದನ್ನೂ ಸಹ ಭಕ್ಷಿಸುವನು. ಓ ಬ್ರಹ್ಮಚಾರೀ! ನಾವು ಸಹ ಆತನನ್ನೇ ಉಪಾಸಿಸುವೆಂದು ಹೇಳುತ್ತಾ ಬ್ರಹ್ಮಚಾರಿಗೆ ಭಿಕ್ಷೆ ನೀಡಲು ಸಿದ್ಧರಾದರು. ಆನಂತರ ಅವನಿಗೆ ಭಿಕ್ಷೆಯನ್ನು ಕೊಟ್ಟರು. ಈ ಐದನ್ನೂ ಅಂದರೆ ಭುಜಿಸಿ ಆನಂತರ ಅವನಿಗೆ ಭಿಕ್ಷೆ ಕೊಟ್ಟರು. ಈ ಐದನ್ನೂ ಅಂದರೆ ಭುಜಿಸಿದಂತಹ ವಾಯುವೊಂದು, ಅನ್ನಗಳಾದ ಅಗ್ನಿ, ಸೂರ್ಯ, ಚಂದ್ರ, ಜಲವೆನ್ನುವ ನಾಲ್ಕು ಒಟ್ಟು ಸೇರಿ ಐದು. ಉಳಿದವು ಐದು, ಅನ್ನವನ್ನು ತಿನ್ನುವಂತಹ ಪ್ರಾಣವೊಂದು, ವಾಕ್ಕು, ನೇತ್ರ, ಕಿವಿ, ಮನಸ್ಸು ಎನ್ನುವ ನಾಲ್ಕು, ಈ ವಿಧವಾಗಿ ಒಟ್ಟು ಹತ್ತು, ಇವೆಲ್ಲವೂ ಪ್ರಜಾಪತಿಯ ಅನ್ನಗಳೆಂದು ಅರ್ಥ. ಈ ಅನ್ನವೇ "ಕೃತ"ವಾಗಿದೆ. ಈ ವಿರಾಟ್ ಪ್ರಜಾಪತಿಯೇ ಅನ್ನ ಭಕ್ಷಕನಾಗಿ, ಸಮಸ್ತವನ್ನು ವೀಕ್ಷಿಸುವಂತಹನಾಗಿದ್ದಾನೆ. ಹೀಗೆ ತಿಳಿದುಕೊಂಡವನು ಚೆನ್ನಾಗಿ ಅನ್ನವನ್ನು ಜೀರ್ಣಿಸುವಂತಹವನಾಗಿ ಅನ್ನಾದನಾಗುವನು.

## ಚತುರ್ಥ ಪ್ರಪಾಠಕ – ಚತುರ್ಥ ಖಂಡ

ಮಂ.ಶ್ಲೋ.॥ **ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರಮಾಮನ್ತ್ರಯಾಞ್ಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂ ಗೋತ್ರೋಽಸ್ಸಹಾಮಸ್ಮೀತಿ (1) ಸಾ ಹೈನಮುವಾಚ ನಾಮಾ-ಮೇತದ್ವೇದ ತಾತ ಯದ್ಗೋತ್ರಃ ತ್ವಮಸಿ ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತವಾಮಲಭೇ ಸಾಹಮೇತನ್ನವೇದ, ಯದ್ಗೋತ್ರಃ ತ್ವಮಸಿ, ಜಬಾಲಾ ತು ನಾಮಾಹ-ಮಸ್ಮಿ ಸತ್ಯಕಾಮೋ ನಾಮತ್ವಮಸಿ ಸ ಸತ್ಯಕಾಮ ಏವ ಜಾಬಾಲೋ ಬ್ರುವೀಥಾ ಇತಿ (2) ಸ ಹ ಹಾರಿದ್ರುಮತಂ ಗೌತಮಮೇತ್ಯೋವಾಚ ಬ್ರಹ್ಮಚರ್ಯಂ ಭಗವತಿ ವತ್ಸ್ಯಾ-ಮ್ಯುಪೇಯಾಂ ಭಗವನ್ತಮಿತಿ (3)**

ತಾ॥ ಸತ್ಯಕಾಮ ಜಾಬಾಲನು ವಿದ್ಯಾಭ್ಯಾಸ ಮಾಡಬಯಸಿ, ತನ್ನ ತಾಯಿಯಿಂದ ಜಬಾಲಳ ಅನುಮತಿಯನ್ನು ಬೇಡಿ. "ಅಮ್ಮಾ! ಬ್ರಹ್ಮಚರ್ಯ ದೀಕ್ಷೆಯೊಂದಿಗೆ ಗುರುಕುಲವಾಸ ಮಾಡಿ ವಿದ್ಯೆಯನ್ನಾರ್ಜಿಸಬೇಕೆಂಬ ಆಶೆಯಿದೆ. ನನ್ನ ಗೋತ್ರವ್ಯಾವುದು? ಎಂದು ಪ್ರಶ್ನಿಸಿದನು. ತಾಯಿ ಮಗನೊಂದಿಗೆ ಹೀಗೆ ಹೇಳಿದಳು. "ನೀನು ಯಾವ ಗೋತ್ರಕ್ಕೆ ಸೇರಿದವನೋ ತಿಳಿಯದು. ನಾನು ಯುವತಿಯಾಗಿದ್ದಾಗ ದಾಸೀ ವೃತ್ತಿ ಮಾಡುತ್ತಿದ್ದಾಗ ನೀನು ನನ್ನ ಮಗನಾಗಿ ಹುಟ್ಟಿದೆ. ಅನೇಕ ಸ್ಥಳಗಳಲ್ಲಿ ಸುತ್ತಿದೆ. ನನ್ನ ಹೆಸರು ಜಾಬಾಲ. ನಿನ್ನ ಹೆಸರು ಸತ್ಯಕಾಮ. ಇಷ್ಟು ಮಾತ್ರವೇ ನನಗೆ ತಿಳಿದಿರುವುದು. ಆಗ ಸತ್ಯಕಾಮನು ಹರಿದ್ರುಮತ ಗೌತಮನ ಬಳಿಗೆ ಹೋಗಿ "ಭಗವನ್! ಬ್ರಹ್ಮಚರ್ಯ ವ್ರತದೊಂದಿಗೆ ಗುರುಕುಲವಾಸ ಮಾಡಲೆಂದು ಬಂದಿರುವೆನು. ತಮ್ಮ ಶಿಷ್ಯನಾಗಿ ಸ್ವೀಕರಿಸಿ. ವಿದ್ಯಾಭ್ಯಾಸ ಮಾಡುವೆನು" ಎಂದು ಪ್ರಾರ್ಥಿಸಿದ.

ಮಂ.ಶ್ಲೋ.॥ **ತಂ ಹೋವಾಚ ಕಿಂ ಗೋತ್ರೋ ನು ಸೋಮ್ಯಾಸೀತಿ ಸಹೋವಾಚ ನಾಹಮೇತ-ದ್ವೇದ ಭೋ ಯದ್ಗೋತ್ರೋಽಹಮಸ್ಮ್ಯಪೃಚ್ಛಂ ಮಾತರಂ ಸಾ ಮಾ ಪ್ರತ್ಯಬ್ರವೀದ್ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮತ್ವ ಮಸೀತಿ ಸೋಽಹಂ ಸತ್ಯಕಾಮೋ**

**ಜಾಬಾಲೋಽಸ್ಮಿ ಭೋ ಇತಿ (4) ತಗ್ಂ ಹೋವಾಚ ನೈತದಬ್ರಾಹ್ಮಣೋ ವಿವಕ್ತು-ಮರ್ಹತಿ ಸಮಿಧಂ ಸೋಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾ ಇತಿ ತಮುಪನೀಯ ಕೃಶಾನಾಮಬಲಾನಾಂ ಚತುಶ್ಶತಾ ಗಾ ನಿರಾಕೃತ್ಯೋ್ಯೀ ವಾ ಚೇಮಾಸ್ಸೋಮ್ಯಾನು ಸಂಪ್ರಜೇತಿ ತಾ ಅಭಿಪ್ರಸ್ಥಾಪಯನ್ನುವಾಚ ನಾ ಸಹಸ್ರೇಣಾವರ್ತಯೇತಿ ಸ ಹ ವರ್ಷಗಣಂ ಪ್ರೋವಾಸ ತಾ ಯದಾ ಸಹಸ್ರಂ ಸಮ್ಪೇದುಃ (5)**

ತಾ॥ "ಮಗೂ ನಿನ್ನ ಗೋತ್ರವನ್ನು ಹೇಳಪ್ಪಾ" ಎಂದು ಗೌತಮ ಮುನಿಯು (ಮಹರ್ಷಿ) ಕೇಳಿದಾಗ, "ನನ್ನ ಗೋತ್ರವ್ಯಾವುದೆಂದು ನನಗೆ ತಿಳಿಯದು" ಎಂದು ಸತ್ಯಕಾಮನು ಹೇಳಿದ." ಈ ವಿಷಯವಾಗಿ ನನ್ನ ತಾಯಿ ನನ್ನೊಂದಿಗೆ ಈ ರೀತಿಯಾಗಿ ಹೇಳಿದಳು. "ಮಗೂ ಯುವತಿಯಾಗಿದ್ದಾಗ ಹಲವಾರು ಕಡೆ ನಾನು ಪರಿಚರ್ಯೆ ಮಾಡುತ್ತಿದ್ದೆ. ಆಗ ನೀನು ಹುಟ್ಟಿದೆ. ನಿನ್ನ ಗೋತ್ರವು ನನಗೆ ತಿಳಿಯದು. ನನ್ನ ಹೆಸರು ಜಾಬಾಲ. ನಿನ್ನ ಹೆಸರು ಮಾತ್ರ ಸತ್ಯಕಾಮ. ಆದ್ದರಿಂದಲೇ ನಾನು ಸತ್ಯಕಾಮ ಜಾಬಾಲನು." ಗೌತಮನು ಈ ಮಾತುಗಳನ್ನು ಕೇಳಿ ಬ್ರಾಹ್ಮಣರು ಅಲ್ಲದೆ ಮತ್ತ್ಯಾರೂ ಈ ರೀತಿ ಹೇಳಲಾರರು. ಸತ್ಯವನ್ನು ಹೇಳುವುದರಿಂದ ಈತ ಬ್ರಾಹ್ಮಣನೇ ಆಗಿರಬಹುದೆಂದು ಗೌತಮನು ಭಾವಿಸಿಕೊಂಡ. ಸಮಿತ್ತುಗಳನ್ನು ತೆಗೆದುಕೊಂಡು ಬಾ. ನಾನು ನಿನಗೆ ಉಪನಯನವನ್ನು ಮಾಡುವೆನು. ನೀನು ಸತ್ಯದಿಂದ ಜಾರಲಿಲ್ಲ" ಎಂದು ಹೇಳಿ, ಆತನಿಗೆ ಉಪನಯವನ್ನು ಮಾಡಿದ. ಅನಂತರ ದುರ್ಬಲವಾದ ನಾಲ್ಕುನೂರು (400) ಗೋವುಗಳನ್ನು ಆಯ್ದು "ಇವನ್ನು ಚೆನ್ನಾಗಿ ಮೇಯಿಸಿ, ಸಾವಿರ ಗೋವುಗಳನ್ನಾಗಿ ಮಾಡಿಕೊಂಡು ಆಮೇಲೆ ಇಲ್ಲಿಗೆ ಬಾ" ಎಂದು ಆಜ್ಞಾಪಿಸಿದ. ಎಷ್ಟೋ ವರ್ಷಗಳು ಅರಣ್ಯದಲ್ಲಿದ್ದ ನಂತರ ಗೋವುಗಳ ಸಂಖ್ಯೆ ಸಾವಿರವನ್ನು ಮುಟ್ಟಿತು.

## ಚತುರ್ಥ ಪ್ರಪಾಠಕ – ಪ್ರಥಮ ಖಂಡ

ಮಂ.ಶ್ಲೋ.॥ **ಅಥ ಹೈನಮೃಷಭೋಽಭ್ಯುವಾದ ಸತ್ಯಕಾಮಾ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ಪ್ರಾಪ್ತಾ ಸೋಮ್ಯ ಸಹಸ್ರಂ ಸ್ಮಃ ಪ್ರಾಪಯನ ಆಚಾರ್ಯಕುಲಮ್ (1) ಬ್ರಹ್ಮಣಶ್ಚ ತೇ ಪಾದಂ ಬ್ರುವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಚೀದಿಕ್ಕಲಾ ಪ್ರತೀಚೀ ದಿಕ್ಕಲಾ ದಕ್ಷಿಣಾ ದಿಕ್ಕಲೋದೀಚೀದಿಕ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ನಾಮ (2) ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶ-ವಾನಿತ್ಯುಪಾಸ್ತೇ ಪ್ರಕಾಶವಾನಸ್ಮಿಂಲ್ಲೋಕೇ ಭವತಿ ಪ್ರಕಾಶವತೋಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ (3)**

ತಾ॥ ಹೀಗೆ ಸತ್ಯಕಾಮನು ಕಾಡಿನಲ್ಲಿದ್ದ ಆ ಪಶುಗಳ ಸಮೂಹದಲ್ಲಿದ್ದ ವೃಷಭವೊಂದು ಆತನನ್ನು ಕುರಿತು "ಓ ಸತ್ಯಕಾಮಾ!" ಎಂದು ಸಂಬೋಧಿಸಿತು. "ಭಗವನ್! ಏನಪ್ಪಣೆ" ಎನ್ನಲು, ಅಯ್ಯಾ! ನಾವು ಈಗ ಸಾವಿರ ಸಂಖ್ಯೆಯನ್ನು ಮುಟ್ಟಿದ್ದೇವೆ. ನಮ್ಮನ್ನು ಗುರುಕುಲಕ್ಕೆ ಆಚಾರ್ಯರ ಸನ್ನಿಧಿಗೆ ಹೊಡೆದು-ಕೊಂಡು ಹೋಗು" ಎಂದಿತು. ಆ ವೃಷಭವು, ಹೀಗೆಂದಿತು "ನಾನು ಪರಬ್ರಹ್ಮ ಪಾದವನ್ನು ಕುರಿತು

ಹೇಳುವೆನು" ಎನ್ನಲು, ಸತ್ಯಕಾಮನು ವಿನಯದಿಂದ ಆಲಿಸ ತೊಡಗಿದ. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ-ಈ ನಾಲ್ಕೂ ದಿಕ್ಕುಗಳು ನಾಲ್ಕು ಕಳೆಗಳು. ಈ ನಾಲ್ಕು ಕಳೆಗಳು ಸೇರಿ ಪರಮಾತ್ಮನ ಒಂದು ಪಾದ ಎಂದು ಹೇಳಿ ವೃಷಭವು "ಪ್ರಕಾಶವಾನ್" ಎಂದು ಆ ಪಾದದ ಹೆಸರು ಹೇಳಿತು. ಈ ವಿಧವಾಗಿ ಗ್ರಹಿಸಿ ಬ್ರಹ್ಮೋಪಾಸನೆ ಮಾಡುವವನು. ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿ ಪ್ರಕಾಶ-ದೊಂದಿಗೆ ಇದ್ದು, ಪ್ರಕಾಶವು ಪೂರ್ತಿಯಾಗಲು ಇತರ ಲೋಕಗಳಿಗೂ ಸಹ ಹೋಗ ಬಲ್ಲನು (ಕಳೆ=ಭಾಗ)

## ಚತುರ್ಥ ಪ್ರಪಾಠಕ - ಷಷ್ಠ ಖಂಡ

**ಮಂ.ಶ್ಲೋ.॥ ಅಗ್ನಿಷ್ಟೇ ಪಾದಂ ವಕ್ತೇತಿ ಸಹ ಶ್ವೋ ಭೂತೇ ಗಾ ಅಭಿಪ್ರಸ್ಥಾಪಯಾಞ್ಚಕಾರ ತಾಯತ್ರಾಭಿ-ಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾದಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ (1) ತಮಗ್ನಿರಭ್ಯುವಾದ ಸತ್ಯಕಾಮಾ-3 ಇತಿ ಭಗವ ಇತಿ ಹ ಪ್ರತಿಶುಶ್ರಾವ (2) ಬ್ರಹ್ಮಣಸ್ಸೋಮ್ಯ ತೇ ಪಾದಂ ಬ್ರುವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈಹೋವಾಚ ಪೃಥಿವೀ ಕಲಾಽನ್ತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋಽನನ್ತವಾನ್ನಮ (3) ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋಽನನ್ತವಾನಿತ್ಯುಪಾಸ್ತೇಽನನ್ತವಾ-ನಸ್ಮಿಂಲ್ಲೋಕೇ ಭವತ್ಯನನ್ತವತೋ ಹ ಲೋಕಾನ್ ಜಯತಿ ಯ ಏತಮೇವಂ ವಿದ್ವಾಂ-ಶ್ಚತುಷ್ಕಲಂ ಪಾದಂ ಬ್ರಹ್ಮಣೋಽನನ್ತವಾನಿತ್ಯುಪಾಸ್ತೇ (4)**

ತಾ॥ ಒಂದು ಪಾದವನ್ನು ಅಗ್ನಿದೇವನು ಬೋಧಿಸುವವನು ಎಂದು ವೃಷಭವು ಹೇಳಿತು. ಸತ್ಯಕಾಮನು ಆ ಮರುದಿನ ಗೋವುಗಳನ್ನು ಹೊಡೆದುಕೊಂಡು ಗುರುಗಳ ಆಶ್ರಮಕ್ಕೆ ಹೊರಟ. ಸಂಜೆಯಾಗುತ್ತಲೇ ಗೋವುಗಳನ್ನು ಒಂದು ಕಡೆ ನಿಲ್ಲಿಸಿ ಒಣಗಿದ ಸಣ್ಣಕಟ್ಟಿಗೆಗಳನ್ನು ಸೇರಿಸಿ ಅಗ್ನಿಯನ್ನು ಬೆಳಗಿಸಿ ಪೂರ್ವ ದಿಕ್ಕಿಗೆ ಮುಖ ಮಾಡಿ ಒಂದು ಕಡೆ ಕುಳಿತ. 'ಓ ಸತ್ಯಕಾಮಾ!' ಎಂದು ಅಗ್ನಿ ಸಂಬೋಧಿಸಿದ "ಭಗವಂತಾ" ಎಂದು ಸತ್ಯಕಾಮ ನುಡಿದ. ಬ್ರಹ್ಮಪಾದವನ್ನು ಕುರಿತು ನಾನು ನಿನಗೆ ಹೇಳುವೆನು. ಪೃಥಿವಿ, ಅಂತರಿಕ್ಷ, ದ್ಯುಲೋಕ, ಸಮುದ್ರ ಇವು ನಾಲ್ಕು ಕಳೆಗಳು. ಈ ನಾಲ್ಕು ಕಳೆಗಳು ಸೇರಿ ಎರಡನೆಯ ಪಾದ. ಇದಕ್ಕೆ "ಅನಂತವಾನ್" ಎಂದು ಹೆಸರು. ಇದು ಬ್ರಹ್ಮದ ಎರಡನೆಯ ಪಾದ. ಬ್ರಹ್ಮವು ನಾಲ್ಕು ಕಳೆಗಳಿಂದ ಕೂಡಿದ "ಅನಂತವಾನ್" ಎಂದು ಯಾರು ತಿಳಿದುಕೊಂಡು ಉಪಾಸಿಸುವರೋ ಅಂತಹವನು ಅನಂತಲೋಕಗಳನ್ನು ಜಯಿಸುವನು. (ಅನಂತಗುಣಸಂಪನ್ನನಾಗುವನು.)

## ಚತುರ್ಥ ಪ್ರಪಾಠಕ - ಸಪ್ತಮ ಖಂಡ

**ಮಂ.ಶ್ಲೋ.॥ ಹಂಸಸ್ತೇ ಪಾದಂ ವಕ್ತೇತಿ ಸಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಞ್ಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧ-ಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ (1) ತಂ ಹಂಸ ಉಪನಿಪತ್ಯಾಭ್ಯುವಾದ**

ಸತ್ಯಕಾಮ-3 ಇತಿ ಭಗವ ಇತಿ ಹ ಪ್ರತಿಶುಶ್ರಾವ (2) ಬ್ರಹ್ಮಣಸ್ಸೋಮ್ಯ ತೇ ಪಾದಂ ಬ್ರುವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚಾಗ್ನಿಃಕಲಾ ಸೂರ್ಯಃಕಲಾ ಚನ್ದ್ರಃಕಲಾ ವಿದ್ಯುತ್ಕಲ್ಯೈಷವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋ ಜ್ಯೋತಿಷ್ಮಾನ್ನಾಮ (3) ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾ-ನಿತ್ಯುಪಾಸ್ತೇ ಜ್ಯೋತಿಷ್ಮಾನಸ್ಮಿಂಲ್ಲೋಕೇ ಭವತಿ ಜ್ಯೋತಿಷ್ಮತೋ ಹ ಲೋಕಾನ್ ಜಯತಿ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ(4)

ತಾ॥ ಬೇರೊಂದು ಭಾಗವನ್ನು ಹಂಸವು ನಿನಗೆ ತಿಳಿಸುವುದು ಎಂದು ಅಗ್ನಿದೇವನು ಹೇಳಿ ಸುಮ್ಮನಾದ. ಮಾರನೆಯ ದಿನ ಸತ್ಯಕಾಮನು ಹಸುಗಳನ್ನು ಕರೆದುಕೊಂಡು ಎಂದಿನಂತೆ ಮುಂದಕ್ಕೆ ಸಾಗಿದ. ಸಂಜೆಯಾಗುತ್ತಲೇ ಒಂದು ಕಡೆ ನಿಂತು ಅಗ್ನಿಯನ್ನು ಬೆಳಗಿಸಿ ಸಮಿತ್ತುಗಳನ್ನು ಹಾಕಿ ಪೂರ್ವಾಭಿಮುಖವಾಗಿ ಕುಳಿತ. ಹಂಸವೊಂದು ಆತನ ಬಳಿಗೆ ಬಂದು "ಸತ್ಯಕಾಮಾ" ಎಂದು ಸಂಬೋಧಿಸಿತು. "ಏನು?" ಎಂದು ಪ್ರಶ್ನಿಸಲು, ಆ ಹಂಸವು "ನಿನಗೆ ಪರಬ್ರಹ್ಮದ ಒಂದು ಪಾದವನ್ನು ಬೋಧಿಸುವೆ ಕೇಳು. ಅಗ್ನಿ, ಸೂರ್ಯ, ಚಂದ್ರ, ವಿದ್ಯುತ್, ಈ ನಾಲ್ಕು ಕಳೆಗಳು ಸೇರಿ ಬ್ರಹ್ಮಕ್ಕೆ ಒಂದು ಪಾದ. "ಜ್ಯೋತಿಷ್ಮಾನ್" ಎಂದು ಕರೆಯಲಾಗುವ ಇದು ಮೂರನೇ ಪಾದ. ಅಗ್ನಿ, ಸೂರ್ಯ, ಚಂದ್ರ, ವಿದ್ಯುತ್ ಈ ನಾಲ್ಕು ಕಳೆಗಳು ಸೇರಿ ಬ್ರಹ್ಮಕ್ಕೆ ಒಂದು ಪಾದ. ಇದೇ "ಜ್ಯೋತಿಷ್ಮಾನ್" ಪಾದ. ಇದನ್ನು ನಿನಗೆ ತಿಳಿಸಿದ್ದೇನೆ. ಈ ರೀತಿಯಾಗಿ ನಾಲ್ಕು ಪಾದಗಳ ಕುರಿತು, ಕಳೆಗಳನ್ನು ಕುರಿತು ತಿಳಿದುಕೊಂಡು ಯಾರು ಬ್ರಹ್ಮವನ್ನು ಉಪಾಸಿಸುವರೋ ಅವರು ಜ್ಯೋತಿಷ್ಮಾನ್ ಲೋಕಗಳನ್ನು ಜಯಿಸುವರು (ತೇಜೋವಂತ ಲೋಕಗಳಿಗೆ ಹೋಗುವರು.)

## ಚತುರ್ಥಃ ಪ್ರಪಾಠಕಃ – ಅಷ್ಟಮಃ ಖಂಡಃ

ಮಂ.ಶ್ಲೋ.॥ ಮದ್ಗುಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಞ್ಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧ-ಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ (1) ತಂ ಮದ್ಗುರುಪನಿಪತ್ಯಾಭ್ಯುವಾದ ಸತ್ಯಕಾಮ3 ಇತಿ ಭಗವ ಇತಿ ಹ ಪ್ರತಿಶುಶ್ರಾವ (2) ಬ್ರಹ್ಮಣಸ್ಸೋಮ್ಯ ತೇ ಪಾದಂ ಬ್ರುವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಣಃಕಲಾ ಚಕ್ಷುಃಕಲಾ ಶ್ರೋತ್ರಂಕಲಾ ಮನಃಕಲ್ಯೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣ ಆಯತನವಾ-ನ್ನಾಮ (3) ಸ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನವಾ ನಿತ್ಯುಪಾಸ್ತ ಆಯತನವಾನಸ್ಮಿಂಲ್ಲೋಕೇ ಭವತ್ಯಾಯತನವತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನವಾನಿತ್ಯುಪಾಸ್ತೇ (4)

ತಾ॥ ಮದ್ಗು ಎನ್ನುವ ಜಲಚರಪಕ್ಷಿ (ನೀರು ಕೋಳಿ)ಯೊಂದು ನಿನಗೆ ಬ್ರಹ್ಮಪಾದ ವಿಷಯದ ಜ್ಞಾನವನ್ನು ಅರುಹುವುದೆಂದು ಹೇಳಿ ಹಂಸವು ಸುಮ್ಮನಾಯಿತು. (ಉಳಿದ ವಿಷಯವು ಮೇಲಿನ

ಮಂತ್ರದಂತೆಯೆ) ಇನ್ನು ಜಲಚರವಾದ ಆ ನೀರು ಕೋಳಿ ಹೇಳಿದುದೇನೆಂದರೆ ಪ್ರಾಣವು, ಚಕ್ಷುಸ್ಸು, ಶ್ರೋತ್ರ, ಮನಸ್ಸು ಇವು ನಾಲ್ಕು ಕಳೆಗಳು. ಈ ನಾಲ್ಕು ಸೇರಿ ಒಂದು ಪಾದ. ಇದು ಆಯತನವಾನ್ ಅಂದರೆ ಆಶ್ರಯವಾಗಿರುವುದೆಂದು ಹೇಳುವ ಬ್ರಹ್ಮದ ನಾಲ್ಕನೆಯ ಪಾದ. ಈ ವಿಧವಾಗಿ ಅರಿತು ಕೊಂಡು ಯಾರು ಉಪಾಸಿಸುವರೋ ಅಂತಹವರು ಈ ಲೋಕದಲ್ಲಿ ಸರ್ವಾಶ್ರಯಗಳನ್ನು ಹೊಂದಿದವರಾಗುತ್ತಾರೆ. "ಆಯತನವಾನ್" ಲೋಕಗಳನ್ನು ಗೆಲ್ಲುವರು (ವೃಷಭ=ವಾಯು, ಹಂಸ= ಆದಿತ್ಯ, ಮದ್ಗುಪಕ್ಷಿ=ಪ್ರಾಣ) (ದೇವತೆಗಳು ಬ್ರಹ್ಮ ವಿದ್ಯೆಯನ್ನು ಬೋಧಿಸಿದರು ಎಂದು ತಾತ್ಪರ್ಯ.)

## ಚತುರ್ಥ ಪ್ರಪಾಠಕ - ನವಮ ಖಂಡ

**ಮಂ.ಶ್ಲೋ.॥ ಪ್ರಾಪಹಾಚಾರ್ಯಕುಲಂ ತಮಾಚಾರ್ಯೋಽಭ್ಯುವಾದ ಸತ್ಯಕಾಮ-3 ಇತಿ ಭಗವ ಇತಿ ಹ ಪ್ರತಿಶುಶ್ರಾವ (1) ಬ್ರಹ್ಮವಿದಿವ ವೈ ಸೋಮ್ಯ ಭಾಸಿ ಕೋನು ತ್ವಾಽನುಶಶಾಸೇತ್ಯನ್ಯೇ ಮನು-ಷ್ಯೇಭ್ಯ ಇತಿಹ ಪ್ರತಿಜಜ್ಞೇ ಭಗವಾಂಸ್ತ್ವೇವ ಮೇ ಕಾಮೇ ಬ್ರೂಯಾತ್ (2) ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧ್ಯೆವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪತೀತಿ ತಸ್ಮೈ ಹೈತ ದೇವೋ ವಾ ಚಾತ್ರ ಹ ನ ಕಿಂಚನ ವೀಯಾಯೇತಿ ವೀಯಾಯೇತಿ (3)**

ತಾ॥ ಸತ್ಯಕಾಮನು ಗುರುಕುಲವನ್ನು ಸೇರಿದ. ಅಲ್ಲಿ ಆಚಾರ್ಯರು ಅವನನ್ನು ನೋಡಿ "ಸತ್ಯಕಾಮ! ನೀನು ಬ್ರಹ್ಮವನ್ನು ತಿಳಿದುಕೊಂಡವನಂತೆ ಕಾಣುತ್ತಿದ್ದೀಯೆ. ನಿನಗೆ ಯಾರು ಹೇಳಿದರು? ಎಂದು ಕೇಳಿದರು. "ಗುರುದೇವಾ! ಮನುಷ್ಯರಲ್ಲದವರು ಈ ಜ್ಞಾನವನ್ನು ನನಗೆ ತಿಳಿಸಿಕೊಟ್ಟರು. ಆದರೆ ಏನಾಯಿತು? ನೀವು ನನಗೆ ಉಪದೇಶ ಮಾಡಿ ಧನ್ಯನನ್ನಾಗಿ ಮಾಡಬೇಕೆಂದು ನನ್ನ ಪ್ರಾರ್ಥನೆ. ತಮ್ಮಂತಹ ಆಚಾರ್ಯರ ಗುರುಮುಖದಿಂದ ಅಭ್ಯಸಿಸಿದ ವಿದ್ಯೆ ಅತ್ಯುತ್ತಮವಾದು-ದೆಂದು ಸತ್ಯಕಾಮನು ಬಿನ್ನವಿಸಿಕೊಳ್ಳಲು, ಅದೇ ಬ್ರಹ್ಮವಿದ್ಯೆಯನ್ನು ಮತ್ತೆ ಆಚಾರ್ಯರು ಬೋಧಿ-ಸಿದರು. ಸದ್ಗುರುವು ಷೋಡಶಕಳಾವಿದ್ಯೆಗಳನ್ನು ಬೋಧಿಸಿದಾಗಲೇ ಸಾಧುತ್ವವನ್ನು ಹೊಂದಲಾ-ಗುವುದು. ಸಮರ್ಥವಾದ ಬ್ರಹ್ಮಜ್ಞಾನವಾಗುವುದು. (ಈ ರೀತಿಯಾಗಿ ಸತ್ಯಕಾಮನ ವಿದ್ಯಾಭ್ಯಾಸವು ಪೂರ್ಣತ್ವವನ್ನು ಪಡೆಯಿತು.)

## ಚತುರ್ಥ ಪ್ರಪಾಠಕ - ದಶಮ ಖಂಡ

**ಮಂ.ಶ್ಲೋ.॥ ಉಪಕೋಸಲೋ ಹ ವೈ ಕಾಮಲಾಯನಸ್ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಮುವಾಸ ತಸ್ಯ ಹ ದ್ವಾದಶವರ್ಷ್ಯಾಗ್ನೀನ್ ಪರಿಚಚಾರ ಸಹಸ್ಮಾನ್ಯಾನನ್ತೇವಾಸಿನಸ್ಸಮಾವರ್ತಯಂ ಸ್ತಂಹಸ್ಮೈವ ನ ಸಮಾವರ್ತಯತಿ (1) ತಂ ಜಾಯೋವಾಚ ತಪ್ತೋ ಬ್ರಹ್ಮಚಾರೀ ಕುಶಲ-ಮಗ್ನೀನ್ ಪರಿಚಚಾರೀನ್ಮಾ ತ್ವಾಽಗ್ನಯಃ ಪರಿಪ್ರವೋಚನ್ ಪ್ರಬ್ರೂಹ್ಯಸ್ಮಾ ಇತಿ ತಸ್ಮೈ ಹ ಪ್ರೋಚ್ಯೈವ ಪ್ರವಾಸಾಞ್ಚಕ್ರೇ (2)**

ತಾ॥ ಬಹಳ ಹಿಂದೆ ಉಪಕೋಸಲ ಕಾಮಲಾಯನನೆನ್ನುವ ಮುನಿ, ಸತ್ಯಕಾಮ ಜಾಬಾಲಿಯ ಸನ್ನಿಧಿಯಲ್ಲಿ ಬ್ರಹ್ಮಚರ್ಯ ವ್ರತದಲ್ಲಿದ್ದ. ಹನ್ನೆರಡು ಸಂವತ್ಸರಗಳು ಆತ ಈ ರೀತಿಯಾಗಿ ಅಗ್ನಿ ಕಾರ್ಯಗಳನ್ನು ನೆರವೇರಿಸಿದ (ಮಾಡಿದ). 12 ವರ್ಷಗಳಾದ ಮೇಲೆ ಸತ್ಯಕಾಮ ಜಾಬಾಲಿ

ಶಿಷ್ಯರೆಲ್ಲರಿಗೂ ಬೀಳ್ಕೊಡುಗೆ ಸಮಾರಂಭವನ್ನೇರ್ಪಡಿಸಿ ಆಶೀರ್ವದಿಸಲು ಏರ್ಪಾಟು ಮಾಡಿದ. ಆದರೆ ಉಪಕೋಸಲನನ್ನು ಮಾತ್ರ ಬೀಳ್ಕೊಡಿಗೆ ಸಭೆಗೆ ಸೇರಿಸಲಿಲ್ಲ. ಸತ್ಯಕಾಮನ ಪತ್ನಿ ಗಂಡನೊಂದಿಗೆ ಈ ರೀತಿಯಾಗಿ ಹೇಳಿದಳು. "ನೀವು ಉಪಕೋಸಲನಿಗೆ ಬೀಳ್ಕೊಡಿಗೆ ಉಪದೇಶ-ವನ್ನು ಮಾಡಲಿಲ್ಲ. ಉಪಕೋಸಲನು ಎಲ್ಲರಿಗಿಂತ ಹೆಚ್ಚಿನ ಗುರುಭಕ್ತಿಯಿಂದ ಸೇವೆ ಮಾಡಿರುತ್ತಾನೆ. ಬ್ರಹ್ಮಚರ್ಯವನ್ನು ಕಟ್ಟುನಿಟ್ಟಾಗಿ ಪಾಲಿಸಿದ್ದಾನೆ. ನೀವು ಉಪಕೋಸಲನಿಗೂ ಸಹ ಬೀಳ್ಕೊಡುಗೆ ಉಪದೇಶವನ್ನು ಮಾಡಬೇಕು. ನಿತ್ಯಾಗ್ನಿ ದೇವತೆ ನಿಮ್ಮನ್ನು ಆಕ್ಷೇಪಿಸುವುದೇನೋ" ಎಂದು ಹೇಳಿದಳು. ಆದರೆ, ಸತ್ಯಕಾಮನು ಉಪದೇಶ ಮಾಡದೆ, ಪತ್ನಿಗೆ ಯಾವ ವಿಷಯವನ್ನೂ ಹೇಳದೆ ಆಶ್ರಮವನ್ನು ಬಿಟ್ಟು ಸಂಚಾರಕ್ಕೆ ಹೊರಟ.

**ಮಂ.ಶ್ಲೋ.॥ ಸಹ ವ್ಯಾಧಿನಾऽನಶಿತುಂದಧ್ರೇತಮಾಚಾರ್ಯ ಜಾಯೋವಾಚ ಬ್ರಹ್ಮಾಚಾರಿನ್ನಶಾನ ಕಿಂ-ನುನಾಶ್ನಾಸೀತಿ ಸ ಹೋವಾಚ ಬಹವ ಇಮೇऽಸ್ಮಿನ್ಪುರುಷೇ ಕಾಮಾ ನಾನಾತ್ಯಯಾ ವ್ಯಾಧಿಭಿಃ ಪ್ರತಿಪೂರ್ಣೋऽಸ್ಮಿ ನಾಶಿಷ್ಯಾಮೀತಿ (3) ಅಥ ಹಾಗ್ನಯಸ್ಸಮೂದಿರೇ ತಪ್ತೋ ಬ್ರಹ್ಮಚಾರೀ ಕುಶಲಂ ನಃ ಪರ್ಯಚಾರೀತ್ ಹನ್ತಾಸ್ಮೈ ಪ್ರಬ್ರವಾಮೇತಿ ತಸ್ಮೈಹೋಚುಃ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ (4) ಸ ಹೋವಾಚ ವಿಜಾನಾಮ್ಯಹಂ ಯತ್ಪ್ರಾಣೋ ಬ್ರಹ್ಮ ಕಂ ಚತು ಖಂ ಚ ಸ ವಿಜಾನಾಮೀತಿ ತೇ ಹೋಚುರ್ಯದ್ವಾವಕಂ ತ ದೇವ ಖಂ ಯದೇವ ಖಂ ತದೇವ ಕಮಿತಿ ಪ್ರಾಣಂ ಚ ಹಾಸ್ಮೈತದಾಕಾಶಂ ಚೋಚುಃ (5)**

ತಾ॥ ಮಾನಸಿಕ ಬಾಧೆಯಿಂದ ಉಪಕೋಸಲನು ಉಪವಾಸ ಮಾಡಲು ಪ್ರಾರಂಭಿಸಿದ. ಗುರುವಿನ ಸತೀಮಣಿ "ಎಲೈ ಬ್ರಹ್ಮಚಾರಿಯೇ! ಉಪವಾಸ ಮಾಡುತ್ತಿದ್ದೀಯೇ ಏಕೆ?" ಎನ್ನಲು ಉಪಕೋಸಲನು "ನಿರಾಶೆಯನ್ನು ಅನುಭವಿಸುತ್ತಿರುವ ನನ್ನಲ್ಲಿ ಬಹಳಷ್ಟು ಕೋರಿಕೆಗಳು ವಿವಿಧ ರೀತಿಗಳಲ್ಲಿ ತಲೆಯೆತ್ತುತ್ತಿವೆ. ನನ್ನ ಮನಸ್ಸಿನಲ್ಲಿ ತುಂಬಾ ಬಾಧೆಗಳಿವೆ. ಆದ್ದರಿಂದ ನಾನು ಆಹಾರವನ್ನು ಸೇವಿಸುವುದಿಲ್ಲ" ಎಂದು ನುಡಿದ. ಅಲ್ಲಿದ್ದ ಯಜ್ಞಾಗ್ನಿಗಳು ತಮ್ಮಲ್ಲಿ ತಾವು ಹೀಗೆ ಹೇಳಿಕೊಂಡವು. "ಈ ಬ್ರಹ್ಮಚಾರಿ ತೀವ್ರ ತಪಸ್ಸನ್ನು ಮಾಡಿ ನಮ್ಮನ್ನು ತೃಪ್ತಿ ಪಡಿಸಿದ್ದಾನೆ. ನಾವು ಈಗ ಉಪದೇಶ ಮಾಡಬೇಕು" ಎಂದುಕೊಂಡು ಆ ಯಜ್ಞಾಗ್ನಿಗಳು ಉಪಕೋಸಲನಿಗೆ ಹೀಗೆಂದು ಬೋಧಿಸಿದರು. "ಪ್ರಾಣವು ಬ್ರಹ್ಮ, ಕಂ ಎಂದರೆ ಬ್ರಹ್ಮ, ಖಂ ಎಂದರೆ ಬ್ರಹ್ಮ" ಎನ್ನಲು, ಉಪಕೋಸಲನು: ಪ್ರಾಣವು ಬ್ರಹ್ಮವೆಂದು ನನಗೆ ತಿಳಿದಿದೆ. ಕಂ ಹಾಗೂ ಖಂವನ್ನು ಕುರಿತು ನನಗೆ ಗೊತ್ತಿಲ್ಲ ಎಂದ. ಪ್ರಾಣವು ಆಕಾಶವು ಹೃದಯದಲ್ಲೇ ಇವೆಯೆಂದು ಅಗ್ನಿಗಳು ಹೇಳಿದರು. (ಕ, ಖ ಈ ಎರಡು ಅಕ್ಷರಗಳು ಒಂದೇ. ಕ=ಸುಖ, ಆನಂದ. ಖ-ಆಕಾಶ ಹೃದಯಾಕಾಶ. ಪ್ರಾಣವು, ಪ್ರಾಣವನ್ನು ಆಶ್ರಯಿಸಿದ ಆಕಾಶ ಇವುಗಳನ್ನು ಕುರಿತು ಉಪದೇಶವಾಯಿತು.)

## ಚತುರ್ಥ ಪ್ರಪಾಠಕ – ಏಕಾದಶ ಖಂಡ

**ಮಂ.ಶ್ಲೋ.॥ ಅಥ ಹೈನಂ ಗಾರ್ಹಪತ್ಯೋऽನುಶಶಾಸ ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋऽಹಮಸ್ಮಿ ಸ ಏವಾಹಮಸ್ಮೀತಿ (1) ಸ ಯ ಏತಮೇವಂ ವಿದ್ವಾನುಪಾಸ್ತೇऽವಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ**

ನಾ ಸ್ಯಾವರ ಪುರುಷಾಃ ಕ್ಷೀಯನ್ತ ಉಪವಯನ್ತಂ ಭುಞ್ಜಾಮೋಽಸ್ಮಿಂಶ್ಚ ಲೋಕೇಽ-ಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ (2)

ತಾ॥ ಆಗ ಗಾರ್ಹಪತ್ಯಾಗ್ನಿಯು ಹೀಗೆ ಬೋಧಿಸಿದ. "ಭೂಮಿ, ಅಗ್ನಿ, ಆಹಾರ, ಸೂರ್ಯ ಎಲ್ಲವೂ ನನ್ನ ರೂಪಗಳೇ. ಸೂರ್ಯನಲ್ಲಿರುವ ಪುರುಷನು ನಾನೇ, ನಾನೇ, ಇದು ಸತ್ಯ." ಈ ವಿವರಗಳನ್ನು ತಿಳಿದುಕೊಂಡು ಧ್ಯಾನಿಸುವವರಿಗೆ ಪಾಪಗಳು ನಶಿಸುವವು. ಯಜ್ಞಭಾಗ್ಯ ಲಭಿಸುವುದು. ಪೂರ್ಣಾಯುಸ್ಸು ಉಂಟಾಗುವುದು. ಪ್ರಕಾಶಮಾನವಾದ ಜೀವನ ಲಭ್ಯವಾಗುವುದು. ಸಂತಾನವು ನಾಶವಾಗುವುದಿಲ್ಲ. ಈ ಧ್ಯಾನ ಮಾಡುವವರಿಗೆ ಈ ಲೋಕದಲ್ಲಿ ಕಾಪಾಡುವೆವು. ಪುಣ್ಯ ಲೋಕಗಳಲ್ಲಿಯೂ ಸಹ ಕಾಪಾಡುತ್ತೇವೆ. (ಪೃಥಿವಿ, ಅನ್ನ ಈ ಎರಡೂ ಅನುಭವಿಸುವಂತಾಗುತ್ತವೆ. ಅಗ್ನಿ ಆದಿತ್ಯ ಈ ಇಬ್ಬರೂ ಅನುಭವಿಸುವವರು ಭೋಕ್ತರು.)

## ಚತುರ್ಥ ಪ್ರಪಾಠಕ – ದ್ವಾದಶ ಖಂಡ

ಮಂ.ಶ್ಲೋ.॥ ಅಥ ಹೈನಮನ್ವಾಹಾರ್ಯವಚನೋಽನು ಶಶಾಸಾಪೋ ದಿಶೋನಕ್ಷತ್ರಾಣಿ ಚನ್ದ್ರಮಾ ಇತಿ ಯ ಏಷ ಚನ್ದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ನ ಏವಾಹಮಸ್ಮೀತಿ (1) ಸ ಯ ಏತಮೇವಂ ವಿದ್ವಾನುಪಾಸ್ತೇಪಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯು -ರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯನ್ತ ಉಪವಯಂ ತಂ ಭುಂಜಾಮೋಽಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ (2)

ತಾ॥ ಆನಂತರ ಅನ್ವಾ ಹರ್ಯಪಚನಾಗ್ನಿ (ದಕ್ಷಿಣಾಗ್ನಿ) ಹೀಗೆ ಬೋಧಿಸಿದ. "ಜಲ, ದಿಕ್ಕುಗಳು, ನಕ್ಷತ್ರಗಳು, ಚಂದ್ರ ಇವೆಲ್ಲವೂ ನನ್ನ ರೂಪಗಳೇ, ಚಂದ್ರನಲ್ಲಿರುವ ಪುರುಷನು ನಾನೇ, ಇದು ನಿಜ. ಈ ವಿವರಗಳನ್ನು ತಿಳಿದುಕೊಂಡು ಯಾರು ಧ್ಯಾನಿಸುವರೋ ಅಂತಹವರ ಪಾಪಗಳು ನಶಿಸುವವು. ಯಜ್ಞರಾಜ್ಯವು ಲಭಿಸುವುದು. ಪೂರ್ಣಾಯುಸ್ಸು ಉಂಟಾಗುವುದು. ಪ್ರಕಾಶಮಾನವಾದ ಜೀವನವು ಲಭಿಸುವುದು. ಅವರಿಗೆಂದಿಗೂ ಸಂತಾನ ನಶಿಸುವುದಿಲ್ಲ. ಅವರನ್ನು ಈ ಲೋಕದಲ್ಲಿಯೂ, ಮೇಲಿನ ಲೋಕದಲ್ಲಿಯೂ ನಾವು ಕಾಪಾಡುತ್ತೇವೆ. (ಚಂದ್ರನಿಗೆ ದಕ್ಷಿಣ ದಿಕ್ಕಿನೊಂದಿಗೆ ಸಂಬಂಧವಿದೆ. ನಕ್ಷತ್ರಗಳು ಚಂದ್ರನಿಗೆ ಅನ್ನ ಎನ್ನುವುದು ಪ್ರಸಿದ್ಧವಾಗಿದೆ.)

## ಚತುರ್ಥ ಪ್ರಪಾಠಕ – ತ್ರಯೋದಶ ಖಂಡ

ಮಂ.ಶ್ಲೋ.॥ ಅಥ ಹೈನಮಾಹವನೀಯೋಽನುಶಶಾಸ ಪ್ರಾಣ ಆಕಾಶೋ ದ್ಯೌರ್ವಿದ್ಯುದಿತಿ ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ (1) ಸ ಯ ಏತಮೇವಂ ವಿದ್ಯಾನುಪಾಸ್ತೇಽವಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತೀ ನಾಸ್ಯಾಪರ ಪುರುಷಾಃ ಕ್ಷಿಯನ್ತೇ ಉಪವಯಂ ತಂ ಭುಂಜಾಮೋಽಸ್ಮಿಂಶ್ಚ ಲೋಕೇಽ-ಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ (2)

ತಾ॥ ನಂತರ ಆಹವನೀಯಾಗ್ನಿಯು ಹೀಗೆ ನುಡಿದ "ಪ್ರಾಣ, ಆಕಾಶ, ಸ್ವರ್ಗ, ವಿದ್ಯುತ್ತು ನನ್ನ

ರೂಪಗಳು. ವಿದ್ಯುತ್ತಿನಲ್ಲಿ ಬೆಳಗುತ್ತಿರುವ ಪುರುಷನು ನಾನೇ, ನಾನೇ, ಈ ವಿವರಗಳನ್ನು ತಿಳಿದು-ಕೊಂಡು ಧ್ಯಾನಿಸುವವನು. ಪಾಪಗಳನ್ನು ಹೋಗಲಾಡಿಸಿಕೊಳ್ಳುವಂತಹವನಾಗುತ್ತಾನೆ. ಪೂರ್ಣವಾಗಿ ಜೀವನವನ್ನು ಅನುಭವಿಸುತ್ತಾನೆ. ಪ್ರಕಾಶಮಾನವಾಗಿ ಜೀವಿಸುತ್ತಾನೆ. ಅವರ ಬಂಧುಗಳ ಸಂತತಿ ನಶಿಸುವುದಿಲ್ಲ. ಈ ಧ್ಯಾನವನ್ನು ಮಾಡುವವರಿಗೆ, ಈ ಲೋಕದಲ್ಲಿಯೂ, ಇತರ ಪುಣ್ಯ ಲೋಕ-ಗಳಲ್ಲಿಯೂ, ನಾವು ರಕ್ಷಿಸುವಂತಹವರಾಗುತ್ತೇವೆ. ಅಂತಹವನು ವಿಶುದ್ಧ ಜೀವನನಾಗುವವನು. ಭೋಜ್ಯ ವಸ್ತುಗಳಾಗಿ-ವಿದ್ಯುತ್ತಿಗೆ ದ್ಯುಲೋಕ, ಅಹವನೀಯಾಗ್ನಿ, ಆಕಾಶ, ವಾಸಸ್ಥಳಗಳು.

## ಚತುರ್ಥ ಪ್ರಪಾಠಕ - ಚತುರ್ದಶ ಖಂಡ

ಮಂ.ಶ್ಲೋ.॥ **ತೇ ಹೋಚುರುಪಕೋಸಲೈಷಾ ಸೋಮ್ಯ ತೇಽಸ್ಮದ್ವಿದ್ಯಾತ್ಮ ವಿದ್ಯಾಚಾಚಾರ್ಯಸ್ತು ತೇ ಗತಿಂ ವಕ್ತೇತ್ಯಾಜಗಾಮ ಹಾ ಸ್ಯಾಚಾರ್ಯಸ್ತಮಾಚಾರ್ಯೋಽಭ್ಯುವಾದೋಪಕೋಸಲ೩ ಇತಿ (1) ಭಗವ ಇತಿ ಹ ಪ್ರತಿಶುಶ್ರಾವ ಬ್ರಹ್ಮವಿದ ಇವ ಸೋಮ್ಯ ತೇ ಮುಖಂ ಭಾತಿ ಕೋನುತ್ವಾಽನು-ಶಶಾಸೇತಿ ಕೋನು ಮಾನು ಶಿಷ್ಯಾದ್ಧೋ ಇತೀಹಾಪೇವನಿಹ್ನುತೇ ಇಮೇನೂನಮೀದೃಶಾ ಅನ್ಯಾದೃಶಾ ಇತಿ ಹಾಗ್ನೀನಭ್ಯೂದೇ ಕಿಂನು ಸೋಮ್ಯ ಕಿಲ ತೇಽವೋಚನ್ನಿತಿ (2) ಇದಮಿತಿ ಹ ಪ್ರತಿಜಜ್ಞೇ ಲೋಕಾನ್ವಾವ ಕಿಲ ಸೋಮ್ಯ ತೇಽವೋಚನ್ನ ಹಂತು ತೇ ತದ್ವಕ್ಷ್ಯಾಮಿ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯನ್ತ ಏವಮೇವಂ ವಿದಿ ಪಾಪಂ ಕರ್ಮ ನಶ್ಲಿಷ್ಯತ ಇತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ (3)**

ತಾ॥ ಆ ಅಗ್ನಿಗಳು ಹೀಗೆ ಹೇಳಿದವು. "ಓ ಉಪಕೋಸಲಾ. ಪ್ರಿಯಸಾಧಕಾ! ಈ ಯಜ್ಞ ವಿಜ್ಞಾನವು. ಆತ್ಮಜ್ಞಾನವು ನಿನಗೆ ನಮ್ಮಿಂದ ಬೋಧಿಸಲ್ಪಟ್ಟಿದೆ. ಸರಿಯಾದ ಮಾರ್ಗವನ್ನು ನಿನ್ನ ಗುರುವು ನಿನಗೆ ಉಪದೇಶಿಸುವನು. ಗುರುವು ಸಂಚಾರವನ್ನು ಮುಗಿಸಿ ಮನೆಗೆ ಬಂದ ಕೂಡಲೇ "ಉಪಕೋಸಲಾ" ಎಂದು ಕರೆದ. ಉಪಕೋಸಲನು ವಿನಯದಿಂದ ನಮಸ್ಕರಿಸಿದ. "ಮಗೂ ಅವರೆಲ್ಲರೂ ನಿನಗೆ ಸಾಧನ ವಿಜ್ಞಾನವನ್ನು ಬೋಧಿಸಿದರು. ನಿನ್ನ ಮನಸ್ಸಿನಲ್ಲಿರುವ ಕೋರಿಕೆ, ಬ್ರಹ್ಮಜ್ಞಾನವನ್ನು ಕುರಿತಾದುದಲ್ಲವೇ? ನಾನು ನಿನಗೆ ಅದನ್ನು ಬೋಧಿಸುವೆನು. ಪದ್ಮದ ಮೇಲಿರುವ ಜಲಬಿಂದುಗಳು ಪದ್ಮವನ್ನು ಅಂಟಿಕೊಳ್ಳದಂತೆ ಬ್ರಹ್ಮಜ್ಞಾನಿಯನ್ನು ಪಾಪಗಳು ಸ್ಪರ್ಶಿಸುವುದಿಲ್ಲ" ಎಂದು ಗುರುವು ಬೋಧಿಸಿದ. "ಗುರುದೇವಾ! ಇನ್ನೂ ಪೂರ್ತಿಯಾಗಿ ಜ್ಞಾನವನ್ನು ಬೋಧಿಸಿ" ಎಂದು ಉಪಕೋಸಲನು ಪ್ರಾರ್ಥಿಸಿದ. ಗುರುವು ಹೇಳತೊಡಗಿದ.

## ಚತುರ್ಥ ಪ್ರಪಾಠಕ - ಪಞ್ಚದಶ ಖಂಡ

ಮಂ.ಶ್ಲೋ.॥ **ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯ-ಮೇತದ್ಬ್ರಹ್ಮೇತಿ ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ, ಏವಗಚ್ಛತಿ (1) ಏತಂ ಸಂಯದ್ವಾಮ ಇತ್ಯಾಚಕ್ಷತ ಏತಂ ಹಿ ಸರ್ವಾಣಿ ವಾಮಾನ್ಯಭಿಸಂಯನ್ತಿ ಸರ್ವಾಣ್ಯೇನಂ ವಾಮಾನ್ಯಭಿಸಂಯನ್ತಿ ಯ ಏವಂ ವೇದ (2) ಏಷ ಉ ಏವ ವಾಮನೀ ರೇಷಹಿ**

**ಸರ್ವಾಣೀ ವಾಮಾನಿ ನಯತಿ ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ (3) ಏಷ ಉ ಏವ ಭಾಮನೀರೇಷಹಿ ಸರ್ವೇಷು ಲೋಕೇಷು ಭಾತಿ, ಸರ್ವೇಷು ಲೋಕೇಷು ಭಾತಿ ಯ ಏವಂ ವೇದ (4)**

ತಾ॥ ನೇತ್ರಗಳಲ್ಲಿ ವಾಸವಾಗಿರುವ ಪುರುಷನೇ ಆತ್ಮ. ಈ ಆತ್ಮ ಅಮರ. ಭಯರಹಿತ. ಪರಬ್ರಹ್ಮ. ಆದ್ದರಿಂದಲೇ ಸ್ವಚ್ಛವಾದ ತುಪ್ಪವನ್ನಾಗಲೀ, ನೀರನ್ನಾಗಲೀ, ಕಣ್ಣುಗಳ ಮೇಲೆ ಚೆಲ್ಲಿದರೆ ಅವು ಒಳಕ್ಕೆ ಹೋಗುವುದಿಲ್ಲ. ಹೊರಕ್ಕೆ ಬಂದುಬಿಡುವುದು. ಬ್ರಹ್ಮಜ್ಞಾನಿಯನ್ನು ಆಶೀರ್ವಾದ ನಿಧಿಯಾಗಿ ಗುರುತಿಸಬೇಕು. ಎಲ್ಲ ಅಭಿನಂದನೆಗಳು ಆತನಲ್ಲಿವೆ. ಎಲ್ಲ ಆಶೀರ್ವಾದಗಳು ಬ್ರಹ್ಮಜ್ಞಾನಿಯಲ್ಲಿವೆ. ಬ್ರಹ್ಮಜ್ಞಾನಿಯು ಆಶೀರ್ವಾದ ಭಾಗ್ಯಗಳನ್ನು ನೀಡುವ ಮನುಷ್ಯ. ಇದನ್ನು ತಿಳಿದು ಕೊಂಡವರು ಸರ್ವ ಆಶೀರ್ವಾದಗಳನ್ನು ಹೊಂದಬಲ್ಲರು. ಈ ವಿಷಯವನ್ನು ಗ್ರಹಿಸಿದವರು ಎಲ್ಲ ಪರಿಸ್ಥಿತಿಗಳಲ್ಲೂ ಪ್ರಕಾಶಿಸುವರು.

**ಮಂ.ಶ್ಲೋ.॥ ಅಥ ಯದುಚೈವಾಸ್ಮಿಞ್ಛವ್ಯಂ ಕುರ್ವನ್ತಿ ಯದಿ ಚ ನಾರ್ಚಿಷಮೇವಾಭಿಸಮ್ಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣ ಪಕ್ಷಮಾಪೂರ್ಯಮಾಣ ಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾಂ ಸ್ತಾನ್ಮಾಸೇಭ್ಯಸ್ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ । ಸ ಏನಾಂ ಬ್ರಹ್ಮಗಮಯತ್ಯೇಷದೇವಪಥೋ ಬ್ರಹ್ಮ ಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತನ್ತೇ ನಾವರ್ತನ್ತೇ (5)**

ತಾ॥ ಮೇಲೆ ಹೇಳಿದ ಜ್ಞಾನಿಗಳು (ಅಂತ್ಯಕ್ರಿಯೆಗಳು ಸರಿಯಾಗಿ ನಡೆದರೂ, ನಡೆಯದಿದ್ದರೂ) ಮರಣಾನಂತರ ಅರ್ಚಿಸ್ಸುಗಳಿಗೆ ಸೇರುವರು. ಅರ್ಚಿಸ್ಸುಗಳಿಂದ ಹಗಲಿನ ಕಾಂತಿಯಲ್ಲಿ ಪ್ರಯಾಣ ಮಾಡುವರು. ಅಲ್ಲಿಂದ ಶುಕ್ಲ ಪಕ್ಷದೊಂದಿಗೆ ಪ್ರಯಾಣ ಮಾಡುವರು. ಶುಕ್ಲ ಪಕ್ಷದಿಂದ ಉತ್ತರಾ-ಯಣವನ್ನು ಸೇರುವರು. ಅಲ್ಲಿಂದ ಸಂವತ್ಸರ ದೇವತೆಯನ್ನು ಸೇರುವರು. ಅಲ್ಲಿಂದ ಸೂರ್ಯನನ್ನು ಸೇರುವರು. ಸೂರ್ಯ ದೇವನಿಂದ ಚಂದ್ರನನ್ನು ಸೇರುವರು. ಚಂದ್ರನಿಂದ ವಿದ್ಯುತ್ತನ್ನು ತಲು-ಪುವರು. ಅಲ್ಲಿ ಬ್ರಹ್ಮಲೋಕದಿಂದ ಬಂದ ದೇವತೆ ಅವರಿಗೆ ಬ್ರಹ್ಮಜ್ಞಾನವನ್ನು ಬೋಧಿಸುವನು. ಇದೇ ದೇವತೆಗಳಿಗೆ ಮಾರ್ಗ. ಬ್ರಹ್ಮಲೋಕಕ್ಕೆ ಮಾರ್ಗ.... ಈ ಅರ್ಚಿರಾದಿ ಮಾರ್ಗದಲ್ಲಿ ಪ್ರಯಾಣ ಮಾಡಿ-ದವರು. ಮತ್ತೆ ಮಾನವ ಲೋಕದಲ್ಲಿ ಜನಿಸುವುದಿಲ್ಲ. ಅವರಿಗೆ ಜನ್ಮರಾಹಿತ್ಯವುಂಟಾಗುವುದು (ಉತ್ತಮ ಲೋಕಪ್ರಾಪ್ತಿಗೆ ಅಂತ್ಯಕ್ರಿಯೆಗಳಿಗಿಂತ ಬ್ರಹ್ಮಜ್ಞಾನವೇ ಉತ್ತಮವಾದುದೆಂದು ತಿಳಿಸಲಾಗಿದೆ.)

## ಚತುರ್ಥ ಪ್ರಪಾಠಕ - ಷೋಡಶ ಖಂಡ

**ಮಂ.ಶ್ಲೋ.॥ ಏಷ ಹ ವೈ ಯಜ್ಞೋ ಯೋಽಯಂ ಪವತ ಏಷ ಹ ಯನ್ನಿದಂ ಸರ್ವಂ ಪುನಾತಿ ಯದೇಷ ಹ ಯನ್ನಿದಂ ಸರ್ವಂ ಪುನಾತಿ ತಸ್ಮಾದೇಷ ಏವ ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ (1) ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ ವಾಚಾ ಹೋತಾಽಧ್ವರ್ಯು-ರುದ್ಗಾತಾಽನ್ಯತರಾಂ ಸ ಯತ್ರೋಪಾಕೃತೇ ಪ್ರಾತರನುವಾಕೇ ಪುರಾ ಪರಿಧಾನೀಯಾ ಯಾ ಬ್ರಹ್ಮಾ ವ್ಯಪವದತಿ (2)**

ತಾ॥ ಯಾರು ಈ ಯಜ್ಞವನ್ನು ಜ್ವಲಿಸುವಂತೆ ಮಾಡುವರೋ, ಅವರು ಇಲ್ಲಿ ಸರ್ವವನ್ನೂ ಪವಿತ್ರವಾಗಿ ಮಾಡುತ್ತಾರೆ. ಅವನು ಇಲ್ಲಿ ಸಂಚರಿಸುತ್ತಾ ಸರ್ವವನ್ನೂ ಪವಿತ್ರವನ್ನಾಗಿ, ಮಾಡುತ್ತಿರು-ವನು. ಆದ್ದರಿಂದ ಆತನೇ ಯಜ್ಞನೆಂದು ಹೇಳಲಾಗಿದೆ. ಈ ಯಜ್ಞವನ್ನು ನಿರ್ವಹಿಸಲು ಮನಸ್ಸು, ವಾಕ್ಕು, ಇವೆರಡೂ ಪ್ರಧಾನವಾದವುಗಳು. ಈ ಎರಡು ಮಾರ್ಗಗಳಲ್ಲಿ ಒಂದು ಮಾರ್ಗ ಬ್ರಾಹ್ಮಣನಾದ ಋತ್ವಿಕ್ಕನ ಮನಸ್ಸಿನಲ್ಲಿ ಸಂಸ್ಕರಿಸಲಾಗುತ್ತದೆ. ಅಧ್ವರ್ಯನಾದ ಹೋತೃ, ಉದ್ಗಾತನಾದ ಋತ್ವಿಕ್ಕು, ವಾಕ್ಕುಗಳೊಂದಿಗೆ ನಿರ್ವಹಿಸುವರು. ಪ್ರಾತರನುವಾಕದ ನಂತರ ಯಜ್ಞವು ಪ್ರಾರಂಭವಾಗುವುದು. ಪರಿಧಾನೀಯಕ್ಕೆ ಮೊದಲು ಋಕ್ಕುಗಳ ಗಾನವಾಗುವುದು. ಬ್ರಾಹ್ಮಣ, ಋತ್ವಿಕ್ಕು, ಮೌನವನ್ನು ತೊರೆದು ಹೇಳಿದಾಗಲೇ ಒಂದು ವಿಧಾನವು ಪ್ರಾರಂಭ(ವಾಗುವುದು) ವಾದಾಗ, ಎರಡನೆಯ ಮಾರ್ಗವನ್ನು ನಿಲ್ಲಿಸುವರು. (ಇದು ಯಜ್ಞೋಪಾಸನೆಯನ್ನು ಕುರಿತಾದ ವಿವರಣೆ.)

ಮಂ.ಶ್ಲೋ.॥ **ಅನ್ಯತರಾಮೇವ ವರ್ತನೀಂ ಸಂಸ್ಕರೋತಿ ಹೀಯತೇಽನ್ಯತರಾ ಸ ಯಥೈಕಪಾದ್ವ್ರಜ-ನ್ರಥೋವೈ ಕೇನ ಚಕ್ರೇಣ ವರ್ತಮಾನೋರಿಷ್ಯತ್ಯೇವಮಸ್ಯ ಯಜ್ಞೋರಿಷ್ಯತಿ ಯಜ್ಞಂ ರಿಷ್ಯನ್ತಂ ಯಜಮಾನೋಽನುರಿಷ್ಯತಿ ನ ಇಷ್ಟ್ವಾ ಪಾಪೀಯಾನ್ ಭವತಿ (3) ಅಥ ಯತ್ರೋಪಾಕೃತೇ ಪ್ರಾತರನುವಾಕೇನ ಪುರಾ ಪರಿಧಾನೀಯಾ ಯಾ ಬ್ರಹ್ಮಾ ವ್ಯವವದ-ತ್ಯುಭೇ ಏವ ವರ್ತನೀ ಸಂಸ್ಕುರ್ವನ್ತಿ ನ ಹೀಯತೇಽನ್ಯತರಾ (4) ಸ ಯಥೋಭಯ ಪಾದ್ವ್ರಜನ್ ರಥೋವೋಭಾಭ್ಯಾಂ ಚಕ್ರಾಭ್ಯಾಂ ವರ್ತಮಾನಃ ಪ್ರತಿತಿಷ್ಠತ್ಯೇವಮಸ್ಯ ಯಜ್ಞಃ ಪ್ರತಿತಿಷ್ಠತಿ ಯಜ್ಞಂ ಪ್ರತಿತಿಷ್ಠನ್ತಂ ಯಜಮಾನೋಽನುಪ್ರತಿತಿಷ್ಠತಿ ಸ ಇಷ್ಟ್ವಾ ಶ್ರೇಯಾನ್ ಭವತಿ (5)**

ತಾ॥ ಮನುಷ್ಯನು ಒಂದು ಕಾಲಿನಲ್ಲಿ ನಡೆದಂತೆ. ರಥವು ಒಂದು ಚಕ್ರದಲ್ಲಿ ಸಾಗಿದಂತೆ ಈ ಯಜ್ಞವೂ ಸಹ ಸ್ವಲ್ಪ ಬಾಧಕರವಾಗಿ ಸಾಗುವುದು. ಯಜ್ಞ ನಿರ್ವಹಣೆ ಅಡ್ಡಿಯುಂಟಾದಾಗ ಯಜಮಾನನೂ ಸಹ ಬಾಧೆಯನ್ನು ಅನುಭವಿಸುವನು. ಈ ರೀತಿಯಾಗಿ ಯಜ್ಞವನ್ನು ಪೂರ್ತಿ ಮಾಡಿದಾಗ, ಯಜಮಾನನು ಪಾಪಿಯಾಗುವನು. ಪ್ರಾತರನುವಾಕದ ನಂತರ ಪರಿಧಾನೀಯ ಋಕ್ಕುಗಳನ್ನು ಪಠಿಸುವ ಮೊದಲು ಬ್ರಾಹ್ಮಣ, ಋತ್ವಿಕ್ಕು, ಮೌನವನ್ನು, ಬಿಡದೆ ಹೋದಲ್ಲಿ, ಎರಡು ಮಾರ್ಗಗಳು ಪ್ರಕಾಶಮಾನವಾಗಿರುವುದು. ಯಾವ ವಿಧಾನವೂ ಲೋಪ ಭೂಯಿಷ್ಟವಾಗುವುದಿಲ್ಲ. ಮನುಷ್ಯನು ಎರಡು ಕಾಲುಗಳೊಂದಿಗೆ ನಡೆದಂತೆ ಎರಡು ಚಕ್ರಗಳೊಂದಿಗೆ ಬಂಡಿ ಸಾಗಿದಂತೆ, ಈ ಯಜ್ಞವು ಸಂತೃಪ್ತಿಕರವಾಗಿ ಜರುಗುವುದು. ಯಜ್ಞವು ತೃಪ್ತಿಕರವಾಗಿ ಜರುಗುತ್ತಿರುವಾಗ ಯಜಮಾನನೂ ಸಹ ಎಲ್ಲ ವಿಧಗಳಲ್ಲಿ ಕ್ಷೇಮದಿಂದಿರುವನು. ಇಂತಹ ಯಜ್ಞವನ್ನು ಮಾಡುವುದರಿಂದ ಯಜಮಾನನು ಶ್ರೇಷ್ಠನಾಗುವನು.

## ಚತುರ್ಥ ಪ್ರಪಾಠಕ – ಸಪ್ತದಶ ಖಂಡ

ಮಂ.ಶ್ಲೋ.॥ **ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಂ ರಸಾನ್ ಪ್ರಾಬೃಹದಗ್ನಿಂ ಪೃಥಿವ್ಯಾ ವಾಯುಮನ್ತರಿಕ್ಷಾದಾದಿತ್ಯಂ ದಿವಃ (1) ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾನಾಂ ರಸಾನ್ ಪ್ರಾಬೃಹದಗ್ನೇಃ ಋಚೋ ವಾಯೋರ್ಯಜುಂಷಿ**

**ಸಾಮಾನ್ಯಾದಿತ್ಯಾತ್ (2) ಸ ಏತಾಂ ತ್ರಯೀಂ ವಿದ್ಯಾಮಭ್ಯತಪತ್ತಸ್ಯಾಸ್ತಪ್ಯಮಾನಾ ಯಾ ರಸಾನ್ ಪ್ರಾಬೃಹದ್ಭೂರಿತ್ಯೃಗ್ಭ್ಯೋ ಭುವರಿತಿ ಯಜುರ್ಭ್ಯಸ್ಸುವರಿತಿ ಸಾಮಭ್ಯಃ (3) ತದ್ಯದ್ಯೃಯಕ್ತೋರಿಷ್ಯೇದ್ಭೂಃ ಸ್ವಾಹೇತಿ ಗಾರ್ಹಪತ್ಯೇ ಜುಹುಯಾದೃಚಾಮೇವ ತದ್ರಸೇನರ್ಚಾಂ ವೀರ್ಯೇಣರ್ಚಾಂ ಯಜ್ಞಸ್ಯ ವಿರಿಷ್ಟಂ ಸಂದಧಾತಿ (4) (ಭೂಃ. ಇತಿ - ಋಗ್ಭ್ಯಃ)**

ತಾ॥ ಪ್ರಜಾಪತಿಯು ಲೋಕಗಳನ್ನು ಸೃಷ್ಟಿಸಿದ, ಆ ಲೋಕಗಳಿಂದ ಸಾರಭೂತವಾದ ಮಹಾ ವಸ್ತುಗಳನ್ನು ಸಹ ಸೃಷ್ಟಿಸಿದ. ಭೂಮಿಯಿಂದ ಅಗ್ನಿಯನ್ನು, ಆಕಾಶದಿಂದ ವಾಯುವನ್ನು, ಸ್ವರ್ಗದಿಂದ ಸೂರ್ಯನನ್ನು ಸಹ ಸೃಷ್ಟಿಸಿದ. ಈ ಮೂವರು ದೇವತೆಗಳನ್ನು ಸೃಷ್ಟಿಸಿದ. ಆ ದೇವತೆಗಳಿಂದ ಸಾರಭೂತವಾದವುಗಳನ್ನೂ ಸೃಷ್ಟಿಸಿದ. ಅಗ್ನಿಯಿಂದ ಋಕ್ಕುಗಳನ್ನು ವಾಯುವಿನಿಂದ ಯಜಸ್ಸುಗಳ ಮಂತ್ರಗಳನ್ನು, ಸೂರ್ಯನಿಂದ ಸಾಮಗಳನ್ನು ಸೃಷ್ಟಿಸಿದ. ಮೂರು ವೇದಗಳನ್ನು ಸೃಷ್ಟಿಸಿದ. ಆ ವೇದಗಳಿಂದ ವೇದಸಾರಗಳನ್ನು ಸೃಷ್ಟಿಸಿದ. ಋಕ್ಕುಗಳಿಂದ ಭೂಲೋಕವನ್ನು ಯಜುರ್ವೇದ ಮಂತ್ರಗಳಿಂದ ಭುವರ್ಲೋಕವನ್ನು ಸಾಮವೇದದಿಂದ ಸ್ವರ್ಗವನ್ನು ಸೃಷ್ಟಿಸಿದ. ಯಜ್ಞ ನಡೆಯುವಾಗ, ವೇದ ಋಕ್ಕುಗಳಿಂದ ಏನಾದರೂ ದೋಷ ಕಾಣಿಸಿದಾಗ ಬ್ರಾಹ್ಮಣ ಋತ್ವಿಕ್ಕು "ಭೂಃ ಸುವಃ" ಎನ್ನುವ ಮಂತ್ರಗಳಿಂದ ಗಾರ್ಹಪತ್ಯಾಗ್ನಿಯೊಂದಿಗೆ ಹವಿಸ್ಸನ್ನು ಸಮರ್ಪಿಸಬೇಕು. ಈ ವಿಧವಾಗಿ ಮಾಡಿದಲ್ಲಿ ಈ ಮಂತ್ರಗಳ ಶಕ್ತಿಯಿಂದಾಗಿ, ಯಜ್ಞದೋಷಗಳು ದೂರವಾಗುತ್ತವೆ.

ಮಂ.ಶ್ಲೋ.॥ **ಅಥ ಯದಿ ಯಜುಷ್ಟೋ ರಿಷ್ಯೇದ್ಭುವಃ ಸ್ವಾಹೇತಿ ದಕ್ಷಿಣಾಗ್ನೌ ಜುಹುಯಾದ್ಯಜುಷಾ-ಮೇವ ತದ್ರಸೇನ ಯಜುಷಾಂ ವೀರ್ಯೇಣ ಯಜುಷಾಂ ಯಜ್ಞಸ್ಯ ವಿರಿಷ್ಟಂ ಸಂದಧಾತಿ (5) ಅಥ ಯದಿ ಸಾಮತೋ ರಿಷ್ಯೇತ್ಸುವಃ ಸ್ವಾಹೇತ್ಯಾಹವನೀಯೇ ಜುಹುಯಾತ್ಸಾಮ್ನಾ-ಮೇವ ತದ್ರಸೇನ ಸಾಮ್ನಾಂ ವೀರ್ಯೇಣ ಸಾಮ್ನಾಂ ಯಜಸ್ಯ ವಿರಿಷ್ಟಂ ಸಂದಧಾತಿ (6) ತದ್ಯಥಾ ಲವಣೇನ ಸುವರ್ಣಂ ಸಂದಧ್ಯಾತ್ಸುವರ್ಣೇಣ ರಜತಂ ರಜತೇನ ತ್ರಪು ತ್ರಪುಣಾ ಸೀಸಂ ಸೀಸೇನ ಲೋಹಂ ಲೋಹೇನ ದಾರು ದಾರು ಚರ್ಮಣಾ (7) ಏವಮೇಷಾಂ ಲೋಕಾನಾಮಾಸಾಂ ದೇವತಾನಾಮಸ್ಯಾಸ್ತ್ರಯ್ಯಾ ವಿದ್ಯಾಯಾ ವೀರ್ಯೇಣ ಯಜ್ಞಸ್ಯ ವಿರಿಷ್ಟಂ ಸಂದಧಾತಿ ಭೇಷಜಕೃತೋಹ ವಾ ಏಷಯಜ್ಞೋ ಯತ್ರೈವಂ ವಿದ್ಬ್ರಹ್ಮಾ ಭವತಿ(8)**

ತಾ॥ ಯಜುರ್ವೇದ ಮಂತ್ರಗಳಿಂದ ಯಜ್ಞದಲ್ಲಿ ದೋಷಗಳು ಕಾಣಿಸಿಕೊಂಡಲ್ಲಿ, ದಕ್ಷಿಣಾಗ್ನಿ-ಯೊಂದಿಗೆ "ಭುವ ಸ್ವಾಹಾ" ಎನ್ನುವ ಮಂತ್ರದೊಂದಿಗೆ ಹವಿಸ್ಸನ್ನು ಸಮರ್ಪಿಸಬೇಕು. ಈ ಯಜುರ್ವೇದ ಮಂತ್ರಗಳ ಶಕ್ತಿಯಿಂದ ಯಜ್ಞ ದೋಷಗಳು ಉಪಶಮನ ಹೊಂದುತ್ತವೆ. ಸಾಮವೇದ ಮಂತ್ರಗಳಿಂದ ಯಜ್ಞದಲ್ಲಿ ದೋಷವೇರ್ಪಟ್ಟರೆ "ಸುವಃ, ಸ್ವಾಹಾ" ಎಂಬ ಮಂತ್ರದೊಂದಿಗೆ ಅಹವನೀಯಾಗ್ನಿಯೊಂದಿಗೆ ಹವಿಸ್ಸನ್ನು ಸಮರ್ಪಿಸಬೇಕು. ಆಗ ಆ ಸಾಮಮಂತ್ರಗಳಿಂದಾದ ದೋಷಗಳಿಂದ ಉಂಟಾದ ದೋಷಗಳು ದೂರವಾಗಿ ಯಜ್ಞವು ವೀರ್ಯವಂತವಾಗುವುದು. ಚಿನ್ನವನ್ನು ಉಪ್ಪಿನೊಂದಿಗೆ ಸೇರಿಸಿದಂತೆ, ಬೆಳ್ಳಿಯನ್ನು ಬಂಗಾರದೊಂದಿಗೆ ಸೇರಿಸಿದಂತೆ, ತವರವನ್ನು

ಬೆಳ್ಳಿಯೊಂದಿಗೆ ಸೇರಿಸಿದಂತೆ, ಸೀಸವನ್ನು ತವರದೊಂದಿಗೆ ಸೇರಿಸಿದಂತೆ, ಕಬ್ಬಿಣವನ್ನು ಸೀಸ-ದೊಂದಿಗೆ ಸೇರಿಸಿದಂತೆ, ಮರಮುಟ್ಟನ್ನು ಕಬ್ಬಿಣದೊಂದಿಗೆ ಸೇರಿಸಿದಂತೆ, ಕಟ್ಟಿಗೆಯನ್ನು ಚರ್ಮ-ದೊಂದಿಗೆ ಸೇರಿಸಿದಂತೆ. ಬ್ರಾಹ್ಮಣ ಋತ್ವಿಕ್ಕು ಮೂರು ವೇದಗಳಲ್ಲಿನ ದೇವತೆಗಳ ಅನುಗ್ರಹವನ್ನು ಪಡೆದು ಯಜ್ಞ ದೋಷಗಳನ್ನು ನಿವಾರಿಸುವನು. ಬ್ರಾಹ್ಮಣ, ಋತ್ವಿಕ್ಕು, ಯಜ್ಞವನ್ನು, ಪ್ರಕಾಶಮಾನವಾಗಿ ಜರುಗುವಂತೆ ನಿರ್ವಹಿಸುವನು. (ಮೌನಶೀಲನಾದ ಋತ್ವಿಕ್ಕೇ ಬ್ರಹ್ಮನಾಗಿರುವನು.)

**ಮಂ.ಶ್ಲೋ.॥ ಏಷ ಹ ವಾ ಉದಕ್ಪ್ರವಣೋ ಯಜ್ಞೋ ಯತ್ರೈವಂ ವಿದ್ಬ್ರಹ್ಮಾ ಭವತ್ಯೇವಂ ವಿದಂ ಹವಾ ಏಷಾ ಬ್ರಹ್ಮಾಣಮನುಗಾಥಾ ಯತೋ ಯತ ಆವರ್ತತೇ ತತ್ತದ್ಗಚ್ಛತಿ (9) ಮಾನವೋ ಬ್ರಹ್ಮೈವೈಕ ಋತ್ವಿಕ್ಕುರೂನಶ್ವಾಭಿರಕ್ಷತ್ಯೇವಂ ವಿದ್ಧವೈ ಬ್ರಹ್ಮಾ ಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ತಸ್ಮಾದೇವಂ ವಿದಮೇವ ಬ್ರಹ್ಮಾಣಂ ಕುರ್ವೀತ ನಾನೇವಂ ವಿದಂ ನಾನೇವಂ ವಿದಮ್ (10)**

ತಾ॥ ಬ್ರಾಹ್ಮಣ ಋತ್ವಿಕ್ಕು ಅರಿತು ನಿರ್ವಹಿಸಿದಾಗ ಆ ಯಜ್ಞವು ಉತ್ತರ ದಿಕ್ಕನ್ನು ಪಾವನ ಮಾಡುತ್ತದೆ. ಈ ಕೆಳಗೆ ತಿಳಿಸಿದ ರೀತಿಯಲ್ಲಿ ಬ್ರಾಹ್ಮಣ ಋತ್ವಿಕ್ಕು ವೇದಗಾನವನ್ನು ಮಾಡುತ್ತಿರ್ದ್ದಾನೆ. "ಯತೋಯತ ಅವರ್ತತೆ ತತ್ತದ್ಗಚ್ಛತಿ" (ಯಜ್ಞ ನಿರ್ವಹಣೆಯಲ್ಲಿ ಯಾವಾಗ ತೊಂದರೆ-ಯುಂಟಾದರೂ ಬ್ರಾಹ್ಮಣ ಋತ್ವಿಕ್ಕು ಹೋಗುವನು.) ಅಶ್ವವು ಸವಾರನನ್ನು ತನ್ನನ್ನು ರಕ್ಷಿಸುವಂತೆ ಬ್ರಾಹ್ಮಣ ಋತ್ವಿಕ್ಕು ಮಾತ್ರವೇ ಯಜ್ಞದಲ್ಲಿ ಋತ್ವಿಕ್ಕರೆಲ್ಲರನ್ನೂ ಕಾಪಾಡುತ್ತಿರುತ್ತಾನೆ. ಯಜ್ಞವನ್ನು, ಯಜಮಾನನನ್ನು ಎಲ್ಲರನ್ನೂ ಬ್ರಾಹ್ಮಣ ಋತ್ವಿಕ್ಕು ಕಾಪಾಡುತ್ತಾನೆ. ಆದ್ದರಿಂದ ವೇದವಿಜ್ಞಾನ, ಯಜ್ಞ ವಿಜ್ಞಾನವನ್ನು ಚೆನ್ನಾಗಿ ತಿಳಿದಿರುವಂತಹ ಪಂಡಿತನನ್ನು ಮಾತ್ರವೇ ಬ್ರಾಹ್ಮಣ ಋತ್ವಿಕ್ಕನನ್ನಾಗಿ ನೇಮಿಸಬೇಕು. (ನಾಲ್ಕನೆಯ ಪ್ರಪಾಠಕದಲ್ಲಿ 17 ಖಂಡಗಳಿದ್ದು 78 ಮಂತ್ರಗಳನ್ನೊಳಗೊಂಡಿವೆ).

## ಪಞ್ಚಮ ಪ್ರಪಾಠಕ – ಪ್ರಥಮ ಖಂಡ

**ಮಂ.ಶ್ಲೋ.॥ ಓಮ್ ಯೋಽವಹ್ಯೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಹವೈ ಶ್ರೇಷ್ಠಶ್ಚ ಭವತಿ ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ (1) ಯೋಹವೈ ವಸಿಷ್ಠಂ ವೇದ ವಸಿಷ್ಠೋ ಹ ಸ್ವಾನಾಂ ಭವತಿ ವಾಗ್ವಾವ ವಸಿಷ್ಠಃ (2) ಯೋಹವೈ ಪ್ರತಿಷ್ಠಾಂ ವೇದ ಪ್ರತಿಹತಿಷ್ಠತ್ಯಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಚಕ್ಷುರ್ವಾವಪ್ರತಿಷ್ಠಾ (3) ಯೊಹವೈ ಸಮ್ಪದಂ ವೇದ ಸಂಹಾಸ್ಮೈ ಕಾಮಾಃ ಪದ್ಯನ್ತೇದೈವಾಶ್ಚ ಮಾನುಷಾಶ್ಚ ಶ್ರೋತ್ರಂ ವಾವ ಸಮ್ಪತ್ (4) ಯೋ ಹ ವಾ ಆಯತನಂ ವೇದಾಯತನಂ ಹ ಸ್ವಾನಾಂ ಭವತಿ ಮನೋ ಹವಾ ಆಯತನಮ್ (5) ಅಥ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇಽಹಂ ಶ್ರೇಯಾನಸ್ಮ್ಯಹಂ ಶ್ರೇಯಾನಸ್ಮೀತಿ ತೇಹಾ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುರ್ಭಗವನ್ ಕೋ ನಶ್ರೇಷ್ಠಇತಿ (6)**

ತಾ॥ ಯಾರು ಜ್ಯೇಷ್ಠವನ್ನು, ಶ್ರೇಷ್ಠವೆಂದು ಅದನ್ನು ತಿಳಿದುಕೊಂಡಿರುವನೋ, ಆತ ಜ್ಯೇಷ್ಠನು ಶ್ರೇಷ್ಠನು ಆಗುವನು. ಪ್ರಾಣವು ಜ್ಯೇಷ್ಠವೂ ಶ್ರೇಷ್ಠವೂ ಆಗಿದೆ. ವಸಿಷ್ಠ ಮಹರ್ಷಿಯನ್ನು ತಿಳಿದು

ಕೊಂಡವನು ತನ್ನ ಬೃಂದದಲ್ಲಿ, ವಸಿಷ್ಠನೇ ಆಗುವನು. ವಾಕ್ಕೇ ವಸಿಷ್ಠ. ಪ್ರತಿಷ್ಠೆಯನ್ನು ಹೊಂದಿದವನು, ಅದನ್ನು ತಿಳಿದುಕೊಂಡವನು ಇಹಪರ ಲೋಕಗಳಲ್ಲಿ ಪ್ರತಿಷ್ಠಿತನಾಗುವನು. ನೇತ್ರವೇ ಪ್ರತಿಷ್ಠೆಯನ್ನು ಹೊಂದಿರುವಂತಹುದು. ಸಂಪತ್ತು ಉಳ್ಳ ಅದನ್ನು (ಶ್ರೋತ್ರದಿಂದ ವೇದ ಶ್ರವಣ ನಂತರ ಕರ್ಮಾನುಷ್ಠಾನ, ತತ್ವಫಲವನ್ನು ಹೊಂದುವುದು ಇತ್ಯಾದಿ ಸಂಪತ್ತು) ಯಾರು ತಿಳಿದುಕೊಳ್ಳುವನೋ, ದೇವತೆಗಳು ಆ ಮನುಷ್ಯರನ್ನು ಅವರ ಕೋರಿಕೆಗಳು ಈಡೇರುವಂತೆ ಮಾಡುವರು. ಆದ್ದರಿಂದ ಶ್ರೋತ್ರವೇ ಸಂಪತ್ತು. ಆಯತನವನ್ನು ತಿಳಿದವನು ತನ್ನ ಬಂಧುಗಳಿಗೆ ಆಶ್ರಯವಾಗುತ್ತಾನೆ. ಇಲ್ಲವೆ ತನ್ನೊಂದಿಗೆ ಸೇರಿದವರಿಗೆ ಆಶ್ರಯ ಸ್ಥಾನವಾಗಿರುತ್ತಾನೆ. ಮನಸ್ಸೇ ಆಯತನವು. ಅಂತಹ ಪ್ರಾಣಗಳು (ಇಂದ್ರಿಯಗಳು) ನಾನು ಶ್ರೇಷ್ಠ ನಾನು ಶ್ರೇಷ್ಠನೆಂದು ವಾದ ಮಾಡಲಾರಂಭಿಸಿದವು. (ಆಗ) ಇಂದ್ರಿಯಗಳು ತನ್ನ ತಂದೆಯಾದ ಪ್ರಜಾಪತಿ ಬಳಿಗೆ ಹೋಗಿ ಭಗವನ್ ನಮ್ಮಲ್ಲಿ ಶ್ರೇಷ್ಠರು ಯಾರು? ಎಂದು ಪ್ರಶ್ನಿಸಿದವು.

**ಮಂ.ಶ್ಲೋ.॥ ತಾನ್ ಹೋವಾಚ ಯಸ್ಮಿನ್ ವ ಉತ್ಕ್ರಾನ್ತೇ ಶರೀರಂ ಪಾಪಿಷ್ಠತರಮಿವ ದೃಶ್ಯೇತ ಸ ವಶ್ಶ್ರೇಷ್ಠ ಇತಿ (7) ಸಾಹ ವಾಗುಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕ ತರ್ತೇ ಮಜ್ಜೀವಿತುಮಿತಿ ಯಥಾ ಕಲಾ ಅವದನ್ತಃ ಪ್ರಾಣನ್ತಃ ಪ್ರಾಣೇನ ಪಶ್ಯನ್ತ –ಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹವಾಕ್ (8) ಚಕ್ಷುರ್ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇಮಜ್ಜೀವಿತು –ಮಿತಿ ಯಥಾಽನ್ಧಾ ಅಪಶ್ಯನ್ತಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಶೃಣ್ವನ್ತಃ ಶ್ರೋತ್ರೇಣ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹ ಚಕ್ಷುಃ (9) ಶ್ರೋತ್ರಂ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇಮಜ್ಜೀವಿತುಮಿತಿ ಯಥಾ ಬಧಿರಾ ಅಶೃಣ್ವನ್ತಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹ ಶ್ರೋತ್ರಮ್ ॥ (10)**

ತಾ॥ ನಿಮ್ಮಲ್ಲಿ ಯಾರು ಹೊರಟುಹೋದಾಗ ಶರೀರವು ಅತ್ಯಂತ ಅಶುಚಿಯಾಗಿ ಪಾಪಭೂಯಿಷ್ಠವಾಗುವುದೋ ಆತನೇ ಶ್ರೇಷ್ಠ ಎಂದು ಪ್ರಜಾಪತಿಯು ಹೇಳಿದ. ವಾಗೀಂದ್ರಿಯವು ಆಗ ದೇಹದಿಂದ ಹೊರಕ್ಕೆ ಹೋಗಿ ಒಂದು ಸಂವತ್ಸರ ಹೊರಗೇ ಇದ್ದು ಮತ್ತೆ ಬಂದು ದೇಹದಲ್ಲಿ ಸೇರಿತು. ನಾನು ಇಲ್ಲದಿದ್ದಾಗ ಈ ದೇಹವು ಜೀವಿಸಿತ್ತೇ ಎಂದು ಪ್ರಶ್ನಿಸಿತು. ಪ್ರಾಣವಿದ್ದು ಮೂಕನಂತೆ, ಕೇಳುತ್ತಾ, ನೋಡುತ್ತಾ, ಮನಸ್ಸಿನಲ್ಲಿ ಆಲೋಚಿಸುತ್ತಾ, ಈ ದೇಹವು ಜೀವಿಸಿತ್ತು, ಎಂದು ಉತ್ತರ ಬಂದಾಗ ವಾಗೀಂದ್ರಿಯವು ಏನೂ ಮಾಡಲಾಗದೆ ಎಂದಿನಂತೆ ದೇಹದಲ್ಲಿದ್ದುಬಿಟ್ಟಿತು. ಅನಂತರ ನೇತ್ರೇಂದ್ರಿಯವು ಸಹ ಒಂದು ಸಂವತ್ಸರ ಕಾಲ ಹೊರಕ್ಕೆ ಹೋಗಿ, ಒಂದು ವರ್ಷ ಕಾಲ ಹೊರಗೇ ಇದ್ದು ನಂತರ ಬಂದು ದೇಹದಲ್ಲಿ ಸೇರಿತು. ನಾನು ಇಲ್ಲದಿದ್ದಾಗ ನೀವು ಯಾವ ರೀತಿ ಇದ್ದೀರಿ? ಎಂದು ಪ್ರಶ್ನಿಸಲು, ಅಂಧನು ಇದ್ದಂತೆ ಜೀವಿಸಿಯೇ ಇದ್ದೆವು ಎಂದು ಹೇಳಲು ಆ ಮಾತನ್ನು ಕೇಳಿದ ನೇತ್ರವು ಮಾಮೂಲಿನಂತೆ ಶರೀರದೊಳಕ್ಕೆ ಸೇರಿಕೊಂಡಿತು. ಅದೇ ರೀತಿಯಾಗಿ ಶ್ರೋತ್ರೇಂದ್ರಿಯವು ಸಹ ಹೊರಕ್ಕೆ ಹೋಯಿತು. ಒಂದು ಸಂವತ್ಸರ ಕಾಲ ಹೊರಗಿದ್ದು ಬಂದು

ಪ್ರಶ್ನಿಸಿತು. ನಾವು ಕಿವುಡರಂತೆ ಬದುಕಿಯೇ ಇದ್ದೆವೆಂದು ಉತ್ತರ ಬರಲು ಆ ಶ್ರೋತೃವು ಮತ್ತೆ ದೇಹದಲ್ಲಿ ಪ್ರವೇಶಿಸಿ ಮಾಮೂಲಾಗಿಯೇ ಇದ್ದುಬಿಟ್ಟಿತು.

ಮಂ.ಶ್ಲೋ.॥ **ಮನೋಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇಮಜ್ಜೀವಿತುಮಿತಿ ಯಥಾ ಬಾಲಾ ಅಮನಸಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣೈವಮಿತಿ ಪ್ರವಿವೇಶ ಹ ಮನಃ (11) ಅಥ ಹ ಪ್ರಾಣ ಉಚ್ಚಿಕ್ರಮಿಷನ್ ಸ ಯಥಾ ಸುಹಯಃ ಪಡ್ವೀಶಶಂಕೂನ್ ಸಂಖಿದೇ ದೇವಮಿತರಾನ್ ಪ್ರಾಣಾನ್ ಸಮಖಿದತ್ತಂ ಹಾಭಿ ಸಮೇತ್ಯೋಚುರ್ಭಗವನ್ನೇಧಿ ತ್ವಂ ನಃಶ್ರೇಷ್ಠೋಽಸಿ ಮೋತ್ಕ್ರಮೀರಿತಿ (12) ಅಥಹೈನಂ ವಾಗುವಾಚ ಯದಹಂ ವಸಿಷ್ಠಾಸ್ಮಿ ತ್ವಂ ತದ್ವಸಿಷ್ಠೋಽಸೀತ್ಯಥ ಹೈನಂ ಚಕ್ಷುರುವಾಚ ಯದಹಂ ಪ್ರತಿಷ್ಠಾಸ್ಮಿ ತ್ವಂ ತತ್ ಪ್ರತಿಷ್ಠಾಸೀತಿ (13) ಅಥ ಹೈನಂ ಶ್ರೋತ್ರಮುವಾಚ ಯದಹಂ ಸಂಪದಸ್ಮಿ ತ್ವಂ ತತ್ಸಮ್ಪದಸೀತ್ಯಥ ಹೈನಂ ಮನ ಉವಾಚ ಯದಹಮಾಯತನಮಸ್ಮಿ ತ್ವಂ ತದಾಯತನಮಸೀತಿ (14) ನವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತ್ಯಾಚಕ್ಷತೇ ಪ್ರಾಣಾ ಇತ್ಯೇವಾಚಕ್ಷತೇ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ (15)**

ತಾ॥ ಆನಂತರ ಮನಸ್ಸು ಸಹ ಒಂದು (ವರ್ಷ) ಸಂವತ್ಸರ ಕಾಲ ಹೊರಕ್ಕೆ ಹೋಗಿ ಮತ್ತೆ ಬಂದು ನಾನು ಇಲ್ಲದೆ ನಿಮಗೆ ಹೇಗೆನ್ನಿಸಿತು ಎಂದು ಪ್ರಶ್ನಿಸಲು, ಮನಸ್ಸು ಇಲ್ಲದವನಂತೆ ಇದ್ದೆವು ಎಂದು ಹೇಳಲು, ಮತ್ತೆ ಮನಸ್ಸು ಶರೀರದೊಳಕ್ಕೆ ಪ್ರವೇಶಿಸಿತು. ಆಮೇಲೆ ಪ್ರಾಣವು ಹೊರಕ್ಕೆ ಹೋಗಲು ಸಿದ್ಧವಾಯಿತು. ಆದರೆ ಉತ್ತಮಾಶ್ವವು ತನ್ನನ್ನು ಕಟ್ಟಿ ಹಾಕಿದ ಹಗ್ಗವನ್ನು ಕಿತ್ತುಕೊಳ್ಳಲು ಪ್ರಯತ್ನಿಸಿದಂತೆ, (ಪ್ರಾಣವು) ಹೊರಕ್ಕೆ ಹೋಗಲು ಉಪಕ್ರಮಿಸುತ್ತಿರುವಂತೆಯೇ, ಮುಖ್ಯ ಪ್ರಾಣವು ಉಳಿದ ಯಾವಚ್ಛಕ್ತಿಗಳನ್ನು ಶರೀರದಿಂದ ಮೇಲಕ್ಕೆತ್ತಿಬಿಟ್ಟಿತು. ಆಗ ಆ ಶಕ್ತಿಗಳೆಲ್ಲ ಮುಖ್ಯಪ್ರಾಣದ ಬಳಿಗೆ ಬಂದು ''ಹೇ ಭಗವನ್! ನೀನೇ ನಮ್ಮ ಸ್ವಾಮಿಯಾಗಿರುವವನು. ನೀನೇ ನಮ್ಮಲ್ಲೆಲ್ಲ ಶ್ರೇಷ್ಠನಾದವನು. ನೀನು ಹೊರಟು ಹೋಗಬಾರದೆಂದು ಬಿನ್ನವಿಸಿಕೊಳ್ಳುತ್ತಿದ್ದೇವೆ ಎಂದವು. ಆಗ ವಾಕ್ಕು ಮುಖ್ಯ ಪ್ರಾಣವನ್ನು ಕುರಿತು ನಾನು ವಸಿಷ್ಠನಾಗಿ ಇರುವುದು. (ಹಿರಿಯನಾಗಿ ಇರುವುದು) ನಿಜಕ್ಕೂ ನೀನು ಪ್ರತಿಷ್ಠನಾಗಿರುವುದರಿಂದಲೇ ಎಂದು ಹೇಳಿತು. ಹಾಗೆಯೇ ನಾನು ಆಶ್ರಯಸ್ಥಾನವಾಗಿರುವುದು ನಿಜ. ನಾನು ಭಾಗ್ಯವಂತನಾಗಿರುವುದು, ನೀನು ನಿಜವಾದ ಸಂಪದ್ಯುಕ್ತನಾದುದರಿಂದಲೇ, ಎಂದು ಶ್ರೋತ್ರವು ಹೇಳಿತು. ವಾಗೀಂದ್ರಿಯ, ನೇತ್ರೇಂದ್ರಿಯ, ಶ್ರೋತ್ರೇಂದ್ರಿಯ, ಮನಸ್ಸು ಇವೆಲ್ಲವೂ ಪ್ರತ್ಯೇಕ ಪ್ರತ್ಯೇಕವಾಗಿ ಚೈತನ್ಯವನ್ನು ಹೊಂದಿಲ್ಲ. ಇವೆಲ್ಲವನ್ನೂ ಪ್ರಾಣಗಳೆಂದು ಜನರು ಕರೆಯುವರು. ಈ ಇಂದ್ರಿಯಗಳೆಲ್ಲವೂ ಪ್ರಾಣವೇ ಹೊರತು ಬೇರೆಯಲ್ಲ.

## ಪಞ್ಚಮ ಪ್ರಪಾಠಕ – ದ್ವಿತೀಯ ಖಂಡ

ಮಂ.ಶ್ಲೋ.॥ **ಸಹೋವಾಚ ಕಿಂ ಮೇಽನ್ನಂ ಭವಿಷ್ಯತೀತಿ ಯತ್ಕಿಂಚಿದಿದ ಮಾಶ್ವಭ್ಯ ಆ ಶಕುನಿಭ್ಯ ಇತಿ ಹೋಚುಸ್ತದ್ವಾ ಏತದನಸ್ಯಾನ್ನ ಮನೋ ಹ ವೈ ನಾಮ ಪ್ರತ್ಯಕ್ಷಂ ನ ಹ ವಾ ಏವಂ ವಿಧಿ**

ಕಿಞ್ಚ ನಾನನ್ನಂ ಭವತೀತಿ (1) ಸ ಹೋವಾಚ ಕಿಂ ಮೇವಾಸೋ ಭವಿಷ್ಯತೀತ್ಯಾಪ ಇತಿ ಹೋಚುಸ್ತಸ್ಮಾದ್ವಾ ಏತದಶಿಷ್ಯನ್ತಃ ಪುರಸ್ತಾಚ್ಚೋ ಪರಿಷ್ಟಾಚ್ಚಾದ್ಭಿಃ ಪರಿದಧತಿ ಲಮ್ಭುಕೋ ಹಾ ವಾಸೋ ಭವತ್ಯನಗ್ನೋ ಹ ಭವತಿ (2) ತದ್ಧೈತತ್ಸತ್ಯಕಾಮೋ ಜಾಬಾಲೋ ಗೋ ಶ್ರುತಯೇ ವೈ ಯಾ ಘ್ರಪದ್ಯಾಯೋಕ್ತ್ವೋವಾಚ ಯದ್ಯಪ್ಯೇನಚ್ಛುಷ್ಕಾಯ ಸ್ಥಾಣವೇ ಬ್ರೂಯಾಜ್ಜಾಯೇರನ್ನೇ ವಾಸ್ಮಿಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ॥ (3)

ತಾ॥ ಆ ಮುಖ್ಯ ಪ್ರಾಣವು, ನನಗೆ ಅನ್ನವೆಲ್ಲದೆ? ಎಂದು ಕೇಳಿತು. ಅಶ್ವದಿಂದ ಹಿಡಿದು ಪಕ್ಷಿಗಳವರೆಗೆ ಯಾವ ಅನ್ನವನ್ನು ಭುಜಿಸುವವೋ, ಅನ್ನವೆಲ್ಲವೂ ನಿನ್ನದೇ ಅಲ್ಲವೆ, ಎಂದು ಇತರ ಪ್ರಾಣಗಳು-(ಚಕ್ಷುರಾದಿಗಳು) ಹೇಳಿದವು. ಪ್ರತ್ಯಕ್ಷವಾಗಿರುವ ಪ್ರಾಣದ ಹೆಸರೇ ಅನ್ನ. ಈ ವಿಷಯವನ್ನು ತಿಳಿದುಕೊಂಡವರಿಗೆ ಸರ್ವವೂ ಅನ್ನರೂಪವೇ. ಅನ್ನವು ಯಾವುದೂ ಅಲ್ಲ. ಆತ-(ಆ ಪ್ರಾಣ) ಮತ್ತೆ ಪ್ರಶ್ನಿಸಿತು. ನನಗೆ, ವಸ್ತ್ರವೆಲ್ಲಿ ಇದೆ? ಎಂದು. ಜಲಗಳೆ ವಸ್ತ್ರವೆಂದು ಪ್ರಾಣಾದಿಗಳು ಹೇಳಿದವು. ಆದ್ದರಿಂದಲೇ ಭುಜಿಸುವವರು, ಮೊಟ್ಟ ಮೊದಲು ಬಾಯಿಗಿಟ್ಟುಕೊಂಡ ಮೇಲೆ ಜಲದಿಂದ ಅನ್ನವನ್ನು ಆಚ್ಛಾದಿಸುತ್ತಾರೆ. ಆ ಆಚಮನವೇ ವಸ್ತ್ರವೆಂದು ತಿಳಿದವರಿಗೆ ವಸ್ತ್ರಗಳು ಅಕ್ಷಯವಾಗುವುವು. ಅವನೆಂದಿಗೂ ಬೆತ್ತಲೆಯಾಗಿರುವುದಿಲ್ಲ. ಈ ವಿದ್ಯೆಯನ್ನು ಸತ್ಯಕಾಮ ಜಾಬಾಲಿಯು ವೈಯಾಘ್ರಪದ್ಯ ಗೋಶ್ರುತನಿಗೆ ಬೋಧಿಸಿದ. ಆದುದರಿಂದಲೇ ಇದನ್ನು ಒಣಗಿದ ಗಿಡಮರಕ್ಕೆ ಹೇಳಿದಾಗ, "ಆ ಗಿಡಮರಗಳು ಮತ್ತೆ ಚಿಗುರುವವು" ಎಂದು ಹೇಳುವುದು.

ಮಂ.ಶ್ಲೋ.॥ ಅಥ ಯದಿ ಮಹಜ್ಜಿಗಮಿಷೇದಮಾವಾಸ್ಯಾಯಾಂ ದೀಕ್ಷಿತ್ವಾ ಪೌರ್ಣಮಾಸ್ಯಾಂ ರಾತ್ರೌ ಸರ್ವೌಷಧಸ್ಯ ಮನ್ಥಂ ದಧಿಮಧುನೋರುಪಮಥ್ಯ ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹೇತ್ಯಗ್ನಾ-ವಾಜ್ಯಸ್ಯ ಹುತ್ವಾ ಮನ್ಥೇ ಸಮ್ಪಾತಮವನಯೇತ್ (4) ವಸಿಷ್ಠಾಯ ಸ್ವಾಹೇತ್ಯಗ್ನಾ ವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ ಪ್ರತಿಷ್ಠಾಯೈ ಸ್ವಾಹೇತ್ಯಗ್ನಾ ವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ಸಮ್ಪದೇ ಸ್ವಾಹೇತ್ಯಗ್ನಾ ವಾಜ್ಯಸ್ಯ ಹುತ್ವಾ ಮನ್ಥೇ ಸಮ್ಪಾತಮವನಯೇದಾಯತನಾಯ ಸ್ವಾಹೇತ್ಯಗ್ನಾ ವಾಜ್ಯಸ್ಯ ಹುತ್ವಾಮನ್ಥೇ ಸಮ್ಪಾತ ಮವನಯೇತ್ (5) ಅಥ ಪ್ರತಿಸೃಪ್ಯಾಞ್ಜಲೌ ಮನ್ಥಮಾಧಾಯ ಜಪತ್ಯಮೋ ನಾಮಾಸ್ಯಮಾಹಿತೇ ಸರ್ವಮಿದಂ ಸಹಿ ಜ್ಯೇಷ್ಠಃ ಶ್ರೇಷ್ಠೋ ರಾಜಾಽಧಿಪತಿಃ ಸಮಾ ಜ್ಯೇಷ್ಠಂ ಶ್ರೈಷ್ಠ್ಯಂ ರಾಜ್ಯಮಾಧಿಪತ್ಯಂ ಗಮಯ ತ್ವಹಮೇವೇದಂ ಸರ್ವಮಸಾನೀತಿ (6)

ತಾ॥ (ಈ ಮಂತ್ರಗಳೆಲ್ಲವನ್ನೂ ಮಹತ್ವ ಸಿದ್ಧಿಗಾಗಿ ಉಚ್ಚರಿಸುವಂತಹುದು. ಮಂಥನವೆನ್ನುವ ಯಜ್ಞವನ್ನು ಮಾಡುವ ವಿಧಾನಗಳನ್ನು ತಿಳಿಸಲಾಗಿದೆ.) ಪ್ರಾಣ ವಿಜ್ಞಾನವನ್ನು ತಿಳಿದುಕೊಂಡವರು ಮಹತ್ವ ಸಿದ್ಧಿಗಳಿಗಾಗಿ ಈ ಯಜ್ಞ ವಿಧಾನಗಳನ್ನು ತಿಳಿದುಕೊಂಡು ಆಚರಿಸಬೇಕು. ಅಮಾವಾಸ್ಯೆ ಕಳೆದ ಕೂಡಲೇ ಯಾಗ ದೀಕ್ಷೆಯನ್ನು ಪ್ರಾರಂಭಿಸಬೇಕು. ಪೌರ್ಣಮಿಯಂದು ಪೂರ್ತಿ ಮಾಡಬೇಕು. ಪೌರ್ಣಮಿಯ ದಿನ ಒಂದು ಪಾತ್ರೆಯಲ್ಲಿ ಮೊಸರು, ಜೇನುತುಪ್ಪ, ಸರ್ವಮೂಲಿಕೆಗಳನ್ನು ಸೇರಿಸಿ ಅದನ್ನು ಯಜ್ಞಾಗ್ನಿಯಲ್ಲಿ ಹವಿಸ್ಸನ್ನಾಗಿ ಸಮರ್ಪಿಸಬೇಕು. "ಜ್ಯೇಷ್ಠಾಯ, ಶ್ರೇಷ್ಠಾಯ ಸ್ವಾಹಾ"

ಎನ್ನುವ ಮಂತ್ರಗಳನ್ನು ಹೇಳಿ ಹವಿಸ್ಸನ್ನು ಸಮರ್ಪಿಸಬೇಕು. ಉಳಿದ ನಿರ್ಮಾಲ್ಯವನ್ನು ಕಸದ ರಾಶಿಯಲ್ಲಿ ಬೇರೆಯಾಗಿ ಹಾಕಬೇಕು. **"ವಸಿಷ್ಠಾಯ ಸ್ವಾಹಾ"** ಎಂಬ ಮಂತ್ರದೊಂದಿಗೆ ಮತ್ತೆ ಹವಿಸ್ಸುಗಳನ್ನು ಸಮರ್ಪಿಸಬೇಕು. ಉಳಿದುದೆಲ್ಲವನ್ನು ಒಂದು ಮೂಲೆಯಲ್ಲಿ ಎಸೆಯಬೇಕು. ಆಜ್ಯಾಧಾರೆಯೊಂದಿಗೆ (ತುಪ್ಪ) **"ಪ್ರತಿಷ್ಠಾಯೈ ಸ್ವಾಹಾ"** ಎನ್ನುವ ಮಂತ್ರಗಳನ್ನು ಹೇಳುತ್ತಾ ಪ್ರತ್ಯೇಕವಾಗಿ ಏರ್ಪಡಿಸಿರುವ ಅಗ್ನಿಯಲ್ಲಿ ಹವಿಸ್ಸುಗಳನ್ನು ಸಮರ್ಪಿಸಬೇಕು. ಐಶ್ವರ್ಯದ ನಿಮಿತ್ತವಾಗಿ ಪ್ರತ್ಯೇಕವಾಗಿ ಹವಿಸ್ಸು-ಗಳನ್ನು ಮೇಲೆ ತಿಳಿಸಿರುವ ವಿಧಾನದೊಂದಿಗೆ **"ಸಂಪದೇ ಸ್ವಾಹಾ"** ಎಂದು ಸಮರ್ಪಿಸಬೇಕು. ಅದೇ ವಿಧವಾಗಿ ಗೃಹಗಳ ನಿಮಿತ್ತವಾಗಿ ಹವಿಸ್ಸುಗಳನ್ನು ಅಜ್ಯಾಧಾರೆಗಳೊಂದಿಗೆ **"ಆಯತನಾಯ ಸ್ವಾಹಾ"** ಎನ್ನುತ್ತಾ ಸಮರ್ಪಿಸಬೇಕು. ಹವಿಸ್ಸುಗಳಿರುವ ಪಾತ್ರೆ (ಮಡಕೆ)ಯನ್ನು ಕೈಯಲ್ಲಿ ಹಿಡಿದುಕೊಂಡು ಮಂತ್ರಗಳನ್ನು ಪಠಿಸಬೇಕು. **"ಇದಂ ಸಹಿ ಜ್ಯೇಷ್ಠಃ, ಶ್ರೇಷ್ಠಃ ರಾಜಾಧಿಪತಿಃ"** ಎನ್ನುವ ಮಂತ್ರವನ್ನು ಹೇಳಬೇಕು. ಈ ಪ್ರಾಣದೇವತೆ, ಸಕಲ ಸಂಪತ್ತುಗಳನ್ನೂ, ಆಯುರಾರೋಗ್ಯ ಭಾಗ್ಯಗಳನ್ನು ದಯಪಾಲಿಸಲಿ ಎಂದು ಪ್ರಾರ್ಥಿಸಬೇಕು.

ಮಂ.ಶ್ಲೋ.॥ **ಅಥ ಖಲ್ವೇತ ಯರ್ಚ್ಹಾಪಚ್ಛ (ಪೃಚ್ಛ್ಯ) ಆಚಾಮತಿ ತತ್ಸವಿತುರ್ವೃಣೀಮಹ ಇತ್ಯಾಚಾಮತಿ ವಯಂ ದೇವಸ್ಯ ಭೋಜನಮಿತ್ಯಾಚಾಮತಿ ಶ್ರೇಷ್ಠಂ ಸರ್ವಧಾತಮಮಿತ್ಯಾಚಾಮತಿ ತುರಂ ಭಗಸ್ಯ ಧೀಮಹೀತಿ ಸರ್ವಂ ಪಿಬತಿ, ನಿರ್ಣಿಜ್ಯಕಂ ಸಂಚಮಮಸಂ ವಾ ಪಶ್ಚಾದಗ್ನೇಃ ಸಂವಿಶತಿ ಚರ್ಮಣಿ ವಾ ಸ್ಥಣ್ಡಿಲೇ ವಾ ವಾಚಂ ಯಮೋಽಪ್ರಸಾಹಃ ಸ ಯದಿ ಸ್ತ್ರಿಯಂ ಪಶ್ಯೇತ್ಸಮೃದ್ಧಂ ಕರ್ಮೇತಿ ವಿದ್ಯಾತ್ (7) ತದೇಷಶ್ಲೋಕಃ ಯದಾ ಕರ್ಮಸು ಕಾಮ್ಯೇಷು ಸ್ತ್ರಿಽಯಂ ಸ್ವಪ್ನೇಷು ಪಶ್ಯತಿ, ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನ ನಿದರ್ಶನೇ ತಸ್ಮಿಂ ಸ್ವಪ್ನ ನಿದರ್ಶನೇ (8)**

ತಾ॥ ಅನಂತರ ಈ ಋಕ್ಕು ಮಂತ್ರಗಳನ್ನು ಪಠಿಸುತ್ತಾ ಪ್ರತಿ ಹೆಜ್ಜೆಗೂ ಆಚಮನವನ್ನು ಮಾಡಬೇಕು. ಪಠಿಸಬೇಕಾದ ಮಂತ್ರ **"ತತ್ಸವಿತುರ್ವೃಣೀ ಮಹೇ, ವಯಂ ದೇವಸ್ಯ ಭೋಜನಂ, ಶ್ರೇಷ್ಠಂ ಸರ್ವಥಾ ತಮಮ್, ತುರಂ ಭಗಸ್ಯ ಧೀಮಹಿ"** ಆಚಮನವನ್ನು ಮಾಡಿದ ಮೇಲೆ ಕಾಂಸ್ಯ (ಕಂಚಿನ) ಪಾತ್ರೆಯನ್ನು ಶುಭ್ರಗೊಳಿಸಿ ಜಲವನ್ನು ಕುಡಿಯಬೇಕು. ತೃಪ್ತಿಯಾಗಿ ಅನ್ನವನ್ನು ಭುಜಿಸ-ಬೇಕು. ಆ ನಂತರ ಅಗ್ನಿಕುಂಡದ ಪಕ್ಕದಲ್ಲೇ ಜಿಂಕೆಯ ಚರ್ಮದ ಮೇಲಾಗಲೀ, ನೆಲದ ಮೇಲಾಗಲೀ ಮಲಗಬೇಕು. ನೇಮದಿಂದ ವಾಕ್ಕನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಸ್ವಪ್ನದಲ್ಲಿ ಸ್ತ್ರೀಯು ಕಾಣಿಸಿಕೊಂಡಳೋ ಆಗ ಆ ಯಜ್ಞವು ಸಫಲವಾಯಿತೆಂದು ಭಾವಿಸಬೇಕು.

## ಪಞ್ಚಮ ಪ್ರಪಾಠಕ – ತೃತೀಯ ಖಂಡ

ಮಂ.ಶ್ಲೋ.॥ **ಶ್ವೇತಕೇತುರ್ವಾರುಣೇಯಃ ಪಞ್ಚಾಲಾನಾಂ ಸಮಿತಿಮೇಯಾಯ ತಂ ಹ ಪ್ರವಾಹಣೌ ಜೈಬಲಿರುವಾಚ ಕುಮಾರಾ ನು ತ್ವಾಶಿಷತ್ಪಿತೇತ್ಯನು ಹಿ ಭಗವ ಇತಿ (1) ವೇತ್ಥ ಯದಿತೋಽಧಿ ಪ್ರಜಾಃ ಪ್ರಯನ್ತೀತಿ ನ ಭಗವ ಇತಿ ವೇತ್ಥ ಯಥಾ ಪುನರಾವರ್ತನ್ತಾ3 ಇತಿ ನ ಭಗವ ಇತಿ ವೇತ್ಥ ಪಥೋ ದೇವಯಾನಸ್ಯ ಪಿತೃಯಾಣಸ್ಯ ಚ ವ್ಯಾವರ್ತನಾ3 ಇತಿ ನ ಭಗವ ಇತಿ**

**(2) ವೇತ್ಥ ಯಥಾಽಸೌ ಲೋಕೋ ನ ಸಮ್ಪೂರ್ಯತ3 ಇತಿ ನ ಭಗವ ಇತಿವೇತ್ಥ ಯಥಾ ಪಞ್ಚಮ್ಯಾಮಾಹುತಾ ವಾಪಃ ಪುರುಷವಚಸೋ ಭವನ್ತೀತಿ ನೈವ ಭಗವ ಇತಿ (3)**

ತಾ॥ ಅರುಣ ಮುನಿಯ ಮೊಮ್ಮಗನಾದ ಶ್ವೇತಕೇತು, ಒಮ್ಮೆ ಪಾಂಚಾಲರಾಜನ ಭವನಕ್ಕೆ ಬಂದ. ಜೀಬಲಿಯ ಮಗನಾದ ಪ್ರವಾಹಣನೆನ್ನುವ ರಾಜನು ಶ್ವೇತಕೇತುವನ್ನು ನೋಡಿ ಹೀಗೆ ಪ್ರಶ್ನಿಸಿದ. "ವತ್ಸಾ! ನಿಮ್ಮ ತಂದೆ ಎಲ್ಲ ವಿದ್ಯೆಗಳನ್ನು ಬೋಧಿಸಿದ್ದಾನಲ್ಲವೆ?" "ಸ್ವಾಮಿ ನಮ್ಮ ತಂದೆ ಎಲ್ಲವನ್ನೂ ಬೋಧಿಸಿದ್ದಾರೆ" ಎಂದು ಜವಾಬು ನೀಡಿದನು. ಪ್ರವಹಣನು: "ಸೃಷ್ಟಿಸಲಾದ ಜೀವಿಗಳೆಲ್ಲರೂ ಇಲ್ಲಿಂದ ಎಲ್ಲಿಗೆ ಹೋಗುವರೋ ನಿನಗೆ ತಿಳಿದಿದೆಯೇ?" ಶ್ವೇತಕೇತು ಹೇಳಿದ; "ಸ್ವಾಮೀ ನನಗೆ ತಿಳಿಯದು. 'ಪ್ರವಹಣ' ದೇವಯಾನ ಮಾರ್ಗಯಾನ, ಪಿತೃಯಾಣ ಮಾರ್ಗಗಳನ್ನು ಕುರಿತಾದ ವಿವರಗಳು ನಿನಗೆ ತಿಳಿಯದೆ? ಶ್ವೇತ: ಗುರುದೇವಾ ನನಗೆ ತಿಳಿಯದು. ಪ್ರವಹಣ: ಇತರ ಲೋಕಗಳು ಏಕೆ ಇಲ್ಲಿಂದ ಹೋಗುವ ಜನರಿಂದಲೇ ಸಂಪೂರ್ಣವಾಗುವುದಿಲ್ಲವೆಂದು ನಿನಗೆ ಗೊತ್ತೆ? ಶ್ವೇತಕೇತು; ರಾಜನ್ ನನಗೆ ಗೊತ್ತಿಲ್ಲ. ಪ್ರವಹಣ: ಪಂಚಮ ಹವಿಸ್ಸು, ಜಲ, ಪುರುಷ ಎನ್ನುವ ಸಂಜ್ಞೆಗಳನ್ನು ಹೇಗೆ ಹೊಂದುವುದೋ ನಿನಗೆ ಗೊತ್ತೆ?" ಶ್ವೇತ: "ನನಗೆ ಗೊತ್ತಿಲ್ಲ ಸ್ವಾಮಿ"

**ಮಂ.ಶ್ಲೋ.॥ ಅಥನು ಕಿಮನುಶಿಷ್ಟೋಽವೋಚಥಾ ಯೋಹೀಮಾನಿ ನವಿದ್ಯಾತ್ಕಥಂ ಸೋಽನುಶಿಷ್ಟೋಬ್ರವೀತೇತಿ ಸಹಾಯಸ್ತಃ ಪಿತುರರ್ಧಮೇಯಾಯ ತಂ ಹೋವಾಚಾನನು ಶಿಷ್ಯ ವಾವ ಕಿಲ ಮಾ ಭಗವಾನಬ್ರವೀದನುತ್ವಾಽಶಿಷಮಿತಿ (4) ಪಞ್ಚಮಾ ರಾಜನ್ಯ ಬನ್ಧುಃ ಪ್ರಶ್ನಾ ನಪ್ರಾಕ್ಷೀತ್ತೇಷಾಂ ನೈಕಞ್ಚ ನಾಶಕಂ ವಿವಕ್ತುಮಿತಿ ಸಹೋವಾಚ ಯಥಾ ಮಾತ್ವಂ ತದೈತಾನವದೋ ಯಥಾಹಮೇನಾಂ ನೈಕಞ್ಚ ನ ವೇದ ಯದ್ಯಹಮಿಮಾ ನ ವೇದಿಷ್ಯಂ ಕಥಂ ತೇ ನಾವಕ್ಷ್ಯಮಿತಿ (5)**

ತಾ॥ ನೀನು ಸರಿಯಾಗಿ ಕಲಿತುಕೊಳ್ಳಲಿಲ್ಲ! ಅಲ್ಲವೇ? ನಾನು ವಿದ್ಯೆಯನ್ನು ಕಲಿತಿರುವೆನೆಂದು ನೀನು ಏಕೆ ಹೇಳಿದೆ? ಈ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ತಿಳಿಯದಿರುವ ನೀನು ಗೊತ್ತಿದೆ ಎಂದು ಹೇಗೆ ಹೇಳಿದೆ? ಎಂದು ಪ್ರಹರಣನು ಪ್ರಶ್ನಿಸಿದ. ಶ್ವೇತಕೇತುವು ಮನಸ್ಸಿನಲ್ಲೇ ನೊಂದುಕೊಂಡು, ತಂದೆಯ ಬಳಿಗೆ ಬಂದು ತನಗೆ ವಿದ್ಯೆಯನ್ನು ಪೂರ್ತಿಯಾಗಿ ಕಲಿಸಿದ್ದೇನೆಂದು ಏಕೆ ಹೇಳಿದೆ ಎಂದು ಪ್ರಶ್ನಿಸಿದ. ರಾಜರ್ಷಿಯಾದ ಆ ಪ್ರಹರಣನು ನನ್ನನ್ನು ಐದು ಪ್ರಶ್ನೆಗಳನ್ನು ಕೇಳಿದ. ಆ ಪ್ರಶ್ನೆಗಳಲ್ಲಿ ಒಂದಕ್ಕೂ ನಾನು ಉತ್ತರ ಕೊಡಲಾರದೆ ಹೋದೆ ಎಂದ, ಶ್ವೇತಕೇತು ಅದೇ ಪ್ರಶ್ನೆಗಳನ್ನು ತಂದೆಯ ಮುಂದಿಟ್ಟ. ಅದಕ್ಕೆ ಶ್ವೇತಕೇತು, ಇಲ್ಲಿ ನೀನು ನನ್ನನ್ನು ಕೇಳಿದ ಪ್ರಶ್ನೆಗಳನ್ನು ನಾನು ಸಹ ಈಗಲೇ ಕೇಳುತ್ತಿರುವುದು. ಇದರ ಬಗ್ಗೆ ನನಗೇನೂ ಗೊತ್ತಿಲ್ಲ. ಈ ಉತ್ತರಗಳು ನನಗೆ ತಿಳಿದಿದ್ದರೆ ನಾನು ನಿನಗೆ ಹೇಳುತ್ತಿರಲಿಲ್ಲವೇ?" ಎಂದು ನುಡಿದ.

**ಮಂ.ಶ್ಲೋ.॥ ಸಹ ಗೌತಮೋ ರಾಜ್ಞೋಽರ್ಧಮೇಯಾಯ ತಸ್ಮೈಹ ಪ್ರಾಪ್ತಾಯಾರ್ಹಾಂ ಚಕಾರ ಸಹಪ್ರಾತಸ್ಸಭಾಗ ಉದೇಯಾಯ ತಂ ಹೋವಾಚ ಮಾನುಷಸ್ಯ ಭಗವನ್ಗೌತಮ ವಿತ್ತಸ್ಯ ವರಂ ವೃಣೀಥಾ ಇತಿ ಸ ಹೋವಾಚ ತವೈವ ರಾಜನ್ ಮಾನುಷಂ ವಿತ್ತಂ ಯಾಮೇವ**

**ಕುಮಾರಸ್ಯಾನ್ತೇ ವಾಚಮಭಾಷಥಾ ಸ್ತಾಮೇವ ಮೇ ಬ್ರೂಹೀತಿ (6) ಸಹ ಕೃಚ್ಛ್ರೀ ಬಭೂವ ತಂ ಹ ಚಿರಂ ವಸೇತ್ಯಾ ಜ್ಞಾಪಯಾಞ್ಚಕಾರ ತಂ ಹೋವಾಚ ಯಥಾ ಮಾ ತ್ವಂ ಗೌತಮಾ ವದೋ .ಯಥೇಯಂ ನ ಪ್ರಾಕ್ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ಗಚ್ಛತಿ ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂದಿತಿ ತಸ್ಮೈ ಹೋವಾಚ (7)**

ತಾ॥ ಆ ಮಾತನ್ನು ಕೇಳಿ ಗೌತಮನು ತಂದೆಯಾದ ರಾಜನಾದ ಪ್ರಹರಣನ ಬಳಿಗೆ ಕರೆದುಕೊಂಡುಹೋದ. ಆತನಿಗೆ ರಾಜನು ತಕ್ಕ ಯೋಗ್ಯವಾದ ಸತ್ಕಾರವನ್ನು ಮಾಡಿದ. ಪುನಃ ಗೌತಮನು ಮರುದಿನ ಬೆಳಗ್ಗೆಯೇ ರಾಜನ ಬಳಿಗೆ ಹೋದ. ಆ ರಾಜರ್ಷಿಯು "ಗೌತಮಾ! ಮನುಷ್ಯರಿಗೆ ಅವಶ್ಯವೆನಿಸಿರುವ ಸಮಸ್ತ ಸಂಪತ್ತುಗಳನ್ನು ನೀನು ಕೇಳಬಹುದು" ಎಂದ. ಅದಕ್ಕೆ ಗೌತಮನು ಮಹಾರಾಜಾ! "ಆ ಸಂಪತ್ತುಗಳೆಲ್ಲವೂ ನಿನ್ನ ಬಳಿಯೇ ಇರಲಿ, ನನ್ನ ಪುತ್ರನನ್ನು ಕೇಳಿದ ಪ್ರಶ್ನೆಗಳಿಗೆ ಉತ್ತರ ರೂಪವಾದ ತತ್ತ್ವಗಳನ್ನು ನನಗೆ ಬೋಧಿಸು" ಎಂದ. ಅದಕ್ಕೆ ಪ್ರವಾಹಣನು ಸ್ವಲ್ಪ ಆಲೋಚಿಸಿ, "ನೀನು ಇಲ್ಲಿ ಬಹುಕಾಲ ಬ್ರಹ್ಮಚರ್ಯ ವ್ರತದಲ್ಲಿರಬೇಕಾಗುತ್ತದೆ." ಎಂದು ಆಜ್ಞಾಪಿಸಿದ. ಸ್ವಲ್ಪ ಕಾಲ ಕಳೆದ ಮೇಲೆ "ಓ ಗೌತಮ ಮುನೀ! ಈಗ ನಾನು ನಿನಗೆ ಬೋಧಿಸುವ ವಿದ್ಯೆಯನ್ನು ಶ್ರವಣ ಮಾಡುವಂತಹವನಾಗು." ಬಹಳ ಹಿಂದೆ ಈ ವಿದ್ಯೆಯನ್ನು ಬ್ರಾಹ್ಮಣರಿಗೆ ಬೋಧಿಸಿರಲಿಲ್ಲವೆಂದು, ಪರಂಪರೆಯಾಗಿ ರಾಜರಿಗೆ ಮಾತ್ರವೇ ಉಪದೇಶಿಸಲಾಗುತ್ತಿತ್ತೆಂದು ಅರ್ಥವಾಗುತ್ತಿದೆ. ಆದ್ದರಿಂದ ಕ್ಷತ್ರಿಯರಿಗೆ ಇರುವ ಪ್ರಕಾಶವೇ ಸರ್ವ ವ್ಯಾಪ್ತವಾಗಿದೆ. ಬೋಧಿಸಬೇಕೆಂದು ಕೇಳಿಕೊಂಡಿದ್ದರಿಂದ ಈ ವಿಧವಾಗಿ ಬೋಧಿಸಿದೆ. (ಇದುವರೆಗೂ ಪಂಚಾಗ್ನಿ ವಿದ್ಯೆಯು ಕ್ಷತ್ರಿಯರ ಅಧೀನದಲ್ಲೇ ಇತ್ತು. ಕ್ಷತ್ರಿಯ ಪರಂಪರೆಯಾಗಿರುವ ವಿದ್ಯೆಯನ್ನು ಈಗಷ್ಟೇ ಬ್ರಾಹ್ಮಣರಿಗೆ ಬೋಧಿಸಲಾಗುತ್ತಿದೆ.)

## ಪಞ್ಚಮ ಪ್ರಪಾಠಕ – ಚತುರ್ಥ ಖಂಡ

**ಮಂ.ಶ್ಲೋ.॥ ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿಶ್ಚನ್ದ್ರಮಾ ಅಙ್ಗಾರಾ ನಕ್ಷತ್ರಾಣಿ ವಿಸ್ಫುಲಿಙ್ಗಾಃ (1) ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಸ್ಸೋಮೋ ರಾಜಾ ಸಮ್ಭವತಿ (2)**

ತಾ॥ ಓ ಗೌತಮ ಋಷಿ! ಈ ದ್ಯುಲೋಕವೇ ಅಗ್ನಿಯಾಗಿದೆ. ಆದಿತ್ಯ ಭಗವಾನನೇ ಸಮಿತ್ತು. ಕಿರಣಗಳೇ ಧೂಮ. ಹಗಲೇ ಜ್ವಾಲೆ. ಚಂದ್ರ, ಅಗ್ನಿ, ನಕ್ಷತ್ರಗಳೆಲ್ಲವೂ ಕಿರಣಗಳು. ಇಂದ್ರಿಯಾಭಿಮಾನಿ ದೇವತೆಗಳು ಈ ಅಗ್ನಿಯಲ್ಲಿ ಶ್ರದ್ಧೆಯೆನ್ನುವ ಆಹುತಿಯನ್ನು ಸಮರ್ಪಿಸುತ್ತಿದ್ದಾರೆ. ಆ ಹವಿಸ್ಸುಗಳಿಂದ ಸೋಮರಾಜನು ಜನಿಸುವನು.

## ಪಞ್ಚಮ ಪ್ರಪಾಠಕ – ಪಞ್ಚಮ ಖಂಡ

**ಮಂ.ಶ್ಲೋ.॥ ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶನಿರಙ್ಗಾರಾ ಹ್ರಾದನಯೋ ವಿಸ್ಫುಲಿಙ್ಗಾಃ (1) ತಸ್ಮಿನ್ನೇತಸ್ಮಿನ್ನಗ್ನೌ ದೇವಾಸ್ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷಂ ಸಮ್ಭವತಿ (2)**

ತಾ।। ಓ ಗೌತಮಾ! ಪರ್ಜನ್ಯನೇ ಅಥವಾ ಇಂದ್ರನೇ ಅಗ್ನಿ, ವಾಯುವೇ ಸಮಿಧೆ, ಮೇಘಗಳೇ ಹೊಗೆ ಮಿಂಚೇ ಜ್ವಾಲೆ (ಪ್ರಕಾಶ), ಗುಡುಗು ಸಿಡಿಲೇ ಅಗ್ನಿ, ಗಡಗಡಯೆನ್ನುವ ಶಬ್ದವೇ ಅಗ್ನಿ ಕಿರಣಗಳು. ಈ ಅಗ್ನಿಯಲ್ಲಿ ದೇವತೆಗಳು ಸೋಮರಾಜನಿಗೆ ಆಹುತಿ ನೀಡುತ್ತಾರೆ. ಆ ಆಹುತಿಯಿಂದ ಮಳೆಯು ಬೀಳುತ್ತದೆ.

## ಪಞ್ಚಾಮ ಪ್ರಪಾಠಕ – ಷಷ್ಠ ಖಂಡ

ಮಂ.ಶ್ಲೋ.।। ಪೃಥಿವೀ ವಾವ ಗೌತಮಾಗ್ನಿ ಸ್ತಸ್ಯಾಸ್ಸಂವತ್ಸರ ಏವ ಸಮಿದಾಕಾಶೋ ಧೂಮೋ ರಾತ್ರಿ-ರರ್ಚಿರ್ದಿಶೋಽಙ್ಗಾರಾ ಅವಾನ್ತರದಿಶೋ ವಿಸ್ಫುಲಿಙ್ಗಾಃ (1) ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವರ್ಷಂ ಜುಹ್ವತಿ ತಸ್ಯಾ ಆಹುತೇರನ್ನಂ ಸಮ್ಭವತಿ (2)

ತಾ।। ಪೃಥಿವಿಯೇ ಅಗ್ನಿ, ಸಂವತ್ಸರಗಳೇ ಸಮಿಧೆಗಳು. ಆಕಾಶವೇ ಧೂಮ. ರಾತ್ರಿಯೇ ಜ್ವಾಲೆ, ದಿಕ್ಕುಗಳೇ ಅಗ್ನಿ. ವಿದಿಕ್ಕುಗಳೇ (ದಿಕ್ಕುಗಳ ಮೂಲೆಗಳು) ಕಿರಣಗಳು. ಈ ಅಗ್ನಿಯಲ್ಲಿ ದೇವತೆಗಳು ವರ್ಷವನ್ನು ಹವನ ಮಾಡುವರು. ಈ ಆಹುತಿಗಳಿಂದ ಅನ್ನವು ಹುಟ್ಟುವುದು.

## ಪಞ್ಚಾಮ ಪ್ರಪಾಠಕ – ಸಪ್ತಮ ಖಂಡ

ಮಂ.ಶ್ಲೋ.।। ಪುರುಷೋ ವಾವ ಗೌತಮಾಗ್ನಿಸ್ತಸ್ಯ ವಾಗೇವ ಸಮಿತ್ಪ್ರಾಣೋ ಧೂಮೋ ಜಿಹ್ವಾಽರ್ಚಿಶ್ಚಕ್ಷು-ರಙ್ಗಾರಾಃ ಶ್ರೋತ್ರಂ ವಿಸ್ಫುಲಿಙ್ಗಾಃ (1) ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತೇ ರೇತಸ್ಸಮ್ಭವತಿ (2)

ತಾ।। ಓ ಗೌತಮಾ! ಈ ಪುರುಷನೇ, ಅಗ್ನಿ, ವಾಕ್ಕು ಸಮಿಧೆ, ಪ್ರಾಣವೇ ಧೂಮ, ಜಿಹ್ವೆಯೇ ಜ್ವಾಲೆ, ನೇತ್ರಗಳೇ ಅಗ್ನಿಕಿರಣಗಳು. ಈ ಅಗ್ನಿಯಲ್ಲಿ ದೇವತೆಗಳು ಅನ್ನವನ್ನು ಹೋಮ ಮಾಡುತ್ತಿದ್ದಾರೆ. ಆ ಆಹುತಿಗಳಿಂದ ರೇತಸ್ಸು ಹುಟ್ಟುವುದು.

## ಪಞ್ಚಾಮ ಪ್ರಪಾಠಕ – ಅಷ್ಟಮ ಖಂಡ

ಮಂ.ಶ್ಲೋ.।। ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದ್ಯದುಪಮನ್ತ್ರಯತೇ ಸಧೂಮೋ ಯೋನಿರರ್ಚಿರ್ಯದನ್ತಃ ಕರೋತಿ ತೇಽಙ್ಗಾರಾ ಅಭಿನನ್ದಾ ವಿಸ್ಫುಲಿಙ್ಗಾಃ (1) ತಸ್ಮಿನ್ನೇತಸ್ಮಿ-ನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾಃ ಆಹುತೇರ್ಗರ್ಭಸ್ಸಮ್ಭವತಿ. (2)

ತಾ।। ಓ ಗೌತಮಾ! ಯುವತಿಯೇ ಅಗ್ನಿ. ಉಪಸ್ಥೇ ಸಮಿಧೆ. ಸಂಕೇತವೇ ಹೊಗೆ (ಧೂಮ). ಯೋನಿಯೇ ಜ್ವಾಲೆ. ಮೈಥುನವೇ ಅಗ್ನಿ, ರತಿಸುಖವೇ ಕಿರಣಗಳು. ಈ ಅಗ್ನಿಯಲ್ಲಿ ಇಂದ್ರಾದಿ ದೇವತೆಗಳು ರೇತಸ್ಸನ್ನು ಹೋಮ ಮಾಡುವರು. ಆ ಆಹುತಿಯಿಂದ ಗರ್ಭವು ಉಂಟಾಗುವುದು. (ಈ ರೀತಿಯಾಗಿ ಶ್ರದ್ಧೆ, ಸೋಮ ವರ್ಷ, ಅನ್ನ, ವೀರ್ಯ – ಈ ಜಲಾಹುತಿಗಳನ್ನು ಕ್ರಮವಾಗಿ ದ್ಯುಲೋಕ, ಪರ್ಜನ್ಯ, ಪೃಥಿವಿ, ಪುರುಷ, ಯೋಷಾಗ್ನಿಗಳಲ್ಲಿ, ಹೋಮ ಮಾಡುವುದರಿಂದ, ಪುರುಷನು ಜನ್ಮ ತಾಳುತ್ತಿದ್ದಾನೆ. 5ನೆಯ ಆಹುತಿಯಿಂದ ಜಲವು ಈ ರೀತಿಯಾಗಿ (ಜೀವ) ಪುರುಷ ಸಂಜ್ಞೆಯನ್ನು ಹೊಂದುವುದು.)

## ಪಞ್ಚಮ ಪ್ರಪಾಠಕ – ನವಮ ಖಂಡ

**ಮಂ.ಶ್ಲೋ.॥ ಇತಿತು ಪಞ್ಚಮ್ಯಾಮಾಹುತಾ ವಾಪಃ ಪುರುಷವಚಸೋ ಭವನ್ತೀತಿ ಸ ಉಲ್ಬಾವೃತೋ ಗರ್ಭೋ ದಶ ವಾ ನವ ವಾ ಮಾಸಾನನ್ತಶ್ಶಯಿತ್ವಾ ಯಾವದ್ವಾಽಥ ಜಾಯತೇ (1) ಸ ಜಾತೋ ಯಾವದಾಯುಷಂ ಜೀವತಿ ತಂ ಪ್ರೇತಂ ದಿಷ್ಟಮಿತೋಽಗ್ನಯ ಏವ ಹರನ್ತಿ ಯತ ಏವೇತೋ ಯತಸ್ಸಮ್ಭೂತೋ ಭವತಿ (2)**

ತಾ॥ ಈ ರೀತಿಯಾಗಿ ಜಲವೇ ಪುರುಷನೆಂಬ ಸಂಜ್ಞೆಯನ್ನು ಹೊಂದಿದವನಾಗುವನು. ಜರಾಯುವೆಂಬ (ಗರ್ಭಕೋಶ) ತೆಳ್ಳಗಿನ ಚೀಲದಲ್ಲಿ ಸುತ್ತಿದಂತಹ ಆ ಶಿಶುವು (ಗರ್ಭದಲ್ಲಿ) ಒಂಭತ್ತು ಇಲ್ಲವೇ ಹತ್ತು ತಿಂಗಳು ಮಾತೃಗರ್ಭದಲ್ಲಿ ಮಲಗಿ ಆಮೇಲೆ ಜನ್ಮ ತಳೆಯುವುದು. ಹುಟ್ಟಿದವನು ಆಯುಸ್ಸು ಇರುವಷ್ಟು ಕಾಲ ಬದುಕುವನು. ಸತ್ತವನನ್ನು ಇಲ್ಲಿಂದ ಆಯಾ ಅಗ್ನಿಗಳು ಅವರವರ ಕರ್ಮಾನುಸಾರವಾಗಿ ಆಯಾ ಲೋಕಗಳಿಗೆ ಕೊಂಡೊಯ್ಯುವವು. ಆತ ಯಾವ ಅಗ್ನಿಯಿಂದ ಬಂದಿದ್ದನೋ ಯಾವ ಅಗ್ನಿಗಳಿಂದ ಹುಟ್ಟಿರುವನೋ ಆ ಅಗ್ನಿಯೇ ಅವನನ್ನು ಕರೆದೊಯ್ಯುವುದು. ( ಈ ವಿವರಗಳೆಲ್ಲವೂ ಪ್ರಥಮ ಪ್ರಶ್ನೆಗೆ ಉತ್ತರ ಭೂಮಿಕೆಯಾಗಿ ಹೇಳಲಾಗಿದೆ.)

## ಪಞ್ಚಮ ಪ್ರಪಾಠಕ – ದಶಮ ಖಂಡ

**ಮಂ.ಶ್ಲೋ.॥ ತದ್ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿ ಸಮ್ಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷ ಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಞೇತಿ ಮಾಸಾಂ ಸ್ತಾನ್ (1) ಮಾಸೇಭ್ಯಸ್ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾ –ಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋಽಮಾನವಸ್ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಯಾನಃ ಪನ್ಥಾ ಇತಿ (2)**

ತಾ॥ ಈ ಮೇಲೆ ಹೇಳಿರುವ ಜ್ಞಾನವನ್ನು ಹೊಂದಿರುವವರು ಮತ್ತು ಅರಣ್ಯದಲ್ಲಿ ಶ್ರದ್ಧೆಯಿಂದ ತಪಸ್ಸನ್ನಾಚರಿಸುವವರು, ಅರ್ಚಿರಾದಿ (ಕಾಂತಿಯುಳ್ಳ) ಲೋಕಗಳನ್ನು ಹೊಂದುವರು. ಅಲ್ಲಿಂದ ಅಹರ್ಲೋಕ, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್, ಈ ಮಾರ್ಗದಲ್ಲಿ ಸಾಗುವರು. ಅಲ್ಲಿ ಅಮಾನುಷನಾದ ಪುರುಷನು ಇರುವನು. ಆತ ಅವನನ್ನು ಬ್ರಹ್ಮಲೋಕಕ್ಕೆ ಸೇರಿಸುವನು ಇದು ದೇವಯಾನ ಮಾರ್ಗ.

**ಮಂ.ಶ್ಲೋ.॥ ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಮ್ಭವನ್ತಿ, ಧೂಮಾದ್ರಾತ್ರಿಂ ರಾತ್ರೇರಪರಪಕ್ಷಮಪರಪಕ್ಷಾದ್ಯಾನ್ ಷಡ್ದಕ್ಷಿಣೈತಿ ಮಾಸಾಂ ಸ್ತಾನ್ನೈತೇ ಸಂವತ್ಸರಮಭಿಪ್ರಾಪ್ನುವನ್ತಿ(3) ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಮಾಕಾ- ಶಾಚ್ಚನ್ದ್ರಮಸಮೇಷ ಸೋಮೋ ರಾಜಾ ತದ್ದೇವಾನಾಮನ್ನಂ ತಂ ದೇವಾ ಭಕ್ಷಯನ್ತಿ (4)**

ತಾ॥ ಈ ಪ್ರದೇಶದಲ್ಲಿಯೇ ಇದ್ದು ಇಷ್ಟಾಪೂರ್ತಿಯಾಗುವಂತಹ ಪುಣ್ಯ ಕರ್ಮಗಳನ್ನಾ- ಚರಿಸುತ್ತಾ, ದಾನಧರ್ಮಗಳನ್ನು ಮಾಡುತ್ತಿರುವವರು ಧೂಮಮಯಲೋಕಗಳಿಗೆ ಹೋಗುವರು.

ಅಲ್ಲಿಂದ ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ ಆನಂತರ ಪಿತೃಲೋಕ, ಗಗನ ಮಾರ್ಗ, ಚಂದ್ರಮಾರ್ಗವನ್ನು ಸೇರುವರು. (ಅಂದರೆ ಆಯಾ ಅಭಿಮಾನದೇವತೆಗಳನ್ನು ಸೇರುವರು.) ಚಂದ್ರನೇ ಸೋಮರಾಜ, ಆತ ದೇವತೆಗಳಿಗೆ ಭೋಜನ. ದೇವತೆಗಳು ಅವನನ್ನು ಭುಜಿಸುವರು. ಇಂದ್ರಿಯ ಭೋಗಗಳನ್ನು ಅನುಭವಿಸುವವರು ಆ ದೇವತೆಗಳು ಕೊಟ್ಟಿದ್ದನ್ನೇ ಅನುಭವಿಸಬೇಕು.

**ಮಂ.ಶ್ಲೋ.॥ ತಸ್ಮಿನ್ಯಾವತ್ಸಮ್ಪಾತಮುಷಿತ್ವಾಽಥೈತಮೇವಾ ಧ್ಯಾನಂ ಪುನರ್ನಿವರ್ತನ್ತೇ ಯಥೇತ-ಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋಭೂತ್ವಾಽಭ್ರಂ ಭವತಿ (5) ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ತ ಇಹ ವ್ರೀಹಿ ಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯನ್ತೇಽತೋ ವೈ ಖಲು ದುರ್ನಿಷ್ಪ್ರವತರಂ ಯೋ ಯೋಹ್ಯನ್ನಮತ್ತಿಯೋ ರೇತಸ್ಸಿಂಚತಿ ತದ್ಭೂಯ ಏವ ಭವತಿ (6) ತ ದ್ಯ ಇಹ ರಮಣೀಯ ಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣ ಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಽಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಣ್ಡಾಲಯೋನಿಂ ವಾ (7)**

ತಾ॥ ಆನಂತರ ಕರ್ಮಕ್ಷಯವಾಗುವವರೆಗೂ ಅಲ್ಲಿಯೇ ಇದ್ದು, ತಿರುಗಿ ಈ ಕೆಳಗೆ ಹೇಳಿರುವ ಮಾರ್ಗದಲ್ಲಿ ಬರುತ್ತಾರೆ ಆಕಾಶ, ವಾಯು, ಧೂಮ, ಮೇಘ, ನಂತರ ಆ ಮೇಘದಿಂದ ಮಳೆಯಾಗುವುದು. ಆಮೇಲೆ ಭತ್ತ, ಗೋಧಿ, ಔಷಧಿಗಳು, ವನಸ್ಪತಿಗಳು, ಮುಂತಾದವುಗಳು ಉದ್ಭವಿಸುವವು. ಅಲ್ಲಿಂದ ಆಯಾ ಪದಾರ್ಥಗಳ ರೂಪದಲ್ಲಿ ಜೀವಿಗಳು ಮತ್ತೆ ಹೊರಕ್ಕೆ ಬರಲು ಬಹಳ ಕಷ್ಟ ಪಡಬೇಕಾಗುತ್ತದೆ. ಮಾನವರು ಯಾವ ಆಹಾರವನ್ನು ಭುಜಿಸುವರೋ, ಮತ್ತೆ ಆ ರೇತಸ್ಸೇಚನ ಮೂಲಕವಾಗಿ ಸ್ತ್ರೀಯರಿಂದ ಅನ್ನಗತ ಪ್ರಾಣರಾಗಿ ಜೀವಿಗಳು ಹುಟ್ಟುವರು. ಹಾಗೂ ಈ ಧಾನ್ಯಾದಿ ರೂಪದಲ್ಲಿದ್ದ ಜೀವಿಗಳು ಯಾರು ಹಿಂದೆ ಆಚರಣ ಶೀಲರಾಗಿರುವರೋ, ಅವರು ಉತ್ತಮ ಯೋನಿಗಳಲ್ಲಿ ಮತ್ತೆ ಜನಿಸುವರು. ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಾಗಿ ಹುಟ್ಟುವರು. ಯಾರು ದುರಾಚಾರಿಗಳಾಗಿದ್ದರೋ, ಅವರು ಕೂಡಲೇ ನೀಚ ಯೋನಿಗಳಲ್ಲಿ ಹುಟ್ಟುವರು. ನಾಯಿ, ಹಂದಿ ಅಥವಾ ಚಾಂಡಾಲರಾಗಿ ಹುಟ್ಟುವರೆಂಬ ಭಾವ.

**ಮಂ.ಶ್ಲೋ.॥ ಅಥೈತಯೋಃ ಪಥೋರ್ನ್ನ ಕತರೇಣ ಚ ನ ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವನ್ತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಂ ತೇನಾಸೌ ಲೋಕೋ ಸ ಸಂಪೂರ್ಯತೇ ಮಾವಸನ್ ತಸ್ಮಾಜ್ಜುಗುಪ್ಸೇತ ತದೇಷಶ್ಲೋಕಃ । ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪ ಮಾವಸನ್ ಬ್ರಹ್ಮಹಾ ಚ, ಏತೇಪತನ್ತಿ ಚತ್ವಾರಃ ಪಂಚಮಶ್ಚಾಚರಂ ಸ್ತೈರಿತಿ (8) (9) ಅಥ ಹ ಯ ಏತಾನೇವಂ ಪಞ್ಚಾಗ್ನಿನ್ ವೇದ ಸ ಸಹ ತೈ ರಥಾಚರನ್ ಪಾಪ್ಮನಾ ಲಪ್ಯತೇ ಶುದ್ಧಃ ಪೂತಃ ಪುಣ್ಯಲೋಕೋ ಭವತಿ ಯ ಏವಂ ವೇದ ಯ ಏವಂ ವೇದ (10)**

ತಾ|| ಯಾರು ಈ ಧರ್ಮಕರ್ಮಗಳನ್ನು ಮಾಡರೋ ಅವರು ಈ ಎರಡೂ ಮಾರ್ಗಗಳಲ್ಲಿ ಯಾವುದನ್ನೂ ಸೇರದೆ ಬಾರಿ ಬಾರಿಗೂ ಜನನ ಮರಣಗಳೆನ್ನುವ ಮೂರನೆಯ ಗತಿಯನ್ನೇ ಹೊಂದುವರು. ಆದ್ದರಿಂದ ಪರಲೋಕವು ಸಂಪೂರ್ಣವಾಗದು. ಆದ್ದರಿಂದಲೇ ನಿಷಿದ್ಧ ಕರ್ಮಗಳನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕಾಗಿದೆ. ಅದು ವಿಧಿ. ಈ ವಿಷಯದಲ್ಲಿ ಶ್ಲೋಕವಿದೆ, ಸುವರ್ಣವನ್ನು ಕಳ್ಳತನ ಮಾಡುವುದು, ಸುರಾಪಾನ ಮಾಡುವುದು, ಗುರುಪತ್ನೀ ಸಂಗಮ, ಬ್ರಹ್ಮಹತ್ಯೆ, ಈ ದುಷ್ಕರ್ಮಗಳನ್ನು ಆಚರಿಸುವವನು, ಈ ನಾಲ್ಕು ಪಾಪಗಳನ್ನು ಮಾಡುವವರಿಗೆ ನೆರವಾಗುವವರು (ಸಹಾಯ ಮಾಡುವವರು) ಮಹಾಪಾಪಿಗಳಾಗಿ ಪತಿತರಾಗುವರು. ಇವೇ ಪಂಚಮಹಾಪಾತಕಗಳು. ಹೀಗಿದ್ದರೂ ಪಂಚಾಗ್ನಿ ಜ್ಞಾನವನ್ನು ಹೊಂದಿದವನು ಅಂತಹವರೊಂದಿಗೆ ವ್ಯವಹರಿಸಿದರೂ ಆತನಿಗೆ ಪಾಪ ಲೇಪವಾಗುವುದಿಲ್ಲ. ಈ ವಿಧಾನಗಳನ್ನು ತಿಳಿದವನು ಪರಿಶುದ್ಧನಾಗಿ, ಪವಿತ್ರನಾಗಿ, ಪುಣ್ಯ-ಲೋಕವನ್ನು ಹೊಂದುವನು. (ಪಂಚಾಗ್ನಿ ಜ್ಞಾನವು ಮಹೋನ್ನತವಾದುದೆಂದು ತಿಳಿದುಕೊಳ್ಳಬೇಕು.)

## ಪಞ್ಚಮ ಪ್ರಪಾಠಕ – ಏಕಾದಶ ಖಂಡ

**ಮಂ.ಶ್ಲೋ.|| ಪ್ರಾಚೀನಶಾಲ ಔಪಮನ್ಯವಃ ಸತ್ಯಯಜ್ಞಃ ಪೌಲುಷಿರಿನ್ದ್ರದ್ಯುಮ್ನೋ ಭಾಲ್ಲವೇಯೋ ಜನಶ್ಶಾರ್ಕರಾಕ್ಷ್ಯೋ ಬುಡಿಲ ಅಶ್ವತರಾಶ್ವಿಸ್ತೇ ಹೈತೇ ಮಹಾಶಾಲಾ ಮಹಾಶ್ರೋತ್ರಿಯಾ-ಸ್ಸಮೇತ್ಯ ಮೀಮಾಂಸಾಂ ಚಕ್ರುಃ ಕೋ ನು ಆತ್ಮಾ ಕಿಂ ಬ್ರಹ್ಮೇತಿ (1) ತೇ ಹ ಸಂಪಾದಯಾಂ ಚಕ್ರುರುದ್ದಾಲಕೋ ವೈ ಭಗವನ್ತೋಽಯಮಾರುಣಿಸ್ಸಂಪ್ರತೀಮಮಾತ್ಮಾನಂ ವೈಶ್ವಾನರ-ಮಧ್ಯೇತಿ ತಂ ಹನ್ತಾಭ್ಯಾಗಚ್ಛಾಮೇತಿ ತಂ ಹಾಭ್ಯಾಜಗ್ಮುಃ (2) ಸ ಹಾ ಸಮ್ಪಾದಯಾಂ ಚಕಾರ ಪ್ರಕ್ಷ್ಯನ್ತಿಮಾಮಿಮೇ ಮಹಾಶಾಲಾ ಮಹಾಶ್ರೋತ್ರೀಯಾಸ್ತೇಭ್ಯೋ ನ ಸರ್ವಮಿವ ಪ್ರತಿಪತ್ಸ್ಯೆ ಹನ್ತಾಹಮನ್ಯಮಭ್ಯನುಶಾಸಾನೀತಿ (3) ತಾನ್‌ಹೋವಾಚಾಶ್ವಪತಿರ್ವೈ ಭಗವನ್ತೋಽಯಂ ಕೈಕೇಯಸ್ಸಮ್ಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತಂ ಹನ್ತಾಭ್ಯಾಗಚ್ಛಾಮೇತಿ ತಂ ಹಾಭ್ಯಾಜಗ್ಮುಃ (4)**

ತಾ|| (ವೈಶ್ವಾನರಾತ್ಮನನ್ನು ಕುರಿತು) ಉಪಮನ್ಯು ಮಗ ಪ್ರಾಚೀನ ಶಾಲನೆನ್ನುವವನು, ಪುಲುಷ ಮುನಿಯ ಮಗ ಸತ್ಯಯಜ್ಞನು, ಭಾಲ್ಲವಿ ಋಷಿಯ ಮಗ ಇಂದ್ರದ್ಯುಮ್ನನು, ಶರ್ಕರಾಕ್ಷಸನ ಮಗ ಜನನೆಂಬುವನು, ಅಶ್ವತರಾಶ್ವಮುನಿಯ ಮಗ ಬುಡಿಲ, ಎನ್ನುವ ಈ ಮಹಾ ಗೃಹಸ್ಥರು, ವೇದವಿಜ್ಞಾನವನ್ನು ಅರಿತವರು. ಇವರೆಲ್ಲರೂ ಒಂದು ಕಡೆ ಸಮಾವೇಶಗೊಂಡು, ಆತ್ಮ ಎಂದರೆ ಯಾರು? ಪರಬ್ರಹ್ಮ ಯಾರು? ಎಂದು ಸಮಾಲೋಚಿಸಿ, ಉತ್ತಮ ಮುನಿಗಳಾದ ಈ ಐವರೂ ಸದ್ಗುರುವನ್ನು ಸೇರಲೆಂದು ಸಂಕಲ್ಪಿಸಿಕೊಂಡು, ಅರುಣ ಮುನಿಯ ಮಗ ಉದ್ದಾಲಕ ಮಹರ್ಷಿ, ವೈಶ್ವಾನರಾತ್ಮ ವಿದ್ಯೆಯನ್ನು ತಿಳಿದುಕೊಂಡವರಾದ್ದರಿಂದ ಅವರ ಬಳಿಗೆ ಹೋಗಬೇಕೆಂದು ನಿಶ್ಚಯಿಸಿದರು. ಕೂಡಲೇ ಉದ್ದಾಲಕ ಮಹರ್ಷಿಗೆ ಸನ್ನಿಧಿಗೆ ಹೋದರು. ಆಗ ಆ ಉದ್ದಾಲಕ ಮುನಿ ಈ ರೀತಿಯಾಗಿ ಆಲೋಚಿಸಿದ "ಮಹಾ ವೇದವಿದರಾದ ಈ ಗೃಹಸ್ಥರು ಬ್ರಹ್ಮವಿದ್ಯೆಯನ್ನು ತಿಳಿದುಕೊಳ್ಳಲು ನನ್ನ ಬಳಿಗೆ ಬಂದಿದ್ದಾರೆ. ಬ್ರಹ್ಮವಿದ್ಯೆಯನ್ನು ಸಮಗ್ರವಾಗಿ ಬೋಧಿಸುವುದಕ್ಕೆ ನಾನು ಸಮರ್ಥನಲ್ಲ. ಮತ್ತೊಬ್ಬ ಆಚಾರ್ಯನ ಬಳಿಗೆ ಕಳುಹಿಸುವುದು ಉತ್ತಮ. ಉದ್ದಾಲಕನು

ಬಂದವರನ್ನು ನೋಡಿ "ಪೂಜ್ಯರಾದ ಬ್ರಾಹ್ಮಣೋತ್ತಮರೇ! ಕೇಕೆಯ ಪುತ್ರನಾದ ಅಶ್ವಪತಿಯೆಂಬ ರಾಜ ವೈಶ್ವಾನರಾತ್ಮವನ್ನು ಚೆನ್ನಾಗಿ ತಿಳಿದುಕೊಂಡಿದ್ದಾನೆ. ಆತನ ಬಳಿಗೆ ಹೋಗೋಣ" ಎಂದು ಉದ್ದಾಲಕನು ತಾನೂ ಅವರೊಂದಿಗೆ ಆ ರಾಜನ ಬಳಿಗೆ ಬಂದ.

ಮಂ.ಶ್ಲೋ.॥ **ತೇಭ್ಯೋ ಹ ಪ್ರಾಪ್ತೇಭ್ಯಃ ಪೃಥಗರ್ಹಾಣಿ ಕಾರಯಾಂಚಕಾರ ಸಹ ಪ್ರಾತಸ್ಸಂಜಿಹಾನ ಉವಾಚ ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪೋ ನಾನಾಹಿತಾಗ್ನಿ-ರ್ನಾವಿದ್ವಾನ್ನಸ್ವೈರೀ ಸ್ವೈರಿಣೀ ಕುತೋ ಯಕ್ಷ್ಯಮಾಣೋ ವೈ ಭಗವನ್ತೋಽಹಮಸ್ಮಿ ಯಾವ-ದೇಕೈಕಸ್ಮಾ ಋತ್ವಿಜೇ ಧನಂ ದಾಸ್ಯಾಮಿ ತಾವದ್ಭಗವದ್ಭ್ಯೋ ದಾಸ್ಯಾಮಿ ವಸನ್ತು ಭಗವನ್ತ ಇತಿ (5) ತೇ ಹೋಚುರ್ಯೇನಹೈ ವಾರ್ಥೇನ ಪುರುಷಶ್ಚರೇತ್ತಂ ಹೈವ ವದೇದಾತ್ಮಾನ-ಮೇವೇಮಂ ವೈಶ್ವಾನರಂ ಸಂಪ್ರತ್ಯಧ್ಯೇಷಿ ತಮೇವ ನೋ ಬ್ರೂಹೀತಿ (6) ತಾನ್ ಹೋವಾಚ ಪ್ರಾತರ್ವಃ ಪ್ರತಿವಕ್ತಾಸ್ಮೀತಿ ತೇ ಹ ಸಮಿತ್ಪಾಣಯಃ ಪೂರ್ವಾಹ್ಣೇ ಪ್ರತಿಚಕ್ರಮಿರೇ ತಾನ್ ಹಾನುಪನೀಯೈವೈ ತದುವಾಚ (7)**

ತಾ॥ ಅಲ್ಲಿಗೆ ಬಂದ ಈ ಗೃಹಸ್ಥರಿಗೆ ಅದ್ದೂರಿಯಾದ ಸ್ವಾಗತ ನೀಡಿ ಸತ್ಕರಿಸಿದ. ಮಾರನೆಯ ದಿನ ಪ್ರಾತಃ ಕಾಲದಲ್ಲಿ ರಾಜನು ಆ ಋಷಿಗಳಿಗೆ ಬೇಕಾದಷ್ಟು ಧನವನ್ನು ನೀಡಿದ. ಅತಿಥಿಗಳು ಅದಕ್ಕೆ ಸಮ್ಮತಿಸದೆ ಹೋಗಲು "ಅಯ್ಯಾ, ನನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಲುಬ್ಧರಿಲ್ಲ. ಅಂಧರು ಇಲ್ಲ. ಅಗ್ನಿಹೋತ್ರವನ್ನು ಮಾಡದವರಿಲ್ಲ. ಬುದ್ಧಿಹೀನರಾದವರು ಇಲ್ಲ. ಶತ್ರುಗಳು ಇಲ್ಲ. ನನಗೆ ವೈರ ಭಾವವೆಂಬುದು ಇಲ್ಲ. ನಾನು ಈ ಮಹಾಯಜ್ಞವನ್ನು ಮಾಡುವವನಿದ್ದೇನೆ. ಒಬ್ಬೊಬ್ಬ ಋತ್ವಿಕನಿಗೆ ಎಷ್ಟು ಧನವನ್ನು ನೀಡುವೆನೋ ಹಾಗೆಯೇ ತಮ್ಮ ಒಬ್ಬೊಬ್ಬರಿಗೂ ಅಷ್ಟೇ ಸಮರ್ಪಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ." ಎಂದನು. ಆದ್ದರಿಂದ ತಾವು ಇಲ್ಲಿಯೇ ಇದ್ದು ನನ್ನ ಯಜ್ಞವನ್ನು ಪೂರ್ಣಗೊಳಿಸಿ ನಾನು ಕೊಡಬಯಸುವ ಧನವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ. ಆ ಗೃಹಸ್ಥನಿಗೆ ಮುನಿಗಳು ಹೀಗೆ ಉತ್ತರವನ್ನಿತ್ತರು; ಯಾವುದನ್ನು ಕೇಳುವುದಕ್ಕಾಗಿ, ಮನುಷ್ಯನು ತನ್ನ ಬಳಿಗೆ ಬಂದಿರುವನೋ, ಅದನ್ನೇ ಆತನಿಗೆ ಕೊಡಬೇಕು. "ವೈಶ್ವಾನರಾತ್ಮ ವಿದ್ಯೆಯನ್ನು ನೀನು ಚೆನ್ನಾಗಿ ತಿಳಿದಿರುವಿಯೆಂದು ನಾವು ಅರಿತಿದ್ದೇವೆ. ಆ ವಿದ್ಯೆಯನ್ನು ನೀನು ನಮಗೆ ಬೋಧಿಸುವಂತಹವನಾಗು. ಧನಾಕಾಂಕ್ಷೆಯಿಂದ ನಾವು ಇಲ್ಲಿಗೆ ಬರಲಿಲ್ಲ. ವಿದ್ಯಾರ್ಥಿಗಳಾಗಿ ಬಂದಿದ್ದೇವೆ" ಎಂದು ಹೇಳಿದರು. "ನಿಮಗೆ ಆ ವಿದ್ಯೆಯು ಬೇಕಾದಲ್ಲಿ. ಬೆಳಗ್ಗೆಯೇ ಇಲ್ಲಿಗೆ ಬರಬೇಕು" ಎಂದು ರಾಜ ಹೇಳಿದ. ಮಾರನೆಯ ದಿನ ಬೆಳಗ್ಗೆ ಪ್ರಾತಃಕಾಲದಲ್ಲಿ ಅವರೆಲ್ಲರೂ ಸಮಿತ್ಪಾಣಿಗಳಾಗಿ (ಸಮಿತ್ತನ್ನು ಕೈಲಿ ಹಿಡಿದು) ರಾಜಭವನಕ್ಕೆ ಹೋದರು. ಆಗ ರಾಜನು ಈ ರೀತಿಯಾಗಿ ಬೋಧಿಸುವುದಕ್ಕೆ ಪ್ರಾರಂಭಿಸಿದ. ರಾಜನು ತಾನು ಅವರಿಗೆ ಉಪನಯನ ದೀಕ್ಷೆಯನ್ನು ಕೊಡದಿದ್ದರೂ ಬೋಧಿಸಲು ಸಿದ್ಧನಾದ.

## ಪಞ್ಚಮ ಪ್ರಪಾಠಕ – ದ್ವಾದಶ ಖಂಡ

ಮಂ.ಶ್ಲೋ.॥ **ಔಪಮನ್ಯವ ಕಂ ತ್ವಮಾತ್ಮಾನಮುಪಾಸ್ಸ ಇತಿ ದಿವಮೇವ ಭಗವೋ ರಾಜನ್ನಿತಿ ಹೋವಾ-ಚೈಷವೈ ಸುತೇಜಾ ಆತ್ಮಾ ವೈಶ್ವಾನರೋಽಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತವ**

**ಸುತಂ ಪ್ರಸುತಮಾಸುತಂ ಕುಲೇ ದೃಶ್ಯತೇ (1) ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರ-ಮುಪಾಸ್ತೇ ಮೂರ್ಧಾತ್ಯೇಷ ಆತ್ಮನ ಇತಿ ಹೋವಾಚ ಮೂರ್ಧಾ ತೇ ವ್ಯಪತಿಷ್ಯದ್ಯನ್ಮಾಂ ನಾಗಮಿಷ್ಯ ಇತಿ (2)**

ತಾ॥ ಔಪಮನ್ಯೂ! ಆತ್ಮವನ್ನು ನೀನು ಯಾವ ರೀತಿ ಉಪಾಸಿಸುತ್ತೀಯೋ ಹೇಳು. ಎಂದು ರಾಜನು ಪ್ರಶ್ನಿಸಿದ. ಔಪಮನ್ಯುವು: ಮಹಾರಾಜಾ! ವೈಶ್ವಾನರಾತ್ಮನನ್ನು ದ್ಯುಲೋಕವಾಗಿ ಉಪಾಸಿ-ಸುತ್ತಿದ್ದೇನೆ. ಅಶ್ವಪತಿರಾಜನು ಹೇಳಿದ:–ನೀನು ಉಪಾಸಿಸುವ ದ್ಯುಲೋಕ 'ಸುತೇಜ'ವೆನ್ನುವ ವೈಶ್ವಾನರಾತ್ಮ, ಅದು ಪೂರ್ಣಾತ್ಮವಲ್ಲ, ಆದ್ದರಿಂದ ನಿನ್ನ ವಂಶದಲ್ಲಿ ಸುತ, ಪ್ರಸುತ, ಅಸುತ ಎನ್ನುವ ಸೋಮರಸವು ಯಜ್ಞದಲ್ಲಿ ಕಾಣಿಸುವುದು. ಪ್ರಿಯವಾದ ಪದಾರ್ಥಗಳನ್ನು ನೋಡುವೆ. ನಿನ್ನ ವಂಶ-ದವರು ಸತ್ಕರ್ಮಾನುಷ್ಠಾನ ಪರರಾಗುವರು. ಅಲ್ಲಿಯವರೆಗೆ ಅನ್ನವನ್ನು ನೀನು ತೃಪ್ತಿಯಾಗಿ ಭುಜಿಸುವೆ. ನಿನ್ನ ವಂಶದವರಿಗಾಗಿ ಅವಶ್ಯವಿರುವಷ್ಟು ಅನ್ನವನ್ನು ಬೆಳೆಯುವಂತಾಗುವೆ. ಪ್ರಿಯವಾ-ದುದನ್ನು ಹೊಂದುವೆ. ಈ ಸುತೇಜವೆನ್ನುವ ವೈಶ್ವಾನರಾತ್ಮನನ್ನು ಉಪಾಸಿಸುವವನು ಅನ್ನವನ್ನು ಭುಜಿಸುವನು. ಪ್ರಿಯವಾದುದನ್ನು ಹೊಂದುವನು. ಅವರಲ್ಲಿ ಬ್ರಹ್ಮ ವರ್ಚಸ್ಸು ಕಾಣುವುದು. ಇದು ಪೂರ್ಣಾತ್ಮದ ಶಿರಸ್ಸು (ಮಾತ್ರವೇ). ನೀನು ನನ್ನ ಬಳಿಗೆ ಬರದೇ ಹೋಗಿದ್ದಲ್ಲಿ ನಿನ್ನ ತಲೆ ಕೆಳಗೆ ಬಿದ್ದು-ಬಿಡುತ್ತಿತ್ತೆಂದು, ರಾಜನು ಹೇಳಿದ. (ಸುತ ಎಂದರೆ ಒಂದೇ ದಿನ ಮಾಡುವಂತಹ ಯಾಗಕ್ಕಾಗಿ ಹಿಂಡಿದ ಸೋಮರಸ. 'ಪ್ರಸುತ' ಎಂದರೆ ಜ್ಯೋತಿಷ್ಟೋಮಾದಿಯಾಗಗಳ ನಿಮಿತ್ತವಾಗಿ ಹಿಂಡಿದ ಸೋಮರಸ ಅಸುತ ಎಂದರೆ ಬಹಳ ದಿನಗಳವರೆಗೆ ನಡೆಸುವ ಸತ್ರಯಾಗಾದಿಗಳಿಗಾಗಿ ಹಿಂಡಿದಂತಹ ಸೋಮರಸ.)

## ಪಞ್ಚಮ ಪ್ರಪಾಠಕ – ತ್ರಯೋದಶ ಖಂಡ

ಮಂ.ಶ್ಲೋ.॥ **ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ ಪ್ರಾಚೀನಯೋಗ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾದಿತ್ಯಮೇವ ಭಗವೋ ರಾಜನ್ನಿತಿ ಹೋವಾಚೈಷವೈ ವಿಶ್ವರೂಪ ಆತ್ಮಾ ವೈಶ್ವಾನ-ರೋಽಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತವ ಬಹು ವಿಶ್ವರೂಪಂ ಕುಲೇ ದೃಶ್ಯತೇ (1) ಪ್ರವೃತ್ತೋಽಶ್ವತರೀರಥೋ ದಾಸೀ ನಿಷ್ಕೋತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಚಕ್ಷುಷ್ಟೇತ-ದಾತ್ಮನ ಇತಿಹೋವಾಚಾನ್ಧೋಽಭವಿಷ್ಯೋ ಯನ್ಮಾಂ ನಾಗಮಿಷ್ಯ ಇತಿ (2)**

ತಾ॥ ಅಶ್ವಪತಿರಾಜನು ಸತ್ಯಯಜ್ಞವನ್ನು ಕೇಳಿದ. ಓ ಪ್ರಾಚೀನ ಯೋಗ್ಯನೇ! ನೀನು ಯಾವುದನ್ನು ಆತ್ಮವೆಂದು ಉಪಾಸಿಸುವೆ? ಎಂದು. ಮಹಾರಾಜಾ! ನಾನು ಸೂರ್ಯನನ್ನು ಉಪಾಸಿಸುವೆ. ನೀನು ಪೂರ್ಣಾತ್ಮವೆಂದು ಉಪಾಸಿಸುವುದು ವಿಶ್ವರೂಪವೆನ್ನುವ ವೈಶ್ವಾನರಾತ್ಮನನ್ನು ಮಾತ್ರವೇ. ಅದರಿಂದ ನಿನ್ನ ಕುಲದಲ್ಲಿ ಸಾಧನ ಸಂಪತ್ತು ಹೇರಳವಾಗಿರುವುದು. ಅಶ್ವಗಳು, ರಥಗಳು, ದಾಸದಾಸೀಜನ, ಬೆಳ್ಳಿ, ಬಂಗಾರವೆಲ್ಲವೂ, ನಿನಗೆ ಪ್ರಾಪ್ತವಾಗುವುದು. ನೀನು ಸಮಸ್ತ ಭೋಗಗಳನ್ನು

ಅನುಭವಿಸುವೆ. ನಿನ್ನ ಈ ವಂಶವು ಬ್ರಹ್ಮವರ್ಚಸ್ಸಿನಿಂದ ಶೋಭಿಸುತ್ತದೆ. ಆದರೆ ಇದು ವಿಶ್ವರೂಪಾತ್ಮನ ಕಣ್ಣು ಮಾತ್ರವೇ. ನನ್ನ ಬಳಿಗೆ ಬಾರದೆ ಹೋಗಿದ್ದರೆ ನಿನ್ನ ಕಣ್ಣು ಕುರುಡಾಗಿಬಿಡುತ್ತಿತ್ತು ಎಂದು ರಾಜನು ಹೇಳಿದ.

## ಪಞ್ಚಮ ಪ್ರಪಾಠಕ – ಚತುರ್ದಶ ಖಂಡ

ಮಂ.ಶ್ಲೋ.॥ ಅಥ ಹೋವಾಚೇನ್ದ್ರದ್ಯುಮ್ನಂ ಭಾಲ್ಲವೇಯಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತಿ ವಾಯುಮೇವ ಭಗವೋ ರಾಜನ್ನಿತಿ ಹೋವಾಚೈಷವೈ ಪೃಥಗ್ವರ್ತ್ಮಾ ವೈಶ್ವಾನರೋಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಾಂ ಪೃಥಗ್ಬಲಯ ಅಯಯನ್ತಿ ಪೃಥಗ್ರಥಶ್ರೇಣಯೋಽನುಯನ್ತಿ (1) ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪ್ರಾಣಸ್ತ್ವೇಷ ಆತ್ಮನ ಇತಿ ಹೋವಾಚ ಪ್ರಾಣಸ್ತ ಉದಕ್ರಮಿಷ್ಯದ್ಯನ್ಮಾಂ ನಾಗಮಿಷ್ಯ ಇತಿ (2)

ತಾ॥ ಆನಂತರ ಅಶ್ವಪತಿರಾಜನು ಇಂದ್ರದ್ಯುಮ್ನನನ್ನು ಪ್ರಶ್ನಿಸಿದ: "ವೈಯಾಘ್ರಪದ್ಯಾ! ನೀನು ಎಂತಹ ಆತ್ಮವನ್ನು ಉಪಾಸಿಸುತ್ತಿರುವೆ?" ಇಂದ್ರದ್ಯುಮ್ನ: ಅಶ್ವಪತಿ ರಾಜಾ! ನಾನು ವಾಯುದೇವನನ್ನು ಉಪಾಸಿಸುತ್ತಿರುವೆ. ರಾಜ:– 'ನೀನು ಉಪಾಸನೆ ಮಾಡುತ್ತಿರುವುದು. "ಪೃಥಗ್ವಹ್ಮ"ವೆನ್ನುವ ವೈಶ್ವಾನರಾತ್ಮವನ್ನು' ಅದು ನಾನಾ ಗತಿಗಳನ್ನು ಹೊಂದಿದೆ. ಆದ್ದರಿಂದ ನಿನ್ನ ಬಳಿಗೆ ಅನೇಕ ದಿಕ್ಕುಗಳಿಂದ ಬಲಿದಾನಗಳು ಬರುತ್ತಿರುತ್ತವೆ. ರಥಗಳು ಅಧಿಕ ಸಂಖ್ಯೆಯಲ್ಲಿ ನಿನ್ನ ಹಿಂದೆಯೇ ಬರುವವು. ನೀನು ಅನ್ನ ಭೋಕ್ತವಾಗಿರುವೆ. ಹಲವರಿಗೆ ಪ್ರೀತಿಪಾತ್ರನಾಗುವೆ. ನೀನು ಉಪಾಸನೆ ಮಾಡುವುದು ಪರಮಾತ್ಮನ ಪ್ರಾಣವನ್ನು ಮಾತ್ರವೇ. ನೀನು ಇಲ್ಲಿಗೆ ಬಾರದೆ ಆ ಉಪಾಸನೆ ಮಾಡುವವನಾಗಿದ್ದಿದ್ದರೆ ನಿನ್ನ ಪ್ರಾಣವು ಹೋಗಿಬಿಡುತ್ತಿತ್ತು" ಎಂದು ಅಶ್ವಪತಿರಾಜನು ಹೇಳಿದ.

## ಪಞ್ಚಮ ಪ್ರಪಾಠಕ – ಪಞ್ಚದಶ ಖಂಡ

ಮಂ.ಶ್ಲೋ.॥ ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ ಶಾರ್ಕರಾಕ್ಷ್ಯಕಂ ತ್ವಮಾತ್ಮನಮುಪಾಸ್ಸ ಇತ್ಯಾಕಾಶಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಬಹುಲ ಆತ್ಮಾ ವೈಶ್ವಾನರೋಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಬಹುಲೋಽಸಿ ಪ್ರಜಯಾ ಚ ಧನೇನ ಚ (1) ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಸನ್ದೇಹಸ್ತ್ವೇಷ ಆತ್ಮನ ಇತಿ ಹೋವಾಚ ಸನ್ದೇಹಸ್ತೇ ವ್ಯಶೀರ್ಯದ್ಯನ್ಮಾಂ ನಾಗಮಿಷ್ಯ ಇತಿ (2)

ತಾ॥ ಆನಂತರ "ಶರ್ಕರಾಕ್ಷ್ಯಾ! ನೀನು ಯಾವ ಆತ್ಮನನ್ನು ಉಪಾಸಿಸುವೆ" ಎಂದು ಅಶ್ವರಾಜನು ಕೇಳಿದ. "ಮಹಾರಾಜಾ! ನಾನು ಆಕಾಶವನ್ನು ಉಪಾಸಿಸುವೆ" ಎಂದು ಶರ್ಕರಾಕ್ಷ್ಯ ಹೇಳಿದ. "ಬಹುಳ"ವೆನ್ನುವ ವೈಶ್ವಾನರಾತ್ಮವನ್ನು ಮಾತ್ರವೇ ನೀನು ಉಪಾಸನೆ ಮಾಡುತ್ತಿರುವೆ. ಆದ್ದರಿಂದ ನೀನು ಅಧಿಕವಾಗಿ ಧನವನ್ನು ಹೊಂದುತ್ತೀಯೆ. ಅನ್ನವನ್ನು ತೃಪ್ತಿಯಾಗಿ ಭುಜಿಸುವೆ. ಪ್ರಿಯವಾದು–

ದನ್ನು ಹೊಂದುವೆ. ಈ ವೈಶ್ವಾನರದಲ್ಲಿ ಬ್ರಹ್ಮ ವರ್ಚಸ್ಸು ಪ್ರಕಾಶಿಸುವುದು. ಇದು ಆತ್ಮದ ಶರೀರದ ಮಧ್ಯಭಾಗ ಮಾತ್ರವೇ. ನೀನು ನನ್ನ ಬಳಿಗೆ ಬಾರದಿದ್ದ ಪಕ್ಷದಲ್ಲಿ ನಿನ್ನ ಶರೀರದ ಮಧ್ಯಭಾಗವು ನಶಿಸಿಹೋಗಿರುತ್ತೆಂದು ಅಶ್ವಪತಿರಾಜನು ಹೇಳಿದ.

## ಪಞ್ಚಮ ಪ್ರಪಾಠಕ - ಷೋಡಶ ಖಂಡ

**ಮಂ.ಶ್ಲೋ.॥ ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ ವೈಯಾಘ್ರಪದ್ಯ, ಕಂ ತ್ವಮಾತ್ಮಾನಮುಪಾಸ್ಸ ಇತ್ಯಪ ಏವ ಭಗವೋ ರಾಜನ್ನಿತಿ ಹೋವಾಚೈಷ ವೈ ರಯಿರಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ರಯಿಮಾನ್ ಪುಷ್ಟಿಮಾನಸಿ (1) ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವ -ಮಾತ್ಮಾನಂ ವೈಶ್ವಾನರಮುಪಾಸ್ತೇ ವಸ್ತಿಸ್ತ್ವೇಷ ಆತ್ಮನ ಇತಿ ಹೋವಾಚ ವಸ್ತಿಸ್ತೇ ವ್ಯಭೇತ್ಸ್ಯದ್ಯನ್ಮಾಂ ನಾಗಮಿಷ್ಯ ಇತಿ (2)**

ತಾ : ಆನಂತರ ಬುಡಿಲನನ್ನು ಕೇಳಿದ "ಓ ವೈಯಾಘ್ರಪದ್ಯನೇ (ನಿನ್ನಲ್ಲಿನ) ನೀನು ಯಾವ ಆತ್ಮವನ್ನು ಉಪಾಸಿಸುವೆ?" ಮಹಾರಾಜಾ! ನಾನು ಜಲವನ್ನು ಉಪಾಸಿಸುತ್ತಿರುವೆ" ಎಂದು ಹೇಳಿದ ಬುಡಿಲ! ನೀನು ಉಪಾಸಿಸುತ್ತಿರುವ ಆತ್ಮ "ರಯಿ" ಎನ್ನುವ ವೈಶ್ವಾನರಾತ್ಮವನ್ನೇ. ಅದರಿಂದ ನೀನು ಧನವನ್ನು ಹೊಂದುವಂತಾಗುವೆ. ಬಲವನ್ನು ಹೊಂದಿದವನಾಗುವೆ. ನೀನು ಅನ್ನವನ್ನು ತೃಪ್ತಿಯಾಗಿ ಭುಜಿಸುತ್ತೀಯೆ. ಬಹಳವಾಗಿ ಪ್ರೀತಿಯನ್ನು ಹೊಂದುತ್ತೀಯೆ. ಈ ವೈಶ್ವಾನರಾತ್ಮವನ್ನು ಉಪಾಸಿಸುವವನು ಅನ್ನವನ್ನು, ಪ್ರೀತಿಯನ್ನು ತೃಪ್ತಿಯಾಗುವಷ್ಟು ಹೊಂದುವನು. ಆತನ ವಂಶದಲ್ಲಿ ಬ್ರಹ್ಮವರ್ಚಸ್ಸು ಪ್ರಕಾಶಿಸುವುದು. ಇದು ಆತ್ಮದ ಮೂತ್ರಪಿಂಡ ಮಾತ್ರವೇ. ನನ್ನ ಬಳಿಗೆ ನೀನು ಈಗ ಬಾರದಿದ್ದ ಪಕ್ಷದಲ್ಲಿ ನಿನ್ನ ಮೂತ್ರಪಿಂಡ ಒಡೆದು ಹೋಗುತ್ತಿತ್ತು" ಎಂದು ರಾಜನು ಹೇಳಿದ.

## ಪಞ್ಚಮ ಪ್ರಪಾಠಕ - ಸಪ್ತದಶ ಖಂಡ

**ಮಂ.ಶ್ಲೋ.॥ ಅಥ ಹೋವಾಚೋದ್ದಾಲಕಮಾರುಣಿಂ ಗೌತಮ ಕಂ ತ್ವಂಮಾತ್ಮಾನಮುಪಾಸ್ಸ ಇತಿ, ಪೃಥಿವೀಮೇವ ಭಗವೋ ರಾಜನ್ನಿತಿ ಹೋವಾಚೈಷವೈ ಪ್ರತಿಷ್ಠಾತ್ಮಾ ವೈಶ್ವಾನರೋಽಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಪ್ರತಿಷ್ಠಿತೋಽಸಿ ಪ್ರಜಯಾ ಚ ಪಶುಭಿಶ್ಚ (1) ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವ-ಮಾತ್ಮಾನಂ ವೈಶ್ವಾನರಮುಪಾಸ್ತೇ ಪಾದೌ ತ್ವೇತಾವಾತ್ಮನ ಇತಿ ಹೋವಾಚ ಪಾದೌ ತೇ ವ್ಯಮ್ಲಾಸ್ಯೇತಾಂ ಯನ್ಮಾಂ ನಾಗಮಿಷ್ಯ ಇತಿ॥ (2)**

ತಾ : ಆನಂತರ ಅಶ್ವಪತಿರಾಜನು ಉದ್ದಾಲಕ ಆರುಣಿ ಎನ್ನುವ ಮುನಿಯನ್ನು ಪ್ರಶ್ನಿಸಿದ. ಓ ಗೌತಮ ಮುನಿ! ನೀನು ಯಾವುದನ್ನು ಆತ್ಮವೆಂದು ಭಾವಿಸಿ ಉಪಾಸಿಸುತ್ತಿರುವೆ? ಎಂದು ಕೇಳಿದ. "ಓ ರಾಜಾ ನಾನು ಭೂಮಿಯನ್ನು ಆತ್ಮವೆಂದು ಭಾವಿಸಿ ಉಪಾಸಿಸುತ್ತಿರುವೆ" ಎಂದು ಹೇಳಿದ ಆ ಮುನಿ. "ಗೌತಮಾ ನೀನು ಉಪಾಸಿಸುತ್ತಿರುವುದು "ಪ್ರತಿಷ್ಠಾ" ಎನ್ನುವ ವೈಶ್ವಾನರಾತ್ಮವನ್ನು

(ಆದುದರಿಂದ) ಅದರಿಂದ ನೀನು ಪಶು ಸಂಪತ್ತಿ(ನಲ್ಲಿ)ನೊಂದಿಗೆ, ಪ್ರಜೆಗಳೊಂದಿಗೆ, ಪ್ರತಿಷ್ಠೆ ಹೊಂದಿದವನಾಗಿರುವೆ. ನೀನು ಅನ್ನವನ್ನು ತೃಪ್ತಿಯಾಗಿ ಭುಜಿಸುತ್ತೀಯೆ. ಪ್ರೀತಿಯನ್ನು ಹೊಂದುತ್ತೀಯೆ. ವೈಶ್ವಾನರಾತ್ಮನನ್ನು ಆ ರೀತಿಯಾಗಿ ಉಪಾಸಿಸುವವನು ಅನ್ನವನ್ನು, ಪ್ರೀತಿಯನ್ನು ಹೊಂದುವನು. ಆತನ ವಂಶದಲ್ಲಿ ಬ್ರಹ್ಮವರ್ಚಸ್ಸು ಕಾಣಬರುತ್ತದೆ. ಈ ಇದು ಬ್ರಹ್ಮನ ಒಂದು ಪಾದ ಮಾತ್ರ. ನೀನು ನನ್ನ ಬಳಿಗೆ ಬರದೇ ಇದ್ದಿದ್ದರೆ ಈ ರೀತಿಯಾಗಿ ಉಪಾಸನೆ ಮಾಡುತ್ತಿದ್ದ ಪಕ್ಷದಲ್ಲಿ ನಿನ್ನ ಪಾದಗಳು ಶಿಥಿಲವಾಗಿಬಿಡುತ್ತಿತ್ತು ಎಂದು ಅಶ್ವಪತಿರಾಜ ಹೇಳಿದನು.

(ಇದುವರೆಗೂ ಈ ಆರೂ ಜನ ಋಷಿಗಳು ಉಪಾಸಿಸಿದ ವೈಶ್ವಾನರನ ಅವಯವಗಳನ್ನು ಕುರಿತು ಹೇಳಲಾಯಿತು.

| ಉಪಾಸಕ | ಉಪಾಸನಾ ವಸ್ತು | ಹೆಸರು | ವೈಶ್ವಾನರನ ಅವಯವ |
|---|---|---|---|
| ಪ್ರಾಚೀನ ಶೀಡರು | ದ್ಯುಲೋಕ | ಸುತೇಜ | ಶಿರಸ್ಸು |
| ಸತ್ಯ ಯಜ್ಞ | ಆದಿತ್ಯ | ವಿಶ್ವರೂಪ | ನೇತ್ರ |
| ಇಂದ್ರದ್ಯುಮ್ನ | ವಾಯು | ಆವಹ, ಉದ್ವಹಾದಿ | ಪ್ರಾಣ |
| ಜನ | ಆಕಾಶ | ಬಹುಳ | ದೇಹದ ಮಧ್ಯ ಭಾಗ |
| ಬುಡಿಲ | ಜಲ | (ಧನ) ರಯಿ | ಮೂತ್ರಪಿಂಡ |
| ಉದ್ಧಾಲಕ | ಪೃಥ್ವಿ | ಪ್ರತಿಷ್ಠ(ಷ್ಠೆ) | ಪಾದಗಳು |

ಉಪಾಸನಾ ಫಲವನ್ನು ಹೇಳುವಾಗ ಪ್ರತಿಯೊಂದಕ್ಕೂ ಅನ್ನ ಭಕ್ಷಣೆ, ಪ್ರಿಯದರ್ಶನ, ವಂಶದಲ್ಲಿ ಬ್ರಹ್ಮವರ್ಚಸ್ಸು (ತೇಜಸ್ಸು) ಇರುವುದನ್ನು ಹೇಳಿದರು. ವೈಶ್ವಾನರ ಶಕ್ತಿಗಳು ಸಹ ಇವೇ! ಆಹುತಿಗಳನ್ನು ಭಕ್ಷಿಸುವುದು, ಬೆಳಕನ್ನು ನೀಡಿ ದರ್ಶನ ಕೊಡುವುದು, ಯಜ್ಞಗಳನ್ನು ಆಚರಿಸುವುದ-ರಿಂದ ಬ್ರಹ್ಮ ತೇಜಸ್ಸು ಉಂಟಾಗುತ್ತದೆ.

## ಪಞ್ಚಮ ಪ್ರಪಾಠಕ - ಅಷ್ಟಾದಶ ಖಂಡ

**ಮಂ.ಶ್ಲೋ.॥ ತಾನ್ ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ ವೈಶ್ವಾನರಂ ವಿದ್ವಾಂಸೋಽನ್ನಮತ್ಥ ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ನ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ (1) ತಸ್ಯ ಹವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣ ಪೃಥಗ್ವರ್ತ್ಮಾತ್ಮಾ ಸನ್ದೇಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದೌ ಉರ ಏವ ವೇದಿರ್ಲೋಮಾನಿ ಬರ್ಹಿಃ ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ ಪಚನ ಆಸ್ಯಮಾಹವನೀಯಃ (2)**

ತಾ : ಅಲ್ಲಿಗೆ ಬಂದ ಈ ಋಷಿಗಳೆಲ್ಲರನ್ನೂ ಕುರಿತು ಆ ರಾಜನು ಹೀಗೆಂದು:' ಅಯ್ಯಾ! ನೀವು ಈ ವೈಶ್ವಾನರಾತ್ಮವನ್ನು ಬೇರೆಬೇರೆಯಾಗಿ ತಿಳಿದು (ಅರಿತು)ಕೊಂಡಿದ್ದಿರಿ. ಆದ್ದರಿಂದ ತೃಪ್ತಿ-

ಯಾಗುವಷ್ಟು ಇಲ್ಲಿ ಅನ್ನವನ್ನು ಭುಜಿಸುತ್ತೀರಿ; ಆದರೆ ಸರ್ವವ್ಯಾಪ್ತಿಯಾದ ವೈಶ್ವಾನರಾತ್ಮವನ್ನು ತಿಳಿದವನು ಸರ್ವಲೋಕಗಳಲ್ಲಿಯೂ, ಸರ್ವಭೂತಗಳಲ್ಲಿಯೂ, ಎಲ್ಲರ ಆತ್ಮಗಳಲ್ಲಿಯೂ ಅನ್ನವನ್ನು ಉಪಭೋಗಿಸುವವನು. ಈ ವೈಶ್ವಾನರಾತ್ಮದ ಶಿರಸ್ಸೇ ಸುತೇಜ. ದ್ಯುಲೋಕ, ನೇತ್ರಗಳೇ ವಿಶ್ವ ರೂಪ, ಆದಿತ್ಯ, ಪೃಥಗ್ವರ್ತ್ಮವಾಯು ಪ್ರಾಣ, ಶರೀರದ ಮಧ್ಯ ಭಾಗವು ಆಕಾಶ. (ಮೂತ್ರಕೋಶ) ಜಲ ವಸ್ತಿರಯಿ. ಪಾದಗಳು ಪೃಥಿವಿ. ಊರುಗಳು ವೇದಿ. ರೋಮಗಳು ದರ್ಭೆ. ಹೃದಯವು ಗಾರ್ಹಪತ್ಯಾಗ್ನಿ, ಮನಸ್ಸು (ದಕ್ಷಿಣಾಗ್ನಿ) ಅನ್ವಾಹರ್ಯ ಪಚನದ ಬಾಯಿ ಆವಹನೀಯ.

## ಷಷ್ಠಮ ಪ್ರಪಾಠಕ - ಏಕೋನವಿಂಶ ಖಂಡ

**ಮಂ.ಶ್ಲೋ.॥ ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ ಸಯಾಂ ಪ್ರಥಮಾಮಾಹುತಿಂ ಜುಹುಯಾತ್ತಾಂ ಜುಹುಯಾತ್ ಪ್ರಾಣಾಯ ಸ್ವಾಹೇತಿ ಪ್ರಾಣಸ್ತೃಪ್ಯತಿ (1) ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾದಿತ್ಯೇ ತೃಪ್ಯತಿ ದ್ಯೌಸ್ತೃಪ್ಯತಿ ದಿವಿ ತೃಪ್ಯನ್ತ್ಯಾಂ ಯತ್ಕಿಂಚ ದ್ಯೌಶ್ಚಾದಿತ್ಯಶ್ಚಾದಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ (2)**

ತಾ : ಆದ್ದರಿಂದ ಮೊದಲು ಲಭಿಸಿದ ಅನ್ನವನ್ನು ಭುಜಿಸಬೇಕು. ಪ್ರಥಮದಲ್ಲಿ "ಪ್ರಾಣಾಯ-ಸ್ವಾಹಾ" ಎಂದು ಹೋಮವನ್ನು ಮಾಡಬೇಕು. ಆಗ ಪ್ರಾಣಕ್ಕೆ ಸಂತೃಪ್ತಿಯಾಗುತ್ತದೆ. ಪ್ರಾಣವು ತೃಪ್ತಿಹೊಂದುವುದರಿಂದ ನೇತ್ರೇಂದ್ರಿಯ, ನೇತ್ರತೃಪ್ತಿಯಿಂದಾಗಿ ಆದಿತ್ಯನು, ಆದಿತ್ಯ ತೃಪ್ತಿಯಿಂದಾಗಿ ದ್ಯುಲೋಕ, ಆದಿತ್ಯ ಭಗವಂತನೊಂದಿಗೆ ಆಧಾರವಾದ ಸರ್ವವೂ (ಎಲ್ಲವೂ) ತೃಪ್ತಿ ಹೊಂದುತ್ತವೆ. ಈ ರೀತಿಯಾಗಿ ಸಕಲವೂ ತೃಪ್ತಿ ಹೊಂದುವುದರಿಂದ, ತತ್‌ಕ್ಷಣವೇ, ಉಪಾಸಕನು ಸಕಲ ಸಂಪತ್ತುಗಳೊಡನೆ ಪ್ರಜೆಗಳೊಂದಿಗೆ, ಅನ್ನಾದಿಗಳಿಂದ ಬ್ರಹ್ಮತೇಜಸ್ಸನ್ನು ಹೊಂದಿದವನಾಗಿ ಸಂತೃಪ್ತನಾಗುತ್ತಿ.(ವನು)

## ಷಷ್ಠಮ ಪ್ರಪಾಠಕ - ವಿಂಶ ಖಂಡ

**ಮಂ.ಶ್ಲೋ.॥ ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ ಸ್ವಾಹೇತಿ ವ್ಯಾನಸ್ತೃಪ್ಯತಿ (1) ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚನ್ದ್ರಮಾಸ್ತೃಪ್ಯತಿ ಚನ್ದ್ರಮಸಿ ತೃಪ್ಯತಿ ದಿಶಸ್ತೃಪ್ಯನ್ತಿ ದಿಕ್ಷು ತೃಪ್ಯನ್ತೀಷು ಯತ್ಕಿಞ್ಚ ದಿಶಶ್ಚ ಚನ್ದ್ರಮಾಶ್ಚಾಧಿತಿಷ್ಠನ್ತಿ ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ (2)**

ತಾ : ಅನಂತರ ಎರಡನೆಯ ಆಹುತಿಯನ್ನು "ವ್ಯಾನಾಯ ಸ್ವಾಹಾ" ಎನ್ನುತ್ತಾ ಹೋಮವನ್ನು ಮಾಡಬೇಕು. ಈ ರೀತಿಯಾಗಿ ಮಾಡುವುದರಿಂದ ವ್ಯಾನವಾಯುವು ಸಂತೃಪ್ತಿಹೊಂದುವುದು. ವ್ಯಾನ ವಾಯುವು ತೃಪ್ತಿಗೊಳ್ಳುವುದರಿಂದ ಶ್ರೋತ್ರೇಂದ್ರಿಯವು, ಅದರಿಂದ ಚಂದ್ರನು, ಚಂದ್ರನಿಂದ ದಿಕ್ಕುಗಳು, ಚಂದ್ರನು ಆಧಾರವಾಗಿರುವ ಸಮಸ್ತವು ತೃಪ್ತಿ ಹೊಂದುತ್ತದೆ. ಈ ರೀತಿಯಾಗಿ ಸರ್ವವೂ

ತೃಪ್ತಿ ಹೊಂದಿದ ತತ್‌ಕ್ಷಣವೇ ಉಪಾಸಕನು ಪಶು ಸಂಪತ್ತಿನೊಂದಿಗೆ, ಪ್ರಜೆಗಳೊಡನೆ ಪವಿತ್ರವಾದ ಅನ್ನವನ್ನು ಹೊಂದಿ ಬ್ರಹ್ಮತೇಜಸ್ಸನ್ನು ಹೊಂದಿ ಭಾಗ್ಯವಂತನಾಗಿ ಸಂತುಷ್ಟನಾಗುತ್ತಾನೆ.

## ಪಞ್ಚಮ ಪ್ರಪಾಠಕ - ಏಕವಿಂಶ ಖಂಡ

ಮಂ.ಶ್ಲೋ.॥ ಅತ ಯಾಂ ತೃತೀಯಾಂ ಜುಹುಯಾತ್ತಾಂ ಜುಹುಯಾದಪಾನಾಯ ಸ್ವಾಹೇತ್ಯಪಾನ-ಸ್ತೃಪ್ಯತಿ (1) ಅಪಾನೇ ತೃಪ್ಯತಿ ವಾಕ್ತೃಪ್ಯತಿ ವಾಚಿ ತೃಪ್ಯನ್ತ್ಯಾಮಗ್ನಿಸ್ತೃಪ್ಯತ್ಯಗ್ನೌ ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯನ್ತ್ಯಾಂ ಯತ್ಕಿಂಚ ಪೃಥಿವೀ ಚಾಗ್ನಿಶ್ಚಾಧಿತಿಷ್ಠತಸ್ತ ತೃಪ್ಯತಿತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ (2)

ತಾ : ಆಮೇಲೆ ಮೂರನೆಯ ಆಹುತಿಯನ್ನು "ಅಪಾನಾಯ ಸ್ವಾಹಾ" ಎಂದು ಹೋಮ ಮಾಡಬೇಕು. ಆಗ ಅಪಾನವು ಸಂತುಷ್ಟವಾಗುವುದು. ಅಪಾನವಾಯುವಿಗೆ ತೃಪ್ತಿಯಾದಾಗ ವಾಕ್ಕು ಸಹ ತೃಪ್ತಿ ಹೊಂದುತ್ತದೆ. ಅದರಿಂದ ಅಗ್ನಿಯು, ಆ ಮೂಲಕ ಪೃಥ್ವಿಯು, ಅಗ್ನಿಯಲ್ಲಿ ಅಧಿಷ್ಠಿತ-ವಾಗಿರುವ ಸರ್ವವೂ ತೃಪ್ತಿ ಹೊಂದುವುದು. ಹೀಗೆ ಎಲ್ಲವೂ ತೃಪ್ತಿ ಹೊಂದಿದ ಕೂಡಲೇ ಉಪಾಸಕನು ಪಶುಗಳು, ಪ್ರಜೆ, ಯೋಗ್ಯವಾದ ಅನ್ನ ಬ್ರಹ್ಮವರ್ಚಸ್ಸು ಇವುಗಳಿಂದ ಸಂತೃಪ್ತನಾಗುತ್ತಾನೆ.

## ಪಞ್ಚಮ ಪ್ರಪಾಠಕ - ದ್ವಾವಿಂಶ ಖಂಡ

ಮಂ.ಶ್ಲೋ.॥ ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ಸಮಾನಾಯ ಸ್ವಾಹೇತಿ ಸಮಾನ-ಸ್ತೃಪ್ಯತಿ (1) ಸಮಾನೇ ತೃಪ್ಯತಿ ಮನಸ್ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯನ್ತ್ಯಾ ಯತ್ಕಿಂಚ ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತ-ತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ (2)

ತಾ: ಆನಂತರ ನಾಲ್ಕನೆಯ ಆಹುತಿಯನ್ನು "ಸಮಾನಾಯಸ್ವಾಹಾ" ಎಂದು ಹೋಮ ಮಾಡಬೇಕು. ಅದರಿಂದ ಸಮಾನವಾಯುವು ತೃಪ್ತಿ ಹೊಂದುತ್ತದೆ. ಸಮಾನವಾಯುವಿನ ಸಂತೃಪ್ತಿ-ಯಿಂದಾಗಿ ಮನಸ್ಸಿಗೆ ತೃಪ್ತಿಯಾಗುತ್ತದೆ. ಅದರಿಂದ ಪರ್ಜನ್ಯ, ತನ್ಮೂಲಕ ವಿದ್ಯುತ್ತು ಆನಂತರ ಪರ್ಜನ್ಯನಲ್ಲಿ ಅಧಿಷ್ಠಿತವಾಗಿರುವ ಸರ್ವವು ತೃಪ್ತಿಹೊಂದುತ್ತವೆ. ಈ ಸಮಸ್ತವೂ ಸಂತುಷ್ಟಿಹೊಂದಿದ ತಕ್ಷಣವೇ ಉಪಾಸಕನು ಪಶು ಸಂಪತ್ತಿನೊಂದಿಗೆ, ಪ್ರಜೆಗಳೊಂದಿಗೆ, ಪವಿತ್ರವಾದ ಅನ್ನದೊಂದಿಗೆ, ಬ್ರಹ್ಮತೇಜಸ್ಸನ್ನು ಹೊಂದಿದವನಾಗಿ ಸಂತೃಪ್ತಿಯಿಂದಿರುತ್ತಾನೆ.

## ಪಞ್ಚಮ ಪ್ರಪಾಠಕ - ತ್ರಯೋವಿಂಶ ಖಂಡ

ಮಂ.ಶ್ಲೋ.॥ ಅಥ ಯಾಂ ಪಂಚಮೀಂ ಜುಹುಯಾತ್ತಾಂ ಜುಹುಯಾದುದಾನಾಯ ಸ್ವಾಹೇತ್ಯುದಾನ-ಸ್ತೃಪ್ಯತಿ (1) ಉದಾನೇ ತೃಪ್ಯತಿ ತ್ವಕ್ತೃಪ್ಯತಿ ತ್ವಚಿ ತೃಪ್ಯನ್ತ್ಯಾಂ ವಾಯುಸ್ತೃಪ್ಯತಿ ವಾಯು

**ತೃಪ್ಯತ್ಯಾಕಾಶಸ್ತೃಪ್ಯತ್ಯಾಕಾಶೇ ತೃಪ್ಯತಿ ಯತ್ಕಿಂಚ ವಾಯುಶ್ಚಾಕಾಶಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ (2)**

ತಾ : ಆನಂತರ ಐದನೆಯ ಆಹುತಿಯನ್ನು **"ಉದಾನಾಯಸ್ವಾಹ"** ಎಂದು ಹೋಮ ಮಾಡಬೇಕು. ಆಗ ಉದಾನಾವಾಯುವು ಸಂತೃಪ್ತಿ ಹೊಂದುವುದು. ಉದಾನಾವಾಯುವು ತೃಪ್ತಿ ಹೊಂದುವುದರಿಂದ ತ್ವಗಿಂದ್ರಿಯವು ನಂತರ ವಾಯುವು ಅದರಿಂದ ಆಕಾಶ, ಅದರಿಂದ ವಾಯುವು, ಗಗನ ಭಾಗದಲ್ಲಿ ಪ್ರತಿಷ್ಠೆ ಹೊಂದಿರುವ ಸಮಸ್ತವನ್ನು ಸಂತೃಪ್ತಿಗೊಳಿಸಿದಂತಾಗುವುದು. ಸಮಸ್ತವನ್ನು ಸಂತೃಪ್ತಿ ಗೊಳಿಸಿದ ಕೂಡಲೇ ಉಪಾಸಕನು ಪ್ರಜೆಗಳೊಂದಿಗೆ, ಪಶು ಸಂಪತ್ತಿನೊಡನೆ, ಪವಿತ್ರವಾದ ಅನ್ನವನ್ನು ಹೊಂದಿದವನಾಗಿ ತೃಪ್ತಿಯಿಂದ ಬ್ರಹ್ಮವರ್ಚಸ್ಸಿನೊಂದಿಗೆ ಪ್ರಕಾಶಿಸುವನು.

## ಪಞ್ಚಮ ಪ್ರಪಾಠಕ – ಚತುರ್ವಿಂಶ ಖಂಡ

**ಮಂ.ಶ್ಲೋ.॥ ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಙ್ಗಾರಾನಪೋಹ್ಯ ಭಸ್ಮನಿ ಜುಹುಯಾ–ತ್ತಾದೃಕ್ತತ್ಸ್ಯಾತ್ (1) ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ (2) ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ (3) ತಸ್ಮಾದುಹೈವಂ ವಿದ್ಯದ್ಯಪಿ ಚಣ್ಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾತ್ಮನಿ ಹೈವಾಸ್ಯ ತದ್ವೈಶ್ವಾನರೇ ಹುತಂ ಸ್ಯಾದಿತಿ ತದೇಷಶ್ಲೋಕಃ (4) ಯಥೇಹ ಕ್ಷುಧಿತಾ ಬಾಲಾ ಮಾತರಂ ಪರ್ಯುಪಾಸತೇ, ಏವಂ ಸರ್ವಾಣಿ ಭೂತಾನ್ಯಗ್ನಿಹೋತ್ರಮುಪಾಸತ ಇತ್ಯಗ್ನಿಹೋತ್ರಮುಪಾಸತ ಇತಿ (5)**

ತಾ : ಈ ರೀತಿಯಾಗಿ ವೈಶ್ವಾನರಾತ್ಮಕ ವಿಜ್ಞಾನವನ್ನು ಅಭ್ಯಾಸ ಮಾಡದೆಯೆ, ಅಗ್ನಿ ಹೋತ್ರವನ್ನು ಮಾಡಿ ಯಜ್ಞವನ್ನು ಮಾಡುವವನ ಹೋಮವು ಬೆಂಕಿ ಇಲ್ಲದ ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾಗುತ್ತದೆ. ವೈಶ್ವಾನರಾತ್ಮ ಪರಿಜ್ಞಾನವನ್ನು ಹೊಂದಿ, ಅಗ್ನಿ ಹೋತ್ರವನ್ನು ಮಾಡುವವನ ಹೋಮವು ಸರ್ವಲೋಕಗಳಲ್ಲಿಯೂ, ಸರ್ವಾತ್ಮಕಗಳಲ್ಲಿಯೂ ಹೋಮ ಮಾಡಿದಂತಾಗುತ್ತದೆ. ಈ ರೀತಿಯಾಗಿ ಗ್ರಹಿಸಿ ಅಗ್ನಿಹೋತ್ರವನ್ನು ಮಾಡುವವನ ಪಾಪಗಳು ಅಗ್ನಿಯಲ್ಲಿ ಹಾಕಲಾದ ದರ್ಭೆಯಂತೆ, ಹತ್ತಿಯಂತೆ ಭಗ್ಗನೆ ಹತ್ತಿ ಉರಿದುಹೋಗುವಂತೆ ತತ್‌ಕ್ಷಣ ಭಸ್ಮವಾಗಿಬಿಡುತ್ತದೆ. ಈ ವೈಶ್ವಾನರ ವಿದ್ಯೆಯನ್ನು ತಿಳಿದುಕೊಂಡವನು ಚಂಡಾಲನಿಗೆ ಉಚ್ಛಿಷ್ಟವನ್ನು ಕೊಟ್ಟರೂ, ಅದು ವೈಶ್ವಾನರಾತ್ಮದಲ್ಲಿ ಮಾಡಿದ ಹೋಮದಂತೆಯೇ ಆಗುವುದು. ಅಂದರೆ ಶ್ರೇಷ್ಠವಾದ ಫಲವು ದೊರೆಯುತ್ತದೆಯೆಂಬ ಭಾವ! ಈ ವಿಷಯವಾಗಿ ಮಂತ್ರವಿರುವುದು. ಆದ್ದರಿಂದ ಹಸಿದಿರುವ ಇರುವ ಕಂದಮ್ಮಗಳು ತಾಯಿಯನ್ನು ಉಪಾಸಿಸುವ(ಆಶ್ರಯಿಸುವ) ರೀತಿಯಲ್ಲಿ, ಜೀವಿಗಳೆಲ್ಲರೂ ಅಗ್ನಿಹೋತ್ರೋಪಾಸನೆ ಮಾಡಬೇಕು (ವೈಶ್ವಾನರಾಗ್ನಿ ವಿದ್ಯೆಯ ವಿಧಾನಗಳನ್ನು ಹೇಳಲಾಗಿದೆ.) (5ನೆಯ ಪ್ರಪಾಠಕದಲ್ಲಿ 24 ಖಂಡಗಳು, 88 ಮಂತ್ರಗಳು ಇವೆ.)

# ಷಷ್ಠ ಪ್ರಪಾಠಕ - ಪ್ರಥಮ ಖಂಡ

ಮಂ.ಶ್ಲೋ.॥ ಓಮ್, ಶ್ವೇತಕೇತುರ್ಹ್ವಾರುಣೇಯ ಆಸ ತಂ ಹ ಪಿತೋವಾಚ ಶ್ವೇತಕೇತೋವಸ ಬ್ರಹ್ಮಚರ್ಯಂ ನ ವೈ ಸೌಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬಂಧುರಿವ ಭವತೀತಿ (1) ಸ ಹ ದ್ವಾದಶ ವರ್ಷ ಉಪೇತ್ಯ ಚತುರ್ವಿಂಶತಿ ವರ್ಷಃ ಸರ್ವಾನ್ವೇದಾನಧೀತ್ಯ ಮಹಾಮನಾ ಅನೂಚಾನಮಾನೀ-ಸ್ತಬ್ಧ ಏಯಾಯ ತಂ ಹ ಪಿತೋವಾಚ (2) ಶ್ವೇತಕೇತೋ ಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶ ಪ್ರಾಕ್ಷೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ ಕಥಂ ನು ಭಗವಸ್ಸ ಆದೇಶೋ ಭವತೀತಿ (3)

ತಾ : ಅರುಣನ ಪೌತ್ರ ಅರುಣ ಮುನಿಯ ಕುಮಾರನಾದ ಶ್ವೇತಕೇತು ಎನ್ನುವವನೊಬ್ಬನಿದ್ದನು. ಆತನನ್ನು ಕುರಿತು ತಂದೆಯಾದ (ಆರುಣಿ) ಉದ್ದಾಲಕನು "ಓ ಶ್ವೇತಕೇತೂ! ನೀನು ಸದ್ಗುರುವನ್ನಾ-ಶ್ರಯಿಸಿ, ಬ್ರಹ್ಮಚರ್ಯೆಯನ್ನು ಅನುಷ್ಠಿಸುತ್ತಾ ಅಧ್ಯಯನ ಮಾಡುವಂತಹವನಾಗು. ನಮ್ಮ ವಂಶದಲ್ಲಿ ವೇದಾಧ್ಯಯನ ಮಾಡದೆ. ನಾಮಮಾತ್ರ ಬ್ರಾಹ್ಮಣರಾಗಿ ಯಾರೂ ಇಲ್ಲ ಎಂದು ಬೋಧಿಸಿದ. 12 ಸಂವತ್ಸರಗಳ ವಯಸ್ಸಿನ ಶ್ವೇತಕೇತು ಗುರುಕುಲಾಶ್ರಮವನ್ನು ಸೇರಿ 24 ಸಂವತ್ಸರಗಳ ವಯಸ್ಸಾಗುವವರೆಗೂ ವೇದವಿದ್ಯಾಭ್ಯಾಸವನ್ನು ಮಾಡಿದ. 24 ವರ್ಷ ವಯಸ್ಸಿನವರೆಗೂ ವಿದ್ಯಾಭ್ಯಾಸವನ್ನು ಮುಗಿಸಿ ವಿದ್ಯಾಗರ್ವವನ್ನು ಹೊಂದಿದವನಾಗಿ ಅಭಿಮಾನದಿಂದ ಮನೆಗೆ ಬಂದ. ಶ್ವೇತಕೇತುವನ್ನು ನೋಡಿ ತಂದೆಯು, "ಸೌಮ್ಯಾ! ನಿನ್ನ ಮುಖವನ್ನು ನೋಡಿದರೆ ನೀನು ಬಹಳ ದೊಡ್ಡ ಮನುಷ್ಯನೆಂದು, ವಿದ್ಯಾವಂತನೆಂದು ಭಾವಿಸುತ್ತಿರುವಂತೆ ಕಾಣುತ್ತದೆ. ಆಗಲಿ ಬ್ರಹ್ಮವಿದ್ಯೋಪ-ದೇಶವನ್ನು ಹೊಂದಿರುವೆಯಾ?" ಎಂದು ಕೇಳಿದ. ಯಾವ ಜ್ಞಾನದಮೂಲಕ ಸರ್ವಾಂತರ್ಯಾಮಿಯು ಕೇಳಬರುವಂತಾಗುತ್ತದೆಯೋ, ತರ್ಕಿಸಲು ಸಾಧ್ಯವಿಲ್ಲದ ತರ್ಕವನ್ನು ಮಾಡುವಂತಾಗುವುದೋ, ಯಾವುದನ್ನು ತಿಳಿದುಕೊಂಡ ಮೇಲೆ ಇನ್ನು ಏನನ್ನೂ ತಿಳಿದುಕೊಳ್ಳಬೇಕಾದ ಅಗತ್ಯವಿಲ್ಲವೋ, ಅಂತಹ ಜ್ಞಾನವನ್ನು ನಿಮ್ಮ ಗುರುದೇವರ ಮೂಲಕ ಅಭ್ಯಸಿಸಿರುವೆಯಾ? ಎಂದು ಕೇಳಿದ "ತಂದೆಯೇ! ಅಂತ ಜ್ಞಾನೋಪದೇಶವ್ಯಾವುದೂ ನನಗೆ ಗೊತ್ತಿಲ್ಲ" ಎಂದ ಶ್ವೇತಕೇತು.

ಮಂ.ಶ್ಲೋ.॥ ಯಥಾ ಸೋಮ್ಯೈಕೇನಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ (4) ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಮ್ (5) ಯಥಾ ಸೋಮ್ಯೈಕೇನ ನಖನಿ-ಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯಂ ಏವಂ ಸೋಮ್ಯ ಸ ಆದೇಶೋ ಭವತೀತಿ (6) ನ ವೈ ನೂನಂ ಭಗವನ್ತ ಸ್ತ ಏತದವೇದಿಷುರ್ಯದ್ಧ್ಯೇತದವೇದಿಷ್ಯನ್ ಕಥಂ ಮೇ ನಾವಕ್ಷ್ಯನ್ನಿತಿ ಭಗವಾಂ ಸ್ತ್ವೇವ ಮೇ ತದ್ಬ್ರವೀತ್ವಿತಿ ತಥಾ ಸೋಮ್ಯೇತಿ ಹೋವಾಚ (7)

ತಾ : (ಉದ್ಧಾಲಕನು) ಎಲೈ ಶ್ವೇತಕೇತೂ! 'ಸೌಮ್ಯಾ!' ಮೃಣ್ಮಯವಾದ ಮಡಕೆಗಳು ಮುಂತಾದಗಳೆಲ್ಲವೂ ಮೃತ್ತಿಕೆಗಳೇ! ಮಣ್ಣೆ! ನಾಮ ರೂಪಗಳು ಬೇರೆಯಾಗಿರುತ್ತವೆಯಷ್ಟೆ! ಮೃತ್ತಿಕೆ ಮಾತ್ರ ಸತ್ಯ! ಸೌಮ್ಯಾ! ಲೋಕದಲ್ಲಿ ಲೋಹಗಳನ್ನು ಕುರಿತಾದ ಜ್ಞಾನದಿಂದ ಎಲ್ಲ ಲೋಹಪದಾರ್ಥಗಳ ಜ್ಞಾನವು ಹೇಗೆ ಉಂಟಾಗುವುದೋ ಅದೇ ರೀತಿಯಾಗಿ ಇವೆಲ್ಲವೂ ವಾಚಾರಂಭಣ ಮಾತ್ರವೇ. ವಿಕಾರಗಳಾದ ನಾಮರೂಪಗಳೆಲ್ಲವೂ ಅಸತ್ಯಗಳು. ಲೋಹವೊಂದೇ (ಚಿನ್ನ) ಸತ್ಯ. ಮಗೂ! ಒಂದು ಚಿಕ್ಕ ಕಬ್ಬಿಣದ ಕತ್ತಿಯ ಜ್ಞಾನದಿಂದ ಎಲ್ಲ ಕಬ್ಬಿಣದ ಪದಾರ್ಥಗಳ ಜ್ಞಾನವು ಹೇಗೆ ಉಂಟಾಗುತ್ತದೆಯೋ, ಅಂತೆಯೇ ಪರಮಾರ್ಥದಲ್ಲಿ ಸಹ ಕಬ್ಬಿಣದಲ್ಲಿ ಮಾಡಿದ ವಸ್ತುಗಳೆಲ್ಲವೂ ವಿಕಾರಗಳು, ನಾಮ ಮಾತ್ರಗಳು ಕಬ್ಬಿಣ ಮಾತ್ರವೇ ಸತ್ಯ. ಆಗ ಶ್ವೇತಕೇತು, "ತಂದೆಯೇ! ಸತ್ಯವಾಗಿಯೂ ಈ ಜ್ಞಾನ ನಮ್ಮ ಗುರುಗಳಿಗೆ ತಿಳಿಯದು. ತಿಳಿದಿದ್ದರೆ ಅವರು ನನಗೆ ಹೇಳುತ್ತಿದ್ದರು. ಈ ಜ್ಞಾನವನ್ನು ನೀವೇ ಬೋಧಿಸಿ" ಎಂದು ತಂದೆಯನ್ನು ಕೇಳಿದ.

## ಷಷ್ಠ ಪ್ರಪಾಠಕ – ದ್ವಿತೀಯ ಖಂಡ

**ಮಂ.ಶ್ಲೋ.॥ ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ । ತದ್ಧೈಕ ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಸ್ಸಜ್ಜಾಯತ (1) ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ ಕಥಮಸತಸ್ಸಜ್ಜಾಯೇತೇತಿ ಸತ್ತ್ವೈವ ಸೋಮ್ಯೇದಮಗ್ರ ಆಸೀದೇಕ -ಮೇವಾದ್ವಿತೀಯಮ್ (2) ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ ಐಕ್ಷತ ಬಹುಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ। ತಸ್ಮಾದ್ಯತ್ರ ಕ್ವಚ ಶೋಚತಿ ಸ್ವೇದತೇ ವಾ ಪುರುಷಸ್ತೇಜಸ ಏವ ತದಧ್ಯಾಪೋ ಜಾಯನ್ತೇ (3) ತಾ ಆಪ ಐಕ್ಷಂತ ಬಹ್ವ್ಯಸ್ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜನ್ತ ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತದ್ಭ್ಯ ಏವ ತದಧ್ಯನ್ನಾದ್ಯಂ ಜಾಯತೇ (4)**

ತಾ : ನಾಮರೂಪಗಳು ತುಂಬಿದ ಈ ಸೃಷ್ಟಿಯು ಹುಟ್ಟುವುದಕ್ಕೆ ಮೊದಲೇ ಸತ್ ಆಗಿ ಏಕವಾಗಿ ಅದ್ವಿತೀಯವಾಗಿ ಇತ್ತು. ಅಸತ್ತೂ ಸಹ ಇದೆಯೆಂದು ಕೆಲವರು ಹೇಳಿದ್ದಾರೆ. ಆದರೆ ಅದು ಹೇಗೆ ಸಾಧ್ಯವಾಗುವುದು? ಅಸತ್ತಿನಿಂದ ಸತ್ ಯಾವ ರೀತಿ ಹುಟ್ಟುವುದು? ಹಾಗೆ ಜನಿಸುವುದು ಅಸಂಭವವೇ ಆಗುತ್ತದೆ. ಆದ್ದರಿಂದ ಸತ್ ಆಗಿರುವ ಪರಬ್ರಹ್ಮವೇ ಮೊಟ್ಟ ಮೊದಲು ಇತ್ತು. ಎರಡನೆಯ ವಸ್ತುವೇ ಇಲ್ಲವೆಂದು ತಿಳಿದುಕೊಂಡೆವು. ಆ ಸದ್ರೂಪ ಪರಬ್ರಹ್ಮವು ತಾನು ಬಹುರೂಪ-ಗಳನ್ನು ಧರಿಸಬೇಕೆಂದು ಮೊದಲು ಸಂಕಲ್ಪಿಸಿದನು. ಆಗ ಮೊದಲು ತೇಜಸ್ಸನ್ನು ಉತ್ಪತ್ತಿ ಮಾಡಿತು. ಆಮೇಲೆ ಜಲವನ್ನು ಉತ್ಪತ್ತಿ ಮಾಡಿತು. ಆದ್ದರಿಂದಲೇ ಪುರುಷನು ತಪ್ತನಾದಾಗ ಕ್ರೋಧ ಹೊಂದಿದಾಗ ಸ್ವೇದ (ಬೆವರು) ಬಂದಿತು. ಅಗ್ನಿಯಿಂದಲೇ ನೀರು ಹುಟ್ಟುವುದು. ಆ ಜಲವು ಅನೇಕ ರೂಪಗಳನ್ನು ಧರಿಸಬೇಕೆಂದು ಆಲೋಚಿಸಿ, ಆ ಜಲದಿಂದಲೇ ಅನ್ನವನ್ನು ಹುಟ್ಟುವಂತೆ ಮಾಡಿದ. ಆದ್ದರಿಂದಲೇ ಎಲ್ಲಿ ಯಾವಾಗ ಮಳೆ ಸುರಿದರೂ ಅಲ್ಲಿ ಸಮೃದ್ಧಿಯಾಗಿ ಅನ್ನವು ಅಭಿವೃದ್ಧಿಯಾಗುತ್ತದೆ. ಜಲದಿಂದಲೇ ಪುಷ್ಟಿಕರವಾದ ಅನ್ನವು ಹುಟ್ಟುತ್ತದೆ. (ಇಲ್ಲಿ ತ್ರಿವೃತ್ಕರಣವನ್ನು ನಿರೂಪಿಸುವುದು ಅವಶ್ಯವೆನಿಸಿರುವುದ-

ರಿಂದ ಮೂರು ಭೂತಗಳ (ಪಂಚಭೂತಗಳಲ್ಲಿ ಮೂರು) ಸೃಷ್ಟಿಯನ್ನು ಕುರಿತು ಮಾತ್ರವೇ ಹೇಳಿರುವುದು.) ಸಮ್ಮಿಶ್ರಣಗಳಿಂದ ಏರ್ಪಟ್ಟ ಸೃಷ್ಟಿ ವಿಧಾನ. (ತ್ರಿವೃತ್ಕರಣವೆಂದರೆ ಅಗ್ನಿ, ಜಲ ಪೃಥಿವಿ. ಇಲ್ಲಿ ಬ್ರಹ್ಮ ತತ್ತ್ವವನ್ನು ಹೇಳುವುದಷ್ಟೇಯೆಂದು ಮುಮುಕ್ಷುಗಳು ತಿಳಿಯಬೇಕು. ಸದ್ದೇವತೆ ಆ ಮೂವರು ದೇವತೆಗಳನ್ನೊಂದೊಂದಾಗಿ ತ್ರಿವೃಕ್ಕರಣ ಮಾಡಿದ. ಸದಾದಾರದಿಂದ ಸೃಷ್ಟಿ ಕಲ್ಪಿಸಲಾಯಿತು. ಎಲೈ ಸೌಮ್ಯನೆ! ಮೂವರು ದೇವತೆಗಳ ತ್ರಿವೃತ್ಕರಣವು ಯಾವ ಪ್ರಕಾರವೆನ್ನುವುದನ್ನು ಮತ್ತೂ ಆಲಿಸುವಂತವನಾಗು (ಸ್ವೇದ ಜಲಗಳು, ಊಷ್ಮಜಗಳು- ಈ ಜೀವಿಗಳ ಬಗ್ಗೆ ಪ್ರತ್ಯೇಕವಾಗಿ ಹೇಳಿಲ್ಲ.) ಇಲ್ಲಿ ಶ್ರುತಿಗೆ ತಾತ್ಪರ್ಯ, ಸೃಷ್ಟಿ ವರ್ಣನೆಯಲ್ಲಿ ಇಲ್ಲ.

## ಷಷ್ಠ ಪ್ರಪಾಠಕ - ತೃತೀಯ ಖಂಡ

**ಮಂ.ಶ್ಲೋ.॥ ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವನ್ತ್ಯಾಂಡಜಂ ಜೀವಜಮುದ್ಭಿಜ -ಮಿತಿ (1) ಸೇಯಂ ದೇವತ್ಯೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇ-ನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ (2) ತಾಸಾಂ ತ್ರಿವೃತಂ ತ್ರಿವೃತ-ಮೇಕೈಕಾಙ್ಕರವಾಣೀತಿ ಸೇಯಂ ದೇವ ತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇ-ನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರೋತ್ (3) ತಾಸಾಂ ತ್ರಿವೃತಂ ತ್ರಿವೃತ-ಮೇಕೈಕಾಮಕರೋದ್ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಸ್ತ್ರೀವೃತ್ರಿವೃ-ದೇಕೈಕಾ ಭವತಿ ತನ್ಮೇ ವಿಜಾನೀಹೀತಿ (4)**

ತಾ॥ ಈ ಮೂರು ಭೂತಗಳ ಸಮ್ಮಿಶ್ರಣದಿಂದ ಈ ಭೂತಗಳು ಅಂಡಜ, ಜರಾಯುಜ, ಉದ್ಭಿಜ್ಯಗಳೆಂದು ಮೂರು ವಿಧಗಳಾಗಿವೆ. (ಸ್ವೇದಜವೆನ್ನುವವು ಮೇಲಿನ ಮೂರರಲ್ಲಿ ಅಂತರ್ಗತ-ವಾಗಿದೆ.) ಸತ್ ಆಗಿರುವ ಈ ದೇವತೆಯನ್ನು ತಾನು ಇನ್ನು ಜೀವಾತ್ಮ ರೂಪದಲ್ಲಿ ಈ ಮೂವರು ದೇವತೆಗಳಲ್ಲಿ, ಅಂದರೆ ಅಗ್ನಿ, ಜಲ, ಅನ್ನಗಳಲ್ಲಿ ಪ್ರವೇಶಗೊಳಿಸಿ, ನಾಮರೂಪಗಳನ್ನು ವ್ಯಕ್ತಪಡಿಸಬೇಕೆಂದು ಆಲೋಚಿಸಿದ. ಅನೇಕ ನಾಮರೂಪಗಳಿಂದ ಸೃಷ್ಟಿಸಬೇಕೆಂದು ಸಂಕಲ್ಪಿಸಿದ. ಇನ್ನೂ ನಾನು ಈ ದೇವತೆಗಳ ತ್ರಿವೃತ್ಕರಣ ಮಾಡಬೇಕೆಂದು ಸಂಕಲ್ಪಿಸಿದೆ. ಸತ್ ಎನ್ನುವ ಈ ದೇವತೆ ಜೀವಾತ್ಮ ರೂಪದಲ್ಲಿ ಈ ಮೂವರು ದೇವತೆಗಳಲ್ಲಿ (ಭೂತಗಳಲ್ಲಿ) ಪ್ರವೇಶಿಸಿ ನಾಮರೂಪಗಳನ್ನು ಕಲ್ಪಿಸಿದ.

## ಷಷ್ಠ ಪ್ರಪಾಠಕ - ಚತುರ್ಥ ಖಂಡ

**ಮಂ.ಶ್ಲೋ.॥ ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯಾಪಾಗಾದಗ್ನೇರಗ್ನಿತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ (1) ಯದಾದಿತ್ಯಸ್ಯ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯಾಪಾಗಾದಾದಿತ್ಯಾದಾದಿತ್ಯತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ (2)**

ತಾ: ಅಗ್ನಿಯ ರಕ್ತವರ್ಣವು ತೇಜಸ್ಸು; ಶ್ವೇತವರ್ಣವು ಜಲ, ಕಪ್ಪಗಿನ ರೂಪ ಪೃಥಿವಿ (ಅನ್ನ). ಈ ವರ್ಣೋತ್ಪತ್ತಿಗಳನ್ನು ಬಿಟ್ಟಲ್ಲಿ ಅಗ್ನಿಯಲ್ಲಿರುವ ಅಗ್ನಿ ತತ್ತ್ವವು ಇಲ್ಲ. ಉಳಿದುದೆಲ್ಲವೂ ವಾಚಾರಂಭಣ. ವಿಕಾರಗಳೆಲ್ಲವೂ ನಾಮ ಮಾತ್ರಗಳೇ. ಮೂರು ವಿಧಗಳಾಗಿರುವ ಆ ರೂಪಗಳು ಮಾತ್ರವೇ ಸತ್ಯ. ಆದಿತ್ಯನ ರಕ್ತವರ್ಣವೇ ತೇಜಸ್ಸು ಶ್ವೇತವರ್ಣವೇ ಜಲ. ಕಪ್ಪಗಿನ ರೂಪವೇ ಭೂಮಿ (ಅನ್ನ) ಈ ತತ್ತ್ವಗಳನ್ನು ಬಿಟ್ಟರೆ ಸೂರ್ಯನಿಗೆ ಸೂರ್ಯತ್ವವೇ ಇಲ್ಲ ಉಳಿದುದೆಲ್ಲವೂ ವಾಚಾರಂಭಣ ವಿಕಾರಗಳೆಲ್ಲವೂ ನಾಮ ರೂಪಗಳೇ ಈ ಮೂರು ರೂಪಗಳು ಮಾತ್ರವೇ ಸತ್ಯ.

**ಮಂ.ಶ್ಲೋ.॥ ಯಚ್ಚನ್ದ್ರಮಸೋ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯಾಪಾಗಾಚ್ಚನ್ದ್ರಾಚ್ಚನ್ದ್ರತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ (3) ಯದ್ವಿದ್ಯುತೋ ರೋಹಿತಂ ರೂಪಂ ತೇಜ-ಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯಾಪಾಗಾದ್ವಿದ್ಯುತೋ ವಿದ್ಯುತ್ತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿರೂಪಾಣೀತ್ಯೇವ ಸತ್ಯಂ (4) ಏತದ್ಧಸ್ಮವೈ ತದ್ವಿದ್ವಾಗ್ಂಸ ಆಹುಃ ಪೂರ್ವೇ ಮಹಾಶಾಲಾ ಮಹಾಶ್ರೋತ್ರಿಯಾ ಸ ನೋದ್ಯ ಕಶ್ಚ ನಾ ಶ್ರುತಮಮತಮವಿಜ್ಞಾತಮುದಾಹರಿಷ್ಯತೀತಿ ಹ್ಯೇಭ್ಯೋ ವಿದಾಂ ಚಕ್ರುಃ (5)**

ತಾ : ಚಂದ್ರನಲ್ಲಿನ ರಕ್ತ ವರ್ಣವೇ ತೇಜಸ್ಸು; ಬೆಳ್ಳಗಿನ ರೂಪವೇ ಜಲ. ಕಪ್ಪಗಿನ ರೂಪವೇ ಭೂಮಿ (ಅನ್ನ) ಇವುಗಳನ್ನು ಬಿಟ್ಟಲ್ಲಿ ಚಂದ್ರನಲ್ಲಿನ ಚಂದ್ರತತ್ತ್ವವು ಇಲ್ಲವಾಗುತ್ತದೆ. ಉಳಿದುದೆಲ್ಲವೂ ವಾಚಾರಂಭಣ. ವಿಕಾರಗಳೆಲ್ಲವೂ ನಾಮಮಾತ್ರಗಳು. ಈ ಮೂರು ರೂಪಗಳು ಮಾತ್ರವೇ ಸತ್ಯವಾದುವುಗಳು. ವಿದ್ಯುತ್ತಿನಲ್ಲಿರುವ ರಕ್ತವರ್ಣವೇ ತೇಜಸ್ಸು. ಬೆಳ್ಳಗಿನ ರೂಪವೇ ಜಲ. ಕಪ್ಪಗಿನ ರೂಪವೇ ಭೂಮಿ (ಅನ್ನ). ಇವುಗಳನ್ನು ಬಿಟ್ಟಲ್ಲಿ ವಿದ್ಯುತ್ ತನ್ನ ರೂಪವನ್ನು ಕಳೆದುಕೊಳ್ಳುತ್ತದೆ. ಉಳಿದುದೆಲ್ಲವೂ ವಾಚಾರಂಭಣ ಮಾತ್ರ ವಿಕಾರಗಳೆಲ್ಲವೂ ನಾಮಮಾತ್ರದ್ದಾಗಿವೆ. ಈ ಮೂರು ರೂಪಗಳೇ ಸತ್ಯ ಮಹಾಶ್ರೋತ್ರೀಯರು. ಉತ್ತಮ ಗೃಹಸ್ಥರು, ಸದ್ವಸ್ತುವಿನ ತತ್ತ್ವವನ್ನು ಯಥಾರ್ಥ-ವಾಗಿ ತಿಳಿಸಿಕೊಟ್ಟಿರುವುದರಿಂದ ನಮ್ಮ ವಂಶದಲ್ಲಿಯೂ ಸಹ ಪೂರ್ವಜರೆಲ್ಲರೂ ಬ್ರಹ್ಮತ್ತ್ವವನ್ನು ಚೆನ್ನಾಗಿ ಚಿಂತನೆಮಾಡಿ ಬ್ರಹ್ಮವೇತ್ತರಾದರು.

**ಮಂ.ಶ್ಲೋ.॥ ಯದುರೋಹಿತಮಿವಾಭೂದಿತಿ ತೇಜಸಸ್ತದ್ರೂಪಮಿತಿ ತದ್ವಿದಾಞ್ಚಕ್ರುರ್ಯದು ಶುಕ್ಲಮಿವಾಭೂ-ದಿತ್ಯಪಾಂ ರೂಪಮಿತಿ ತದ್ವಿದಾಞ್ಚಕ್ರುರ್ಯದು ಕೃಷ್ಣಮಿವಾಭೂದಿತ್ಯನ್ನಸ್ಯ ರೂಪಮಿತಿ ತದ್ವಿದಾಂ ಚಕ್ರುಃ (6) ಯದ್ವಿಜ್ಞಾತಮಿವಾಭೂದಿತ್ಯೇತಾಸಾಮೇವ ದೇವತಾನಾಂ ಸಮಾನ ಇತಿ ತದ್ವಿದಾಂ ಚಕ್ರುರ್ಯಥಾನು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಃ ಪ್ರಾಪ್ಯ ತ್ರಿವೃತ್ತಿವೃ ದೇಕೈಕಾ ಭವತಿ ತನ್ಮೇ ವಿಜಾನೀಹೀತಿ (7)**

ತಾ : ಕೆಂಪು ವರ್ಣವು ತೇಜಸ್ಸೆಂದೂ, ಬಿಳಿಯ ಬಣ್ಣ ಜಲಸ್ವರೂಪವೆಂದು ಕಪ್ಪು ಬಣ್ಣ ಅನ್ನದ ರೂಪವೆಂದೂ ಅವರು ಗ್ರಹಿಸಿ ಸರ್ವಜ್ಞರಾಗಿ ಪ್ರಕಾಶಿಸಿದರು. ಆ ರೀತಿಯಾಗಿ ತಿಳಿಯದೇ ಹೋದಲ್ಲಿ,

ರೂಪವು ಈ ದೇವತೆಗಳ (ಅಗ್ನ್ಯಾದಿ ಭೂತಗಳ) ಸಂಯೋಗದಿಂದ ಆಗಿದೆಯೆಂದು ಅವರು ತಿಳಿದುಕೊಳ್ಳುತ್ತಿದ್ದರು. ಮತ್ತು ಎಲೈ ಶ್ವೇತಕೇತೂ! ಈ ಮೂವರು ದೇವತೆಗಳು ಪುರುಷನನ್ನು ಸೇರಿ ಹೇಗೆ ತ್ರಿವೃದ್ರೂಪವನ್ನು ಹೊಂದಿದರೆನ್ನುವುದನ್ನು ಹೇಳುತ್ತಿದ್ದೇನೆ. ಶ್ರದ್ಧೆಯಿಂದ ಆಲಿಸು.

## ಷಷ್ಠ ಪ್ರಪಾಠಕ - ಪಞ್ಚಮ ಖಂಡ

ಮಂ.ಶ್ಲೋ.॥ ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ಪುರೀಷಂ ಭವತಿ, ಯೋ ಮಧ್ಯಮಸ್ತನ್ಮಾಂಸಂ ಯೋಽಣಿಷ್ಠಸ್ತನ್ಮನಃ (1) ಆಪಃ ಪೀತಾಸ್ತ್ರೇಧಾ ವಿಧೀಯನ್ತೇ ತಾಸಾಂ ಯಃ ಸ್ಥವಿಷ್ಠೋ ಧಾತುಸ್ತನ್ಮೂತ್ರಂ ಭವತಿ ಯೋ ಮಧ್ಯಮಸ್ತಲ್ಲೋಹಿತಂ ಯೋಽಣಿಷ್ಠಸ್ಸಪ್ರಾಣಃ (2) ತೇಜೋಽಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತದಸ್ಥಿ ಭವತಿ ಯೋ ಮಧ್ಯಮಸ್ಸಮಜ್ಜಾ ಯೋಽಣಿಷ್ಠಃ ಸಾ ವಾಕ್ (3) ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಭೂಯ ಏವಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (4)

ತಾ: (ಅನ್ನಾದಿಗಳ ತ್ರಿವಿಧ ಪರಿಣಾಮ) ಭುಜಿಸಿದ ಅನ್ನವು ಮೂರು ಭಾಗಗಳಾಗುತ್ತವೆ. ಆಹಾರದ ಮುಖ್ಯ ಸ್ಥೂಲಭಾಗವು ಮಲವಾಗುತ್ತದೆ. ಮಧ್ಯಮ ಭಾಗವು ಮಾಂಸವಾಗಿ ಮಾರ್ಪಡುತ್ತದೆ. ಅತ್ಯಂತ ಸೂಕ್ಷ್ಮ ಭಾಗವು ಮನಸ್ಸಾಗಿ ಮಾರ್ಪಡುವುದು. ಪಾನ ಮಾಡಿದ ಜಲವು ಕೂಡಾ ಮೂರು ಭಾಗಗಳಾಗುತ್ತದೆ. ಜಲದ ಅತ್ಯಂತ ಸ್ಥೂಲ ಭಾಗವು ಮೂತ್ರವಾಗುವುದು. ಮಧ್ಯಮ ಭಾಗ ರಕ್ತವಾಗುತ್ತದೆ. ಅತ್ಯಂತ ಸೂಕ್ಷ್ಮ ಭಾಗ ಪ್ರಾಣವಾಗುತ್ತದೆ. ಭುಜಿಸಿದ ತೈಲ (ತುಪ್ಪ)ವು ಕೂಡಾ ಮೂರು ಭಾಗಗಳಾಗುತ್ತದೆ. ಅತ್ಯಂತ ಸ್ಥೂಲ ಭಾಗವು ಮೂಳೆಗಳಾಗುತ್ತವೆ. ಮಧ್ಯ ಭಾಗವು ಮಜ್ಜೆ (ಅಂಟು ಪದಾರ್ಥ)ವಾಗುತ್ತದೆ. ಅತ್ಯಂತ ಸೂಕ್ಷ್ಮ ಭಾಗವು ವಾಗೀಂದ್ರಿಯವಾಗುತ್ತದೆ. ಸೌಮ್ಯಾ! ಮನಸ್ಸು ಅನ್ನಮಯ, ಪ್ರಾಣವು ಜಲಮಯ, ವಾಗೀಂದ್ರಿಯವು ತೇಜೋಮಯವೆಂದು ತಿಳಿದುಕೋ. ಎನ್ನಲು ಆಗ ಶ್ವೇತಕೇತುವು ಇನ್ನೂ ವಿವರವಾಗಿ ಜ್ಞಾನಬೋಧೆ ಮಾಡಬೇಕೆಂದು ಕೇಳಿಕೊಂಡ.

## ಷಷ್ಠ ಪ್ರಪಾಠಕ - ಷಷ್ಠ ಖಂಡ

ಮಂ.ಶ್ಲೋ.॥ ದಧ್ನಸ್ಸೋಮ್ಯ ಮಥ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಸ್ಸಮುದೀಷತಿ ತತ್ಸರ್ಪಿರ್ಭವತಿ (1) ಏವಮೇವ ಖಲು ಸೋಮ್ಯಾನ್ನಸ್ಯಾಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಸ್ಸಮುದೀ-ಷತಿ ತನ್ಮನೋ ಭವತಿ (2) ಅಪಾಗ್ಂ ಸೋಮ್ಯ ಪೀಯಮಾನಾನಾಂ ಯೋಽಣಿಮಾ ಸ ಊರ್ಧ್ವಸ್ಸಮುದೀಷತಿ ಸ ಪ್ರಾಣೋ ಭವತಿ (3) ತೇಜಸಸ್ಸೋಮ್ಯಾಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಸ್ಸಮುದೀಷತಿ ಸಾವಾಗ್‌ಭವತಿ (4) ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (5)

ತಾ : ಸೌಮ್ಯಾ! ಮೊಸರನ್ನು ಕಡೆದು ಮಜ್ಜಿಗೆಯನ್ನಾಗಿ ಮಾಡಿದಾಗ ಅದರಲ್ಲಿನ ಸೂಕ್ಷ್ಮ ಭಾಗವು ಕೆನೆಯಂತೆ ಮೇಲಕ್ಕೆ ಬರುವುದು. ಅದೇ ತುಪ್ಪವಾಗುತ್ತದೆ. ಸೌಮ್ಯಾ! ಅದೇ ವಿಧವಾಗಿ ಭುಜಿಸಿದ ಅನ್ನದ ಅತ್ಯಂತ ಸೂಕ್ಷ್ಮ ಭಾಗವು ಮೇಲಕ್ಕೆ ತೇಲುತ್ತಾ ಬರುತ್ತದೆ. ಅದೇ ಮನಸ್ಸಾಗಿ ಮಾರ್ಪಡುತ್ತದೆ. ಕುಡಿದ ನೀರಿನ ಸೂಕ್ಷ್ಮ ಭಾಗವು ಮೇಲಕ್ಕೆ ಬರುವುದು. ಅದೇ ಪ್ರಾಣವಾಗುತ್ತದೆ. ಸೌಮ್ಯಾ, ಭುಜಿಸಿದ ತೇಜಃ ಪದಾರ್ಥ (ಎಣ್ಣೆ, ತುಪ್ಪ, ಬೆಣ್ಣೆ) ಮುಂತಾದವುಗಳ ಸೂಕ್ಷ್ಮ ಭಾಗವು ಮೇಲಕ್ಕೆ ಬರುವುದು. ಅದೇ ವಾಕ್ಕು ಆಗುತ್ತದೆ. ಮನಸ್ಸು ಅನ್ನಮಯ, ಪ್ರಾಣವು ಜಲಮಯ, ವಾಕ್ಕು ಅಗ್ನಿಮಯ, ಹೇ ಭಗವಂತಾ! ನನಗಿನ್ನೂ ಅಧಿಕವಾಗಿ ಜ್ಞಾನವಿಷಯವಾಗಿ ಬೋಧಿಸ ಬೇಕೆಂದು ಮಗನು ಪ್ರಾರ್ಥಿಸಲು, ಉದ್ಧಾಲಕನು ಅಂಗೀಕರಿಸಿ ಹೇಳತೊಡಗಿದ.

## ಷಷ್ಠ ಪ್ರಪಾಠಕ - ಸಪ್ತಮ ಖಂಡ

**ಮಂ.ಶ್ಲೋ.|| ಷೋಡಶಕಲಸ್ಸೋಮ್ಯಪುರುಷಃ ಪಂಚದಶಾಹಾನಿ, ಮಾಶೀಃ ಕಾಮಮಪಃ ಪಿಬಾಪೋಮಯಃ ಪ್ರಾಣೋ ನ ಪಿಬತೋ ವಿಚ್ಛೇತ್ಸ್ಯತ ಇತಿ (1) ಸ ಹ ಪಞ್ಚದಶಾಹಾನಿ ನಾಶಾಥ ಹೈನಮುಪಸಸಾದ ಕಿಂ ಬ್ರವೀಮಿ ಭೋ ಇತ್ಯೃಚಸ್ಸೋಮ್ಯ ಯಜೂಂಷಿ ಸಾಮಾನೀತಿ ಸ ಹೋವಾಚ ನ ವೈ ಮಾ ಪ್ರತಿಭಾನ್ತಿ ಭೋ ಇತಿ (2) ತಂ ಹೋವಾಚ ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕೋಽಙ್ಗಾರಃ ಖದ್ಯೋತ ಮಾತ್ರಃ ಪರಿಶಿಷ್ಟಸ್ಸ್ಯಾತ್ತೇನ ತತೋಽಪಿ ನ ಬಹುದಹೇದೇವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾಽತಿಶಿಷ್ಟಾಸ್ಯಾತ್ತಯೈತರ್ಹಿ ವೇದಾನ್ನಾನುಭವಸ್ಯಶಾನಾಥ ಮೇ ವಿಜ್ಞಾಸ್ಯಸೀತಿ (3)**

ತಾ : ಸೌಮ್ಯಾ! ಪುರುಷನಿಗೆ ಹದಿನಾರು ಕಳೆಗಳವೆ. ಹದಿನೈದು ದಿನಗಳು ನೀನು ಏನನ್ನೂ ತಿನ್ನದೆ ಉಪವಾಸವಿರು. ನೀರನ್ನು ಮಾತ್ರ ಬೇಕಾದಷ್ಟು ಕುಡಿ. ಪ್ರಾಣವು ಜಲಮಯವಾದುದರಿಂದ, ಜಲಪಾನ ಮಾಡದಿದ್ದರೆ ಪ್ರಾಣವು ಹೋಗುವುದು ಎನ್ನಲು, ಪುತ್ರನಾದ ಶ್ವೇತಕೇತುವು ಹದಿನೈದು ದಿನಗಳು ಉಪವಾಸ ಮಾಡಿದ. ಆನಂತರ ತಂದೆಯ ಬಳಿಗೆ ಹೋಗಿ "ತಂದೆಯೇ, ನನ್ನನ್ನು ಏನು ಹೇಳಬೇಕೆನ್ನುವಿರಿ?" ಎಂದು ಪ್ರಶ್ನಿಸಿದ. ಆಗ ತಂದೆ:– ಋಗ್ಯಜುಸ್ಸಾಮಗಳನ್ನು ಹೇಳಬೇಕೆಂದು ಕೇಳಿದ. ತಂದೆಯೇ! ಅದು ನನ್ನ ಜ್ಞಾಪಕಕ್ಕೆ ಬರುತ್ತಿಲ್ಲ ಎಂದು ಶ್ವೇತಕೇತು ಹೇಳಿದ. ಸೌಮ್ಯಾ! ಜ್ವಲಿಸುತ್ತಿರುವ ಅಗ್ನಿ ಪೂರ್ತಿಯಾಗಿ ತಣ್ಣಗಾದ ಮೇಲೆ, ಮಿಕ್ಕ ಚಿಕ್ಕ ಬೆಂಕಿಯ ಕಣಗಳು ಯಾವ ರೀತಿ ಉರಿಯುವುದಿಲ್ಲವೋ, ಅದೇ ರೀತಿಯಾಗಿ ನಿನ್ನ 16 ಕಳೆಗಳಲ್ಲಿ ಒಂದು ಜೀವ ಕಳೆ ಮಾತ್ರವೇ ಉಳಿದಿರುವುದರಿಂದ ವೇದಗಳು ನಿನಗೆ ಜ್ಞಾಪಕಕ್ಕೆ ಬರುತ್ತಿಲ್ಲ. ಆದ್ದರಿಂದ ಈಗ ಊಟ ಮಾಡು. ಮತ್ತೆ ಎಲ್ಲವೂ ಜ್ಞಾಪಕಕ್ಕೆ ಬರುವುದು ಎಂದು ಉದ್ಧಾಲಕ ಹೇಳಿದ (ಹದಿನಾರು ಕಳೆಗಳನ್ನು ಕುರಿತು ವಿಶದವಾಗಿ ಪ್ರಶ್ನೋಪನಿಷತ್ತಿನಲ್ಲಿ ಹೇಳಲಾಗಿದೆ.)

**ಮಂ.ಶ್ಲೋ.|| ಸ ಹಾ ಶಾಥಹೈನಮುಪಸಸಾದ ತಂ ಹ ಯತ್ಕಿಂಚ ಪಪ್ರಚ್ಛ ಸರ್ವಂ ಹ ಪ್ರತಿಪೇದೇ ತಂ ಹೋವಾಚ (4) ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕಮಙ್ಗಾರಂ ಖದ್ಯೋತ**

**ಮಾತ್ರಮ್ಪರಿಶಿಷ್ಟನ್ತಂ ತೃಣೈರುಪಸಮಾಧಾಯ ಪ್ರಜ್ವಾಲಯೇತ್ತೇನ ತತೋಽಪಿ ಬಹುದಹೇತ್ (5) ಏವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾಕಲಾತಿಶಿಷ್ಟಾಭೂತ್ಸಾಽನ್ನೇ ನೋಪಸಮಾಹಿತಾ ಪ್ರಾಜ್ವಾಲಿತಯೈತರ್ಹಿ ವೇದಾನನುಭವಸ್ಯನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ(6)**

ತಾ : ಶ್ವೇತಕೇತು ಭೋಜನ ಮಾಡಿದ ನಂತರ ತಂದೆಯ ಬಳಿಗೆ ಬಂದು ತಾನು ಪಠಿಸಿದುದೆಲ್ಲ-ವನ್ನೂ ಹೇಳಲು ಶಕ್ತಿ ಹೊಂದಿರುವೆನು ಎಂದು ಹೇಳಿದ. "ಸೌಮ್ಯಾ! 'ಪ್ರಜ್ವಲಿಸುತ್ತಿರುವ ಅಗ್ನಿ ತಣ್ಣಗಾದ ಮೇಲೆ ಉಳಿದ ಬೆಂಕಿಯ ಸಣ್ಣ ಕಣವು ಹುಲ್ಲನ್ನು ಹಾಕಿದ ಮೇಲೆ ಮತ್ತೆ ಉರಿಯಾಗಿ ಮಾರ್ಪಟ್ಟಂತೆ, ಶಿಷ್ಯೋತ್ತಮ ಹದಿನಾರು ಕಳೆಗಳಲ್ಲಿ ಉಳಿದಿರುವ ಒಂದು ಕಳೆಯನ್ನು ನೀನು ಮತ್ತೆ ಅನ್ನವನ್ನು ತಿಂದಾದ ಮೇಲೆ ಕೂಡಿಸಿಕೊಂಡು ಬೆಳಸಿದ್ದೀಯೆ, ಬೆಳಗಿಸಿದ್ದೀಯೆ. ಆದ್ದರಿಂದ ಈಗ ವೇದಗಳನ್ನು ಹೇಳುವ ಶಕ್ತಿಯುಳ್ಳವನಾದೆ. ಮನಸ್ಸು ಅನ್ನಮಯ. ಪ್ರಾಣವು ಜಲಮಯ. ವಾಕ್ಕು ಅಗ್ನಿಮಯವೆಂದು ಹೀಗೆ ತಿಳಿಸಿಹೇಳಲು ಶ್ವೇತಕೇತುವಿಗೆ ವಿಷಯ ಅರ್ಥವಾಯಿತು.

## ಷಷ್ಠ ಪ್ರಪಾಠಕ - ಅಷ್ಟಮ ಖಂಡ

ಮಂ.ಶ್ಲೋ.॥ **ಉದ್ದಾಲಕೋ ಹಾರುಣಿಃ ಶ್ವೇತಕೇತುಂ ಪುತ್ರಮುವಾಚ ಸ್ವಪ್ನಾನ್ತಂ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷಃ ಸ್ವಪಿತಿನಾಮ ಸ ತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ ಸ ಸ್ವಂ ಹ್ಯಪೀತೋ ಭವತಿ (1) ಸ ಯಥಾ ಶಕುನಿಸ್ಸೂತ್ರೇಣ ಪ್ರಬದ್ಧೋ ದಿಶನ್ದಿಶಮ್ಪತಿತ್ವಾಽನ್ಯತ್ರಾಯತನ-ಮಲಬ್ಧ್ವಾ ಬನ್ಧನಮೇವೋಪಶ್ರಯತ ಏವಮೇವ ಖಲು ಸೋಮ್ಯ ತನ್ಮನೋ ದಿಶನ್ದಿಶ -ಮ್ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಶ್ರಯತೇ ಪ್ರಾಣಬನ್ಧನಂ ಹಿ ಸೋಮ್ಯ ಮನ ಇತಿ (2)**

ತಾ : ಆರುಣಿಯಾದ ಉದ್ದಾಲಕನು ತನ್ನ ಪುತ್ರನಾದ ಶ್ವೇತಕೇತುವನ್ನುದ್ದೇಶಿಸಿ. "ಎಲೈ ಸೌಮ್ಯನೇ! ನಿದ್ದೆಯ ಸ್ವರೂಪವನ್ನು ಚೆನ್ನಾಗಿ ನನ್ನಿಂದ ಕೇಳಿ ತಿಳಿದುಕೊ. ಈ ಪುರುಷನು ನಿದ್ರಿ-ಸುವಾಗ ಸದ್ರೂಪಾತ್ಮನೊಂದಿಗೆ ಅಭೇದವನ್ನು ಹೊಂದುತ್ತಾನೆ. ತನ್ನಲ್ಲಿ (ಆತ್ಮದಲ್ಲಿ) ಲಯವಾಗುತ್ತಿರುತ್ತಾನೆ. ಆದ್ದರಿಂದ ನಿದ್ರಿಸುತ್ತಿರುವನೆಂದು ಹೇಳುವರು. ಏಕೆಂದರೆ (ಸ್ವಂ ಅಪೀತಃ) ಈತನು ತನ್ನಲ್ಲಿ ತಾನು ಒಂದಾಗಿ ಇರುವನೆಂದು ಅರ್ಥ. ಹಗ್ಗದಿಂದ ಕಟ್ಟಿಹಾಕಿರುವ ಪಕ್ಷಿ ಎಲ್ಲೆಲ್ಲಿ ಹಾರಿದರೂ ತಕ್ಕ ಆಶ್ರಯ ದೊರೆಯದೆ, ಮತ್ತೆ ಪಂಜರಕ್ಕೇ ಬಂದು ಸೇರುವ ರೀತಿಯಲ್ಲಿ, ಸಹ ಪ್ರಾಣದಿಂದ ಬಂಧಿಸುವುದರಿಂದ ಎಲ್ಲಿಗೆ ಹೋದರೂ ಮತ್ತೆ ಮತ್ತೆ ಪ್ರಾಣವನ್ನೇ ಆಶ್ರಯಿಸುತ್ತಿರುತ್ತದೆ. (ಸುಷುಪ್ತಿಕಾಲದಲ್ಲಿ ಜೀವನ ಸ್ಥಿತಿಯನ್ನು ವರ್ಣಿಸಲಾಗುತ್ತಿದೆ.)

ಮಂ.ಶ್ಲೋ.॥ **ಅಶನಾ ಪಿಪಾಸೇ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷೋಽಶಿಶಿಷತಿನಾಮಾಪ ಏವ ತದಶಿತಂ ನಯನ್ತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವನ್ತ**

ದಪ ಆಚಕ್ಷತೇಽಶನಾಯೇತಿ ತತ್ರೈತಚ್ಛುಙ್ಗಮುತ್ಪತಿತಂ ಸೋಮ್ಯ ವಿಜಾನೀಹಿ ನೇದ-ಮಮೂಲಮ್ಭವಿಷ್ಯತೀತಿ (3) ತಸ್ಯ ಕ್ವ ಮೂಲಂ ಸ್ಯಾದನ್ಯತ್ರಾನ್ನಾದೇವಮೇವ ಖಲು ಸೋಮ್ಯಾನ್ನೇನ ಶುಂಗೇನಾಪೋಮೂಲಮನ್ವಿಚ್ಛಾದ್ಭಿಸ್ಸೋಮ್ಯ ಶುಂಗೇನ ತೇಜೋಮೂಲ -ಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಸ್ಸೋಮ್ಯೇಮಾಸ್ಸರ್ವಾಃ ಪ್ರಜಾಸ್ಸದಾಯತನಾ ಸತ್ ಪ್ರತಿಷ್ಠಾಃ (4) ಅಥ ಯತ್ರೈತತ್ಪುರುಷಃ ಪಿಪಾಸತಿ ನಾಮ ತೇಜ ಏವ ತತ್ಪೀತಂ ನಯತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವಂ ತತ್ತೇಜ ಆಚಷ್ಟ ಉದನ್ಯೇತಿ ತತ್ರೈತದೇವಶುಙ್ಗಮುತ್ಪತಿತಂ ಸೋಮ್ಯ ವಿಜಾನೀಹಿ ನೇದಮಮೂಲಮ್ಭವಿಷ್ಯತೀತಿ (5)

ತಾ : ಸೌಮ್ಯಾ! ಹಸಿವು ನೀರಡಿಕೆಗಳ ಸ್ವಭಾವವನ್ನು ವಿವರಿಸಿ ಹೇಳುತ್ತೇನೆ ಕೇಳು. ಪುರುಷನು ಹಸಿವಿನಿಂದಿದ್ದಾಗ ತಿಂದ ಅನ್ನವನ್ನು ವ್ಯವಸ್ಥಾಬದ್ಧವಾಗಿ, ಆ ಜಲವು ಎಲ್ಲಾ ಭಾಗಗಳಗೂ ತೆಗೆದು ಕೊಂಡು ಹೋಗುವುದು. ಗೋವುಗಳನ್ನು, ಅಶ್ವಗಳನ್ನು, ಮನುಷ್ಯರನ್ನು, ತೆಗೆದುಕೊಂಡು ಹೋಗುವವರು ಕ್ರಮವಾಗಿ ಗೋನಾಯ, ಅಶ್ವನಾಯ, ಪುರುಷನಾಯ ಎಂದು ಹೇಳಬೇಕು. ಅದೇ ವಿಧವಾಗಿ ಜಲವನ್ನು ಅಶನಾಯ ಎಂದು ಹೇಳುತ್ತಾರೆ. ಶ್ವೇತಕೇತು! ಬೇರು ಇಲ್ಲದೆ ಮೊಳಕೆ ಬರುವುದಿಲ್ಲ. ಈ ದೇಹವು ಜಲದಿಂದ ವೃದ್ಧಿ ಹೊಂದುತ್ತದೆ. ಸೌಮ್ಯಾ ದೇಹದ ಮೂಲವು ಅನ್ನವೇ ಅಲ್ಲವೆ? ಅದೇ ರೀತಿಯಾಗಿ ಅನ್ನಕ್ಕೆ ಮೂಲ ಬೇರು ಜಲ, ಜಲಕ್ಕೆ ಮೂಲ ತೇಜಸ್ಸು. ತೇಜಸ್ಸಿಗೆ ಮೂಲ ಸತ್. ಈ ಸಕಲ ಪ್ರಜೆಗಳು ಸತ್ ಎನ್ನುವ ಬೇರನ್ನು ಹೊಂದಿದ್ದಾರೆ. ಸಮಸ್ತ ಜನರಿಗೆ ಸತ್ ಆಧಾರವಾಗಿ, ಆಶ್ರಯವಾಗಿ ಇದೆ. ಇನ್ನು ಪುರುಷನು ಬಾಯಾರಿಕೆಯಾಗಿದೆಯೆಂದು ಕುಡಿದ ನೀರನ್ನು ತೇಜವು ಕೊಂಡೊಯ್ಯುತ್ತದೆ. ಹೇಗೆ ಗೋವಾಯ, ಅಶ್ವನಾಯ, ಪುರುಷನಾಯಯೆನ್ನುವ ನಾಮಗಳು ಇವೆಯೋ ಅದೇ ವಿಧವಾಗಿ ತೇಜಸ್ಸಿಗೆ 'ಉದನ್ಯ'' ನೀರನ್ನು ಕೊಂಡೊಯ್ಯುವನೆಂಬ ಹೆಸರಿದೆ. ಅದಕ್ಕೆ ಎಲೈ ಸೌಮ್ಯ! ಈ ಅಂಕುರ - ಅಂದರೆ ದೇಹವು ಉತ್ಪನ್ನವಾಗಿದೆ. ಮೂಲವು ಇಲ್ಲದೆ ಇದು ಇರಲಾರದೆಂದು ತಿಳಿದುಕೊ.

ಮಂ.ಶ್ಲೋ.॥ ತಸ್ಯ ಕ್ವ ಮೂಲಂ ಸ್ಯಾದಸ್ಯತ್ರಾದ್ಭ್ಯೋಽದ್ಭಿಸ್ಸೋಮ್ಯ ಶುಂಗೇನ ತೇಜೋ ಮೂಲ-ಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾ ಸ್ಸೋಮ್ಯೇಮಾ-ಸ್ಸರ್ವಾಃ ಪ್ರಜಾಸ್ಸದಾಯತನಾಸ್ಸತ್‌ಪ್ರತಿಷ್ಠಾ ಯಥಾ ನು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತದುಕ್ತಂ ಪುರಸ್ತೋದೇವ ಭವತ್ಯಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಮ್ಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ಸ ಯ ಏಷೋಽಣಿಮಾ (6) ಐತದಾತ್ಮ್ಯ-ಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (7)

ತಾ : ಮಗೂ! ಜಲವಲ್ಲದೆ ಈ ದೇಹದ ಮೂಲವು ಮತ್ತೇನಿದೆ? ಜಲವೆನ್ನುವ ಅಂಕುರದಿಂದ ತೇಜಸ್ಸೆನ್ನುವ ಬೇರನ್ನು, ತೇಜಸ್ಸೆನ್ನುವ ಅಂಕುರದಿಂದ ಸತ್ ಎನ್ನುವ ಮೂಲವನ್ನು ತಿಳಿದು ಕೊಳ್ಳಬೇಕು. ಸೌಮ್ಯಾ! ಸರ್ವ ಪ್ರಜೆಗಳು ಸತ್ ಎನ್ನುವ ಬೇರನ್ನು ಹೊಂದಿದವರಾಗಿದ್ದಾರೆ. "ಸತ್" ಇದೇ ಅವರ ಸರ್ವಾಶ್ರಯ. ಆಧಾರವಾಗಿದೆ ಪುತ್ರಾ! ಈ ಮೂವರು (ತೇಜೋಜಲಾನ್ನಗಳನ್ನು) ದೇವತೆಗಳು ಪುರುಷನಲ್ಲಿ ತ್ರಿವೃತ್ಕರಣಗಳಾಗಿ ಹೇಗಿರುವುದೆಂದು ನಾನು ನಿನಗೆ ಹೇಳಿದ್ದೇನೆ. ಇನ್ನು ಆ ವಿಧವಾಗಿಯೇ ಮರಣಿಸುವ ಮನುಷ್ಯನ ವಾಕ್ಕು ಮನಸ್ಸಿನಲ್ಲಿ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರವೆನ್ನುವ ಆತ್ಮದಲ್ಲಿ ಲಯವಾಗುತ್ತಿವೆ. ಅದು ಪರಮಾತ್ಮ ತತ್ತ್ವ ಅತಿಸೂಕ್ಷ್ಮವಾದುದು. ಸರ್ವಸ್ವವೂ ಪರಬ್ರಹ್ಮಸ್ವರೂಪವಾಗಿ ತಿಳಿಯುವುದು. ಇದೇ ಬ್ರಹ್ಮ. ಈ ಬ್ರಹ್ಮವು ನೀನೇ ಆಗಿದ್ದೀಯೆ. (ತತ್ತ್ವಮಸಿ!). ಆನಂತರ ಮತ್ತಷ್ಟು ವಿವರವಾಗಿ ಬೋಧಿಸಬೇಕೆಂದು ಶ್ವೇತಕೇತು ಕೋರಿದ. ಉದ್ಧಾಲಕನು ಅಂಗೀಕರಿಸಿದ.

## ಷಷ್ಠಃ ಪ್ರಪಾಠಕಃ - ನವಮಃ ಖಂಡಃ

ಮಂ.ಶ್ಲೋ.॥ **ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠನ್ತಿ ನಾನಾತ್ಯಯಾನಾಂ ವೃಕ್ಷಾಣಾಂ ರಸಾನ್ ಸಮವಹಾರಮೇಕತಾಂ ರಸಂ ಗಮಯನ್ತಿ (1) ತೇ ಯಥಾ ತತ್ರ ನ ವಿವೇಕಂ ಲಭನ್ತೇಽಮುಷ್ಯಾಹಂ ವೃಕ್ಷಸ್ಯ ರಸೋಽಸ್ಮ್ಯಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವ-ಮೇವ ಖಲು ಸೋಮ್ಯೇ ಮಾಸ್ಸರ್ವಾಃ ಪ್ರಜಾಸ್ಸತಿ ಸಂಪದ್ಯ ನ ವಿದುಸ್ಸತಿ ಸಮದ್ಯಾಮಹ ಇತಿ (2)**

ತಾ : ಸೌಮ್ಯಾ! ಜೇನು ಹುಳುಗಳು ಅನೇಕ ದಿಕ್ಕುಗಳಿಂದ, ಅನೇಕ ಪುಷ್ಪಗಳಿಂದ ಮಧು ರಸವನ್ನು ಸಂಗ್ರಹಿಸಿ ತಂದು ಒಂದೇ ಕಡೆ ಇಡುತ್ತದೆ. ಅದರಲ್ಲಿನ ಒಂದು ಮಧು ಬಿಂದುವನ್ನು ತೆಗೆದುಕೊಂಡು ಯಾವ ಪುಷ್ಪದಿಂದ ಅದನ್ನು ತಂದಿದ್ದೆಂದು ಹೇಳಲು ಸಾಧ್ಯವಾಗುವುದಿಲ್ಲ. ಅದೇ ರೀತಿ ಸಾಮಾನ್ಯ ಪ್ರಜೆಗಳು ಸುಷುಪ್ತಿಯಲ್ಲಿ ಸತ್‌ನಲ್ಲಿ ಲೀನವಾಗುತ್ತಿದ್ದಾರೆ. ಲೀನವಾದ ವಿಷಯವನ್ನು ತಿಳಿಯಲಾರದೆ ಹೋಗುತ್ತಿದ್ದಾರೆ.

ಮಂ.ಶ್ಲೋ.॥ **ತ ಇಹಾ ವ್ಯಾಘ್ರೋ ವಾ, ಸಿಂಹೋ ವಾ, ವೃಕೋ ವಾ, ವರಾಹೋ ವಾ, ಕೀಟೋ ವಾ, ಪತಂಗೋ ವಾ, ದಂಶೋ ವಾ, ಮಶಕೋ ವಾ, ಯದ್ಯದ್ಭವನ್ತಿ ತದಾಭವನ್ತಿ (3) ಸ ಯ ಏಷಾಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ(4)**

ತಾ : ಆ ಜೀವಿಗಳು ಜಾಗ್ರದವಸ್ಥೆಯಲ್ಲಿ ಮೊದಲು ಯಾವ ಸಂಸ್ಕಾರದಲ್ಲಿದ್ದರೋ, ಆ ರೀತಿಯಾಗಿ ಆ ರೂಪದಲ್ಲಿ ಹುಲಿ, ಸಿಂಹ, ತೋಳ, ವರಾಹ, ಕೀಟ, ನೊಣ, ಪತಂಗ - ಇವುಗಳಲ್ಲಿ ಯಾವುದೋ ಒಂದು (ದೇಹವನ್ನು) ರೂಪವನ್ನು ಧರಿಸುತ್ತಿರುವರು. ಓ ಶ್ವೇತಕೇತೂ! ಈ ಸಮಸ್ತ ಪ್ರಪಂಚವು ಪರಮಾತ್ಮನಿಂದಲೇ ಪರಿಪೂರ್ಣವಾಗಿದೆ. ಈ ಪರಮಾತ್ಮನೇ ಸತ್ಯ, ಅದೇ ಆತ್ಮ. ಅದೇ

ನೀನಾಗಿರುವೆ. (ಕೆಲವು ಸಹಸ್ರ ಯುಗಗಳು ಕಳೆದರೂ ಅಜ್ಞಾನ ಜೀವಿಗಳಿಗೆ ಪೂರ್ವವಾಸನೆಗಳು ಹೋಗುವುದಿಲ್ಲ. ವಾಸನೆಗಳಿಗೆ ಅನುಗುಣವಾಗಿ ಜನ್ಮವನ್ನು ತಳೆಯುತ್ತಾರೆ.)

## ಷಷ್ಠ ಪ್ರಪಾಠಕ - ದಶಮ ಖಂಡ

**ಮಂ.ಶ್ಲೋ.॥ ಇಮಾಸ್ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯಂದನ್ತೇ ಪಶ್ಚಾತ್ ಪ್ರತೀಚ್ಯಸ್ತಾಸ್ಸಮುದ್ರಾ-ತ್ಸಮುದ್ರಮೇವಾಪಿಯನ್ತಿ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯಮಹ-ಮಸ್ಮೀಯ ಮಹಾಮಸ್ಮೀತಿ (1) ಏವಮೇವ ಖಲು ಸೋಮ್ಯೇಮಾಸ್ಸರ್ವಾಃ ಪ್ರಜಾಸ್ಸತ ಆಗಮ್ಯ ನ ವಿದುಸ್ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಗ್^ಂಶೋ ವಾ ಮಶಕೋ ವಾ ಯದ್ಯದ್ಭವನ್ತಿ ತದಾ ಭವನ್ತಿ (2) ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯ-ತ್ವಿತಿ ತಥಾ ಸೋಮ್ಯೇತಿ ಹೋವಾಚ (3)**

ತಾ : ಸೌಮ್ಯಾ! ನದಿಗಳಲ್ಲಿ ಕೆಲವು ಪೂರ್ವವಾಹಿನಿಗಳು ಮತ್ತೆ ಕೆಲವು ಪಶ್ಚಿಮವಾಹಿನಿಗಳು. ಎಲ್ಲವೂ ವಿವಿಧ ರೀತಿಗಳಲ್ಲಿ ಪ್ರವಹಿಸಿ ಮತ್ತೆ ಸಮುದ್ರವನ್ನು ಸೇರುತ್ತವೆ. ಹೀಗೆ ಸಮುದ್ರವನ್ನು ಸೇರಿದ ಈ ನದಿಗಳು ನಾನು ಈ ರೀತಿಯಾಗಿಯೇ ನಾನು ಇಂತಹ ನದಿ ಎಂದು ತಿಳಿಯಲಾರದೆ ಬಿಡಿಬಿಡಿಯಾಗಿ ತಮ್ಮ ತಮ್ಮ ನಾಮರೂಪಗಳ ಮಹಿಮೆಯನ್ನು ಬಿಟ್ಟು ಸಮುದ್ರ ರೂಪವೇ ಆಗುವುದೋ, ಅದೇ ರೀತಿಯಾಗಿ ಈ ಪ್ರಜೆಗಳು ಸದ್ರೂಪ ಬ್ರಹ್ಮನಿಂದಲೇ ಹುಟ್ಟಿ, ಸದ್ರೂಪ ಬ್ರಹ್ಮವನ್ನೇ ಹೊಂದುತ್ತಿದ್ದಾರೆಂದು ತಿಳಿಯುವುದಿಲ್ಲ. ಹುಲಿ, ಸಿಂಹ, ತೋಳ, ವರಾಹ, ಕೀಟ, ಪತಂಗಾದಿ ಪ್ರಾಣಿಗಳು ಮೊದಲು ತಾವು ಯಾವ ನಾಮರೂಪಗಳಲ್ಲಿದ್ದವೋ ಆಯಾ ನಾಮರೂಪಗಳನ್ನೇ ಮತ್ತೆ ಹೊಂದುತ್ತಿರುತ್ತವೆ. ಸದ್ರೂಪವಾಗಿರುವ ಆ ಪರಬ್ರಹ್ಮ ತತ್ತ್ವವು ಅತ್ಯಂತ ಸೂಕ್ಷ್ಮ. ಈ ಸರ್ವಸ್ವವೂ ಆ ಪರಮಾತ್ಮ ಸ್ವರೂಪವಾಗಿಯೇ ಇದೆ. ಇದು ಸತ್ಯ. ಇದೇ ಆತ್ಮ, ಶ್ವೇತಕೇತೂ! ನೀನು ಆ ಆತ್ಮವಾಗಿದ್ದೀಯೆ. (ತತ್ತ್ವಮಸಿ). ಈ ವಿವರಗಳನ್ನು ಕೇಳಿದ ಮೇಲೆ ಶ್ವೇತಕೇತುವು ಇನ್ನೂ ವಿಪುಲವಾಗಿ ಹೇಳಬೇಕೆಂದು ಪ್ರಾರ್ಥಿಸಿದ. ತಂದೆಯಾದ ಉದ್ದಾಲಕನು ಈ ರೀತಿಯಾಗಿ ಹೇಳಿದ. (ನಿದ್ರೆಯಂತೆಯೆ, ಮೃತ್ಯುವು ಆದ ಮೇಲೆಯೂ ಸಹ ಇದೇ ವಿಧವಾಗಿ ನಾಮ ರೂಪ-ಗಳಿರುವ ಜನ್ಮವನ್ನು ಜೀವನು ತಳೆಯುತ್ತಾನೆ.)

## ಷಷ್ಠ ಪ್ರಪಾಠಕ - ಏಕಾದಶ ಖಂಡ

**ಮಂ.ಶ್ಲೋ.॥ ಅಸ್ಯ ಸೋಮ್ಯ ಮಹತೋ ವೃಕ್ಷಸ್ಯ ಯೋ ಮೂಲೇಽಭ್ಯಾಹನ್ಯಾಜ್ಜೀವನ್ ಸ್ರವೇದ್ಯೋ-ಮಧ್ಯೇಽಭ್ಯಾಹನ್ಯಾಜ್ಜೀವನ್ ಸ್ರವೇದ್ಯೋಽಗ್ರೇಽಭ್ಯಾಹನ್ಯಾಜ್ಜೀವನ್ ಸ್ರವೇತ್ಸ ಏಷ ಜೀವೇ-ನಾತ್ಮ ನಾನುಪ್ರಭೂತಃ ಪೇಪಿಯಮಾನೋ ಮೋದಮಾನಸ್ತಿಷ್ಠತಿ (1) ತಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ ದ್ವಿತೀಯಾಂ ಜಹಾತ್ಯಥ ಸಾ ಶುಷ್ಯತಿ**

**ತೃತೀಯಾಂ ಜಹಾತ್ಯಥ ಸಾ ಶುಷ್ಯತಿ ಸರ್ವಂ ಜಹಾತಿ ಸರ್ವಶ್ಶುಷ್ಯತ್ಯೇವಮೇವ ಖಲು ಸೋಮ್ಯ ವಿದ್ಧೀತಿ ಹೋವಾಚ (2) ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (3)**

ತಾ : ಸೌಮ್ಯಾ! ಈ ಮಹಾವೃಕ್ಷದ ಒಂದು ಕೊಂಬೆಯನ್ನು ಕತ್ತಿಯಿಂದ ಕಡಿದರೂ, ಅದು ರಸವನ್ನು ಸ್ರವಿಸಿ ಬದುಕುತ್ತದೆ. ಅದೇ ರೀತಿಯಾಗಿ ಯಾವ ಭಾಗವನ್ನು ಕಡಿದರೂ ಆ ವೃಕ್ಷವು ಜೀವಿಸುತ್ತಿರುತ್ತದೆ. ಈ ವೃಕ್ಷವು ಜೀವಿಸುತ್ತಾ ಆತ್ಮ ಚೈತನ್ಯದೊಂದಿಗೆ ವ್ಯಾಪ್ತವಾಗಿರುವುದು. ಆ ವೃಕ್ಷವು ಜಲಪಾನ ಮಾಡುತ್ತಾ ಆನಂದವಾಗಿ ನಿಂತಿರುತ್ತದೆ. ಜೀವನು ಆ ವೃಕ್ಷದ ಶಾಖೆಯನ್ನು ಬಿಟ್ಟು ಹೋದಾಗ ಆ ಕೊಂಬೆ ಒಣಗಿಹೋಗುತ್ತದೆ. ಎರಡನೆಯ ಕೊಂಬೆಯನ್ನು ಬಿಟ್ಟು ಹೋದಾಗಲೂ ಆ ಕೊಂಬೆಯೂ ಒಣಗಿ ಹೋಗುವುದು. ಮೂರನೆಯ ಕೊಂಬೆಯನ್ನು ಬಿಟ್ಟು ಹೋದಾಗಲೂ ಅದು ಶುಷ್ಕವಾಗುವುದು. ಒಟ್ಟು ಗಿಡವನ್ನೇ ಬಿಟ್ಟು ಹೋದಾಗ ಗಿಡವು ಹೇಗೆ ಒಣಗಿ ಹೋಗುವುದು. ಸೌಮ್ಯಾ! ಇದೇ ರೀತಿ ಜೀವನು ಬಿಟ್ಟು ಹೋದಲ್ಲಿ ಈ ಶರೀರವು ಮರಣಿಸುತ್ತದೆ. ಆದರೆ ಜೀವನು ಸಾಯುವುದಿಲ್ಲ. ಜೀವತ್ವ ಬುದ್ಧಿ ಬಾಧಿಸಿರುವ ಸದ್ರೂಪ ಬ್ರಹ್ಮವೇ ಆಗುವನು. ಅದು ಅತ್ಯಂತ ಸೂಕ್ಷ್ಮ. ಇದೆಲ್ಲ ಪರಬ್ರಹ್ಮಮಯ. ಅದೇ ಸತ್ಯ. ಅದೇ ಆತ್ಮ, ಶ್ವೇತಕೇತೂ! ನೀನು ಆ ಆತ್ಮವಾಗಿದ್ದೀಯೆ (ತತ್ತ್ವಮಸಿ)'' ಭಗವನ್, ನನಗಿನ್ನೂ ಜ್ಞಾನವನ್ನು ಕುರಿತು ಬೋಧಿಸಿ ಎಂದು ಪ್ರಾರ್ಥಿಸಲು ಉದ್ಧಾಲಕನು ಹೇಳತೊಡಗಿದ.

## ಷಷ್ಠ ಪ್ರಪಾಠಕ - ದ್ವಾದಶ ಖಂಡ

ಮಂ.ಶ್ಲೋ.॥ **ನ್ಯಗ್ರೋಧಫಲಮತ ಆಹರೇತೀದಮ್ಭಗವ ಇತಿ, ಭಿನ್ಧೀತಿ, ಭಿನ್ನಂ ಭಗವ ಇತಿ, ಕಿಮತ್ರ ಪಶ್ಯಸೀ ತ್ಯಣ್ವ್ಯ ಇವೇಮಾ ಧಾನಾ ಭಗವ ಇತ್ಯಾಸಾಮಂಗೈಕಾಮ್ಭಿನ್ಧೀತಿಭಿನ್ನಾ ಭಗವ ಇತಿ, ಕಿಮತ್ರ ಪಶ್ಯಸೀತಿ, ನ ಕಿಞ್ಚನ ಭಗವ ಇತಿ (1) ತಂ ಹೋವಾಚ ಯಂ ವೈ ಸೋಮ್ಯೈತಮಣಿಮಾನಾಂ ನ ನಿಭಾಲಯನ ಏತಸ್ಯ ವೈ ಕಿಲ ಸೋಮ್ಯೈಷೋಽಣಿಮ್ನ ಏವಂ ಮಹೋನ್ಯಗ್ರೋಧಸ್ತಿಷ್ಠತಿ (2) ಶ್ರದ್ಧತ್ಸ್ವ ಸೋಮ್ಯೇತಿ ಸ ಯ ಏಷೋಽಣಿ-ಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (3)**

ತಾ : "ಮಗೂ, ಒಂದು ಆಲದ ಹಣ್ಣನ್ನು ತೆಗೆದುಕೊಂಡು ಬಾ!" ಎನ್ನಲು ಇದೋ ತಂದೆ ಎಂದು ಹೇಳಿದಾಗ, ತಂದೆಯು ಅದನ್ನು ಸೀಳು ಎಂದಾಗ, ಇದೋ ಸೀಳಿದೆ ಎಂದು ಶ್ವೇತಕೇತುವು ಹೇಳಲು ಉದ್ದಾಲಕನು ಪ್ರಶ್ನಿಸಿದ. "ಅಲ್ಲೇನು ಕಾಣಿಸುತ್ತಿದೆ?" "ಅತ್ಯಂತ ಸೂಕ್ಷ್ಮವಾದ ಬೀಜಗಳು ಕಾಣಿಸುತ್ತಿವೆ." ಎಂದ ಶ್ವೇತಕೇತು. ಅದರಲ್ಲಿ ಒಂದನ್ನು ಸೀಳು ಎಂದಾಗ ಅವನು ಸೀಳಿದೆ ತಂದೆಯವರೆ ಎಂದ.

"ಅದರಲ್ಲೇನಿದೆ?" "ಭಗವನ್ ಏನೂ ಕಾಣಿಸುತ್ತಿಲ್ಲ." "ಆದರೆ ಕಾಣಿಸದಿದ್ದ ಆ ಸೂಕ್ಷ್ಮಭಾಗದಿಂದಲೇ ಇಷ್ಟು ದೊಡ್ಡ ವಟವೃಕ್ಷವು ಬೆಳೆಯುತ್ತದೆ. ಈ ಸತ್ಯದಲ್ಲಿ ನೀನು ನಂಬಿಕೆಯನ್ನಿಡು. ಇದು ಅತ್ಯಂತ ಸೂಕ್ಷ್ಮ. ಈ ಸರ್ವವೂ ಪರಬ್ರಹ್ಮ ಸ್ವರೂಪ. ಇದೇ ಸತ್ಯವಾದುದು. ಇದೇ ಪರಮಾತ್ಮ. ಶ್ವೇತಕೇತೂ! ಆ ಆತ್ಮವೇ ನೀನಾಗಿದ್ದೀಯೆ. (ತತ್ತ್ವಮಸಿ)." ಎಂದು ಬೋಧಿಸಿದ. ಭಗವನ್ ಆ ಪರಬ್ರಹ್ಮವು ಈ ಸಮಸ್ತ ಸೃಷ್ಟಿಗೆ ಆಧಾರವಾಗಿದೆಯಲ್ಲವೆ? ಮತ್ತೆ ನನಗೆ ಕಾಣಿಸುತ್ತಿಲ್ಲವಲ್ಲ? ಈ ಜ್ಞಾನವನ್ನು ನನಗೆ ವಿಪುಲವಾಗಿ ಬೋಧಿಸು ಎಂದು ಕೋರಲು, ತಂದೆಯು ಈ ರೀತಿಯಾಗಿ ಹೇಳತೊಡಗಿದ.

## ಷಷ್ಠ ಪ್ರಪಾಠಕ - ತ್ರಯೋದಶ ಖಂಡ

ಮಂ.ಶ್ಲೋ.॥ ಲವಣಮೇತದುದಕೇऽವಧಾಯಾಥ ಮಾ ಪ್ರಾತರುಪಸೀದಥಾ ಇತಿ ಸಹ ತಥಾ ಚಕಾರ ತಂ ಹೋವಾಚ ಯದ್ದೋಷಾ ಲವಣಮುದಕೇऽವಾಥಾ ಅಙ್ಗ ತದಾಹರೇತಿ ತದ್ಧಾವ-ಮೃಶ್ಯ ನ ವಿವೇದ ಯಥಾ ವಿಲೀನಮೇವಾಙ್ಗ (1) ಅಸ್ಯಾನ್ತಾದಾಚಾಮೇತಿ ಕಥಮಿತಿ ಲವಣಮಿತಿ ಮಧ್ಯಾದಾಚಾಮೇತಿ ಕಥಮಿತಿ ಲವಣಮಿತ್ಯಂತಾದಾಚಾಮೇತಿ ಕಥಮಿತಿ ಲವಣಮಿತ್ಯಭಿ ಪ್ರಾಶ್ಯೈತದಥ ಮೋಪಸ್ಸೀದಥಾ ಇತಿ ತದ್ಧ ತಥಾ ಚಕಾರ ತಚ್ಛಶ್ವತ್ಸಂವರ್ತತೇ ತಂ ಹೋವಾಚಾತ್ರವಾವ ಕಿಲ ಸತ್ಸೋಮ್ಯ ನ ನಿಭಾಲಯಸೇऽತ್ರೈವ ಕಿಲೇತಿ (2) ಸ ಯ ಏಷೋऽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (3)

ತಾ : (ಲವಣ ದೃಷ್ಟಾಂತದ ಮೂಲಕ ಉಪದೇಶ) ಈ ಉಪ್ಪಿನ ಹರಳನ್ನು ಜಲದಲ್ಲಿ ಹಾಕಿ, ನಾಳೆ ಬೆಳಗ್ಗೆ ಹೊರಕ್ಕೆ ತೆಗೆದುಕೊಂಡು ನನ್ನ ಬಳಿಗೆ ಬಾ ಎನ್ನಲು ಶ್ವೇತಕೇತುವು ಹಾಗೆಯೇ ಮಾಡಿದ. "ಪುತ್ರಾ! ರಾತ್ರಿ ನೀನು ಹಾಕಿದ ಉಪ್ಪಿನ ಹರಳನ್ನು ತೆಗೆದುಕೊಡು" ಎಂದು ಕೇಳಿದ ಉದ್ಧಾಲಕ. ಶ್ವೇತಕೇತುವಿಗೆ ಅದು ಕಾಣಿಸಲಿಲ್ಲ. 'ಸೌಮ್ಯಾ! ಅದು ಜಲದಲ್ಲಿ ಕರಗಿಹೋಗಿದೆ. ಹೋಗಲಿ ಬಿಡು. ಅದು ಹೇಗಿದೆಯೆಂದು ನೀರಿನ ಮೇಲ್ಭಾಗವನ್ನು ರುಚಿ ನೋಡು" ಎನ್ನಲು, ಮಗನು ನೀರು ಉಪ್ಪಾಗಿದೆ ಎಂದ. ಆಮೇಲೆ ಮಧ್ಯ ಭಾಗ ನಂತರ ತಳಭಾಗದ ನೀರನ್ನು ರುಚಿ ನೋಡೆಂದು ಹೇಳಲು, ಶ್ವೇತಕೇತು ಪರೀಕ್ಷಿಸಿ ನೋಡಿ ಉಪ್ಪಾಗಿಯೇ ಇದೆಯೆಂದ. ಈ ಜಲವನ್ನು ಬಿಸಾಕಿ ನನ್ನ ಬಳಿಗೆ ಬಾ." ಹೀಗೆ ಸಂವಾದ ನಡೆದ ಮೇಲೆ ಉಪ್ಪು ನೀರಿನಲ್ಲಿ ಹೇಗೆ ವ್ಯಾಪಿಸಿದೆ-ಯೆನ್ನುವುದನ್ನು ಪುತ್ರನು ಗ್ರಹಿಸಿದ. "ಎಲೈ ಸೌಮ್ಯಾ! ಉಪ್ಪು ನೀರಿನಲ್ಲಿದ್ದರೂ ನೀನು ಹೇಗೆ ನೋಡಲಾಗಲಿಲ್ಲವೋ, ಅದೇ ಪ್ರಕಾರ ಆ ಸದ್ರೂಪವಾದ ಬ್ರಹ್ಮವು ನೋಡಲಾಗದಂತಹುದು ಸರ್ವತ್ರ ಎಲ್ಲೆಡೆಯೂ ಇರುವುದು. ಇದು ಸ್ಥೂಲವಾದ ಪ್ರತ್ಯಕ್ಷವಾದ ಪ್ರಮಾಣ ವೇದ್ಯವಲ್ಲವೆಂದು ತಿಳಿಯಬೇಕು. ಇದು ಅತ್ಯಂತ ಸೂಕ್ಷ್ಮ. ಇದೆಲ್ಲವೂ ಪರಬ್ರಹ್ಮ ಸ್ವರೂಪ. ಇದೇ ಸತ್ಯ. ಇದೇ ಆತ್ಮ. ಶ್ವೇತಕೇತೂ! ಅದೇ ನೀನಾಗಿದ್ದೀಯೆ. ಈ ವಿಧವಾಗಿ ಆಲಿಸಿದ, ಮತ್ತೆ ಶ್ವೇತಕೇತುವು ಭಗವನ್! ನನಗಿನ್ನೂ ಪರಮಜ್ಞಾನವನ್ನು ಬೋಧಿಸಿ ಎಂದು ಪ್ರಾರ್ಥಿಸಲು ತಂದೆ ಹೇಳುತ್ತಿದ್ದಾನೆ.

## ಷಷ್ಠ ಪ್ರಪಾಠಕ – ಚತುರ್ದಶ ಖಂಡ

ಮಂ.ಶ್ಲೋ.॥ ಯಥಾ ಸೋಮ್ಯ ಪುರುಷಂ ಗನ್ಧಾರೇಭ್ಯೋಽಭಿನದ್ಧಾಕ್ಷಮಾನೀಽಯ ತಂ ತತೋಽತಿಜನೇ ವಿಸೃಜೇತ್ಸ ಯಥಾ ತತ್ರ ಪ್ರಾಙ್ವೋದಙ್ವಾ ಧರಾಙ್ವಾ ಪ್ರತ್ಯಙ್ವಾ ಪ್ರಧ್ಮಾಯೀತಾಭಿನದ್ಧಾಕ್ಷ ಅನೀತೋಽಭಿನದ್ಧಾಕ್ಷೋ ವಿಸೃಷ್ಟಃ (1) ತಸ್ಯ ಯಥಾಭಿನಹನಂ ಪ್ರಮುಚ್ಯ ಪ್ರಬ್ರೂಯಾ-ದೇತಾಂ ದಿಶಂ ಗನ್ಧಾರಾ ಏತಾಂ ದಿಶಂ ಪ್ರಜೇತಿ ಸಗ್ರಾಮಾದ್ಗ್ರಾಮಂ ಪೃಚ್ಛನ್ ಪಣ್ಡಿತೋ ಮೇಧಾವೀ ಗನ್ಧಾರಾನೇವೋಪಸಂಪದ್ಯೇತೈವಮೇವೇಹಾಚಾರ್ಯವಾನ್ ಪುರುಷೋವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಯೇಽಥ ಸಂಪತ್ಸ್ಯ ಇತಿ (2) ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (3)

ತಾ : ಓ ಸೌಮ್ಯಾ! ಒಬ್ಬಾನೊಬ್ಬ ಪುರುಷನ ಕಣ್ಣಿಗೆ ಬಟ್ಟೆ ಕಟ್ಟಿ ಅವನನ್ನು ಗಾಂಧಾರ ದೇಶದಿಂದ ಕರೆದುಕೊಂಡು ಬಂದು ಮಹಾರಣ್ಯದೊಳಗೆ ಬಿಟ್ಟರೂ ಆತನು ನಾಲ್ಕೂ ದಿಕ್ಕುಗಳಲ್ಲೂ ತಿರುಗುತ್ತಾ, ಅಯ್ಯೋ ನನ್ನ ಕಣ್ಣಿಗೆ ಬಟ್ಟೆ ಕಟ್ಟಿ ಇಲ್ಲಿಗೆ ಕರೆತಂದು ಬಿಟ್ಟಿದ್ದಾರೆಂದು ಕಿರಿಚಾಡುತ್ತಿರಲು, ದಾರಿ ಹೋಕರ್ಯಾರಾದರೂ ಆತನ ರೋಧನ ಧ್ವನಿಯನ್ನು ಆಲಿಸಿ, ಆತನ ಕಣ್ಣಿಗೆ ಕಟ್ಟಿರುವ ಬಟ್ಟೆಯನ್ನು ಬಿಚ್ಚಿ, ಈ ದಿಕ್ಕಿನಲ್ಲಿ ಗಾಂಧಾರ ದೇಶವಿದೆ. ಈ ದಿಕ್ಕಿನಲ್ಲಿ ಹೋಗು ಎಂದರೆ ವಿವೇಕಿಯಾದವನು ಕೇಳುತ್ತಾ ಕೇಳುತ್ತಾ ಆಯಾ ಗ್ರಾಮಗಳಿಂದ ಸಾಗಿ ಗಾಂಧಾರ ದೇಶಕ್ಕೆ ಸೇರಿಕೊಂಡ ಹಾಗೆ ಆಚಾರ್ಯರನ್ನು ದರ್ಶಿಸಿದ ಪುರುಷನು ಸತ್ಯವನ್ನರಿತು ಮುಕ್ತಿಯೆನ್ನುವ ಸ್ವಸ್ಥಾನವನ್ನು ಸೇರುವನು. ಆತ್ಮವು ಪರಮ-ಸೂಕ್ಷ್ಮವಾದುದು. ಇದೆಲ್ಲವೂ ಪರಮಾತ್ಮ ರೂಪವೇ. ಅದೇ ಸತ್ಯ, ಅದೇ ಆತ್ಮ. ಶ್ವೇತಕೇತೂ! ಆ ಆತ್ಮವು ನೀನೇ ಆಗಿದ್ದೀಯೆ. (ತತ್ತ್ವಮಸಿ) ಈ ರೀತಿಯಾಗಿ ಆಲಿಸಿ, ಆ ಜ್ಞಾನವನ್ನು ಮತ್ತೆ ಬೋಧಿಸಬೇಕೆಂದು ಶ್ವೇತಕೇತು ಕೋರಿದ. ತಂದೆಯಾದ ಆರುಣಿ ಅಂಗೀಕರಿಸಿದ.

## ಷಷ್ಠ ಪ್ರಪಾಠಕ – ಪಞ್ಚದಶ ಖಂಡ

ಮಂ.ಶ್ಲೋ.॥ ಪುರುಷಂ ಸೋಮ್ಯಾಪತಾಪಿನಂ ಜ್ಞಾತಯಃ ಪರ್ಯುಪಾಸತೇ ಜಾನಾಸಿ ಮಾಂ ಜಾನಾಸಿ ಮಾಮಿತಿ ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೈಜಸಿ ತೇಜಃ ಪರಸ್ಯಾಂ ದೇವತಾಯಾಂ ತಾವಜ್ಜಾನಾತಿ (1) ಅಥ ಯದಾಽಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಮಥ ನ ಜಾನಾತಿ (2) ಸ ಯ ಏಷೋಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ (3)

ತಾ: ಸೌಮ್ಯಾ! ವ್ಯಾಧಿಯಿಂದ ಪೀಡಿತನಾಗಿ ಮರಣ ಶಯ್ಯೆಯಲ್ಲಿರುವ ಪುರುಷನ ಸುತ್ತಮುತ್ತಲು ಆತನ ಬಂಧುಬಳಗದವರೆಲ್ಲರೂ ಕುಳಿತು ನನ್ನನ್ನು ಗುರುತಿಸಿದಿರಾ? ನನ್ನ ಗುರುತು

ಸಿಕ್ಕಿತೇ? ಇತ್ಯಾದಿ ಪ್ರಶ್ನೆಗಳನ್ನು ಆತನಿಗೆ ಹಾಕುವರು. ಆತನ ವಾಕ್ಕು ಮನಸ್ಸಿನಲ್ಲಿಯೂ, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ಅಗ್ನಿಯಲ್ಲಿಯೂ, ಅಗ್ನಿ ಪರದೇವತೆಯಲ್ಲಿಯೂ ಲೀನವಾಗುವಷ್ಟು ಕಾಲ ಆತ ಅವರನ್ನು ಗುರುತುಹಿಡಿಯಬಲ್ಲ. ಆತನ ವಾಕ್ಕು ಮನಸ್ಸಿನಲ್ಲಿಯು, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ತೇಜಸ್ಸಿನಲ್ಲಿಯೂ, ತೇಜಸ್ಸು ಪರದೇವತೆಯಲ್ಲಿಯೂ ಲೀನವಾದಾಗ ಆತ ಯಾರನ್ನೂ ಗುರುತಿಸಲಾರ. ಇದು ಅತ್ಯಂತ ಸೂಕ್ಷ್ಮವಾದುದು. ಈ ತೇಜಸ್ಸಿಗೆ, ಪ್ರಾಣಕ್ಕೆ, ವಾಕ್ಕಿಗೆ, ದೇಹಕ್ಕೆ ಕಾರಣವಾಗಿರುವ ಈ ಸೂಕ್ಷ್ಮತತ್ತ್ವವೇ ಪರಮಾತ್ಮ. ಇದೆಲ್ಲವೂ ಪರಬ್ರಹ್ಮ ಸ್ವರೂಪ. ಇದೇ ಸತ್ಯ. ಅದೇ ಆತ್ಮ. ಶ್ವೇತಕೇತೂ! ಆ ಆತ್ಮವು ನೀನೇ ಆಗಿದ್ದೀಯೆ. (ತತ್ತ್ವಮಸಿ) ಭಗವನ್! ನನಗಿನ್ನೂ ಆ ಜ್ಞಾನವನ್ನು ಬೋಧಿಸಬೇಕೆಂದು ಕೇಳಲು ತಂದೆಯು ಮತ್ತೂ ಹೇಳತೊಡಗಿದ.

## ಷಷ್ಠ ಪ್ರಪಾಠಕ – ಷೋಡಶ ಖಂಡ

**ಮಂ.ಶ್ಲೋ.॥ ಪುರುಷಂ ಸೋಮ್ಯೋತ ಹಸ್ತಗೃಹೀತಮಾನಯನ್ತ್ಯಪಹಾರ್ಷೀತ್ ಸ್ತೇಯಮಕಾರ್ಷೀತ್ ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿ ಸನ್ಧೋಽನೃತೇನಾತ್ಮಾನಮನ್ತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣೋತಿ ಸ ದಹ್ಯತೇಽಥ ಹನ್ಯತೇ (1) ಅಥ ಯದಿ ತಸ್ಯಾ ಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸಃ ಸತ್ಯಾಭಿಸನ್ಧಸ್ಸತ್ಯೇನಾತ್ಮಾನಮನ್ತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥಮುಚ್ಯತೇ (2) ಸ ಯಥಾ ತತ್ರ ನಾ ದಾಹ್ಯೇತೈತ-ದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ (3)**

ತಾ : ಸೌಮ್ಯಾ! ಕಳ್ಳತನ ಮಾಡಿದವರ ಕೈಗಳನ್ನು ಕಟ್ಟಿ ತಂದು ಚೆನ್ನಾಗಿ ಕಾಯಿಸಿದ ಬಿಸಿ ಕೊಡಲಿಯನ್ನು ಹಿಡಿದುಕೊಳ್ಳಬೇಕೆಂದು ಹೇಳುವರು. ಕಾದ ಕಬ್ಬಿಣದ ಕೊಡಲಿಯನ್ನು ಹಿಡಿದು ಕೊಂಡಾಗ ಆ ಕೈಗಳು ಸುಡುತ್ತವೆ. (ಸುಳ್ಳನ್ನು ಆಡಿದವರನ್ನು ಮಾತ್ರವೇ ಸುಡುತ್ತದೆ.) ಹಸ್ತಗಳು ಸುಟ್ಟು ಹೋದಾಗ, ಆತ ಕಳ್ಳನೆಂದು ತೀರ್ಮಾನಿಸಿ ಶಿಕ್ಷೆ ಕೊಡುವರು. (ವೇದಕಾಲದ ಶಿಕ್ಷೆ ಈ ರೀತಿಯಿತ್ತು.) ಆತ ಕಳ್ಳತನ ಮಾಡದಿದ್ದರೆ, ಮಾಡಲಿಲ್ಲವೆಂದು ನಿಜವನ್ನು ಹೇಳಿದಾಗ ಬಿಸಿಯಾದ ಕಬ್ಬಿಣದ ಗುಂಡು ಆತನ ಕೈಗಳನ್ನು ಸುಡುವುದಿಲ್ಲ. ಆಗ ಆ ಮನುಷ್ಯ ನಿರ್ದೋಷಿಯೆಂದು ಬಿಟ್ಟುಬಿಡುವರು. ಅದೇ ರೀತಿಯಾಗಿ ಸತ್ಯ ಸ್ವರೂಪವಾದ ಆತ್ಮವೇ ತಾನೆಂದು ಗುರುತಿಸಿದ ಆತ್ಮವಿದನು ಸರ್ವದುಃಖಗಳಿಂದ ಸಂತಪ್ತನಾಗುವುದಿಲ್ಲ ಶ್ವೇತಕೇತೂ! ಆ ಆತ್ಮವು ನೀನೇ ಆಗಿದ್ದೀಯೆ. (ತತ್ತ್ವಮಸಿ) ಈ ರೀತಿಯಾಗಿ ಬೋಧಿಸಿದ ಉದ್ಧಾಲಕನ ಬೋಧನೆಯಿಂದ ಶ್ವೇತಕೇತು ಪೂರ್ಣತತ್ತ್ವಜ್ಞಾನವನ್ನು ಹೊಂದಿದವನಾದನು. (ಆರನೆಯ ಪ್ರಪಾಠಕದಲ್ಲಿ 16 ಖಂಡಗಳು, 69 ಮಂತ್ರಗಳು ಇವೆ.)

## ಸಪ್ತಮ ಪ್ರಪಾಠಕ – ಪ್ರಥಮ ಖಂಡ

**ಮಂ.ಶ್ಲೋ.॥ ಓಂ ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಸ್ತಂ ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮೀತಿ (1) ಸ ಹೋವಾಚರ್ಗ್ವೇದಂ**

ಭಗವೋऽಧ್ಯೇಮಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯ-ಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪ ದೇವಜನವಿದ್ಯಾಮೇತದ್ಭಗವೋऽಧ್ಯೇಮಿ (2) ಸೋऽಹಂ ಭಗವೋ ಮನ್ತ್ರವಿದೇವಾಸ್ಮಿ ನಾತ್ಮವಿತ್ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋऽಹಂ ಭಗವಶ್ಶೋಚಾಮಿ ತಂ ಮಾ ಭಗವಾನ್ ಶೋಕಸ್ಯ ಪಾರಂ ತಾರಯತ್ವಿತಿ ತಂ ಹೋವಾಚ ಯದ್ವೈ ಕಿಂಚೈತದಧ್ಯಗೀಷ್ಠಾ ನಾಮೈ ವೈತತ್ (3)

ತಾ : (ನಾರದನು ಸನತ್ಕುಮಾರನೊಂದಿಗೆ) ನನಗೆ ಜ್ಞಾನೋಪದೇಶವನ್ನು ಮಾಡಿರೆಂದು ಪ್ರಾರ್ಥಿಸುತ್ತಿರುವೆನು. ಅಂದರೆ ನಿನಗೆ ತಿಳಿದಿರುವುದೆಲ್ಲವನ್ನೂ ಹೇಳು, ನಂತರ ಜ್ಞಾನಬೋಧನೆ ಮಾಡುವೆನೆಂದು ಸನತ್ಕುಮಾರ ಹೇಳಿದನು. ಆಗ ನಾರದನು ಭಗವಾನ್! ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಐದನೆಯ ವೇದವೆಂದು ಹೇಳುವ ಇತಿಹಾಸ ಪುರಾಣಗಳು ಮತ್ತು ವ್ಯಾಕರಣ, ಶ್ರಾದ್ಧಕಲ್ಪ, ಗಣಿತ ಶಾಸ್ತ್ರ, ಸಿದ್ಧಾಂತ, ಮಹಾಕಾಲಾದಿ ಧೂಮಕೇತುಗಳ, ಉತ್ಪಾತಗಳನ್ನು ಕುರಿತು ಹೇಳುವ ಶಾಸ್ತ್ರ, ತರ್ಕಶಾಸ್ತ್ರ, ಏಕಾಯನ (ಪಂಚರಾತ್ರ), ದೇವವಿದ್ಯೆ, ನಿರುಕ್ತ, ಬ್ರಹ್ಮ ವಿದ್ಯೆಗಳೆಲ್ಲವೂ ನನಗೆ ಗೊತ್ತು ಎಂದು ಹೇಳಿದ. ಅಲ್ಲದೆ ಶಿಕ್ಷಾಕಲ್ಪಾದಿಗಳು, ಭೂತವಿದ್ಯೆ, ಧನುರ್ವೇದ, ಜ್ಯೋತಿಷ್ಯ, ಸರ್ಪವಿದ್ಯೆ, ನೃತ್ಯಗೀತಾದಿ ಲಲಿತಕಲೆಗಳು ಮೊದಲಾದ ಬ್ರಹ್ಮ ವಿದ್ಯೆಗಳೆಲ್ಲವೂ ನನಗೆ ತಿಳಿದಿದೆ ಎಂದನು. ನಾರದಮಹರ್ಷಿ, ಇನ್ನೂ ಮುಂದುವರಿಸಿ ಮಹಾತ್ಮಾ! ನಾನು ಮಂತ್ರವೇತ್ತನಾಗಿದ್ದೇನೆ. ಆತ್ಮವೇತ್ತನಾಗಿಲ್ಲ. ಆತ್ಮವೇತ್ತನೇ ಶೋಕದಿಂದ ದೂರಸರಿದು ಮುಕ್ತನಾಗುವನೆಂದು ಹಿರಿಯರಿಂದ ಕೇಳಿದ್ದೇನೆ. ನಾನು ಶೋಕವನ್ನು ಹೊಂದಿದ್ದೇನೆ. ನನ್ನನ್ನು ಶೋಕ ಸಮುದ್ರದಿಂದ ಪಾರು ಮಾಡಿ ದಡ ಸೇರಿಸಬೇಕೆಂದು ಪ್ರಾರ್ಥನೆ" ಎಂದು ನಾರದನು ಸನತ್ಕುಮಾರನನ್ನು ಕೇಳಿಕೊಂಡ. (ಸರ್ಪವಿದ್ಯೆ - ವಿಷವಿದ್ಯೆ)

ಮಂ.ಶ್ಲೋ.॥ ನಾಮ ವಾ ಋಗ್ವೇದೋ ಯಜುರ್ವೇದಸ್ಸಾಮವೇದ ಆಥರ್ವಣಶ್ಚತುರ್ಥ ಇತಿಹಾಸಪುರಾಣಃ ಪಞ್ಚಮೋ ವೇದಾನಾಂ ವೇದಃ ಪಿತ್ರ್ಯೋರಾಶಿರ್ದೈವೋ ನಿಧಿರ್ವಾಕೋ ವಾಕ್ಯ-ಮೇಕಾಯನಂ ದೇವವಿದ್ಯಾ ಬ್ರಹ್ಮವಿದ್ಯಾ ಭೂತವಿದ್ಯಾ ಕ್ಷತ್ರವಿದ್ಯಾ ನಕ್ಷತ್ರವಿದ್ಯಾ ಸರ್ಪ ದೇವಜನವಿದ್ಯಾನಾಮೈ ವೈ ತನ್ನಾಮೋಪಾಸ್ಸ್ವೇತಿ (4) ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ನಾಮ ಬ್ರಹ್ಮೇತ್ಯುಪಾಸ್ತೇऽಸ್ತಿ ಭಗವೋ ನಾಮ್ನೋ ಭೂಯ ಇತಿ ನಾಮ್ನೋ ವಾ ವ ಭೂಯೋಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (೨)

ತಾ : ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ, ಐದನೆಯದಾದ ಇತಿಹಾಸ ಪುರಾಣಗಳು, ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ಸಿದ್ಧಾಂತ, ತರ್ಕಶಾಸ್ತ್ರ, ಪಂಚರಾತ್ರ ಶಾಸ್ತ್ರ, ನಿರುಕ್ತ, ಶಿಕ್ಷಾಕಲ್ಪ, ಭೂತತಂತ್ರ, ಧನುರ್ವೇದ, ಜ್ಯೋತಿಷ್ಯ ಮೊದಲಾದವುಗಳೆಲ್ಲವೂ ಭೌತಿಕವಾದವುಗಳಷ್ಟೇ.

ಆದ್ದರಿಂದ ನಾಮದಲ್ಲಿ ಬ್ರಹ್ಮಬುದ್ಧಿಯನ್ನಿಟ್ಟು ಆ ನಾಮವನ್ನು ಬ್ರಹ್ಮವೆಂದು ಉಪಾಸನೆ ಮಾಡು. ನಾಮವನ್ನು ಬ್ರಹ್ಮವೆಂದು ಉಪಾಸಿಸುವವನು ನಾಮವಿಷಯಕವಾದ ಜ್ಞಾನವನ್ನು ಗಳಿಸಿ ಅದರಲ್ಲಿ ಯಥೇಚ್ಛವಾಗಿ ವಿಹರಿಸುತ್ತಾ, ನಾಮವೆಲ್ಲಿಯವರೆಗೂ ವ್ಯಾಪಿಸಿರುವುದೋ ಅಲ್ಲಿಯವರೆಗೆ ವ್ಯಾಪ್ತಿ ಹೊಂದಿದವನಾಗಿ ಪೂರ್ಣ ಫಲವನ್ನು ಹೊಂದುವನು. ಭಗವನ್! ನಾಮಕ್ಕಿಂತ ಹಿರಿದಾದ ಜ್ಞಾನವು ಇರುವುದೆ? ಎಂದು ನಾರದನು ಕೇಳಿದನು. ಹೌದು ಅದಕ್ಕಿಂತ ಹಿರಿದಾದುದು 'ವಾಕ್ಕು' ಇದೆಯೆಂದು. ಸನತ್ಕುಮಾರನು ಹೇಳಿದನು. ನಾರದ ವಾಕ್ಕನ್ನು ಬೋಧಿಸಬೇಕೆಂದು ಬೇಡಿದ.

## ಸಪ್ತಮ ಪ್ರಪಾಠಕ - ದ್ವಿತೀಯ ಖಂಡ

**ಮಂ.ಶ್ಲೋ.॥ ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪಯತಿ ಯಜುರ್ವೇದಂ ಸಾಮವೇದಮಥರ್ವಣಂ ಚತುರ್ಥಮಿತಿಹಾಸಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋ ವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪ ದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಞ್ಚಾಕಾಶಞ್ಚಾಪಶ್ಚ ತೇಜಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ತೃಣವನಸ್ಪತೀಂ ಚ ಶ್ವಾಪದಾನ್ಯಾಕೀಟ ಪತಂಗ ಪಿಪೀಲಿಕಂ ಧರ್ಮಞ್ಚಾಧರ್ಮಞ್ಚ ಸತ್ಯಞ್ಚಾನೃತಂ ಚ ಸಾಧುಚಾಸಾಧು ಚ ಹೃದಯಜ್ಞಞ್ಚಾ ಹೃದಯಜ್ಞಂ ಚ ಯದ್ವೈವಾಙ್ನಾ-ಭವಿಷ್ಯನ್ನಧರ್ಮೋ ನಾಧರ್ಮೋ ವ್ಯಜ್ಞಾಪಿಷ್ಯನ್ನ ಸತ್ಯಂ ನಾನೃತಂ ನ ಸಾಧುನಾಸಾಧು ನ ಹೃದಯಜ್ಞೋ ನಾಹೃದಯಜ್ಞೋ ವಾಗೇವೈತತ್ಸರ್ವಂ ವಿಜ್ಞಾಪಯತಿ ವಾಚಮುಪಾಸ್ಸ್ವೇತಿ (1) ಸ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ಯಾವದ್ವಾಚೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಾಚೋ ಭೂಯ ಇತಿ ವಾಚೋ ವಾವ ಭೂಯೋಽಸ್ತೀಽತಿ ತನ್ಮೇ ಭಗವಾನ್ ಬ್ರವೀತ್ವಿತಿ (2)**

ತಾ : ನಾಮವು ಶ್ರೇಷ್ಠವಾದರೂ ಅದಕ್ಕಿಂತ ಹಿರಿದಾದುದು ವಾಕ್ಕು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ ಪಂಚಮ ವೇದವೆನಿಸಿದ್ದ ಇತಿಹಾಸ ಪುರಾಣಗಳು, ಮಾತ್ರವಲ್ಲದೆ ವ್ಯಾಕರಣ, ಶ್ರಾದ್ಧಕಲ್ಪ, ಗಣಿತ ಶಾಸ್ತ್ರ, ದೈವಜ್ಞಾನ, ನಿಧಿಶಾಸ್ತ್ರಜ್ಞಾನ, ತರ್ಕ, ನೀತಿ ಶಾಸ್ತ್ರ, ನಿರುಕ್ತ, ಕಲ್ಪಶಿಕ್ಷಾ, ಭೂತತಂತ್ರ ವಿದ್ಯೆ, ಧನುರ್ವೇದ, ಜ್ಯೋತಿಷ್ಯ, ಗಾರುಡಿ ವಿದ್ಯೆ, ದೇವ ಜನವಿದ್ಯೆ, ದ್ಯುಲೋಕ, ಭೂಲೋಕ, ವಾಯುಭೂತ, ಆಕಾಶ, ನೀರು, ಅಗ್ನಿ ದೇವತೆಗಳು, ಮಾನವರು, ಪಶುಪಕ್ಷ್ಯಾದಿಗಳು, ತೃಣಗಳು, ವನಸ್ಪತಿಗಳು, ಕ್ರಿಮಿಕೀಟಕಗಳು, ಧರ್ಮಾಧರ್ಮಗಳು, ಸತ್ಯಾಸತ್ಯ-ಗಳು, ಪ್ರಿಯಾಪ್ರಿಯಗಳು ಈ ಸಮಸ್ತ ಪ್ರಕೃತಿಯನ್ನು ವಾಕ್ಕು ವಿಶದಪಡಿಸುತ್ತದೆ. ವಾಕ್ಕು ಇಲ್ಲವಾದಲ್ಲಿ ಧರ್ಮಾಧರ್ಮಗಳನ್ನು ಸತ್ಯಾಸತ್ಯಗಳನ್ನು, ಒಳ್ಳೆಯದು ಕೆಟ್ಟದ್ದನ್ನು ಪ್ರಿಯ ಹಾಗೂ ಅಪ್ರಿಯಗಳನ್ನು ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಈ ಸರ್ವವನ್ನು ವಾಕ್ಕು ತಿಳಿಯಪಡಿಸುತ್ತದೆ. ವಾಕ್ಕನ್ನು ಬ್ರಹ್ಮವನ್ನಾಗಿ ಉಪಾಸಿಸಬೇಕು. ವಾಕ್ಕನ್ನು ಪರಬ್ರಹ್ಮವಾಗಿ ಉಪಾಸಿಸುವವನು ವಾಕ್ಕಿನ ಪೂರ್ಣಜ್ಞಾನ-ವನ್ನು ಹೊಂದಿ ವಾಕ್ಕು ಎಷ್ಟು ವ್ಯಾಪ್ತಿಯನ್ನು ಹೊಂದಿರುವುದೋ ಅಷ್ಟರವರೆಗೂ ಸ್ವೇಚ್ಛೆಯಾಗಿ

ವಿಹರಿಸಬಲ್ಲ ಎಂದು ಹೇಳಿದ. "ಭಗವನ್, ವಾಕ್ಕಿಗಿಂತ ಅಧಿಕವಾದ ಜ್ಞಾನವ್ಯಾವುದಾದರೂ ಇದೆಯೇ?" ಎಂದು ನಾರದನು ಕೇಳಿದಾಗ, ಇದೆಯೆಂದು ಸನತ್ಕುಮಾರನು ಹೇಳಿದ, ಅದನ್ನು ನನಗೆ ತಿಳಿಸಿಕೊಡಿ ಎಂದು ನಾರದ ಕೇಳಿಕೊಂಡ.

## ಸಪ್ತಮ ಪ್ರಪಾಠಕ – ತೃತೀಯ ಖಂಡ

**ಮಂ.ಶ್ಲೋ.॥ ಮನೋ ವಾವ ವಾಚೋ ಭೂಯೋ ಯಥಾ ವೈ ದ್ವೇವಾಮಲಕೇ ದ್ವೇವಾಕೋಲೇ ದ್ವೌವಾಕ್ಷೌ ಮುಷ್ಟಿರನುಭವತ್ಯೇವಂ ವಾಚಂ ಚ ನಾಮ ಚ ಮನೋಽನುಭವತಿ ಸ ಯದಾ ಮನಸಾ ಮನಸ್ಯತಿ ಮಂತ್ರಾನಧೀಯೀಯೇತ್ಯಥಾಧೀತೇ ಕರ್ಮಾಣಿ ಕುರ್ವೀಯೇತ್ಯಥ ಕುರುತೇ ಪುತ್ರಾಂಶ್ಚ ಪಶೂಂಶ್ಚೇಚ್ಛೇಯೇತ್ಯೇಥೇಚ್ಛ ತ ಇಮಂ ಚ ಲೋಕಮಮುಞ್ಚೇ-ಚ್ಛೇಯೇತ್ಯಥೇಚ್ಛತೇ ಮನೋ ಹ್ಯಾತ್ಮಾ ಮನೋಹಿ ಲೋಕೋ ಮನೋಹಿ ಬ್ರಹ್ಮ ಮನ ಉಪಾಸ್ಸ್ವೇತಿ(1) ಸ ಯೋ ಮನೋ ಬ್ರಹ್ಮೇತ್ಯುಪಾಸ್ತೇಸ್ತಿ ಯಾವನ್ಮನಸೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ಮನೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಮನಸೋ ಭೂಯ ಇತಿ ಮನಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)**

ತಾ : ಮನಸ್ಸು ವಾಕ್ಕಿಗಿಂತ ದೊಡ್ಡದು. ಎರಡು ನೆಲ್ಲಿಕಾಯಿಗಳು ಅಥವಾ ಎರಡು ಎಲಚೀ ಕಾಯಿಗಳು ಅಥವಾ ಎರಡು ತಾಳೆಹಣ್ಣುಗಳನ್ನು ಒಂದೇ ಹಿಡಿಯಲ್ಲಿ ಸೇರಿಸಿ ಹಿಡಿದಿಟ್ಟು ಕೊಂಡಂತೆ, ಮನಸ್ಸಿನಲ್ಲಿ ನಾಮ ಮತ್ತು ವಾಕ್ಕನ್ನು ಸೇರಿಸಿಕೊಳ್ಳಲಾಗಿದೆ. ಮನಸ್ಸಿನಲ್ಲಿ ಅಡಗಿಕೊಂಡಿವೆ. ಮಂತ್ರ-ಗಳನ್ನು ಉಚ್ಚರಿಸಬೇಕೆಂದು ಮನುಷ್ಯನು ಮನಸ್ಸನ್ನು ಯಾವಾಗ ಕೋರಿಕೊಂಡನೋ ಆಗ ಆ ಮಂತ್ರಗಳನ್ನು ಉಚ್ಚರಿಸಬಲ್ಲ. ಕರ್ಮಗಳನ್ನಾಚರಿಸಬೇಕೆಂದು ಯಾವಾಗ ಸಂಕಲ್ಪಿಸುವನೋ, ಆಗ ಆ ಕರ್ಮಗಳನ್ನು ಆಚರಿಸುವಂತಹವನಾಗುತ್ತಾನೆ. ಪಶುಪುತ್ರಾದಿಗಳನ್ನು ಹೊಂದಬೇಕೆಂದು ಯಾವಾಗ ಕೋರಿಕೊಳ್ಳುವನೋ ಆಗ ಅವುಗಳನ್ನು ಪಡೆಯುವನು. ಈ ಲೋಕ ಪರಲೋಕಗಳನ್ನು ಯಾವಾಗ ಇಚ್ಛೆ ಉಂಟಾಗುವುದೋ ಆಗ ಅವುಗಳನ್ನು ಹೊಂದುವನು. ಮನಸ್ಸೇ ಆತ್ಮ. ಆ ಮನಸ್ಸೇ ಲೋಕ. ಮನಸ್ಸೇ ಬ್ರಹ್ಮ. ಮನಸ್ಸನ್ನು ಪರಬ್ರಹ್ಮವಾಗಿ ಉಪಾಸಿಸಬೇಕು. ಮನಸ್ಸನ್ನು ಪರಬ್ರಹ್ಮವಾಗಿ ಉಪಾಸಿಸುವವನು ಮನಸ್ಸು ಎಷ್ಟು ವ್ಯಾಪ್ತಿಯನ್ನು ಹೊಂದಿರುವುದೋ ಅಷ್ಟು ದೂರದವರೆಗೂ ಯಥೇಚ್ಛವಾಗಿ ವಿಹರಿಸುವನು" "ಭಗವನ್, ಮನಸ್ಸಿಗಿಂತ ದೊಡ್ಡದಾದುದು ಮತ್ಯಾವುದಾದರೂ ಇದೆಯೆ?" ಎಂದು ಮತ್ತೆ ನಾರದ ಮಹರ್ಷಿ ಪ್ರಶ್ನಿಸಲು, ಇದೆಯೆಂದು ಅದನ್ನು ಹೇಳಲು ಸನತ್ಕುಮಾರನು ಉಪಕ್ರಮಿಸಿದ.

## ಸಪ್ತಮ ಪ್ರಪಾಠಕ – ಚತುರ್ಥ ಖಂಡ

**ಮಂ.ಶ್ಲೋ.॥ ಸಙ್ಕಲ್ಪೋ ವಾವ ಮನಸೋ ಭೂಯಾನ್ಯದಾ ವೈ ಸಙ್ಕಲ್ಪಯತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮನ್ತ್ರಾ ಏಕಮ್ಭವನ್ತಿ ಮನ್ತ್ರೇಷು ಕರ್ಮಾಣಿ (1) ತಾನಿ ಹ ವಾ ಏತಾನಿ ಸಙ್ಕಲ್ಪೈಕಾಯನಾನಿ ಸಙ್ಕಲ್ಪಾತ್ಮಕಾನಿ ಸಙ್ಕಲ್ಪೇ ಪ್ರತಿಷ್ಠಿತಾನಿ**

**ಸಮಕ್ಲೃಪತಾಂ ದ್ಯಾವ ಪೃಥಿವೀ ಸಮಕಲ್ಪೇತಾಂ ವಾಯುಶ್ಚಾಕಾಶಂ ಚ ಸಮ-ಕಲ್ಪಂತಾಪಶ್ಚ ತೇಜಶ್ಚ ತೇಷಾಂ ಸಂಕ್ಲೃಪ್ತ್ಯೇನ ವರ್ಷಂ ಸಂಙ್ಕಲತೇ ವರ್ಷಸ್ಯ ಸಂಕ್ಲೃಪ್ತ್ಯೈ ಅನ್ನಂ ಸಂಙ್ಕಲ್ಪತೇಽನ್ನಸ್ಯ ಸಂಕ್ಲೃಪ್ತ್ಯೈ ಪ್ರಾಣಾಸಙ್ಕಲ್ಪನ್ತೇ ಪ್ರಾಣಾನಾಂ ಸಂಕ್ಲೃಪ್ತ್ಯೈ ಮಂತ್ರಾ ಸಂಙ್ಕಲ್ಪನ್ತೇ ಮಂತ್ರಾಣಾನಾಂ ಸಂಕ್ಲೃಪ್ತ್ಯೈ ಕರ್ಮಾಣಿ ಸಙ್ಕಲ್ಪನ್ತೇ ಕರ್ಮಾಣಾಂ ಸಂಕ್ಲೃಪ್ತ್ಯೈ ಲೋಕಃ ಸಙ್ಕಲ್ಪತೇ ಲೋಕಸ್ಯ ಸಂಕ್ಲೃಪ್ತ್ಯೈ ಸರ್ವಂ ಸಙ್ಕಲ್ಪತೇ ಸ ಏಷ ಸಙ್ಕಲ್ಪಸ್ಸಙ್ಕಲ್ಪ-ಮುಪಾಸ್ವೇತಿ (2)**

ತಾ : ಸಂಕಲ್ಪವು ಮನಸ್ಸಿಗಿಂತ ಬಹಳ ದೊಡ್ಡದು, ಮಾನವನು ಸಂಕಲ್ಪವನ್ನು ಮಾಡುವಾಗ, ಮನಸ್ಸಿನಲ್ಲೇ ಕೋರಿಕೊಳ್ಳುತ್ತಾನೆ. ಮನಸ್ಸು ವಾಕ್ಕನ್ನು ಪ್ರೇರೇಪಿಸುತ್ತದೆ. ವಾಕ್ಕಿನಲ್ಲಿ ನಾಮವು ಸೇರಿರುತ್ತದೆ. ನಾಮವು ಮಂತ್ರದಲ್ಲೂ, ಮಂತ್ರವು ಕರ್ಮಗಳಲ್ಲೂ ಸೇರಿಕೊಂಡಿರುತ್ತವೆ. ನಾಮಗಳು, ಮನಸ್ಸು ಮುಂತಾದವುಗಳೆಲ್ಲದಕ್ಕೂ ಸಂಕಲ್ಪವೇ ಆಶ್ರಯ. ಎಲ್ಲದಕ್ಕೂ ಮೂಲ ಸಂಕಲ್ಪವೇ. ಸಂಕಲ್ಪದ ಆಧಾರದಿಂದಲೇ ನಾಮಾದಿಗಳು ಮನಸ್ಸಿನ ನೆಲೆ (ಆಧಾರ)ಯನ್ನು ಹೊಂದಿರುವಂತಹುದಾಗಿರುತ್ತದೆ. ಫಲ ಮುಂತಾದವುಗಳೆಲ್ಲವೂ ಸಂಕಲ್ಪದಿಂದಲೇ ಉಂಟಾಗುತ್ತದೆ. ಸಮಸ್ತ ಸೃಷ್ಟಿ ಸಂಕಲ್ಪಮಯ. ಸಂಕಲ್ಪವನ್ನೇ ಪರಬ್ರಹ್ಮವಾಗಿ ಉಪಾಸಿಸಬೇಕು.

**ಮಂ.ಶ್ಲೋ.॥ ಸಯಸ್ಸಙ್ಕಲ್ಪಂ ಬ್ರಹ್ಮೇತ್ಯುಪಾಸ್ತೇ ಸಂಕ್ಲೃಪ್ತಾನ್ವೈ ಸಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವತ್ಸಙ್ಕಲ್ಪಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಸ್ಸಙ್ಕಲ್ಪಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಸಂಕಲ್ಪಾ-ದ್ಭೂಯ ಇತಿ ಸಂಕಲ್ಪಾದ್ಯಾವ ಭೂಯೋಽಸ್ತೀತಿ ತಸ್ಮೇ ಭಗವಾನ್ ಬ್ರವೀತ್ವಿತಿ (3)**

ತಾ : ಸಂಕಲ್ಪವನ್ನೇ ಪರಬ್ರಹ್ಮವೆಂದು ಉಪಾಸಿಸುವವನು, ಸೃಷ್ಟಿಸಲಾದ ಧ್ರುವಲೋಕಕ್ಕೆ ತಾನೇ ಧ್ರುವನಾಗಿ, ಪ್ರತಿಷ್ಠೆ ಮಾಡಿದಂತಹ ಲೋಕಗಳಲ್ಲಿ ತಾನೇ ಪ್ರತಿಷ್ಠಿತನಾಗಿ, ದುಃಖಗಳಲ್ಲಿದ್ದ ಲೋಕಗಳಿಗೆ ತಾನು ದುಃಖರಹಿತನಾಗಿರುವನು. ಸಂಕಲ್ಪವು ಎಷ್ಟು ದೂರ ವ್ಯಾಪಿಸಿರುವುದೋ ಅಷ್ಟು ದೂರ ಎಲ್ಲೆಲ್ಲೂ ಸ್ವೇಚ್ಛೆಯಿಂದ ಆತ ಸಂಚರಿಸುತ್ತಾನೆ. "ಭಗವನ್, ಈ (ನಿಶ್ಚಯಾತ್ಮಕ ಬುದ್ಧಿ) ಸಂಕಲ್ಪಕ್ಕಿಂತ ಹಿರಿದಾದುದು ಮತ್ಯಾವುದಾದರೂ ಇದೆಯೇ?" ಎಂದು ನಾರದನು ಪ್ರಶ್ನಿಸಲು ಇದೆಯೆಂದು ಹೇಳಿದಾಗ ಅದನ್ನು ಅರುಹಬೇಕೆಂದು ನಾರದನು ಪ್ರಾರ್ಥಿಸಲು ಸನತ್ಕುಮಾರ ಹೇಳತೊಡಗಿದ.

## ಸಪ್ತಮ ಪ್ರಪಾಠಕ - ಪಞ್ಚಮ ಖಂಡ

**ಮಂ.ಶ್ಲೋ.॥ ಚಿತ್ತಂ ವಾವ ಸಙ್ಕಲ್ಪಾದ್ಭೂಯೋ ಯದಾ ವೈ ಚೇತಯತೇಽಥ ಸಙ್ಕಲ್ಪಯತೇಽಥ ಮನ-ಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿಮನ್ತ್ರಾ ಏಕಂ ಭವನ್ತಿ ಮನ್ತ್ರೇಷು ಕರ್ಮಾಣಿ (1) ತಾನಿ ಹವಾ ಏತಾನಿ ಚಿತ್ತೈಕಾಯನಾನಿ ಚಿತ್ತಾತ್ಮಾನಿ ಚಿತ್ತೇ ಪ್ರತಿಷ್ಠಿತಾನಿ ತಸ್ಮಾದ್ಯದ್ಯಪಿ ಬಹುವಿದಚಿತ್ತೋ ಭವತಿ ನಾಯಮಸ್ತೀತ್ಯೇವೈನಮಾಹುರ್ಯದಯಂ ವೇದ**

**ಯದ್ವಾಽಯಂ ವಿದ್ವಾನ್ನೇತ್ಥಮ ಚಿತ್ತಃ ಸ್ಯಾದಿತ್ಯಥ ಯದ್ಯಲ್ಪವಿಚ್ಚಿತ್ತವಾನ್ ಭವತಿ ತಸ್ಮಾ ಏವೋತ ಶುಶ್ರೂಷನ್ತೇ ಚಿತ್ತಂ ಹ್ಯೇವೈಷಾಮೇಕಾಯನಂ ಚಿತ್ತಮಾತ್ಮಾ ಚಿತ್ತಂ ಪ್ರತಿಷ್ಠಾ ಚಿತ್ತಮುಪಾಸ್ಸ್ಯೇತಿ (2)**

ತಾ : ಚಿತ್ತವು ಸಂಕಲ್ಪಕ್ಕಿಂತಲೂ ಶ್ರೇಷ್ಠವಾದದ್ದು. ಮನುಷ್ಯನ ಚಿತ್ತವು ತುಂಬಿರುವಾಗಲೇ ಸಂಕಲ್ಪವನ್ನು ಮಾಡಬೇಕು. ಅಪೇಕ್ಷೆ ಇರಬೇಕು. ವಾಗ್ರಿಂದ್ರಿಯವನ್ನು ಪ್ರೇರಣೆ ಮಾಡಬೇಕು. ವಾಕ್ಕು ನಾಮದಲ್ಲಿ ಪ್ರೇರಣೆಯಾಗುವುದು. ನಾಮದಲ್ಲಿ ಮಂತ್ರವು ಏಕವಾಗುತ್ತದೆ. ಮಂತ್ರಗಳಲ್ಲಿ ಕರ್ಮವು ಏಕವಾಗುತ್ತದೆ. ಆನಾಮಾದಿ ಸರ್ವಕ್ಕೂ ಚಿತ್ತವೇ ಕೊಟ್ಟ ಕೊನೆಯ ಆಶ್ರಯ. ಚಿತ್ತವೇ ಅವುಗಳ ಆತ್ಮ. ಅವೆಲ್ಲವೂ ಚಿತ್ತದಲ್ಲಿ ಪ್ರತಿಷ್ಠಿತವಾಗಿವೆ. ಆದ್ದರಿಂದಲೇ ಹೆಚ್ಚಾಗಿ ತಿಳಿದುಕೊಂಡವರು ಸಹ ಚಿತ್ತವಿಲ್ಲದಿದ್ದಾಗ ಏಕಾಗ್ರತೆ ಇಲ್ಲದವನಾದಾಗ, ಆತ ತಿಳಿದುಕೊಂಡಿರುವವನೆಂದು ಯಾರೂ ಹೇಳಲಾರರು. ಈತ ತಿಳಿದುಕೊಂಡವನಾಗಿ ವಿದ್ವಾಂಸನಾಗಿರುವಾಗ ಈ ವಿಧವಾಗಿ ಅಜ್ಞನಾಗಿ, ಅಚಿತ್ತನಾಗಿ ಇರಲಾರನೆನ್ನುವರು. ಸ್ವಲ್ಪಮಟ್ಟಿಗೆ ತಿಳಿದವನಾಗಿದ್ದರೂ, ಜನರು ಆತನ ಮಾತುಗಳನ್ನು ಕೇಳುವುದಕ್ಕೆ ಇಷ್ಟಪಡುವರು. ಆದ್ದರಿಂದ ಚಿತ್ತವೇ ಎಲ್ಲದರ ಕೊನೆಯ ಆಶ್ರಯ. ಚಿತ್ತವೇಆತ್ಮ. ಚಿತ್ತವೇ ಆಧಾರ. ಚಿತ್ರವನ್ನು ಪರಬ್ರಹ್ಮವಾಗಿ ಉಪಾಸಿಸು.

**ಮಂ.ಶ್ಲೋ.॥ ಸ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇ ಚಿತ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿದ್ಧ್ಯತಿ ಯಾವಚ್ಚಿತ್ತಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಶ್ಚಿತ್ತಾದ್ಭೂಯ ಇತಿ ಚಿತ್ತಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (3)**

ತಾ : ಈ ರೀತಿಯಾಗಿ ಚಿತ್ತವನ್ನು ಉಪಾಸಿಸುವವನು ದೃಢಚಿತ್ತನಾಗುವನು. ಈತನು ಸರ್ವಾತ್ಮಕನಾಗಿ ಸರ್ವಲೋಕಗಳಲ್ಲೂ ಪ್ರತಿಷ್ಠಿತನಾಗುವನು. ಬುದ್ಧಿಯನ್ನು ಬ್ರಹ್ಮವೆಂದು ಉಪಾಸಿಸುವ ಈತನು ಸರ್ವಭಾವಗಳಿಗೂ ಸ್ವತಂತ್ರ ನಾಗಿ ಸರ್ವಲೋಕಗಳಲ್ಲೂ ಪ್ರತಿಷ್ಠೆಯುಳ್ಳವನಾಗುತ್ತಾನೆ. ಸ್ವಾಮೀ! ಈ ಚಿತ್ತಕ್ಕಿಂತ ಅಧಿಕವಾದುದು ಮತ್ಯಾವುದಾದರೂ ಇದೆಯೇ? ಎಂದು ಕೇಳಿದಾಗ ಇದೆಯೆಂದು ಹೇಳಲು, ಅದನ್ನು ತಿಳಿಸಿಕೊಡಿರೆಂದು ಕೇಳಿದಾಗ ಸನತ್ಕುಮಾರನು ಹೇಳ-ತೊಡಗಿದ.

## ಸಪ್ತಮ ಪ್ರಪಾಠಕ – ಷಷ್ಠ ಖಂಡ

**ಮಂ.ಶ್ಲೋ.॥ ಧ್ಯಾನಂ ವಾವ ಚಿತ್ತಾದ್ಭೂಯೋ ಧ್ಯಾಯತೀವ ಪೃಥಿವೀ ಧ್ಯಾಯತೀ ವಾನ್ತರಿಕ್ಷಂ ಧ್ಯಾಯ -ತೀವ ದ್ಯೌರ್ಧ್ಯಾಯನ್ತೀವಾಪೋ ಧ್ಯಾಯನ್ತೀವ ಪರ್ವತಾ ಧ್ಯಾಯನ್ತೀವ ದೇವಮನುಷ್ಯಾ-ಸ್ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವನ್ತಿ ಧ್ಯಾನಾಪಾದಾಂಶಾ ಇವೈವ ತೇ ಭವಂತ್ಯಥ ಯೇಽಲ್ಪಾಃ ಕಲಹಿನಃ ಪಿಶುನಾ ಉಪವಾದಿನಸ್ತೇಽಥ ಯೇ ಪ್ರಭವೋ ಧ್ಯಾನಾಪಾದಾಂಶ ಇವೈವ ತೇ ಭವಂತಿ ಧ್ಯಾನಮುಪಾಸ್ಸ್ವೇತಿ (1) ಸಯೋ ಧ್ಯಾನಂ**

**ಬ್ರಹ್ಮೇತ್ಯುಪಾಸ್ತೇ ಯಾವದ್ಧ್ಯಾನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇऽಸ್ತಿ ಭಗವೋಧ್ಯಾನದ್ಭೂಯ ಇತಿ ಧ್ಯಾನಾದ್ವಾವ ಭೂಯೋ -ಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)**

ತಾ: ಚಿತ್ತ ಭೂಮಿಕೆಗಿಂತ ಧ್ಯಾನ ಸಿದ್ಧಿ ದೊಡ್ಡದು. ಅಂತರಿಕ್ಷ, ದ್ಯುಲೋಕ, ನೀರು, ಬೆಟ್ಟ, ದೇವತೆಗಳು ಮಾನವರು ಈ ಸರ್ವಸ್ವವೂ ಧ್ಯಾನ ಮಾಡುತ್ತಿರುವಂತೆಯೇ ಗೋಚರಿಸುತ್ತದೆ. ಆದ್ದರಿಂದ ಧ್ಯಾನ ಸಿದ್ಧಿಯಿಂದಲೇ ಮಾನವರು ಔನ್ನತ್ಯವನ್ನು (ಉನ್ನತಿಯನ್ನು) ಹೊಂದುತ್ತಿದ್ದಾರೆ. ಧ್ಯಾನವನ್ನು ಮಾಡದೆ ಇರುವವರು ಕಲಹ ಪ್ರಿಯರಾಗಿ, ಇತರರ ತಪ್ಪುಗಳನ್ನು ಎತ್ತಿ ತೋರಿಸುವವರಾಗಿರುತ್ತಾರೆ. ಪರೋಪಕಾರದಲ್ಲಿ ಅನುರಕ್ತಿಯುಳ್ಳವರು, ತೇಜೋವಂತರು ಧ್ಯಾನದ ಭಾಗ್ಯವನ್ನು ಅನುಭವಿಸುವರು. ಧ್ಯಾನವನ್ನು ಪರಬ್ರಹ್ಮವಾಗಿ ಉಪಾಸಿಸಬೇಕು. (ಫಲವು ಮೇಲ್ಕಂಡಂತೆ ಮಂತ್ರಗಳಲ್ಲಿರುವಂತೆಯೇ ಎಂದು ಗ್ರಹಿಸಬೇಕು. ಹೇ ಭಗವನ್! ಧ್ಯಾನಕ್ಕಿಂತ ದೊಡ್ಡದು ಮತ್ತ್ಯಾವುದಾದರೂ ಇದೆಯೇ? ಎಂದು ನಾರದನು ಪ್ರಶ್ನಿಸಿದಾಗ ಸನತ್ಕುಮಾರನು ಇದೆಯೆಂದು ಹೇಳಿದ. ನಾರದ ಮಹರ್ಷಿಯು ಅದನ್ನು ತಿಳಿಸಿಕೊಡಬೇಕೆಂದು ಸನತ್‌ಕುಮಾರನನ್ನು ಪ್ರಾರ್ಥಿಸಿದ.

## ಸಪ್ತಮ ಪ್ರಪಾಠಕ – ಸಪ್ತಮ ಖಂಡ

ಮಂ.ಶ್ಲೋ.॥ **ವಿಜ್ಞಾನಂ ವಾವ ಧ್ಯಾನಾದ್ಭೂಯೋ ವಿಜ್ಞಾನೇನ ವಾ ಋಗ್ವೇದಂ ವಿಜಾನಾತಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸ ಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋ ವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವಿಞ್ಚ ವಾಯುಞ್ಚಾಕಾಶಂ ಚಾಪಶ್ಚ ತೇಜಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ತೃಣವನಸ್ಪತೀನ್ ಶ್ವಾಪದಾನ್ಯಾಕೀಟ ಪತಙ್ಗ ಪಿಪೀಲಕಂ ಧರ್ಮಂಚಾಧರ್ಮಂ ಚ ಸತ್ಯಂ ಚಾನೃತಂಚ ಸಾಧುವಾಸಾಧು ಚ ಹೃದಯಜ್ಞಞ್ಚಾಹೃದಯಜ್ಞಞ್ಚಾನ್ನಂಚ ರಸಂ ಚೇಮಂ ಚ ಲೋಕಮಮುಂಚ ವಿಜ್ಞಾನೇನೈವ ವಿಜಾನಾತಿ ವಿಜ್ಞಾನಮುಪಾಸ್ಸ್ವೇತಿ (1)**

ತಾ : ಧ್ಯಾನಕ್ಕಿಂತ ವಿಜ್ಞಾನವು ಬಹಳ ಮಹತ್ತುಳ್ಳದ್ದು. ವಿಜ್ಞಾನದಿಂದಲೇ ಋಗ್ಯಜುಸ್ಸಾಮಥರ್ವಣ ವೇದಗಳು, ಪಂಚಮ ವೇದವಾದ ಇತಿಹಾಸ ಪುರಾಣಗಳು. ಹಾಗೂ ವ್ಯಾಕರಣ, ಶ್ರಾದ್ಧಕಲ್ಪ, ಗಣಿತಶಾಸ್ತ್ರ, ಸಿದ್ಧಾಂತ, ವಿಧಿ ಶಾಸ್ತ್ರ, ತರ್ಕ ಶಾಸ್ತ್ರ, ಪಂಚರಾತ್ರ, ಭೂತತಂತ್ರವಿದ್ಯೆ, ಕ್ಷತ್ರವಿದ್ಯೆ, ನಕ್ಷತ್ರವಿದ್ಯೆ, ಸರ್ವದೇವ ಜನವಿದ್ಯೆಗಳು, ಭೂಮಿ, ವಾಯು, ಆಕಾಶ, ಜಲ, ತೇಜಸ್ಸು, ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ತೃಣಗಳೂ, ವನಸ್ಪತಿಗಳು, ಕ್ರಿಮಿಕೀಟಗಳು, ಪತಂಗಗಳು, ಧರ್ಮ, ಅಧರ್ಮ, ಸತ್ಯಾಸತ್ಯಗಳು, ಕೆಟ್ಟದ್ದು ಮತ್ತು ಒಳ್ಳೆಯದು, ಪ್ರಿಯವಾದುದು ಅಪ್ರಿಯವಾದುದು, ಈ ಸರ್ವಸ್ವವು ವಿಜ್ಞಾನದ ವ್ಯಾಪ್ತಿಗೆ ಒಳಪಡುವಂತಹ ವಿಷಯಗಳೇ ಆಗಿವೆ. ಆದ್ದರಿಂದ ವಿಜ್ಞಾನವನ್ನೇ ಬ್ರಹ್ಮವೆಂದು ಉಪಾಸಿಸಬೇಕು.

ಮಂ.ಶ್ಲೋ.॥ ಸ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ ವಿಜ್ಞಾನವತೋ ವೈ ಸಲೋಕಾನ್ ಜ್ಞಾನವತೋಽಭಿಸಿಧ್ಯತಿ ಯಾವದ್ವಿಜ್ಞಾನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ವಿಜ್ಞಾನಂ ಬ್ರಹ್ಯೇತ್ಯಪಾಸ್ತೇಽಸ್ತಿ ಭಗವೋ ವಿಜ್ಞಾನಾದ್ಭೂಯ ಇತಿ ವಿಜ್ಞಾನಾದ್ವಾವ ಭೂಯೋಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)

ತಾ : ವಿಜ್ಞಾನವನ್ನೇ ಬ್ರಹ್ಮವೆಂದು ಉಪಾಸಿಸುವವನು, ವಿಜ್ಞಾನಮಯವಾದ ಲೋಕಗಳನ್ನು ಹೊಂದುತ್ತಾನೆ. ವಿಜ್ಞಾನಕ್ಕೆ ಎಲ್ಲಿಯುವರೆಗೆ ವ್ಯಾಪ್ತಿಯಿರುವುದೋ, ಅಂದರೆ ವಿಜ್ಞಾನವು ಪ್ರವೇಶಿಸುವವರೆಗೂ ಉಪಾಸಕನು ಸ್ವೇಚ್ಛೆಯಾಗಿ ಸಂಚರಿಸುವಂತಾಗುತ್ತಾನೆ. ಆದ್ದರಿಂದ ವಿಜ್ಞಾನವೇ ಸರ್ವಸ್ವವಾಗಿದೆ. ಎನ್ನಲು "ಭಗವಂತಾ! ವಿಜ್ಞಾನಕ್ಕಿಂತ ಮಿಗಿಲಾದುದು ಇದೆಯೇ" ಎಂದು ಕೇಳಲು ಇದೆಯೆಂದು ಹೇಳಿದ ಸನತ್ಕುಮಾರನು ಮಾತನ್ನು ಮುಂದುವರಿಸಿದ.

## ಸಪ್ತಮ ಪ್ರಪಾಠಕ – ಅಷ್ಟಮ ಖಂಡ

ಮಂ.ಶ್ಲೋ.॥ ಬಲಂ ವಾವ ವಿಜ್ಞಾನಾದ್ಭೂಯೋಽಪಿ ಹ ಶತಂ ವಿಜ್ಞಾನವತಾಮೇಕೋ ಬಲವಾನಾ-ಕಂಪಯತೇ ಸ ಯದಾ ಬಲೀ ಭವತ್ಯಥೋತ್ಥಾ ತಾ ಭವತ್ಯುತ್ತಿಷ್ಠನ್ ಪರಿಚರಿತಾ ಭವತಿ ಪರಿಚರನ್ನುಪಸತ್ತಾ ಭವತ್ಯುಪಸೀದನ್ದ್ರಷ್ಟಾ ಭವತಿ ಶ್ರೋತಾ ಭವತಿ, ಮನ್ತಾ ಭವತಿ ಬೋದ್ಧಾ ಭವತಿ, ಕರ್ತಾ ಭವತಿ ವಿಜ್ಞಾತಾ ಭವತಿ ಬಲೇನ ವೈ ಪೃಥಿವೀ ತಿಷ್ಠತಿ ಬಲೇನಾಂತರಿಕ್ಷಂ ಬಲೇನ ದ್ಯೌರ್ಬಲೇನ ಪರ್ವತಾ ಬಲೇನ ದೇವಮನುಷ್ಯಾ ಬಲೇನ ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾ ಕೀಟಕ ಪತಙ್ಗ ಪಿಪೀಲಿಕಂ ಬಲೇನ ಲೋಕಸ್ತಿಷ್ಠತಿ ಬಲಮುಪಾಸ್ಸ್ವೇತಿ (1) ನ ಯೋ ಬಲಂ ಬ್ರಹ್ಮೇತ್ಯುಪಾಸ್ತೇ ಯಾವದ್ಬಲಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಬಲಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಬಲಾದ್ಭೂಯ ಇತಿ ಬಲಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)

ತಾ : ವಿಜ್ಞಾನಕ್ಕಿಂತ ಬಲ ದೊಡ್ಡದು. ಬಲವಿರುವ ವ್ಯಕ್ತಿ ನೂರು ಜನ ಪಂಡಿತರನ್ನು ಒಂದೇ ಸಲಕ್ಕೆ ಭಯಪಡಿಸುವನು. ಮಾನವನು ಬಲವಂತನಾದಲ್ಲಿ ಧೈರ್ಯವಾಗಿ ನಿಲ್ಲುತ್ತಾನೆ. ಧೈರ್ಯವಾಗಿ ನಿಲ್ಲಬಲ್ಲವನು ಸದ್ಗುರು ಸನ್ನಿಧಿಯಲ್ಲಿ ಪರಿಚಯವನ್ನು ಹೊಂದಬಲ್ಲ. ಪರಿಚಯವಿರುವವನು ಸದ್ಗುರು ಸನ್ನಿಧಿಯನ್ನು ಸೇರುವನು. ಸದ್ಗುರುವಿನ ಸನ್ನಿಧಿಯಲ್ಲಿ ಆತ್ಮಜ್ಞಾನ ತತ್ತ್ವವನ್ನು ಅರಿತುಕೊಳ್ಳುವನು. ಚೆನ್ನಾಗಿ ಶ್ರದ್ಧೆಯಿಂದ ಆಲಿಸುವನು. ಯೋಗ್ಯ ಬುದ್ಧಿಯಿಂದ ಸತ್ಕರ್ಮಗಳನ್ನು ಮಾಡುವನು. ವಿಜ್ಞಾನವನ್ನು ಸಂಪಾದಿಸುವನು. ಪೃಥ್ವಿ, ಆಕಾಶ, ದ್ಯುಲೋಕ, ದೇವತೆಗಳು, ಬೆಟ್ಟಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಕ್ಷೀರಗಳು, ವನಸ್ಪತಿಗಳು, ಕ್ರಿಮಿಕೀಟಕಾದಿ ಸರ್ವಪ್ರಾಣಿಗಳು, ಸರ್ವಲೋಕಗಳು, ಬಲದ ಆಧಾರದಿಂದ(ಲೇ) ನಿಂತಿವೆ. ಬಲವನ್ನು ಬ್ರಹ್ಮವಾಗಿ ಉಪಾಸಿಸುವವನು ಅತಿಯಾದ ಬಲವನ್ನು ಹೊಂದಿದವನಾಗುತ್ತಾನೆ. (ಫಲದ ಹಿಂದೆ ಮಂತ್ರಗಳಿರುವಂತೆಯೇ) ಬಲಕ್ಕಿಂತಲೂ ಶ್ರೇಷ್ಠವಾದು-ದೇನಾದರೂ ಇದೆಯೇ? ಎಂದು ನಾರದನು ಕೇಳಲು ಸನತ್ಕುಮಾರನು ಉಂಟು ಎನ್ನುತ್ತಾ ಅದನ್ನು ಕೇಳಲು ಸಿದ್ಧನಾದ ನಾರದನಿಗೆ ಮತ್ತಷ್ಟು ವಿವರಗಳನ್ನು ಹೇಳುತ್ತಾ ಹೋದ.

## ಸಪ್ತಮ ಪ್ರಪಾಠಕ - ನವಮ ಖಂಡ

ಮಂ.ಶ್ಲೋ.॥ ಅನ್ನಂ ವಾವ ಬಲಾದ್ಭೂಯಸ್ತಸ್ಮಾದ್ಯದ್ಯಪಿ ದಶರಾತ್ರೀರ್ನಾಶ್ನೀಯಾದ್ಯದ್ಯುಹ ಜೀವೇ-ದಥವಾऽದ್ರಷ್ಟಾऽಶ್ರೋತಾऽಮನ್ತಾಬೋದ್ಧಾऽಕರ್ತಾऽ ವಿಜ್ಞಾತಾ ಭವತ್ಯಥಾನ್ನಸ್ಯಾಯೈ ದ್ರಷ್ಟ ಭವತಿ ಶ್ರೋತಾ ಭವತಿ ಮನ್ತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತ್ಯನ್ನ-ಮುಪಾಸ್ಸ್ವೇತಿ (1) ಸ ಯೋऽನ್ನಂ ಬ್ರಹ್ಮೇತ್ಯುಪಾಸ್ತೇऽನ್ನವತೋऽ ವೈ ಸ ಲೋಕಾನ್ ಪಾನವತೋಽಭಿಸಿಧ್ಯತಿ ಯಾವದನ್ನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋऽನ್ನಂ ಬ್ರಹ್ಮೇತ್ಯುಪಾಸ್ತೇऽಸ್ತಿ ಭಗವೋऽನ್ನಾದ್ಭೂಯ ಇತ್ಯನ್ನಾದ್ವಾವ ಭೂಯೋಽಸ್ತೀತಿ ತಸ್ಮೈ ಭಗವಾನ್ ಬ್ರವೀತ್ವಿತಿ (2)

ತಾ : ಅನ್ನವು ಬಲಕ್ಕಿಂತ ಹೆಚ್ಚಿನದು. ಆದ್ದರಿಂದಲೇ ಹತ್ತು ದಿನ ಅನ್ನವನ್ನು ಬಿಟ್ಟಲ್ಲಿ, ಅಂತಹವರು ಬಲಹೀನರಾಗಿ ಮರಣಿಸುವರು. ಇಲ್ಲವೆ ಬದುಕಿದರೂ ನೋಡುವುದರಲ್ಲಿ, ಕೇಳುವುದರಲ್ಲಿ, ಆಲೋಚಿಸುವುದರಲ್ಲಿ, ಬುದ್ಧಿಯನ್ನು ಉಪಯೋಗಿಸುವುದರಲ್ಲಿ, ಕರ್ಮ ಮಾಡುವುದರಲ್ಲಿ, ಅಶಕ್ತ-ನಾಗುವನು. ಅನ್ನವನ್ನು ಭುಜಿಸಿದಲ್ಲಿ ಅಂತಹವನು ಕೇಳಬಲ್ಲ, ನೋಡಬಲ್ಲ, ಆಲೋಚಿಸಬಲ್ಲ. ಬುದ್ಧಿಯನ್ನುಪಯೋಗಿಸಿ ತೀರ್ಮಾನ ಕೈಗೊಳ್ಳಬಲ್ಲ, ಕರ್ಮವನ್ನು ಮಾಡಬಲ್ಲ, ವಿಜ್ಞಾನವನ್ನು ಹೊಂದಿದವನಾಗುವನು. ಆದ್ದರಿಂದ ಅನ್ನವನ್ನು ಪರಬ್ರಹ್ಮವಾಗಿ ಉಪಾಸಿಸು. ಅನ್ನವನ್ನು ಬ್ರಹ್ಮವೆಂದು ಉಪಾಸಿಸುವವನಿಗೆ ಅನ್ನೋದಕಗಳು ತೃಪ್ತಿಯಾಗಿ ಲಭಿಸುವವು. ಅನ್ನವು ಸರ್ವಕ್ಕೂ ಆಧಾರವಾಗಿದೆ. ಅನ್ನವನ್ನು ಹೊಂದಿದವನು ಎಲ್ಲ ವಿಧಗಳಲ್ಲೂ ಭಾಗ್ಯವಂತ. ಅನ್ನಕಿಂತ ಮಿಗಿಲಾದುದು ಮತ್ತೇನಾದರೂ ಇದೆಯೇ? ಎಂದು ನಾರದನು ಕೇಳಲು ಇದೆಯೆಂದು ಹೇಳಿದಾಗ, ಅದನ್ನು ನನಗೆ ಹೇಳಿ ಎನ್ನಲು, ಸನತ್ಕುಮಾರನು ಹೇಳತೊಡಗಿದ.

## ಸಪ್ತಮ ಪ್ರಪಾಠಕ - ದಶಮ ಖಂಡ

ಮಂ.ಶ್ಲೋ.॥ ಆಪೋ ವಾ ಅನ್ನಾದ್ಭೂಯಸ್ಯಸ್ತಸ್ಮಾದ್ಯದಾ ಸುವೃಷ್ಟಿರ್ನ ಭವತಿ ವ್ಯಾಧಿಯನ್ತೇ ಪ್ರಾಣಾ ಅನ್ನಂ ಕನೀಯೋ ಭವಿಷ್ಯತೀತ್ಯಥ ಯದಾ ಸುವೃಷ್ಟಿರ್ಭವತ್ಯಾಂ ದಿನಃ ಪ್ರಾಣಾ ಭವ-ಸ್ತ್ಯನ್ನಂ ಬಹುಭವಿಷ್ಯತೀತ್ಯಾಪ ಏವೇಮಾ ಮೂರ್ತಾಯೇಯಂ ಪೃಥಿವೀ ಯದಂತರಿಕ್ಷಂ ಯದ್ದ್ಯೌರ್ಯತ್ವರ್ಯತಾ ಯದ್ದೇವಮನುಷ್ಯಾ ಯತ್ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾ ಕೀಟ ಪತಂಗ ಪಿಪೀಲಿಕಮಾಪ ಏವೇಮಾ ಮೂರ್ತಾ ಆಪ ಉಪಾಸ್ಸ್ವೇತಿ (1)

ತಾ : ಅನ್ನಕ್ಕಿಂತ ಜಲವು ಶ್ರೇಷ್ಠವಾದುದು. ಆದ್ದರಿಂದಲೇ ಮಳೆಯು ಕಡಿಮೆಯಾದಾಗ ಅನ್ನವು ಸರಿಯಾಗಿ ಲಭಿಸದೆ, ಜೀವಿಗಳು ದುಃಖವನ್ನು ಹೊಂದುತ್ತಿದ್ದಾರೆ. ವರ್ಷಪಾತವು ಸಮೃದ್ಧಿ-ಯಾದಾಗ ಅನ್ನವು ಸಮೃದ್ಧಿಯಾಗಿ ಲಭಿಸುವುದು. ಜೀವಿಗಳು ಆನಂದಿಸುತ್ತಿದ್ದಾರೆ. ರೂಪವಿರುವ ಎಲ್ಲ ಪದಾರ್ಥಗಳಲ್ಲೂ ಜಲವೇ ತುಂಬಿರುತ್ತದೆ. ಪದಾರ್ಥಗಳೆಲ್ಲದಕ್ಕೂ ಜಲವೇ ಆಧಾರ. ಈ ಭೂಮಿ, ಅಂತರಿಕ್ಷ, ದ್ಯುಲೋಕ, ಬೆಟ್ಟ, ದೇವತೆಗಳು, ಮಾನವರು, ಪಕ್ಷಿಗಳು ಕ್ರಿಮಿಕೀಟ ಮುಂತಾದ ಸಮಸ್ತವು ಜಲಮಯವಾಗಿವೆ. ಜಲವನ್ನು ಬ್ರಹ್ಮವಾಗಿ ಉಪಾಸಿಸಬೇಕು.

ಮಂ.ಶ್ಲೋ.॥ ಸಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ಕಾಮಾಂ ಸ್ತೃಪ್ತಿಮಾನ್ ಭವತಿ ಯಾವದಪಾಂ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋಽಪೋ ಬ್ರಹ್ಮೇತ್ಯುಪಾ-ಸ್ತೇಽಸ್ತಿ ಭಗವೋಽದ್ಭ್ಯೋ ಭೂಯ ಇತ್ಯದ್ಭ್ಯೋವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)

ತಾ: ಜಲವನ್ನು ಬ್ರಹ್ಮವೆಂದು ಉಪಾಸಿಸುವವರಿಗೆ ಸರ್ವವಾಂಛಿತಗಳು ಲಭಿಸುವುವು. ಪೂರ್ಣ ತೃಪ್ತಿಯುಂಟಾಗುವುದು. ಉಳಿದುದು ಮೇಲಿನ ಮಂತ್ರದಂತೆಯೇ. ಈ ಜಲಕ್ಕಿಂತ ಹಿರಿದಾದುದು ಮತ್ತೇನಾದರೂ ಇದೆಯೇ? ಎಂದು ಕೇಳಲು ಸನತ್ಕುಮಾರನು ಇದೆಯೆಂದು ಹೇಳಿದಾಗ ನಾರದನು ನನಗೆ ಹೇಳಿ ಎಂದ.

## ಸಪ್ತಮ ಪ್ರಪಾಠಕ – ಏಕಾದಶ ಖಂಡ

ಮಂ.ಶ್ಲೋ.॥ ತೇಜೋ ವಾ ಅದ್ಭ್ಯೋ ಭೂಯಸ್ತದ್ವಾ ಏತದ್ವಾಯುಮಾಗೃಹ್ಯಾಕಾಶಮಭಿತಪತಿ ತದಾಹು-ರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಽಥಾಪಃ ಸೃಜತೇ ತದೇತದೂರ್ಧ್ವಾಭಿಶ್ಚ ತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರನ್ತಿ ತಸ್ಮಾದಾಹುರ್ವಿದ್ಯೋತತೇ-ಸ್ತನಯತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಽಥಾಪಃ ಸೃಜತೇ ತೇಜ ಉಪಾಸ್ಸ್ವೇತಿ (1) ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ ತೇಜಸ್ವೀ ವೈ ನ ತೇಜಸ್ವತೋ ಲೋಕಾನ್ ಭಾಸ್ವತೋಽಪಹತ ತಮಸ್ಕಾನಭಿಸಿಧ್ಯತಿ ಯಾವತ್ತೇಜಸೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಸ್ತೇಜಸೋ ಭೂಯ ಇತಿ ತೇಜಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)

ತಾ : ತೇಜಸ್ಸು, ಜಲಕ್ಕಿಂತ ದೊಡ್ಡದು. ಆ ತೇಜಸ್ಸು ವಾಯುವನ್ನು ಸ್ವೀಕರಿಸಿ, ನಿಶ್ಚಲವಾಗಿ ಮಾಡಿ ಆಕಾಶದಲ್ಲಿ ವ್ಯಾಪಿಸಿ ಶಾಖವನ್ನುಂಟು ಮಾಡಿದಾಗ ಸೆಕೆಯಾಗುತ್ತದೆ. ಬಿಸಿ ಹೆಚ್ಚಾದಾಗ ಮಳೆ ಬರುವುದೆಂದು ಜನರು ಹೇಳುತ್ತಾರೆ. ತೇಜಸ್ಸು ಮೊದಲು ದೃಗ್ಗೋಚರವಾಗಿ ಜಲವನ್ನು ಹುಟ್ಟಿಸುವುದು. ಊರ್ಧ್ವಗಾಮಿ ಮತ್ತು ಊರ್ಧ್ವದಲ್ಲಿ ತಿರ್ಯಗಾಮಿಯಾಗಿ ಮಿಂಚಿನೊಂದಿಗೆ ಸೇರಿ ಗಡಗಡವೆಂದು ಸುತ್ತುಸುತ್ತುವುದು. ಅದರಿಂದಲೇ ಮಿಂಚುವುದು, ಗುಡುಗುವುದು. ಮಳೆ ಬರುತ್ತದೆ-ಯೆಂದು ಹೇಳುತ್ತಾರೆ. ಹೀಗೆ ತೇಜಸ್ಸೇ ಮೊದಲು ಕಾಣಿಸಿ ಜಲವನ್ನು ಉಂಟುಮಾಡುತ್ತದೆ. ಆದ್ದರಿಂದ ತೇಜಸ್ಸನ್ನು ಬ್ರಹ್ಮವೆಂದು ಉಪಾಸಿಸು. ತೇಜಸ್ಸನ್ನು ಉಪಾಸಿಸುವವನು ತೇಜೋವಂತನಾಗಿ ತೇಜಸ್ಸಿ-ನಿಂದ ಪ್ರಕಾಶಿಸುತ್ತಾ ಲೋಕಗಳಿಗೆ ಕಾಂತಿ ನೀಡುವಂತಹನಾಗಿ, ತಮಸ್ಸು ಇಲ್ಲದ ಲೋಕಗಳಿಗೆ ಹೋಗುವನು. (ಉಳಿದವು ಹಿಂದಿನ ಮಂತ್ರಗಳಂತೆಯೇ)

## ಸಪ್ತಮ ಪ್ರಪಾಠಕ – ದ್ವಾದಶ ಖಂಡ

ಮಂ.ಶ್ಲೋ.॥ ಆಕಾಶೋ ವಾವ ತೇಜಸಾ ಭೂಯಾನಾಕಾಶೇ ವೈ ಸೂರ್ಯಾಚನ್ದ್ರಮಸಾ ವುಭೌ ವಿದ್ಯುನ್ನಕ್ಷತ್ರಾ-ಣ್ಯಗ್ನಿರಾಕಾಶೇನಾಹ್ವಯತ್ಯಾಕಾಶೇನ ಶೃಣೋತ್ಯಾಕಾಶೇನ ಪ್ರತಿಶೃಣೋತ್ಯಾಕಾಶೇ

**ರಮತ ಆಕಾಶೇ ನ ರಮತ ಆಕಾಶೇ ಜಾಯತ ಆಕಾಶಮಭಿಜಾಯತ ಆಕಾಶಮುಪಾಸ್ಸ್ವೇತಿ (1) ಸ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇ ಆಕಾಶವತೋ ವೈ ಸ ಲೋಕಾನ್ ಪ್ರಕಾಶವತೋಽಸಂಬಾಧಾನುರುಗಾಯವತೋಽಭಿಸಿಧ್ಯತಿ ಯಾವದಾಕಾಶಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಕಾಶಾದ್ಭೂಯ ಇತ್ಯಾಕಾಶಾದ್ವಾವಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)**

ತಾ : ಆಕಾಶವು ತೇಜಸ್ಸಿಗಿಂತಲೂ ಅತಿ ಹೆಚ್ಚಿನದು. ಆಕಾಶ ಮಧ್ಯದಲ್ಲಿಯೇ ಭಾನು, ಚಂದ್ರ, ವಿದ್ಯುತ್, ನಕ್ಷತ್ರಗಳು, ಅಗ್ನಿ ಮೊದಲಾದವುಗಳೆಲ್ಲವೂ ಇವೆ. ಮಾನವರು ಆಕಾಶದ ಸಹಕಾರದಿಂದಲೇ ಮಾತನಾಡುತ್ತಾರೆ. ಕೇಳಬಲ್ಲವರಾಗಿದ್ದಾರೆ. ಆಕಾಶದಿಂದಲೇ ಮಾತುಗಳನ್ನು ಮತ್ತೆ ಕೇಳಬಲ್ಲವರಾಗಿದ್ದಾರೆ. ಮನುಷ್ಯ ಆಕಾಶದಲ್ಲೇ ಸರ್ವಕಾರ್ಯಗಳನ್ನು ಮಾಡುವನು. ಹಾಗೂ ಮಾಡದೆಯೂ ಇರುವನು. ಆದ್ದರಿಂದ ಆಕಾಶವನ್ನು ಬ್ರಹ್ಮವಾಗಿ ಉಪಾಸಿಸು. ಆಕಾಶವನ್ನು ಪರಬ್ರಹ್ಮವೆಂದು ಉಪಾಸಿಸುವವನು ಆಕಾಶವಂತನಾಗಿ ಆಕಾಶದಲ್ಲಿ ಪ್ರಕಾಶಿಸುವನು. ಆನಂದಮಯವಾದ ವಿಶಾಲ ಲೋಕಗಳನ್ನು ಸೇರುತ್ತಾನೆ (ಉಳಿದ ಅರ್ಥಗಳು ಹಿಂದಿನ ಮಂತ್ರಗಳಂತೆಯೇ ಇರುವುವು)

## ಸಪ್ತಮ ಪ್ರಪಾಠಕ – ತ್ರಯೋದಶ ಖಂಡ

**ಮಂ.ಶ್ಲೋ.॥ ಸ್ಮರೋ ವಾವಾಕಾಶದ್ಭೂಯಸ್ತಸ್ಮಾದ್ಯದ್ಯಪಿ ಬಹವ ಆಸೀರನ್ನಸ್ಮರನ್ತೋ ನೈವ ತೇ ಕಂಚನ ಶೃಣುಯುರ್ನಮನ್ವೀರನ್ನ ವಿಜಾನೀರನ್ ಯದಾ ವಾವ ತೇ ಸ್ಮರೇಯುರಥ ಶೃಣುಯುರಥ ಮನ್ವೀರನ್ನಥ ವಿಜಾನೀರನ್ ಸ್ಮರೇಣ ವೈ ಪುತ್ರಾನ್ವಿಜಾನಾತಿ ಸ್ಮರೇಣ ಪಶೂನ್ ಸ್ಮರಮುಪಾಸ್ಸ್ವೇತಿ (1) ಸ ಯಸ್ಸ್ಮರಂ ಬ್ರಹ್ಮೇತ್ಯುಪಾಸ್ತೇ ಯಾವತ್ಸ್ಮರಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸ್ಮರಾದ್ಭೂಯ ಇತಿ ಸ್ಮರಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)**

ತಾ : ಅಂತಃಕರಣ ಧರ್ಮವಾದ ಜ್ಞಾಪಕಶಕ್ತಿ ಆಕಾಶಕ್ಕಿಂತ ಶ್ರೇಷ್ಠ. ಆದ್ದರಿಂದಲೇ ಬಹುಜನರಿದ್ದರೂ ಸ್ಮರಣೆ ಮಾಡದಿದ್ದರೆ, ಅವರು ಏನನ್ನೂ ಕೇಳಲಾರರು. ಆಲೋಚಿಸಲಾರರು. ತಿಳಿದುಕೊಳ್ಳಲಾರರು. ಅವರು ಸ್ಮರಿಸುವುದಕ್ಕಾರಂಭಿಸಿದಲ್ಲಿ ಮತ್ತೆ ಕೇಳಬಲ್ಲರು. ತಿಳಿದುಕೊಳ್ಳಬಲ್ಲರು. ಸ್ಮರಣೆಯಿಂದಲೇ ಜನಕನು ತನ್ನ ಪುತ್ರನನ್ನು ಗುರುತಿಸುವನು. ಸ್ಮರಣ ಶಕ್ತಿಯನ್ನು ಪರಬ್ರಹ್ಮವಾಗಿ ಉಪಾಸಿಸು. ಸ್ಮರಣಶಕ್ತಿ ಬ್ರಹ್ಮವೆಂದು ಉಪಾಸಿಸುವವನು ಮಹಾಫಲವನ್ನು ಹೊಂದುವನು. (ಉಳಿದ ಅರ್ಥವೆಲ್ಲವೂ ಮೇಲಿನ ಮಂತ್ರಗಳಂತೆಯೇ ಇವೆ.)

## ಸಪ್ತಮ ಪ್ರಪಾಠಕ – ಚತುರ್ದಶ ಖಂಡ

**ಮಂ.ಶ್ಲೋ.॥ ಆಶಾ ವಾವ ಸ್ಮರಾದ್ಭೂಯಸ್ಯಾಶೇದ್ಧೋ ವೈ ಸ್ಮರೋ ಮನ್ತ್ರಾನಧೀತೇ ಕರ್ಮಾಣಿ ಕುರುತೇ ಪುತ್ರಾಂಶ್ಚ ಪಶೂಂಶ್ಚೇಚ್ಛತ ಇಮಂ ಚ ಲೋಕಮಮುಂಚೇಚ್ಛತ ಆಶಾಮುಪಾಸ್ಸ್ವೇತಿ (1)**

ಸ ಯ ಆಶಾಂ ಬ್ರಹ್ಮೇತ್ಯುಪಾಸ್ತೇ ಆಶಯಾಸ್ಯ ಸರ್ವೇ ಕಾಮಾಸ್ಸಮೃಧ್ಯಂತ್ಯಮೋಘಾ ಹಾ ಸ್ಯಾಶಿಷೋ ಭವನ್ತಿ ಯಾವದಾಶಾಯಾ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯ ಆಶಾಂ ಬ್ರಹ್ಮೇತ್ಯುಪಾಸ್ತೇऽಸ್ತಿ ಭಗವ ಆಶಾಯಾ ಭೂಯ ಇತ್ಯಾಶಾಯಾ ವಾವ ಭೂಯೋऽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ (2)

ತಾ : ಆಸೆಯು ಸ್ಮರಣಶಕ್ತಿಗಿಂತ ದೊಡ್ಡದು. ಆಸೆಯಿಂದ ಪ್ರೇರೇಪಿಸಲ್ಪಟ್ಟು ಸ್ಮರಣಶಕ್ತಿಯೇ, ಮಂತ್ರಗಳನ್ನು ಅಭ್ಯಾಸ ಮಾಡುತ್ತದೆ. ಕರ್ಮಗಳನ್ನು ಕೂಡಾ ಮಾಡುವುದು. ಸ್ಮರಣಶಕ್ತಿಯಿಂದ ಪಶುಗಳನ್ನು, ಸಂತತಿಯನ್ನು ಇಹಪರಲೋಕಗಳನ್ನು ವಾಂಛಿಸುವನು. ಆಸೆಯನ್ನು ಪರಬ್ರಹ್ಮವೆಂದು ಉಪಾಸಿಸು. ಆಶೆಯನ್ನು ಪರಬ್ರಹ್ಮವೆಂದು ಉಪಾಸಿಸುವವನು ಸಮಸ್ತ ವಾಂಛಿತಾರ್ಥಗಳನ್ನು ಪೂರ್ಣವಾಗಿ ಹೊಂದುವನು, ಆತನ ಪ್ರಾರ್ಥನೆಗಳೆಲ್ಲವೂ ಫಲಿಸುವುದು. ಆಸೆಯನ್ನು ಪೂರ್ಣವಾಗಿ ಹೊಂದುವನು, ಆತನ ಪ್ರಾರ್ಥನೆಗಳೆಲ್ಲವೂ ಫಲಿಸುವುದು. ಆಶೆಯನ್ನು ಪರಬ್ರಹ್ಮವಾಗಿ ಉಪಾಸಿಸು (ಉಳಿದೆಲ್ಲ ಅರ್ಥಗಳು ಪೂರ್ವ ಮಂತ್ರಗಳಲ್ಲಿದ್ದಂತೆಯೇ ಇದೆ. (ಅನ್ವಯವಾಗುತ್ತದೆ.)

## ಸಪ್ತಮ ಪ್ರಪಾಠಕ – ಪಞ್ಚದಶ ಖಂಡ

ಮಂ.ಶ್ಲೋ.॥ ಪ್ರಾಣೋ ವಾ ಆಶಾಯಾ ಭೂಯಾನ್ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಂ ಸಮರ್ಪಿತಂ ಪ್ರಾಣಃ ಪ್ರಾಣೇನ ಯಾತಿ ಪ್ರಾಣಃ ಪ್ರಾಣಂ ದದಾತಿ ಪ್ರಾಣೋ ಹ ಪಿತಾ, ಪ್ರಾಣೋ ಮಾತಾ, ಪ್ರಾಣೋ ಭ್ರಾತಾ, ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ (1) ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಚಾರ್ಯಂ ವಾ ಬ್ರಾಹ್ಮಣಂ ವಾ ಕಿಂಚಿತ್ ಭೃಶಮಿವ ಪ್ರತ್ಯಾಹ ಧಿಕ್ತ್ವಾಸ್ತ್ವಿತ್ಯೇವೈನಮಹುಃ ಪಿತೃಹಾ ವೈ ತ್ವಮಸಿ ಮಾತೃಹಾ ವೈ ತ್ವಮಸಿ ಭ್ರಾತೃಹಾ ವೈ ತ್ವಮಸಿ ಸ್ವಸೃಹಾ ವೈ ತ್ವಮಸ್ಯಾ ಭಾರ್ಯಹಾ ವೈ ತ್ವಮಸಿ ಬ್ರಾಹ್ಮಣಹಾ ವೈ ತ್ವಮಸೀತಿ (2)

ತಾ: ಪ್ರಾಣಶಕ್ತಿ ಆಶೆಗಿಂತ ಕೂಡಾ ದೊಡ್ಡದು. ಚಕ್ರದ ನಾಭಿಯಲ್ಲಿ ಅದರ ಅರೆಗಳು ಬಿಗಿದುಕೊಂಡಿರುವಂತೆ ಈ ಪ್ರಾಣದಲ್ಲಿ ಸಮಸ್ತವೂ ಬಂಧಿಸಲ್ಪಟ್ಟಿದೆ. ಸರ್ವಸಮರ್ಥವಾಗಿದೆ. ಪ್ರಾಣವು, ಪ್ರಾಣಶಕ್ತಿಯಿಂದಲೇ ಕೆಲಸ ಮಾಡುತ್ತಿದೆ. ಪ್ರಾಣವೇ ಪ್ರಾಣಕ್ಕೆ ಪ್ರಾಣವನ್ನು ನೀಡುತ್ತದೆ. ಪ್ರಾಣವೇ ತಂದೆ, ತಾಯಿ, ಸೋದರ, ಸೋದರಿ, ಆಚಾರ್ಯ, ಬ್ರಾಹ್ಮಣ ಯಾರಾದರೂ ತಂದೆ, ತಾಯಿ, ಅಣ್ಣ, ಅಕ್ಕ, ಆಚಾರ್ಯ, ಬ್ರಾಹ್ಮಣ, ಎನ್ನುವ ಇವರೊಂದಿಗೆ ಅಯೋಗ್ಯವಾಗಿ ಬಾಧೆಯನ್ನುಂಟು ಮಾಡುವ ಹಾಗೆ ಮಾತನಾಡಿದರೆ ನಿನ್ನನ್ನು ದೂಷಿಸುವರು. ನೀನು ಪಿತೃ, ಮಾತೃ, ಭ್ರಾತೃ, ಸ್ವಸೃ ಘಾತಕನಾಗುವೆ. ಆಚಾರ್ಯ ಘಾತಕನಾಗುವೆ. ಬ್ರಾಹ್ಮಣ ಘಾತಕನಾಗುವೆ ಎಂದು ಹೇಳುವರು.

ಮಂ.ಶ್ಲೋ.॥ ಅಥ ಯದ್ಯಪ್ಯೇನಾನುತ್ಕ್ರಾನ್ತ ಪ್ರಾಣಾನ್ ಶೂಲೇನ ಸಮಾಸಂ ವ್ಯತಿಸಂದ ಹೇನ್ನೈವೈನಂ ಬ್ರೂಯುಃ ಪಿತೃಹಾಸೀತಿ ನ ಮಾತೃಹಾಸೀತಿ ನ ಭ್ರಾತೃಹಾಸೀತಿ ನ ಸ್ವಸೃಹಾಸೀತಿ ನಾಸ-ಚಾರ್ಯಹಾಸೀತಿ ನ ಬ್ರಾಹ್ಮಣಹಾಸೀತಿ (3) ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ ಸ ವಾ

**ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನತಿವಾದೀ ಭವತಿ ತಂಚೇದ್ಬ್ರೂಯು-ರತಿವಾದ್ಯಸೀತ್ಯತಿವಾದ್ಯಸ್ಮೀತಿ ಬ್ರೂಯಾನ್ನಾಪಹ್ನುವೀತ (4)**

ತಾ : ಅವರ ಪ್ರಾಣಗಳು ಹೋದನಂತರ ಶೂಲದಿಂದ ತಿವಿದು ಎಲ್ಲವನ್ನೂ ಒಂದಾಗಿ ಮಾಡಿ (ಅಥವಾ ಒಂದೊಂದು ಅವಯವವನ್ನು ಸುಟ್ಟಾಗಲು) ನೀನು ಪಿತೃಘಾತಕನು. ಮಾತೃಘಾತುಕ-ನಾಗುತ್ತೀ. ಭ್ರಾತೃಘಾತಕನಾಗುವೆ. ಸ್ವಸ್ರ ಘಾತಕ ಹಾಗೂ ಆಚಾರ್ಯ ಘಾತುಕನಾಗಿದ್ದೀಯೆ. ಬ್ರಾಹ್ಮಣ ಘಾತುಕನಾಗಿದ್ದೀಯೆ ಎಂದು ಯಾರೂ ಹೇಳುವುದಿಲ್ಲ. ಸಾರಾಂಶವೇನೆಂದರೆ ಪ್ರಾಣ ಹೋದ ಮೇಲೆ ತಂದೆ ತಾಯಿ ಮುಂತಾದವರ ದಹನಕ್ರಿಯಾದಿ ಕಾರ್ಯಗಳನ್ನು ಮಾಡಿದರೆ ಆ ಕಾರ್ಯಗಳು ಪಿತೃಹತ್ಯಾದಿ ಪಾಪಕಾರ್ಯಗಳಾಗುವುದಿಲ್ಲ. ಏಕೆಂದರೆ, ಪ್ರಾಣವು ಆಗ ಇಲ್ಲವಾದುದರಿಂದ ಅಂದರೆ ಪ್ರಾಣವೇ ಸರ್ವಾಧಾರವಾದುದಾಗಿದೆ. ತಂದೆ, ತಾಯಿ ಮುಂತಾದ ಈ ಸರ್ವವೂ ಪ್ರಾಣವೇ ಆಗಿದೆ. ಈ ಪ್ರಾಣವೇ ಈ ಸಮಸ್ತವನ್ನು ನೋಡುವಂತಹವನು, ಆಲೋಚಿಸುವವನು, ಅರಿತು ಕೊಳ್ಳುವಂತಹವನು ಅತಿವಾದಿಯಾಗುವನು, ಅಂದರೆ ನಾಮಾದಿಗಳಿಗೆ, ಅತೀತವಾಗಿರುವ ಪ್ರಾಣಶಕ್ತಿಯನ್ನು ಕುರಿತು ಹೇಳಬಲ್ಲವನಾಗುವನು. ನೀನು ಅಧಿಕ ಪ್ರಸಂಗಿಯೆಂದು ಇತರರು ಹೇಳಿದಾಗ ಆಕ್ಷೇಪ ಮಾಡಕೂಡದು. (ಈ ಚರಾಚರ ಜಗತ್ತೆಲ್ಲವೂ ಪ್ರಾಣಮಯವು. ಅತ್ಯಂತ ಅಮೂಲ್ಯವಾದುದು, ಎಲ್ಲದಕ್ಕಿಂತ ಹೆಚ್ಚಿನದು ಪ್ರಾಣವೇ)

## ಸಪ್ತಮ ಪ್ರಪಾಠಕ - ಷೋಡಶ ಖಂಡ

**ಮಂ.ಶ್ಲೋ.॥ ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ ಸೋಽಹಂ ಭಗವಸ್ಸತ್ಯೇಯ ನಾತಿವದಾನೀತಿ ಸತ್ಯಂತ್ವೇವ ವಿಜಿಜ್ಞಾಸಿತವ್ಯಮಿತಿ ಸತ್ಯಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಸತ್ಯಜ್ಞಾನಗಳನ್ನು ಅಧಿಕವಾಗಿ ಹೇಳುವವನು ಯಥಾರ್ಥವಾಗಿ ಅತಿವಾದಿ ಎಂದು ಸನತ್ಕುಮಾರನು ಹೇಳಿದ. ಭಗವಂತ ನಾನು ಸತ್ಯಜ್ಞಾನಗಳೊಂದಿಗೆ, ಅಧಿಕ ಪ್ರಸಂಗಗಳನ್ನು ಮಾಡುತ್ತಿರುವೆ. ಎಂದು ತನ್ನ ವಾಂಛೆಯನ್ನು ನಾರದನು ಹೇಳಿದ. ಸನತ್ಕುಮಾರನು:- "ನಾರದಾ! ಸತ್ಯವನ್ನು ಹೇಳುವುದಕ್ಕೆ ಅಭಿಲಾಷೆಯನ್ನು ತೋರಿಸು ಎಂದನು. ನಾರದ:- ಭಗವನ್! ನಾನು ಸತ್ಯಾನ್ವೇಷಣೆಗಾಗಿ ಮಾತ್ರವೇ ಇಷ್ಟಪಡುವೆನು. ಸತ್ಯಾನ್ವೇಷಣೆ ಅಮೂಲ್ಯವಾದುದು"

## ಸಪ್ತಮ ಪ್ರಪಾಠಕ - ಸಪ್ತದಶ ಖಂಡ

**ಮಂ.ಶ್ಲೋ.॥ ಯದಾ ವೈ ವಿಜಾನಾತ್ಯಥ ಸತ್ಯಂ ವದತಿ ನಾ ವಿಜಾನನ್ ಸತ್ಯಂ ವದತಿ ವಿಜಾನನ್ನೇವ ಸತ್ಯಂ ವದತಿ ವಿಜ್ಞಾನನ್ತ್ವೇವ ವಿಜಿಜ್ಞಾಸಿತವ್ಯಮಿತಿ ವಿಜ್ಞಾನಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಮಾನವನು ತಿಳಿದುಕೊಂಡಾಗ ಮಾತ್ರವೇ ಸತ್ಯವನ್ನು ಹೇಳಬಲ್ಲ. ತಿಳಿಯದವನು ಸತ್ಯಸಂಭಾಷಣೆಯನ್ನು ಮಾಡಲಾರ. ಸತ್ಯದರ್ಶಕನು ಮಾತ್ರವೇ, ಸತ್ಯವನ್ನು ನುಡಿಯುವನು. ಆದ್ದರಿಂದ ವಿಜ್ಞಾನವನ್ನು ಗ್ರಹಿಸಲು ಇಷ್ಟಪಡಬೇಕು, ಎಂದು ಸನತ್ಕುಮಾರನು ಹೇಳಿದ. "ಭಗವನ್! ವಿಜ್ಞಾನವನ್ನು ವಿಶೇಷವಾಗಿ ತಿಳಿದುಕೊಳ್ಳಬೇಕೆಂದಿದ್ದೇನೆ ಅನುಗ್ರಹಿಸಿ" ಎಂದ ನಾರದ.

## ಸಪ್ತಮಃ ಪ್ರಪಾಠಕಃ – ಅಷ್ಟಾದಶಃ ಖಂಡಃ

**ಮಂ.ಶ್ಲೋ.॥ ಯದಾ ವೈ ಮನುತೇऽಥ ವಿಜಾನಾತಿ ನಾ ಮತ್ವಾ ವಿಜಾನಾತಿ ಮತ್ವೈವ ವಿಜಾನಾತಿ ಮತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಮತಿಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಮಾನವನು ಮನನ ಮಾಡಿ ತಿಳಿದುಕೊಳ್ಳಬಲ್ಲ. ಮನನ ಮಾಡಿಕೊಳ್ಳದೆ ತಿಳಿದುಕೊಳ್ಳಲಾರ. ಮಾನವ ಶಕ್ತಿಯೇ ತಿಳಿದುಕೊಳ್ಳುವಂತಹುದೆಂದು ಸನತ್ಕುಮಾರನು ಹೇಳಿದ. ಭಗವನ್! ಆ ಮನನಶ್ಶಕ್ತಿಯನ್ನು ತಿಳಿದುಕೊಳ್ಳಬೇಕೆಂದು ವಾಂಛೆವುಂಟಾಗಿದೆ" ಎಂದು ನಾರದನು ಹೇಳಿದ.

## ಸಪ್ತಮ ಪ್ರಪಾಠಕ – ಏಕೋನವಿಂಶ ಖಂಡ

**ಮಂ.ಶ್ಲೋ.॥ಯದಾ ವೈ ಶ್ರದ್ಧದಾತ್ಯಥ ಮನುತೇ ನಾ ಶ್ರದ್ಧಧನ್ಮನುತೇ ಶ್ರದ್ಧಧದೇವ ಮನುತೇ ಶ್ರದ್ಧಾ-ತ್ವೇವ ವಿಜಿಜ್ಞಾಸಿತವ್ಯೇತಿ ಶ್ರದ್ಧಾಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಮನುಷ್ಯನು ಶ್ರದ್ಧಾಯುಕ್ತನಾದಲ್ಲಿ ಮನನವನ್ನು ಮಾಡಬಲ್ಲ. ಶ್ರದ್ಧೆ ಇಲ್ಲವಾದಲ್ಲಿ ಮನನವನ್ನು ಮಾಡಲಾರ. ಶ್ರದ್ಧೆಯನ್ನು ಕುರಿತು ತಿಳಿದುಕೊಳ್ಳಬೇಕು ಎಂದು ಸನತ್ಕುಮಾರನು ಹೇಳಿದ. "ಭಗವಂತಾ! ನಾನು ಶ್ರದ್ಧೆಯನ್ನು ಕುರಿತು ತಿಳಿಯಬೇಕೆಂದಿದ್ದೇನೆ. ಎಂದ ನಾರದ.

## ಸಪ್ತಮ ಪ್ರಪಾಠಕ – ವಿಂಶ ಖಂಡ

**ಮಂ.ಶ್ಲೋ.॥ ಯದಾ ವೈ ನಿಸ್ತಿಷ್ಠತ್ಯಥ ಶ್ರದ್ಧಧಾತಿ ನಾನಿಸ್ತಿಷ್ಠನ್ ಶ್ರದ್ಧಧಾತಿ ನಿಸ್ತಿಷ್ಠನ್ನೇವ ಶ್ರದ್ಧಧಾತಿ ನಿಷ್ಠಾತ್ವೇವ ವಿಜಿಜ್ಞಾಸಿತವ್ಯೇತಿ ನಿಷ್ಠಾಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಮಾನವನಿಗೆ ಗುರು ಶುಶ್ರೂಷಾದಿ ನಿಷ್ಠೆಯಿದ್ದಲ್ಲಿ ಅವನು ಶ್ರದ್ಧಾಯುಕ್ತನಾಗುತ್ತಾನೆ. ನಿಷ್ಠೆಯಿಲ್ಲದಿದ್ದಲ್ಲಿ ಶ್ರದ್ಧೆಯುಂಟಾಗುವುದಿಲ್ಲ. ನಿಷ್ಠೆಯನ್ನು ತಿಳಿಯಬೇಕೆಂದು ಸನತ್ಕುಮಾರನು ಹೇಳಿದ. "ಭಗವಂತಾ! ನಾನು ನಿಷ್ಠೆಯನ್ನರಿಯಬೇಕೆಂದಿದ್ದೇನೆ. ಎಂದು ನಾರದ ಹೇಳಿ ತಿಳಿಸಿಕೊಡಲು ಕೋರಿದ.

## ಸಪ್ತಮ ಪ್ರಪಾಠಕ – ಏಕವಿಂಶ ಖಂಡ

**ಮಂ.ಶ್ಲೋ.॥ ಯದಾ ವೈ ಕರೋತ್ಯಥ ನಿಸ್ತಿಷ್ಠತಿ ನಾಕೃತ್ವಾ ನಿಸ್ತಿಷ್ಠತಿ ಕೃತ್ವೈವ ನಿಸ್ತಿಷ್ಠತಿ ಕೃತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಕೃತಿಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಮಾನವನು ಕರ್ಮಾನುಷ್ಠಾನ ಸಮಯದಲ್ಲಿ ನಿಷ್ಠೆಯುಳ್ಳವನಾಗುವನು. ಸತ್ಕರ್ಮಗಳನ್ನು ಮಾಡಲಾಗದೆ ಹೋದಾಗ ನಿಷ್ಠೆಯಿಲ್ಲದವನಾಗುವನು. ಸತ್ಕರ್ಮಗಳನ್ನು ಕುರಿತು ತಿಳಿದುಕೊಳ್ಳಬೇಕು ಎಂದು ಸನತ್ಕುಮಾರನು ಹೇಳಿದ. "ಭಗವನ್! ನನಗೆ ಕರ್ಮವನ್ನು ಕುರಿತು ತಿಳಿದುಕೊಳ್ಳಬೇಕೆಂದು ಕೋರಿಕೆಯುಂಟಾಗಿವೆ. ಎಂದು ನಾರದ ಹೇಳಿದ.

## ಸಪ್ತಮಃ ಪ್ರಪಾಠಕಃ – ದ್ವಾವಿಂಶಃ ಖಂಡಃ

**ಮಂ.ಶ್ಲೋ.॥ ಯದಾ ವೈ ಸುಖಂ ಲಭತೇಽಥ ಕರೋತಿ ನಾಸುಖಂ ಲಬ್ಧ್ವಾ ಕರೋತಿ ಸುಖಮೇವ ಲಬ್ಧ್ವಾ ಕರೋತಿ ಸುಖಂತ್ವೇವ ವಿಜಿಜ್ಞಾಸಿತವ್ಯಮಿತಿ ಸುಖಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಸುಖವು ಲಭಿಸಿ ತನ್ನ ಕೋರಿಕೆಗಳು ನೆರವೇರುತ್ತಿದ್ದಾಗ ಮಾನವನು ಕರ್ಮವನ್ನು ಮಾಡುತ್ತಾನೆ. ಸುಖವು ಲಭಿಸದಿದ್ದಾಗ ಕರ್ಮವನ್ನು ಮಾಡುವುದಿಲ್ಲ. ಸುಖವನ್ನು ಕುರಿತು ತಿಳಿದು ಕೊಳ್ಳಬೇಕೆಂದು ಸನತ್ಕುಮಾರನು ಹೇಳಿದ. ಸುಖವನ್ನು ಕುರಿತು ತಿಳಿದುಕೊಳ್ಳಬೇಕೆಂದು ಇಷ್ಟ ಪಡುತ್ತಿದ್ದೇನೆ ಎಂದು ನಾರದ ಹೇಳಿದ.

## ಸಪ್ತಮ ಪ್ರಪಾಠಕ – ತ್ರಯೋವಿಂಶ ಖಂಡ

**ಮಂ.ಶ್ಲೋ.॥ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ (1)**

ತಾ : ಸನತ್ಕುಮಾರನು ಹೇಳಿದ "ಭೂಮ (ಹಿರಿದಾದುದು, ಬ್ರಹ್ಮ, ಆತ್ಮ) ಎನ್ನುವುದೇ ಸುಖ. ಅಲ್ಪವಾದುದರಲ್ಲಿ ಸುಖವಿರುವುದಿಲ್ಲ. ಆದ್ದರಿಂದ ಹಿರಿದಾದುದೇ ಸುಖ. ಆ ಹಿರಿದಾದ ಆತ್ಮವನ್ನೇ ತಿಳಿದುಕೊಳ್ಳಬೇಕು. ಆ ಭೂಮತತ್ತ್ವವನ್ನು ಸಹ ತಿಳಿಸಿಕೊಡಿ ಎಂದು ನಾರದನು ಪ್ರಾರ್ಥಿಸಿದ.

## ಸಪ್ತಮ ಪ್ರಪಾಠಕ – ಚತುರ್ವಿಂಶ ಖಂಡ

**ಮಂ.ಶ್ಲೋ.॥ ಯತ್ರ ನಾನ್ಯತ್ಪಶ್ಯತಿ ನಾನ್ಯತ್ಶೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಽಥ ಯತ್ರಾನ್ಯ -ತ್ಪಶ್ಯತ್ಯನ್ಯತ್ಶೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಂ ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿವಾ ನ ಮಹಿಮ್ನೀತಿ (1) ಗೋ ಅಶ್ವಮಿಹ ಮಹಿಮೇತ್ಯಾಚಕ್ಷತೇ ಹಸ್ತಿ ಹಿರಣ್ಯಂ ದಾಸ ಭಾರ್ಯಂ ಕ್ಷೇತ್ರಾಣ್ಯಾಯತನಾನೀತಿ ನಾಹಮೇನಂ ಬ್ರವೀಮಿ ಬ್ರವೀಮೀತಿ ಹೋವಾಚಾನ್ಯೋ-ಹ್ಯನ್ಯಸ್ಮಿನ್ ಪ್ರತಿಷ್ಠಿತ ಇತಿ (2)**

ತಾ : ಸನತ್ಕುಮಾರ: "ಯಾವ ಆತ್ಮದಲ್ಲಿ ಆತ್ಮಕ್ಕಿಂತ ಬೇರೆ ಯಾವುದೂ ಕಾಣಿಸುವುದಿಲ್ಲವೋ, ಕೇಳಿಸುವುದಿಲ್ಲವೋ ತಿಳಿಯಲಾಗುವುದಿಲ್ಲವೋ ಅದೇ ಭೂಮ. ಇದಕ್ಕಿಂತ ಬೇರೆಯೆಲ್ಲವೂ ಅಲ್ಪವೇ, ಭೂಮ ಸ್ವರೂಪವಾದ ಆತ್ಮ (ಬ್ರಹ್ಮ) ನಾಶವಿಲ್ಲದಂತಹುದು." ಅಲ್ಪವಾದುದಕ್ಕೆ ನಾಶವು ಉಂಟಾಗುವುದು. "ಓ ಭಗವನ್! ಆ ಭೂಮಯೆನ್ನುವುದು ಯಾವುದರಲ್ಲಿ ಪ್ರತಿಷ್ಠಿತವಾಗಿದೆ?" ಎಂದು ನಾರದನು ಕೇಳಿದ. ಸನತ್‌ಕುಮಾರನು:– 'ತನ್ನ ಮಹಿಮೆಯಲ್ಲಿಯೇ ತಾನು ಪ್ರತಿಷ್ಠಿತವಾಗಿದೆ. ಅದು ನಿರಾಲಂಬವು. ಗೋವು, ಅಶ್ವ, ಗಜ, ಸುವರ್ಣ, ಸೇವಕರು, ಭಾರ್ಯೆ ಭೂಮಿ ಗೃಹಾರಾಮ, ಕ್ಷೇತ್ರವಿತ್ತ ಪಶು, ದಾಸ ದಾಸೀಜನರಾದಿಯಾಗಿ ಎಲ್ಲದರಲ್ಲೂ ಸುಖವಿದೆಯೆಂದು ಜನರು ಹೇಳುತ್ತಾರೆ. ಆದರೆ ನಾನು ಹಾಗೆ ಹೇಳುವುದಿಲ್ಲ. ಆತ್ಮದ ಮಹಿಮೆ ಅನ್ಯ ಪದಾರ್ಥದಿಂದ ಉಂಟಾಗುವುದಿಲ್ಲ.

ಆತ್ಮದಿಂದಲೇ ಅನ್ಯ ಪದಾರ್ಥಗಳೆಲ್ಲವೂ ಮಹಿಮೆಯನ್ನು ಹೊಂದುತ್ತದೆ. ಸುಖವಂತವಾಗಿ ಪ್ರಕಾಶಿಸುತ್ತವೆ.

## ಸಪ್ತಮ ಪ್ರಪಾಠಕ – ಪಞ್ಚವಿಂಶ ಖಂಡ

**ಮಂ.ಶ್ಲೋ.॥ ಸ ಏವಾಧಸ್ತಾತ್ಸಉಪರಿಷ್ಟಾತ್ಸಪಶ್ಚಾತ್ಸಪುರಸ್ತಾತ್ಸದಕ್ಷಿಣತಸ್ಸಉತ್ತರತಸ್ಸ ಏವೇದಂ ಸರ್ವ-ಮಿತ್ಯಥಾತೋಽಹಙ್ಕಾರಾದೇಶ ಏವಾಹಮೇವಾಧಸ್ತಾದಮುಪರಿಷ್ಟಾದಹಂ, ಪಶ್ಚಾದಹಂ, ಪುರಸ್ತಾದಹಂ, ದಕ್ಷಿಣತೋಽಹಮುತ್ತರತೋಽಹಮೇವೇದಂ ಸರ್ವಮಿತಿ (1)**

ತಾ : ಆ ಆತ್ಮ(ಭೂಮ.)ವು ಕೆಳಗೆ, ಮೇಲೆ, ಹಿಂದೆ ಮುಂದೆ, ಪಕ್ಕದಲ್ಲಿ ಎಲ್ಲೆಡೆಯೂ ತುಂಬಿದೆ. ಈ ಕಾಣಿಸುವ ಜಗತ್ತೆಲ್ಲವೂ ಆತ್ಮವೇ. ಅದೇ ನಾನು. ನಾನು ಮೇಲೆ ಕೆಳಗೆ ಎಲ್ಲೆಡೆಯೂ ಇರುವೆನು. ಎಲ್ಲವೂ ನಾನೇ ಆಗಿದ್ದೇನೆ. (ಅನಂತ ತತ್ತ್ವವೇ ಭೂಮ.)

**ಮಂ.ಶ್ಲೋ.॥ ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪಶ್ಚಾದಾತ್ಮಾ ಪುರಸ್ತಾ-ದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈವೇದಂ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮ ಕ್ರೀಡ ಆತ್ಮ ಮಿಥುನ ಆತ್ಮಾನಂದಸ್ಸಸ್ವರಾಡ್ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ, ಅಥಯೇನ್ಯಥಾತೋ ವಿದುರನ್ಯರಾ-ಜಾನಸ್ತೇಽಕ್ಷಯ್ಯಲೋಕಾ ಭವನ್ತಿ ತೇಷಾಂ ಸರ್ವೇಷು ಲೋಕೇಷ್ವಕಾಮಾಚಾರೋ ಭವತಿ (2)**

ತಾ : ಕೆಳಗೆ, ಮೇಲೆ ಎಲ್ಲಾ ಕಡೆಯೂ ಆತ್ಮವೇ ತುಂಬಿದೆ. ಈ ಸರ್ವವೂ ಆತ್ಮವೇ. ಈ ವಿಧವಾಗಿ ನೋಡಿಯೂ ನೆನೆಸಿಕೊಂಡೂ, ಗ್ರಹಿಸುವವನು ಆತ್ಮದಲ್ಲೇ ಕ್ರೀಡಿಸುತ್ತಿರುವನು. ಆತ್ಮವು ತನ್ನಲ್ಲೇ ಇದೆಯೆಂದು ಬ್ರಹ್ಮಾನಂದವನ್ನು ಹೊಂದುತ್ತಿರುವನು. ತಾನೇ ರಾಜನಾಗಿರುವನು. ಸಮಸ್ತ ಲೋಕಗಳಲ್ಲೂ ತನ್ನ ಇಷ್ಟಪ್ರಕಾರ ಪ್ರವರ್ತಿಸುತ್ತಿರುವನು. ಯಾರು ಆತ್ಮವನ್ನು ಬೇರೊಂದು ರೀತಿಯಾಗಿ ತಿಳಿದಿರುವನೋ ಅಂತಹ ಅಜ್ಞಾನಿ ಇತರ ರಾಜರ ಅಧೀನನಾಗಿರುವನು. ವಿನಾಶವುಳ್ಳ ಲೋಕಗಳನ್ನು ಹೊಂದುವನು. ಲೋಕಗಳೆಲ್ಲದರಲ್ಲೂ ತನ್ನ ಇಷ್ಟ ಪ್ರಕಾರ ಸಂಚರಿಸಲು ಆತನಿಗೆ ಎಷ್ಟು ಮಾತ್ರವೂ ಸಾಧ್ಯವಾಗುತ್ತಿಲ್ಲ.

## ಸಪ್ತಮ ಪ್ರಪಾಠಕ – ಷಡ್ವಿಂಶ ಖಂಡ

**ಮಂ.ಶ್ಲೋ.॥ ಕಸ್ಯ ಹ ವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿಜಾನತ ಆತ್ಮತಃ ಪ್ರಾಣ ಆತ್ಮತ ಆಶಾಽತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವ ತಿರೋಭಾವಾ ವಾತ್ಮತೋಽನ್ನಮಾತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನ-ಮಾತ್ಮತಶ್ಚಿತ್ತಮಾತ್ಮತಸ್ಸಂಕಲ್ಪ ಆತ್ಮತೋ ಮನ ಆತ್ಮತೋ ವಾಗಾತ್ಮತೋ ನಾಮಾ-ತ್ಮತೋ ಮಂತ್ರಾ ಆತ್ಮತಃ ಕರ್ಮಣ್ಯಾತ್ಮತ ಏವೇದಂ ಸರ್ವಮಿತಿ (1)**

ತಾ : ಹೀಗೆ ಮೇಲೆ ಹೇಳಿದ ಪ್ರಕಾರವಾಗಿ ಸರ್ವಾತ್ಮ ಭಾವನೆಯಿಂದ ನೋಡುವವನನ್ನು ಮನನ ಮಾಡುವಂತಹವನನ್ನು, ಅರಿತವನನ್ನು ಆತ್ಮಾಧಾರವೆಂಬ (ಆ ಆತ್ಮದಿಂದಲೇ) ಪ್ರಾಣವು, ಆಸೆ, ಸ್ಮರಣೆ, ಆಕಾಶ, ತೇಜಸ್ಸು, ಆವಿರ್ಭಾವತಿರೋಭಾವಗಳು. ಅನ್ನ, ಬಲ ವಿಜ್ಞಾನ, ಧ್ಯಾನ, ಚಿತ್ತ, ಸಂಕಲ್ಪ, ಮನಸ್ಸು, ವಾಕ್ಕು, ನಾಮ, ಮಂತ್ರಗಳು, ಕರ್ಮಗಳು- ಈ ಸಮಸ್ತವು ಉತ್ಪತ್ತಿಯೇ ಆಗಿದೆ. ಆತ್ಮದಿಂದಲೇ ಈ ಸರ್ವವೂ ಉಂಟಾಗಿದೆಯೆಂದು ಗ್ರಹಿಸಬೇಕು.

**ಮಂ.ಶ್ಲೋ.॥ ತದೇಷ ಶ್ಲೋಕಃ ನ ಪಶ್ಯೋ ಮೃತ್ಯುಂ ಪಶ್ಯತಿ, ನ ರೋಗಂ ನೋತ ದುಃಖತಾಮ್, ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ, ಸರ್ವಶ ಇತಿ, ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ನವಧಾ ಚೈವ ಪುನಶ್ಚೈಕಾದಶಃ ಸ್ಮೃತಃ, ಶತಂ ಚ ದಶ ಚೈಕಶ್ಚ ಸಹಸ್ರಾಣಿ ಚ ವಿಂಶತಿಃ, ಆಹಾರ ಶುದ್ಧೌ ಸತ್ವಶುದ್ಧಿಸ್ಸತ್ವಶುದ್ಧೌ ಧ್ರುವಾ ಸ್ಮೃತಿಃ, ಸ್ಮೃತಿ ಲಮ್ಭೇ ಸರ್ವ ಗ್ರನ್ಥೀನಾಂ ವಿಪ್ರಮೋಕ್ಷಃ ತಸ್ಮೈ ಮೃದಿತ ಕಷಾಯಾಯ ತಮಸಃ ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಸ್ತಂ ಸ್ಕಂದ ಇತ್ಯಾಚಕ್ಷತೇ ತಂ ಸ್ಕಂದ ಇತ್ಯಾಚಕ್ಷತೇ (2)**

ತಾ : ಈ ರೀತಿಯಾಗಿ ಆತ್ಮವನ್ನು ತಿಳಿದುಕೊಂಡವನು. ಮೃತ್ಯುವಿನ ದರ್ಶನ ಮಾಡುವುದಿಲ್ಲ. ವ್ಯಾಧಿಗೀಡಾಗುವುದಿಲ್ಲ. ಶೋಕವನ್ನು ಹೊಂದುವುದಿಲ್ಲ. ಸರ್ವವನ್ನು ಆತ್ಮಮಯವಾಗಿ ನೋಡುವನು. ಸಮಸ್ತದಲ್ಲೂ ಸರ್ವವಿಧಗಳಲ್ಲೂ ತಾನೇ ಆಗುತ್ತಿದ್ದಾನೆ. ಸೃಷ್ಟಿಗೆ ಮೊದಲೇ ಬ್ರಹ್ಮವೇ ಇದ್ದಿತು. ಆ ಬ್ರಹ್ಮವೇ ಮೂರಾಗಿ, ಆರಾಗಿ, ಏಳಾಗಿ, ಒಂಬತ್ತಾಗಿ, ಹನ್ನೊಂದಾಗಿ ಅನೇಕವಾಗಿದೆ. ನೂರಾರು, ಸಾವಿರ, ಅಸಂಖ್ಯಾತವಾಗಿದೆ. ಮೊದಲು ಆಹಾರ ಪರಿಶುದ್ಧವಾಗಿರಬೇಕು. ಆಹಾರದಿಂದ ಅಂತಃಕರಣವು ಶುದ್ಧಿಯಾಗುವುದು. ಅದರಿಂದ ಜ್ಞಾಪಕ ಶಕ್ತಿ ವೃದ್ಧಿಯಾಗುವುದು. ಅದರಿಂದ ಅಜ್ಞಾನ ಗ್ರಂಥಿಗಳೆಲ್ಲವೂ ಕಿತ್ತುಕೊಂಡು ಹೋಗುತ್ತವೆ. ಆಗ ದೋಷಗಳೆಲ್ಲವೂ ನಶಿಸುತ್ತವೆ. ಮಾನವನು ತಮಸ್ಸನ್ನು ಹೋಗಲಾಡಿಸಿಕೊಳ್ಳುವನು ಎಂದು ಭಗವಂತನಾದ ಸನತ್ಕುಮಾರನು ಭೂಮ ವಿದ್ಯೆಯನ್ನು ಬೋಧಿಸಿದ. ಈ ಸನತ್ಕುಮಾರನಿಗೇ ಸ್ಕಂದನೆಂದು ಹೆಸರು. ಸ್ಕಂದನೆಂದರೆ ಚೆನ್ನಾಗಿ ಸೀಳಿ ದಾಟಿಕೊಂಡು ಹೋಗುವವನೆಂದು ಅರ್ಥ. (ದುರ್ಗಾದೇವಿ ಪುತ್ರನಿಗೆ ಕೂಡಾ ಸ್ಕಂದನೆಂದೇ ಹೆಸರಿದೆ.) ಸಪ್ತಮ ಪ್ರಪಾಠಕದಲ್ಲಿ 26 ಖಂಡಗಳು. 51 ಮಂತ್ರಗಳು ಇವೆ.

## ಅಷ್ಟಮ ಪ್ರಪಾಠಕ – ಪ್ರಥಮ ಖಂಡ

**ಮಂ.ಶ್ಲೋ.॥ ಓಮ್, ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನಂತ -ರಾಕಾಶಸ್ತಸ್ಮಿನ್ಯದನ್ತ ಸ್ತದನ್ವೇಷ್ಟವ್ಯಂ ತದ್ವಾ ವ ವಿಜಿಜ್ಞಾಸಿತವ್ಯಮಿತಿ (1) ತಂ ಚೇದ್ಬ್ರೂಯುರ್ಯ -ದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ (2)**

ತಾ : ಈ ಬ್ರಹ್ಮಪುರ (ಮಾನವ ದೇಹ)ದಲ್ಲಿ, ಹೃದಯ ಗುಹೆಯಲ್ಲಿ ಚಿಕ್ಕ ಪದ್ಮವಿದೆ. ಆ ಪದ್ಮದಲ್ಲಿ ಸೂಕ್ಷ್ಮವಾದ ಅಂತರಾಕಾಶವಿದೆ. ಆ ಒಳಗಿನ ವಸ್ತುವನ್ನು ಕುರಿತು ಆಲೋಚಿಸಬೇಕು. ಈ ಬ್ರಹ್ಮಪುರದಲ್ಲಿರುವ ಚಿಕ್ಕ ಪದ್ಮದಲ್ಲಿರುವ ಸೂಕ್ಷ್ಮಾಕಾರದಲ್ಲಿ ಏನಿದೆಯೋ ಅದನ್ನು ಪರಿಶೋಧನೆ

ಮಾಡಬೇಕು. ಏನು ತಿಳಿದುಕೊಳ್ಳಬೇಕು? ಎಂದು ಜನರು (ಶಿಷ್ಯರು) ಕೇಳಿದಾಗ ಸದ್ಗುರುವು ಏನು ಹೇಳಬೇಕೆಂದರೆ -

**ಮಂ.ಶ್ಲೋ.॥ ಸ ಬ್ರೂಯಾದ್ಯಾವಾನ್ವಾ ಅಯಮಾಕಾಶ ಸ್ತಾವಾನೇಷೋಽನ್ತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅನ್ತರೇವ ಸಮಾಹಿತೇ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚನ್ದ್ರ -ಮಸಾವುಭೌ ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ ಸಮಾಹಿತ -ಮಿತಿ (3) ತಂ ಚೇದ್ಬ್ರೂಯುರಸ್ಮಿಂಶ್ಚೇದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಂ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾ ಯದೈತಜ್ಜರಾವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋಽತಿ ಶಿಷ್ಯತ ಇತಿ (4)**

ತಾ : ಬಯಲಲ್ಲಿರುವ ಆಕಾಶವು ಎಷ್ಟು ಅನಂತವಾಗಿದೆಯೋ, ಅಷ್ಟೇ ಹೃದಯದಲ್ಲಿರುವ ಆಕಾಶವೂ ಅನಂತವಾಗಿರುವುದು. ದ್ಯುಲೋಕ, ಪೃಥಿವಿ, ಇವು ಒಳಗಡೆಯೇ ಇವೆ. ಅಗ್ನಿ, ವಾಯು, ಸೂರ್ಯ, ಚಂದ್ರ, ವಿದ್ಯುತ್, ನಕ್ಷತ್ರಗಳು ಇಲ್ಲಿ (ಇರುವುದು ಇಲ್ಲದಿರುವುದು) ಸರ್ವವೂ ಹೃದಯಾ-ಕಾಶದಲ್ಲಿ ಸ್ಥಿತವಾಗಿವೆ. ನಿರುಪಾಧಿಕವಾದ ಬ್ರಹ್ಮೋಪಾಸನಾರ್ಥವಾದ ಹೃದಯಾಕಾಶದಲ್ಲಿ ಸರ್ವ ಜಗತ್ ಕಲ್ಪನೆ ಎಂದು ಇದರಲ್ಲಿನ ತಾತ್ಪರ್ಯ ಈ ಬ್ರಹ್ಮಪುರದಲ್ಲಿ ಇದೆಲ್ಲವೂ ಈ ಎಲ್ಲ ಭೂತಗಳು, ಸಮಸ್ತ ಕಾಮನೆಗಳು, ಅಂತರ್ಭೂತವಾಗಿದ್ದಲ್ಲಿ ಈ ಶರೀರಕ್ಕೆ ಮುಪ್ಪು ಉಂಟಾದರೂ, ಮರಣ ಬಂದರೂ ಅದರಲ್ಲಿನ ಆಕಾಶ ನಶಿಸದಿರುವಂತೆ, ಹೃದಯಾಕಾಶನಲ್ಲಿರುವ ಇವು ನಶಿಸುವುದಿಲ್ಲವೆಂದು ಹೇಳುತ್ತಿದ್ದಾರೆ.

**ಮಂ.ಶ್ಲೋ.॥ ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ಸ ವಧೇನಾಽಸ್ಯ ಹನ್ಯತ ಏತತ್ಸತ್ಯಂ ಬ್ರಹ್ಮಪುರ -ಮಸ್ಮಿನ್ ಕಾಮಾಸ್ಸಮಾಹಿತಾ ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯು-ರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಙ್ಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ ಯಥಾನುಶಾಸನಂ ಯಂ ಯಮನ್ತಮಭಿಕಾಮಾ ಭವನ್ತಿಯಂ ಜನಪದಂ ಯಂ ಕ್ಷೇತ್ರಭಾಗಂ ತಂ ತಮೇವೋಪಜೀವಂತಿ (5) ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನ-ಮನನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ಕಾಮಾಂ ಸ್ತೇಷಾಂ ಸರ್ವೇಷು ಲೋಕೇಷ್ವ-ಕಾಮಾಚಾರೋ ಭವತ್ಯಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ಕಾಮಾಂ ಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ (6)**

ತಾ : ಈ ಶರೀರಕ್ಕೆ ಮುಪ್ಪು ಬಂದರೂ, ಬ್ರಹ್ಮಕ್ಕೆ ಹಾಗೆ ವೃದ್ಧಾಪ್ಯ ಬರುವುದಿಲ್ಲ. ದೇಹಕ್ಕೆ ಏಟು ಬಿದ್ದರೂ ಆತ್ಮಕ್ಕೆ ಬೀಳುವುದಿಲ್ಲ. ಈ ಬ್ರಹ್ಮವು ಸತ್ಯವಾದುದು. ಶರೀರವು ಸತ್ಯವಲ್ಲ. ಬ್ರಹ್ಮದಲ್ಲಿ ಸದ್ಗುಣಗಳು ಆಶ್ರಯಿಸಿಕೊಂಡಿವೆ. ಈ ಬ್ರಹ್ಮವು ಪಾಪರಹಿತವಾದುದು. ಪರಬ್ರಹ್ಮಕ್ಕೆ ಮುದಿತನ, ಮರಣ, ದುಃಖ, ಹಸಿವು, ಬಾಯಾರಿಕೆ ಇವು ಯಾವುವೂ ಇಲ್ಲ. ಆತ್ಮವು ನೆನೆಸಿದ ಹಾಗೆಯೇ ನಡೆಯುತ್ತದೆ. ಅದು ಸತ್ಯ ಸಂಕಲ್ಪವಾಗಿದೆ. ಇಂತಹ ಆತ್ಮವನ್ನು ತಿಳಿದುಕೊಳ್ಳಬೇಕು. ಅದನ್ನು

ತಿಳಿದುಕೊಳ್ಳದಿದ್ದ ಪಕ್ಷದಲ್ಲಿ. ಈ ಲೋಕದಲ್ಲಿ ರಾಜಾಜ್ಞೆಯನ್ನು ಪಾಲಿಸಿ ಅನುಸರಿಸುವವರು ಏನೇನು ಫಲವನ್ನು ಯಾವ್ಯಾವ ಪ್ರದೇಶವನ್ನು ಬಯಸುವರೋ ಅದನ್ನೇ ಹೊಂದುತ್ತಾರೆ. ಆದರೆ ಸಮಸ್ತವನ್ನು ಹೊಂದಿದಂತೆ, ಸಮಸ್ತವನ್ನು ಸ್ವೇಚ್ಛೆ (ಸುಲಭ)ಯಾಗಿ ಹೊಂದಲಾರರು. ಈ ಲೋಕದಲ್ಲಿ ಕರ್ಮದಿಂದ ಹೊಂದಿದ ಫಲವು ಕ್ಷಯವಾಗುವಂತೆ ಪರಲೋಕದಲ್ಲಿಯೂ ಸಹ ಪುಣ್ಯದಿಂದ ಪ್ರಾಪ್ತವಾದ ಫಲವು ಸಹ ನಾಶವಾಗುವುದು. ಆದ್ದರಿಂದ ಈ ಲೋಕದಲ್ಲಿ ಆತ್ಮತತ್ತ್ವವನ್ನು ಸತ್ಯಕಾಮನೆಗಳನ್ನು ತಿಳಿದುಕೊಳ್ಳದೆ ಪರಲೋಕಕ್ಕೆ ಹೋದವರು ಆ ಲೋಕದಲ್ಲಿ ಅಪಜಯವನ್ನು ಹೊಂದುವರು. ಇಲ್ಲಿಯೇ ಆತ್ಮತತ್ತ್ವವನ್ನು ಸತ್ಯಕಾಮನೆಗಳನ್ನು ತಿಳಿದುಕೊಂಡವರು ಸರ್ವಲೋಕಗಳನ್ನು ಚಕ್ರವರ್ತಿಗಳಂತೆ ಸ್ವತಂತ್ರರಾಗಿ ಸಂಚರಿಸುವರು.

## ಅಷ್ಟಮ ಪ್ರಪಾಠಕ – ದ್ವಿತೀಯ ಖಂಡ

**ಮಂ.ಶ್ಲೋ.॥ ಸ ಯದಿ ಪಿತೃಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠನ್ತಿ ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ (1) ಅಥ ಯದಿ ಮಾತೃಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಮಾತರಸ್ಸಮುತ್ತಿಷ್ಠನ್ತಿ ತೇನ ಮಾತೃಲೋಕೇನ ಸಂಪನ್ನೋ ಮಹೀಯತೇ (2) ಅಥ ಯದಿ ಭ್ರಾತೃ ಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಭ್ರಾತರಸ್ಸಮುತ್ತಿಷ್ಠನ್ತಿ ತೇನ ಭ್ರಾತೃಲೋಕೇನ ಸಂಪನ್ನೋ ಮಹೀಯತೇ (3) ಅಥ ಯದಿ ಸ್ವಸೃಲೋಕಕಾಮೋ ಭವತಿ ಸಂಙ್ಕಲ್ಪಾದೇವಾಸ್ಯ ಸ್ವಸಾರಸ್ಸಮುತ್ತಿಷ್ಠನ್ತಿ ತೇನ ಸ್ವಸೃಲೋಕೇನ ಸಂಪನ್ನೋ ಮಹೀಯತೇ (4) ಅಥ ಯದಿ ಸಖಿಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಸಖಾಯಸ್ಸಮುತ್ತಿಷ್ಠನ್ತಿ ತೇನ ಸಖಿಲೋಕೇನ ಸಂಪನ್ನೋ ಮಹೀಯತೇ (5)**

ತಾ : ಜ್ಞಾನಿಯು ಪಿತೃಲೋಕದಲ್ಲಿರುವವರನ್ನು ಕೋರಿದಲ್ಲಿ ಆತನ ಸಂಕಲ್ಪ ಮಾತ್ರದಿಂದಲೇ, ಪಿತೃಗಳು ಆತನ ಬಳಿಗೆ ಬಂದುಬಿಡುವರು. ಆತ ಪಿತೃಲೋಕವನ್ನು ಹೊಂದಿ ಸಂಪತ್ತನ್ನು ಹೊಂದಿದವನಾಗುತ್ತಾನೆ. ಇನ್ನು ಆತ ಮಾತೃಲೋಕದವರನ್ನು ಕೋರಿದಲ್ಲಿ ಸಂಕಲ್ಪ ಮಾತ್ರದಿಂದ ಮಾತೃದೇವತೆಗಳು ಆತನ ಹತ್ತಿರಕ್ಕೆ ಬರುತ್ತಾರೆ. ಆತನು ಮಾತೃಲೋಕವನ್ನು ಸೇರಿ ಸಂಪತ್ತನ್ನು ಹೊಂದಿದವನಾಗುತ್ತಾನೆ. ಆತ ಭ್ರಾತೃಲೋಕವನ್ನು ಅಣ್ಣ ತಮ್ಮಂದಿರನ್ನು ಕೋರಿದಲ್ಲಿ ಭ್ರಾತೃಲೋಕ ವಾಸಿಗಳು ಅವನ ಬಳಿಗೆ ಬರುತ್ತಾರೆ. ಆತ ಭ್ರಾತೃಲೋಕವನ್ನು ಹೊಂದಿ ಭಾಗ್ಯವನ್ನು ಪಡೆದವನಾಗುತ್ತಾನೆ. ಆತ ಸ್ವಸೃಲೋಕದಲ್ಲಿರುವವರನ್ನು ಅಂದರೆ ಅಕ್ಕತಂಗಿಯರನ್ನು ಬಯಸಿದಾಗ ಸಂಕಲ್ಪ ಮಾತ್ರದಿಂದಲೇ ಅವರು ಆತನ ಹತ್ತಿರಕ್ಕೆ ಬರುವರು. ಆತ ಸ್ವಸೃ ಲೋಕಕ್ಕೆ ಹೋಗಿ ಮಹಿಮೆಯುಳ್ಳವನಾಗುವನು. ಆತ ಸುಖರ ಲೋಕವನ್ನು ಸ್ನೇಹಿತರನ್ನು ಬಯಸಿದಲ್ಲಿ ಸಂಕಲ್ಪ ಮಾತ್ರದಿಂದ ಸ್ನೇಹಿತರು ಆತನ ಬಳಿಗೆ ಬರುವರು. ಆ ಲೋಕಕ್ಕೆ ಹೋಗಿ ಆತ ಅಲ್ಲಿ ಭಾಗ್ಯವಂತನಾಗುವನು.

**ಮಂ.ಶ್ಲೋ.॥ ಅಥ ಯದಿ ಗನ್ಧಮಾಲ್ಯಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಗನ್ಧಮಾಲ್ಯೇ ಸಮುತ್ತಿಷ್ಠತಸ್ತೇನ ಗನ್ಧಮಾಲ್ಯಾಲೋಕೇನ ಸಂಪನ್ನೋ ಮಹೀಯತೇ (6) ಅಥ ಯದ್ಯನ್ನ**

-ಪಾನಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯಾನ್ನಪಾನೇ ಸಮುತ್ತಿಷ್ಠತಸ್ತೇನಾನ್ನ-ಪಾನಲೋಕೇನ ಸಂಪನ್ನೋ ಮಹೀಯತೇ (7) ಅಥ ಯದಿ ಗೀತವಾದಿತ್ರಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಗೀತವಾದಿತ್ರೇ ಸಮುತ್ತಿಷ್ಠತಸ್ತೇನ ಗೀತವಾದಿತ್ರಲೋಕೇನ ಸಮ್ಪನ್ನೋ ಮಹೀಯತೇ (8) ಅಥ ಯದಿ ಸ್ತ್ರೀಲೋಕಕಾಮೋ ಭವತಿ ಸಙ್ಕಲ್ಪಾದೇವಾಸ್ಯ ಸ್ತ್ರಿಯಸ್ಸಮುತ್ತಿಷ್ಠನ್ತಿ ತೇನ ಸ್ತ್ರೀಲೋಕೇನ ಸಂಪನ್ನೋ ಮಹೀಯತೇ (9) ಯಂ ಯಮನ್ತ-ಮಭಿಕಾಮೋ ಭವತಿ ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠತಿ ತೇನ ಸಂಪನ್ನೋ ಮಹೀಯತೇ (10)

ತಾ : ಆತ ಗಂಧಮಾಲ್ಯಾದಿಗಳನ್ನು ಕೋರಿದಲ್ಲಿ ಸಂಕಲ್ಪಿಸಿದ ಕೂಡಲೇ ಆ ಗಂಧಮಾಲ್ಯಾದಿ-ಗಳು ಆತನ ಬಳಿಗೆ ಬರುವುವು. ಆ ಗಂಧಮಾಲ್ಯಾದಿ ಲೋಕಗಳಿಗೆ ಹೋಗಿ ಅಲ್ಲಿ ಮಹಿಮೆಯನ್ನು ಹೊಂದುವನು. ಆತ ಅನ್ನ ಪಾನಾದಿಗಳನ್ನು ಕೋರಿಕೊಂಡಲ್ಲಿ, ಕೋರಿದ ತಕ್ಷಣ ಅವು ಆತನ ಬಳಿಗೆ ಬರುವುವು. ಆತ ಅನ್ನ ಪಾನಾದಿ ಲೋಕಗಳಿಗೆ ಹೋಗಿ ಅಲ್ಲಿ ಮಹಿಮೆಯುಳ್ಳವನಾಗುತ್ತಾನೆ. ಆತ ಸಂಗೀತ ವಾದ್ಯಾದಿಗಳನ್ನು ಬಯಸಿದಲ್ಲಿ ಅವೆಲ್ಲವೂ ಸಂಕಲ್ಪಿಸಿದ ಮಾತ್ರಕ್ಕೇ ಆತನ ಬಳಿಗೆ ಬಂದು ಸೇರುವುವು. ಆತನು ಆ ಸಂಗೀತವಾದ್ಯಾದಿ ಲೋಕಕ್ಕೆ ಹೋಗಿ ಅಲ್ಲಿನ ಭಾಗ್ಯವನ್ನು ಅನುಭವಿಸುವನು. ಆತ ಸ್ತ್ರೀಯರನ್ನು ಬಯಸಿದಲ್ಲಿ ಸಂಕಲ್ಪ ಮಾತ್ರದಿಂದ ಕೋರಿದ ಸ್ತ್ರೀಯರನ್ನು ಆತ ಹೊಂದುವನು. ಸ್ತ್ರೀಯರು ಬರುವರು. ಆತ ಆ ಸ್ತ್ರೀಲೋಕಕ್ಕೆ ಹೋಗಿ ಮಹಿಮೆಯುಳ್ಳವ-ನಾಗುತ್ತಾನೆ. ಯಾವ ಯಾವ ಲೋಕದಲ್ಲಿ ಏನು ಬೇಕೆಂದು ಬಯಸುವನೋ ಅದೆಲ್ಲವೂ ಸಂಕಲ್ಪಿಸಿದ ಮಾತ್ರಕ್ಕೇ ಆ ಭೋಗಗಳು ಪ್ರಾಪ್ತವಾಗುವುವು. ಆ ಭೋಗಗಳೆಲ್ಲವನ್ನೂ ಹೊಂದಿ ಆತ ಮಹಿಮೆ-ಯುಳ್ಳವನಾಗುತ್ತಾನೆ.

## ಅಷ್ಟಮ ಪ್ರಪಾಠಕ - ತೃತೀಯ ಖಂಡ

ಮಂ.ಶ್ಲೋ.॥ ತ ಇಮೇ ಸತ್ಯಾಃ ಕಾಮಾ ಅನೃತಾಪಿಧಾನಾಸ್ತೇಷಾಂ ಸತ್ಯಾನಾಂ ಸತಾಮನೃತಮಪಿ ಧಾನಂ ಯೋಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ ಲಭತೇ (1) ಅಥ ಯೇಚಾಸ್ಯೇಹ ಜೀವಾ ಯೇ ಚ ಪ್ರೇತಾ ಯಚ್ಚಾನ್ಯದಿಚ್ಛನ್ನ ಲಭತೇ ಸರ್ವಂ ತದತ್ರ ಗತ್ವಾ ವಿಂದತೇಽತ್ರ ಹ್ಯಸ್ಯೈತೇ ಸತ್ಯಾಃ ಕಾಮಾ ಅನೃತಾಪಿಧಾನಾಸ್ತದ್ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿನ್ದೇಯುರೇವಮೇವೇಮಾ ಸ್ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನವಿನ್ದನ್ತ್ಯನೃತೇನ ಹಿ ಪ್ರತ್ಯೂಢಾಃ (2)

ತಾ: ಆತ್ಮದ ಸತ್ಯಕಾಮಗಳು ಅಸತ್ಯದಿಂದ ಮುಚ್ಚಲ್ಪಟ್ಟಿವೆ. ಅಂದರೆ ಸ್ವರೂಪಭೂತವಾದ ನಿರಾಲಂಬವಾದ ಆನಂದವು ವಿಷಯ ವಾಂಛೆಗಳಿಂದ ಮುಚ್ಚಿಕೊಂಡಿದೆ. ಆ ಆತ್ಮಕಾಮಗಳು ಸತ್ಯ-ವಾಗಿದ್ದರೂ, ಅಸತ್ಯವಾಗಿ, ಲೌಕಿಕ ಪ್ರಜ್ಞೆಯಿಂದ ಆವರಿಸಿಕೊಂಡಿದೆ. ಇಲ್ಲಿಂದ ಹೊರಟು ಹೋದವನ ಪುನರ್ಜನ್ಮವು ಮತ್ತೆ ಈ ಲೋಕದಲ್ಲಿ ಆಗುವುದಿಲ್ಲ. ಈ ಲೋಕದಲ್ಲಿ ಬದುಕಿರುವವರನ್ನು ಹಾಗೂ

ಸತ್ತುಹೋದವರನ್ನು, ಬಂಧುಗಳನ್ನು, ಆತನು ಇಲ್ಲಿ ಬಯಸಿದರೂ ಸಿಕ್ಕದಿರುವ ಎಲ್ಲ ಪದಾರ್ಥಗಳು ಆತನಿಗೆ ಅಲ್ಲಿ (ಬ್ರಹ್ಮಲೋಕದಲ್ಲಿ) ಲಭಿಸುತ್ತದೆ. ಆತನ ಈ ಸತ್ಯಕಾಮಗಳೆಲ್ಲ ಅಸತ್ಯದಿಂದ ಆವರಿಸಿಕೊಂಡಿದೆ. ಹೇಗೆ ಭೂಗತರಾಗಿದ್ದು ಧನವನ್ನು ಕಾಣದವರು ಅನುದಿನವೂ ಅದರ ಮೇಲೆ ತಿರುಗಾಡುತ್ತಿರುವರೋ, ಹಾಗೆ ತಿರುಗಾಡುತ್ತಿದರೂ ಆ ಧನವನ್ನು ಹೇಗೆ ಹೊಂದಲಾರರೋ, ಅದೇ ರೀತಿಯಾಗಿ ಈ ಜೀವಿಗಳೆಲ್ಲರೂ ಪ್ರತಿನಿತ್ಯವೂ ಸುಷುಪ್ತಿ ದೆಶೆಗೆ (ಬ್ರಹ್ಮಲೋಕಕ್ಕೆ) ಹೋಗುತ್ತಿದ್ದರೂ, ಅಸತ್ಯಮೋಹಿತರಾಗಿ ಇರುವುದರಿಂದ (ಈ) ಅಸತ್ಯಕಾಮಗಳನ್ನು ಹೊಂದಲಾರದವರಾಗಿದ್ದಾರೆ.

**ಮಂ.ಶ್ಲೋ.॥ ಸವಾ ಏಷ ಆತ್ಮಾ ಹೃದಿ ತಸ್ಯೈ ತದೇವ ನಿರುಕ್ತಂ ಹೃದ್ಯಯಮಿತಿ ತಸ್ಮಾದ್ಧೃದಯಮಹರ-ಹರ್ವಾ ಏವಂ ವಿತ್ ಸ್ವರ್ಗಂ ಲೋಕಮೇತಿ (3) ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾ-ತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್‌ಬ್ರಹ್ಮೇತಿ ತಸ್ಯ ಹವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ (4) ತಾನಿ ಹವಾ ಏತಾನಿ ತ್ರೀಣ್ಯಕ್ಷರಾಣಿ ಸತೀಯಮಿತಿ ತದ್ಯತ್ಸತ್ತದಮೃತ ಮಥ ಯತ್ತಿ ತನ್ಮರ್ತ್ಯ ಮಥ ಯದ್ಯಂ ತೇನೋಭೇ ಯಚ್ಛತಿ ಯದ್ಗನೇ ನೋಭೇ ಯಚ್ಛತಿ ತಸ್ಮಾದ್ಯ -ಮಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ (5)**

ತಾ : ಈ ಆತ್ಮವು ಹೃದಯದಲ್ಲೇ ಇದೆ. ಅದಕ್ಕೆ ಇದು ಶಬ್ದಾರ್ಥ: ಹೃದಿ-ಹೃದಯದಲ್ಲಿ, ಅಯಯ್=ಈ ಆತ್ಮ(ವು). ಈ ಪ್ರಕಾರವಾಗಿ ತಿಳಿದುಕೊಂಡವನು ಪ್ರತಿದಿನವೂ ಸ್ವರ್ಗವನ್ನು (ಬ್ರಹ್ಮವನ್ನು) ಹೊಂದುವನು. ಈ ಪ್ರಕಾರವಾಗಿ ತಿಳಿದುಕೊಂಡವನು ಸಂಪ್ರಸಾದನೆಂದೆನಿಸಿ ಕೊಳ್ಳುವನು. ಅಂತಹವನು-(ಬ್ರಹ್ಮಾನುಗ್ರಹವನ್ನು ಹೊಂದಿದವನು) ದೇಹಾತ್ಮಭಾವಾದಿ ಅಜ್ಞಾನದಿಂದ ಹೊರಬಂದು ಪರಂಜ್ಯೋತಿ ಸ್ವರೂಪವನ್ನು (ಆತ್ಮವನ್ನು) ಆಶ್ರಯಿಸಿ ಅದರೊಂದಿಗೆ ಐಕ್ಯನಾಗುತ್ತಿದ್ದಾನೆ. ಆದ್ದರಿಂದ ಜೀವನಿಗೆ ಆತ್ಮವೆನ್ನುವ ಹೆಸರು ಬಂದಿತು. (ಜೀವಾತ್ಮ ಎಂದು) ಆ ಆತ್ಮ ಅಮೃತವಾಗಿ, ಅಭಯವಾಗಿ ಬ್ರಹ್ಮವಾಗಿ ಇದೆ. ಆ ಬ್ರಹ್ಮಕ್ಕೆ ಸತ್ಯವೆಂದು ಹೆಸರು. ''ಸತ್ಯಮ್' ಎನ್ನುವ ಮೂರು ಅಕ್ಷರಗಳಿಗೆ ಅರ್ಥವನ್ನು ಹೇಳಲಾಗಿದೆ. 'ಸ' ಎಂದರೆ ಅಮೃತ, 'ತಿ' ಎಂದರೆ ''ಮರ್ತ್ಯ''. ''ಯಮ್'' ಎಂದರೆ ಈ ಎರಡನ್ನೂ ಒಂದಾಗಿ ಮಾಡುವುದು. ಈ ರೀತಿಯಾಗಿ ಗ್ರಹಿಸುವವನು ಪ್ರತಿದಿನವೂ ಸ್ವರ್ಗರೂಪವಾದ ಆತ್ಮವನ್ನು ಅನುಭವಿಸುತ್ತಿರುತ್ತಾನೆ.

## ಅಷ್ಟಮ ಪ್ರಪಾಠಕ – ಚತುರ್ಥ ಖಂಡ

**ಮಂ.ಶ್ಲೋ.॥ ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಂ ಮಸಮ್ಭೇದಾಯ ನೈತಂ ಸೇತು ಮಹಾರಾತ್ರೇ ತತೋ ನ ಜರಾ ನ ಮೃತ್ಯುರ್ನಶೋಕೋ ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋಽತ್‌ನಿವರ್ತನ್ತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ (1) ತಸ್ಮಾದ್ವಾ ಏತಂ ಸೇತುಂ ತೀರ್ತ್ವಾನ್ಧಸ್ಸನ್ನನನ್ಧೋ ಭವತಿ ವಿದ್ಧಸ್ಸನ್ನ ವಿದ್ಧೋ ಭವತ್ಯುಪತಾಪೀ ನ ಸನ್ನನುಪತಾಪೀ ಭವತಿ ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಽಪಿ ನಕ್ತಮಹಾರೇವಾಭಿ-**

**ನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ (2) ತದ್ಯ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿನ್ದನ್ತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ (3)**

ತಾ : ಆ ಪರಮಾತ್ಮ ಸೇತು ಇದ್ದಂತೆ. ಸಮಸ್ತವನ್ನು ಭರಿಸಿರುತ್ತದೆ. ಈ ಆತ್ಮ ಕಾಲಾತೀತ-ವಾಗಿದೆ. ಇದಕ್ಕೆ ಮುಪ್ಪು, ಮೃತ್ಯು, ದುಃಖ, ಸುಕೃತ, ದುಷ್ಕೃತಗಳು ಇಲ್ಲ. ಆದ್ದರಿಂದ ಆತ್ಮದಲ್ಲಿ ಎಲ್ಲ ಪಾಪಗಳು ನಶಿಸಿಹೋಗುತ್ತಿರುತ್ತವೆ. ಪರಬ್ರಹ್ಮಲೋಕವು ಪಾಪ ಸಂಬಂಧವಿಲ್ಲದ್ದು. ಆದ್ದರಿಂದ ಸರ್ವದಾ ಪರಬ್ರಹ್ಮವನ್ನು ಈ ರೀತಿಯಾಗಿ ಉಪಾಸಿಸುವವನು (ಸ್ವರ್ಗವನ್ನು) ಬ್ರಹ್ಮ ಪದವನ್ನು ಹೊಂದುವನು. ಈ ಆತ್ಮವನ್ನು ತಿಳಿದುಕೊಂಡಲ್ಲಿ ಅಜ್ಞಾನಾಂಧನು ಅಂಧತ್ವವಿಲ್ಲದವನಾಗುವನು. ಶರೀರವಿರುವಾಗಲೇ ಅಜ್ಞಾನಿ ಜ್ಞಾನಿಯಾಗುವನು. ಈ ದೇಹವಿರುವಾಗ ತಚ್ಛರೀರ ಕಾರ್ಯಗಳಿಂದ ದುಃಖಕ್ಕೀಡಾದವನು ಸುಖಪಡುತ್ತಾನೆ. ಸಂಕಟಪಟ್ಟವನು ಸಂಕಟವಿಲ್ಲದವನಾಗುವನು. ಆತ್ಮವನ್ನು ಹೊಂದಿದವನಿಗೆ ರಾತ್ರಿ ಹಗಲಾಗುತ್ತದೆ. ಆತ ಯಾವಾಗಲೂ (ಜ್ಞಾನ) ಪ್ರಕಾಶವುಳ್ಳವನಾಗಿ ಆತ್ಮೈಕ್ಯ-ನಾಗಿರುತ್ತಾನೆ. ಈ ಪರಬ್ರಹ್ಮಲೋಕವನ್ನು ಯಾರು ಬ್ರಹ್ಮಚರ್ಯದಿಂದ ಹೊಂದುವರೋ ಅವರದೇ ಈ ಬ್ರಹ್ಮಲೋಕ. ಕಾಮವಾಂಛಾದಿ ವಿಷಯ ಚಿಂತನೆಯಿಲ್ಲದವರು. ಅಂತಹವರು ಸರ್ವಲೋಕ-ಗಳಲ್ಲೂ ಸ್ವತಂತ್ರವಾಗಿ ಸಂಚರಿಸಬಲ್ಲವರಾಗಿರುವರು.

## ಅಷ್ಟಮ ಪ್ರಪಾಠಕ - ಪಞ್ಚಮ ಖಂಡ

**ಮಂ.ಶ್ಲೋ.।। ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವ ಯೋ ಜ್ಞಾತಾ ತಂ ವಿನ್ದತೇಽಥ ಯದಿಷ್ಟಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾ -ತ್ಮಾನಮನುವಿನ್ದತೇ (1) ಅಥ ಯತ್ಸತ್ರಾಯಣಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣಹ್ಯೇವ ಸತ ಆತ್ಮನಸ್ತ್ರಾಣಂ ವಿನ್ದತೇಥ ಯನ್ಮೌನಮಿತ್ಯಾಚಕ್ಷತೇ ಬ್ರಹ್ಮಚರ್ಯ -ಮೇವ ತತ್ ಬ್ರಹ್ಮಚರ್ಯೇಣಹ್ಯೇವಾತ್ಮಾನಮನುವಿದ್ಯ ಮನುತೇ (2)**

ತಾ : ಯಜ್ಞವೆಂದರೆ ಬ್ರಹ್ಮಚರ್ಯವೇ! ಜ್ಞಾನಿಯಾದವನು ಬ್ರಹ್ಮಚರ್ಯದಿಂದ ಯಜ್ಞಫಲವನ್ನು ಹೊಂದುತ್ತಿದ್ದಾನೆ. ದೇವಪೂಜಾದಿಗಳು ಸಹ ಬ್ರಹ್ಮಚರ್ಯವೇ! ಬ್ರಹ್ಮಚರ್ಯದಿಂದ ಮಾನವನು ಆತ್ಮವನ್ನು ಹೊಂದುತ್ತಿದ್ದಾನೆ. ಮಾನವರು ಯಾವುದನ್ನು ಸತ್ರಾಯಣವೆಂದು ಹೇಳುವರೋ, ಅಂತಹ ಯಜ್ಞ ಪರಂಪರೆಯೂ ಸಹ ಬ್ರಹ್ಮಚರ್ಯವೇ. ಮಾನವನು ಬ್ರಹ್ಮಚರ್ಯದಿಂದ ಸದ್ರೂಪಾತ್ಮದಿಂದ ಪ್ರಾಣವನ್ನು ಹೊಂದುತ್ತಾನೆ. ಮೌನವಾಗಿರುವುದು ಸಹ ಬ್ರಹ್ಮಚರ್ಯವೇ. ಬ್ರಹ್ಮಚರ್ಯೆಯಿಂದಲೇ ಪರಬ್ರಹ್ಮತತ್ತ್ವವನ್ನು ಗ್ರಹಿಸಿ ಮನುಷ್ಯನು ಮನನ ಮಾಡುತ್ತಾನೆ.

**ಮಂ.ಶ್ಲೋ.।। ಅಥ ಯದನಾಶಕಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದೇಷ ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿನ್ದತೇಽಥ ಯದರಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದರಶ್ಚ ಹ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂ-**

**ಮದೀಯಂ ಸರಸ್ತದಶ್ವತ್ಥಸ್ಸೋಮ ಸವನಸ್ತದ ಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಮ್ (3) ತದ್ಯ ಏವೈತಾ ವರಂ ಚ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮಚರ್ಯೇ-ಣಾನುವಿನ್ದನ್ತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ (4)**

ತಾ : ಮನುಷ್ಯರು ಅನಾಶಕಾಯನವನ್ನು = ಅಶನವಿಲ್ಲದೆ ಉಪವಾಸ ಮಾಡುತ್ತಿರುವುದು (ಅಮೃತಪದ)ವೆಂದು ಯಾವುದನ್ನು ಹೇಳುವರೋ ಅದು ಕೂಡಾ ಬ್ರಹ್ಮಚರ್ಯವೇ. ಬ್ರಹ್ಮಚರ್ಯೆ-ಯಿಂದಲೇ ಹೊಂದಲಾದ ಆತ್ಮತತ್ತ್ವಕ್ಕೆ ವಿನಾಶವಿಲ್ಲ. ಅರಣ್ಯಾಯನವೆಂದರೆ ಸನ್ಯಾಸ. ಅದು ಸಹ ಬ್ರಹ್ಮಚರ್ಯವೇ. ಇಲ್ಲಿಂದ ಮೂರನೆಯದಾದ ದ್ಯುಲೋಕದಲ್ಲಿರುವ ಬ್ರಹ್ಮಲೋಕದಲ್ಲಿ "ಅರ" ಮತ್ತು "ಣ್ಯ"ವೆನ್ನುವ ಎರಡು ಸಾಗರಗಳಿವೆ. ಅಲ್ಲಿ "ಐರಂ ಮದೀಯ"ವೆನ್ನುವ ಸರೋವರ, ಸೋಮರಸವೆನ್ನುವ ಅಶ್ವತ್ಥ, ಅಪರಾಜಿತವೆನ್ನುವ ಬ್ರಹ್ಮಪುರ, ಸುವರ್ಣಮಯವಾದ ಹಿರಣ್ಯ ಗರ್ಭ, ಪ್ರಭುನಿರ್ಮಿತ ಸಭಾಮಂಟಪ ಇವೆ. ಬ್ರಹ್ಮಲೋಕದಲ್ಲಿರುವ "ಅರ" ಮತ್ತು 'ಣ್ಯ' ಎನ್ನುವ ಸಮುದ್ರಗಳನ್ನು ಹೊಂದುವವರೇ, ಬ್ರಹ್ಮಲೋಕದಲ್ಲಿ ಬ್ರಹ್ಮಲೋಕದ ಯಜಮಾನರು. ಅವರಿಗೆ ಸರ್ವಲೋಕಗಳಲ್ಲಿ ಸ್ವತಂತ್ರವಾಗಿ, ಸಂಚರಿಸುವ ಶಕ್ತಿಯಿದೆ.

## ಅಷ್ಟಮಃ ಪ್ರಪಾಠಕಃ – ಷಷ್ಠಃ ಖಂಡಃ

**ಮಂ.ಶ್ಲೋ.॥ ಅಥ ಯಾ ಹೃದಯಸ್ಯ ನಾಡ್ಯಸ್ತಾಃ ಪಿಙ್ಗಳಸ್ಯಾಣಿಮ್ನಸ್ತಿಷ್ಠನ್ತಿ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯೇತ್ಯಸೌ ವಾ ಆದಿತ್ಯಃ ಪಿಙ್ಗಳ ಏಷ ಶುಕ್ಲ ಏಷ ನೀಲ ಏಷ ಪೀತ ಏಷ ಲೋಹಿತಃ (1) ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಞ್ಚಾಮುಂಚೈವ-ಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛನ್ತೀಮಞ್ಚಾಮುಞ್ಚಾಮುಷ್ಮಾ-ದಾದಿತ್ಯಾತ್ ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯನ್ತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ (2) ತದ್ಯತ್ರೈತತ್ಸುಪ್ತಸ್ಸಮಸ್ತಸ್ಸಂ ಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ ತನ್ನ ಕಶ್ಚನ ಪಾಪ್ಮಾ ಸ್ಪೃಶತಿ ತೇಜಸಾ ಹಿ ತದಾ ಸಂಪನ್ನೋ ಭವತಿ (3)**

ತಾ : ಸೂರ್ಯನಲ್ಲಿನ ಪಿಂಗಳ (ಹಳದಿ) ಶುಕ್ಲ, ನೀಲ, ಪೀತ, ಲೋಹಿತ ವರ್ಣಗಳು ವಿವಿಧ ಕಿರಣಗಳಿಂದ ಕಾಣಸುವಂತೆ, ಈ ಹೃದಯದಿಂದ ಹೊರಬಂದ ನಾಡಿಗಳು ಪಿಂಗಳ, ಶುಕ್ಲ, ನೀಲ, ಪೀತ, ಲೋಹಿತಗಳೆನ್ನುವ ವರ್ಣಗಳನ್ನುಳ್ಳ ರಸಗಳಿಂದ ತುಂಬಿ ಆಯಾ ಬಣ್ಣಗಳು ಇರುವಂತಹುದ್ದಾಗಿ ಪ್ರಕಾಶಿಸುತ್ತಿವೆ. ಒಂದು ದೊಡ್ಡ ರಾಜಮಾರ್ಗವು ಸಮೀಪದಲ್ಲಿ ಇರುವ ಗ್ರಾಮಕ್ಕೂ ಹೋಗುವುದು. ಮತ್ತೆ ಸುದೂರದಲ್ಲಿರುವ ಗ್ರಾಮಕ್ಕೂ ಸಹ ಆ ರಾಜಮಾರ್ಗವೇ ಹೋಗುತ್ತದೆ. ಅದೇ ರೀತಿಯಾಗಿ ಸೂರ್ಯ ಕಿರಣಗಳು ಇಹಪರಗಳೆನ್ನುವ ಎರಡು ಲೋಕಗಳಿಗೂ ಹೋಗುತ್ತವೆ. ಆ ಸೂರ್ಯನ ಬಹಿರ್ಗತವಾದ ಕಿರಣಗಳು ಈ ನಾಡಿಗಳಲ್ಲಿ ಸೇರುತ್ತವೆ. ಈ ನಾಡಿಗಳಿಂದ ಪ್ರಸರಿಸುವ ಕಿರಣಗಳು ಆ ಸೂರ್ಯನನ್ನು ಸೇರುತ್ತಿರುತ್ತವೆ. ಮಾನವನು ಗಾಢ ನಿದ್ರೆಯಲ್ಲಿರುವಾಗ (ಜಾಗ್ರದವಸ್ಥೆಯಲ್ಲಿರು-

ವಾಗ) ಸ್ವಪ್ನವನ್ನು ಕಾಣಲಾರ. ಆ ಸಮಯದಲ್ಲಿ ಜೀವನು ಈ ನಾಡಿಗಳಲ್ಲಿ ಸೇರಿ ಗುಪ್ತವಾಗಿರುವನು. ಆಗ ಈ ಜೀವಿಗೆ ಎಂತಹ ಪಾಪವೂ ಅಂಟುವುದಿಲ್ಲ. ಏಕೆಂದರೆ ಆ ಜೀವನು ತೇಜೋವಂತ-ನಾಗಿರುತ್ತಾನೆ.

ಮಂ.ಶ್ಲೋ.॥ ಅಥ ಯತ್ರೈತದಬಲಿಮಾನಂ ನೀತೋ ಭವತಿ ತಮಭಿತ ಆಸೀನಾ ಆಹುರ್ಜಾನಾಸಿ ಮಾಂ ಜಾನಾಸಿ ಮಾಮಿತಿ ಸ ಯಾವದಸ್ಮಾಚ್ಛರೀರಾದನುತ್ಕ್ರಾನ್ತೋ ಭವತಿ ತಾವಜ್ಜಾನಾತಿ(4) ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವ ಮಾಕ್ರಮತೇ ಸ ಓಮಿತಿ ವಾ ಹೋದ್ವಾ ಮೀಯತೇ ಸ ಯಾವತ್‌ಕ್ಷಿಪ್ಯೇನ್ಮನಸ್ತಾವದಾದಿತ್ಯಂಗಚ್ಛತೇ ತದ್ವೈ ಖಲು ಲೋಕದ್ವಾರಂ ವಿದುಷಾಂ ಪ್ರಪದನಂ ನಿರೋಧೋಽವಿದುಷಾಮ್ (5) ತದೇಷ ಶ್ಲೋಕಃ, ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ, ತಯೋರ್ಧ್ವ -ಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತ್ಯುತ್ಕ್ರಮಣೇ ಭವನ್ತಿ (6)

ತಾಃ ಮಾನವನು ಕೇವಲ ದುರ್ಬಲವಾಗಿ, ಮರಣ ಸನ್ನಿಹಿತವಾದಾಗ ಅವನ ಸುತ್ತುಮುತ್ತ-ಲಿರುವವರು ನಾನ್ಯಾರು? ನಾನ್ಯಾರು? ಎಂದು ಕೇಳುವರು. ದೇಹದಲ್ಲಿ ಜೀವನಿರುವವರೆಗೂ, ಆತ ಅವರನ್ನು ಗುರುತುಹಿಡಿಯಬಲ್ಲ, ಈ ದೇಹವನ್ನು ಬಿಟ್ಟು ಹೋಗುತ್ತಿರುವಾಗ ಆತನು ಈ ಕಿರಣಗಳ ಮೂಲಕ ಹೋಗುವನು. ಓಂ ಎಂದು ಉಚ್ಚರಿಸುತ್ತಾ ಮೇಲಕ್ಕೆ ಹೋಗುವನು. ಎಲ್ಲಿಯವರೆಗೆ ಮನಸ್ಸು ಹೋಗುವುದೋ ಅಲ್ಲಿವರೆಗೆ ಆತ ಆದಿತ್ಯ ಲೋಕಕ್ಕೆ ಹೋಗುವನು. ಇದೇ ಆದಿತ್ಯ ಲೋಕಕ್ಕೆ ದ್ವಾರ. ಜ್ಞಾನಿಗಳು, ಆ ದ್ವಾರವನ್ನು ದಾಟಿ ಹೋಗುವರು. ಅಜ್ಞಾನಿಗಳು ಅಲ್ಲಿಯೇ ತಡೆಯುವುದರಿಂದ ನಿಂತುಬಿಡುವರು. ಈ ವಿಷಯದಲ್ಲಿ ಮಂತ್ರವು ಇದೆ. ಹೃದಯದಿಂದ 101 ನಾಡಿಗಳು ಹೊರಬರುತ್ತದೆ. ಅವುಗಳಲ್ಲಿ ಒಂದು ನಾಡಿ (ಸುಷುಮ್ನ)ಮೂರ್ಧಕ್ಕೆ (ನೆತ್ತಿಯ ಮೇಲ್ಭಾಗ) ಹೋಗುವುದು. ಆ ದ್ವಾರದಿಂದ ಹೋಗುವವನು ಅಮೃತ ಸ್ವರೂಪನಾಗುವನು. ಉಳಿದ ನಾಡಿಗಳು ಹಲವು ದಿಕ್ಕುಗಳಿಗೆ ಕೊಂಡೊಯ್ಯುತ್ತವೆ.

## ಅಷ್ಟಮ ಪ್ರಪಾಠಕ – ಸಪ್ತಮ ಖಂಡ

ಮಂ.ಶ್ಲೋ.॥ ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸ-ಸ್ಸತ್ಯಕಾಮಸ್ಸತ್ಯಸಙ್ಕಲ್ಪಸ್ಸೋಽನ್ವೇಷ್ಟವ್ಯಸ್ಸ ವಿಜಿಜ್ಞಾಸಿತವ್ಯಸ್ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ (1) ತದ್ಧೋಭಯೇ ದೇವಾಸುರಾ ಅನುಬುಬುಧಿರೇ ತೇ ಹೋಚುರ್ಹಂತ ತಮಾತ್ಮಾನಮನ್ವಿಚ್ಛಾ -ಮೋಯಮಾತ್ಮಾನಮನ್ವಿಷ್ಯ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನಿತೀನ್ದ್ರೋ ಹೈವ ದೇವಾನಾಮಭಿಪ್ರವವ್ರಾಜ ವಿರೋಚನೋಽಸುರಾಣಾನ್ತೌ ಹಾ ಸಂವಿದಾನಾವೇವ ಸಮಿತ್ಪಾಣೀ ಪ್ರಜಾಪತಿ ಸಕಾಶಮಾಜಗ್ಮತುಃ (2)

ತಾ : ಆತ್ಮವು ಪಾಪರಹಿತವಾದುದು. ಮುಪ್ಪಿಲ್ಲದಂತಹುದು. ದುಃಖವಿಲ್ಲದ್ದು, ಹಸಿವು ನೀರಡಿಕೆ-

ಗಳಿಲ್ಲದಂತಹುದು. ಆ ಆತ್ಮವು ಸತ್ಯಕಾಮವು, ಸತ್ಯಸಂಕಲ್ಪವು ಆಗಿದೆ. ಇಂತಹ ಆತ್ಮವನ್ನು ಶ್ರದ್ಧೆಯಿಂದ ಹುಡುಕಿ ತಿಳಿದುಕೊಳ್ಳಬೇಕು. ಈ ರೀತಿಯಾಗಿ ತಿಳಿದುಕೊಂಡವನು ಎಲ್ಲ ಲೋಕಗಳನ್ನು, ಎಲ್ಲ ಕೋರಿಕೆಗಳನ್ನು, ಹೊಂದುವನೆಂದು ಪ್ರಜಾಪತಿಯು ಹೇಳಿದನು. ದೇವತೆಗಳು, ರಾಕ್ಷಸರು, ಉಭಯರೂ ಕೇಳಿದವರಾಗಿ ಎಲ್ಲ ಕೋರಿಕೆಗಳನ್ನು ಎಲ್ಲ ಲೋಕಗಳನ್ನು ಹೊಂದಬಲ್ಲ ಆ ಬ್ರಹ್ಮವನ್ನು ತಿಳಿದು ಕೊಳ್ಳುವುದಕ್ಕೆ ಪ್ರಯತ್ನಿಸುತ್ತೇವೆ, ಎಂದು ತಿಳಿಸಿದರು. ದೇವತೆಗಳ ಪಕ್ಷದಿಂದ ಇಂದ್ರನು, ರಾಕ್ಷಸರ ಪಕ್ಷದಿಂದ ವಿರೋಚನನು ಹೋದರು. ಒಬ್ಬರಿಗೆ ತಿಳಿಯದಂತೆ ಮತ್ತೊಬ್ಬರು ಸಮಿತ್ಪಾಣಿಗಳಾಗಿ, ದೇವೇಂದ್ರ, ವಿರೋಚನ ಇಬ್ಬರೂ ಪ್ರಜಾಪತಿ ಬ್ರಹ್ಮನನ್ನು ಸಮೀಪಿಸಿದರು.

**ಮಂ.ಶ್ಲೋ.॥ ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತು ಸ್ತೌ ಹ ಪ್ರಜಾಪತಿರುವಾಚ ಕಿಮಿಚ್ಛನಾ -ವವಾಸ್ತಮಿತಿ ತೌ ಹೋಚತುರ್ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಙ್ಕಲ್ಪಸ್ಸೋಽನ್ವೇಷ್ಟವ್ಯ ಸ್ಸ ವಿಜಿಜ್ಞಾಸಿತವ್ಯ ಸ್ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಭಗವತೋ ವಚೋ ವೇದಯನ್ತೇತಮಿಚ್ಛನ್ತಾ ವವಾಸ್ತಮಿತಿ (3) ತೌ ಹ ಪ್ರಜಾಪತಿರುವಾಚ ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯ -ಮೇತದ್ಬ್ರಹ್ಮೇತ್ಯಥ ಯೋಽಯಂ ಭಗವೋಽಪ್ಸು ಪರಿಖ್ಯಾಯತೇ ಯಶ್ಚಾಯ ಮಾದರ್ಶೇಕತಮ ಏಷ ಇತ್ಯೇಷ ಉ ಏವೈಷು ಸರ್ವೇಷ್ವನ್ತೇಷು ಪರಿಖ್ಯಾಯತ ಇತಿ ಹೋವಾಚ (4)**

ತಾ : ದೇವೇಂದ್ರ, ವಿರೋಚನರಿಬ್ಬರೂ ಬ್ರಹ್ಮದೇವನ ಸಾನ್ನಿಧ್ಯದಲ್ಲಿ ಮೂವತ್ತೆರಡು ವರ್ಷಗಳ ಕಾಲ ಬ್ರಹ್ಮಚರ್ಯ ದೀಕ್ಷೆಯೊಂದಿಗೆ ತಪಸ್ಸು ಮಾಡಿದರು. "ನೀವು ಯಾವ ಕೋರಿಕೆಯನ್ನು ಇಟ್ಟುಕೊಂಡು ಇಲ್ಲಿಗೆ ಬಂದಿದ್ದೀರಿ?" ಎಂದು ಪ್ರಜಾಪತಿಯು ಕೇಳಿದ. ಆಗ ಅವರಿಬ್ಬರೂ, "ಪಾಪ-ರಹಿತವಾದ, ಜರಾಮರಣ ರಾಹಿತ್ಯವಾದ, ದುಃಖರಹಿತವಾದ, ಕ್ಷುತ್ಪಿಪಾಸಾರಹಿತವಾದ, ಸತ್ಯಕಾಮ-ವಾದಂತಹ ಬ್ರಹ್ಮತತ್ತ್ವವನ್ನು ತಿಳಿದುಕೊಳ್ಳಲು ಇಲ್ಲಿಗೆ ಬಂದಿದ್ದೇವೆ" ಎಂದರು. ಆಗ ಪ್ರಜಾಪತಿಯು ಅವರೊಂದಿಗೆ ಹೀಗೆ ನುಡಿದ "ಈ ನೇತ್ರಗಳಲ್ಲಿ ದರ್ಶನ ಕೊಡುತ್ತಿರುವ ಪುರುಷನೇ ಆತ್ಮ. ಇದು ಅಮೃತ. ಅಭಯ, ಪರಬ್ರಹ್ಮ" ಎಂದು ಬೋಧಿಸಿದ. "ಓ ಭಗವಂತಾ! ನಿನ್ನಲ್ಲಿಯೂ, ಆ ಕನ್ನಡಿಯಲ್ಲೂ ಕಾಣಿಸುತ್ತಿರುವ ಪುರುಷನ್ಯಾರು? ಎಂದು ಪ್ರಶ್ನಿಸಿದರು. ಆತನೇ ಈ ಸರ್ವದಲ್ಲೂ ಕಾಣಿಸು-ವಂತಹವನು ಎಂದು ಪ್ರಜಾಪತಿ ಬ್ರಹ್ಮನು ಹೇಳಿದ.

## ಅಷ್ಟಮ ಪ್ರಪಾಠಕ - ಅಷ್ಟಮ ಖಂಡ

**ಮಂ.ಶ್ಲೋ.॥ ಉದಶರಾವ ಆತ್ಮಾನಮವೇಕ್ಷ್ಯ ಯದಾತ್ಮನೋ ನವಿಜಾನೀಥಸ್ತನ್ಮೇ ಪ್ರಬ್ರೂತಮಿತಿ ತೌ ಹೋದಶರಾವೇಽವೇಕ್ಷಾಂ ಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ ತೌ ಹೋಚತುಸ್ಸರ್ವಮೇವೇದಮಾವಾಂ ಭಗವ ಆತ್ಮಾನಂ ಪಶ್ಯಾವ ಆ ಲೋಮಭ್ಯ ಆ ನಖೇಭ್ಯಃ**

**ಪ್ರತಿರೂಪಮಿತಿ (1) ತೌ ಹ ಪ್ರಜಾಪತಿರುವಾಚ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೇದ ಶರಾವೇऽವೇಕ್ಷೇಥಾಮಿತಿ ತೌ ಹ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ಯೇದಶರಾವೇऽವೇಕ್ಷಾಂ ಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ (2) ತೌ ಹೋಚತುರ್ಯಥೈವೇದ ಮಾವಾಂ ಭಗವಸ್ಸಾಧ್ಯಲಂಕೃತೌ ಸುವಸನೌ ಪರಿಷ್ಕೃತೌ ಸ್ವ ಏವಮೇವೇಮೌ ಭಗವಸ್ಸಾಧ್ಯಲಙ್ಕೃತೌ ಸುವಸನೌ ಪರಿಷ್ಕೃತೌ ವಿತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತೌ ಹ ಶಾನ್ತಹೃದಯೌ ಪ್ರವವ್ರಜತುಃ (3)**

ತಾ : ಜಲಪಾತ್ರೆಯಲ್ಲಿ ನಿಮ್ಮನ್ನು ನೀವು ನೋಡಿಕೊಳ್ಳಿ. ಆತ್ಮವನ್ನು ಕುರಿತು ನಿಮಗೆ ಏನು ತಿಳಿಯಲಿಲ್ಲವೋ ಅದನ್ನು ಮತ್ತೆ ನನ್ನ ಹತ್ತಿರ ಬಂದು ಕೇಳಿರಿ ಎಂದು ಪ್ರಜಾಪತಿಯು ಹೇಳಿದ. ಆನಂತರ ಅವರು ನೀರು ತುಂಬಿದ ಪಾತ್ರೆಯಲ್ಲಿ ತಮ್ಮನ್ನು ತಾವು ನೋಡಿಕೊಂಡರು. ನಿಮಗೇನು ಕಾಣಿಸಿತು ಎಂದು ಪ್ರಜಾಪತಿ ಕೇಳಿದ. ಭಗವನ್! ಅದರಲ್ಲಿ ನಾವು ನಖಶಿಖಪರ್ಯಂತ ನಮ್ಮ ಪೂರ್ಣ ಸ್ವರೂಪವನ್ನು ಕಂಡೆವು ಎಂದು ಹೇಳಿಲು. ಪ್ರಜಾಪತಿಯು ಮತ್ತೆ ಕ್ಷುರಕರ್ಮ ಮಾಡಿಸಿ ಕೊಂಡು ಉತ್ತಮ ವಸ್ತುಗಳನ್ನು ಧರಿಸಿ ಚೆನ್ನಾಗಿ ಅಲಂಕರಿಸಿಕೊಂಡು ನೀರಿನ ಪಾತ್ರೆಯಲ್ಲಿ ನೋಡಿ ಕೊಳ್ಳಿರೆಂದು ಹೇಳಿದ. ಅವರು ಹಾಗೆಯೇ ಮಾಡಿದರು. ಆಗ ಪ್ರಜಾಪತಿಯು ಈಗ ನಿಮಗೇನು ಕಾಣಿಸಿತು ಎಂದು ಕೇಳಿದ. "ಭಗವಂತಾ! ನಾವು ಯಾವ ರೀತಿಯಲ್ಲಿ ಅಲಂಕಾರ ಮಾಡಿಕೊಂಡಿದ್ದೇವೋ ಅದೇ ರೀತಿಯಾಗಿಯೇ ಈ ಜಲದಲ್ಲಿ ನಮ್ಮ ಪ್ರತಿಬಿಂಬಗಳು ಕಾಣಿಸುತ್ತಿವೆ. ಆಗ ಪ್ರಜಾಪತಿಯು ಆತನೇ ಆತ್ಮ. ಅದೇ ಅಮೃತ, ಅಭಯ. ಪರಬ್ರಹ್ಮ ಎಂದು ಬೋಧಿಸಿದ. ಅವರಿಬ್ಬರೂ ಸಮಾಧಾನ ಹೊಂದಿದವರಾಗಿ ಶಾಂತ ಮನಸ್ಕರಾಗಿ ಹೊರಟುಹೋದರು.

**ಮಂ. ಶ್ಲೋ.॥ ತೌ ಹಾನ್ವೀಕ್ಷ್ಯ ಪ್ರಜಾಪತಿರುವಾಚ ಅನುಪಲಭ್ಯಾತ್ಮಾನಮನನುವಿದ್ಯವ್ರಜತೋಯತರ ಏತದುಷದೋ ಭವಿಷ್ಯನ್ತಿ ದೇವಾವಾऽಸುರಾವತೇ ಪರಾಭವಿಷ್ಯನ್ತೀತಿ ಸಹಶಾಂತಹೃದಯ ಏವ ವಿರೋಚನೋऽಸುರಾನ್ ಜಗಾಮ ತೇಭ್ಯೋ ಹ್ಯೆತಾಮುಪನಿಷದಂ ಪ್ರೋವಾಚಾತ್ಮೈ-ವೇಹ ಮಹಯ್ಯ ಆತ್ಮಾಪರಿಚರ್ಯ ಆತ್ಮಾನಮೇವೇಹ ಮಹಯನ್ನಾತ್ಮಾನಂ ಪರಿಚರ-ನ್ನುಭೌಲೋಕಾಮವಾಪ್ನೋತಿ ಮಂಚಾಮುಂಚೇತಿ (4) ತಸ್ಮಾದಪ್ಯದ್ಯೇಹಾದದಾನ-ಮಶ್ರದ್ಧಧಾನಮಯಜಮಾನಮಾಹುರಾಸುರೋ ಬತೇತ್ಯಸುರಾಣಾಂ ಹ್ಯೇಷೋಪನಿಷತ್ ಪ್ರೇತಸ್ಯ ಶರೀರಂ ಭಿಕ್ಷಯಾ ವಸನೇನಾಲಂಕಾರೇಣೇತಿ ಸಂಸ್ಕುರ್ವನ್ತ್ಯೇತೇನ ಹ್ಯಮುಂ ಲೋಕಂ ಜೇಷ್ಯನ್ತೋ ಮನ್ಯಂತೇ (5)**

ತಾ : ಅವರಿಬ್ಬರೂ ಅಲ್ಲಿಂದ ಹೊರಟುಹೋದ ನಂತರ ಪ್ರಜಾಪತಿಯು ಅವರು ಹೋದ ಕಡೆಯೇ ನೋಡುತ್ತಾ ಈ ರೀತಿಯಾಗಿ ಭಾವಿಸಿದ. ಆತ್ಮಜ್ಞಾನವನ್ನು ಪೂರ್ತಿಯಾಗಿ ತಿಳಿದು ಕೊಳ್ಳದೆಯೇ ಅವರಿಬ್ಬರೂ ಇಲ್ಲಿಂದ ಹೋಗುತ್ತಿದ್ದಾರೆ. ಯಾರು ಈಗ ಹೇಳಿರುವುದನ್ನೇ ಪೂರ್ಣ

ಬ್ರಹ್ಮಜ್ಞಾನವೆಂದು ಭಾವಿಸುವರೋ ಅಂತಹವರು, ರಾಕ್ಷಸರಾದರೂ, ದೇವತೆಗಳಾದರೂ ನಾಶವಾಗು-ತ್ತಾರೆ. ಅದು ದೇಹಾತ್ಮಜ್ಞಾನ ಬುದ್ಧಿಯೇ ಅಲ್ಲವೇ? ವಿರೋಚನನು ಮನಸ್ಸನ್ನು ಸಮಾಧಾನಗೊಳಿಸಿ ಕೊಂಡು ರಾಕ್ಷಸರ ಬಳಿಗೆ ಹೋಗಿ ಈ ಜ್ಞಾನವನ್ನು ಬೋಧಿಸಿದ. ಆತ್ಮವೆಂದರೆ ಛಾಯೆ ಮಾತ್ರವೇ! ಛಾಯಾತ್ಮವನ್ನೇ ಪೂಜಿಸಬೇಕು. ಈ ಆತ್ಮವನ್ನೇ ಸೇವಿಸಬೇಕು. ಈ ರೀತಿಯಾಗಿ ಛಾಯಾತ್ಮವನ್ನು ಸೇವಿಸಿ ಪೂಜಿಸಿದಲ್ಲಿ ಮಾನವನು ಇಹಪರ ಲೋಕಗಳನ್ನು ಹೊಂದುವನು. ಆದ್ದರಿಂದ ತ್ಯಾಗಬುದ್ಧಿ-ಯಿಲ್ಲದವನನ್ನು, ಯಜ್ಞವನ್ನು ಮಾಡದಿರುವವರನ್ನು, ಪ್ರಜೆಗಳು ರಾಕ್ಷಸರೆಂದು ಕರೆಯುವರು. ರಾಕ್ಷಸರ ತತ್ತ್ವಜ್ಞಾನವು ಈ ಪ್ರಕಾರವಾಗಿದೆ. ಅವರು ಸತ್ತುಹೋದವನ ಶರೀರವನ್ನು ಅನ್ನ ವಸ್ತ್ರಾದಿ ಅಲಂಕಾರಗಳಿಂದ ಅಲಂಕರಿಸುತ್ತಾರೆ. ಮತ್ತೆ ಈ ರೀತಿಯಾಗಿ ಮಾಡುವುದರಿಂದ ಆತನು ಪರಲೋಕವನ್ನು ಹೊಂದುವನೆಂದೂ ಹೇಳುತ್ತಾರೆ.

## ಅಷ್ಟಮ ಪ್ರಪಾಠಕ – ನವಮ ಖಂಡ

**ಮಂ.ಶ್ಲೋ.॥ ಅಥ ಹೇನ್ದ್ರೋಽಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ಯಥೈವ ಖಲ್ವಯಮಸ್ಮಿನ್ ಶರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತಃ ಏವಮೇವಾಯಮಸ್ಮಿನ್ನನ್ಧೇಽನ್ಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ನಾಹಮತ್ರಭೋಗ್ಯಂ ಪಶ್ಯಾಮೀತಿ (1)**

ತಾ : ಆಗ ದೇವತೆಗಳ ಬಳಿಗೆ ಹೋಗುವಷ್ಟರಲ್ಲೇ ಇಂದ್ರನಿಗೆ ಈ ರೀತಿಯಾಗಿ ಉಂಟಾದ ಸಂದೇಹದಿಂದ ಭಯವಾಯಿತು. ಈ ಶರೀರವು ಅಲಂಕರಿಸಿಕೊಂಡಾಗ, ಅದು ಶೃಂಗಾರವಾಗಿ ಅಲಂಕಾರ ಮಾಡಿದಂತೆ, ಉತ್ತಮ ವಸ್ತ್ರಗಳನ್ನು ಧರಿಸಿದ್ದರಿಂದ, ಶರೀರಕ್ಕೆ ಕ್ಷುರಕರ್ಮ ಮಾಡಿದಾಗ ಶುಭ್ರವಾಗಿ ಕ್ಷುರಕರ್ಮ ಮಾಡಿಕೊಂಡಂತೆ ಕಾಣುವುದು. ಅದೇ ರೀತಿ ಈ ದೇಹ ಕುರುಡಾಗಿದ್ದರೆ ಕುರುಡಾಗಿ ಕಾಣುವುದು. ಕಣ್ಣು ಮೂಗು ನೇರವಾಗಿಲ್ಲದೆ ಅಸಹ್ಯವಾಗಿ ಕಾಣಿಸಿದಾಗ ಅದರಿಂದಲೇ ವಿಕಾರವಾಗಿ ಕಾಣುವುದು. ಶರೀರವು ಕುಂಟನಾದಾಗ ಅಂಗಹೀನವಾಗಿ ಕಾಣಿಸುವುದು. ಈ ಶರೀರವು ನಾಶವಾದಾಗ ಕೂಡಲೇ ಅದು ಮರಣಿಸುವುದಲ್ಲವೇ? ಇದು ಆತ್ಮವಾಗುವುದಕ್ಕೆ ಸಾಧ್ಯವೇ?

**ಮಂ.ಶ್ಲೋ.॥ ಸ ಸಮಿತ್ಪಾಣಿಃ ಪುನರೇಯಾಯ ತಂ ಹ ಪ್ರಜಾಪತಿರುವಾಚ ಮಘವನ್ಯಚ್ಛಾಂತ ಹೃದಯಃ ಪ್ರಾವ್ರಾಜೀಸ್ಸಾರ್ಧಂ ವಿರೋಚನೇನ ಕಿಮಿಚ್ಛ ಪುನರಾಗಮ ಇತಿ ಸ ಹೋವಾಚ ಯಥೈವ ಖಲ್ವಯಂ ಭಗವೋಽಸ್ಮಿಞ್ಛರೀರೇ ಸಾಧ್ಯಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನನ್ಧೇಽನ್ಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ (2) ಏವಮೇವೈಷ ಮಘವನ್ನಿತಿ ಹೋವಾಚೈತನ್ತ್ವೇವ ತೇ ಭೂಯೋಽನು**

**ವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಂಶತಂ ವರ್ಷಾಣೀತಿ ಸ ಹಾಪರಾಣಿ ದ್ವಾತ್ರಿಂಶತಂ ವರ್ಷಾಣ್ಯುವಾಸ ತಸ್ಮೈ ಹೋವಾಚ (3)**

ತಾ : ಹಾಗಾಗಿ ದೇವೇಂದ್ರನು "ನಾನು ಯಥಾರ್ಥವನ್ನು, ಸತ್ಯವನ್ನು ಗುರುತಿಸಿಲ್ಲ. ಇದು ಆತ್ಮವಾಗುವುದಕ್ಕೆ ಸಾಧ್ಯವಾಗುವುದಿಲ್ಲ" ಎಂದು ಸಂದೇಹಪಟ್ಟು ಸಮಿತ್ಪಾಣಿಯಾಗಿ ಮತ್ತೆ ಪ್ರಜಾಪತಿ ಬ್ರಹ್ಮನ ಬಳಿಗೆ ಬಂದನು. ಆಗ ಪ್ರಜಾಪತಿಯು ವಿರೋಚನನ ಜೊತೆ ಸಮಾಧಾನ ಹೊಂದಿ ಹೊರಟುಹೋದ. ನೀನು ಮತ್ತೆ ಏಕೆ ಬಂದೆ?" ಎಂದು ಕೇಳಿದ. ದೇವೇಂದ್ರನು "ಭಗವನ್ ಈ ದೇಹವನ್ನು ಸುಂದರವಾಗಿ ಅಲಂಕರಿಸಿದಾಗ, ಛಾಯಾತ್ಮ ಕೂಡಾ ಸುಂದರವಾಗಿ ಕಾಣಿಸುತ್ತದೆ. ಅಲಂಕಾರ ಮಾಡದಿದ್ದಾಗ ಛಾಯೆಯೂ ಸಹ ವಿಕಾರವಾಗಿ ಕಾಣುತ್ತದೆ. ಅಷ್ಟೇಕೆ? ಸಮಸ್ತ ಪರಿಣಾಮಗಳು ನಾಶವಾದಾಗ ಎಲ್ಲವೂ ನಶಿಸುತ್ತವೆ. ಈ ವಿಷಯವನ್ನು ಗ್ರಹಿಸಿ ನಾನು ಶುಭವನ್ನು ನೋಡಲಾರದೆ ಹೋದೆ. "ದೇವೇಂದ್ರಾ, ಆ ಮಾತು ನಿಜ? ಈ ರೀತಿಯಾಗಿಯೇ ಇದೆ. ಈ ವಿಷಯವನ್ನು ನಿನಗೆ ಪುನಃ ಬೋಧಿಸುತ್ತೇನೆ. ಮತ್ತೆ 32 ವರ್ಷ ಬ್ರಹ್ಮಚರ್ಯ ದೀಕ್ಷೆಯನ್ನು ತಪಸ್ಸು ಮಾಡು. ಎಂದು ಪ್ರಜಾಪತಿಯು ಹೇಳಿದ. ದೇವೇಂದ್ರನು ಅದೇ ರೀತಿಯಾಗಿ ವ್ರತದಲ್ಲಿ ತೊಡಗಿದ.

## ಅಷ್ಟಮ ಪ್ರಪಾಠಕ – ದಶಮ ಖಂಡ

ಮಂ.ಶ್ಲೋ.॥ **ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮೇತಿ ಹೋವಾಚೈತದಮೃತಮಭಯ –ಮೇತದ್ಬ್ರಹ್ಮೇತಿ ಸ ಹ ಶಾಂತಹೃದಯಃ ಪ್ರವವ್ರಾಜ ಸ ಹಾಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ತದ್ಯದ್ಯಪೀದಂ ಶರೀರಮನ್ಧಂ ಭವತ್ಯನ್ಧಂಸ್ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯದೋಷೇಣ ದುಷ್ಯತಿ (1) ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನಂತಿ ತ್ವೇವೈನಂ ವಿಚ್ಛಾದಯನ್ತೀವಾ ಪ್ರಿಯ ವೇತ್ತೇವ ಭವತ್ಯಪಿರೋದಿತೀವ ನಾಹಮತ್ರಭೋಗ್ಯಂ ಪಶ್ಯಾಮೀತಿ (2) ಸ ಸಮಿತ್ಪಾಣಿಃ ಪುನರೇಯಾಯ ತಂ ಹ ಪ್ರಜಾಪತಿರುವಾಚ ಮಘವನ್ಯಚ್ಛಾನ್ತಹೃದಯಃ ಪ್ರಾವ್ರಾಜೀಃ ಕಿಮಿಚ್ಛ ಪುನರಾಗಮ ಇತಿ ಸ ಹೋವಾಚ ತದ್ಯದ್ಯಪೀದಂ ಭಗವಶ್ಶರೀರಮಂಧಂ ಭವತ್ಯನಂಧಸ್ಸಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ (3)**

ತಾ : ಸ್ವಪ್ನದಲ್ಲಿ ಆದಿಕ್ಯವನ್ನು ಹೊಂದಿ ವಿಹರಿಸುವುದೇ ಆತ್ಮ. ಅದೇ ಅಮೃತವು, ಅಭಯವು. ಬ್ರಹ್ಮವೆಂದು ತಿಳಿಸಿದ. (ಇಲ್ಲಿ ಸ್ವಪ್ನದಲ್ಲಿರುವ ಆತ್ಮವೆಂಬ ತೈಜಸನಾದ ಜೀವವೆಂದು ಮಾತ್ರವೇ ಅರ್ಥ) ಈ ವಿಚಾರವನ್ನು ಆಲಿಸಿದ ಇಂದ್ರ ಸಮಾಧಾನ ಹೊಂದಿ ಹೊರಟುಹೋದ. ಆದರೆ ದೇವತೆಗಳ ಬಳಿಗೆ ಹೋಗಿ, ಅವರನ್ನು ತಲುಪುವಷ್ಟರಲ್ಲಿ ಮತ್ತೆ ಇಂದ್ರನಿಗೆ ಸಂದೇಹವುಂಟಾಗಿ ಭಯವೇರ್ಪಟ್ಟಿತು. ಈ ಶರೀರವು ಕುರುಡಾದಾಗ ಆ ಸ್ವಪ್ನದಲ್ಲಿನ ಆತ್ಮವು ಕುರುಡಾಗಿರುವುದಿಲ್ಲ. ಶರೀರದಲ್ಲಿ ನೇತ್ರಾದಿ ದ್ವಾರಗಳಿಂದ ತ್ಯಾಜ್ಯಗಳು ಸೋರುತ್ತಿರುವುವು. ಅದರ ಮೂಲಕ ಏನೂ

ಪ್ರವಿಸುವುದಿಲ್ಲ. ಆದ್ದರಿಂದ ಇದು ಕೂಡ ದೇಹದೋಷದಿಂದ ದೂಷಿತವಾಗುತ್ತದೆ. ದೇಹವು ವಧಿಸಲ್ಪಟ್ಟರೂ ಅದು ವಧಿಸಲ್ಪಡುವುದಿಲ್ಲ. ಶರೀರದ ಪರಿತಾಪ(ರೋದನೆ)ದಿಂದ ಅದು ಪರಿತಾಪ-ಪಡುವುದಿಲ್ಲ. ಹಾಗೆ, ಆತ್ಮವಲ್ಲ ದುಃಖ ಪಡುವಹಾಗೆ, ಅಳುತ್ತಿರುವಂತೆ ಕಾಣಿಸುವುದು. ಆದ್ದರಿಂದ ಇದರಲ್ಲಿ ನಾನು ಯಾವ ಪವಿತ್ರ ಸತ್ಯವನ್ನೂ ನಿರೂಪಿಸುವುದಿಲ್ಲ. (ಹೇಳುವುದಿಲ್ಲ) ಈ ಸ್ವಪ್ನಾತ್ಮವು ಆತ್ಮವಲ್ಲವೆಂಬ ಸಂದೇಹವುಂಟಾಯಿತು. ಇಂತಹ ಸಂದೇಹ ನಿವೃತ್ತ್ಯರ್ಥವಾಗಿ ಮತ್ತೆ ಕೈ ಜೋಡಿಸಿ ಪ್ರಜಾಪತಿಯ ಬಳಿಗೆ ಹೋದ. "ಓ ದೇವೇಂದ್ರ! ಸಮಾಧಾನ ಹೊಂದಿ ಹೊರಟೆಯಲ್ಲ. ಮತ್ತೆ ಬಂದಿದ್ದೇಕೆ? ಎಂದು ಪ್ರಜಾಪತಿ ಪ್ರಶ್ನಿಸಿದ. "ಭಗವನ್! ಈ ದೇಹವು ಕುರುಡಾದಾಗ ಸ್ವಪ್ನಾತ್ಮ ಕುರುಡಾಗುವುದಿಲ್ಲ. ದೇಹೇಂದ್ರಿಯಗಳಿಂದ ಮಲವು ಪ್ರವಿಸುತ್ತಿರುವಾಗ, ಸ್ವಪ್ನಾತ್ಮವು ಮಲವುಳ್ಳದ್ದಾ-ಗಿರುವುದಿಲ್ಲ. ಈ ಸ್ವಪ್ನಾತ್ಮವು ದೇಹೇಂದ್ರಿಯ (ದೋಷ)ಗಳೊಂದಿಗೆ ದೂಷಿತವಾಗುವುದಿಲ್ಲ. (ಸ್ವಪ್ನಾತ್ಮವು ಬ್ರಹ್ಮವಲ್ಲವೆಂದು ಪ್ರಜಾಪತಿ ಒಪ್ಪಿಕೊಂಡ.)

**ಮಂ.ಶ್ಲೋ.॥ ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನನ್ತಿತ್ವೇವೈನಂ ವಿಚ್ಛಾದಯಂತಿ ನಾ ಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಹಮತ್ರ ಭೋಗ್ಯಂ ಪಶ್ಯಾಮೀತ್ಯೇವ-ಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನು ವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಂಶತಂ ವರ್ಷಾಣೀತಿ ಸಹಾಪರಾಣಿ ದ್ವಾತ್ರಿಂಶತಂ ವರ್ಷಾಣ್ಯುವಾಸ ತಸ್ಮೈ ಹೋವಾಚ (4)**

ತಾ : ಈ ದೇಹವು ವಧಿಸಲ್ಪಟ್ಟರೂ ಇದು ವಧಿಸಲ್ಪಡುವುದಿಲ್ಲ. ದೇಹದ ಮಲಿನದಿಂದ ಅದು ಕೊಳೆಯಾಗುವುದಿಲ್ಲ. ಆದರೂ ಸ್ವಪ್ನದಲ್ಲಿ ಅದು ವಧಿಸಲ್ಪಟ್ಟಂತೆ, ದುಃಖಪಟ್ಟಂತೆ, ಓಡಿಹೋದಂತೆ, ಕಾಣಿಸುತ್ತದೆ. ಆದ್ದರಿಂದ ನಾನು ಶ್ರೇಯಸ್ಸನ್ನು ಹೊಂದುವುದಿಲ್ಲ; ಪ್ರಜಾಪತಿ: "ಈ ಇದು, ಸತ್ಯವೇ ಮತ್ತೆ 32 ವರ್ಷಗಳು ಬ್ರಹ್ಮಚರ್ಯ ದೀಕ್ಷೆಯೊಂದಿಗೆ ಇಲ್ಲಿ ತಪವನ್ನಾಚರಿಸು. ತತ್ತ್ವವನ್ನು ವಿಶದವಾಗಿ ಬೋಧಿಸುವೆನು" ಎಂದನು.

## ಅಷ್ಟಮ ಪ್ರಪಾಠಕ – ಏಕಾದಶ ಖಂಡ

**ಮಂ.ಶ್ಲೋ.॥ ತದ್ಯತ್ರೈತತ್ಸುಪ್ತಸ್ಸಮಸ್ತಸ್ಸಂ ಪ್ರಸನ್ನಃ ನ ವಿಜಾನಾತ್ಯೇಷ ಆತ್ಮೇತಿ ಹೋವಾಚೈತದಮೃತ -ಮಭಯಮೇತದ್ಬ್ರಹ್ಮೇತಿ ಸ ಹ ಶಾನ್ತಹೃದಯಃ ಪ್ರವವ್ರಾಜ ಸಹಾ ಪ್ರಾಪ್ಯೈವ ದೇವಾನೇತ -ದ್ಭಯಂ ದದರ್ಶನಾಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ (1)**

ತಾ : ಯಾವುದು ಸಂಪೂರ್ಣ ಪ್ರಸನ್ನತೆಯೊಂದಿಗೆ ನಿದ್ರಿಸಿದೆಯೋ, ಯಾವುದು ಸ್ವಪ್ನವನ್ನು ಕಾಣುವುದಿಲ್ಲವೋ, ಅದೇ ಆತ್ಮ. ಅದೇ ಅಮೃತ. ಅದೇ ಅಭಯ. ಅದೇ ಬ್ರಹ್ಮವೆಂದು ಹೇಳಿದ. ಇಂದ್ರನು ಆ ಮಾತಿನಿಂದ (ಮಾತಿಗೆ) ಸಮಾಧಾನ ಹೊಂದಿ, ಹೊರಟುಹೋದ, ದೇವತೆಗಳ ಬಳಿ ಹೋಗಿ ಸೇರುವಷ್ಟರಲ್ಲಿ ಮತ್ತೆ ಇಂದ್ರನಿಗೆ ಈ ರೀತಿ ಸಂಶಯವುಂಟಾಗಿ ಭಯವೇರ್ಪಟ್ಟಿತು.

ಇದು ಈ ಸುಷುಪ್ತ್ಯಾತ್ಮ. ಈಗ ಈ ನಿದ್ರೆಯಲ್ಲಿ ನಾನು ಇಂತಹವನೆಂದು ಸ್ಪಷ್ಟವಾಗಿ ತಿಳಿಯಲಾರದು. ಯಾವ ಭೂತಗಳನ್ನು ತಿಳಿದುಕೊಳ್ಳಲಾರದು. ಇದು ನಾಶವನ್ನು ಹೊಂದಿದಂತಿದೆ ಇದರಲ್ಲಿ ನಾನು ಶುಭವನ್ನೇನೂ ಕಾಣುವುದಿಲ್ಲವೆಂದು ಭಾವಿಸಿದ.

**ಮಂ.ಶ್ಲೋ.॥ ಸಮಿತ್ಪಾಣಿಃ ಪುನರೇಯಾಯ ತಂ ಹ ಪ್ರಜಾಪತಿರುವಾಚ ಮಘವನ್ಯಚ್ಛಾನ್ತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ಪುನರಾಗಮ ಇತಿ ಸ ಹೋವಾಚ ನಾಹ ಖಲ್ವಯಂ ಭಗವ ಏವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶ ಮೇ ವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ (2) ಏವಮೇವೈಷ ಮಘವನ್ನಿತಿ ಹೋವಾಚ ಏತನ್ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ನೋ ಏವಾಸ್ಯ ತ್ರೈತಸ್ಮಾದ್ವಸಾಪರಾಣಿ ಪಞ್ಚವರ್ಷಾಣೀತಿ ಸಹಾಪರಾಣಿ ಪಞ್ಚವರ್ಷಾಣ್ಯುವಾಸ ತಾನ್ಯೇಕಶತಂ ಸಂಪೇದುರೇತತ್ತದ್ಯದಾಹುರೇಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯ -ಮುವಾಸ ತಸ್ಮೈ ಹೋವಾಚ (3)**

ತಾ : ಮತ್ತೆ ಈ ಸಂದೇಹವನ್ನು ನಿವಾರಿಸಿಕೊಳ್ಳಲು ಸಮಿತ್ಪಾಣಿಯಾಗಿ ಪ್ರಜಾಪತಿಯ ಬಳಿಗೆ ಹೋದ. "ಓ ಇಂದ್ರನೇ! ಶಾಂತವಾದ ಮನಸ್ಸಿನಿಂದ ಹೊರಟುಹೋದ ನೀನು ಮತ್ತೆ ನನ್ನ ಹತ್ತಿರಕ್ಕೆ ಬಂದಿದ್ದೀಯಲ್ಲ. ಏನು ಕಾರಣ?" ಎಂದು ಪ್ರಶ್ನಿಸಿದ ಪ್ರಜಾಪತಿ. ಭಗವನ್! ನನ್ನನ್ನು ನಾನು ಇಂತಹವನೆಂದು ಈ ಸುಷುಪ್ತಿ ಸ್ಥಿತಿಯಲ್ಲಿ ಸ್ಪಷ್ಟವಾಗಿ ತಿಳಿಯುತ್ತಿಲ್ಲ. ಇತರ ನಿನ್ನ ಯಾವ ಭೂತಗಳನ್ನೂ ತಿಳಿದುಕೊಳ್ಳಲಾಗುವುದಿಲ್ಲ. ಇವು ವಿನಾಶ ಹೊಂದಿದಂತೆ ಇವೆ. ಇದರಲ್ಲಿ ನಾನು ಯಾವ ಶುಭವನ್ನೂ ಕಾಣುತ್ತಿಲ್ಲ ಎಂದು ಹೇಳಿದ. ಈ ಇದು ಸತ್ಯ ಎಂದು ಪ್ರಜಾಪತಿ ಹೇಳಿ, ಈ ವಿಷಯವನ್ನು ನಿನಗೆ ಬೋಧಿಸುತ್ತೇನೆ ಎಂದು ನುಡಿದ. ಇದಕ್ಕೆ ಬೇರೆಯಾಗಿ ಎಲ್ಲಿಯೂ ಯಾವುದೇ ಮತ್ತೊಂದು ಆತ್ಮವಿಲ್ಲ. ಈಗ ಮತ್ತೆ ಐದು ಸಂವತ್ಸರಗಳ ಕಾಲ ಮಾತ್ರ ಬ್ರಹ್ಮಚರ್ಯ ದೀಕ್ಷೆಯೊಂದಿಗೆ ತಪಸ್ಸನ್ನು ಮಾಡು ಎಂದು ಪ್ರಜಾಪತಿಯು ಹೇಳಿದ. ಈ ರೀತಿಯಾಗಿ ದೇವೇಂದ್ರನು ತಪಸ್ಸು ಮಾಡಿದ ಒಟ್ಟು 101 ಸಂವತ್ಸರಗಳು ದೇವೇಂದ್ರನು ಪ್ರಜಾಪತಿಯ ಬಳಿ ತಪಸ್ಸು ಮಾಡಿದ. (ದೇವೇಂದ್ರನು ಸಕಲ ಭೋಗಗಳನ್ನು ಬಿಟ್ಟುಕೊಟ್ಟು 101 ವರ್ಷಗಳ ಕಾಲ ಬ್ರಹ್ಮದೇವನ ಬಳಿ ಕಠೋರ ತಪಸ್ಸನ್ನಾಚರಿಸಿದ. ಆತ್ಮಜ್ಞಾನವನ್ನು ಹೊಂದಲು ಎಷ್ಟು ಕಷ್ಟಗಳನ್ನಾದರೂ ಭರಿಸಬೇಕಾಗುವುದೆಂದು ಇದು ತಿಳಿಯಪಡಿಸುತ್ತದೆ.)

## ಅಷ್ಟಮ ಪ್ರಪಾಠಕ - ದ್ವಾದಶ ಖಂಡ

**ಮಂ.ಶ್ಲೋ.॥ ಮಘವನ್ಮರ್ತ್ಯಂ ವಾ ಇದಂ ಶರೀರಮಾತ್ತಂ ಮೃತ್ಯುನಾ ತದಸ್ಯಾಮೃತಸ್ಯಾ ಶರೀರ ಸ್ಯಾತ್ಮನೋಽಧಿಷ್ಠಾನ ಮಾತ್ತೋ ವೈ ಸ ಶರೀರಃ ಪ್ರಿಯಾ ಪ್ರಿಯಾಭ್ಯಾಂ ನ ವೈ ಸ ಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸನ್ತಂ ನ ಪ್ರಿಯಾ- ಪ್ರಿಯೇ ಸ್ಪೃಶತಃ (1)**

**ಅಶರೀರೋ ವಾಯುರಭ್ರಂ ವಿದ್ಯುತ್ ಸ್ತನಯಿತ್ನುರಶರೀರಾಣ್ಯೇತಾನಿ ತದ್ಯಥೈತಾನ್ಯ-ಮುಷ್ಮಾದಾಕಾಶಾತ್ಸಮುತ್ಥಾಯ ಪರಂಜ್ಯೋತಿರುಪಸಮ್ಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯನ್ತೇ ಏವಮೇವೈಷ ಸಮ್ಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಮ್ಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ (2)**

ತಾ : ಇಂದ್ರಾ! ಈ ದೇಹವು ಮರಣಿಸುವ ಸ್ವಭಾವವುಳ್ಳದ್ದು. ಮೃತ್ಯು ಮುಖದಲ್ಲಿರುತ್ತದೆ. ಈ ದೇಹವು ಅಮೃತವು ಅಶರೀರವಾದ ಆ ಆತ್ಮಕ್ಕೆ ಉಪಾಧಿಯಾಗಿರುತ್ತದೆ. ಈ ಆತ್ಮವು ದೇಹದಲ್ಲಿ ಇರುವಾಗ ಅಹಂಭಾವದೊಂದಿಗೆ ಇಷ್ಟಾನಿಷ್ಟಗಳೊಂದಿಗೆ ಸೇರಿರುತ್ತದೆ. ದೇಹಾತ್ಮ ಬುದ್ಧಿಯಿರುವಷ್ಟು ಕಾಲ ರಾಗದ್ವೇಷಗಳು ನಶಿಸುವುದಿಲ್ಲ. ಅಶರೀರಿಯಾದ ಆತ್ಮಕ್ಕೆ ರಾಗ ದ್ವೇಷಗಳು ಇಲ್ಲ. ವಾಯುವಿಗೆ ಶರೀರವಿಲ್ಲ ಅದೇ ರೀತಿಯಾಗಿ ಆಕಾಶ, ವಿದ್ಯುತ್, ಗುಡುಗು, ಸಿಡಿಲು, ಇವುಗಳಿಗೆ ಉಪಾಧಿಯಿಲ್ಲ. ಇವೆಲ್ಲವೂ ಆಕಾಶಕ್ಕೆ ಹೋಗಿ ಪರಂಜ್ಯೋತಿಯಲ್ಲಿ ಲೀನವಾಗಿ, ಅಲ್ಲಿ ಸ್ವಸ್ವರೂಪದಲ್ಲಿ ಪ್ರಕಾಶಿಸುವುದು.

**ಮಂ.ಶ್ಲೋ.॥ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷತ್ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ನೋಪಜನಂ ಸ್ಮರನ್ನಿದಂ ಶರೀರಂ ಸ ಯಥಾ ಪ್ರಯೋಗ್ಯ ಆಚರಣೇ ಯುಕ್ತ ಏವಮೇವಾಯಮಸ್ಮಿಞ್ಛರೀರೇ ಪ್ರಾಣೋ ಯುಕ್ತಃ (3) ಅಥ ಯತ್ರೈತದಾಕಾಶ -ಮನುವಿಷಣ್ಣಂ ಚಕ್ಷುಸ್ಸಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಗನ್ಧಾಯ ಘ್ರಾಣಮಥಯೋ ವೇದೇದಮಭಿವ್ಯಾಹರಾಣೀತಿ ಸ ಆತ್ಮಾಽಭಿವ್ಯಾಹಾರಾಯ ವಾಗಥ ಯೋ ವೇದೇದಂ ಶೃಣ್ವಾನೀತಿ ಸ ಆತ್ಮಾ ಶ್ರವಣಾಯ ಶ್ರೋತ್ರಮ್ (4)**

ತಾ : ಪ್ರತ್ಯಗಾತ್ಮನು ಈ ಶರೀರದಿಂದ ಹೊರಟು, ಪರಮಜ್ಯೋತಿಯಲ್ಲಿ ಒಂದಾಗಿ, ಸ್ವಸ್ವರೂಪ-ದಲ್ಲಿ ಪ್ರಕಾಶಿಸುವನು. ಆತನೇ ಉತ್ತಮ ಪುರುಷ. ಅಲ್ಲಿ ಆತ ತಾನು ಹುಟ್ಟಿದ ಶರೀರವನ್ನು ಜ್ಞಾಪಕಕ್ಕೆ ತಂದುಕೊಳ್ಳದೆ ಸ್ತ್ರೀಯರ ಜೊತೆಯಲ್ಲಿ, ವಾಹನಗಳೊಂದಿಗೆ, ಸಂಬಂಧಿಕರೊಂದಿಗೆ ನಗುತ್ತಾ, ಆಟವಾಡುತ್ತಾ, ಆನಂದವಾಗಿ ವಿಹರಿಸುವನು. ರಥಕ್ಕೆ ಅಶ್ವವನ್ನು ಕಟ್ಟಲಾಗಿದೆ. ಅಂದರೆ ವಾಹನ ಸಿದ್ಧವಾಗಿದೆ. ಎಲ್ಲಿ ಈ ನೇತ್ರ ಆಕಾಶದಲ್ಲಿ ಸೇರಿರುತ್ತದೆಯೋ, ಅಲ್ಲಿ ಚಾಕ್ಷುಸ ಪುರುಷನ ಸ್ಥಾನ (ನೇತ್ರದಲ್ಲಿನ ಆಕಾಶ) ಅವನಿಗೆ ರೂಪ ಗ್ರಹಣಾರ್ಥವಾಗಿ ಈ ಕಣ್ಣು ಇರುವುದು. ನಾನು ಘ್ರಾಣಿಸಿ ನೋಡಬೇಕು, ಎನ್ನುವ ಜ್ಞಾನವನ್ನು ಹೊಂದಿರುವುದು ಈ ಆತ್ಮವೇ! ಅದು ಆಘ್ರಾಣಿಸುವುದಕ್ಕೆ (ಕ್ಕಾಗಿ) ಈ ಪ್ರಾಣವಿದೆ. ನಾನು ಮಾತನಾಡಬೇಕು ಎನ್ನುವ ಜ್ಞಾನವಿರುವುದೇ ಆತ್ಮ. ಅದು ಮಾತನಾಡುವುದಕ್ಕಾಗಿ ವಾಕ್ಕು ಇದೆ. ನಾನು ಕೇಳಬೇಕು ಎನ್ನುವ ಜ್ಞಾನವಿರುವುದು ಆತ್ಮಕ್ಕೇ. ಅದು ಕೇಳುವುದಕ್ಕಾಗಿ ಶ್ರೋತ್ರೇಂದ್ರಿಯವಿದೆ. (ಮೇಲೆ ಹೇಳಿದ ಈ ಸಂಪ್ರಸಾದ ಸ್ವರೂಪನು-ಜೀವಾತ್ಮ-ದೇಹದಿಂದ (ಮೇಘದಂತೆ) ಮೇಲಕ್ಕೆ ಹೋಗಿ ಪರಮಜ್ಯೋತಿಯನ್ನು ಹೊಂದುವುದು. ದೇಹಭಾವನೆ ಇಲ್ಲವಾಗುತ್ತದೆ.)

ಮಂ.ಶ್ಲೋ.॥ ಅಥ ಯೋ ವೇದೇದಂ ಮನ್ವಾನೀತಿ ಸ ಆತ್ಮಾ ಮನೋಽಸ್ಯದೈವಂ ಚಕ್ಷುಃ ಸ ವಾ ಏಷ ಏತೇನ ದೈವೇನ ಚಕ್ಷುಷಾ ಮನಸ್ಯೈತಾನ್ಕಾಮಾನ್ಪಶ್ಯನ್ ರಮತೇ (5) ಯ ಏತೇ ಬ್ರಹ್ಮಲೋಕೇ ತಂ ವಾ ಏತಂ ದೇವಾ ಆತ್ಮಾನಮುಪಾಸತೇ ತಸ್ಮಾತ್ತೇಷಾಂ ಸರ್ವೇ ಚ ಲೋಕಾ ಆತ್ತಾಸ್ಸರ್ವೇಚ ಕಾಮಾಸ್ಸಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯ-ಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ಪ್ರಜಾಪತಿರುವಾಚ (6)

ತಾ : ನಾನು ಮನನ ಮಾಡಬೇಕೆನ್ನುವ ಜ್ಞಾನವುಳ್ಳದ್ದೇ ಆತ್ಮ. ಮನಸ್ಸು ಅದರ ದೈವಮಯವಾದ ನೇತ್ರವಾಗಿದೆ. ದೈವಿಕವಾದ ನೇತ್ರವಾಗಿದೆ. ದೈವಿಕವಾದ ನೇತ್ರವಾದ ಮನಸ್ಸಿನಿಂದ. ಕಾಮ್ಯಪದಾರ್ಥ-ಗಳನ್ನು ತಿಳಿದುಕೊಂಡು ಆನಂದಿಸುವುದು. ಬ್ರಹ್ಮಲೋಕದಲ್ಲಿ ವಾಸ ಮಾಡುವವರು, ದೇವತೆಗಳು, ಈ ಆತ್ಮವನ್ನು ಕುರಿತು ಉಪಾಸನೆ ಮಾಡುತ್ತಿರುತ್ತಾರೆ. ಆದ್ದರಿಂದ ಅವರೆಲ್ಲರೂ ಎಲ್ಲ ಲೋಕಗಳನ್ನು ಎಲ್ಲ ವಾಂಛೆಗಳನ್ನು ಹೊಂದುವಂತಹವರಾಗಿದ್ದಾರೆ. ಈ ಆತ್ಮ ತತ್ತ್ವವನ್ನು ತಿಳಿದುಕೊಂಡು, ಸರ್ವ ವಾಂಛೆಗಳನ್ನು ಹೊಂದುತ್ತಿದ್ದಾರೆಂದು ಪ್ರಜಾಪತಿ ಬೋಧಿಸಿದ.

## ಅಷ್ಟಮ ಪ್ರಪಾಠಕ – ತ್ರಯೋದಶ ಖಂಡ

ಮಂ.ಶ್ಲೋ.॥ ಶ್ಯಾಮಾಚ್ಛಬಳಂ ಪ್ರಪದ್ಯೇ ಶಬಳಾಚ್ಛ್ಯಾಮಂ ಪ್ರಪದ್ಯೇ ಅಶ್ವ ಇವರೋಮಾಣಿ ವಿಧೂಯ ಪಾಪಂ ಚನ್ದ್ರ ಇವರಾಹೋರ್ಮುಖಾತ್ ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮೀತ್ಯಭಿಸಂಭಾವಮೀತಿ (1)

ತಾ : ನೀಲದಿಂದ (ತಿಳಿಯಲ್ಪಟ್ಟಂತಹ) ನೀಲವರ್ಣದಂತೆ ಗಂಭೀರವಾಗಿ, ದುರವಗಾಹ-ವಾಗಿರುವ ಹೃದಯಸ್ಥವಾದ ಬ್ರಹ್ಮದಿಂದ ಕಾಮ ಮಿಶ್ರವಾಗುವುದರಿಂದ, ಅರಣ್ಯದಂತೆ ಶಬಲವಾದ ಬ್ರಹ್ಮಲೋಕವನ್ನು ಹೊಂದುತ್ತಿರುವೆನು. ಮತ್ತೆ ಆ ಶಬಲ ಬ್ರಹ್ಮದಿಂದ ಶ್ಯಾಮ ವರ್ಣಕ್ಕೆ ಹೋದೆ. (ಹೃದಯ ರೂಪನಾಗುತ್ತಿದ್ದೇನೆ.) ಅಶ್ವವು ತನ್ನ ಕೂದಲುಗಳನ್ನು (ಜೂಲನ್ನು) ಕೊಡವಿಕೊಳ್ಳುವ ರೀತಿಯಲ್ಲಿ ಪಾಪಗಳನ್ನೆಲ್ಲಾ ಕೊಡವಿಕೊಂಡು, ರಾಹು ಗ್ರಹದಿಂದ ವಿಮುಕ್ತಿಹೊಂದಿದ ಚಂದ್ರನಂತೆ, ದೇಹವನ್ನು ಬಿಟ್ಟು, ಸಫಲೀಕೃತನಾಗಿ ಸ್ವಯಂಭುವನಾದ ಬ್ರಹ್ಮಲೋಕಕ್ಕೆ ಹೋಗುವೆನು. ("**ಶ್ಯಾಮಾಚ್ಛಬಳಂ**" ಎನ್ನುವ ಮಂತ್ರವನ್ನು ಶುದ್ಧಿಗಾಗಿ ಜಪ ಮಾಡುವ ಸಂದರ್ಭದಲ್ಲಿ ಬಳಸುತ್ತಾರೆ.)

## ಅಷ್ಟಮ ಪ್ರಪಾಠಕ – ಚತುರ್ದಶ ಖಂಡ

ಮಂ.ಶ್ಲೋ.॥ ಆಕಾಶೋ ವೈ ನಾಮ ನಾಮರೂಪಾಯೋರ್ನ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮಾ ತದಮೃತಂ ಸ ಆತ್ಮಾ ಪ್ರಜಾಪತೇಸ್ಸಭಾಂ ವೇಶ್ಮ ಪ್ರಪದ್ಯೇ ಯಶೋಽಹಂ ಭವಾಮಿ ಬ್ರಾಹ್ಮಣಾನಾಂ ಯಶೋ ರಾಜ್ಞಾಂ ಯಶೋ ವಿಶಾಂ ಯಶೋಽಹ ಮನು ಪ್ರಾಪತ್ಸಿ ಸ ಹಾಹಂ ಯಶಸಾಂ ಯಶಃ ಶ್ಯೇತ ಮದತ್ಕ ಮದತ್ಕಂ ಶ್ಯೇತಂ ಲಿನ್ದುಮಾಭಿಗಾಮ್ ಲಿನ್ದುಮಾಭಿಗಾಮ್ (1)

ತಾ : ದಹರಾಕಾಶವೆನ್ನುವುದು ನಾಮ ರೂಪಗಳನ್ನು ವ್ಯಕ್ತಪಡಿಸುವುದು. ಈ ನಾಮ

ರೂಪಗಳು ಯಾವ ಆತ್ಮದಲ್ಲಿರುವುದೋ ಅದೇ ಬ್ರಹ್ಮ, ಅಮೃತ, ಆತ್ಮ. ನಾನು ಪ್ರಜಾಪತಿ ಸಭಾಂಗಣ-ವನ್ನು (ಗೃಹವನ್ನು) ಸೇರಿದೆ. ನಾನು ಬ್ರಾಹ್ಮಣರ ಯಶಸ್ಸು ಕ್ಷತ್ರಿಯರ ಯಶಸ್ಸು. ವೈಶ್ಯರ ಯಶಸ್ಸು ಆಗುವೆನು. ಅಂತಹ ಯಶಸ್ಸನ್ನೇ ವಾಂಛಿಸುವೆನು. ನಾನು ಆ ಯಶಸ್ಸುಗಳ ಯಶಸ್ಸಾಗಿದ್ದೇನೆ. ನಾನು ಯಾವಾಗಲೂ ಈ ಕೆಂಪು ವರ್ಣವನ್ನು ಹೊಂದಿ ದಂತವಿಹೀನನಾದರೂ ಸರ್ವಭ್ರಷ್ಟಕನಾಗಿ ಜಾರಿಬಿದ್ದು ಬಿಡಲು ಹಳ್ಳದಂತಿರುವ (ಸ್ತ್ರೀ ಯೋನಿ) ಮೋಹದಲ್ಲಿ ಬೀಳದಂತಿರಲಿ.

## ಅಷ್ಟಮ ಪ್ರಪಾಠಕ – ಪಞ್ಚದಶ ಖಂಡ

**ಮಂ.ಶ್ಲೋ.॥ ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯಃ ಆಚಾರ್ಯ ಕುಲಾದ್ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣಾಭಿಸಮಾವೃತ್ಯ ಕುಟುಮ್ಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ವಿದಧದಾತ್ಮನಿ ಸರ್ವೇನ್ದ್ರಿಯಾಣಿ ಸಂಪ್ರತಿಷ್ಠಾಪ್ಯಾಹಿಂಸನ್ತ್ಸರ್ವಭೂತಾನನ್ಯತ್ರ ತೀರ್ಥೇಭ್ಯ ಸ್ಸ ಖಲ್ವೇವಂ ವರ್ತಯ-ನ್ಯಾವದಾಯುಷಂ ಬ್ರಹ್ಮಲೋಕಮಭಿಸಮ್ಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ (1)**

ತಾ : ಈ ಆತ್ಮಜ್ಞಾನವನ್ನು ಬ್ರಹ್ಮನು ಪ್ರಜಾಪತಿಗೆ ಬೋಧಿಸಿದ. ಪ್ರಜಾಪತಿ ಮನುವಿಗೆ, ಮನು ಪ್ರಜೆಗಳಿಗೆ ಬೋಧಿಸಿದರು. ಗುರು ಶುಶ್ರೂಷೆಗೈದು, ಯಥಾವಿಧಿಯಾಗಿ ವೇದಾಧ್ಯಯನವನ್ನು ಕೈಗೊಂಡು, ಪೂರ್ಣ ಪ್ರಜ್ಞೆಯುಳ್ಳವರಾಗಿ, ಸದ್ಗುರುಗಳ ಆಜ್ಞೆಯಿಂದ ಗೃಹಸ್ಥಾಶ್ರಮವನ್ನು ಅನುಭವಿಸಿ. ಅಧ್ಯಯನ ಸಂಪನ್ನರಾದ ಸಂತಾನವನ್ನು, ಶಿಷ್ಯರನ್ನು ಹೊಂದಿ, ಶಾಸ್ತ್ರವಿಹಿತವಾದ ಸತ್ಕರ್ಮಗಳನ್ನು ಮಾಡಿ ದೇಶಕಾಲ ಪ್ರವೃತ್ತಿಯನ್ನನುಸರಿಸಿ, ಅಹಿಂಸಾ ವ್ರತರಾಗಿ ಯಾವ ಜೀವಿತವನ್ನು ಜೀವನ ಯಾತ್ರೆಯನ್ನಾಗಿ ಸಾಗಿಸುವ ಮಾನವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಅವನಿಗೆ ಜನ್ಮರಾಹಿತ್ಯ ಉಂಟಾಗುವುದು. ಓಂ

**ಮಂ.ಶ್ಲೋ.॥ ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್ಪ್ರಾಣಶ್ಚಕ್ಷುಶ್ಶ್ರೋತ್ರಮಥೋ ಬಲ ಮಿಂದ್ರಿಯಾಣಿಚ ಸರ್ವಾಣಿ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು; ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ**

**ಛಾಂದೋಗ್ಯೋಪನಿಷತ್ ಸಮಾಪ್ತಿ**



# ಬೃಹದಾರಣ್ಯಕೋಪನಿಷತ್ - 10

(ಶುಕ್ಲ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ**

(ಬೃಹದಾರಣ್ಯಕೋಪನಿಷತ್ ಬಹಳ ದೊಡ್ಡದು. ಎಂಟು ಅಧ್ಯಾಯಗಳ ಗ್ರಂಥ. (1,2) ಒಂದು ಎರಡನೇ ಅಧ್ಯಾಯಗಳು ಕರ್ಮಾಂಗಗಳಾದ ಪ್ರವರ್ಗ್ಯೋಪನಿಷತ್ತುಗಳನ್ನು ಪ್ರತಿಪಾದಿಸುತ್ತಿರು-ವುದರಿಂದ, ಇದುವರೆಗೂ ಈ ಉಪನಿಷತ್ತನ್ನು ಪ್ರಕಟ ಮಾಡಿರುವವರ್ಯಾರೂ ಮೊದಲ ಎರಡು ಅಧ್ಯಾಯಗಳನ್ನು ಗ್ರಂಥದಲ್ಲಿ ಸೇರಿಸಿಲ್ಲ. ಬ್ರಹ್ಮವಿದ್ಯೆಗೆ ಸಂಬಂಧಿಸಿದ ಆರು ಅಧ್ಯಾಯಗಳನ್ನು ಮಾತ್ರವೇ ಪ್ರಕಟಿಸಿದ್ದಾರೆ. ನಾವು ಸಹ ಈ ಪದ್ಧತಿಯನ್ನೇ ಅನುಸರಿಸಿದ್ದೇವೆ.)

## ತೃತೀಯೋಧ್ಯಾಯ - ಪ್ರಥಮ ಬ್ರಾಹ್ಮಣಂ

**ಮಂ.ಶ್ಲೋ॥ ಓಮ್. ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ, ಸೂರ್ಯಶ್ಚಕ್ಷುರ್ವಾತಃ ಪ್ರಾಣೋವ್ಯಾತ್ತಮಗ್ನಿ-ರ್ವೈಶ್ವಾನರಸ್ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ ದ್ಯೌಃ ಪೃಷ್ಠಮನ್ತರಿಕ್ಷಮುದರಂ ಪೃಥಿವೀ ಪಾಜಸ್ಯಮ್, ದಿಶಃ ಪಾರ್ಶ್ವೇ ಅವಾನ್ತರದಿಶಃ ಪರ್ಶವ ಋತವೋಽಙ್ಗಾನಿ ಮಾಸಾಶ್ಚಾರ್ಧ-ಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋಮಾಂಸಾನಿ ಊವಧ್ಯಗ್ಂ ಸಿಕತಾಃ ಸಿನ್ಧವೋ ಗುದಾ ಯಕೃಚ್ಚಕ್ಲೋಮಾನಶ್ಚ ಪರ್ವತಾ ಓಷಧಯಶ್ಚ ವನಸ್ಪತಯಶ್ಚ ಲೋಮಾನಿ ಉದ್ಯನ್ಪೂರ್ವಾರ್ಧೋ ನಿಮ್ಲೋಚನ್ ಜಘನಾರ್ಧೋ ಯದ್ವಿಜೃಂಭತೇ ತದ್ವಿದ್ಯೋತತೇ ಯದ್ವಿಧೂನುತೇ ತತ್ ಸ್ತನಯತಿ ಯನ್ಮೇಹತಿ ತದ್ವರ್ಷತಿ ವಾಗೇವಾಸ್ಯ ವಾಕ್ (1)**

ತಾ : (ಅಶ್ವಮೇಧ ಯಾಗವನ್ನು ಕುರಿತು) ಯಜ್ಞಾಶ್ವದ ಶಿರಸ್ಸು ಬ್ರಹ್ಮ ಮುಹೂರ್ತ; ನೇತ್ರವು ಸೂರ್ಯ, ಪ್ರಾಣವು ವಾಯು, ತೆರೆದಿರುವ ಮುಖ ವೈಶ್ವಾನರಾಗ್ನಿ, ದೇಹವು ಸಂವತ್ಸರ; ಬೆನ್ನು ದ್ಯುಲೋಕ; ಉದರವು ಆಕಾಶ. ಪಾದಾಸನ ಸ್ಥಾನವು ಭೂಮಿ. ಪಾರ್ಶ್ವಗಳು ದಿಕ್ಕುಗಳು; ಪಕ್ಕೆಗಳಲ್ಲಿರುವ ಮೂಳೆಗಳು ಈಶಾನ್ಯಾದಿ ವಿದಿಕ್ಕುಗಳು. ಅವಯವಗಳೇ ಆರು ಋತುಗಳು. ಸಂದುಗಳು ಮಾಸಗಳು; ಪಕ್ಷಗಳು ಪಾದಗಳು. ಅಹೋರಾತ್ರಿಗಳು ಮೂಳೆಗಳು, ಪ್ರತಿಷ್ಠೆ ನಕ್ಷತ್ರಗಳು; ಮಾಂಸಗಳು ಆಕಾಶದಲ್ಲಿರುವ ಮೇಘಗಳು; ಹೊಟ್ಟೆಯಲ್ಲಿರುವ ಅಶನ ಮರಳು; ನಾಡಿಗಳು ನದಿಗಳು; ಹೃದಯಕ್ಕೆ ದಕ್ಷಿಣೋತ್ತರವಾಗಿರುವ ಮಾಂಸಪಿಂಡಗಳು ಪರ್ವತಗಳು; ಕೂದಲು ಓಷದಿಗಳು ಹಾಗೂ ವನಸ್ಪತಿಗಳು; ಇನ್ನು ಅಶ್ವದ ಪೂರ್ವ ಭಾಗ ಮಧ್ಯಾಹ್ನದವರೆಗೆ ಪ್ರಕಾಶಿಸುವಂತಹ ಸೂರ್ಯ.

ಉತ್ತರ ಭಾಗವು ಸಂಜೆಯವರೆಗೆ ಪ್ರಕಾಶಿಸುವ ಸೂರ್ಯ; ಅಂಗಗಳನ್ನು ವಿಸ್ತರಣ ಮಾಡುವುದೇ ವಿದ್ಯುತ್. ಅಂಗಗಳನ್ನು ಕಂಪಿಸುವಂತೆ ಮಾಡುವುದೇ ಗುಡುಗುಗಳು. ಮೂತ್ರವನ್ನು ವಿಸರ್ಜಿ-ಸುವುದೇ ಮಳೆ; ಶಬ್ದ ಮಾಡುವುದೇ ವಾಕ್ಕು; (ಎಂದು ಪ್ರಜಾಪತಿಯು ವರ್ಣಿಸಿ ಹೇಳಿದ.)

**ಮಂ.ಶ್ಲೋ॥ ಅಹರ್ವಾ ಅಶ್ವಂ ಪುರಸ್ತಾನ್ಮಹಿಮಾನ್ವಜಾಯತ ತಸ್ಯ ಪೂರ್ವೇ ಸಮುದ್ರೇ ಯೋನೀರಾತ್ರಿರೇನಂ ಪಚ್ಚಾನ್ಮಹಿಮಾನ್ವಜಾಯತ ತಸ್ಯಾಪರೇ ಸಮುದ್ರೇ ಯೋನಿರೇತೌ ವಾ ಅಶ್ವಂ ಮಹಿಮಾ-ನಾವಭಿತ್ಸಂಬಭೂವತುಃ ಹಯೋ ಭೂತ್ವಾ ದೇವಾನವಹದ್ವಾಜೀ ಗನ್ಧರ್ವಾನರ್ವಾऽಸುರಾನಶ್ವೋ ಮನುಷ್ಯಾನ್ ಸಮುದ್ರ ಏವಾಸ್ಯಬನ್ಧುಃ ಸಮುದ್ರೋ ಯೋನಿಃ (2)**

ತಾ : ಈ ಅಶ್ವಕ್ಕೆ ಹಿಂದೆ ಮುಂದೆ ಇರುವ ಭಾಗಗಳಲ್ಲಿರುವ ಸುವರ್ಣ ರಜತ ಪಾತ್ರೆಗಳನ್ನು ಅಹೋರಾತ್ರಿಗಳಾಗಿಯೂ, ಆ ಪಾತ್ರೆಗಳನ್ನು ಇಡುವಂತಹ ಸ್ಥಾನಗಳನ್ನು ಪೂರ್ವ ಪಶ್ಚಿಮ ಸಮುದ್ರ-ಗಳಾಗಿಯೂ, ಧ್ಯಾನಿಸಬೇಕು. ಹೀಗೆ ಪ್ರಜಾಪತ್ಯಂಗ ಸದೃಶವಾಗಿ ಧ್ಯಾನಿಸಲಾದ ಅವಯವಗಳುಳ್ಳ ಅಶ್ವಕ್ಕೆ ಸಮುದ್ರವು ಉತ್ಪತ್ತಿ ಸ್ಥಾನವಾದುದರಿಂದ ಸಮುದ್ರವನ್ನು ಬಂಧುವಾಗಿ ಧ್ಯಾನಿಸಬೇಕು.

# ತೃತೀಯೋಧ್ಯಾಯ - ದ್ವಿತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಓಮ್ ನೈವೇಹ ಕಿಂಚನಾಗ್ರ ಆಸೀನ್ಮೃತ್ಯುನೈವೇದಮಾವೃತ ಮಾಸೀತ್ । ಅಶನಾಯಯಾऽ-ಶನಾಯಾ ಹಿ ಮೃತ್ಯುಸ್ತನ್ಮನೋಕುರುತಾತ್ಮನ್ವೀಸ್ಯಾಮಿತಿ। ಸೋऽರ್ಚನ್ನ ಚರತ್ತಸ್ಯಾರ್ಚತ ಅಪೋಽಜಾಯನ್ತಾರ್ಚತೇ ವೈ ಮೇಕಮಭೂದಿತಿ ತದೇವಾರ್ಕಸ್ಯಾರ್ಕತ್ಯಂ। ಕಗ್ಂಹವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ. (1)**

ತಾ : ಈ ಅನಂತ ಸಂಸಾರ ಚಕ್ರದಲ್ಲಿ ಸೃಷ್ಟಿಗೆ ಮೊದಲು ಕೊಂಚವೂ ಇರಲೇ ಇಲ್ಲ (ನಾಮರೂಪಗಳಿಂದ ಹರಡಿರುವಂತಹುದು) ಭಕ್ಷಿಸಲು ಕೋರುತ್ತಿದ್ದ ಹಿರಣ್ಯಗರ್ಭನಿಂದಲೇ ಈ ಕಾರ್ಯಜಾತವಾದ ಸಮಸ್ತ ಜಗತ್ತು ಆವರಿಸಲ್ಪಟ್ಟುದ್ದಾಗಿದೆ. ಭಕ್ಷಿಸಲು ವಾಂಛಿಸುವುದು ಮೃತ್ಯುವೇ ಅಲ್ಲವೇ? ನಾನೇ ಮನಸ್ಸನ್ನು ಹೊಂದಿದವನಾಗಿರಬೇಕೆಂದು ಆ ಮನಸ್ಸನ್ನು ನಿರ್ಮಿಸಿದನು. ಆ ಹಿರಣ್ಯಗರ್ಭನು (ಆತ್ಮಾನಮೇವ= ತನ್ನನ್ನೇ) ಪೂಜಿಸುವಂತಹವನಾಗಿ ಧನ್ಯನಾದೆನೆಂದು ಭಾವಿಸಿದ. ಪೂಜಿಸುತ್ತಿದ್ದ ಆ ಹಿರಣ್ಯಗರ್ಭನಿಗೆ ಉದಕಗಳು ಉದ್ಭವವಾದವು. ಪೂಜೆ ಮಾಡುತ್ತಿದ್ದ ನನಗಾಗಿ ಉದಕವು ಉದ್ಭವಿಸಿತೆಂದು ಭಾವಿಸಿದ. ಆ ಕಾರಣದಿಂದಲೇ ಅಶ್ವಮೇಧಯಾಗದಲ್ಲಿ ಉಪಯೋಗಿಸುವ (ಬಳಸುವ) ಅಗ್ನಿಗೆ, ಅರ್ಕತ್ವವು ಈ ಪ್ರಕಾರವಾಗಿದೆ. ಯಾರು ಅಶ್ವಮೇಧಾಗ್ನಿಯಲ್ಲಿ ಈ ಅರ್ಕತ್ವವನ್ನು ತಿಳಿದುಕೊಂಡಿರುತ್ತಾನೋ, ಅಂತಹವನಿಗಾಗಿ, ಉದಕವೇ ಸುಖರೂಪವಾಗಿ ಒದಗಿಬರುತ್ತದೆ.

**ಮಂ.ಶ್ಲೋ॥ ಆಪೋ ವಾ ಅರ್ಕಸ್ತದ್ಯದಪಾಗ್ಂ ಶರ ಆಸೀತ್ತತ್ಸಮಹನ್ಯತ। ಸಾ ಪೃಥಿವ್ಯ ಭವತ್ತಸ್ಯಾಮ ಶ್ರಾಮ್ಯತ್ ತಸ್ಯ ಶ್ರಾನ್ತಸ್ಯ ತಪ್ತಸ್ಯ ತೇಜೋ ರಸೋ ನಿರವರ್ತತಾಗ್ನಿಃ (2)**

ತಾ : ಉದಕವು ಅರ್ಕ ಸ್ವರೂಪ. (ಅಗ್ನಿಯೇ) ಆ ನೀರಿನಲ್ಲಿ ಯಾವುದು ನೀರಿನ ಕೆನೆ ಪದರ ರೂಪವಾಗಿದೆಯೋ, ಅದೇ ಸೇರಿಕೊಳ್ಳುವುದು. ಅದು ಭೂಮಿ ಆಯಿತು. ಈ ಭೂಮಿಯಲ್ಲಿ

ಹಿರಣ್ಯಗರ್ಭನು ಶ್ರಮವನ್ನು ಹೊಂದಿದವನಾಗಿರುತ್ತಾನೆ. ಸಂತಾಪವನ್ನು ಹೊಂದಿದವನಾಗಿರುತ್ತಾನೆ. ಆಯಾಸವನ್ನು ಹೊಂದಿದವನಾಗಿರುತ್ತಾನೆ. ಆ ಹಿರಣ್ಯಗರ್ಭನ ಒಂದು ತೇಜಸ್ಸೇ ಸಾರವಾಗಿರು-ವಂತಹ ಅಗ್ನಿ ಉತ್ಪನ್ನವಾಯಿತು.

**ಮಂ.ಶ್ಲೋ॥ ಸ ತ್ರೇಧಾತ್ಮಾನಂ ವ್ಯಕುರುತಾದಿತ್ಯಂ ತೃತೀಯಂ ವಾಯುಂ ತೃತೀಯಗ್ಂ ಸ ಏಷ ಪ್ರಾಣಃ ತ್ರೇಧಾ ವಿಹಿತಃ ತಸ್ಯ ಪ್ರಾಚೀದಿಕ್ಶಿರೋಽಸೌ ಚಾಸೌ ಚೇರ್ಮೌ। ಅಥಾಸ್ಯ ಪ್ರತೀಚೀದಿಕ್ಪುಚ್ಛ-ಮಸೌ ಚಾಸೌ ಚ ಸಕ್ಥ್ಯೌ ದಕ್ಷಿಣಾಚೋದೀಚೀ ಚ ಪಾರ್ಶ್ವೇ ದ್ಯೌಃ ಪೃಷ್ಠಮನ್ತರಿಕ್ಷ-ಮುದರಮಿಯಮುರ ಸ್ಸ ಏಷೋಽಪ್ಸು ಪ್ರತಿಷ್ಠಿತೋ ಯತ್ರ ಕ್ವಚೈತಿ ತದೇವ ಪ್ರತಿತಿಷ್ಠ-ತ್ಯೇವಂ ವಿದ್ವಾನ್ (3)**

ತಾ : ಹಿರಣ್ಯಗರ್ಭನು ಪರಮಾತ್ಮನಿಂದ ತನ್ನ ಸ್ವರೂಪವನ್ನು ಅಗ್ನ್ಯಾದಿತ್ಯ ವಾಯು ರೂಪಗಳಲ್ಲಿ ಮೂರು ವಿಧಗಳಾಗಿ ಬೇರ್ಪಡಿಸಲಚ್ಛಸಿದನು. ಹೀಗೆ ಬೇರ್ಪಟ್ಟ ಪರಮಾತ್ಮ ಸ್ವರೂಪವಾದ ಈ ಅಗ್ನಿಗೆ ಪೂರ್ವ ದಿಕ್ಕು ಶಿರಸ್ಸು, ಈಶಾನ್ಯಾಗ್ನೇಯಗಳು ಎರಡು ಬಾಹುಗಳಾಗಿ, ಪಶ್ಚಿಮ ದಿಕ್ಕು ದೇಹದ ಕೆಳಭಾಗವಾಗಿಯೂ, ವಾಯುವ್ಯ ನೈಋತ್ಯಗಳು ಎರಡು ತೊಡೆಗಳಾಗಿಯೂ, ದಕ್ಷಿಣೋತ್ತರಗಳು ಎರಡು ಪಾರ್ಶ್ವಗಳಾಗಿಯೂ, ದ್ಯುಲೋಕವು ಬೆನ್ನಾಗಿಯೂ ಆಕಾಶವು ಹೊಟ್ಟೆ-ಯಾಗಿಯೂ, ಭೂಮಿ ವಕ್ಷಸ್ಥಲವಾಗಿಯೂ, ಆಗಿವೆ. ಆ ಪರಮಾತ್ಮ ಸ್ವರೂಪವಾದ ಈ ಅಗ್ನಿ ಉದಕಗಳಲ್ಲಿ ಇಡಲ್ಪಟ್ಟಿದೆ. ಹೀಗೆ ಅಗ್ನಿ ಸ್ಥಿತಿಯನ್ನು ಅರಿತುಕೊಂಡು ಉಪಾಸಿಸುವವರು ಹೀಗೆ ಅಗ್ನಿ ಸ್ಥಿತಿಯನ್ನು ಅರಿತುಕೊಂಡು ಉಪಾಸಿಸುವವರು ಎಲ್ಲೆಲ್ಲಿರುವರೋ, ಅಲ್ಲಲ್ಲಿಯೇ ಅಗ್ನಿಯ ಉಪಾಸನೆಯ ಫಲವನ್ನು ಅನುಭವಿಸುತ್ತಾರೆ.

**ಮಂ.ಶ್ಲೋ॥ ಸೋಽಕಾಮಯತ ದ್ವಿತೀಯೋ ಮ ಆತ್ಮಾಜಾಯೇತೇತಿ ಸ ಮನಸಾ ವಾಚಂ ಮಿಥುನಗ್ಂ ಸಮಭವತ್ ಅಶನಾಯಾಮೃತ್ಯುಸ್ತದ್ಯದ್ರೇತ ಆಸೀತ್ಸ ಸಂವತ್ಸರೋಽಭವತ್। ಸ ಹ ಮರಾ ತತಸ್ಸಂವತ್ಸರ ಆಸ ತಮೇತಾವನ್ತಂ ಕಾಲಮಬಿಭಃ । ಯಾವಾನ್ ಸಂವತ್ಸರ-ಸ್ತಮೇತಾವತಃ ಕಾಲಸ್ಯ ಪರಾಸ್ತದಸೃಜತ। ತಂ ಜಾತಮಭಿವ್ಯಾದದಾತ್ ಸ ಭಾಣಕರೋತ್ ಸೈವ ವಾಗಭವತ್ (4)**

ತಾ : ಆ ಹಿರಣ್ಯಗರ್ಭನು ತನಗೆ ಎರಡನೆಯ ಶರೀರವುಂಟಾಗಲಿ ಎಂದು ಕೋರಿ, ವೇದ ವಾಕ್ಕನ್ನು ಮಿಥುನವಾಗಿ ಭಾವಿಸಿದ. ಹೀಗೆ ಆಲೋಚಿಸಲು ಜ್ಞಾನ ಕರ್ಮರೂಪವಾದ ರೇತಸ್ಸು ಉಂಟಾಯಿತು. ಹಿಂದೆ ಸೃಜಿಸಲ್ಪಟ್ಟ ಉದಕಮಂಡಲದಲ್ಲಿ ಆ ರೇತಸ್ಸು ಪ್ರವೇಶಿಸಿ ಅಂಡರೂಪದಲ್ಲಿ ಗರ್ಭವನ್ನು ಹೊಂದಿದವನಾಗಿ ಸಂವತ್ಸರಾತ್ಮಕ ಪ್ರಜಾಪತಿಯಾದ. ಅದಕ್ಕೆ ಮೊದಲು ಒಂದು ವರ್ಷಕಾಲ ಆ ಗರ್ಭವನ್ನು ಭರಿಸಿದ. ಹೀಗೆ ಭರಿಸಿದ ಸಂವತ್ಸರ ಕಾಲ ಕಳೆದ ಮೇಲೆ ತೇಜೋ-ರೂಪವಾದ ಅಗ್ನಿಯನ್ನು ಸೃಜಿಸಿದ. (ಅಂಡವನ್ನು ಬೇಧಿಸಿದ) ಹೀಗೆ ಆ ಪ್ರಜಾಪತಿ ಸೃಜಿಸಿ ಆ ಹುಟ್ಟಿದ ಪುತ್ರನನ್ನು ಭಕ್ಷಿಸುವುದಕ್ಕೆ ಬಾಯಿ ತೆರೆದ. ಆ ಪುತ್ರನು ಸ್ವಾಭಾವಿಕವಾದ ಅವಿದ್ಯೆಯಿಂದ ಕೂಡಿದವನಾಗಿ ಭಯದಿಂದ ಭಾಣಯೆಂದು ಶಬ್ದ ಮಾಡಿದ. ಅದೇ ಭೂರಾದಿ ವ್ಯಾಹೃತಿ ರೂಪವಾದ

ವಾಕ್ಕು ಆಗಿ ಪರಿಣಮಿಸಿತು.

**ಮಂ.ಶ್ಲೋ॥ ಸ ಐಕ್ಷತ ಯದಿ ವಾ ಇಮಮಭಿಮಗ್ಂ ಸ್ಯೇ ಕನೀಯೋನ್ನಂ ಕರಿಷ್ಯ ಇತಿ ಸ ತಯಾ ವಾಚಾ ತೇನಾತ್ಮ ನೇದಗ್ಂ ಸರ್ವಮಸೃಜತ ಯದಿದಂ ಕಿಞ್ಚರ್ಚೋಯಜೂಗ್ಂಷಿ ಸಾಮಾನಿ ಛನ್ದಾಗ್ಂಸಿ ಯಜ್ಞಾನ್ ಪ್ರಜಾಃ ಪಶೂನ್। ಸಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಗ್ಂ ಸರ್ವಸ್ಯೈ ತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ (5)**

ತಾ : ಆ ಪರಮಾತ್ಮನು ಈ ರೋದನ ಮಾಡುತ್ತಿರುವ ಪುತ್ರನನ್ನು ಯಾವಾಗಲಾದರೂ ಭಕ್ಷಿಸಬಹುದು. ಅಲ್ಪವಾದ ಅನ್ನವನ್ನು ಮಾಡಬಹುದೆಂದುಕೊಂಡ. ಆ ಪರಮಾತ್ಮನು ಪೂರ್ವೋಕ್ತ-ವಾದ ವಾಕ್ಕಿನೊಂದಿಗೆ, ಮನಸ್ಸಿನೊಂದಿಗೆ, ಮಿಥುನ ಭಾವವನ್ನು ವಹಿಸಿ ಸಮಸ್ತವನ್ನು ಸೃಷ್ಟಿಸಿದನು. ಎಂದರೆ ಋಗ್ವೇದ ಮಂತ್ರಗಳನ್ನು, ಯಜುರ್ಮಂತ್ರಗಳನ್ನು, ಸಾಮಮಂತ್ರಗಳನ್ನು, ಗಾಯತ್ರ್ಯಾದಿ ಛಂದಸ್ಸುಗಳನ್ನು, ಯಜ್ಞಗಳನ್ನು, ಪ್ರಜೆಗಳನ್ನು, ಪಶುಗಳನ್ನು ಸೃಷ್ಟಿಸಿದ. ಇನ್ನೂ ಸಮಸ್ತವಾದ ಕ್ರಿಯೆಗಳನ್ನು ಕ್ರಿಯಾಫಲಗಳನ್ನು ಸಹ ಸೃಷ್ಟಿಸಿದ. ಹೀಗೆ ಆ ಪರಮಾತ್ಮನು ಯಾವುದ್ಯಾವುದನ್ನು ಸೃಜಿಸಿದನೋ ಅದದೆಲ್ಲವನ್ನೂ ತಿನ್ನಲು ಬಯಸಿದ. ಹೀಗೆ ಬಯಸಿದ್ದರಿಂದಲೇ ಆ ಪರಮಾತ್ಮನಿಗೆ ದಿತಿತತ್ವವು ಉಂಟಾಯಿತು. ಆದ್ದರಿಂದ ಈ ಸೃಷ್ಟಿಸಲಾದ ಸಮಸ್ತ ಜಗತ್ತಿಗೆ ಆ ಪರಮಾತ್ಮ ಭಕ್ಷಕನಾದ. ಆ ಪರಮಾತ್ಮನಿಗೆ ಸಮಸ್ತ ಜಗತ್ತು ಅನ್ನವಾಯಿತು. ಹೀಗೆ ಪರಮಾತ್ಮನಿಗೆ ಸರ್ವಾತ್ಮ ಭಾವದೊಂದಿಗೆ ಉಂಟಾದ ಅದಿತಿ ಭಾವವನ್ನು ಗ್ರಹಿಸಿದವನು ಈ ಪರಮಾತ್ಮನಿಗೆ ಬರುವ ಫಲವನ್ನು, ತಾನು ಸರ್ವಾತ್ಮಕವಾಗಿ ಅನುಭವಿಸುತ್ತಾನೆ.

**ಮಂ.ಶ್ಲೋ॥ ಸೋಽಕಾಮಯತ ಭೂಯಸಾ ಯಜ್ಞೇನ ಭೂಯೋ ಯಜೇಯೇತಿ। ಸೋಽಶ್ರಾಮ್ಯತ್ಸ ತಮೋಽತಪ್ಯತ ತಸ್ಯ ಶ್ರಾನ್ತಸ್ಯ ತಪ್ತಸ್ಯ ಯಶೋ ವೀರ್ಯಮುದಕ್ರಾಮತ್ । ಪ್ರಾಣಾ ವೈ ಯಶೋ ವೀರ್ಯಂ ತತ್ ಪ್ರಾಣೇಮಾತ್ಕ್ರಾನ್ತೇಷು ಶರೀರಗ್ಂ ಶ್ವಯಿತುಮಧ್ರಿಯತ ತಸ್ಯ ಶರೀರ ಏವ ಮನ ಆಸೀತ್ (6)**

ತಾ : ಆ ಪ್ರಜಾಪತಿಯು ದೊಡ್ಡದಾದ ಅಶ್ವಮೇಧ ಯಜ್ಞವನ್ನು ಮಾಡಬೇಕೆಂದು ಸಂಕಲ್ಪಿಸಿದ. ಹೀಗೆ ಶ್ರಮದಿಂದ ತಪಸ್ಸು ಮಾಡಿದಂತಹ ಆ ಹಿರಣ್ಯಗರ್ಭನಿಗೆ ಚಕ್ಷುರಾದಿ ಇಂದ್ರಿಯ ಸಾಧ್ಯವಾದಂತಹ ಕೀರ್ತಿ ಬಲಗಳು ಬಹಿರ್ಗತವಾದವು. ಆ ಯಶೋವೀರ್ಯಗಳು ಪ್ರಾಣ ಸ್ವರೂಪವಾದಂತಹ ಜ್ಞಾನೇಂದ್ರಿಯಗಳಂತೆಯೇ ಇತ್ತು. ಪ್ರಾಣಸ್ವರೂಪಗಳಾದ ಇಂದ್ರಿಯಗಳೆಲ್ಲವೂ ಬಹಿರ್ಗತವಾಗಲು, ಆ ಹಿರಣ್ಯಗರ್ಭನ ಶರೀರವು ಅಪವಿತ್ರವಾಗಿ ಬಲಹೀನವಾಯಿತು. ಆಗ ಆತನ ಮನಸ್ಸು ತನ್ನ ಶರೀರದತ್ತ ಪ್ರೀತಿ ಹೊಂದಿದವನಾಗಿ ಇರತೊಡಗಿದ.

**ಮಂ.ಶ್ಲೋ॥ ಸೋಽಕಾಮಯತ ಮೇಧ್ಯಂ ಮ ಇದಗ್ಂ ಸ್ಯಾದಾತ್ಮ ನ್ವ್ಯನೇನಸ್ಯಾಮಿತಿ। ತತೋಽಶ್ವ-ಸ್ಸಮಭವದ್ಯದಶ್ವತ್ತನ್ಮೇಧ್ಯಮಭೂದಿತಿ ತದೇವಾಶ್ವಮೇಧಸ್ಯಾಶ್ವಮೇಧತ್ವಂ। ಏಷ ಹ ವಾ ಅಶ್ವಮೇಧಂ ವೇದ ಯ ಏನಮೇವಂ ವೇದ। ತಮನವರುದ್ಯೈವಾಮನ್ಯತ। ತಗ್ಂ**

**ಸಂವತ್ಸರಸ್ಯ ಪರಸ್ತಾದಾತ್ಮನ ಆಲಭತ। ಪಶೂನ್ ದೇವತಾಭ್ಯಃ ಪ್ರತ್ಯೌಹತ್। ತಸ್ಮಾತ್ಸರ್ವ ದೈವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮಾಲಭನ್ತೇ। ಏಷಹ ವಾ ಅಶ್ವಮೇಧೋ ಯಏಷ ತಪತಿ ತಸ್ಯ ಸಂವತ್ಸರ ಆತ್ಮಾ ಅಯಮಗ್ನಿರರ್ಕಸ್ತಸ್ಯೇಮೇ ಲೋಕಾ ಆತ್ಮಾನಸ್ತಾವೇ-ತಾವರ್ಕಾಶ್ವಮೇಧೌ ಸೋ ಪುನರೇಕೈವ ದೇವತಾ ಭವತಿ ಮೃತ್ಯುರೇವ ಅಪ ಪುನರ್ ಮೃತ್ಯುಂ ಜಯತಿ ನೈನಂ ಮೃತ್ಯುರಾಪ್ನೋತಿ ಮೃತ್ಯುರಸ್ಯಾತ್ಮಾ ಭವತಿ ಏತಾಸಾಂ ದೇವತಾನಾಮೇಕೋ ಭವತಿ (7)**

ತಾ : ಆ ಪ್ರಜಾಪತಿಯು ನನ್ನ ಶರೀರವು ಯಜ್ಞ ಸಂಬಂಧವಾಯಿತಲ್ಲ. ಅದು ಆಗಬಾರದೆಂದು ಆಕಾಂಕ್ಷೆ ಪಟ್ಟ. ಯಾವುದರಿಂದ ಅಪವಿತ್ರವಾಯಿತೋ, ಆ ಕಾರಣದಿಂದ ನಾನು ಈ ಶರೀರದಿಂದಲೇ ಶರೀರವುಳ್ಳವನಾಗಿ ಆಗುವೆನು ಎಂದು ಈ ದೇಹವನ್ನು ಪ್ರವೇಶಿಸಿದನು. ಅದರಿಂದಲೇ ಅಶ್ವವು ಹುಟ್ಟಿತು. ಈ ಪ್ರಕಾರವಾಗಿ ಆ ಶರೀರವು ಯಜ್ಞ ಸಂಬಂಧವಾದುದಾಯಿತು. ಆ ಕಾರಣದಿಂದಲೇ, ಅಶ್ವಮೇಧವೆನ್ನುವ ಯಾಗಕ್ಕೆ ಅಶ್ವಮೇದವೆನ್ನುವ ಹೆಸರು ಬಂತು. ಯಾರು ಈ ಪೂರ್ಣ ವಿವರಗಳನ್ನು ತಿಳಿಯುತ್ತಾನೋ ಆತನೇ ಅಶ್ವಮೇಧ ಯಾಗವನ್ನು ತಿಳಿದವನು. ಆ ಪ್ರಜಾಪತಿ ಈ ಅಶ್ವದಿಂದಲೇ ಯಾಗವನ್ನು ಮಾಡಬೇಕೆಂದು ಬಯಸಿ, ಒಂದು ಸಂವತ್ಸರ ಕಾಲವಾದ ಮೇಲೆ ಅಶ್ವವನ್ನು ತನಗಾಗಿ ಛೇದಿಸಿದನು. ನಂತರ ಅಗ್ನಿ ಇಂದ್ರಾದಿ ದೇವತೆಗಳಿಗಾಗಿ, ಇತರ ಗ್ರಾಮೀಣ, ಅರಣ್ಯ ಪಶುಗಳನ್ನು ವಿಭಜಿಸಿ ಹೊಂದಿಸಿಕೊಟ್ಟನು. ಪ್ರಜಾಪತಿ ಹೀಗೆ ಭಾವಿಸಿದುದರಿಂದಲೇ ಈಗಿನ ಯಾಜ್ಞಿಕರನ್ನು ಸಮಸ್ತ ದೇವತಾ ಸ್ವರೂಪವೆಂದು, ವರ್ಯಗ್ನಿ ಕರಣಾದಿಗಳಿಂದ ಸಂಸ್ಕಾರ ಹೊಂದಿದಂತಹುದಾಗಿಯೂ, ಪ್ರಜಾಪತಿ ದೇವತಾಕವೆಂಬ ಅಶ್ವವನ್ನು ಛೇದಿಸುತ್ತಿದ್ದಾರೆ. ಹೀಗೆ ಅಶ್ವವೇ ಸಾಧನವಾಗಿ ಉಳ್ಳ ಯಾಗ ಸ್ವರೂಪವೇ ಈ ಲೋಕಗಳನ್ನು ಪ್ರಕಾಶಿಸುವಂತೆ ಮಾಡುವ ಈ ಸೂರ್ಯ. ಇಂತಹ ಸೂರ್ಯನಿಗೆ ಕಾಲವಿರೂಪವಾದ ಸಂವತ್ಸರವೇ ಶರೀರ. ಈ ಯಜ್ಞ ಸಾಧನವಾದ ಅಗ್ನಿ ಹಿಂದೆ ಹೇಳಿದಂತಹ ಅರ್ಕವೆಂಬ ಹೆಸರನ್ನು ಹೊಂದಿದೆ. ಇದಕ್ಕೆ ಈ ಸ್ವರ್ಗ ಮರ್ತ್ಯ ಪಾತಾಳಗಳೆನ್ನುವ ಮೂರು ಲೋಕಗಳು, ದೇಹಗಳು. ಈ ರೀತಿ ಸಾಧ್ಯ ಸಾಧನಗಳಾದ ಅಗ್ನಿ, ಆದಿತ್ಯರಿಬ್ಬರನ್ನು ಅರ್ಕಶ್ವಮೇಧಗಳೆಂದು ಹೇಳುವರು. ಈ ಪ್ರಕಾರ ಉಭಯಾತ್ಮಕವಾದ ದೇವತೆ ಒಂದೇ ಆಗಿ ಪ್ರಜಾಪತಿ(ಯಾಗಿ)ಯೇ ಆಗುತ್ತಿದೆ. ಈ ರೀತಿಯಾಗಿ ಅನೇಕ ದೇವತಾ ಸ್ವರೂಪವಾದ ಅಶ್ವಮೇಧವನ್ನು ಪ್ರಜಾಪತಿ ಸ್ವರೂಪವಾಗಿ ತಿಳಿದುಕೊಂಡವನು ಮರಣಹೊಂದಿದ ಮೇಲೆ ಮತ್ತೆ ಹುಟ್ಟುವುದಿಲ್ಲ. ಇಂತಹವನಿಗೆ ಪರಬ್ರಹ್ಮವು ಆತ್ಮಸ್ವರೂಪವಾಗುತ್ತಿದ್ದಾನೆ. (ಇಂತಹ) ಹೀಗೆ ಪರಮಾತ್ಮ ಸ್ವರೂಪವಾಗುವುದೇ ಅಲ್ಲದೆ ಅವನ ಅಭೀಷ್ಟದ ಪ್ರಕಾರ ಇಂದ್ರಾದಿ ದೇವತೆಗಳಲ್ಲಿ ಒಬ್ಬ ದೇವತೆಯಾಗಿ ಇವನಿಗೆ ಜನ್ಮ ಲಭಿಸುವುದು.

## ತೃತೀಯೋಧ್ಯಾಯ – ತೃತೀಯ ಬ್ರಾಹ್ಮಣಂ

**ಮಂ.ಶ್ಲೋ॥ ದ್ವಯಾ ಹ ಪ್ರಾಜಾಪತ್ಯಾಃ ದೇವಶ್ಚಾಸುರಾಶ್ಚಃ ತತಃ ಕಾನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ ತ ಏಷು ಲೋಕೇಷ್ವಸ್ಪರ್ಧನ್ತ ತೇ ಹ ದೇವಾ ಊಚುರ್ಹನ್ತಾ ಸುರಾನ್ಯಜ್ಞ ಉದ್ಗೀಥೇನಾತ್ಯಯಾಮೇತಿ (1)**

ತಾ : ಎರಡು ವಿಧಗಳಾಗಿರುವ ದೇವತೆಗಳು, ಅಸುರರು ಪ್ರಜಾಪತಿಗೆ ಸಂಬಂಧಿಸಿದವರೇ. ಆದ್ದರಿಂದಲೇ ದೇವತೆಗಳು ಸ್ವಲ್ಪ ಸಂಖ್ಯೆಯಲ್ಲಿ, ರಾಕ್ಷಸರು ಅಧಿಕ ಸಂಖ್ಯೆಯಲ್ಲೂ ಆದರು. ಈ ದೇವಾಸುರರು, ಈ ಲೋಕಗಳ ವಿಷಯವಾಗಿ ಕಲಹ ಮಾಡಿಕೊಂಡರು. ಆ ದೇವತೆಗಳು ಈಗ ಯಜ್ಞದಲ್ಲಿ ಮುಖ್ಯಪ್ರಾಣವನ್ನು ಸ್ತೋತ್ರ ಮಾಡುವುದರಿಂದ, ರಾಕ್ಷಸನನ್ನು ಅತಿಕ್ರಮಿಸಿದವೆಂದು ಹೇಳಿದರು. (ಜ್ಯೋತಿಷ್ಟೋಮವೆಂಬ ಯಜ್ಞದಲ್ಲಿ ಪಠಿಸುವ ಮಂತ್ರಗಳಲ್ಲಿ ಉದ್ಗೀಥವೆಂದು, ಪಠಿಸುವವರನ್ನು ಉದ್ಗಾತನೆಂದು ಕರೆಯುವರು. ಉದ್ಗೀಥವನ್ನು ಮುಖ್ಯ ಪ್ರಾಣವಾಗಿ ಭಾವಿಸಿ ಉಪಾಸನೆ ಮಾಡುವುದನ್ನು ವಿಪುಲವಾಗಿ ಹೇಳಲಾಗಿದೆ.)

**ಮಂ.ಶ್ಲೋ॥ ತೇ ಹ ವಾಚಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯೋ ವಾಗುದಗಾಯತ್। ಯೋ ವಾಚಿ ಭೋಗಸ್ತಂ ದೇವೇಭ್ಯ ಆಗಾಯತ್ ಯತ್ಕಲ್ಯಾಣಂ ವದತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾऽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾऽವಿಧ್ಯನ್ ಸ ಯಸ್ಸ ಪಾಪ್ಮಾ ಯದೇವೇದಮಪ್ರತಿರೂಪಂ ವದತಿ ಸ ಏವ ಸ ಪಾಪ್ಮಾ (2)**

ತಾ : ಆ ದೇವತೆಗಳೇ ವಾಗಭಿಮಾನ ದೇವತೆಯನ್ನು ಕುರಿತು ನೀನು ನಮಗಾಗಿ ಈ ಯಜ್ಞದಲ್ಲಿ ಔದ್ಗಾತ್ರಕರ್ಮವನ್ನು ನೆರವೇರಿಸಿಕೊಡಬೇಕೆಂದು ಹೇಳಿದರು. ಆ ವಾಗಭಿಮಾನ ದೇವತೆಯು ಅದೇ ರೀತಿಯಾಗಿ ಮಾಡುವೆನೆಂದು ಹೇಳಿ, ದೇವತೆಗಳಿಗಾಗಿ, ತನಗಾಗಿ ವೇದಗಾನ ಮಾಡಿತು. ಹೀಗೆ ವೇದಗಾನವನ್ನು ಮಾಡಲು, ಆ ರಾಕ್ಷಸರು ಈರ್ಷ್ಯೆಯಿಂದ ಆ ಉದ್ಗಾತನನ್ನು ಕುರಿತು ಬೇಗ ಹೋಗಿ ಪಾಪಸಂಕಲ್ಪದಿಂದ ಹತ್ಯೆ ಮಾಡಿದರು. ಶಾಸ್ತ್ರನಿಷಿದ್ಧವಾದ ಯಾವ ಪಾಪದಿಂದ ಆ ಕರ್ಮವನ್ನು ಅಸುರರು ಹತ್ಯೆಗೈದರೋ, ಅಂತಹ ಶಾಸ್ತ್ರ ನಿಷಿದ್ಧ ಪಾಪವು, ಆ ಪ್ರಜಾಪತಿ ಕಾರ್ಯಭೂತರಾದ ಪ್ರಜೆಗಳ ವಾಕ್ಕಿನಲ್ಲಿ ಸೇರಿ ಬೀಭತ್ಸಾನೃತಾದಿ ರೂಪಗಳಲ್ಲಿ ವ್ಯಾಪಿಸಿದೆ.

**ಮಂ.ಶ್ಲೋ॥ ಅತ ಹ ಪ್ರಾಣಮೂಚುಸ್ತ್ವಂ ಸ ಉದ್ಗಾಯೇತಿ ತಥೇತಿ ತೇಭ್ಯಃ ಪ್ರಾಣ ಉದಗಾಯದ್ಯಃ ಪ್ರಾಣೇ ಭೋಗಸ್ತಂ ದೇವೇಭ್ಯ ಆಗಾಯತ್ ಯತ್ಕಲ್ಯಾಣಂ ಜಿಘ್ರತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾऽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾವಿಧ್ಯನ್ ಸ ಯಸ್ಸ ಪಾಪ್ಮಾ ಯದೇವೇದಮಪ್ರತಿರೂಪಂ ಜಿಘ್ರತಿ ಸ ಏವ ಸ ಪಾಪ್ಮಾ (3)**

ತಾ : ಆನಂತರ ನಮಗಾಗಿ ಉದ್ಗಾನವನ್ನು ಮಾಡಬೇಕೆಂದು ದೇವತೆಗಳು ಪ್ರಾಣಕ್ಕೆ (ಘ್ರಾಣೇಂದ್ರಿಯಕ್ಕೆ), ಹೇಳಿದರು. ಹಾಗೆಯೇ ಆಗಲೆಂದು ಪ್ರಾಣವು ಅವರಿಗಾಗಿ ಉದ್ಗಾತೃಗಾನವನ್ನು ಮಾಡಿತು. (ಉಳಿದ ವಿಷಯವು ಮೇಲಿನ ಮಂತ್ರದಂತೆಯೇ) ರಾಕ್ಷಸರು ಅದನ್ನು ಪಾಪದಿಂದ ಹಿಮ್ಮೆಟ್ಟಿಸಿದರು. ಅದೇ ನಮ್ಮ, ದುರ್ಗಂಧ ಸುಗಂಧಗಳನ್ನು ಆಘ್ರಾಣಿಸುವಂತಹುದು, ಇದರ ಪಾಪ(ವು). ಈ ಪಾಪದಿಂದ ಘ್ರಾಣವು ಬಾಧೆಗೊಳಗಾಗುವುದು.

**ಮಂ.ಶ್ಲೋ॥ ಅಥ ಹ ಚಕ್ಷುರೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯಶ್ಚಕ್ಷುರುದಗಾಯತ್। ಯಶ್ಚಕ್ಷುಷಿ ಭೋಗಸ್ತಂ ದೇವೇಭ್ಯ ಆಗಾಯದ್ಯತ್ಕಲ್ಯಾಣಂ ಪಶ್ಯತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾऽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾऽವಿಧ್ಯನ್ ಸ ಯ ಸ್ಸಪಾಪ್ಮಾ ಯದೇವೇದಮಪ್ರತಿರೂಪಂ ಪಶ್ಯತಿ ಸ ಏವ ಸ ಪಾಪ್ಮಾ (4)**

ತಾ : ಅನಂತರ ಮೇಲೆ ಹೇಳಿದ ವಿಧವಾಗಿ ಚಕ್ಷುರಿಂದ್ರಿಯವನ್ನು ದೇವತೆಗಳಿಗಾಗಿ ಉದ್ಗಾತೃ ಗಾನ ಮಾಡಲು ಹೋರಾಡಿದರು. ಆದರೆ ಅದನ್ನು ಸಹ ಪಾಪದಿಂದ ರಾಕ್ಷಸರು ಹಿಮ್ಮೆಟ್ಟಿಸಿದರು. ಚಕ್ಷುವು ಯಾವುದಾದರೂ ಮೂಲದಿಂದ ಅಯೋಗ್ಯವಾದ ರೂಪಗಳನ್ನು ನೋಡಿದಲ್ಲಿ ಅದೇ ಚಕ್ಷುರಿಂದ್ರಿಯದ ಪಾಪವಾಗಿರುತ್ತದೆ.

**ಮಂ.ಶ್ಲೋ॥ ಅಥ ಹ ಶ್ರೋತ್ರಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯಃ ಶ್ರೋತ್ರಮುದಗಾಯತ್ ಯಃ ಶ್ರೋತ್ರೇ ಭೋಗಸ್ತಂ ದೇವೇಭ್ಯ ಆಗಾಯದ್ಯತ್ಕಲ್ಯಾಣಗ್ಂ ಶೃಣೋತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ ಸ ಯಸ್ಸಪಾಪ್ಮಾಯ ದೇವೇದಮಪ್ರತಿರೂಪಗ್ಂ ಶೃಣೋತಿ ಸ ಏವ ಸ ಪಾಪ್ಮಾ (5)**

ತಾ : ಆಮೇಲೆ ದೇವತೆಗಳು ಶ್ರೋತ್ರವನ್ನು ಕುರಿತು ನೀನು ನಮಗಾಗಿ ಉದ್ಗಾತೃಗಾನವನ್ನು ಮಾಡಬೇಕೆಂದು ಕೋರಿದರು. ಆ ಶ್ರೋತೃವು ಸರಿಯೆಂದು ಗಾನಮಾಡಿತು. ಶ್ರೋತ್ರದಲ್ಲಿ ಯಾವುದು ಭೋಗವೋ ಅದನ್ನು ಕುರಿತು ದೇವತೆಗಳಿಗಾಗಿ ಗಾನ ಮಾಡಿತು. ಶ್ರೋತ್ರ ನಿಮಿತ್ತವಾದ ಸುಖಾನು-ಭವವನ್ನುದ್ದೇಶಿಸಿ, ದೇವತೆಗಳಿಗಾಗಿ ತನಗಾಗಿ ಗಾನ ಮಾಡಿತು. ಹೀಗೆ ಮಾಡಿದಾಗ ಆ ರಾಕ್ಷಸರು ಈ ಯೌದ್ಗಾತ್ರಕರ್ಮದಿಂದ ದೇವತೆಗಳು ಅತಿಕ್ರಮಿಸುವರೆಂದು ಭಾವಿಸಿ, ಅಸುರ ಸಂಬಂಧವಾದ ಪಾಪದಿಂದ ಅಪರಿಶುದ್ಧಿಗೊಳಿಸಿದರು. ಆ ಶಾಸ್ತ್ರನಿಷಿದ್ಧವನ್ನು ಅಸುರ ಸಂಬಂಧವಾದ ಶ್ರೋತ್ರಕರ್ಮವೇನಿದೆಯೋ ಅದೇ ಈ ಪಾಪವಾಗಿದೆ.

**ಮಂ.ಶ್ಲೋ॥ ಅಥ ಹ ಮನ ಊಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯೋ ಮನ ಉದಗಾಯತ್ ಯೋ ಮನಸಿ ಭೋಗಸ್ತಂ ದೇವೇಭ್ಯ ಆಗಾಯದ್ಯತ್ಕಲ್ಯಾಣಗ್ಂ ಸಙ್ಕಲ್ಪಯತಿ ತದಾತ್ಮನೇ। ತೇ ವಿದುರನೇನ ವೈ ಸ ಉದ್ಗಾತ್ರಾತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ ಸ ಯಸ್ಸ ಪಾಪ್ಮಾ ಯದೇವೇದಮಪ್ರತಿರೂಪಗ್ಂ ಸಙ್ಕಲ್ಪಯತಿ ಸ ಏವ ಸ ಪಾಪ್ಮೈವಮು ಖಲ್ವೇತಾ ದೇವತಾಃ ಪಾಪ್ಮಭಿರುಪಾಸೃಜನ್ನೇವಮೇನಾಃ ಪಾಪ್ಮನಾವಿಧ್ಯನ್ (6)**

ತಾ : ಅನಂತರ ಅಸುರರು ಶ್ರೋತ್ರವನ್ನು ದುರ್ವಿಷಯದಲ್ಲಿ ತೊಡಗಿಸಲು, ದೇವತೆಗಳು ಆಗ ಮನೋಧಿಷ್ಠಾನ ದೇವತೆಯನ್ನು ಕುರಿತು ಧಾವಿಸಿ ನೀನು ನಮಗಾಗಿ ಔದ್ಗಾತ್ರ ಕರ್ಮವನ್ನು ಮಾಡಬೇಕು ಎಂದು ಕೋರಲು ಅದು ಅದೇ ವಿಧವಾಗಿ ಮಾಡಿತು. ಮನಸ್ಸು ದೇವತೆಗಳಿಗಾಗಿ ಗಾನ ಮಾಡಿತು. ಹೀಗೆ ಮಾಡಿದಾಗ ಆ ಅಸುರರು ಈ ಔದ್ಗಾತ್ರ ಕರ್ಮದಿಂದ ದೇವತೆಗಳು ನಮ್ಮನ್ನು ಅತಿಕ್ರಮಿಸುವರೆಂದು ಮನೋಽ ಅಧಿಷ್ಠಾನ ದೇವತೆಯನ್ನು ಕುರಿತು, ಹೋಗಿ ಅಸುರ ಸಂಬಂಧವಾದ ಪಾಪದೊಂದಿಗೆ ಮನಸ್ಸನ್ನು ಅಪರಿಶುದ್ಧಗೊಳಿಸಿದರು. ಶಾಸ್ತ್ರನಿಷಿದ್ಧವಾದ ಅಸುರ ಸಂಬಂಧವಾದ ಮನೋವ್ಯಾಪಾರವೇನಿದೆಯೋ ಅದೇ ಈ ಪಾಪ. ಇದೇ ಪ್ರಕಾರ ಸರ್ವೇಂದ್ರಿಯ-ಗಳನ್ನು ದೇವತೆಗಳು ಪ್ರಾರ್ಥಿಸಲು, ಆ ಇಂದ್ರಿಯಗಳೆಲ್ಲವನ್ನೂ ರಾಕ್ಷಸರು ಪಾಪದಿಂದ ತುಂಬಿದರು. (ಉದ್ಗಾತೃಗಾನದಲ್ಲಿ ಮೂರು ಮಂತ್ರಗಳು ಯಜಮಾನನಿಗಾಗಿ ಇವೆ. ಈ ಮಂತ್ರಗಳನ್ನು ಪವಮಾನ-ವೆನ್ನುವರು. ಮಿಕ್ಕ ಒಂಭತ್ತು ಮಂತ್ರಗಳು ಉದ್ಗಾತೃಗಾಮಿಯಾದ ಮಂತ್ರಗಳು. ಒಟ್ಟು ಹನ್ನೆರಡು ಮಂತ್ರಗಳೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.)

ಮಂ.ಶ್ಲೋ॥ ಅಥ ಹೇಮಮಾಸನ್ಯಂ ಪ್ರಾಣಮೂಚು ಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯ ಏಷ ಪ್ರಾಣ ಉದಗಾಯತ್ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾವಿದ್ಯನ್ ಸ ಯಥಾಶ್ಮಾನಮೃತ್ವಾ ಲೋಷ್ಟೋ ವಿಧ್ವಗ್ಂ ಸೇತ್ಯೈವಗ್ಂ ಹೈವ ವಿಧ್ವಗ್ಂ ಸಮಾನಾ ವಿಷ್ವಞ್ಚೋ ವಿನೇಶುಸ್ತತೋ ದೇವಾ ಅಭವನ್ ಪರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ ಪಾಪ್ಮಾ ಭ್ರಾತೃವ್ಯೋ ಭವತೇ ಯ ಏವಂ ವೇದ (7)

ತಾ : ರಾಕ್ಷಸರು ಮನಸ್ಸನ್ನು ಶಾಸ್ತ್ರ ನಿಷಿದ್ಧವಾದ ಪಾಪದಿಂದ ಅಪರಿಶುದ್ಧ ಮಾಡಿದರು. ಇದೇ ಪ್ರಕಾರವಾಗಿ ಇಂದ್ರಿಯಗಳೆಲ್ಲವನ್ನೂ ಅಪರಿಶುದ್ಧ ಮಾಡಲು, ದೇವತೆಗಳು ಆಗ ವದನಗುಹೆ-ಯಲ್ಲಿರುವಂತಹ ಪ್ರಾಣವನ್ನು ಸಮೀಪಿಸಿ ಓ ಪ್ರಾಣವೇ! ನೀನು ನಮಗಾಗಿ ಈ ಯಜ್ಞದಲ್ಲಿ ಔದ್ಗಾತ್ರ ಕರ್ಮವನ್ನು ಮಾಡಬೇಕೆಂದು ಪ್ರಾರ್ಥಿಸಿದರು. ಆ ಪ್ರಾಣವು ಹಾಗೆಯೇ ಮಾಡುವೆನೆಂದು ಹೇಳ ಗಾನ ಮಾಡಲು, ಆ ಅಸುರರು ಆ ಪ್ರಾಣವನ್ನು ತಮ್ಮ ಸಂಬಂಧವಾದ ಪಾಪದಿಂದ ಓಡಿಸಲು ನಿಶ್ಚಯಿಸಿದರು. ಹಿಂದಿನ ಪದ್ಧತಿಯಂತೆಯೇ ವಾಗಾದಿಗಳಲ್ಲಿ ನಾನಾ ವಿಧವಾದ ಗತಿಗಳನ್ನು ಹೊಂದಿದವರಾಗಿ, ಕಲ್ಲು ಬಂಡೆಯನ್ನು ಹೊಡೆಯಬೇಕೆಂದು ಹೊರಟ ಮಣ್ಣಿನ ಹೆಂಟೆ ಆ ಪಾಷಾಣ-ವನ್ನು ಹೊಡೆಯಲಾರದೆ ಯಾವ ರೀತಿಯಾಗಿ ನಶಿಸುವುದೋ, ಆ ವಿಧವಾಗಿಯೇ ಅಸುರರು ಶಿಥಿಲವಾಗಿ ಹೋದರು. ಆ ಅಸುರರು ನಶಿಸಿ ಹೋಗಲು ವಾಗಾದೀಂದ್ರಿಯಗಳು ಪಿಂಡ ಮಾತ್ರವಾದ ದೇಹದಲ್ಲಿನ ಇಂದ್ರಿಯಗೋಳಗಳಲ್ಲಿ ದೇವತ್ವವನ್ನು ಹೊಂದಿದವು. ಈ ರೀತಿಯಾಗಿ ದೇವತೆಗಳು ಗೆದ್ದರು. ಅಸುರರು ಅಪಜಯ ಹೊಂದಿದರು. ಹೀಗೆ ಯಜ್ಞವನ್ನು ಮಾಡುವವನು ದೇಹಾಭಿಮಾನ-ವನ್ನು ತೊರೆದು ಪ್ರಜಾಪತಿತ್ವವನ್ನು ಹೊಂದುತ್ತಿದ್ದಾನೆ. ಹೀಗೆ ತಿಳಿದು ಕೊಂಡವರು ಪೂರ್ಣ ಫಲವನ್ನು ಹೊಂದುತ್ತಿದ್ದಾರೆ. ಈ ಪ್ರಕಾರವಾಗಿ ದೇವತೆಗಳು ಜಯಿಸಿದರು. ಅಸುರರು ಅಪಜಯವನ್ನು ಹೊಂದಿದರು.

ಮಂ.ಶ್ಲೋ॥ ತೇ ಹೋಚುಃ ಕ್ವನು ಸೋಽಭೂದ್ಯೋ ನ ಇತ್ಥಮಸಕ್ತೇತ್ಯಯ ಮಾಸ್ಯೇಽನ್ತರಿತಿ ಸೋಽಯಾಸ್ಯ ಆಙ್ಗೀರಸೋಽಙ್ಗಾನಾಗ್ಂ ಹಿ ರಸಃ (8)

ತಾ : ಯಾವ ಪ್ರಾಣವು ನಮ್ಮನ್ನು ಈ ಪ್ರಕಾರವಾಗಿ ದೇಹ ಭಾವವನ್ನು ಹೊಂದಿದೆಯೋ, ಆ ಪ್ರಾಣವು, ಎಲ್ಲಿ ಇದೆ? ಎಂದು ಆ ದೇವತೆಗಳು ಪ್ರಶ್ನಿಸಿದರು. ಪ್ರತ್ಯಕ್ಷವಾಗಿ ಮುಖದ ಮಧ್ಯದಲ್ಲಿದ್ದ ಪ್ರಾಣವನ್ನು ಹೊಂದಿದರು. ಇದರಿಂದಲೇ ಆ ಪ್ರಾಣವು ಆಯಾಸ್ಯವೆಂದೂ, ಕಾರ್ಯಕಾರಣವಾದ ಸರ್ವಾವಯವಗಳಲ್ಲಿ ಶ್ರೇಷ್ಠವಾದ ಆತ್ಮವಾಗುವುದುದರಿಂದ ಅಂಗೀರಸವೆಂದು ಪ್ರಸಿದ್ಧಿಹೊಂದಿತು. (ಅಂಗೀರಸ=ದೇಹದ ಅವಯವಗಳಲ್ಲಿ ಸಾರಭೂತವಾದುದು.)

ಮಂ.ಶ್ಲೋ॥ ಸಾವಾ ಏಷಾ ದೇವತಾ ದೂರ್ನಾಮ ದೂರಗ್ಂ ಹ್ಯಸ್ಯಾ ಮೃತ್ಯುರ್ದೂರಗ್ಂ ಹ ವಾ ಅಸ್ಮಾನ್ಮೃತ್ಯುರ್ಭವತಿ ಯ ಏವಂ ವೇದ (9)

ತಾ : ಆ ದೇವತೆ "ದೂರ್" ಎನ್ನುವ ಹೆಸರುಳ್ಳವನು. ಏಕೆಂದರೆ ಮೃತ್ಯುವು ಆತನಿಗೆ ದೂರವಾಗಿರುವುದು. ಈ ವಿಧವಾಗಿ ತಿಳಿದವರಿಗೆ ಮೃತ್ಯುವು ದೂರವಾಗುವುದು.

ಮಂ.ಶ್ಲೋ॥ ಸಾ ವಾ ಏಷಾ ದೇವತ್ಯೆ ತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯ ಯತ್ರಾಸಾಂ ದಿಶಾಮನ್ತಸ್ತದ್ಗಮಯಾಞ್ಚಕಾರ ತದಾಸಾಂ ಪಾಪ್ಮನೋ ವಿನ್ಯದಧಾತ್ತಸ್ಮಾನ್ನ ಜನಮಿಯಾನ್ನಾನ್ತಮಿಯಾನ್ನೇತ್ಪಾಪ್ಮಾನಂ ಮೃತ್ಯುಮನ್ವವಾಯಾನೀತಿ (10)

ತಾ : ಈ ಪ್ರಾಣದೇವತೆ ಅನ್ಯದೇವತೆಗಳ (ಇಂದ್ರಿಯ ವಿಷಯ ಸಂಸರ್ಗದಿಂದ ಹುಟ್ಟಿದ) ಪಾಪವನ್ನು ಹೋಗಲಾಡಿಸಿ ಆ ದೇವತೆಗಳನ್ನು ಪ್ರಾಗಾದಿ ದಿಗ್ಭೇದಗಳಿಲ್ಲದ ಪ್ರದೇಶಕ್ಕೆ ತಳ್ಳಿಬಿಟ್ಟಿತು. ಆದ್ದರಿಂದ ಮೃತ್ಯು ಸ್ವರೂಪವಾದ ಪಾಪವು ಆ ಪ್ರಾಣೋಪಾಸಕನನ್ನು ಸೇರಲಿಲ್ಲ. ಆತನಿರುವ ಪ್ರದೇಶಕ್ಕೂ ಸಹ ಆ ಪಾಪವು ಸಮೀಪಿಸುವುದಿಲ್ಲ.

ಮಂ.ಶ್ಲೋ॥ ಸಾ ವಾ ಏಷಾದೇವತ್ಯೆ ತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯಾಥೈನಾ ಮೃತ್ಯುಮತ್ಯವಹತ್ (11)

ತಾ : ಆ ಪ್ರಾಣ ದೇವತೆ (ಪ್ರಾಣವು) ಈ ಉಳಿದ ದೇವತೆಗಳ ಪಾಪರೂಪ ಮೃತ್ಯುವನ್ನು ದೂರ ಮಾಡಿ ಅವರನ್ನು ಮೃತ್ಯುವಿನಿಂದ ಬಹಿರ್ಗತ ಮಾಡಿತು.

ಮಂ.ಶ್ಲೋ॥ ಸ ವೈ ವಾಚಮೇವ ಪ್ರಥಮಾಮತ್ಯವಹತ್ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್ಸೋಽಯಮಗ್ನಿಃ ಪರೇಣ ಮೃತ್ಯುಮತಿಕ್ರಾನ್ತೋ ದೀಪ್ಯತೇ (12)

ತಾ : ಆ ಪ್ರಾಣವು ಉದ್ಗೀಥಕರ್ಮದಲ್ಲಿ ಪ್ರಧಾನವಾದ ವಾಕ್ಕನ್ನು ಮೃತ್ಯುವಿಗಿಂತ ಹೆಚ್ಚಿನದಾಗಿ ಮಾಡಿತು. ಆ ವಾಕ್ಕು ಮೃತ್ಯುವನ್ನು ಅತಿಕ್ರಮಿಸಿದುದರಿಂದ ಅಗ್ನಿಯಾಗಿ ಮಾರ್ಪಟ್ಟಿತು. ಆಗ ಆ ಅಗ್ನಿಯು ಮೃತ್ಯುವು ಇಲ್ಲದೆಯೇ ಪ್ರಕಾಶಿಸಿತು. ವಾಕ್ಕು ತನ್ನ ಸ್ವರೂಪವಾದ ಅಗ್ನಿಯಾಗಿ ಪ್ರಕಾಶಿಸಿತು.

ಮಂ.ಶ್ಲೋ॥ ಅಥ ಪ್ರಾಣಮತ್ಯವಹತ್ಸಾ ಯದಾ ಮೃತ್ಯುಮತ್ಯಮುಚ್ಯತ ಸ ವಾಯುರಭವತ್ಸೋಽಯಂ ವಾಯುಃ ಪರೇಣ ಮೃತ್ಯುಮತಿಕ್ರಾನ್ತಃ ಪವತೇ (13)

ತಾ : ಪ್ರಾಣ ವಾಯುವು (ಪ್ರಾಣವು) ಆ ಪ್ರಾಣದೇವತೋಪಾಸನೆಯಿಂದ, ಮೃತ್ಯು ಸ್ವರೂಪವನ್ನು ಬಿಟ್ಟು, ವಾಯುಸ್ವರೂಪವಾಗಿ ಮೃತ್ಯುವಿಲ್ಲದೆಯೇ ಬೀಸುತ್ತಿದೆ.

ಮಂ.ಶ್ಲೋ॥ ಅಥ ಚಕ್ಷುರತ್ಯವಹತ್ತದ್ಯದಾ ಮೃತ್ಯುಮತ್ಯಮುಚ್ಯತ ಸ ಆದಿತ್ಯೋಽಭವತ್ಸೋಽಸಾವಾದಿತ್ಯಃ ಪರೇಣಮೃತ್ಯುಮತಿಕ್ರಾನ್ತಸ್ತಪತಿ (14)

ತಾ : ನೇತ್ರೇಂದ್ರಿಯವು ಆ ಪ್ರಾಣದೇವತೋಪಾಸನೆಯಿಂದ, ಮೃತ್ಯು ಸ್ವರೂಪವನ್ನು ಬಿಟ್ಟು, ಸೂರ್ಯ ಸ್ವರೂಪವಾಗಿ ಮೃತ್ಯುವಿಲ್ಲದೆಯೇ ಪ್ರಕಾಶಿಸುತ್ತಿದೆ.

ಮಂ.ಶ್ಲೋ॥ ಅಥ ಶ್ರೋತ್ರಮತ್ಯವಹತ್ತದ್ಯದಾ ಮೃತ್ಯುಮತ್ಯಮುಚ್ಯತ ತಾ ದಿಶೋಽಭವಗ್ಂ ಸ್ತಾ ಇಮಾ ದಿಶಃ ಪರೇಣ ಮೃತ್ಯುಮತಿಕ್ರಾನ್ತಾಃ (15)

ತಾ : ಶ್ರೋತ್ರೇಂದ್ರಿಯವು ಆ ಪ್ರಾಣ ದೇವತೋಪಾಸನೆಯಿಂದ, ಮೃತ್ಯು ಸ್ವರೂಪವನ್ನು ಬಿಟ್ಟು ದಿಗ್ದೇವತಾ ಸ್ವರೂಪವಾಗಿ, ಮೃತ್ಯುವಿಲ್ಲದೆಯೇ ಪ್ರಕಾಶಿಸುತ್ತಿದೆ.

**ಮಂ.ಶ್ಲೋ॥ ಅಥ ಮನೋತ್ಯವಹತ್ತದ್ಯದಾಮೃತ್ಯುಮತ್ಯಮುಚ್ಯತ ಸ ಚನ್ದ್ರಮಾ ಅಭ್ಯವತ್ಸೋಽಸೌ ಚಂದ್ರಃ ಪರೇಣ ಮೃತ್ಯುಮತಿಕ್ರಾನ್ತೋ ಭಾತ್ಯೇವಗ್ಂ ಹ ವಾ ಏನಮೇಷಾ ದೇವತಾ ಮೃತ್ಯುಮತಿವಹತಿ ಯ ಏವಂ ವೇದ (16)**

ತಾ : ಆನಂತರ ಮನಸ್ಸು ಆ ಪ್ರಾಣದೇವತೋಪಾಸನೆಯಿಂದ, ಮೃತ್ಯು ಸ್ವರೂಪವನ್ನು ಬಿಟ್ಟು ಚಂದ್ರ ಸ್ವರೂಪವಾಗಿ ಮೃತ್ಯುವಿಲ್ಲದೆಯೇ ಪ್ರಕಾಶಿಸುತ್ತಿದೆ. ಹೀಗೆ ತಿಳಿದುಕೊಂಡು ಉಪಾಸಿಸುವ ಯಜಮಾನನನ್ನು ಈ ಪ್ರಾಣದೇವತೆಯು ಮೃತ್ಯುವಿನಿಂದ ರಕ್ಷಿಸುತ್ತದೆ. (ವಾಕ್ಕು, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ಇವುಗಳಿಗೆ ಅಧಿದೈವಿಕರೂಪಗಳು ಕ್ರಮವಾಗಿ ಅಗ್ನಿ ವಾಯು, ಆದಿತ್ಯ ದಿಕ್ಕು ಹಾಗೂ ಚಂದ್ರ.)

**ಮಂ.ಶ್ಲೋ॥ ಅಥಾತ್ಮನೇಽನ್ನಾದ್ಯ ಮಾಗಾಯದ್ಯದ್ಧಿ ಕಿಞ್ಚಾನ್ನಮದ್ಯತೇಽನೇನೈವ ತದದ್ಯತ ಇಹ ಪ್ರತಿತಿಷ್ಠತಿ (17)**

ತಾ : ಆನಂತರ ಪ್ರಾಣವು ತನಗಾಗಿ ಭಕ್ಷಣಾರ್ಹವಾದ ಶರೀರವನ್ನು ಕುರಿತು ಗಾನವನ್ನು ಮಾಡಿತು. ಯಾವುದರಿಂದ ಸಾಮಾನ್ಯವಾಗಿ ಅನ್ನವನ್ನು ಭಕ್ಷಿಸಲ್ಪಡುತ್ತಿರುವುದೋ, ಆ ಅನ್ನವು ಪ್ರಾಣದಿಂದಲೇ ಭಕ್ಷಿಸಲ್ಪಡುತ್ತಿದೆ. ಪ್ರಾಣವು ಶರೀರಾಕಾರವಾಗಿ ಪರಿಣಮಿಸಿದ ಈ ಅನ್ನಾದ್ಯಮ-ದಿಂದಲೇ ಶರೀರವನ್ನು ಕುರಿತು ಗಾನ ಮಾಡುವುದು.

**ಮಂ.ಶ್ಲೋ॥ ತದೇವಾ ಅಬ್ರುವನ್ನೇತಾವದ್ವಾ ಇದಗ್ಂ ಸರ್ವಂ ಯದನ್ನಂ ತದಾತ್ಮನ ಆಗಾಸೀರನು-ನೋಽಸ್ಮಿನ್ನನ್ನ ಆಭಜಸ್ವೇತಿ ತೇವೈ ಮಾಽಭಿಸಂವಿಶತೇತಿ ತಥೇತಿ ತಗ್ಂ ಸಮಸ್ತಂ ಪರಿಣ್ಯ ವಿಶನ್ತ। ತಸ್ಮಾದ್ಯದನೇನಾನ್ನಮತ್ತಿ ತೇನೈತಾಃ ತೃಪ್ಯನ್ತ್ಯೇವಗ್ಂ ಹವಾ ಏನಗ್ಂ ಸ್ವಾ ಅಭಿಸಂವಿಶನ್ತಿ ಭರ್ತಾ ಸ್ವಾನಾಗ್ಂ ಶ್ರೇಷ್ಠಃ ಪುರ ಏತಾ ಭವತ್ಯನ್ನಾದೋಽಧಿಪತಿರ್ಯ ಏವಂ ವೇದ ಯ ಉ ಹೈವಂ ವಿದಗ್ಂ ಸ್ವೇಷು ಪ್ರತಿಪ್ರತಿರ್ಬುಭೂಷತಿ ನ ಹೈವಾಲಂ ಭಾರ್ಯೇಭ್ಯೋ ಭವತ್ಯಥ ಯ ಏವೈತಮನುಭವತಿ ಯೋ ವೈ ತಮನುಭಾರ್ಯಾನ್ ಬುಭೂಷತಿ ಸ ಹೈವಾಲಂ ಭಾರ್ಯೇಭ್ಯೋ ಭವತಿ (18)**

ತಾ : ಆನಂತರ ಅನ್ನವನ್ನು ಕುರಿತು ಗಾನ ಮಾಡುತ್ತಿದ್ದ ಪ್ರಾಣವನ್ನು ಕುರಿತು ವಾಗಿಂದ್ರಿಯ ಮೊದಲಾದ ದೇವತೆಗಳು ಓ ಪ್ರಾಣವೇ! ನೀನು ಅನ್ನವನ್ನು ಕುರಿತು ಗಾನ ಮಾಡಿ ಸ್ವಾಧೀನ ಪಡಿಸಿಕೊಂಡೆ. ಆದ್ದರಿಂದ ಆನಂತರ ನಮ್ಮನ್ನು ಸಹ ಈ ಅನ್ನದಲ್ಲಿ ಸೇರಿಸಿಕೋ ಎಂದು ಕೋರಿದರು. ಪ್ರಾಣವು ಈ ರೀತಿಯಾಗಿ ಹೇಳಿತು. "ಓ ದೇವತೆಗಳೇ! ನೀವು ಸಹ ಅನ್ನವನ್ನು ಕೋರಿದಿರೇನು ನನ್ನನ್ನು ಅಭಿಮುಖವಾಗಿ ಪ್ರವೇಶಿಸಿರಿ. ಆಗ ವಾಗಾದಿ ದೇವತೆಗಳು ಆ ಪ್ರಾಣದಲ್ಲೆಡೆಗೆ ನಿಶ್ಚಯ-ವಾಗಿಯೂ ಪ್ರವೇಶಿಸಿದರು. ಆ ವಾಗಾದೀಂದ್ರಿಯ ದೇವತೆಗಳಿಗೆ ಆ ಅನ್ನವು ಪ್ರಾಣಕ್ಕೆ ಸ್ಥಿತಿಯನ್ನುಂಟು ಮಾಡುತ್ತಾ ಪ್ರಾಣಾಜ್ಞೆಯಿಂದ ತೃಪ್ತಿಯನ್ನುಂಟು ಮಾಡುತ್ತಿದೆ. ಆದ್ದರಿಂದ ಈ ವಾಗಾದಿ ದೇವತೆಗಳು ಆ ಪ್ರಾಣದಿಂದ ತೃಪ್ತಿಯನ್ನು ಹೊಂದುತ್ತಿದ್ದಾರೆ. ಈ ಪ್ರಕಾರ ಪ್ರಾಣ ಸ್ವರೂಪವನ್ನು ತಿಳಿದುಕೊಂಡರೂ, ತನ್ನ ಸಂಬಂಧವಾದ ಜ್ಞಾತಿಗಳು ಸಹ ತೃಪ್ತಿಯನ್ನು ಹೊಂದುತ್ತಿದ್ದಾರೆ. ಅವನು ತನ್ನ ಜ್ಞಾತಿಗಳಿಗೆ

ತನ್ನ ಸಂಬಂಧವಾದ ಅನ್ನದಿಂದ ಭರಿಸುವವನು ಶ್ರೇಷ್ಠನು, ಮುನ್ನಡೆಸುವವನು, ವ್ಯಾಧಿಯಿಲ್ಲದವನು ಪರಿಪಾಲಕನೂ ಆಗುತ್ತಿದ್ದಾನೆ. ಹೀಗೆ ಪ್ರಾಣವನ್ನು ತಿಳಿದುಕೊಳ್ಳುವಂತಹವನು ಜ್ಞಾತಿಗಳಲ್ಲಿ ಅನುಕೂಲಕರನಾಗಿ ತಾನು ಭರಿಸಬಹುದಾದವರನ್ನು ಭರಿಸುತ್ತಿದ್ದಾನೆ.

**ಮಂ.ಶ್ಲೋ॥ ಸೋಽಯಾಸ್ಯ ಆಙ್ಗೀರಸೋಽಙ್ಗಾನಾಗ್ಂ ಹಿ ರಸಃ ಪ್ರಾಣೋ ವಾ ಅಙ್ಗಾನಾಗ್ಂ ರಸಃ ಪ್ರಾಣೋ ಹಿ ವಾ ಅಙ್ಗಾನಾಗ್ಂ ರಸ ಸ್ತಸ್ಮಾದ್ಯಸ್ಮಾತ್ಕಸ್ಮಾಚ್ಚಾಙ್ಗಾತ್ ಪ್ರಾಣ ಉತ್ಕ್ರಾಮತಿ ತದೇವ ತಚ್ಛುಷ್ಯತ್ಯೇಷ ಹಿ ವಾ ಅಙ್ಗಾನಾಗ್ಂ ರಸಃ (19)**

ತಾ : ಈ ದೇಹದಲ್ಲಿರುವ ಆ ಪ್ರಾಣವು ಅವಯವಗಳಿಗೆ ರಸರೂಪವಾದುದರಿಂದಲೇ, ಅಂಗೀರಸವು ಪ್ರಾಣವು ಎಲ್ಲ ಅವಯವಗಳ ರಸ ಸ್ವರೂಪವೆಂದು ಪ್ರಸಿದ್ಧವಾಗಿದೆ. ಯಾವ ಅವಯವ-ದಿಂದ ಪ್ರಾಣವು ಹೋಗುತ್ತಿದೆಯೋ ಅಲ್ಲಿ(ಯೇ) ಆ ಅಂಗವು ಒಣಗಿಹೋಗುತ್ತದೆ. ಆದ್ದರಿಂದ ಆ ಪ್ರಸಿದ್ಧವಾದ ಪ್ರಾಣವೇ ಅವಯವಗಳಿಗೆ ರಸ ಸ್ವರೂಪವಾಗಿದೆ. (ಪ್ರಾಣವು ಎಲ್ಲಾ ಅವಯವಗಳಲ್ಲೂ ವ್ಯಾಪಿಸಿದೆ.)

**ಮಂ.ಶ್ಲೋ॥ ಏಷ ಉ ಏವ ಬೃಹಸ್ಪತಿರ್ವಾಗ್ವೈ ಬೃಹತೀ ತಸ್ಯಾ
ಏಷ ಪತಿಸ್ತಸ್ಮಾದು ಬೃಹಸ್ಪತಿಃ (20)**

ತಾ : ಈ ಪ್ರಾಣವೇ ಬೃಹಸ್ಪತಿ ರೂಪವಾದ ಋಗ್ವೇದಕ್ಕೆ ಪತಿ. ವಾಕ್ಕೇ ಬೃಹತೀಛಂದಸ್ಸು. ಈ ಬೃಹತೀ ಛಂದೋರೂಪವಾದ ಋಗ್ವೇದಕ್ಕೆ ಈ ಪ್ರಾಣವು ಪ್ರಭು. ಆದ್ದರಿಂದ ಬೃಹಸ್ಪತಿಯಾಗಿದೆ.

**ಮಂ.ಶ್ಲೋ॥ ಏಷ ಉ ಏವ ಬ್ರಹ್ಮಣಸ್ಪತಿರ್ವಾಗ್ವೈ ಬ್ರಹ್ಮ ತಸ್ಯಾ
ಏಷ ಪತಿಸ್ತಸ್ಮಾದು ಬ್ರಹ್ಮಣಸ್ಪತಿಃ (21)**

ತಾ : ಈ ಪ್ರಾಣವೇ ವಾಗ್ರೂಪವಾದ ಯಜುರ್ವೇದಕ್ಕೆ ಅಧಿಪತಿ; ಬ್ರಹ್ಮ ಸ್ವರೂಪವಾಗಿದೆ. (ಪ್ರಾಣವು ವಾಕ್ಕಿಗೆ ಅಧಿಪತಿ ಎಂದು ಅಭಿವರ್ಣಿಸಲಾಗಿದೆ.)

**ಮಂ.ಶ್ಲೋ॥ ಏಷ ಉ ಏವ ಸಾಮ ವಾಗ್ವೈ ಸಾಮ ಏಷ ಸಾ ಚಾಮಶ್ಚೇತಿ ತತ್ಸಾಮ್ನಸ್ಸಾಮತ್ವಮ್। ಯದ್ವೇವ ಸಮಃಪ್ಲುಷಿಣಾ ಸಮೋ ಮಶಕೇನ ಸಮೋ ನಾಗೇನ ಸಮ ಏಭಿಸ್ತ್ರಿಭಿರ್ಲೋಕೈ-ಸ್ಸಮೋನೇನ ಸರ್ವೇಣ ತಸ್ಮಾದ್ವೇವ ಸಾಮಾಽಶ್ನುತೇ ಸಾಮ್ನಸ್ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಮೇತತ್ಸಾಮ ವೇದ (22)**

ತಾ : ಈ ಪ್ರಾಣವೇ ಸಾಮ. ವಾಕ್ಕು, ಸಾಮ. ಅದು "ಸಾ" ಮತ್ತು "ಅಮ" ಎನ್ನುವುದು ಬೆರೆತುಹೋಗಿ ಆಗಿರುವಂತಹುದು. ಇದೇ ಸಾಮದ ಸಮರಸತ್ವ. ಈತನು ಒಂದು ವಿಧವಾದ ಮಧುಪಕಕ್ಕೆ ಮಶಕಕ್ಕೆ ಆನೆಗೆ ಈ ಮೂರು ಲೋಕಗಳಿಗೆ; ಈ ಸರ್ವಸ್ವದಲ್ಲಿಯೂ ಅಣುವು ಅಧಿಕವಾಗಿರುವುದಲ್ಲದೇ, ಅಥವಾ ಸಮಾನವಾಗಿರುವುದರಿಂದ ಆತ ಸಾಮವೆಂದೆನಿಸಿಕೊಳ್ಳುವನು. ಈ ಸಾಮವನ್ನು ಅರಿತವನು (ಸಾಮದ) ಪ್ರಾಣಸಾಯುಜ್ಯವನ್ನು ಸಾಲೋಕ್ಯ ಫಲವನ್ನು ಹೊಂದುತ್ತಿ-ದ್ದಾನೆ. (ವಾಕ್ಕೇ ಋಕ್ಕು, ವಾಕ್ಕೇ ಯಜಸ್ಸು, ವಾಕ್ಕೇ ಸಾಮ.)

**ಮಂ.ಶ್ಲೋ॥ ಏಷ ಉ ವಾ ಉದ್ಗೀಥಃ ಪ್ರಾಣೋ ವಾ ಉತ್ಪ್ರಾಣೇನ ಹಿದಗ್ಂ ಸರ್ವಮುತ್ತಬ್ಧಂ ವಾಗೇವ ಗೀಥೋಚ್ಚ ಗೀಥಾಚೇತಿ ಸ ಉದ್ಗೀಥಃ (23)**

ತಾ : ವಾಕ್ ಪ್ರಾಣ ಸಮುದಾಯವೇ ಉದ್ಗೀಥ, ಪ್ರಾಣವೇ "ಉತ್". ಪ್ರಾಣದಿಂದಲೇ ಈ ಸರ್ವವೂ ಧರಿಸಲಾಗುತ್ತಿದೆ. ವಾಕ್ಕೇ ಗೀಥ. ಆದ್ದರಿಂದ, "ಉತ್" ಹಾಗೂ "ಗೀಥ" ಇವೆರಡೂ ಸೇರಿ ಉದ್ಗೀಥವಾಗಿದೆ. (ಉದ್ಗೀಥವೆನ್ನುವುದು ಸಾಮದಲ್ಲಿ ಒಂದು ಭಾಗ, ಉದ್ಗಾನವೆಂದು ಭ್ರಮೆ ಪಡಬಾರದು.)

**ಮಂ.ಶ್ಲೋ॥ ತದ್ಧಾಪಿ ಬ್ರಹ್ಮದತ್ತಶ್ಚೈಕಿತಾನೇ ಯೋ ರಾಜಾನಂ ಭಕ್ಷಯನ್ನು ವಾಚಾಯಂತ್ಯಸ್ಯ ರಾಜಾ ಮೂರ್ಧಾನಂ ವಿಪಾತಯತಾದ್ಯದಿತೋಽಯಾಸ್ಯಾಽಙ್ಗೀರಸೋಽನ್ಯೇನೋದಗಾಯದಿತಿ ವಾಚಾ ಚ ಹ್ಯೇವ ಸಪ್ರಾಣೇನ ಚೋದಗಾಯದಿತಿ (24)**

ತಾ : ಈ ಅರ್ಥದಲ್ಲಿ ಒಂದು ಪ್ರಸಿದ್ಧ ಕಥೆಯು ಕೇಳುವಂತಹುದು. ಚಿಕಿತಾನನ ಪುತ್ರನಾದ ಬ್ರಹ್ಮದತ್ತನು ಸೋಮವನ್ನು ಭುಜಿಸುವಾಗ ಈ ಆಯಾಸ್ಯ ಅಂಗೀರಸನು, ವಾಕ್ಕು ಮತ್ತು ಪ್ರಾಣವನ್ನು ಈ ದೇವತೆಗಳ ಸಹಾಯ ಪಡೆಯದೆ ಉದ್ಗಾನ ಮಾಡಿದಂತಹ ಈ ಸೋಮರಾಜು ತನ್ನ ತಲೆಯನ್ನು ಕತ್ತರಿಸುವಂತಾಗಲಿ! ಎಂದು ಶಪಥ ಮಾಡಿ ಹೇಳಿದ.

**ಮಂ.ಶ್ಲೋ॥ ತಸ್ಯ ಹೈತಸ್ಯ ಸಾಮ್ನೋಯಃ ಸ್ವಂ ವೇದ ಭವತಿ ಹಾಸ್ಯ ಸ್ವಂ ತಸ್ಯ ವೈ ಸ್ವರ ಏವ ಸ್ವಂ ತಸ್ಮಾದಾರ್ತ್ವಿಜ್ಯಂ ಕರಿಷ್ಯನ್ವಾಚಿ ಸ್ವರಮಿಚ್ಛೇತ ತಯಾ ವಾಚಾ ಸ್ವರಸಮ್ಪನ್ನಯಾರ್ತ್ವಿ -ಜ್ಯಂ ಕುರ್ಯಾತ್ತಸ್ಮಾದ್ಯಜ್ಞೇ ಸ್ವರವನ್ತಂ ದಿದೃಕ್ಷನ್ತ ಏವ। ಅಥೋ ಯಸ್ಯ ಸ್ವಂ ಭವತಿ ಭವತಿ ಹಾಸ್ಯ ಸ್ವಂ ಯ ಏವಮೇತತ್ಸಾಮ್ನಃ ಸ್ವಂ ವೇದ (25)**

ತಾ : ಉದ್ಗೀಥ ರೂಪವಾದ, ಪ್ರಾಣ ಸ್ವರೂಪವಾದ ಸಾಮಕ್ಕೆ ಮಾಧುರ್ಯ ಧ್ವನಿಯೇ ಧನವಾದುದರಿಂದ, ಋತ್ವಿಕ್ಕರ್ಮವಾದ ಉದ್ಗಾನವನ್ನು ಮಾಡಲು ನಿಶ್ಚಯಿಸಿದಂತಹವನು ವಾಕ್ಕಿನಲ್ಲಿ ಮಧುರ ಸ್ವರರೂಪಧನವನ್ನು ಕೋರಬೇಕು. ಹೀಗೆ ಸ್ವರಸಂಪತ್ತು ಹೊಂದಿ ಯಜ್ಞದಲ್ಲಿ ಗಾನ ಮಾಡುವವನನ್ನು ಪ್ರಜೆಗಳು ಲೋಕದಲ್ಲಿ ಸಂಪತ್ತು ಹೊಂದಿದವನಂತೆಯೇ, ವಿಶೇಷ ಆದರಣೆಯಿಂದ ನೋಡುವರು. ಈ ಪ್ರಕಾರ ಸಾಮಕ್ಕೆ ಮಧುರ ಸ್ವರವೇ ಧನವೆಂದು ತಿಳಿದುಕೊಂಡವನಿಗೆ ಪ್ರಸಿದ್ಧವಾಗಿ ಸಂಪತ್ತು ಲಭಿಸುತ್ತದೆ.

**ಮಂ.ಶ್ಲೋ॥ ತಸ್ಯ ಹೈತಸ್ಯ ಸಾಮ್ನೋ ಯಸ್ಸುವರ್ಣಂ ವೇದ ಭವತಿ ಹಾಸ್ಯ ಸುವರ್ಣಂ ತಸ್ಯ ವೈ ಸ್ವರ ಏವ ಸುವರ್ಣಂ ಭವತಿ ಹಾಸ್ಯ ಸುವರ್ಣಂ ಯ ಏವಮೇತತ್ಸಾಮ್ನಸ್ಸುವರ್ಣಂ ವೇದ (26)**

ತಾ : ಸಾಮಶಬ್ದವಾಚ್ಯವಾದ ಈ ಪ್ರಾಣದ ಸುವರ್ಣವನ್ನು ಯಾರು ತಿಳಿದುಕೊಳ್ಳುತ್ತಾರೋ, ಅಂತಹವನಿಗೆ, ಸುವರ್ಣವು ಪ್ರಸಿದ್ಧವಾಗಿ ಲಭಿಸುತ್ತದೆ. ಆ ಪ್ರಾಣಕ್ಕೆ ಸ್ವರವೇ ಭೂಷಣ; ಯಾರು ಈ ಪ್ರಕಾರ ಸಾಮಶಬ್ದವಾಚ್ಯವಾದ ಪ್ರಾಣದ (ಉದ್ಗೀಥದ) ಸುವರ್ಣವನ್ನು ತಿಳಿದುಕೊಳ್ಳುವನೋ ಅಂತಹವನಿಗೆ ಸುವರ್ಣಭೂಷಣವು ಪ್ರಸಿದ್ಧವಾಗಿ ಲಭಿಸುತ್ತದೆ.

**ಮಂ.ಶ್ಲೋ॥ ತಸ್ಯ ಹೈತಸ್ಯ ಸಾಮ್ನೋ ಯಃ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತಿ ತಸ್ಯ ವೈ ವಾಗೇವ ಪ್ರತಿಷ್ಠಾವಾಚಿ ಹಿ ಖಲ್ವೇಷ ಏತತ್ಪ್ರಾಣಃ ಪ್ರತಿಷ್ಠಿತೋ ಗೀಯತೇಽನ್ನ ಇತ್ಯುಹೈಕ ಆಹುಃ(27)**

ತಾ : ಆ ಸಾಮ ಶಬ್ದವಾಚ್ಯವಾದ ಪ್ರಾಣಕ್ಕೆ ವಕ್ಷಸ್ಥಳದಲ್ಲಿ, ಕಂಠದಲ್ಲಿ, ಶಿರಸ್ಸಿನಲ್ಲಿ, ನಾಲಿಗೆಯ ಮೂಲದಲ್ಲಿ ದಂತಗಳಲ್ಲಿ, ಮೂಗಿನಲ್ಲಿ, ತುಟಿಗಳಲ್ಲಿ, ದವಡೆಗಳಲ್ಲಿ ಈ ಎಂಟು ಸ್ವರೂಪವಾಗಿರುವ ವಾಕ್ಕೇ ಸ್ಥಾನವಾಗುತ್ತದೆ. ಅಂತಹ ವಾಕ್ಕಿನಲ್ಲಿ ಈ ಮುಖ್ಯ ಪ್ರಾಣವು ಸಾಮಗಾನವನ್ನು ಮಾಡುತ್ತಿದೆ. ಕೆಲವರು ಈ ಪ್ರಾಣವು ಅನ್ನ ಪರಿಣಾಮವಾದ ಶರೀರದಲ್ಲಿದ್ದು ಸಾಮಗಾನವನ್ನು ಮಾಡುತ್ತಿದೆಯೆಂದು ಹೇಳಿದರು. ಈ ರೀತಿಯಾಗಿ ಮುಖ್ಯ ಪ್ರಾಣವು ಇರುವ ಸ್ಥಾನ-ಪ್ರಾಣದ ಸ್ಥಾನವನ್ನು ತಿಳಿದುಕೊಂಡವನು ಪ್ರಾಣ ತೇಜಸ್ಸನ್ನು ಹೊಂದಿದವನಾಗುತ್ತಾನೆ.

**ಮಂ.ಶ್ಲೋ॥ ಅಥಾತಃ ಪವಮಾನಾನಾಮೇವಾಭ್ಯಾರೋಹಃ ಸ ವೈ ಖಲು ಪ್ರಸ್ತೋತಾ ಸಾಮ ಪ್ರಸ್ತೌತಿ ಸ ಯತ್ರ ಪ್ರಸ್ತುಯಾತ್ತದೇತಾನಿ ಜಪೇತ್ । ಅಸತೋ ಮಾ ಸದ್ಗಮಯ ತಮಸೋ ಮಾ ಜ್ಯೋತಿರ್ಗಮಯ ಮೃತ್ಯೋರ್ಮಾಽಮೃತಂ ಗಮಯೇತಿ ಸ ಯದಾ ಹಾಸತೋ ಮಾ ಸದ್ಗಮಯೇತಿ ಮೃತ್ಯುರ್ವಾ ಅಸತ್ಸದಮೃತಂ ಮೃತ್ಯೋರ್ಮಾಮೃತಂ ಗಮಯಾಮೃತಂ ಮಾ ಕುರ್ವಿತ್ಯೇವೈತದಾಹ ತಮಸೋ ಮಾ ಜ್ಯೋತಿರ್ಗಮಯೇತಿ ಮೃತ್ಯುರ್ವೈ ತಮೋ ಜ್ಯೋತಿರಮೃತಂ ಮೃತ್ಯೋರ್ಮಾಮೃತಂ ಗಮಯಾಮೃತಂ ಮಾ ಕುರ್ವಿತ್ಯೇವೈ ತದಾಹ ಮೃತ್ಯೋರ್ಮಾಮೃತಂ ಗಮಯೇತಿ ನಾತ್ರ ತಿರೋಹಿತಮಿವಾಸ್ತಿ। ಅಥ ಯಾನೀತರಾಣಿ ಸ್ತೋತ್ರಾಣಿ ತೇಷ್ವಾತ್ಮನೇಽನ್ನಾದ್ಯಮಾಗಾಯೇತ್ತಸ್ಮಾದು ತೇಷು ವರಂ ವೃಣೀತ ಯಂ ಕಾಮಂ ಕಾಮಯೇತ ತಗ್ಂ ಸ ಏಷ ಏವಂ ವಿದುದ್ಗಾತಾತ್ಮನೇ ವಾ ಯಜಮಾನಾಯ ವಾಯಂ ಕಾಮಂ ಕಾಮಯತೇ ತಮಾಗಾಯತಿ ತದ್ಧೈತಲ್ಲೋಕಜಿದೇವ ನ ಹೈವಾಲೋಕ್ಯತಾಯಾ ಆಶಾಽಸ್ತಿ ಯ ಏವಮೇತತ್ಸಾಮ ವೇದ (28)**

ತಾ : ಈಗ ಪವಮಾನವೆನ್ನುವ ಹೆಸರುಳ್ಳ ಮಂತ್ರಗಳ ಗಾನ ಪದ್ಧತಿಯನ್ನು ಹೇಳಲಾಗುತ್ತಿದೆ. ಪ್ರಾಣ ವಿಜ್ಞಾನವುಳ್ಳವನಿಗೆ ಜಪಕರ್ಮವು ಹೇಳಲಾಗಿದೆ. "ಅಸತೋ ಮಾ ಸದ್ಗಮಯ" "ತಮಸೋ ಮಾ ಜ್ಯೋತಿರ್ಗಮಯ" "ಮೃತ್ಯೋರ್ಮಾ ಅಮೃತಂ ಗಮಯ" ಇವೇ ಆ ಮಂತ್ರಗಳು. ಇವುಗಳ ಅರ್ಥವೇನೆಂದರೆ ಮೃತ್ಯುವೇ ಅಸತ್ತು. ಸತ್ತುವೇ ಅಮೃತ. ಮೃತ್ಯುವನ್ನು ದಾಟಿಸಿ ನನಗೆ ಅಮೃತತ್ವವನ್ನು ಕೊಡು ಎಂದು ಆ ಮಂತ್ರದ ಅರ್ಥ. "ಮೃತ್ಯೋರ್ಮಾ ಅಮೃತಂ ಗಮಯ" ಈ ಅರ್ಥವು ವಿಶಿಷ್ಟವಾಗಿದೆ. ಉಳಿದ ಸ್ತೋತ್ರಗಳ ಮುಖದಲ್ಲಿ ತನಗಾಗಿ ಭುಜಿಸಲು ಯೋಗ್ಯವಾದ ಅನ್ನವನ್ನು ಕುರಿತು ಆಗಾಗ ಸ್ತೋತ್ರಗಳನ್ನು ಮಾಡಬೇಕು. ಯಾವ ಪಕ್ಷದಲ್ಲಿ ಉದ್ಗಾತ ತನಗಾಗಿ (ಯಜಮಾನನ ಇಷ್ಟವನ್ನನುಸರಿಸಿ) ಗಾನ ಮಾಡುವನೋ, ಆ ಪಕ್ಷದಲ್ಲಿ ಆ ಕಾಲಕ್ಕೆ ಯಜಮಾನನು ತಾನು ಕೋರಿದ ವಸ್ತುವನ್ನು ಪ್ರಾರ್ಥನೆ ಮಾಡಬೇಕು. ಈ ವಿದ್ಯೆಯ ಲೋಕ ಪ್ರಾಪ್ತಿ ಸಾಧನ ಮಾತ್ರವಾಗಿದೆ. ಯಾರು ಈ ವಿಧಾನವನ್ನು ಪೂರ್ತಿಯಾಗಿ ತಿಳಿದಿರುವನೋ, ಈ ಸಾಮಗಾನವನ್ನು ಅರಿತವನಾಗಿರುವನೋ, ಆತನಿಗೆ ಲೋಕಗಳನ್ನು ದಾಟಿ ಹೋಗಬೇಕಾದ

(ಅಮೃತತ್ವದ) ಆಸೆಯಿರುವುದಿಲ್ಲ. ಆದರೆ ಪುಣ್ಯಲೋಕಗಳಿಗೆ ಮಾತ್ರ ಆತ ಹೋಗುತ್ತಿರುತ್ತಾನೆ. ಹೀಗೆ ಆ ಪ್ರಾಣವನ್ನು ತಿಳಿದುಕೊಂಡು ಉಪಾಸಿಸುವವನಿಗೇ ಬ್ರಹ್ಮ ಸ್ವರೂಪಾವ್ಯಾಪ್ತಿಗೆ ಬೇರೆಯಾಗಿ ಪ್ರಾರ್ಥಿಸುವ ಅಗತ್ಯವೇ ಕಾಣುವುದಿಲ್ಲ. (ಬ್ರಹ್ಮಸ್ವರೂಪವೇ ಆಗುತ್ತಾನೆ.)

## ತೃತೀಯೋಧ್ಯಾಯ - ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ॥ ಓಮ್. ಆತ್ಮೈವೇದಮಗ್ರ ಆಸೀತ್ ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ ಸೋಽಹಮಸ್ಮೀತ್ಯಗ್ರೇ ವ್ಯಾಹರತ್ತತೋಽಹನ್ನಾಮಾಭವತ್ ತಸ್ಮಾದಪ್ಯೇತರ್ಹ್ಯಾಮನ್ತ್ರಿತೋಽಹಮಯಮಿತ್ಯೇವಾಗ್ರ ಉಕ್ತ್ವಾಽಥಾನ್ಯನ್ನಾಮ ಪ್ರಬ್ರೂತೇ ಯದನ್ಯ ಭವತಿ ಸ ಯತ್ಪೂರ್ವೋಽಸ್ಮಾತ್ಸರ್ವಸ್ಮಾತ್ಸರ್ವಾನ್ ಪಾಪ್ಮನ ಔಷತ್ತಸ್ಮಾತ್ಪುರುಷಃ ಓಷತಿ ಹ ವೈ ಸ ತಂ ಯೋಽಸ್ಮಾತ್ಪೂರ್ವೋ ಬುಭೂಷತಿ ಯ ಏವಂ ವೇದ (1)**

ತಾ : ಈ ಶರೀರ ಭೇದಜಾತವೆಲ್ಲವೂ ಶರೀರೋತ್ಪತ್ತಿಗಿಂತ ಮೊದಲು ಆತ್ಮ ಸ್ವರೂಪವಾಗಿಯೇ ಇತ್ತು. ಅಂತಹ ಪುರುಷ ರೂಪ ಲಕ್ಷಣಗಳುಳ್ಳಂತಹ ವಿರಾಟನು ನಾನು ಯಾರು? ಎಂತಹ ಲಕ್ಷಣವುಳ್ಳವನೆಂದು ಆಲೋಚಿಸಿ ತನಗಿಂತ ಬೇರೊಂದು ವಸ್ತುವನ್ನು ನೋಡಲಾರದೆ ಹೋದನು. (ತನ್ನನ್ನೇ ಸ್ವಸ್ವರೂಪವಾಗಿ ನೋಡಿದನು) ನಾನು ಆ ಪ್ರಜಾಪತಿ ಸ್ವರೂಪನಾದೆನು ಎಂದು ಹೇಳಿತು. ಆದ್ದರಿಂದ ಅಹವೆನ್ನುವ ಹೆಸರು ಉಂಟಾಯಿತು. ಈ ಕಾಲದಲ್ಲಿ ನೀನು ಯಾರೆಂದು ಒಬ್ಬಾನೊಬ್ಬ ಪುರುಷನಿಂದ ಕೇಳಲ್ಪಟ್ಟವನಾಗಿ ನಾನು ಈ ಪ್ರಜಾಪತಿ ಸ್ವರೂಪವೇ ಎಂದು ಮೊದಲು ಹೇಳಿತು. ಆನಂತರ ಬೇರೆ ಹೆಸರನ್ನು ಹೇಳುವನು. ಅಂಡಾಕೃತಿಯಾದ ಪ್ರಜಾಪತಿಗೆ, ಯಾವ ನಾಮವು ಆಗುವುದೋ, ಅದನ್ನು ಹೇಳುತ್ತಿರುವನು. ಆ ಪ್ರಜಾಪತಿ ಪ್ರಥಮನಾಗಿ ಈ ಸಮಸ್ತದಿಂದ, ಸಮಸ್ತವಾದ ಪಾಪಗಳನ್ನೂ ದಹಿಸಿಬಿಟ್ಟನು. ಆದ್ದರಿಂದ ಪುರುಷನಾದ. ಯಾರು ಈ ಪ್ರಕಾರವಾಗಿ ತಿಳಿದುಕೊಳ್ಳುವನೋ ಅಂತಹವನು ಮಹಾಜ್ಞಾನಿ ಆಗುತ್ತಾನೆ. ಮತ್ತು ಈ ಪ್ರಜಾಪತಿಯೇ ಜ್ಞಾನವನ್ನು ಅಭಿಲಾಷಿಸುವವನನ್ನು ತಿರಸ್ಕರಿಸುತ್ತಾನೆ. (ತಾನೇ ಪ್ರಜಾಪತಿ ಆಗುತ್ತಾನೆ ಎಂಬ ಭಾವ.)

**ಮಂ.ಶ್ಲೋ॥ ಸೋಽಬಿಭೇತ್ತಸ್ಮಾದೇಕಾಕೀ ಬಿಭೇತಿ ಸಹಾಯಮೀಕ್ಷಾಞ್ಚಕ್ರೇ ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮೀತಿ ತತ ಏವಾಸ್ಯ ಭಯಂ ವೀಯಾಯ ಕಸ್ಮಾದ್ಧ್ಯಭೇಷ್ಯತ್ ದ್ವಿತೀಯಾದ್ವೈ ಭಯಂ ಭವತಿ (2)**

ತಾ : ಆ ಪ್ರಜಾಪತಿಯು ಭಯಗೊಂಡನು. ಆದ್ದರಿಂದ ಏಕಾಂಗಿಯಾದವನು ಭಯಪಡುತ್ತಿರುತ್ತಾನೆ ಎಂದು ಪ್ರಜಾಪತಿ ಆಲೋಚಿಸಿದ. ಯಾವ ಕಾರಣದಿಂದ ನನಗಿಂತ ಅನ್ಯವಾದುದು ಇಲ್ಲವೋ, ಅದರಿಂದ ಭಯಪಡುತ್ತಿದ್ದೇನೆ, ಎಂದು ಆಲೋಚಿಸಿದ. ಕೂಡಲೇ ಈ ಪ್ರಜಾಪತಿಗೆ ಭಯವು ಸ್ಪಷ್ಟವಾಗಿಬಿಟ್ಟಿತು. ಏಕೆ ನಾನು ಭಯ ಪಡಬೇಕು? ಎರಡನೆಯದು ಇರುವುದರಿಂದಲೇ ಭಯವು ಉಂಟಾಗುವುದು.

**ಮಂ.ಶ್ಲೋ॥ ಸ ವೈ ನೈವರೇಮೇ ತಸ್ಮಾದೇಕಾಕೀ ಸ ರಮತೇ ಸ ದ್ವಿತೀಯಮೈಚ್ಛತ್। ಸ ಹೈತಾವಾನಾಸ ಯಥಾ ಸ್ತ್ರೀಪುಮಾಗ್ಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಪಾತಯತ್ತತಃ**

**ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞವಲ್ಕ್ಯ ಸ್ತಸ್ಮಾದಯಮಾಕಾಶಃ । ಸ್ತ್ರಿಯಾ ಪೂರ್ಯತ ಏವ ತಾಗ್ಂ ಸಮಭವತ್ತತೋ ಮನುಷ್ಯಾ ಅಜಾಯನ್ತ (3)**

ತಾ : ಆ ಪ್ರಜಾಪತಿಯು ಒಬ್ಬಂಟಿಯಾಗಿದ್ದುದರಿಂದ ತೃಪ್ತಿಯನ್ನು ಪಡಲಿಲ್ಲ. ಆದ್ದರಿಂದ ಒಂಟಿಯಾಗಿರುವವನು, ಆನಂದಿಸುವುದಿಲ್ಲ. ಆತ ಎರಡನೆಯದನ್ನು ಕೋರಿದ. ಆಗ ಆತ ಸ್ತ್ರೀಪುರುಷರಿಬ್ಬರ ಜೋಡಿಯು ಹೇಗಿದೆಯೋ ಆ ರೀತಿಯಾಗಿ ಇದ್ದ. ಅಂದರೆ ತನ್ನನ್ನು ಎರಡು ಭಾಗಗಳನ್ನಾಗಿ ಮಾಡಿಕೊಂಡ. ಆಗ ಅವನೇ ಸತಿ, ಪತಿ ಎನ್ನುವ ಇಬ್ಬರು ವ್ಯಕ್ತಿಗಳಾಗಿ ಮಾರ್ಪಟ್ಟನು. ಆದ್ದರಿಂದಲೇ ಮನುಷ್ಯನು ಸೀಳಿದ ಬಿದುರುಕೋಲಿನಂತೆ ಕಾಣುತ್ತಾನೆಂದು ಯಾಜ್ಞವಲ್ಕ್ಯ ಋಷಿ ಹೇಳಿದ್ದಾನೆ. ಆದ್ದರಿಂದ ಪುರುಷನಲ್ಲಿರುವ ಈ ಅರ್ಧಭಾಗವು ಸ್ತ್ರೀಯಿಂದ ಪೂರ್ಣವಾಗಿ ಮಾಡಲಾಯಿತು. ಅಂತಹ ಈ ಸ್ತ್ರೀ ಪುರುಷರಿಬ್ಬರಿಂದ ಮನುಷ್ಯರು ಜನಿಸಿದರು.

ಮಂ.ಶ್ಲೋ॥ **ಸೋ ಹೇಯಮೀಕ್ಷಾಞ್ಚಕ್ರೇ ಕಥಂ ನು ಮಾತ್ಮನ ಏವ ಜನಯಿತ್ವಾ ಸಮ್ಭವತಿ ಹನ್ತ ತಿರೋಽಸಾನೀತಿ ಸಾ ಗೌರಭವದೃಷಭ ಇತರಸ್ತಾಗ್ಂ ಸಮೇವಾಭವತ್ತತೋ ಗಾವೋಽ -ಜಾಯನ್ತ ಬಡಬೇತರಾಭವದಶ್ವವೃಷ ಇತರೋ ಗರ್ದಭೀತರಾ ಗರ್ದಭ ಇತರಸ್ತಾಗ್ಂ ಸಮೇವಾಭವತ್ತತ ಏಕಶಫಮಜಾಯತಾಽಜೇತರಾಭವದ್ಬಸ್ತ ಇತರೋಽವಿರಿತರಾಮೇಷ ಇತರಸ್ತಾಗ್ಂ ಸಮೇವಾಭವತ್ತತೋಽಜಾವಯೋ ಜಾಯನ್ತೈವಮೇವ ಯದಿದಂ ಕಿಂಚ ಮಿಥುನಮಾಪಿಪೀಲಿಕಾಭ್ಯಸ್ತತ್ಸರ್ವಮಸೃಜತ (4)**

ತಾ : ಆ ಪ್ರಸಿದ್ಧಳಾದ ಶತರೂಪಿ ಎಂಬ ಸ್ತ್ರೀ ಆಲೋಚಿಸಿದಳು. ತನ್ನಿಂದಲೇ ನನ್ನನ್ನು ಹುಟ್ಟಿಸಿ ಈತ ನನ್ನೊಂದಿಗೆ ಭೋಗಿಸುತ್ತಿರುವನಲ್ಲಾ! ಇನ್ನು ನಾನು ಅಂತರ್ಧಾನ ಹೊಂದಬೇಕೆಂದು ಗೋರೂಪಿಣಿಯಾದಳು. ಆಗ ಆತ ವೃಷಭನಾಗಿ ಆಕೆಯೊಂದಿಗೆ ಭೋಗಿಸಿದ. ಆ ಸಂಯೋಗದಿಂದ ಎತ್ತು, ಹಸುಗಳು ಹುಟ್ಟಿದವು. ಆಕೆ ಹೆಣ್ಣು ಕುದುರೆಯಾದಳು. ಆತ ಗಂಡು ಕುದುರೆಯಾದ. ಆಕೆ ಹೆಣ್ಣು ಕತ್ತೆಯಾದಳು. ಆತ ಗಂಡು ಗಾರ್ಧಭವಾಗಿ ಅದರೊಂದಿಗೆ ಭೋಗಿಸಿದ. ಆಕೆ ಹೆಣ್ಣು ಮೇಕೆಯಾದಳು. ಆತ ಹೋತನಾದ. ಆ ಮನುವು ತಾನು ಸಹ ಅದೇ ಪ್ರಕಾರವಾಗಿ ಸಹ ರೂಪಗಳನ್ನು ಹೊಂದಿ ಪಿಪೀಲಿಕ(ಇರುವೆ)ಗಳವರೆಗೆ ಸೃಷ್ಟಿ ಮಾಡಿದ.

ಮಂ.ಶ್ಲೋ॥ **ಸಾಽವೇದಹಂ ವಾವಸೃಷ್ಟಿರಸ್ಮ್ಯಹಗ್ಂ ಹಿದಗ್ಂ ಸರ್ವಮಸೃಕ್ಷೀತಿ ತತಃ ಸೃಷ್ಟಿರಭವತ್ ಸೃಷ್ಟ್ಯಾಗ್ಂ ಹಾಸ್ಯೈ ತಸ್ಯಾಂ ಭವತಿ ಯ ಏವಂ ವೇದ (5)**

ತಾ : ಆ ಪ್ರಜಾಪತಿ ಈ ಸಮಸ್ತ ಜಗತ್ತನ್ನು ಸೃಜಿಸಿ ರಕ್ಷಿಸಿದ. ಹೇಗೆಂದರೆ, ನನ್ನಿಂದ ಸೃಜಿಸಲ್ಪಟ್ಟ ಈ ಜಗತ್ತು ನನಗೆ ಬೇರೆಯಲ್ಲವಾದುದರಿಂದ ನಾನೇ ಆಗುತ್ತಿದ್ದೇನೆ. ಈ ಪ್ರಕಾರ ಪ್ರಜಾಪತಿ ಜಗತ್ತು ತಾನೇ ಎಂದು ಹೇಳಿದ. ಆದ್ದರಿಂದಲೇ ಸೃಷ್ಟಿ ಜರುಗುತ್ತಿದೆ. ಈ ರೀತಿಯಾಗಿ ಅರಿತು ಕೊಂಡವನು ಪ್ರಜಾಪತಿಯಿಂದಲೇ ಈ ಜಗತ್ತಿನಲ್ಲಿ ಸೃಷ್ಟಿಕರ್ತನಾಗುವನು.

ಮಂ.ಶ್ಲೋ॥ ಅಥೇತ್ಯಭ್ಯಮನ್ಥತ್ಸಮುಖಾಚ್ಚ ಯೋನೇರ್ಹಸ್ತಾಭ್ಯಾಂ ಚಾಗ್ನಿಮಸೃಜತ ತಸ್ಮಾದೇತದುಭಯ -ಮಲೋಮಕಮನ್ತರತೋಽಲೋಮಕಾ ಹಿ ಯೋನಿರನ್ತರತಃ । ತದ್ಯದಿದಮಾಹುರಮುಂ ಯಜಾಮುಂ ಯಜೇತ್ಯೇಽಕ್ಕೈಕಂ ದೇವಮೇತ ಸ್ಯೈವ ಸಾ ವಿಸೃಷ್ಟಿರೇಷ ಉ ಹ್ಯೇವ ಸರ್ವೇ ದೇವಾಃ। ಅತ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ ತದು ಸೋಮ ಏತಾವದ್ವಾ ಇದಗ್ಂ ಸರ್ವಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ಸೈಷಾ ಬ್ರಹ್ಮಣೋಽತಿಸೃಷ್ಟಿಃ। ಯಚ್ಛ್ರೇಯಸೋ ದೇವಾ ನ ಸೃಜತಾಥ ಯನ್ಮರ್ತ್ಯಸ್ಸನ್ನಮೃತಾ ಸಸೃಜತ ತಸ್ಮಾದತಿಸೃಷ್ಟಿರತಿ ಸೃಷ್ಟ್ಯಾಗ್ಂ ಹಸ್ಯೈ ತಸ್ಯಾಂ ಭವತಿ ಯ ಏವಂ ವೇದ(6)

ತಾ : ಆನಂತರ ಆ ಪ್ರಜಾಪತಿ ಈ ರೀತಿಯಾಗಿ ಮಥನ ಮಾಡಿದ. ಮುಖವೆನ್ನುವುದು ಯೋನಿಯಿಂದ, ಕೈಗಳಿಂದ, ಅಗ್ನಿಯನ್ನು ಸೃಷ್ಟಿಸಿದ. ಆದ್ದರಿಂದ ಆ ಮುಖಹಸ್ತಗಳು ಎರಡೂ ಒಳಗೆ ಕೂದಲಿಲ್ಲದಿರುವಂತಹುದು. ಭಗದ ಒಳಗೆ ಕೂಡಾ ಕೂದಲಿಲ್ಲವಲ್ಲ. ಯಾಜ್ಞಿಕರು ಯಜ್ಞಕರ್ಮದಲ್ಲಿ ಯಜಮಾನನನ್ನು ಕುರಿತು ಈ ಅಗ್ನಿಯನ್ನು ಪೂಜಿಸಬಹುದೇ! ಈ ಇಂದ್ರನನ್ನು ಪೂಜಿಸಬಹುದೇ? ಎಂದು ಯಾವ ವಾಕ್ಯಗಳನ್ನು ನುಡಿದರೋ ಅವನ್ನು ಅಗ್ನೀಂದ್ರಕಾತ್ಮಕವಾಗಿ ತಿಳಿದುಕೊಳ್ಳಬೇಕು. ಸಮಸ್ತ ದೇವತಾರೂಪವಾದ ವಿಶೇಷ ಸೃಷ್ಟಿಯೆಲ್ಲವೂ ಈ ಪ್ರಜಾಪತಿಯೇ ಎಂದು ಅನುಗ್ರಹಿಸಬೇಕು. ಒಂದು ಹೆಜ್ಜೆ ಪ್ರಜಾಪತಿಗೇ ಈ ವಿವಕ್ಷ ಮಾಡಲಾಗಿದೆ. ಅದು ಹೇಗೆಂದರೆ, ದ್ರವ ಸ್ವರೂಪವಾದುದೆಲ್ಲವೂ ಆ ಪ್ರಜಾಪತಿಯ ರೇತಸ್ಸು. ಅದರಿಂದ ಸೃಷ್ಟಿಸಲಾದ ಈ ಸಮಸ್ತವಾದ ಅನ್ನವು ಚಂದ್ರ. ಈ ಅನ್ನವನ್ನು ಭಕ್ಷಿಸುವವನು ಅಗ್ನಿ; ಈ ರೀತಿಯಾಗಿ ಅಗ್ನಿಷ್ಟೋಮಾತ್ಮಕವಾದ ಜಗತ್ತನ್ನು ಆತ್ಮ ಸ್ವರೂಪವಾಗಿ ಕಾಣುವವನು ಯಾವ ದೋಷವೂ ಅಂಟದೆ ಪ್ರಜಾಪತಿ ಸ್ವರೂಪನಾಗುತ್ತಾನೆ. ಈ ಸೃಷ್ಟಿ ಅತಿಶಯವಾದುದು. ಅಂತಹ ಅತಿಶಯವಾದ ಪ್ರಜಾಪತಿಯ ಸೃಷ್ಟಿಯನ್ನು ಆತ್ಮಸ್ವರೂಪವೆಂದು ತಿಳಿದುಕೊಂಡವನು ಈ ಪ್ರಜಾಪತಿ ಸಂಬಂಧವಾದ ಸಮಸ್ತ ಸೃಷ್ಟಿಯಲ್ಲಿ ಪ್ರಜಾಪತಿಯಿಂದಲೇ ಸೃಷ್ಟಿಕರ್ತನಾಗುತ್ತಿದ್ದಾನೆ.

ಮಂ.ಶ್ಲೋ॥ ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಮೇವ ವ್ಯಾಕ್ರಿಯಾತಾಸೌ ನಾಮಾಯಮಿದಗ್ಂ ರೂಪಂ ಇತಿ ತದಿದಮಪ್ಯೇತರ್ಹಿ ನಾಮರೂಪಾಭ್ಯಾಮೇವ ವ್ಯಾಕ್ರಿಯತೇಽಸಾ ನಾಮಾಯಮಿದಗ್ಂ ರೂಪಂ ಇತಿ ಸ ಏಷ ಇಹ ಪ್ರವಿಷ್ಟಃ। ಆನಖಾಗ್ರೇಭ್ಯೋ ಯಥಾ ಕ್ಷುರಃ ಕ್ಷುರ ಧಾನೇಽವಹಿತಃ ಸ್ಯಾದ್ವಿಶ್ವಂಭರೋ ವಾ ವಿಶ್ವಂಭರಕುಲಾಯೇತನ್ನ ಪಶ್ಯನ್ತ್ಯಕೃತ್ಸ್ನೋ ಹೀ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ವಾಕ್ಪಶ್ಯಗ್ಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋ ತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷ್ಯೋಽತ ಏಕೈಕೇನ ಭವತ್ಯಾತ್ಮೇತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವನ್ತಿ। ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾನೇನ ಹ್ಯೇತತ್ಸರ್ವಂ ವೇದ। ಯಥಾ ಹ ವೈ ಪದೇನಾನುವಿನ್ದೇದೇವಂ ಕೀರ್ತಿಂ ಶ್ಲೋಕಂ ವಿನ್ದತೇ ಯ ಏವಂ ವೇದ (7)

ತಾ : ಈ ಸಮಸ್ತ ಸೃಷ್ಟಿ ಮೊದಲು ಅವ್ಯಕ್ತವಾಗಿತ್ತು. ಅದು ನಾಮ ರೂಪಮೂಲಗಳಿಂದ ವ್ಯಕ್ತವಾಯಿತು. ಇದರ ನಾಮ ಇದೆಂದು, ಇದರ ರೂಪ ಇದು, ಎಂದು ವ್ಯಕ್ತವಾಯಿತು. ಆದ್ದರಿಂದಲೇ ಆಗ ವಸ್ತುಗಳ ನಾಮರೂಪಗಳಿಂದಲೇ ಇದರ ಹೆಸರು ಇದು; ಇದರ ರೂಪ ಇದು ಎಂದು ವ್ಯಕ್ತವಾಗುತ್ತಿವೆ. ಆ ಸೃಷ್ಟಿಕರ್ತನೇ ಈ ಸೃಷ್ಟಿಯಲ್ಲಿ ಎಲ್ಲೆಲ್ಲೂ ಪ್ರವೇಶಿಸಿದ್ದಾನೆ. ಆಮೂಲಾಗ್ರವಾಗಿ, ನಖಶಿಖಪರ್ಯಂತವಾಗಿ ಈ ದೇಹದಲ್ಲಿ ಪ್ರವೇಶಿಸಿರುವನು. ವ್ಯಾಪಿಸಿರುವನು. ಕತ್ತಿಯು ಒರೆಯಲ್ಲಿ ಕಣ್ಮರೆಯಾಗಿರುವಂತೆ ವಿಶ್ವಂಭರಮೂರ್ತಿಯಾದ ಪರಮಾತ್ಮನು ಒರೆಯಂತಿದ್ದರೂ, ಈ ಜಗದ್ವಸ್ತು-ಗಳಗಳೆಲ್ಲದರಲ್ಲೂ ತುಂಬಿರುವನು. ಜನರು ಆತನನ್ನು ಕಾಣರು. ಏಕೆಂದರೆ ಆತ ಸೃಷ್ಟಿಯಲ್ಲಿ ಪೂರ್ಣವಾಗಿ ಕಾಣುವುದಿಲ್ಲ. ಅವ್ಯಕ್ತವಾದ ಆ ಪರಮಾತ್ಮನೇ ದೇಹಗಳಲ್ಲಿ ಪ್ರವೇಶಿಸಿ, ಪ್ರಾಣ ವಾಯುವಿನ ಗಮನಾದಿ (ಚಲಿಸುವಿಕೆ) ವ್ಯಾಪಾರವನ್ನು ಮಾಡುತ್ತಾ ಪ್ರಾಣವೆಂಬ ಹೆಸರನ್ನು ಹೊಂದುತ್ತಾ, ವಾಗ್ವ್ಯಾಹಾರಗಳನ್ನು ಮಾಡುತ್ತಾ ವಾಕ್ಕೆನ್ನುವ ಹೆಸರನ್ನು ಹೊಂದಿದವನಾಗಿ, ಈಕ್ಷಣ ವ್ಯಾಪಾರವನ್ನು ಮಾಡುತ್ತಾ ನೇತ್ರವೆನ್ನುವ ಹೆಸರನ್ನು ಹೊಂದಿದವನಾಗಿ, ಶ್ರವಣ ವ್ಯಾಪಾರವನ್ನು ಮಾಡುತ್ತಾ ಶ್ರೋತವೆಂಬ ಹೆಸರನ್ನುಳ್ಳವನಾಗಿ, ಮನೋವ್ಯಾಪಾರವನ್ನು ಮಾಡುತ್ತಾ ಮನಸ್ಸೆನ್ನುವ ಹೆಸರುಳ್ಳವನಾಗಿರುವನು. ಈ ಹೆಸರುಗಳೆಲ್ಲವೂ ದೇಹಗಳಲ್ಲಿ ಪ್ರವೇಶಿಸಿರುವ ಈ ಆತ್ಮಕ್ಕೆ ಆಯಾ ಕರ್ಮಗಳಿಂದ ಬಂದಿರುವಂತಹುದು. (ವುವು)

ಈ ರೀತಿಯಾಗಿ ವ್ಯಕ್ತವಾದ ನಾಮರೂಪಗಳುಳ್ಳ ಜೀವಾತ್ಮ, ಒಂದೊಂದನ್ನೂ ಬೇರೆ ಬೇರೆಯಾಗಿ ಉಪಾಸಿಸುತ್ತ ಪರಬ್ರಹ್ಮವನ್ನು ತಿಳಿದುಕೊಳ್ಳಲಾರ. ಅಸಂಪೂರ್ಣನಾದ ಈ ಜೀವನು ಎಲ್ಲಿಯವರೆಗೆ ಒಂದೊಂದಾದ ಪ್ರಾಣ, ನೇತ್ರ, ಮೊದಲಾದ ವಿಶೇಷಗಳೊಂದಿಗೆ ಕೂಡಿಕೊಂಡು ನಾನು (ಶ್ವಾಸವನ್ನು) ಶ್ವಾಸದ ಕ್ರಿಯೆಯನ್ನು ಮಾಡುತ್ತಿದ್ದೇನೆ. ನೋಡುತ್ತಿದ್ದೇನೆ. ಕೇಳುತ್ತಿದ್ದೇನೆ, ಮುಟ್ಟುತ್ತಿದ್ದೇನೆ ಎನ್ನುವಂತಹ ಪ್ರವೃತ್ತಿಯೊಂದಿಗೆ ತಿಳಿದುಕೊಳ್ಳುತ್ತಿದ್ದಾನೋ, ಅಲ್ಲಿಯವರೆಗೆ ಸಂಪೂರ್ಣವಾದ ಆತ್ಮವನ್ನು ಕುರಿತು ತಿಳಿದುಕೊಳ್ಳಲಾರ. ಯಾವಾಗ ಆ ಜೀವಾತ್ಮ ಸ್ವಭಾವ ಪ್ರವೃತ್ತಿಯಲ್ಲಿ ಸರ್ವ ವ್ಯಾಪಾರಗಳನ್ನು ತ್ಯಜಿಸಿ, ತನ್ನನ್ನು ಆತ್ಮ ಸ್ವರೂಪವಾಗಿ ನೋಡುತ್ತಿದ್ದಾನೋ ಆಗ ಸಂಪೂರ್ಣಾತ್ಮನಾಗುವನು. ಆದ್ದರಿಂದ ಸರ್ವವು ಆತ್ಮ ಸ್ವರೂಪವೇ ಎಂದು ಉಪಾಸಿಸಬೇಕು. ಹೀಗೆ ಉಪಾಸಿಸುವುದರಿಂದ ನಾಮಗಳೆಲ್ಲವೂ ಪರಬ್ರಹ್ಮೈಕ್ಯವನ್ನು ಹೊಂದುತ್ತವೆ. ಅಂತಹ ಈ ಆತ್ಮವೇ ಹೊಂದತಕ್ಕಹುದು. ಇದೇ ಸರ್ವಕ್ಕೂ ಆತ್ಮವಾಗಿದೆ. ಆದ್ದರಿಂದ ಈ ಆತ್ಮದಿಂದಲೇ ನಾಮರೂಪಾತ್ಮಕವಾದ ಸಮಸ್ತವು ತಿಳಿಯುತ್ತದೆ. ಗವಾದಿ ಪಾದಗಳಲ್ಲಿ ಚಿಹ್ನಿತವಾದ ಮಾರ್ಗ ಪ್ರದೇಶದ ಮೂಲಕ ಅಪಹರಿಸಲ್ಪಟ್ಟ ಆ ಗವಾದಿಗಳನ್ನು ತಿಳಿದುಕೊಂಡಂತೆ, ಆನಂದ ಪೂರ್ಣವಾದ ಜೀವಾತ್ಮನ ಮೂಲಕ, ಪರಮಾತ್ಮನನ್ನು ಹೊಂದಲಾಗುತ್ತದೆ. ಹೀಗೆ ತಿಳಿದು ಕೊಳ್ಳುವವನು ಖ್ಯಾತಿಯನ್ನು ಪರಮಾತ್ಮೈಕ್ಯ ಜ್ಞಾನವನ್ನು ಮೋಕ್ಷವನ್ನು ಹೊಂದುತ್ತಾನೆ.

**ಮಂ.ಶ್ಲೋ|| ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾತ್ಸರ್ವಸ್ಮಾದನ್ತರತರಂ ಯದಯಮಾತ್ಮಾ ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ ಪ್ರಿಯಗ್ಂ ರೋತ್ಸ್ಯತೀತೀಶ್ವರೋ ಹ ತಥೈವ ಸ್ಯಾದಾತ್ಮಾನಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ಸ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ (೮)**

ತಾ : ಈ ಆತ್ಮವು ಅತಿಪ್ರಿಯವಾದುದು. ಪುತ್ರನಿಗಿಂತಲೂ, ಧನಕ್ಕಿಂತಲೂ ಆತ್ಮವೇ ಪ್ರಿಯತಮವಾದುದು. ಇನ್ನೂ ಯಾವ ಯಾವ ಪದಾರ್ಥಗಳು ಶ್ರೇಷ್ಠವಾದವುಗಳವೆಯೋ ಅವೆಲ್ಲಕ್ಕಿಂತಲೂ ಆತ್ಮವು ಪ್ರಿಯತಮವಾದುದು. ಆತ್ಮ ನಮ್ಮ ಸಮೀಪದಲ್ಲಿ ನಮ್ಮ ಸ್ವರೂಪವಾಗಿದೆ. ಅನಾತ್ಮವನ್ನು ಪ್ರಿಯವೆಂದು ಹೇಳುವ ಮನುಷ್ಯನಿಗೆ, ಆತ್ಮಜ್ಞಾನಿಯು "ಅಯ್ಯಾ! ನಿಮಗೆ ಪ್ರಿಯವೆಂದು ಭಾವಿಸಿರುವ ಸಮಸ್ತವು ನಶಿಸುವುದಲ್ಲವೆ?" ಎಂದು ಹೇಳುವನು. ಈ ಸತ್ಯವನ್ನು ತಿಳಸುವುದಕ್ಕಾಗಿ ಜ್ಞಾನಿಯೊಬ್ಬನೇ ಸಮರ್ಥ, ಅನಾತ್ಮರೂಪವಾದುದಕ್ಕೆ ಅಸ್ತಿತ್ವವಿಲ್ಲ. ಅವಿದ್ಯೆಯಿಂದ ಕೂಡಿರುವಂತೆ ಕಾಣುತ್ತದೆ. ಆದ್ದರಿಂದ ಆತ್ಮವೆಂಬ ಪ್ರಿಯಪದಾರ್ಥವನ್ನು ಉಪಾಸಿಸುತ್ತಿರುವನು. ಬ್ರಹ್ಮವೇತ್ತನು ಹೊಂದುವ ಪ್ರೇಮ, ಆನಂದಗಳು ಶಾಶ್ವತವಾದವು.

**ಮಂ.ಶ್ಲೋ॥ ತದಾಹುರ್ಯದ್ಬ್ರಹ್ಮ ವಿದ್ಯಯಾ ಸರ್ವಂ ಭವಿಷ್ಯನ್ತೋ ಮನುಷ್ಯಾ ಮನ್ಯನ್ತೇ ಕಿಮು ತದ್ಬ್ರಹ್ಮಾ ವೈ(ವೇ)ದ್ಯಸ್ಮಾತ್ತತ್ಸರ್ವಮಭವದಿತಿ (9)**

ತಾ : ಮನುಷ್ಯರು, ಬ್ರಹ್ಮವಿದ್ಯಾ ಮಹಿಮೆಯಿಂದಲೇ ಈ ಸರ್ವವೂ ಆಗಿದೆಯೆಂದು ಹೇಳುವರು. ಬ್ರಹ್ಮವೆಂದರೆ ಏನು? ಯಾವುದರಿಂದ ಸಮಸ್ತವು ಆಯಿತೋ ಅಂತಹ ಪರಬ್ರಹ್ಮವನ್ನು ಹೇಗೆ (ಯಾವುದರಿಂದ) ತಿಳಿದುಕೊಳ್ಳುವುದೆಂದು ಜಿಜ್ಞಾಸುಗಳು ಪ್ರಶ್ನೆಯನ್ನು ಹಾಕಿದರು.

**ಮಂ.ಶ್ಲೋ॥ ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೈ(ವೇ)ತ್। ಅಹಂ ಬ್ರಹ್ಮಾಸ್ಮೀತಿ। ತಸ್ಮಾತ್ತತ್ಸರ್ವ -ಮಭವತ್ ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥಾ ಋಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ಪಶ್ಯನ್ನೃಷಿ ವಾಮದೇವಃ ಪ್ರತಿಪೇದೇಽಹಂ ಮನುರಭವಗ್ಂ ಸೂರ್ಯಶ್ಚೇತಿ । ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಗ್ಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾ ಹ್ಯೇಷಾಗ್ಂ ಸ ಭವತಿ ಅಥ ಯೋಽನ್ಯಾಂ ದೇವತಾಮುಪಾಸೇಽನ್ಯೋಽಸಾವನ್ಯೋಽ -ಹಮಸ್ಮೀತಿ ಸ ಸವೇದ ಯಥಾ ಪಶುರೇವಗ್ಂ ಸ ದೇವಾನಾಂ । ಯಥಾ ಹ ವೈ ಬಹವಃ ಪಶವೋ ಮನುಷ್ಯಂ ಭುಞ್ಜ್ಯುರೇವಮೇಕೈಕಃ ಪುರುಷೋ ದೇವಾನ್ ಭುನಕ್ತ್ಯೇಕಸ್ಮಿ -ನ್ನೇವ ಪಶಾವಾದೀಯಮಾನೋಽಪ್ರಿಯಂ ಭವತಿ ಕಿಮು ಬಹುಷು ತಸ್ಮಾದೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ (10)**

ತಾ : ಈ ಸಮಸ್ತ ಪ್ರಪಂಚವು ಪರಬ್ರಹ್ಮಜ್ಞಾನಕ್ಕಿಂತ (ಸೃಷ್ಟಿಗೆ) ಪೂರ್ವದಲ್ಲಿ ಪರಬ್ರಹ್ಮವಾಗಿಯೇ ಇತ್ತು. ಆ ಪರಬ್ರಹ್ಮವು ನಾನು, ಪರಬ್ರಹ್ಮವಾದೆನು ಎಂದು, ತನ್ನನ್ನು ತಾನೇ ಅರಿತುಕೊಂಡ. ಈ ರೀತಿಯಾಗಿ ತಿಳಿದುಕೊಂಡಿದ್ದರಿಂದಲೇ ಪರಬ್ರಹ್ಮವು ಸರ್ವಸ್ವರೂಪವಾಗಿ ಆಯಿತು; ದೇವತೆಗಳಲ್ಲಿ ಯಾರು ಯಾರು ಆ ಪರಬ್ರಹ್ಮವನ್ನು ಅರಿತುಕೊಂಡರೋ ಅವರೇ ಆ ಪರಬ್ರಹ್ಮ ಪ್ರಕಾರವಾದರು. ಮಹರ್ಷಿಗಳಲ್ಲಿಯೂ ಸಹ ವಾಸುದೇವನೆನ್ನುವ ಋಷಿ. ಈ ಪರಬ್ರಹ್ಮ ಸ್ವರೂಪವನ್ನೇ ನೋಡುತ್ತಾ. ನಾನು ಮನುವಾದೆನು. ಸೂರ್ಯನಾದೆನು ಎಂದು ಭಾವಿಸಿ ಸರ್ವಸ್ವರೂಪವನ್ನು ಹೊಂದಿದನು. ಅಂತಹ ಈ ಪರಬ್ರಹ್ಮವನ್ನು ಈ ವರ್ತಮಾನ ಕಾಲದಲ್ಲಿ ಯಾರು ಈ ಪ್ರಕಾರವಾಗಿ, ನಾನು

ಪರಬ್ರಹ್ಮನಾದೆನೆಂದು ತಿಳಿದುಕೊಳ್ಳುತ್ತಿದ್ದಾನೋ ಆತ ಈ ಸಮಸ್ತವೂ ಆಗುತ್ತಿದ್ದಾನೆ. ಅಂತಹ ಪರಬ್ರಹ್ಮವೇತ್ತನನ್ನು ದೇವತೆಗಳು ವಿರೋಧ ಮಾಡಲು ಸಮರ್ಥರಾಗುವುದಿಲ್ಲ. ಆ ಪರಬ್ರಹ್ಮವೇತ್ತನು ಈ ದೇವತೆಗಳಿಗೆ ಆತ್ಮಸ್ವರೂಪವಾಗುತ್ತಿದ್ದಾನೆ. ಅಲ್ಲವೇ? ಬ್ರಹ್ಮವೇತ್ತನಾದ ಪುರುಷನು, ಉಪಾಸನೆ ಮಾಡುವಂತಹ ಈ ದೈವವು, ಉಪಾಸನೆ ಮಾಡುವ ನನಗಿಂತ ಬೇರೆಯೇ ಆಗಿದ್ದಾನೆಂದು ಭಾವಿಸುವನು. ಉಪಾಸ್ಯ ದೇವತೆಯನ್ನು ಉಪಾಸಿಸುವ ತನಗಿಂತ ಬೇರೆಯಾಗಿ ಯಾರು ಉಪಾಸಿಸುವರೋ, ಅಂತಹ ಅಜ್ಞಾನಿ ಪರಬ್ರಹ್ಮತತ್ತ್ವವನ್ನು ತಿಳಿದುಕೊಳ್ಳಲಾರ.

ಈ ರೀತಿಯಾಗಿ ಕರ್ಮದಲ್ಲಿ ಸಿಲುಕಿಹಾಕಿಕೊಂಡ (ಸಿಕ್ಕಿಕೊಂಡ) ಈತ ಮನುಷ್ಯತ್ವದಿಂದ ಮೊದಲ್ಗೊಂಡು ಬ್ರಹ್ಮಾಸ್ತ್ರದವರೆಗೆ ಉತ್ಕರ್ಷವನ್ನು ಹೊಂದಿದಂತಹವನಾಗಿ ಶಾಸ್ತ್ರಕರ್ಮರಹಿತನಾಗಿ, ಮನುಷತ್ವ ಮೊದಲ್ಗೊಂಡು ಸ್ಥಾವರಾಂತರದವರೆಗೂ ಅಪಕರ್ಷವಾಗುತ್ತಿದ್ದಾನೆ. ಜ್ಞಾನಿಯಾದ ಪುರುಷನು (ಲೋಕದಲ್ಲಿ ಗವಾಶ್ವಾದಿ ಪಶುಗಳು ತಮ್ಮ ಪರಿಪಾಲಕರಾದ ಮನುಜನ ಕ್ಷೀರ ಪ್ರಧಾನ ವಾಹನಾದಿಗಳೊಂದಿಗೆ ಸೇವಿಸುವಂತೆ) ಇಂದ್ರಾದಿ ದೇವತೆಗಳು ನನಗೆ ಪ್ರಭುಗಳು, ನಾನು ಇವರ ಭೃತ್ಯನಂತೆ ಪೂಜಾದಿಗಳ ಮೂಲಕ ಆರಾಧನೆ ಮಾಡಿ, ಅಭ್ಯುದಯ ನಿಶ್ರೇಯಸ ರೂಪಗಳಾದ ಫಲಗಳನ್ನು ಹೊಂದಬಲ್ಲೆನೆಂಬ ಅಪೇಕ್ಷೆಯುಳ್ಳವನಾಗಿ ಆ ದೇವತೆಗಳನ್ನು ಪೋಷಿಸುತ್ತಿದ್ದಾನೆ. ಇಂತಹ ಪುರುಷನು ವಿಜ್ಞಾನ ಸಂಪತ್ತನ್ನು ಹೊಂದಿದವನಾಗಿ ಕರ್ಮವನ್ನು ಬಿಟ್ಟು ಬಿಟ್ಟಲ್ಲಿ ಅಂತಹ ಕಾರ್ಯವು (ಪಶುಗಳನ್ನು ಹೊಂದಿದವನಿಗೆ ಒಂದು ಪಶು, ಕ್ರೂರ ಮೃಗಗಳಿಂದ ಅಪಹರಿಸು-ವಂತಾದಾಗ (ಪ್ರಿಯ)ವಾಗದಂತೆ ದೇವತೆಗಳಿಗೆ ಅಪ್ರಿಯವಾಗುತ್ತದೆಯಾದ್ದರಿಂದಲೇ ಮನುಷ್ಯರು ಪರಬ್ರಹ್ಮತತ್ತ್ವವನ್ನು ತಿಳಿದುಕೊಳ್ಳಲು, ದೇವತೆಗಳು ಇಷ್ಟಪಡುವುದಿಲ್ಲ.

ಮಂ.ಶ್ಲೋ॥ **ಬ್ರಹ್ಮವಾ ಇದಮಗ್ರ ಆಸೀದೇಕಮೇವ ತದೇಕಗ್ಂ ಸನ್ನ ವ್ಯಭವತ್ । ತಚ್ಛ್ರೇಯೋ ರೂಪಮತ್ಯ ಸೃಜತ ಕ್ಷತ್ರಂ ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀನ್ದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ ಕ್ಷತ್ರಾತ್ಪರಂ ನಾಸ್ತಿ ತಸ್ಮಾದ್ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ ಕ್ಷತ್ರ ಏವ ತದ್ಯಶೋ ದಧಾತಿ ಸೈಷಾ ಕ್ಷತ್ರಸ್ಯ ಯೋನಿರ್ಯದ್ಬ್ರಹ್ಮ । ತಸ್ಮಾದ್ಯದ್ಯಪಿ ರಾಜಾ ಪರಮತಾಂ ಗಚ್ಛತಿ ಬ್ರಹ್ಮೈವಾನ್ತತ ಉಪನಿಶ್ರಯತಿ ಸ್ವಾಂ ಯೋನಿಂ ಯ ಉ ಏನಗ್ಂ ಹಿನಸ್ತಿ ಸ್ವಾಗ್ಂ ಸ ಯೋನಿಮೃಚ್ಛತಿ ಸ ಪಾಪೀಯಾನ್ ಭವತಿ ಯಥಾ ಶ್ರೇಯಾಗ್ಂಸಗ್ಂಹಿಗ್ಂಸಿ ತ್ವಾ (11)**

ತಾ : ಈ ಕ್ಷತ್ರಾದಿ ಜಾತವು, ಹಿಂದೆ (ಪೂರ್ವದಲ್ಲಿ) ಅಭಿನ್ನವಾಗಿ, ಅಗ್ನಿ ಸ್ವರೂಪವನ್ನು ಹೊಂದಿರುವ ಬ್ರಹ್ಮವಾಗಿಯೇ ಇದ್ದಿತು. ಆ ಬ್ರಹ್ಮವು ಒಂದಾಗಿ ಇರುವುದರಿಂದ ಕರ್ಮಗಳನ್ನು ಮಾಡಲು ಸಮರ್ಥವಾಗದೆ ಹೋಯಿತು. ಆಗ ಬ್ರಹ್ಮ ಕ್ಷತ್ರವೆನ್ನುವ ಪ್ರಶಸ್ತ ರೂಪವನ್ನು ಉತ್ಪನ್ನ ಮಾಡಿತು. ದೇವತೆಗಳಲ್ಲಿ ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಋತು, ಮೃತ್ಯು, ಈಶಾನ, ಇತ್ಯಾದಿ ಕ್ಷತ್ರಿಯರನ್ನು ಉತ್ಪಾದನೆ ಮಾಡಿತು. ಆದ್ದರಿಂದಲೇ ಕ್ಷತ್ರಿಯನಿಗಿಂತಲೂ ಹೆಚ್ಚಾದುದು ಏನೂ ಇಲ್ಲ. ಆದ್ದರಿಂದ ರಾಜಸೂಯದಲ್ಲಿ ಬ್ರಾಹ್ಮಣರು ಕೆಳಗೆ ನಿಂತು ಕ್ಷತ್ರಿಯನ ಉಪಾಸನೆ ಮಾಡುವರು. ಆತ ಅಂದರೆ ಬ್ರಹ್ಮವು ತನ್ನ ಯಶಸ್ಸನ್ನು ಕ್ಷತ್ರಿಯನಲ್ಲಿ ಸ್ಥಾಪಿಸುವನು. ಬ್ರಹ್ಮವೇ

ಕ್ಷತ್ರಿಯನಿಗೆ ಯೋನಿಯಾದ್ದರಿಂದ ರಾಜ ಶ್ರೇಷ್ಠತ್ವವನ್ನು ಹೊಂದಿದರು. ಕೊನೆಗೆ ಬ್ರಹ್ಮವನ್ನು ಆಶ್ರಯಿಸುವನು. ಅದು ಆತನ ಉತ್ಪತ್ತಿ ಸ್ಥಾನ. ಕರ್ಮಸಮಾಪ್ತಿಯಲ್ಲಿ ತನ್ನ ಉತ್ಪತ್ತಿಸ್ಥಾನವಾದ, ಬ್ರಾಹ್ಮಣನನ್ನೇ ಆಶ್ರಯಿಸುತ್ತಿದ್ದಾನೆ. ಯಾರು ಈ ಬ್ರಾಹ್ಮಣನನ್ನು ತಿರಸ್ಕಾರ ಭಾವದಿಂದ ನೋಡುತ್ತಿದ್ದಾನೋ, ಆತ ತನ್ನ ಸಂಬಂಧವಾದ ಉತ್ಪತ್ತಿ ಸ್ಥಾನವನ್ನು ನಶಿಸಿ ಹೋಗುವಂತೆ ಮಾಡುತ್ತಿದ್ದಾನೆ. ಅವನು ಈ ಲೋಕದಲ್ಲಿ ಅತಿ ಪ್ರಶಸ್ತವಾದಂತಹವನನ್ನು ಹಿಂಸಿಸಿ ಪಾಪಾತ್ಮ-ನಾಗುತ್ತಿದ್ದಾನೆ.

**ಮಂ.ಶ್ಲೋ॥ ಸ ನೈವ ವ್ಯಭವತ್ ಸ ವಿಶಮಸೃಜತ ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯನ್ತೇ ವಸವೋ ರುದ್ರಾ ಆದಿತ್ಯಾ ವಿಶ್ವೇದೇವಾ ಮರುತ ಇತಿ (12)**

ತಾ : ಆ ಪುರುಷನು ಕ್ಷತ್ರಿಯರನ್ನು ಸೃಜಿಸಿದರೂ, ವಿವಿಧ ಕರ್ಮಗಳನ್ನು ಮಾಡುವ ಬ್ರಹ್ಮವು ಶಕ್ತಿವಂತವಾಗಲಿಲ್ಲ. ಆದ್ದರಿಂದ ಆತನು ವೈಶ್ಯನನ್ನು ಸೃಷ್ಟಿಸಿದ. ಗಣಶಃ ಅಥವಾ ಗಣಗಳೆಂದು ಹೇಳಲಾದ ದೇವತೆಗಳಲ್ಲಿ ವಸು, ರುದ್ರ, ಆದಿತ್ಯ, ವಿಶ್ವ ದೇವಾದಿ ದೇವತೆಗಳಲ್ಲಿ ಅಂದರೆ ವೈಶ್ಯ ದೇವತೆಗಳನ್ನು ಸೃಷ್ಟಿ ಮಾಡಿದ.

**ಮಂ.ಶ್ಲೋ॥ ಸ ನೈವ ವ್ಯಭವತ್ ಸ ಶೌದ್ರಂ ವರ್ಣಮಸೃಜತ ಪೂಷಣಮಿಯಂ ವೈ ಪೂಷೇಯಗ್ಂ ಹೀದಗ್ಂ ಸರ್ವಂ ಪುಷ್ಯತಿ ಯದಿದಂ ಕಿಂಚ (13)**

ತಾ : ಆ ಪುರುಷನು ಎಲ್ಲ ಕೆಲಸಗಳನ್ನು ಮಾಡಲು ಶಕ್ತನಾಗಲಿಲ್ಲ. ಆದ್ದರಿಂದ ಆಗ ಶೂದ್ರ-ವರ್ಣವನ್ನು ಸೃಷ್ಟಿಸಿದ. ಪುರುಷನೇ ಶೂದ್ರ. ಅಂದರೆ ಈ ಪೃಥಿವಿಯೆಲ್ಲವೂ ಪೂಷವೆಂದು ಹೇಳಲಾಗುತ್ತದೆ. ಏಕೆಂದರೆ ಭೂಮಿಯೇ ಸರ್ವವನ್ನು ಪೋಷಿಸುವಂತಹುದಾಗಿದೆ.

**ಮಂ.ಶ್ಲೋ॥ ಸ ನೈವ ವ್ಯಭವತ್ತಚ್ಛ್ರೇಯೋ ರೂಪಮತ್ಯಸೃಜತ ಧರ್ಮಂ ತದೇತತ್ ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ಪರಂ ನಾಸ್ತ್ಯಥೋ ಅಬಲೀಯಾನ್ ಬಲೀಯಾಗ್ಂ ಸ ಮಾಶಗ್ಂ ಸತೇ ಧರ್ಮೇಣ ಯಥಾ ರಾಜ್ಞೈವಂ ಯೋ ವೈ ಸ ಧರ್ಮಃ ಸತ್ಯಂ ವೈ ತತ್ತಸ್ಮಾತ್ಸತ್ಯಂ ವದಸ್ತಮಾಹುರ್ಧರ್ಮಂ ವದತೀತಿ ಧರ್ಮಂ ವಾ ವದನ್ತಗ್ಂ ಸತ್ಯಂ ವದತೀತ್ಯೇತದ್ಧ್ಯೇ ವೈ ತದುಭಯಂ ಭವತಿ (14)**

ತಾ : ಆತ ಆ ರೀತಿಯಾಗಿ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಸೃಜಿಸಿ, ಉಗ್ರವಾದ ಕ್ಷತ್ರಿಯ ಜಾತಿ ನಿಯಾಮಕವಾದ ನಿಧಿಗಳು ಇಲ್ಲವಾದುದರಿಂದ, ಕರ್ಮ ಮಾಡಲು ಅಸಮರ್ಥನಾಗಿ ಪ್ರಶಸ್ತ (ವಾದ)ವಾಗುವಂತಹ ಧರ್ಮವನ್ನು ಸೃಜಿಸಿದ. ಇದರಂತಹ ಶ್ರೇಷ್ಠವಾದ ಧರ್ಮ ಮತ್ತೊಂದಿಲ್ಲ. ಗೃಹಸ್ಥನಾದ ಜನನು ಬಲ(ವಂತ)ಶಾಲಿಯಾದವನಿಂದ ಭಾರ್ಯೆ ಮುಂತಾದವರನ್ನು ಅಪಹರಿಸಿದಾಗ, ಪ್ರಭುತ್ವ ಬಲದಿಂದ ಹೇಗೆ ಜಯಿಸುವನೋ, ಆ ಪ್ರಕಾರ ಬಲಹೀನನಾದವನು ಬಲಶಾಲಿಯ ಧರ್ಮ ಬಲಗಳಿಂದ ಜಯಗಳಿಸುವಂತಹವನಾಗುತ್ತಾನೆ. ಇಂತಹ ಧರ್ಮವೇ ಶಾಸ್ತ್ರೀಯ ಸತ್ಯ. ಆದ್ದರಿಂದಲೇ ಲೋಕದಲ್ಲಿ ಸತ್ಯಧರ್ಮಗಳೆರಡನ್ನೂ ತಿಳಿದುಕೊಂಡು ನಡೆದುಕೊಳ್ಳುವವನು ಸತ್ಯವನ್ನು ನುಡಿಯುವವನೆಂದು, ಧರ್ಮವನ್ನು ಹೇಳುವವನೆಂದು, ಧರ್ಮವನ್ನು ಹೇಳುವವನು ಸತ್ಯವನ್ನು

ನುಡಿಯುವನೆಂದೂ ಹೇಳುತ್ತಾರೆ. ಸತ್ಯಧರ್ಮಗಳೆರಡನ್ನೂ ಒಟ್ಟಾಗಿ ಮಾಡಿ ಪರಮಾತ್ಮನು ಸೃಜಿಸಿದ್ದಾನೆ. ಕ್ಷತ್ರಿಯ ಜಾತಿಗೆ ನಿಯಮಿಸಿರುವಂತಹ ಧರ್ಮವಿದೇ!

ಮಂ.ಶ್ಲೋ॥ **ತದೇತದ್ಬ್ರಹ್ಮ ಕ್ಷತ್ರಂ ವಿಟ್ಛೂದ್ರಸ್ತದಗ್ನಿನೈವ ದೇವೇಷು ಬ್ರಹ್ಮಾಽಭವದ್ಬ್ರಾಹ್ಮಣೇ ಮನುಷ್ಯೇಷು ಕ್ಷತ್ರಿಯೇಣ ಕ್ಷತ್ರಿಯೋ, ವೈಶ್ಯೇನ ವೈಶ್ಯಃ ಶೂದ್ರೇಣ ಶೂದ್ರಸ್ತಸ್ಮಾದಗ್ನಾವೇವ ದೇವೇಷು ಲೋಕಮಿಚ್ಛಂತೇ ಬ್ರಾಹ್ಮಣೇ ಮನುಷ್ಯೇಷ್ವೇತಾಭ್ಯಾಗ್ಂ ಹಿ ರೂಪಾಭ್ಯಾಂ ಬ್ರಹ್ಮಾಭವತ್, ಅಥ ಯೋ ಹ ವಾ ಅಸ್ಮಾಲ್ಲೋಕಾತ್ ಸ್ವಂ ಲೋಕಮದೃಷ್ಟ್ವಾ ಪ್ರೈತಿ ಸ ಏನಮವಿದಿತೋ ನ ಭುನಕ್ತಿ ಯಥಾ ವೇದೋವಾಽನನುಕ್ತೋಽನ್ಯದ್ವಾ ಕರ್ಮಾ ಕೃತಂ ಯದಿಹ ವಾ ಅಪ್ಯನೇವಂ ವಿನ್ಮಹತ್ಪುಣ್ಯಂ ಕರ್ಮಕರೋತಿ ತದ್ಧಾಸ್ಯಾನ್ತತಃ ಕ್ಷೀಯತ ಏವಾತ್ಮಾನಮೇವ ಲೋಕಮುಪಾ -ಸೀತ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಽಸ್ಯ ಕರ್ಮಕ್ಷೀಯತೇ। ಆಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ ಸೃಜತೇ (15)**

ತಾ : ಈ ಬ್ರಾಹ್ಮಣ ಜಾತಿ, ಕ್ಷತ್ರಿಯ ಜಾತಿ, ವೈಶ್ಯ ಜಾತಿ, ಶೂದ್ರ ಜಾತಿಯೆನ್ನುವ ನಾಲ್ಕು ಜಾತಿಗಳೆಲ್ಲವೂ ಪರಬ್ರಹ್ಮವೇ. ಆ ಪರಬ್ರಹ್ಮವು ದೇವತೆಗಳ ಮಧ್ಯದಲ್ಲಿ ಅಗ್ನಿ ಸ್ವರೂಪದಲ್ಲಿಯೇ ಬ್ರಾಹಣ ಜಾತಿಯಾಯಿತು. ಮನುಷ್ಯರಲ್ಲಿ ಬ್ರಾಹ್ಮಣ ಸ್ವರೂಪದಲ್ಲಿ ಬ್ರಾಹ್ಮಣ ಜಾತಿಯಾಗಿಯೂ, ಕ್ಷತ್ರಿಯ ಸ್ವರೂಪದಲ್ಲಿ ಕ್ಷತ್ರಿಯ ಜಾತಿಯಾಗಿಯೂ, ವೈಶ್ಯ ಸ್ವರೂಪದಲ್ಲಿ ವೈಶ್ಯ ಜಾತಿಯಾಗಿಯೂ, ಶೂದ್ರ ಸ್ವರೂಪದಲ್ಲಿ ಶೂದ್ರ ಜಾತಿಯಾಗಿಯೂ ತಾನೇ ಆಗಿದ್ದಾನೆ. ಆದ್ದರಿಂದಲೇ ದೇವತೆಗಳ ನಿಮಿತ್ತವಾಗಿ ಅಗ್ನಿಯಲ್ಲಿ ಕರ್ಮ ಮಾಡಿ ಕರ್ಮಫಲವನ್ನು ಹೊಂದುತ್ತಿದ್ದಾನೆ. ಈ ಬ್ರಾಹ್ಮಣಾಗ್ನಿ ರೂಪಗಳಲ್ಲಿಯೇ ಪರಬ್ರಹ್ಮ ದರ್ಶನ ಕೊಡುವನು. ಮತ್ತು ಯಾರು ಈ ಲೋಕದಿಂದ, ಬ್ರಹ್ಮವನ್ನು ನೋಡದೆಯೇ, ಮರಣವನ್ನು ಹೊಂದುವನೋ, ಅವನನ್ನು ಆತ್ಮವು ರಕ್ಷಿಸುವುದಿಲ್ಲ. ಆದ್ದರಿಂದ ಆತ್ಮವನ್ನರಿಯದವನು ಎಷ್ಟು ಮಹತ್ತರ ಪುಣ್ಯವಾಚರಿಸಿದರೂ ಅದು ಫಲಾನುಭೋಗದ ಅಂತ್ಯದಲ್ಲಿ ನಶಿಸಿಹೋಗುವುದು. ಆದ್ದರಿಂದ ಆತ್ಮವನ್ನು ತನ್ನ ಪ್ರಪಂಚವೆಂದು ಉಪಾಸಿಸಬೇಕು. ಅಂತಹವನಿಗೆ ಕರ್ಮವು ಅಂಟುವುದಿಲ್ಲ. ಇಂತಹ ಆತ್ಮಜ್ಞಾನಿಯು ಏನೇನು ಬಯಸುವನೋ (ಇಚ್ಛಿಸುವನೋ) ಅದೆಲ್ಲವೂ ಅತ್ಮದಿಂದ ಪ್ರಾಪ್ತಿಯಾಗುವುದು. ಅಂದರೆ ಆತ್ಮಜ್ಞಾನದಿಂದ ಎಲ್ಲ ಪ್ರಯೋಜನಗಳೂ ಪ್ರಾಪ್ತವಾಗುತ್ತವೆ.

ಮಂ.ಶ್ಲೋ॥ **ಅಥೋ ಅಯಂ ವಾ ಆತ್ಮಾ ಸರ್ವೇಷಾಂ ಭೂತಾನಾಂ ಲೋಕಃ ಸ ಯಜ್ಜುಹೋತಿ ಯದ್ಯಜತೇ ತೇನ ದೇವಾನಾಂ ಲೋಕೋಽಥ ಯದನುಬ್ರೂತೇ ತೇನ ಋಷೀಣಾಮಥ ಯತ್ಪಿತೃಭ್ಯೋ ನಿಪೃಣಾತಿ ಯತ್ ಪ್ರಜಾಮಿಚ್ಛತೇ ತೇನ ಪಿತೃಣಾಮಥ ಯನ್ಮನುಷ್ಯಾ ನ್ಯಾಸಯತೇ ಯದೇಭ್ಯೋಽಶನಂ ದದಾತಿ ತೇನ ಮನುಷ್ಯಾಣಾಂ ಅಥಯತ್ಪಶುಭ್ಯಃ ತೃಣೋದಕಂ ವಿನ್ದತಿ ತೇನ ಪಶೂನಾಂ ಯದಸ್ಯ ಗೃಹೇಷು ಶ್ವಾಪದಾ ವಯಾಗ್ಂಸ್ಯಾ ಪಿಪೀಲಿಕಾಭ್ಯ ಉಪಜೀವನ್ತಿ ತೇನ ತೇಷಾಂ ಲೋಕೋ ಯಥಾ ಹ ವೈ ಸ್ವಾಯ ಲೋಕಾಯಾರಿಷ್ಟಿಮಿಚ್ಛೇ ದೇವಗ್ಂ ಹೈವಂ ವಿದೇ ಸರ್ವಾಣಿ ಭೂತಾನ್ಯರಿಷ್ಟಮಿಚ್ಛನ್ತಿ ತದ್ವಾ ಏತದ್ವಿದಿತಂ ಮೀಮಾಂಸಿತಮ್ (16)**

ತಾ : ಈ ಜೀವಾತ್ಮವೇ ಸಮಸ್ತ ಭೂತಗಳಿಗೂ ಅನುಭವಿಸುವಂತಹ ಆತ್ಮವಾಗಿದೆ. ಗೃಹಸ್ಥನಾದ ಆ ಜೀವನು ಕರ್ಮ ವಿಶೇಷಗಳಿಂದ ಸರ್ವ ಭೂತ ವಿಶೇಷಗಳಿಗೆ ಉಪಕಾರವನ್ನು ಮಾಡುತ್ತಿದ್ದಾನೆ. ಹೇಗೆಂದರೆ ಯಜ್ಞ ಕರ್ಮಗಳಿಂದ ದೇವತೆಗಳನ್ನು ಸ್ವಾಧ್ಯಾಯಾಧ್ಯಯನಕರ್ಮಗಳಿಂದ ಋಷಿಗಳಿಗೆ ಪಿಂಡೋದಕಗಳನ್ನು ಕೊಡುವುದರಿಂದ ಪಿತೃದೇವತೆಗಳನ್ನು ಮನೆಗಳಲ್ಲಿ ಅತಿಥಿಗಳಿಗೆ ವಸತಿ, ಭೋಜನ ಕೊಡುವುದರಿಂದ, ಮನುಷ್ಯರಿಗೂ, ಹುಲ್ಲು ನೀರು ಕೊಡುವುದರಿಂದ ಪಶುಗಳನ್ನು, ಬಲಿ ಭಾಂಡಕ್ಷಾಳನ (ಪಾತ್ರೆ ತೊಳೆಯುವುದು) ಮುಂತಾದ ಕಾರ್ಯಗಳಿಂದ ಪಿಪೀಲಿಕ (ಇರುವೆ) ಗಳಿಂದ ಹಿಡಿದು ಶ್ವಾನಗಳು ಮೊದಲಾದ ಜೀವಿಗಳಿಗೆ, ಕಾಕಾದಿ ಪಕ್ಷಿಗಳು ಮುಂತಾದವುಗಳಿಗೆ ಅಜ್ಞಾನಿಯಾಗಿ ಕರ್ಮದಲ್ಲಿ ಅಧಿಕೃತನಾದ ಜೀವನು ಉಪಕಾರವನ್ನು ಮಾಡುತ್ತಿದ್ದಾನೆ. ಈ ಪ್ರಕಾರ ಋಣವುಳ್ಳವನಾದುದರಿಂದಲೇ, ಪ್ರತ್ಯುಪಕಾರವನ್ನು ಮಾಡಬೇಕೆಂದು, ಗೃಹಸ್ಥನಾದ ಈ ಜೀವನನ್ನು, ಸಮಸ್ತ ಭೂತಗಳು ರಕ್ಷಿಸುತ್ತಿವೆ. ಇದನ್ನೇ ದೇವ ಋಷಿ ಪಿತೃ ಮನುಷ್ಯ ಭೂತಗಳೆನ್ನುವ ಪಂಚಯಜ್ಞಗಳ ಪ್ರಕರಣದಲ್ಲಿ ತಿಳಿಯಪಡಿಸಲಾಗುತ್ತಿದೆ. ಇದೇ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿದ್ದಾನೆ ಎಂಬುದನ್ನು ವಿಚಾರ ಮಾಡಲಾಗಿದೆ. (ಒಮ್ಮೊಮ್ಮೆ ಆತ್ಮಜ್ಞಾನಾಭ್ಯಾಸಕ್ಕೆ ದೇವತೆಗಳು ವಿಘ್ನವನ್ನು ಮಾಡುವರು.)

**ಮಂ.ಶ್ಲೋ|| ಆತ್ಮೈ ವೇದಮಗ್ರ ಆಸೀದೇಕ ಏವ ಸೋಽಕಾಮಯತ ಜಾಯಾ ಮೇ ಸ್ಯಾದಥ ಪ್ರಜಾಯೇಯಾಥ ವಿತ್ತಂ ಮೇ ಸ್ಯಾದಥ ಕರ್ಮಕುರ್ವೀಯೇತ್ಯೇತಾವಾನ್ ವೈ ಕಾಮೋ ನೇಚ್ಛಗ್ಂಶ್ಚ ನಾತೋ ಭೂಯೋ ವಿನ್ದೇತ್ತಸ್ಮಾದಪ್ಯೇತರ್ಹ್ಯೇಕಾಕೀ ಕಾಮಯತೇ ಜಾಯಾ ಮೇ ಸ್ಯಾದಥ ಪ್ರಜಾಯೇಯಾಥ ವಿತ್ತಂ ಮೇ ಸ್ಯಾದಥ ಕರ್ಮ ಕುರ್ವೀಯೇತಿ ಸ ಯಾವದ-ಪ್ಯೇತೇಷಾಮೇಕೈಕಂ ಸ ಪ್ರಾಪ್ನೋತ್ಯಕೃತ್ಸ್ನ ಏವ ತಾವನ್ಮನ್ಯತೇ ತಸ್ಯೋ ಕೃತ್ಸ್ನತಾ ಮನ ಏವಾಸ್ಯಾತ್ಮಾ ವಾಗ್ಜಾಯಾ । ಪ್ರಾಣಃ ಪ್ರಜಾ ಚಕ್ಷುರ್ಮಾನುಷಂ ವಿತ್ತಂ ಚಕ್ಷುಷಾ ಹಿ ತದ್ವಿನ್ದತೇ ಶ್ರೋತ್ರಂ ದೈವಗ್ಂ ಶ್ರೋತ್ರೇಣ ಹಿ ತಚ್ಛೃಣೋತ್ಯಾತ್ಮೈವಾಸ್ಯ ಕರ್ಮಾತ್ಮನಾ ಹಿ ಕರ್ಮ ಕರೋತಿ ಸ ಏಷ ಪಾಙ್ಕ್ತೋ ಯಜ್ಞಃ ಪಾಙ್ಕ್ತಃ ಪಶುಃ ಪಾಙ್ಕ್ತಃ ಪುರುಷಃ ಪಾಙ್ಕ್ತಮಿದಗ್ಂ ಸರ್ವಂ ಯದಿದಂ ಕಿಂಚ ತದಿದಗ್ಂ ಸರ್ವಮಾಪ್ನೋತಿ ಯ ಏವಂ ವೇದ (17)**

ತಾ : ಈ ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮ ಒಬ್ಬನೇ ಇದ್ದನು. ಆ ಆತ್ಮವು ನನಗೆ ಪತ್ನಿಯಾಗಬೇಕೆಂದು ಇಚ್ಛಿಸಿತು. ಪ್ರಜೆಗಳು, ಸಂತಾನೋತ್ಪತ್ತಿಯು, ಧನದ ಅವಶ್ಯಕತೆಯನ್ನುಂಟುಮಾಡಿತು. ನಾನು ಕರ್ಮ, ಕಾಯಕ ಮಾಡಬೇಕೆನ್ನುವ ಭಾವವು ಆ ಆತ್ಮಕ್ಕೆ ಉಂಟಾಯಿತು. ಇವು ಆತನ ಕೋರಿಕೆಗಳು. ಇದಕ್ಕಿಂತಲೂ ಅಧಿಕವಾಗಿ ವಾಂಛಿಸುವವನು ಅಧಿಕವಾಗಿ ಹೊಂದಲಾರ. ಆದ್ದರಿಂದ ಒಬ್ಬನೇ ಇರುವವನು ಧನಸ್ತ್ರೀ ಪುತ್ರಾದಿಗಳು ಬೇಕೆನ್ನುವುದು, ನಾನು ಕರ್ಮ (ಕಾಯಕ) ಮಾಡ ಬೇಕೆಂದು ಇಚ್ಛಿಸುವನು. ಇವುಗಳಲ್ಲಿ ಒಂದು ಪ್ರಾಪ್ತವಾಗುವವರೆಗೂ ಅವನ ಮನಸ್ಸೇ ಅವನ ಆತ್ಮವಾಗಿರುವುದು. ವಾಕ್ಕೇ ಪತ್ನಿ; ಪ್ರಾಣವೇ ಪುತ್ರ; ನೇತ್ರಗಳೇ ಮಾನುಷವಾದ ಧನ; ಏಕೆಂದರೆ ಕಣ್ಣಿನಿಂದಲೇ ಧನವನ್ನು ತಿಳಿಯಲಾಗುವುದು. ಶ್ರೋತ್ರೇಂದ್ರಿಯವೇ ದೈವ. ಆತ್ಮವೇ ಕರ್ಮ. ಆತ್ಮದಿಂದಲೇ ದೇಹೇಂದ್ರಿಯಗಳ ಮೂಲಕ ಕರ್ಮವಾಗುವುದೆಂದು ಅರ್ಥ. ಇದೇ ಪಾಂಕ್ತಯಜ್ಞ. ಐದು ಜನರಿಂದ ಆಗಿದೆಯೆಂದು ಅರ್ಥ. ಯಜ್ಞ, ಪಶುಪಾಂಕ್ತವು. ಪುರುಷನು

ಪ್ರಾಂಕ್ತವೇ ಸರ್ವವೂ ಪ್ರಾಂಕ್ತವೇ. ಹೀಗೆ ಸರ್ವವನ್ನು ಪಾಂಕ್ತ ಸ್ವರೂಪವಾದ ಯಜ್ಞವಾಗಿ ತಿಳಿದುಕೊಂಡು ಉಪಾಸಿಸುವಂತಹವನು ಜಗತ್ತಿನ ಸ್ವರೂಪದಲ್ಲಿ ಈ ಸಮಸ್ತವನ್ನು ಹೊಂದುತ್ತಿದ್ದಾನೆ.

# ತೃತೀಯೋಧ್ಯಾಯ - ಪಂಚಮ ಬ್ರಾಹ್ಮಣಂ

**ಮಂ.ಶ್ಲೋ|| ಯತ್ಸಪ್ತಾನ್ನಾನಿ ಮೇಧಯಾ ತಪಸಾ ಜನಯತ್ಪಿತಾ । ಏಕಮಸ್ಯ ಸಾಧಾರಣಂ ದ್ವೇ ದೇವಾ ನಭಾಜಯತ್ತ್ರೀಣ್ಯಾತ್ಮನೇಽಕುರುತ ಪಶುಭ್ಯ ಏಕಂ ಪ್ರಾಯಚ್ಛತ್ತಸ್ಮಿನ್ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ । ಕಸ್ಮಾತ್ತಾನಿ ನಕ್ಷೀಯನ್ತೇಽದ್ಯಮಾನಾನಿ ಸರ್ವದಾ । ಯೋ ವೈ ತಾಮ ಕ್ಷಿತಿಂ ವೇದ ಸೋಽನ್ನಮತ್ತಿ ಪ್ರತೀಕೇನ । ಸ ದೇವಾನಪಿ ಗಚ್ಛತಿ ಸ ಊರ್ಜಮುಪಜೀ -ವತೀತಿ ಶ್ಲೋಕಾಃ (1)**

ತಾ : ಹಿರಣ್ಯಗರ್ಭನು (ಪ್ರಜಾಪತಿ) ಮೇಧ ಮತ್ತು ತಪಸ್ಸು ಇವುಗಳ ಸಹಾಯದಿಂದ ಯಾವ ಸಪ್ತಾನ್ನಗಳನ್ನು ಉತ್ಪನ್ನ ಮಾಡಿದನೋ ಅವು ಯಾವುವು? ಅಂದರೆ; ಒಂದು ಎಲ್ಲರೂ ಸಾಮಾನ್ಯವಾಗಿ ಭುಜಿಸಲ್ಪಡುವ ಅನ್ನ, ದೇವತೆಗಳನ್ನು ಕುರಿತು ಎರಡನೆಯದಾದ ಹುತ ಪ್ರಹುತಗಳೆನ್ನುವ ಅನ್ನಗಳನ್ನು ಸೃಜಿಸಿದ. ಮೂರನೆಯದಾದ ಮನೋವಾಕ್ಪ್ರಾಣಗಳೆನ್ನುವ ಅನ್ನಗಳನ್ನು, ತನಗಾಗಿ ಮಾಡಿದ. ಪಶುಗಳಿಗಾಗಿ, ಕ್ಷೀರವನ್ನು ಸೃಜಿಸಿದ. ಯಾವುದು ಪ್ರಾಣವುಳ್ಳದ್ದೋ, ಯಾವುದು ಪ್ರಾಣವಿಲ್ಲದ್ದೋ, ಆ ಸಮಸ್ತ ಜಗತ್ತನ್ನು (ಪಶುಗಳ ಅನ್ನ) ಪಯಸ್ಸಿನಲ್ಲಿ ಇಡಲಾಗಿದೆ. ಆ ಅನ್ನಗಳು ಯಾವಾಗಲೂ, ಭಕ್ಷಿಸುತ್ತಿದ್ದರೂ, ಕಡಿಮೆಯಾಗುವುದಿಲ್ಲ. ಯಾರು ಈ ಅಕ್ಷಯವನ್ನು ತಿಳಿದುಕೊಳ್ಳು-ತ್ತಾರೋ ಮುಖದಿಂದ ಅನ್ನವನ್ನು ಭಕ್ಷಿಸುವನೋ ಅವನು ದೇವತೆಗಳನ್ನು ಸಹ ಹೊಂದುತ್ತಿದ್ದಾನೆ. ಅಮೃತವನ್ನು ಮೋಕ್ಷವನ್ನು ಅನುಭವಿಸುತ್ತಿದ್ದಾನೆ. ಈ ಪ್ರಕಾರವಾಗಿ ಮಂತ್ರಗಳು ಇವೆ.

**ಮಂ.ಶ್ಲೋ|| ಯತ್ಸಪ್ತಾನ್ನಾನಿ ಮೇಧಯಾ ತಪಸಾಽಜನಯತ್ಪಿತೇತಿ ಮೇಧಯಾ ಹಿ ತಪಸಾಽಜನಯತ್ಪಿತ್ರೈಕ -ಮಸ್ಯಸಾಧಾರಣಮಿತೀದಮೇವಾಸ್ಯ ತತ್ಸಾಧಾರಣಮನ್ನಂ ಯದಿದಮದ್ಯತೇ । ಸ ಯ ಏತದುಪಾಸ್ತೇ ನ ಸ ಪಾಪ್ಮನೋ ವ್ಯಾವರ್ತತೇ ಮಿಶ್ರಗ್ಂ ಹ್ಯೇತತ್ । ದ್ವೇ ದೇವಾನ-ಭಾಜಯದಿತಿ ಹುತಂ ಚ ಪ್ರಹುತಂ ಚ ತಸ್ಮಾದ್ದೇವೇಭ್ಯೋ ಜುಹ್ವತಿ ಪ್ರಚ ಜುಹ್ವತ್ಯಥೋ ಆಹುರ್ದರ್ಶಪೌರ್ಣಮಾಸಾವಿತಿ ತಸ್ಮಾನ್ನೇಷ್ಟಿಯಾಜುಕಃ ಸ್ಯಾತ್ಪಶುಭ್ಯ ಏಕಂ ಪ್ರಾಯಚ್ಛದಿತಿ ತತ್ಪಯಃ । ಪಯೋಹ್ಯೇವಾಗ್ರೇ ಮನುಷ್ಯಾಶ್ಚ ಪಶವಶ್ಚೋಪಜೀವನ್ತಿ ತಸ್ಮಾತ್ಕುಮಾರಂ ಜಾತಂ ಘೃತಂ ವೈವಾಗ್ರೇ ಪ್ರತಿಲೇಹಯನ್ತಿ ಸ್ತನಂ ವಾನುಧಾಪಯನ್ತ್ಯಥ ವತ್ಸಂ ಜಾತ-ಮಾಹುರತೃಣಾದ ಇತಿ ತಸ್ಮಿನ್ಸರ್ವಂ ಪ್ರತಿಷ್ಠಿತಂ । ಯಚ್ಛ ಪ್ರಾಣಿತಿ ಯಚ್ಛ ನೇತಿ ಪಯಸಿ ಹೀದಗ್ಂ ಸರ್ವಂ ಪ್ರತಿಷ್ಠಿತಂ ಯಚ್ಛ ಪ್ರಾಣೀತಿ ಯಚ್ಚನ । ತದ್ಯದಿದಮಾಹುಃ ಸಂವತ್ಸರಂ ಪಯಸಾ ಜುಹ್ವದಪ ಪುನರ್ಮೃತ್ಯುಂ ಜಯತೀತಿ ನ ತಥಾ ವಿದ್ಯಾದ್ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮಪಜಯತ್ಯೇವಂ ವಿದ್ವಾನ್ಸರ್ವಗ್ಂ ಹಿ ದೇವೇಭ್ಯೋಽನ್ನಾದ್ಯಂ ಪ್ರಯಚ್ಛತಿ ಕಸ್ಮಾತ್ತಾನಿ ಸ ಕ್ಷೀಯನ್ತೇಽದ್ಯಮಾನಾನಿ ಸರ್ವದೇತಿ ಪುರುಷೋ ವಾ ಅಕ್ಷಿತಿಃ**

**ಸ ಹೀದಮನ್ನಂ ಪುನಃಪುನರ್ಜನಯತೇ । ಯೋ ವೈ ತಾಮಕ್ಷಿತಂ ವೇದೇತಿ ಪುರುಷೋ ವಾ ಅಕ್ಷಿತಿಃ ಸ ಹೀದಮನ್ನಂ ಧಿಯಾ ಧಿಯಾ ಜನಯತೇ ಕರ್ಮಭಿರ್ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ ಸೋಽನ್ನಮತ್ತಿ ಪ್ರತೀಕೇನೇತಿ ಮುಖಂ ಪ್ರತೀಕಂ ಮುಖೇನೇತ್ಯೇತತ್ಸ ದೇವಾನಪಿ ಗಚ್ಛತಿ ಸ ಊರ್ಜಮುಪಜೀವತೀತಿ ಪ್ರಶಗ್ಂಸಾ (2)**

ತಾ : ಅನ್ನಗಳನ್ನೇ ಈ ಬ್ರಾಹ್ಮಣ ವಾಕ್ಯದಲ್ಲಿ ಹೇಳಲಾಗುತ್ತಿದೆ. ಸಾಧಾರಣವಾಗಿ ಜೀವಿಗಳಿಂದ ಭಕ್ಷಿಸಲ್ಪಡುವಂತಹ ಒಂದೇ ಆಗಿರುವ ಅನ್ನವನ್ನು, ಜೀವಿಗಳ ಸಮುದಾಯಕ್ಕಾಗಿ ಪರಮಾತ್ಮನು, ಸೃಜಿಸಿದ. ಅಂತಹ ಅನ್ನವು ಧರ್ಮಾಧರ್ಮಗಳೊಂದಿಗೆ ಮಿಶ್ರಣಗೊಂಡಿದೆ. ಆದ್ದರಿಂದ ಅನ್ನವನ್ನು ಭಗವದಾರಾಧನೆಗೆ ಉಪಯೋಗಿಸದೆ ಕೇವಲ ತನ್ನ ದೇಹಧಾರಣೆಗೆ ಉಪಯೋಗಿಸುವಂತಹ ಜನನು ಪಾಪವನ್ನು ಹೊಂದುವನು. ಆ ಪರಮಾತ್ಮ ದೇವತೆಗಳಿಗೆ ಹುತ ಪ್ರಹುತಗಳನ್ನು, ಹೋಮಗಳನ್ನು, ಬಲಿ ಹರಣ, ರೂಪಗಳಾದ ಅನ್ನಗಳೆರಡನ್ನು ಸೃಷ್ಟಿಸಿದನು. ಅದರಿಂದಲೇ ದೇವತೆ-ಗಳಿಗಾಗಿ ಹೋಮಗಳನ್ನು, ಬಲಿಹರಣಗಳನ್ನು ಮಾಡುತ್ತಿದ್ದಾರೆ. ಇನ್ನು ಕೆಲವರು ಈ ಹುತಪ್ರಹುತ-ಗಳನ್ನೇ, ದರ್ಶಪೂರ್ಣಮಾಸಗಳಾಗಿ ಹೇಳುವರು. ಆದ್ದರಿಂದಲೇ ಕೆಲವರು ನಿಷ್ಕಾಮವಾಗಿ ದರ್ಶಪೂರ್ಣಮಾಸಗಳಲ್ಲೇ ದೇವತೆಗಳನ್ನು ಕುರಿತು ಹುತಪ್ರಹುತಗಳನ್ನು ಮಾಡುತ್ತಿದ್ದಾರೆ. ಆ ಪರಮಾತ್ಮನು ಪಶುಗಳಿಗೆ ಪಯಸ್ಸ್ವರೂಪವಾದ ಅನ್ನವನ್ನು ಸೃಜಿಸಿದ. ಕ್ಷೀರವು ಸರ್ವಕ್ಕೂ ಆಧಾರವಾದುದರಿಂದ ಇದನ್ನು ಮೊದಲು ಮನುಷ್ಯರು ಉಪಯೋಗಿಸಿದರು. ಪಶುಗಳನ್ನು, ಕ್ಷೀರವನ್ನು ಉಪಯೋಗಿಸುತ್ತೇವೆ. ಆದುದರಿಂದಲೇ ಮನುಷ್ಯರು ಜಾತಕರ್ಮ ಸಮಯದಲ್ಲಿ ಮಗುವಿಗೆ ಈ ಪಯೋ ರೂಪವಾದ ತುಪ್ಪವನ್ನು ಮೊದಲು ಕುಡಿಸುತ್ತಾರೆ. ಸ್ತನ್ಯಪಾನವನ್ನಾದರೂ ಮಾಡಿಸುತ್ತಾರೆ. ಹೀಗೆ ಮನುಷ್ಯರು ಪಶ್ವನ್ನವಾದ ಕ್ಷೀರವನ್ನು ಉಪಯೋಗಿಸುವುದರಿಂದಲೇ ಜನಗಳು ಶಿಶುವನ್ನು ಕುರಿತು ಅವನ ಪರಿಮಿತಿಯನ್ನು ಪ್ರಶ್ನೆ ಹಾಕುವಾಗ ಬಾಲ್ಯವನ್ನು ಕುರಿತು ತಿಳಿಸುಕೊಡುವುದಕ್ಕೆ ಬದಲಾಗಿ ಅತೃಣಾದನೆಂದು ಹೇಳುವರು. ಕ್ಷೀರದಲ್ಲೇ ಜಂಗಮ ಸ್ಥಾವರಾತ್ಮಕವಾದ ಸಮಸ್ತ ಪ್ರಪಂಚವು ಒಳಗೊಂಡಿದೆ. ಅಂತಹ ಸರ್ವಾಧಾರಕವಾದ ಹಾಲನ್ನು ದೇವತೆಗಳ ನಿಮಿತ್ತವಾಗಿ ಒಂದು ಸಂವತ್ಸರ ಕಾಲ ಹೋಮ ಮಾಡಿ ಮರಣ ಹೊಂದಿದ ಮೇಲೆ ದೇವತೆಗಳಾಗಿ ಹುಟ್ಟುವರು.

ಅಗ್ನಿ ರೂಪ ಪ್ರಜಾಪತಿಯನ್ನು ಹೊಂದಿ, ಪುನರ್ಮರಣವನ್ನು ಹೊಂದಬಲ್ಲ ಎಂದು, ಬೋಧಿಸುವ ಬ್ರಾಹ್ಮಣವಾದಿಗಳ ವಾಕ್ಕನ್ನು ಆ ವಿಧವಾಗಿಯೇ (ಯಥಾರ್ಥವಾಗಿ) ತಿಳಿಯಬಾರದು. ಆ ಹಾಲನ್ನು ಒಂದು ದಿನ ಹೋಮ ಮಾಡುವುದರಿಂದಲೇ ಸರ್ವವೂ ಆ ಪಯೋರೂಪವಾದ ಆಹುತಿಯ ವಿಪರಿಣಾಮಾತ್ಮಕ್ಕನುಗುಣವಾದ ಜಗದಾತ್ಮತ್ವವನ್ನು ಹೊಂದುತ್ತಿದ್ದಾನೆ. ಈ ರೀತಿಯಾಗಿ ತಿಳಿದುಕೊಂಡ ಪಂಡಿತರು ಕ್ಷೀರವನ್ನು ಸಾಯಂ ಪ್ರಾತಃಕಾಲಗಳಲ್ಲಿ ಆಹುತ ಪ್ರಕ್ಷೇಪಣಗಳೊಂದಿಗೆ ಹೋಮ ಮಾಡಿ ಸರ್ವ ದೇವತಾ ಸ್ವರೂಪರಾಗುತ್ತಿದ್ದಾರೆ. ಈ ಸೃಜಿಸಲಾದ ಸಪ್ತಾನ್ನಗಳನ್ನು ಬೇರೆ ಬೇರೆ ಭೋಕ್ತರು ಸರ್ವದಾ ಭಕ್ಷಿಸಿದರೂ ನಶಿಸುವುದಿಲ್ಲ. ಈ ಅನ್ನಗಳನ್ನು ಸೃಷ್ಟಿಸಿದ ಪರಮಾತ್ಮ ಅನ್ನಗಳಿಗೆ ಸೃಷ್ಟಿಕರ್ತನಾಗಿ, ತಂದೆಯಾಗಿ ಪಾಙ್ಕ ಸ್ವರೂಪಕರ್ಮದಿಂದ ಭೋಕ್ತನಾಗಿ ಅನುಭವಿಸು-ತ್ತಿದ್ದಾನೆ. ಆ ಅಕ್ಷಯ ಕಾರಣನಾದ ಪರಮಾತ್ಮನು, ಸಪ್ತ ವಿಧವಾದ ಅನ್ನಗಳನ್ನು ಆಯಾ ಕಾಲದಲ್ಲಿ

ಪ್ರಜ್ಞೆಯಿಂದ ಸಂಕಲ್ಪಿಸುತ್ತಾ, ವಾಙ್ಮನಃ ಕಾಯಗಳೊಂದಿಗೆ ಪುನಃ ಪುನಃ ಸೃಷ್ಟಿಸುತ್ತಿದ್ದಾನೆ. ಆ ರೀತಿಯಾಗಿ ಸೃಷ್ಟಿಸಲ್ಪಟ್ಟಂತಹುವುಗಳೆಲ್ಲವೂ ನಶಿಸುವವು. ಪರಮಾತ್ಮನು ಸರ್ವದಾ ಜ್ಞಾನಕರ್ಮಗಳ ವಿಧಿ ಪ್ರಕಾರವಾಗಿ ಸೃಜಿಸುವುದರಿಂದ ಸಪ್ತಾನ್ನಗಳು ಕ್ಷೀಣಿಸಲಾರದಂತಹುಗಳಾಗಿವೆ. ಹೀಗೆ ತಿಳಿದುಕೊಳ್ಳುವ ಆ ಪುರುಷನೇ, ಅವನೇ ಮುಖದಿಂದ ಅನ್ನವನ್ನು ಭಕ್ಷಿಸುತ್ತಿದ್ದಾನೆ. ಆ ಪುರುಷನೇ ದೇವಾತ್ಮ ಭಾವವನ್ನು ಹೊಂದಿ, ಸರ್ವ ದೇವತಾ ಸ್ವರೂಪನಾಗುತ್ತಿದ್ದಾನೆ. ಮೋಕ್ಷವನ್ನು ಹೊಂದುತ್ತಿದ್ದಾನೆ. ಹೀಗೆ ಹೇಳುವುದು ಸ್ತುತಿಗಾಗಿ ಹೇಳಲಾಗಿದೆಯೇ ಹೊರತು ಹಿಂದೆ ಇಲ್ಲದ್ದು, ಈಗ ಏನೂ ಎನ್ನುವುದು ಇಲ್ಲವೇ ಇಲ್ಲ. ಆ ಪುರುಷನು ಸರ್ವದಾ ಮುಕ್ತನಾಗಿ ಪರಮಾತ್ಮನಾಗಿಯೇ ಪ್ರಕಾಶಿಸುತ್ತಿದ್ದಾನೆ. (ಇಲ್ಲಿಯವರೆಗೆ ನಾಲ್ಕು ವಿಧವಾದ ಅನ್ನಗಳನ್ನು ಕುರಿತು ಹೇಳಲಾಗಿದೆ.)

**ಮಂ.ಶ್ಲೋ॥ ತ್ರೀಣ್ಯಾತ್ಮನೇಽಕುರುತೇತಿ ಮನೋ ವಾಚಂ ಪ್ರಾಣಂ ತಾನ್ಯಾತ್ಮನೇಽಕುರುತಾನ್ಯತ್ರ ಮನಾ ಅಭೂವಂ ನಾದರ್ಶಮನ್ಯತ್ರ ಮನಾ ಅಭೂವಂ ನಾಶ್ರೌಷಮಿತಿ ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ। ಕಾಮಸ್ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿಃ ಹ್ರೀರ್ಧೀರ್ಭೀರಿತ್ಯೇತತ್ಸರ್ವಂ ಮನ ಏವ ತಸ್ಮಾದಪಿ ಪೃಷ್ಠತ ಉಪಸ್ಪೃಷ್ಟೋ ಮನಸಾ ವಿಜಾನಾತಿ ಯಃ ಕಶ್ಚ ಶಬ್ದೋ ವಾಗೇವ ಸಾ ಏಷಾಹ್ಯಂತ ಮಾಯತ್ತೈಷಾ ಹಿ ನ ಪ್ರಾಣೋಽಪಾನೋ ವ್ಯಾನ ಉದಾನಸ್ಸಮಾನೋಽನ ಇತ್ಯೇತತ್ಸರ್ವಂ ಪ್ರಾಣ ಏವೈತನ್ಮಯೋ ವಾ ಅಯಮಾತ್ಮಾ ವಾಙ್ಮಯೋ ಮನೋಮಯಃ ಪ್ರಾಣಮಯಃ ॥ (3)**

ತಾ : ಆ ಪರಮಪಿತನಾದ ಪ್ರಜಾಪತಿಯು, ಮೂರು ವಿಧವಾದ ಅನ್ನಗಳನ್ನು ತನಗಾಗಿ ಮಾಡಿದನು. ಅವೇ ಮನಸ್ಸು ವಾಕ್ಕು ಹಾಗೂ ಪ್ರಾಣವೆನ್ನುವ ಅನ್ನಗಳು. ಆ ಅನ್ನಗಳನ್ನು ತನಗಾಗಿ ಮಾಡಿಕೊಂಡ. ನಾನು ಮತ್ತೊಂದು ಕಡೆ ಮನಸ್ಸುಳ್ಳವನಾಗಿದ್ದೇನೆ. ಮನಸ್ಸಿನಿಂದಲೇ ನೋಡುವೆನು, ಮನಸ್ಸಿನಿಂದ ಕೇಳುವೆನು, ವಾಂಛಿಸುವುದು ಸಂಕಲ್ಪ ಸಂಶಯಜ್ಞಾನ (ಜಿಜ್ಞಾಸೆ) ಅಸ್ತಿಕ್ಯ ಬುದ್ಧಿ, ಅಶ್ರದ್ಧೆ, ಧಾರಣೆ, ಅಧೃತಿ ಲಜ್ಜೆ, ಪ್ರಜ್ಞೆ, ಭಯ. ಈ ಸಮಸ್ತವೂ ಮನಸ್ಸೇ ಆದುದರಿಂದ ಬೆನ್ನನ್ನು ಸ್ಪರ್ಶಿಸಿದರೂ, ಮನಸ್ಸಿನಿಂದ ತಿಳಿದುಕೊಳ್ಳುತ್ತಾನೆ. ಸರ್ವಶಬ್ದಗಳು ಆ ವಾಕ್ಕೇ. ಈ ವಾಕ್ಕೇ ವಸ್ತು ನಿರ್ಣಯವನ್ನು ಅನುಸರಿಸಿ ಹೊಂದುತ್ತಿದೆ. ಈ ವಾಕ್ಕು ಸ್ವತಃ ಹೆಸರುಳ್ಳ ವಸ್ತುಗಳಂತೆಯೇ ಪ್ರಕಾಶಿಸುವಂತಹುದಲ್ಲ. (ವಸ್ತುವನ್ನು ಪ್ರಕಾಶಗೊಳಿಸುವಂತಹುದಾಗಿದೆ) ಪ್ರಾಣವೆನ್ನುವ, ಅಪಾನವೆನ್ನುವ, ವ್ಯಾನವೆನ್ನುವ, ಉದಾನವೆನ್ನುವ, ಸಮಾನವೆನ್ನುವ ಅನ್ನವನ್ನು ದೇಹ ಚೇಷ್ಟಾ ಸಂಬಂಧವಾದ ವೃತ್ತಿಯು. ಈ ಸಮಸ್ತವು ಪ್ರಾಣವೇ ಆಗುವುದು. ಈ ಮನೋ ವಾಕ್ಪ್ರಾಣಗಳೆನ್ನುವ ಹೆಸರುಳ್ಳ ಅನ್ನಗಳ ವಿಕಾರವಾದ ಈ ದೇಹವೇ ವಾಗ್ವಿಕಾರವಾದದು. ಮನೋವಿಕಾರವಾದುದು, ಪ್ರಾಣವಿಕಾರ-ವಾದುದೂ ಆಗಿದೆ.

**ಮಂ.ಶ್ಲೋ॥ ತ್ರಯೋ ಲೋಕಾ ಏತ ಏವ ವಾಗೇವಾಯಂ ಲೋಕೋ ಮನೋಽನ್ತರಿಕ್ಷಲೋಕಃ ಪ್ರಾಣೋಽಸೌ ಲೋಕಃ (4)**

ತಾ : ಭೂಲೋಕ, ಭುವರ್ಲೋಕ, ಸುವರ್ಲೋಕಗಳು ಮೂರು ವಾಙ್ಮನಃ ಪ್ರಾಣಗಳೇ, ಈ ಭೂಲೋಕವೇ ವಾಕ್ಕು, ಭುವರ್ಲೋಕವು ಮನಸ್ಸು, ಸುವರ್ಲೋಕವು ಪ್ರಾಣ.

**ಮಂ.ಶ್ಲೋ॥ ತ್ರಯೋ ವೇದಾ ಏತ ಏವ ವಾಗೇವರ್ಗ್ವೇದೋ ಮನೋ ಯಜುರ್ವೇದಃ ಪ್ರಾಣಸ್ಸಾಮವೇದಃ (5)**

ತಾ : ಋಗ್ಯಜುಸ್ಸಾಮಗಳೆನ್ನುವ ಮೂರು ವೇದಗಳು ಈ ವಾಙ್ಮನ ಪ್ರಾಣಗಳೇ ಆಗಿವೆ. ಈ ವಾಕ್ಕೇ ಋಗ್ವೇದ; ಮನಸ್ಸು ಯಜುರ್ವೇದ, ಪ್ರಾಣವು ಸಾಮವೇದ.

**ಮಂ.ಶ್ಲೋ॥ ದೇವಾಃ ಪಿತರೋ ಮನುಷ್ಯಾ ಏತ ಏವ ವಾಗೇವ ದೇವಾ ಮನಃ ಪಿತರಃ ಪ್ರಾಣೋ ಮನುಷ್ಯಾಃ (6)**

ತಾ : ದೇವತೆಗಳು, ಪಿತೃದೇವತೆಗಳು, ಮನುಷ್ಯರು ವಾಙ್ಮನಃ ಪ್ರಾಣಗಳೇ, (ಅವುಗಳಲ್ಲಿ) ವಾಕ್ಕೇ ದೇವತೆಗಳು. ಮನಸ್ಸೇ ಪಿತೃದೇವತೆಗಳು, ಪ್ರಾಣವೇ ಮನುಷ್ಯರು.

**ಮಂ.ಶ್ಲೋ॥ ಪಿತಾ ಮಾತಾ ಪ್ರಜೈ ತ ಏವ ಮನ ಏವ ಪಿತಾ ವಾಙ್ಮಾತಾ ಪ್ರಾಣಃ ಪ್ರಜಾ (7)**

ತಾಃ ಮಾತಾಪಿತೃಗಳು, ಸಂತಾನಗಳು, ಈ ಮನೋವಾಕ್ಪ್ರಾಣಗಳೇ. ಇದರಲ್ಲಿ ಮನಸ್ಸೇ ತಂದೆಯೆಂದು, ವಾಕ್ಕೇ ತಾಯಿಯೆಂದು, ಸಂತತಿಯೇ ಪ್ರಾಣ, ಪ್ರಾಣವೇ ಸಂತತಿಯೆಂದು ಹೇಳುವುದು.

**ಮಂ.ಶ್ಲೋ॥ ವಿಜ್ಞಾತಂ ವಿಜಿಜ್ಞಾಸ್ಯಮವಿಜ್ಞಾತಮೇತ ಏವ ಯತ್ಕಿಂಚ ವಿಜ್ಞಾತಂ ವಾಚಸ್ತದ್ರೂಪಂ ವಾಗ್ಘಿವಿಜ್ಞಾತಾ ವಾಗೇನಂ ತದ್ಭೂತ್ವಾಽವತಿ (8) ಯತ್ಕಿಂಚ ವಿಜಿಜ್ಞಾಸ್ಯಂ ಮನಸಸ್ತದ್ರೂಪಂ ಮನೋ ಹಿ ವಿಜಿಜ್ಞಾಸ್ಯಂ ಮನ ಏನಂ ತದ್ಭೂತ್ವಾಽಂವತಿ (9) ಯತ್ಕಿಂಚಾ ವಿಜ್ಞಾತಂ ಪ್ರಾಣಸ್ಯ ತದ್ರೂಪಂ ಪ್ರಾಣೋ ಹ್ಯವಿಜ್ಞಾತಃ ಪ್ರಾಣ ಏನಂ ತದ್ಭೂತ್ವಾಽವತಿ (10)**

ತಾ : ಸ್ಪಷ್ಟವಾಗಿ ತಿಳಿದುಕೊಳ್ಳುವ ಜ್ಞಾನವನ್ನು, ತಿಳಿದುಕೊಳ್ಳುವುದಕ್ಕೆ ಇಷ್ಟಪಡುವ ಪ್ರೇಮವು, ಇಂದ್ರಿಯ ಗೋಚರವಾದವುಗಳು. ಈ ವಾಙ್ಮನಃ ಪ್ರಾಣಗಳೇ. ಅದರಲ್ಲಿ ವಿಜ್ಞಾನ ಸ್ವರೂಪವೇ ವಾಕ್ಸ್ವರೂಪ. ವಾಕ್ಕೇ ವಿಜ್ಞಾನ ಸ್ವರೂಪ. ವಾಕ್ಕು ವಿಜ್ಞಾನ ಸ್ವರೂಪವಾಗಿ ಈ ವಾಗ್ವಿಭೂತಿಯನ್ನು ತಿಳಿದವನನ್ನು ರಕ್ಷಿಸುತ್ತದೆ. ತಿಳಿದುಕೊಳ್ಳುವುದಕ್ಕೆ ಇಷ್ಟಪಡುವಂತಹ ಪ್ರೇಮವೇ ಮನಃ ಸ್ವರೂಪ. ಮನಸ್ಸೇ ತಿಳಿದುಕೊಳ್ಳಲು ಇಷ್ಟಪಡುವ ಪ್ರೇಮ. ಈ ಮನಸ್ಸು ಪ್ರೇಮರೂಪವಾಗಿ ಈ ಮನೋ ವಿಭೂತಿಯನ್ನು ತಿಳಿದುಕೊಂಡವನನ್ನು ರಕ್ಷಿಸುತ್ತದೆ. ಇಂದ್ರಿಯಗೋಚರ ಸ್ವರೂಪವಾದ ಅಜ್ಞಾನವೇ ಪ್ರಾಣ ಸ್ವರೂಪವಾಗಿದೆ. ಪ್ರಾಣವು ಹೀಗೆ ಇಂದ್ರಿಯ ಗೋಚರ ಸ್ವರೂಪವಾಗಿ ಈ ಪ್ರಾಣ ಮಹಾತ್ಮ್ಯೆಯನ್ನು ತಿಳಿದುಕೊಂಡವನನ್ನು ಕಾಪಾಡುತ್ತದೆ.

**ಮಂ.ಶ್ಲೋ॥ ತಸ್ಯೈ ವಾಚಃ ಪೃಥಿವೀ ಶರೀರಂ ಜ್ಯೋತಿರೂಪಮಯಮಗ್ನಿಸ್ತ ದ್ಯಾವತ್ಯೇವ ವಾಕ್ತಾವತಿ ಪೃಥಿವೀ ತಾವಾನಯಮಗ್ನಿಃ (11)**

ತಾ : ಆ ವಾಕ್ಕಿಗೆ ಪೃಥಿವಿ ದೇಹ; ಜ್ಯೋತಿ ರೂಪವೇ ಇಂದ್ರಿಯ ಪೃಥಿವಿ ಅಗ್ನಿ ಈ ಎರಡರ ಸ್ವರೂಪದಿಂದ ವಾಕ್ಕು ಎಷ್ಟು ಪರಿಮಾಣವನ್ನು ಹೊಂದಬಲ್ಲದೋ, ಭೂಮಿ ಕೂಡಾ ಅಷ್ಟು ಪರಿಮಾಣವನ್ನು ಹೊಂದಿದಂತಹುದಾಗುತ್ತದೆ. ಈ ಅಗ್ನಿಯೂ ಸಹ ಅಷ್ಟು ಪರಿಮಾಣವನ್ನು ಹೊಂದಿದಂತಹುದಾಗುತ್ತದೆ.

**ಮಂ.ಶ್ಲೋ॥ ಅಥೈತಸ್ಯ ಮನಸೋ ದ್ಯೌಶ್ಶರೀರಂ ಜ್ಯೋತಿರೂಪಮಸಾವಾದಿತ್ಯಸ್ತದ್ಯಾವದೇವ ಮನಸ್ತಾವತೀ ದ್ಯೌಸ್ತಾವಾನಸಾವಾದಿತ್ಯಸ್ತೌ ಮಿಥುನಗ್ಂ ಸಮೈತಾಂ ತತಃ ಪ್ರಾಣೋಽಜಾಯತ ಸ ಇನ್ದ್ರಃ ಸ ಏಷೋಽಸಪತ್ನೋ ದ್ವಿತೀಯೋ ವೈ ಸಪತ್ನೋ ನಾಸ್ಯ ಸಪತ್ನೋ ಭವತಿ ಯಂ ಏವಂ ವೇದ (12)**

ತಾ : ಮನೋವಿಭೂತಿಯನ್ನು ಹೇಳಲಾಗುತ್ತಿದೆ. ಅನ್ನವೆಂದು ಹೇಳಲಾದ ಮನಸ್ಸಿಗೆ ಶರೀರವು ದ್ಯುಲೋಕ. ಅಥೇಯವೆನ್ನುವ ಕರಣವು ಸೂರ್ಯ, ದ್ಯುಲೋಕಾದಿತ್ಯ ಸ್ವರೂಪದಲ್ಲಿ, ಅಧ್ಯಾತ್ಮವಾಗಿಯೂ, ಅಧಿಭೂತವಾಗಿ ಇರುವಂತಹ ಮನಸ್ಸು ಎಷ್ಟು ಪರಿಮಾಣವುಳ್ಳದ್ದೋ, ಮನಸ್ಸಿಗೆ ಆಧಾರವಾಗಿ ಇರುವಂತಹ ದ್ಯುಲೋಕವು ಸಹ ಅಷ್ಟೇ ಪರಿಮಾಣವನ್ನು ಹೊಂದಿದಂತಹುದಾಗಿದೆ. ಸೂರ್ಯನು ಕೂಡಾ ಅಷ್ಟೇ ಪರಿಮಾಣವನ್ನು ಹೊಂದಿದವನಾಗುತ್ತಾನೆ. ಹೀಗೆ ವಾಙ್ಮನಸ್ಸುಗಳಾದ ಅಧಿದೈವಿಕಗಳಾದ ತಂದೆತಾಯಿಗಳಿಬ್ಬರಲ್ಲಿ ತಂದೆಯಾದ ಸೂರ್ಯನು, ತಾಯಿಯಾದ ಅಗ್ನಿಗಳೆರಡೂ, ಸಂಗಮವನ್ನು ಹೊಂದುವುವು. ಈ ಪ್ರಕಾರ ತಂದೆ ತಾಯಿಗಳಾದ ಅಗ್ನ್ಯಾದಿತ್ಯರ ಸಂಗಮದಿಂದ ಚಲನಾತ್ಮಕವಾದ ಕರ್ಮಕ್ಕಾಗಿ ವಾಯುವು ಹುಟ್ಟಿತು. ಹೀಗೆ ಹುಟ್ಟಿದ ವಾಯುವೇ ಪರಮೇಶ್ವರ. ಆ ಪರಮೇಶ್ವರನು ತನಗೆ ಸಮಾನನಾದವನು, ಇಲ್ಲವಾದುದರಿಂದ ಶತ್ರುವಿಲ್ಲದವನಾದ. ಲೋಕದಲ್ಲಿ ಶತ್ರುವೆಂದು ಯಾರನ್ನು ಕೇಳಿದರೂ, ತನಗೆ ಪ್ರತಿಪಕ್ಷವಾಗಿ ಹೊಂದಿದವನೇ ಶತ್ರು. ಅಂತಹ ಶತ್ರುವಿಲ್ಲದ ವಾಯುವನ್ನು ತಿಳಿದುಕೊಂಡವನಿಗೆ ಶತ್ರುಗಳಿರುವುದಿಲ್ಲ. (ಉಪಾಸನೆಯ ಸಲುವಾಗಿ ಈ ರೀತಿಯಾಗಿ ಹೇಳಿರುವರು.)

**ಮಂ.ಶ್ಲೋ॥ ಅಥೈತಸ್ಯ ಪ್ರಾಣಸ್ಯಾಪಶ್ಶರೀರಂ ಜ್ಯೋತಿರೂಪಮಸೌ ಚನ್ದ್ರಸ್ತದ್ಯಾವಾನೇವ ಪ್ರಾಣಸ್ತಾವತ್ಯ ಆಪಸ್ತಾವಾನಸೌ ಚನ್ದ್ರಸ್ತ ಏತೇ ಸರ್ವ ಏವಸಮಾಸ್ಸರ್ವೇಽನನ್ತಾಃ ಸ ಯೋ ಹೈತಾನನ್ತವತ ಉಪಾಸ್ತೇಽನ್ತವನ್ತಗ್ಂ ಸ ಲೋಕಂ ಜಯತ್ಯಥ ಯೋ ಹೈತಾನನನ್ತಾನುಪಾಸ್ತೇಽನನ್ತಗ್ಂ ಸಲೋಕಂ ಜಯತಿ (13)**

ತಾ : ಈ ಪ್ರಾಣಕ್ಕೆ ಉದಕಗಳು ದೇಹ. ಪ್ರಕಾಶರೂಪವಾದ ಕರಣವು ಚಂದ್ರ; ಜಲಚಂದ್ರ ಸ್ವರೂಪವಾದುದರಲ್ಲಿ ಪ್ರಾಣವು ಎಷ್ಟು ಪರಿಮಿತಿಯುಳ್ಳದ್ದೋ, ಉದಕಗಳು ಸಹ ಅಷ್ಟೇ ಪರಿಮಿತಿಯುಳ್ಳದಂತಹುಗಳು. ಚಂದ್ರನು ಕೂಡಾ ಅಷ್ಟೇ ಪರಿಣಾಮ ಉಳ್ಳಂತಹವನು. ಈ ವಾಙ್ಮನಃ ಪ್ರಾಣಗಳು ಎಲ್ಲವೂ ಸಮಾನವಾದಂತಹುಗಳಾಗಿವೆ. ಅವೆಲ್ಲವೂ ಕೊನೆಯಿಲ್ಲದ್ದಾಗಿವೆ. ಇವುಗಳನ್ನು ಯಾರು ಪರಿಮಿತಿಯುಳ್ಳಂತಹುದೆಂದು ಉಪಾಸನೆ ಮಾಡುವರೋ, ಅವರು ಕೊನೆಯುಳ್ಳ ಲೋಕವನ್ನು ಹೊಂದುತ್ತಿದ್ದಾರೆ. (ಭಿನ್ನನಾಗಿ ಹುಟ್ಟುತ್ತಾನೆ.) ಮತ್ತು ಯಾರು ಇವನ್ನು ಪರಿಮಿತಿಯಿಲ್ಲದ್ದು ಎಂದು ತಿಳಿದು ಉಪಾಸನೆ ಮಾಡುವರೋ ಅವರು ಪರಿಮಿತಿಯಿಲ್ಲದ ಲೋಕವನ್ನು ಜಯಿಸುವನು. (ಆತ್ಮ ಸ್ವರೂಪನೇ ಆಗುತ್ತಿದ್ದಾನೆ.)

**ಮಂ.ಶ್ಲೋ॥ ಸ ಏಷ ಸಂವತ್ಸರಃ ಪ್ರಜಾಪತಿಃ ಷೋಡಶಕಲಸ್ತಸ್ಯರಾತ್ರಯ ಏವ ಪಞ್ಚದಶಕಲಾ ಧ್ರುವೈವಾಸ್ಯ ಷೋಡಶೀ ಕಲಾ ನ ರಾತ್ರಿಭಿರೇವಾ ಚ ಪೂರ್ಯತೇಽಪ ಚ ಕ್ಷೀಯತೇ ಸೋಽಮಾವಾಸ್ಯಾಗ್ಂ**

**ರಾತ್ರಿಮೇತಯಾ ಷೋಡಶ್ಯಾಕಲಯಾ ಸರ್ವಮಿದಂ ಪ್ರಾಣಭೃದನುಪ್ರವಿಶ್ಯ ತತಃ ಪ್ರಾತರ್ಜಾಯತೇ ತಸ್ಮಾದೇತಾಗ್ಂ ರಾತ್ರಿಂ ಪ್ರಾಣಭೃತಃ ಪ್ರಾಣಂ ನ ವಿಚ್ಛಿನ್ದ್ಯಾದಪಿ ಕೃಕಲಾಸ-ಸ್ಯೈತಸ್ಯಾ ಏವ ದೇವತಾಯಾ ಅಪಚಿತ್ಯೈ ॥ (14)**

ತಾ : ಷೋಡಶ ಕಳೆಗಳೇ ಅವಯವಗಳಾಗಿದ್ದು (ಷೋಡಶ ಕಳೆಗಳನ್ನೇ ಅವಯವಗಳನ್ನಾಗಿ ಹೊಂದಿ), ತ್ರಿವಿಧ ರೂಪಗಳಾದ ವಾಙ್ಮನಃ ಪ್ರಾಣಗಳನ್ನು ಅನ್ನಗಳನ್ನೇ ಸ್ವರೂಪವನ್ನಾಗಿ ಹೊಂದಿದ ಆ ಪ್ರಜಾಪತಿಯು, ಸಂವತ್ಸರ ಸ್ವರೂಪ (ಕಾಲ ಸ್ವರೂಪ)ನಾಗಿದ್ದಾನೆ. ಆ ಪ್ರಜಾಪತಿಗೆ ಹದಿನ್ಯೆದು ತಿಥಿಗಳು ಹದಿನ್ಯೆದು ಕಳೆಗಳು. ಅಮಾವಾಸ್ಯೆಯ ದಿನ ಉಳಿದಿರುವ ಕಳೆಯೊಂದೇ ಶಾಶ್ವತವಾದುದು. ಶಾಶ್ವತವಾಗಿ ಶೇಷವಾಗಿರುವ (ಉಳಿದಿರುವ) ಹದಿನಾರನೆಯ ಕಳೆಯಿಂದ ಆ ಪ್ರಜಾಪತಿ ಜಲವನ್ನು ಪಾನಮಾಡುತ್ತಾ, ಓಷಧಿಗಳನ್ನು ರಕ್ಷಿಸುತ್ತಾ, ಸಮಸ್ತವನ್ನೂ ವ್ಯಾಪಿಸಿ, ಅಮಾವಾಸ್ಯೆ ತಿಥಿಯಲ್ಲಿದ್ದು, ಆ ಮರುದಿನ ಪ್ರಾತಃಕಾಲದಲ್ಲಿ ಎರಡನೆಯ ಕಳೆಯೊಂದಿಗೆ ಕೂಡಿಕೊಂಡು ಹುಟ್ಟುವನು. ಈ ರೀತಿಯಾಗಿ ಪ್ರಜಾಪತಿಯು ಶುಕ್ಲ ಪಕ್ಷದಲ್ಲಿ ಪ್ರತಿ ನಿತ್ಯವೂ ಒಂದೊಂದು ಕಳೆಯನ್ನು ಹೊಂದಿ ವೃದ್ಧಿಯಾಗುತ್ತಾ ಬಂದು, ಪೌರ್ಣಮಾಸಿಯಂದು ಷೋಡಶಕಳಾಪರಿಪೂರ್ಣನಾಗುವನು. ಮತ್ತೆ ಕೃಷ್ಣ ಪಕ್ಷದಲ್ಲಿ ಪ್ರತಿನಿತ್ಯವೂ ಒಂದೊಂದು ಕಳೆಯು ಕ್ಷೀಣಿಸಿದವನಾಗಿ, ಅಮಾವಾಸ್ಯೆಯಂದು ತಿಥಿಯಲ್ಲಿ ಶಾಶ್ವತವಾದ ಏಕಕಳೆಯಲ್ಲಿ ಉಳಿಯುತ್ತಾನೆ. ಚಂದ್ರ ಮನಸ್ಸಂಬಂಧಗಳಾದ ತಿಥಿಗಳೆನ್ನುವ ಕಳೆಗಳೇ ವಿತ್ತವಾಗಿ (ಸಂಪತ್ತಾಗಿ) ಕಾಲಾವಯವಗಳಾದ ಆ ಕಳೆಗಳ ಜಗತ್ಪರಿಣಾಮ ಹೇತುತ್ವವೇ ಕರ್ಮವಾಗಿ ಪರಿಣಮಿಸುತ್ತದೆ. ಈ ವಿಧವಾಗಿ ಈ ಪ್ರಜಾಪತಿಯು ನನಗೆ ಪತ್ನಿ ದೊರಕುವಂತಾಗಲಿ! ಸಂತಾನವು ಉಂಟಾಗಲಿ ಧನವು ಲಭಿಸುವಂತಾಗಲಿ! ಕರ್ಮ ಮಾಡುವಂತಾಗಲಿ! ಎನ್ನುವಂತಹ ವಾಂಛೆಗಳಿಗೆ ಅನುರೂಪವಾದ ಪಾಙ್ಕ್ತ ಕರ್ಮಫಲಸ್ವರೂಪನಾಗಿರುವನು. ಏಕೆಂದರೆ ಚಂದ್ರನು ಈ ಅಮಾವಾಸ್ಯೆಯ ತಿಥಿಯಂದು ಶಾಶ್ವತವಾದ ಕಳೆಯೊಂದಿಗೆ ಪ್ರಾಣಿಸಮೂಹವನ್ನು ಅನುಸರಿಸಿ ಪ್ರವೇಶಿಸುತ್ತಿದ್ದಾನೋ, ಅದರಿಂದಲೇ ಈ ಅಮಾವಾಸ್ಯೆ ತಿಥಿಯಲ್ಲಿ ಜೀವಿಗಳು ಪಾಪಾತ್ಮನ ಪ್ರಾಣವನ್ನು ಸಹ ಹಿಂಸಿಸಬಾರದು, ಎಂದು ಹೇಳುತ್ತಿರುವುದು. ಈ ಅಮಾವಾಸ್ಯೆಯ ದಿನ ಸಂಪೂರ್ಣವಾಗಿ ಜೀವಹಿಂಸೆ ಕೂಡದೆಂದು ನಿಷೇಧಿಸಿರುವುದು, ಪ್ರಜಾಪತಿ ಸ್ವರೂಪನಾದ ಈ ಚಂದ್ರ ದೇವತೆಯ ಅರ್ಚನೆಗಾಗಿ ಎಂದು ತಿಳಿಯಬೇಕು.

(ಅಮಾವಾಸ್ಯೆಯ ದಿನ ಓತಿಕ್ಯಾತವನ್ನು ಸಹ ಸಾಯಿಸ ಬಾರದೆಂದು ನಿಷೇಧಿಸಿದ್ದಾರೆ.)

**ಮಂ.ಶ್ಲೋ॥ ಯೋ ವೈ ಸ ಸಂವತ್ಸರಃ ಪ್ರಜಾಪತಿಃ ಷೋಡಶಕಲೋऽ ಯಮೇವ ಸ ಯೋऽ ಯಮೇವಂ ವಿತ್ಪುರುಷ ಸ್ತಸ್ಯ ವಿತ್ತಮೇವ ಪಞ್ಚದಶಕಲಾ ಆತ್ಮೈ ವಾಸ್ಯ ಷೋಡಶೀ ಕಲಾ ಸವಿತ್ತೇನೈ ವಾಚ ಪೂರ್ಯತೇऽ ಪ ಚಕ್ಷೀಯತೇ ತದೇತನ್ನಭ್ಯಂ ಯದಯಮಾತ್ಮಾ ಪ್ರಧಿರ್ವಿತ್ತಂ ತಸ್ಮಾದ್ಯದ್ಯಪಿ ಸರ್ವ ಜ್ಯಾನಿಂ ಜೀಯತ ಆತ್ಮನಾ ಚೇ ಜ್ಜೀವತಿ ಪ್ರಧಿನಾಗಾದಿ ತ್ಯೇವಾಹುಃ (15)**

ತಾ : ಹದಿನಾರು ಕಳೆಗಳುಳ್ಳವನು, ಸಂವತ್ಸರ ಸ್ವರೂಪನಾದ ಪ್ರಜಾಪತಿ ಈತನೇ. ಈ ರೀತಿಯಾಗಿ ತಿಳಿದುಕೊಂಡ ಪುರುಷನೇ ಪ್ರಜಾಪತಿಯಾಗುತ್ತಿದ್ದಾನೆ. ಆ ಪ್ರಜಾಪತಿಗೆ, ಧನವೇ

(ಗೋವು ಮುಂತಾದ ಧನವೇ) ಹದಿನೈದು ಕಳೆಗಳು; ಆತ್ಮಸ್ವರೂಪವೇ ಹದಿನಾರನೆಯ ಕಳೆ; ಆ ಪ್ರಜಾಪತಿಯು ಧನದಿಂದಲೇ ಪರಿಪೂರ್ಣನಾಗುತ್ತಿದ್ದಾನೆ. ಮತ್ತು ಕ್ಷೀಣಿಸುತ್ತಿದ್ದಾನೆ. ಅದು ನಾಭಿಸ್ಥಾನಾರ್ಹವಾದುದು. ಅದೇ ಆತ್ಮ ಸ್ವರೂಪ. ಈ ಪುರುಷನು (ಪಿಂಡವು) ಪ್ರಜಾಪತಿ. ಗೋವುಗಳು ಮುಂತಾದ ಸಂಪತ್ತಿನಿಂದಲೇ ಹದಿನೈದು ತಿಥಿಗಳೆನ್ನುವ ಕಳೆಗಳಿಂದ ಚಂದ್ರನಂತೆಯೆ ವೃದ್ಧಿ ಕ್ಷಯಾದಿಗಳನ್ನು ಹೊಂದುತ್ತಿದ್ದಾನೆ. ಆತ್ಮ ಸ್ವರೂಪವೇ ಶಾಶ್ವತವಾದ ಕಳೆಯಾಗಿ ಹೇಳಲ್ಪಟ್ಟಿದೆ. ಅದನ್ನೇ ರಥದ ಚಕ್ರ ದೃಷ್ಟಾಂತದಿಂದ ಸ್ಪಷ್ಟವಾಗಿ ತಿಳಿಸಿ ಹೇಳುತ್ತಿದ್ದಾನೆ. ಹೇಗೆಂದರೆ ಈ ಆತ್ಮದ ಸ್ವರೂಪ ಯಾವುದೋ ಅದು (ದೇಹ) ಬಂಡಿ ಚಕ್ರಕ್ಕೆ ಅರೆಗಳು, ಪಟ್ಟೆ ಮುಂತಾದವುಗಳಿಂದಲೇ ಹೊರಗಡೆ ಇರುವ ಪರಿವಾರವಾಗಿರುವ ಧನದಂತಹದ್ದು. ಆದ್ದರಿಂದ ಪುರುಷನು ಬಾಹ್ಯದಲ್ಲಿನ ದೇಹವೆನ್ನುವ ಸಂಪತ್ತಿನಲ್ಲಿ ಆಯಾಸಗೊಂಡರೂ, ಚಕ್ರದಂತಹ ಆತ್ಮ ಸ್ವರೂಪದೊಂದಿಗೆ ಜೀವಿಸಿರುವಂತಾದರೆ ಬಾಹ್ಯವಾದ ದೇಹವೆನ್ನುವ ಧನವು ನಶಿಸುವುದು. ಬಂಡಿಯ ಚಕ್ರವು ಹೊರಗಿರುವಂತಹ ಅರೆಗಳು ಕಡಾಣಿ ಮುಂತಾದವುಗಳೊಂದಿಗೆ ಕೂಡಿಕೊಂಡು ಮುಂದುವರಿದಂತೆ, ಈ ಪುರುಷನೂ ವೃದ್ಧಿಹೊಂದುವನು.

ಮಂ.ಶ್ಲೋ॥ **ಅಥ ತ್ರಯೋ ವಾವ ಲೋಕಾ ಮನುಷ್ಯಲೋಕಃ ಪಿತೃಲೋಕೋ ದೇವಲೋಕ ಇತಿ ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯೋ ನಾನ್ಯೇನ ಕರ್ಮಣಾ ಕರ್ಮಣಾ ಪಿತೃಲೋಕೋ ವಿದ್ಯಯಾ ದೇವಲೋಕೋ ದೇವ ಲೋಕೋ ವೈ ಲೋಕಾನಾಗ್ಂ ಶ್ರೇಷ್ಠಸ್ತಸ್ಮಾದ್ವಿದ್ಯಾಂ ಪ್ರಶಗ್ಂಸನ್ತಿ (16)**

ತಾ : ಮನುಷ್ಯ ಲೋಕ, ಪಿತೃಲೋಕ, ದೇವಲೋಕಗಳೆನ್ನುವ ಲೋಕಗಳು ಮೂರೇ ಇವೆ. ಅವುಗಳಲ್ಲಿ ಈ ಪ್ರಸಿದ್ಧವಾದ ಮನುಷ್ಯ ಲೋಕವನ್ನು ಪುತ್ರನೆಂಬ ಸಾಧನದಿಂದ ಜಯಿಸುವಂತಹುದು. ಬೇರೆಲ್ಲ ಕರ್ಮಗಳಿಂದ ಜಯಿಸಲು ಸಾಧ್ಯವಾಗುವುದಿಲ್ಲ. ಅಗ್ನಿ ಹೋತ್ರಾದಿಕ-ವೆನ್ನುವುದನ್ನು ಕೇವಲ ಕರ್ಮದಿಂದಲೇ, ಪಿತೃಲೋಕವನ್ನು ಜಯಿಸುವಂತಹುದು. ಬೇರೆ ಯಾವುದ-ರಿಂದಲೂ ಜಯಿಸಲಾಗುವುದಿಲ್ಲ. ದೇವಲೋಕವು ಆ ಪರವಿದ್ಯೆಯಿಂದಲೇ ಸಾಧಿಸುವಂತಹುದು. ಇತರ ಸಾಧನಗಳು ಪುತ್ರಕರ್ಮದಿಂದಲೂ ಅನ್ಯ ಕರ್ಮಗಳಿಂದಲೂ ಜಯಿಸಲಾಗದು. ಈ ಸಮಸ್ತ ಲೋಕಗಳಲ್ಲಿ ದೇವಲೋಕವೇ ಅತ್ಯಂತ ಉತ್ತಮವಾದುದು. ಅಂತಹ ದೇವಲೋಕಸಾಧನ-ವಾದುದರಿಂದ ಆತ್ಮವಿದ್ಯೆಯನ್ನು ಜ್ಞಾನಿಗಳು ಕೀರ್ತಿಸುತ್ತಿದ್ದಾರೆ.

ಮಂ.ಶ್ಲೋ॥ **ಅಥಾತಃ ಸಮ್ಪ್ರತ್ತಿರ್ಯದಾ ಪ್ರೈಷ್ಯನ್ಮನ್ಯತೇಽಥ ಪುತ್ರಮಾಹ ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕ ಇತಿ ಸ ಪುತ್ರಃ ಪ್ರತ್ಯಾಹಾಹಂ ಬ್ರಹ್ಮಾಹಂ ಯಜ್ಞೋಽಹಂ ಲೋಕ ಇತಿ ಯದ್ವೈ ಕಿಂಚಾ ಸೂಕ್ತಂ ತಸ್ಯಸರ್ವಸ್ಯ ಬ್ರಹ್ಮೇತ್ಯೇಕತಾ । ಯೇ ವೈ ಕೇಚ ಯಜ್ಞಾಸ್ತೇಷಾಗ್ಂ ಸರ್ವೇಷಾಂ ಯಜ್ಞ ಇತ್ಯೇಕತಾ ಯೇ ವೈ ಕೇಚ ಲೋಕಾಸ್ತೇಷಾಗ್ಂ ಸರ್ವೇಷಾಂ ಲೋಕ ಇತ್ಯೇಕತ್ವೈತಾವದ್ವಾ ಇದಗ್ಂ ಸರ್ವಮೇತನ್ಮಾ ಸರ್ವಗ್ಂ ಸನ್ನಯಮಿತೋಽಭುನಜದಿತಿ ತಸ್ಮಾತ್ ಪುತ್ರಮನುಶಿಷ್ಟಂ ಲೋಕ್ಯಮಾಹುಸ್ತಸ್ಮಾದೇನಮನುಶಾಸತಿ ಸ ಯದ್ವೈವಂ ವಿದಸ್ಮಾಲ್ಲೋಕಾತ್ ಪ್ರೈತ್ಯಥೈಭಿರೇವ ಪ್ರಾಣೈಸ್ಸಹ ಪುತ್ರಮಾವಿಶತಿ । ಸ ಯದ್ಯಸೇನ**

**ಕಿಂಚಿದಕ್ಷಯಾಽಕೃತಂ ಭವತಿ ತಸ್ಮಾದೇನಗ್ಂ ಸರ್ವಸ್ಮಾತ್ಪುತ್ರೋ ಮುಞ್ಚತಿ ತಸ್ಮಾತ್ಪುತ್ರೋನಾಮ ಸ ಪುತ್ರೇಣೈವಾಽಸ್ಮಿಲ್ಲೋಕೇ ಪ್ರತಿತಿಷ್ಠತ್ಯಥೈನಮೇತೇ ದೈವಾಃ ಪ್ರಾಣಾ ಅಮೃತಾ ಆವಿಶನ್ತಿ (17)**

ತಾ : ಆ ಕಾರಣದಿಂದ ಸಂಪ್ರದಾನವೆನ್ನುವ ಕರ್ಮವನ್ನು ಮಾಡತಕ್ಕದ್ದು. ಮರಣವನ್ನು ಹೊಂದುತ್ತಿದ್ದೇನೆಂದು ಭಾವನೆ ಉಂಟಾದಾಗ, ಕುಮಾರನನ್ನು ಕರೆದು, ಈ ವಿಧವಾಗಿ ತಿಳಿಸಲಾಯಿತು. ನೀನು ಬ್ರಹ್ಮ, ನೀನು ಯಜ್ಞ ಸ್ವರೂಪ, ನೀನು ಲೋಕಸ್ವರೂಪನು ಎಂದು ಹೇಳಲಾಯಿತು. ಆ ಕುಮಾರನು ಸಹ ನಾನು ಬ್ರಹ್ಮನು. ನಾನು ಯಜ್ಞ ಸ್ವರೂಪನು, ನಾನು ಲೋಕಸ್ವರೂಪನೆಂದು ಒಪ್ಪಿಕೊಂಡ. ಯಾವುದನ್ನು ಹೇಳಲಿಲ್ಲವೋ ಆ ಸಮಸ್ತಕ್ಕೂ ಬ್ರಹ್ಮವೆನ್ನುವ ಈ ಪದದಲ್ಲಿ ಏಕತ್ವವು ಇದೆ. ಯಾವ ಯಾವ ಯಜ್ಞಗಳು ಮಾಡುವಂತಹವುಗಳು, ಮಾಡಬಾರದಂತಹವುಗಳೆಂದು ಇವೆಯೋ, ಅದೆಲ್ಲಕ್ಕೂ ಯಜ್ಞವೆನ್ನುವ ಈ ಪದದಲ್ಲಿ ಏಕತ್ವವಿದೆ. ಯಾವ ಯಾವ ಲೋಕಗಳು ಜಯಿಸುವಂತಹುವುಗಳು, ಜಯಿಸಲಾರದಂತಹುವುಗಳು ಇವೆಯೋ, ಅವೆಲ್ಲದಕ್ಕೂ ಲೋಕವೆನ್ನುವ ಈ ಪದದಲ್ಲಿ ಏಕತ್ವವಿದೆ. ಅಷ್ಟೇ ಪರಿಮಾಣವನ್ನು ಹೊಂದಿದ್ದಾಗಿದೆ. ಇದಕ್ಕೆ ಪೂರ್ವದಲ್ಲಿ ಅಧ್ಯಯನ ಮಾಡುವಂತಹ ವೇದಗಳಿಗಾಗಿ, ಮಾಡತಕ್ಕ ಯಜ್ಞಗಳಿಗಾಗಿ ಜಯಿಸುವಂತಹ ಮನುಷ್ಯಾದಿ ಲೋಕಗಳಿಗೋಸ್ಕರ, ನಾನು ಮಾಡತಕ್ಕ ಯಜ್ಞದಿಂದ ನಾನು ಮುಕ್ತನಾದೆ. ಇನ್ನು ಮೇಲೆ ಈ ನನ್ನ ಭಾರವನ್ನು ಆ ಪುತ್ರನೇ ತನ್ನಲ್ಲಿಟ್ಟುಕೊಂಡು, ನನ್ನನ್ನು ಈ ಲೋಕದಲ್ಲಿಟ್ಟುಕೊಂಡು ಪರಿಪಾಲಿಸುವನೆಂದು ತಂದೆಯು ನುಡಿದ. ಈ ಅಭಿಪ್ರಾಯವನ್ನು ಜ್ಞಾಪಿಸಿಕೊಂಡು ಶೃತಿಯು ಹೀಗೆ ಹೇಳಿದೆ. ಆ ಕಾರಣದಿಂದ ಬ್ರಹ್ಮವೇತ್ತರು ಅನುಸರಿಸಿ, ಶಿಕ್ಷಿಸಲಾದ ಪುತ್ರನನ್ನು ಶ್ಲಾಘಿಸತಕ್ಕವನೆಂದು ಹೇಳಿದರು. ಆದ್ದರಿಂದ ಈ ಕುಮಾರನನ್ನು ಕುರಿತು (ತಂದೆಯು) ಆಜ್ಞಾಪಿಸುವಂತವರಾಗುತ್ತಾರೆ. ಹೀಗೆ ತಿಳಿದುಕೊಂಡ ಆ ತಂದೆಯು ಯಾವಾಗ ಈ ಲೋಕದಿಂದ ಮರಣವನ್ನು ಹೊಂದುವನೋ ಆಗ ಈ ವಾಙ್ಮನಃ ಪ್ರಾಣಗಳಿಂದ ಪುತ್ರನನ್ನು ಹೊಂದುತ್ತಾನೆ. ಈ ರೀತಿಯಾಗಿ ತಂದೆಯು ಪುತ್ರನಿಂದ ಈ ಮನುಷ್ಯ ಲೋಕವನ್ನು ಜಯಿಸುತ್ತಾನೆ. ವಿದ್ಯಾ ಕರ್ಮಗಳಿಂದ ದೇವಲೋಕ ಪಿತೃಲೋಕಗಳು ಜಯಿಸುವಂತವುಗಳಲ್ಲ. ವಿದ್ಯಾಕರ್ಮಗಳ ಸ್ವರೂಪ ಲೋಕಕ್ಕೆ ಬೇರೆಯಾಗಿ, ಪುತ್ರನಂತೆಯೇ, ಲೋಕ ಜಯ ಕಾರಣತ್ವವನ್ನು ಹೊಂದುವುದಿಲ್ಲ. ಸಂಪ್ರತ್ತಿ ಎನ್ನುವ ಕರ್ಮ ಮಾಡಿದ ಈ ತಂದೆಯನ್ನು ಹಿರಣ್ಯಗರ್ಭನ ಸಂಬಂಧವಾದ ಮರಣ ಧರ್ಮವಿಲ್ಲವಾದ ವಾಗಾದಿಪ್ರಾಣಗಳು ಹೊಂದುತ್ತಿವೆ. ಮೇಲಿನ ಮಂತ್ರವು ಇನ್ನೂ ಹೇಳುವುದು.

**ಮಂ.ಶ್ಲೋ॥ ಪೃಥಿವ್ಯೈ ಚೈನಮಗ್ನೇಶ್ಚ ದೈವೀವಾಗಾವಿಶತಿ**
**ಸಾ ವೈ ದೈವೀ ವಾಗ್ಯಯಾ ಯದ್ಯದೇವ ವದತಿ ತತ್ತದ್ಭವತಿ (18)**

ತಾ : ಅಧಿದೈವಾತ್ಮಕವಾದ ಆ ವಾಕ್ಕು, ಭೂಮಿಯಿಂದ, ಅಗ್ನಿಯಿಂದ ಸಂಪ್ರತ್ತಿಕರ್ಮವನ್ನು ಮಾಡಿದ ಪಂಡಿತನನ್ನು ಹೊಂದುತ್ತಿದೆ. ಆ ವಿದ್ವಾಂಸನು ಯಾವ ವಾಕ್ಕಿನಿಂದ (ತನಗಾಗಿಯಾಗಲೀ, ಇತರರಿಗೋಸ್ಕರವಾಗಲೀ ಯಾವುದನ್ನು ನುಡಿಯುವನೋ, ಆ ಕಾರ್ಯವು ಜರುಗುತ್ತದೆ. ಅದೇ ದೈವಸಂಬಂಧವಾದ ಅನೃತಾದಿ ದೋಷರಹಿತವಾದ ಪರಿಶುದ್ಧ ವಾಕ್ಕು.

ಮಂ.ಶ್ಲೋ॥ ದಿವಶ್ಚೈನಮಾದಿತ್ಯಾಚ್ಚ ದೈವಂ ಮನ ಆವಿಶತಿ
ತದ್ವೈದೈವಂ ಮನೋ ಯೇನಾನನ್ದ್ಯೇವ ಭವಿತ್ಯಥೋ ನ ಶೋಚತಿ (19)

ತಾ : ಈ ಸಂಪ್ರತ್ತಿ ಕರ್ಮವನ್ನು ಮಾಡಿದವನ ಅಧಿದೈವಿಕವಾದ ಪರಿಶುದ್ಧಮನಸ್ಸು, ತನಗೆ ಅಧಿಷ್ಠಾನವಾದ ಗಗನ ಸೂರ್ಯರಿಂದ ಬಲಗೊಳ್ಳುತ್ತಿದೆ. ವಿದ್ವಾಂಸನು ಯಾವ ಮನಸ್ಸಿನಿಂದ ದುಃಖರಹಿತನಾಗಿ ಆನಂದವನ್ನು ಹೊಂದುವನೋ ಅದೇ ಆ ದೈವಿಕವಾದ ನಿರ್ಮಲಮನಸ್ಸು.

ಮಂ.ಶ್ಲೋ॥ ಅದ್ಭ್ಯಶ್ಚೈನಂ ಚನ್ದ್ರಮಸಶ್ಚ ದೈವಃ ಪ್ರಾಣ ಆವಿಶತಿ ಸ ವೈ ದೈವಃ ಪ್ರಾಣೋ ಯಸ್ಸಞ್ಚರಗ್ಂಶ್ಚಾ ಸಞ್ಚರಗ್ಂಶ್ಚ ನ ವ್ಯಥತೇऽಥೋ ನ ರಿಷ್ಯತಿ ಸ ಏವಂ ವಿತ್ಸರ್ವೇಷಾಂ ಭೂತಾನಾಮಾತ್ಮಾ ಭವತಿ ಯಥೈಷಾ ದೇವತ್ಯೈವಗ್ಂ ಸಃ ಯಥೈತಾಂ ದೇವತಾಗ್ಂ ಸರ್ವಾಣಿಭೂತಾ-ನ್ಯವನ್ತ್ಯೇವಗ್ಂ ಹೈವಂ ವಿದಗ್ಂ ಸರ್ವಾಣಿ ಭೂತಾನ್ಯವನ್ತಿ । ಯದು ಕಿಂಚೇಮಾಃ ಪ್ರಜಾಃ ಶೋಚನ್ತ್ಯಮೈವಾಸಾಂ ತದ್ಭವತಿ ಪುಣ್ಯಮೇವಾಮುಂ ಗಚ್ಛತಿ ಸ ಹ ವೈ ದೇವಾನ್ಪಾಪಂ ಗಚ್ಛತಿ (20)

ತಾ : ಆ ರೀತಿಯಾಗಿ ದೇವ ಸಂಬಂಧವಾದ ಪ್ರಾಣವು ಈ ಸಂಪ್ರತ್ತಿ ಕರ್ಮ ಮಾಡಿದವನನ್ನು (ಉದಕಗಳಿಂದಲೂ ಚಂದ್ರನಿಂದಲೂ) ಸೇರುತ್ತದೆ. ಆ ಪ್ರಾಣವು ಜಂಗಮ ಭೂತಗಳಲ್ಲಿ ಚಲಿಸುತ್ತದೆ. ಸ್ಥಾವರಗಳಲ್ಲಿ ಓಡಾಡುವಂತಹುದಾಗಿ ದುಃಖ ಭಯಗಳನ್ನು ಹೊಂದದೆ, ನಾಶವಾಗದಂತಹು-ದಾಗಿರುತ್ತದೆ. ಇಂತಹ ಪ್ರಾಣವನ್ನು ತಿಳಿದುಕೊಂಡ ಪುರುಷನು, ಸಮಸ್ತ ಭೂತಗಳಲ್ಲಿನ ಆತ್ಮ ಸ್ವರೂಪನಾದ, ವಾಙ್ಮನಃ ಪ್ರಾಣ ಸ್ವರೂಪನಾದವನಾಗಿ, ಹಿರಣ್ಯ ಗರ್ಭಾತ್ಮಕವಾದ ದೇವತೆಯಂತೆಯೇ ಸರ್ವಜ್ಞನಾಗುವನು. ಸಮಸ್ತ ಭೂತಗಳು ಅಂತಹ ಪುರುಷನನ್ನು ಪೂಜಿಸುತ್ತವೆ. ಹೀಗೆ ಸರ್ವ-ಭೂತಾತ್ಮಕನಾಗಿ ಈಶ್ವರ ಸ್ವರೂಪನಾದ ಆ ಪುರುಷನಿಗೆ ದುಃಖಗಳು ಇಲ್ಲ. ದೇವತೆಗಳಿಗೆ ಪಾಪ ಫಲವಾದ ದುಃಖವು ಉಂಟಾಗುವುದಿಲ್ಲ. ಪರಿಚ್ಛಿನ್ನರಾದ ಈ ಪ್ರಜೆಗಳಿಗೇ ದುಃಖವುಂಟಾಗುತ್ತದೆಯೇ ಹೊರತು, ಸಂಪ್ರತ್ತಿ ಕರ್ಮ ಮಾಡಿ, ಪರಲೋಕಗತನಾದ ಆ ಪುರುಷನಿಗೆ ದುಃಖವುಂಟಾಗುವುದಿಲ್ಲ. ಎಲ್ಲೆಡೆಯೂ ಸುಖಗಳೇ ಲಭಿಸುವುವು.

ಮಂ.ಶ್ಲೋ॥ ಅಥಾತೋ ವ್ರತಮೀಮಾಗ್ಂಸಾ ಪ್ರಜಾಪತಿರ್ಹ ಕರ್ಮಾಣಿ ಸಸೃಜೇತಾನಿ ಸೃಷ್ಟಾನ್ಯನ್ಯೋ-ನ್ಯೇನಾ ಸ್ಪರ್ಧನ್ತ ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ ಈ(ದ್ರ)ಕ್ಷ್ಯಾಮ್ಯಹಮಿತಿ ಚಕ್ಷುಃ ಶ್ರೋಷ್ಯಾ-ಮ್ಯಹಮಿತಿ ಶ್ರೋತ್ರಮೇವಮನ್ಯಾನಿ ಕರ್ಮಾಣಿ ಯಥಾ ಕರ್ಮ ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇತಾನ್ಯಾಪ್ನೋತ್ತಾನ್ಯಾಪ್ತ್ವಾ ಮೃತ್ಯುರವಾರುನ್ಧತ್ತಸ್ಮಾಚ್ಛ್ರಾಮ್ಯತ್ಯೇವ ವಾಕ್ ಶ್ರಾಮ್ಯತಿ ಚಕ್ಷುಃ ಶ್ರಾಮ್ಯತಿ ಶ್ರೋತ್ರಮಥೇಮಮೇವನಾಪ್ನೋದ್ಯೋऽಯಂ ಮಧ್ಯಮಃ ಪ್ರಾಣಸ್ತಾನಿ ಜ್ಞಾತುಂ ದಧ್ರಿರೇ। ಆಯಂ ವೈ ನಃ ಶ್ರೇಷ್ಠೋ ಯಸ್ಸಞ್ಚರಗ್ಂ ಶ್ಚಾಸಞ್ಚರಗ್ಂಶ್ಚ ನವ್ಯಥತೇऽ(ಥೋ)ನ ರಿಷ್ಯತಿ ಹನ್ತಾಸ್ಯೈವ ಸರ್ವೇ ರೂಪಮಸಾಮೇತಿ ತ ಏತಸ್ಯೈವ ಸರ್ವೇ ರೂಪಮಭವಗ್ಂಸ್ತಸ್ಮಾದೇತ ಏತೇನಾಖ್ಯಾಯನ್ತೇ ಪ್ರಾಣಾ ಇತಿ

**ತೇನ ಹ ವಾವ ತತ್ಕುಲಮಾಚಕ್ಷತೇ ಯಸ್ಮಿನ್ಕುಲೇ ಭವತಿ ಯ ಏವಂ ವೇದ ಯ ಉ ಹೈವಂ ವಿದಾ ಸ್ಪರ್ಧತೇಽನುಶುಷ್ಯತ್ಯನುಶುಷ್ಯ ಹೈವಾನ್ತತೋ ಮ್ರಿಯತ ಇತ್ಯಧ್ಯಾತ್ಮಮ್ (21)**

ತಾ : ಈಗ ಉಪಾಸನಾ ವಿವರಗಳನ್ನು ಹೇಳಿದ ನಂತರ ವ್ರತಗಳನ್ನು ಕರ್ಮಗಳನ್ನು ಹೇಳುತ್ತಿದ್ದಾರೆ. ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ವಾಗಾದಿ ಇಂದ್ರಿಯಗಳನ್ನು ಸೃಜಿಸಿದ. ಹೀಗೆ ಸೃಜಿಸಲ್ಪಟ್ಟ ಆ ಇಂದ್ರಿಯಗಳು ಪರಸ್ಪರ ಕಲಹ ಮಾಡಿಕೊಂಡವು. ಅವುಗಳಲ್ಲಿ ವಾಗೀಂದ್ರಿಯವು ನನಗೆ ಸಮಾನವಾದ (ನನ್ನ ಕೆಲಸ ಮಾಡುವ) ಶಕ್ತಿ ಯಾರಿಗೂ ಇಲ್ಲವೆಂದು ಅಹಂಕಾರ ಪಡಲಾರಂಭಿಸಿತು. ಇತರ ಇಂದ್ರಿಯಗಳಾದ ಚಕ್ಷು, ಶ್ರೋತ್ರಾದಿಗಳೆಲ್ಲವೂ ಅದೇ ರೀತಿಯಾಗಿ ತಾವೇ ಶ್ರೇಷ್ಠವೆಂದು ಅಹಂಕಾರಪಡುತ್ತಾ ತಮ್ಮ ತಮ್ಮ ಕೆಲಸಗಳನ್ನು ಸಾಗಿಸಿದವು. ಆಗ ಮೃತ್ಯುವು ಶ್ರಮರೂಪನಾಗಿ ಆ ವಾಗೀಂದ್ರಿಯಗಳನ್ನು ಹೊಂದಿ, ಅವುಗಳ ಕಾರ್ಯವನ್ನು ನಿರೋಧಿಸಿದ. ಹೀಗೆ ನಿರೋಧಿಸುತ್ತಲೇ ಆ ಇಂದ್ರಿಯಗಳು ತಮ್ಮ ಕೆಲಸಗಳನ್ನು ಮಾಡಲು ಅಶಕ್ತವಾದವು. ನಂತರ ಮೃತ್ಯುವು ಶರೀರ ಮಧ್ಯದಲ್ಲಿದ್ದ ಮುಖ್ಯಪ್ರಾಣವನ್ನು ಮಾತ್ರ ಗ್ರಹಿಸಲಾರದೆ ಹೋಯಿತು. ಮೃತ್ಯುವಿನ ಕೈಗೆ ದೊರಕದೆ ಸಂಚರಿಸುತ್ತಿದ್ದ ಪ್ರಾಣವು ದುಃಖವನ್ನು ಹೊಂದದೆ, ನಶಿಸದೆ ಇತ್ತು. ಆ ಪ್ರಾಣವೇ ನಮ್ಮಲ್ಲಿ ಶ್ರೇಷ್ಠ-ವಾದದ್ದು. ಆಗ ಆ ಪ್ರಾಣ ಸ್ವರೂಪವನ್ನೇ ಹೊಂದಬೇಕೆಂದು ನಿಶ್ಚಯಿಸಿಕೊಂಡು, ಆ ವಾಗಾದೀಂದ್ರಿಯಗಳೆಲ್ಲವೂ ಪ್ರಾಣ ರೂಪವನ್ನೇ ಆತ್ಮ ರೂಪವಾಗಿ ಹೊಂದಿದವು. ಆದ್ದರಿಂದಲೇ ಇಂದ್ರಿಯಗಳೆಲ್ಲವೂ ಪ್ರಾಣಗಳೆಂದು ಹೇಳುವುದು. ಎಲ್ಲ ಇಂದ್ರಿಯಗಳಗೂ ಮುಖ್ಯ ಪ್ರಾಣಾತ್ಮನನ್ನು ತಿಳಿದುಕೊಂಡವನು ತನ್ನ ವಂಶಕ್ಕೆ ಯಶಸ್ಸನ್ನು ತರುವಂತಹವನಾಗುತ್ತಾನೆ. ಯಾರಾದರೂ ಹೀಗೆ ಅರಿತುಕೊಂಡ ವಿದ್ವಾಂಸನೊಂದಿಗೆ ದ್ವೇಷವನ್ನು ಬೆಳೆಸಿಕೊಂಡರೆ ಅಂತಹವನು ಶೀಘ್ರದಲ್ಲೇ ಕಷ್ಟಕ್ಕೀಡಾಗಿ ಉಪದ್ರವವನ್ನು ಹೊಂದಿ ಈ ದೇಹದಲ್ಲೇ ಮೂರ್ಛೆಯನ್ನು ಹೊಂದಿ, ಆಮೇಲೆ ಮರಣವನ್ನು ಹೊಂದುವನು. ಆದ್ದರಿಂದ ಯಾರೂ ಪ್ರಾಣಾತ್ಮನನ್ನು ದರ್ಶಿಸಿದಂತಹವನನ್ನು ದ್ವೇಷಿಸಬಾರದು. ಈ ರೀತಿಯಾಗಿ ಪ್ರಾಣಾತ್ಮದರ್ಶನವನ್ನು ತಿಳಿಸಿಕೊಟ್ಟಿದ್ದಾರೆ.

**ಮಂ.ಶ್ಲೋ॥ ಅಥಾಧಿದೈವತಂ ಜ್ವಲಿಷ್ಯಾಮ್ಯೇವಾಹಮಿತ್ಯಗ್ನಿರ್ದಧ್ರೇ ತಪ್ಸ್ಯಾಮ್ಯಹಮಿತ್ಯಾದಿತ್ಯೋ ಭಾಸ್ಯಾಮ್ಯಹಮಿತಿ ಚನ್ದ್ರಮಾ ಏವಮನ್ಯಾ ದೇವತಾ ಯಥಾ ದೈವತಗ್ಂ ಸ ಯಥೈಷಾಂ ಪ್ರಾಣಾನಾಂ ಮಧ್ಯಮಃ ಪ್ರಾಣ ಏವಮೇತಾಸಾಂ ದೇವತಾನಾಂ ವಾಯುಃ ಮ್ಲೋಚನ್ತಿ ಹ್ಯನ್ಯಾ ದೇವತಾ ನ ವಾಯುಃ ಸೈಷಾಽನಸ್ತಮಿತಾ ದೇವತಾ ಯದ್ವಾಯುಃ (22)**

ತಾ : ಆನಂತರ ಅಧಿದೇವತಾದರ್ಶನವನ್ನು ಹೇಳಲಾಗುತ್ತಿದೆ. ಅಗ್ನಿ ನಾನೇ ಜ್ವಲಿಸುತ್ತೇನೆಂದು ಹೇಳಿ ಮನಸ್ಸನ್ನು ಧರಿಸಿದ. ಸೂರ್ಯನು ಕೂಡಾ ತಾನೇ ತಪಿಸುವಂತೆ ಮಾಡುವೆನೆಂದು ಹೇಳಿದ. ಚಂದ್ರನು ತಾನೇ ಪ್ರಕಾಶಿಸುವವನೆಂದು ಮನಸ್ಸನ್ನು ಧರಿಸಿದ. ಈ ರೀತಿಯಾಗಿಯೇ ಬೇರೆ ದೇವತೆಗಳು ಅಹಂಕಾರದಿಂದ ಅವರವರ ಕೆಲಸಗಳನ್ನು ಬಿಡುವಿಲ್ಲದೆ ಒಂದೇ ಸಮನೆ ಮಾಡಲಾ-ರಂಭಿಸಿದರು. ಈ ವಾಕ್ಕು ಮುಂತಾದ ಇಂದ್ರಿಯಗಳೊಂದಿಗೆ, ಮಧ್ಯದಲ್ಲಿರುವಂತಹ ಮುಖ್ಯಪ್ರಾಣ-ದಿಂದಲೇ ವಾಯುದೇವತೆ ಮಾತ್ರ ತನ್ನ ವ್ಯಾಪಾರವನ್ನು ಸತತವಾಗಿ ಮಾಡುತ್ತಿರುವನು. ಅದರಿಂದ

ವಾಯುವು ಅಧಿದೈವತವು. ಇಂತಹ ಅಧ್ಯಾತ್ಮವು ಅಧಿದೈವತ ಈ ಎರಡನ್ನೂ ತರ್ಕಿಸಿ ವಾಯು ಸ್ವರೂಪದ ವ್ರತವೇ ಭಂಗವಾಗದಿರುವಂತಹುದೆಂದು ನಿರ್ಣಯಿಸಲಾಗಿದೆ. (ವಾಯು ದೇವತೆಯನ್ನು ಅಸ್ತಮಿಸದ ದೇವತೆಯೆಂದು ವರ್ಣಿಸಿದ್ದಾರೆ.)

**ಮಂ.ಶ್ಲೋ॥ ಅಥೈಷ ಶ್ಲೋಕೋ ಭವತಿ ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತೀತಿ ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತಮೇತಿ ತಂ ದೇವಾಶ್ಚಕ್ರಿರೇ ಧರ್ಮಗ್ಂ ಸ ಏವಾದ್ಯ ಸ ಉಶ್ವ ಇತಿ ಯದ್ವಾ ಏತೇಽಮುರ್ಹ್ಯಧ್ರಿಯನ್ತ ತ ದೇವಾಪ್ಯದ್ಯ ಕುರ್ವನ್ತಿ । ತಸ್ಮಾದೇಕಮೇವ ವ್ರತಂ ಚರೇತ್ಪ್ರಾಣ್ಯಾಚ್ಚೈವಾಪಾನ್ಯಾಚ್ಚನೇನ್ಮಾ ಪಾಪ್ಮಾ ಮೃತ್ಯುರಾಪ್ನುವದಿತಿ ಯದ್ಯು ಚರೇತ್ಸಮಾಪಿಪಯಿಷೇತ್ತೇನೋ. ಏತಸ್ಯೈ ದೇವತಾಯ್ಯೈ ಸಾಯುಜ್ಯಗ್ಂ ಸಲೋಕತಾಂ ಜಯತಿ (23)**

ತಾ : ಆನಂತರ ಈ ಮಂತ್ರವು ಬಂದಿತು. ಈ ಸೂರ್ಯನು ಅಧಿದೇವತ ಸ್ವರೂಪದಲ್ಲಿ ವಾಯುವಿನಿಂದ ಉದಯಿಸುತ್ತಾ, ವಾಯುವಿನಲ್ಲೇ ಅಸ್ತಮಿಸುತ್ತಿದ್ದಾನೆ. ಅಧ್ಯಾತ್ಮ ಸ್ವರೂಪನಾಗಿ, ನೇತ್ರ ರೂಪದಲ್ಲಿ ಪ್ರಾಣದಿಂದ ಉದಯಿಸುತ್ತಾ, ಪ್ರಾಣದಲ್ಲೇ ಅಸ್ತಮಯವನ್ನು ಹೊಂದುತ್ತಿದ್ದಾನೆ. ಆದ್ದರಿಂದ ಅಧ್ಯಾತ್ಮ ಸ್ವರೂಪಗಳಾದ ವಾಗಾದೀಂದ್ರಿಯಗಳು ಪ್ರಾಣ ವ್ರತವನ್ನು ಅಧಿ ದೈವತ ಸ್ವರೂಪಗಳಾದ ಅಗ್ನ್ಯಾದಿ ದೇವತೆಗಳು ವಾಯು ದೇವತಾ ವ್ರತವನ್ನು ಆಚರಿಸುತ್ತಿದ್ದಾರೆ. ಆ ವ್ರತವೇ ಈಗ ಅನುಸರಿಸುತ್ತಿರುವಂತಹುದು. ಅದನ್ನು ಅನುಸರಿಸುವಂತಹುದಾಗಿದೆಯೆಂದು ದೇವತೆಗಳು ವ್ರತವನ್ನು ಧರಿಸಿದರು. ಆದ್ದರಿಂದ ಇತರರು ಸಹ ಮೃತ್ಯುವು ತನ್ನನ್ನು ಹೊಂದುವು-ದಿಲ್ಲವೆಂದು ನಿಶ್ಚಯಿಸಿಕೊಂಡು, ಇಂದ್ರಿಯಗಳ ವ್ಯಾಪಾರವನ್ನು ಬಿಟ್ಟು, ಅಭಗ್ನವಾದ ಪ್ರಾಣವ್ರತವನ್ನು ಆಚರಿಸ ಬೇಕು. ಈ ಪ್ರಾಣವ್ರತವನ್ನಾರಂಭಿಸುವವನು ಆ ವ್ರತವನ್ನು ಸಂತೃಪ್ತಿಯಿಂದ ಸಮಾಪ್ತಿ-ಗೊಳಿಸಬೇಕು. ಹಾಗೆ ಸಮಾಪ್ತಿಗೊಳಿಸದಿದ್ದಲ್ಲಿ ಪ್ರಾಣವು ತಿರಸ್ಕೃತವಾಗುವುದು. ಆದ್ದರಿಂದ ಮಾನವನು ಅಂತಹ ಪ್ರಾಣವ್ರತವನ್ನು ಆಚರಿಸುವುದರಿಂದ ಪ್ರಾಣದೇವತೆಯ ಸಾಯುಜ್ಯ ಸಾಲೋಕ್ಯಗಳ ಸೌಖ್ಯವನ್ನು ಅನುಭವಿಸುವಂತಹವನಾಗುತ್ತಾನೆ. (ಪ್ರಾಣದೇವತೆ ಎಂದರೆ ಹಿರಣ್ಯಗರ್ಭನು.)

## ತೃತೀಯೋಧ್ಯಾಯ – ಷಷ್ಠ ಬ್ರಾಹ್ಮಣಂ

**ಮಂ.ಶ್ಲೋ॥ ತ್ರಯಂ ವಾ ಇದಂ ನಾಮ ರೂಪಂ ಕರ್ಮ ತೇಷಾಂ ನಾಮ್ನಾಂ ವಾಗಿತ್ಯೇತದೇಷಾ-ಮುಕ್ಥಮತೋ ಹಿ ಸರ್ವಾಣಿ ನಾಮಾನ್ಯುತ್ತಿಷ್ಠನ್ತಿ ಏತದೇಷಾಗ್ಂ ಸಾಮೈತದ್ಧಿ ಸರ್ವೈರ್ನಾಮಭಿ -ಸ್ಸಮಮೇತದೇಷಾಂ ಬ್ರಹ್ಮೈ ತದ್ಧಿ ಸರ್ವಾಣಿ ನಾಮಾನಿ ಬಿಭರ್ತಿ (1)**

ತಾ : ಈ ಸೃಷ್ಟಿಯೆಲ್ಲವೂ ನಾಮರೂಪ ಕರ್ಮಗಳಿಂದ ತುಂಬಿದೆ. ಆ ನಾಮರೂಪಕರ್ಮಗಳಲ್ಲಿ, ನಾಮಗಳಿಗೆ ವಾಕ್ಕೆಂದೇ ಹೇಳುವರು. ಈ ವಾಕ್ಕು ಈ ನಾಮಗಳಿಗೆ ಕಾರಣ. ಈ ವಾಕ್ಕಿನಿಂದಲೇ, ಸಮಸ್ತ ನಾಮಗಳು ಹುಟ್ಟುತ್ತಿವೆ. ಈ ವಾಕ್ಕು ಈ ನಾಮಗಳಿಗೆ ಸಾಮಾನ್ಯವಾಗಿವೆ. ಈ ವಾಕ್ಕೇ ಸಮಸ್ತ ನಾಮಗಳಿಗೆ ಸಮಾನವಾದದ್ದು. ಈ ವಾಕ್ಕೇ ಸಮಸ್ತ ನಾಮಗಳನ್ನು ಧರಿಸಿರುವುದು. ಈ ವಾಕ್ಕು ಸರ್ವನಾಮಗಳಿಗೂ ಬ್ರಹ್ಮಸ್ವರೂಪವಾಗಿದೆ. (ನಾಮಕ್ಕೆ ಉಪಾದಾನ ಕಾರಣವು ವಾಕ್ಕು.)

**ಮಂ.ಶ್ಲೋ॥ ಅಥ ರೂಪಾಣಾಂ ಚಕ್ಷುರಿತ್ಯೇತದೇಷಾಮುಕ್ಥಮತೋ ಹಿ ಸರ್ವಾಣಿ ರೂಪಾಣ್ಯುತ್ತಿಷ್ಠನ್ತ್ಯೇತದೇ -ಷಾಗ್ಂ ಸಾಮೈತದ್ಧಿ ಸರ್ವೈ ರೂಪೈಸ್ಸಮಮೇತದೇಷಾಂ ಬ್ರಹ್ಮೇತದ್ಧಿ ಸರ್ವಾಣಿ ರೂಪಾಣಿ ಬಿಭರ್ತಿ (2)**

ತಾ : ಈ ಮೂರು ನಾಮರೂಪ ಕರ್ಮಗಳಲ್ಲಿ ಬಿಳುಪು, ಕಪ್ಪು ಮುಂತಾದ ರೂಪಗಳು ತೇಜೋರೂಪವಾದ ನೇತ್ರೇಂದ್ರಿಯದಿಂದ ತಿಳಿಯಲಾಗುವುದರಿಂದ ನೇತ್ರೇಂದ್ರಿಯವೆಂದು ಹೇಳಲಾಗುತ್ತಿದೆ. ಈ ಚಕ್ಷುರಿಂದ್ರಿಯವೇ ಈ ಸಮಸ್ತ ರೂಪಗಳಿಗೂ ಕಾರಣವಾಗಿವೆ. ಸಮಸ್ತ ರೂಪಗಳು ಚಕ್ಷುರಿಂದ್ರಿಯದಿಂದಲೇ ಜನಿಸುತ್ತಿವೆ. ಈ ಚಕ್ಷುರಿಂದ್ರಿಯವು ಸಕಲ ರೂಪಗಳಿಗೆ ಸಮಾನವಾಗಿ, ಸರ್ವ ರೂಪಗಳೊಂದಿಗೆ ಸಮಾನವಾಗಿದೆ. ಚಕ್ಷುರಿಂದ್ರಿಯಕ್ಕೆ ಬೇರೆಯಾಗಿಲ್ಲದ ಸಮಸ್ತ ರೂಪಗಳನ್ನು ಧರಿಸುವುದರಿಂದ ಇದು ಬ್ರಹ್ಮ ಸ್ವರೂಪವಾಗಿದೆ.

**ಮಂ.ಶ್ಲೋ॥ ಅಥ ಕರ್ಮಣಾಮಾತ್ಮೇತ್ಯೇತದೇಷಾಮುಕ್ಥಮತೋ ಹಿ ಸರ್ವಾಣಿ ಕರ್ಮಾಣ್ಯುತ್ತಿಷ್ಠನ್ತ್ಯೇತ-ದೇಷಾಗ್ಂ ಸಾಮೈತದ್ಧಿ ಸರ್ವೈಃ ಕರ್ಮಭಿಃ ಸಮಮೇತದೇಷಾಂ ಬ್ರಹ್ಮೈತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ ತದೇತತ್ತ್ರಯಂ ಸದೇಕಮಯಮಾತ್ಮಾತ್ಮೋ ಏಕಸ್ಸನ್ನೇತತ್ತ್ರಯಂ ತದೇತದ -ಮೃತಗ್ಂ ಸತ್ಯೇನಚ್ಛನ್ನಂ ಪ್ರಾಣೋ ವಾ ಅಮೃತಂ ನಾಮರೂಪೇ ಸತ್ಯಂ ತಾಭ್ಯಾ -ಮಯಂ ಪ್ರಾಣಶ್ಛನ್ನಃ (3)**

ತಾ : ಆ ನಂತರ ಸರ್ವಕರ್ಮಗಳಿಗೂ, ದೇಹವೇ ಕಾರಣವೆಂದು ಹೇಳಲಾಗುತ್ತಿದೆ. ಈ ಶರೀರವು ಎಲ್ಲಕರ್ಮಗಳಿಗೆ ಕಾರಣ. ಈ ಶರೀರದಿಂದಲೇ ಸರ್ವಕರ್ಮಗಳು ಹುಟ್ಟುತ್ತಿವೆ. ಈ ಶರೀರವೇ ಕರ್ಮಗಳಿಗೆ ಸಾಮ್ಯವಾಗಿದೆ. ಈ ಶರೀರವೇ ಎಲ್ಲ ಕರ್ಮಗಳನ್ನೂ ಹೊಂದಿದೆ. ಆದ್ದರಿಂದ ಈ ಶರೀರವು ಈ ಕರ್ಮಗಳೆಲ್ಲದಕ್ಕೂ ಆತ್ಮಸ್ವರೂಪವಾಗಿದೆ. ಈ ನಾಮರೂಪ ಕರ್ಮಗಳು ಮೂರೂ ಒಂದಾಗಿ, ಈ ದೇಹವಾಗುವುದು. ಈ ನಾಮರೂಪ ಕರ್ಮಗಳು ಮೂರೂ ಶರೀರವೇ. ಈ ಅಮೃತ ಸ್ವರೂಪವು ಸತ್ಯದಿಂದ ಮುಚ್ಚಲ್ಪಟ್ಟಿದೆ. ಪ್ರಾಣವೇ ಅಮೃತ ಸ್ವರೂಪ. ಇಂದ್ರಿಯ ರೂಪವಾದ ಅತ್ಮ ರೂಪವಾದ ಪ್ರಾಣವು ನಶಿಸುವುದಿಲ್ಲ. ನಾಮರೂಪಗಳೆರಡೂ ಸತ್ಯ ಸ್ವರೂಪಗಳು. ಆ ನಾಮರೂಪಗಳಿಂದ ಪ್ರಾಣವು ಗುಪ್ತವಾಗಿ ಮುಚ್ಚಲ್ಪಟ್ಟಿದೆ. (ಇದುವರೆಗೂ ಅವಿದ್ಯಾ ವಿಷಯವಾದ ಪ್ರಪಂಚವನ್ನು ಕುರಿತು ಹೇಳಿದರು. ಇನ್ನು ಮುಂದೆ ವಿದ್ಯಾ ವಿಷಯವಾದ ಆತ್ಮತತ್ತ್ವವನ್ನು ಹೇಳುತ್ತಿದ್ದಾರೆ) (ಈ ಅಧ್ಯಾಯದಲ್ಲಿ ಆರು ಬ್ರಾಹ್ಮಣಗಳು ೮೦ ಮಂತ್ರಗಳು ಇವೆ.)

## ಚತುರ್ಥಾಧ್ಯಾಯ - ಪ್ರಥಮ ಬ್ರಾಹ್ಮಣಂ

**ಮಂ.ಶ್ಲೋ॥ ಓಮ್. ದೃಪ್ತಬಾಲಾಕಿರ್ಹಾನೂಚಾನೋ ಗಾರ್ಗ್ಯ ಆಸ ಸ ಹೋವಾಚಾಜಾತಶತ್ರುಂ ಕಾಶ್ಯಂ ಬ್ರಹ್ಮ ತೇ ಬ್ರವಾಣೀತಿ ಸ ಹೋವಾಚಾಜಾತಶತ್ರುಂ ಸಹಸ್ರಮೇತಸ್ಯಾಂ ವಾಚಿ ದದ್ಮೋ ಜನಕೋ ಜನಕ ಇತಿ ವೈ ಜನಾ ಧಾವನ್ತೀತಿ (1)**

ತಾ : ವಕ್ತನಾದ, ಗರ್ವಿಷ್ಠನಾದ ಬಾಲಾಕಿಯೆನ್ನುವ, (ಬಲಾಕನ ಮಗ) ಗಾರ್ಗ್ಯನೆನ್ನುವ,

ಹೆಸರುಳ್ಳ ಮುನಿಯಿದ್ದ. ಆ ಗಾರ್ಗ್ಯನೇ ಅಜಾತಶತ್ರುವೆಂದು ಪ್ರಖ್ಯಾತಿ ಹೊಂದಿದ. ಕಾಶೀರಾಜನ ಬಳಿಗೆ ಬಂದು ನಿನಗೆ ಪರಬ್ರಹ್ಮನನ್ನು ಕುರಿತು ಹೇಳಬಲ್ಲೆ ಎಂದ. ಅಜಾತ ಶತ್ರುವೆಂದು ಹೆಸರುಳ್ಳ ಆ ಕಾಶೀರಾಜನು ''ಪೂರ್ವಕಾಲದಲ್ಲಿ ಬ್ರಹ್ಮವೇತ್ತರಾದ ಜನರೆಲ್ಲ ಜನಕ ಮಹಾರಾಜನೇ! ಮಹಾದಾತನೆಂದು, ಶ್ರೋತನೆಂದು ಹೋಗುತ್ತಿದ್ದರು". "ಓ ಗಾರ್ಗ್ಯ! ಈಗ ನೀನು ಆ ಸಮಸ್ತವನ್ನೂ ನನ್ನಲ್ಲೇ ಭಾವಿಸಿ ನಿನಗಾಗಿ ಬ್ರಹ್ಮಸ್ವರೂಪವನ್ನು ಹೇಳುವೆನೆಂದು ಹೇಳಿದೆ. ಈ ವಾಕ್ಕು ನಿಮಿತ್ತವಾಗಿ ನಿನಗೆ ಸಾವಿರ ಗೋವುಗಳನ್ನು ಕೊಡುತ್ತಿದ್ದೇನೆಂದು ಆ ರಾಜನು ದಾನವನ್ನು ಪ್ರಕಟಿಸಿದ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾ ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜೇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾ-ಸ್ತೇಽತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ (2)**

ತಾ : ಸೂರ್ಯನಲ್ಲಿ ಪರಿಪೂರ್ಣನಾದ ಪರಬ್ರಹ್ಮ ಸ್ವರೂಪನಾದವನು ಯಾರೋ ಅವನನ್ನೇ ನಾನು ಈ ಶರೀರೇಂದ್ರಿಯ ಸಮುದಾಯದಲ್ಲಿ ಪರಬ್ರಹ್ಮವಾಗಿ ಉಪಾಸನೆ ಮಾಡುತ್ತಿದ್ದೇನೆಂದು ಆ ಗಾರ್ಗ್ಯನು ನುಡಿದ. ಆ ಅಜಾತಶತ್ರುವಾದ ಕಾಶೀರಾಜ ಆ ವಾಕ್ಯವನ್ನು ಖಂಡಿಸಿ ಹೀಗೆ ಹೇಳಿದ. "ಗಾರ್ಗ್ಯ! ಸಮಸ್ತ ಭೂತಗಳನ್ನು ಅತಿಕ್ರಮಿಸಿದವನು, ಎಲ್ಲ ಭೂತಗಳಿಗೂ ಶಿರಸ್ಸಾಗಿಯೂ, ರಾಜ-ನಾಗಿಯೂ ಇರುವ ಈ ಪುರುಷನನ್ನು ಪರಬ್ರಹ್ಮವೆಂದು ನಾನು ಉಪಾಸಿಸುತ್ತಿರುವೆ. ಈ ಪರಬ್ರಹ್ಮ ವಿಷಯದಲ್ಲಿ ಯಾರೂ ವಾದ ಮಾಡುವುದು ಬೇಡ" ಎಂದು ರಾಜನೇ ಹೇಳಿದ. ಯಾರು ಈ ಪುರುಷ ಸ್ವರೂಪನನ್ನು ಈ ಹಿಂದೆ ಹೇಳಿದ ಪ್ರಕಾರ ಉಪಾಸನೆ ಮಾಡುತ್ತಿದ್ದಾರೋ ಅವನು ಭೂತಗಳನ್ನು ಅತಿಕ್ರಮಿಸಿದವನು, ಎಲ್ಲ ಭೂತಗಳಿಗೆ ಪ್ರಧಾನವಾಗಿಯೂ ಇರುವನು ಎಂದು ನನಗೆ ತಿಳಿದಿದೆ. (ಯಾವ ಗುಣಗಳಿರುವವನನ್ನು ಉಪಾಸಿಸುವೆವೋ ಅಂತಹ ಫಲ ದೊರೆಯುವು-ದೆಂಬ ಭಾವ)

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಸೌ ಚನ್ದ್ರೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾ ಬೃಹನ್ಪಾಣ್ಡರವಾಸಾಃ ಸೋಮೋ ರಾಜೇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇಽಹರಹರ್ಧ್ಮತಃ ಪ್ರಸುತೋ ಭವತಿ ನಾಸ್ಯಾನ್ನಂ ಕ್ಷೀಯತೇ (3)**

ತಾ : ಆ ಗಾರ್ಗ್ಯನು, ಚಂದ್ರನಲ್ಲಿರುವ ಪುರುಷನನ್ನು ನಾನು ಪರಬ್ರಹ್ಮವೆಂದು ಉಪಾಸಿಸುತ್ತಿದ್ದೇ-ನೆಂದು ಹೇಳಿದ. ಆಗ ಅಜಾತಶತ್ರುನೆನ್ನುವ ಕಾಶೀರಾಜನು "ಗಾರ್ಗ್ಯ! ನೀನು ಅಧಿಕನೆಂದು, ಬೆಳ್ಳಗಿನ ಬಟ್ಟೆಯುಳ್ಳವನಾದ ಚಂದ್ರನನ್ನು ಬ್ರಹ್ಮನೆಂದು ಉಪಾಸಿಸುತ್ತಿರುವೆನೆಂದು ಹೇಳಿದೆ. ಈ ರೀತಿಯಾಗಿ ನೀನು ಸಂವಾದವನ್ನು ನಡೆಸಬೇಡ ಎಂದ. ಇದಕ್ಕೆ ಮೊದಲೇ ಹೇಳಿದ ಪ್ರಕಾರ ಉಪಾಸಿಸುವವರಿಗೆ ಚಂದ್ರಮಂಡಲಾಭಿಮಾನಿಯಾದ ಆ ಪುರುಷನು ಪ್ರತಿದಿನವೂ ಯಜ್ಞದಲ್ಲಿ ಪ್ರಕೃತಿರೂಪನೂ ವಿಕೃತಿರೂಪನೂ ಆಗುತ್ತಿದ್ದಾನೆ; ಈ ಉಪಾಸಕನಿಗೆ ಅನ್ನವು ಕ್ಷೀಣಿಸುವುದಿಲ್ಲ; ತೃಪ್ತಿಯಾಗಿ ಲಭಿಸುವುದು. (ಸೋಮರಸವು ಪುಷ್ಕಳವಾಗಿ ಲಭಿಸುವುದೆಂಬ ಭಾವ.)

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಸೌ ವಿದ್ಯುತಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾಸ್ತೇಜಸ್ವೀತಿ ವಾ ಅಹಮೇತ-ಮುಪಾಸ ಇತಿ ಸ ಯ ಏತಮೇವಮುಪಾಸ್ತೇ ತೇಜಸ್ವೀ ಹ ಭವತಿ ತೇಜಸ್ವಿನೀ ಹಾಸ್ಯ ಪ್ರಜಾ ಭವತಿ (4)**

ತಾ : ಈ ರೀತಿಯಾಗಿ ನಡೆದ ಸಂವಾದದಲ್ಲಿ ಕಾಶೀರಾಜನು ಚಂದ್ರಸ್ವರೂಪನಾದ ಪರಬ್ರಹ್ಮ-ವನ್ನು ತಿರಸ್ಕರಿಸಿದ. ಗಾರ್ಗ್ಯನು ಬೇರೊಂದು ಪರಬ್ರಹ್ಮವನ್ನು ಹೊಂದಿ "ಓ ರಾಜಾ ವಿದ್ಯುಲ್ಲತೆ-ಯಲ್ಲೂ, ತ್ವಕ್‌ನಲ್ಲಿಯೂ, ಹೃದಯದಲ್ಲೂ ಅಭಿಮಾನಿಯಾಗಿ, ತಾನು ಕರ್ತನು, ಭೋಕ್ತನು ಎಂದು ಭಾವಿಸುವ ಪ್ರಾಣಸ್ವರೂಪನಾದ ಪುರುಷನೊಬ್ಬನೇ. ಇವನನ್ನೇ ನಾನು ದೇಹೇಂದ್ರಿಯ ಸಮುದಾಯ-ದಲ್ಲಿ ಪರಬ್ರಹ್ಮವೆಂದು ಉಪಾಸಿಸುತ್ತಿದ್ದೇನೆ. ಈಗ ಆ ಪುರುಷ ಸ್ವರೂಪವಾದ ಬ್ರಹ್ಮವನ್ನು ನಿನಗಾಗಿ ಹೇಳುತ್ತಿದ್ದೇನೆ. ನೀನು ಅದನ್ನು ಉಪಾಸಿಸುವಂತವನಾಗು" ಎಂದು ಹೇಳಿದ. ಆಗ ಆ ಕಾಶೀರಾಜನು "ಓ ಗಾರ್ಗ್ಯನೇ! ನೀನು ಮಿಂಚಿನಲ್ಲಿಯೂ, ತ್ವಕ್ಕಿನಲ್ಲಿಯೂ, ಹೃದಯದಲ್ಲಿಯೂ, ಅಭಿಮಾನಿಯಾದ ಒಬ್ಬನಾದ (ಒಬ್ಬ) ಪ್ರಾಣ ಸ್ವರೂಪನಾದ ಪುರುಷನನ್ನು ತೇಜೋವಂತನಾಗಿ ಪರಬ್ರಹ್ಮವಾಗಿ ಉಪಾಸಿಸುತ್ತಿದ್ದೀಯೆ. ಆ ಪುರುಷನನ್ನು ಉಪಾಸಿಸಬೇಕೆಂದು ನನಗೆ ಹೇಳಬೇಡ. ನೀನು ಉಪದೇಶಿಸಿದ್ದು ನನಗೆ ತಿಳಿದಿದೆ. ಈ ಪೂರ್ವದಲ್ಲಿ ಹೇಳಿದ ಪ್ರಕಾಶ ವಿಶೇಷದೊಂದಿಗೆ ಕೂಡಿದ ಮಿಂಚು ಮೊದಲಾದವುಗಳಲ್ಲಿ ಅಭಿಮಾನಿಯು ಪ್ರಾಣರೂಪನಾದ ಪುರುಷನನ್ನು ಧ್ಯಾನಿಸುವವನು ತೇಜೋವಂತನಾಗುವನು. ಅವನ ಪುತ್ರರು ಮುಂತಾದವರು ತೇಜೋವಂತರಾಗುವರು. ಈ ವಿಷಯ ನನಗೆ ತಿಳಿದಿದೆ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಮಾಕಾಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾಃ ಪೂರ್ಣಮಪ್ರವರ್ತೀತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಪೂರ್ಯತೇ (ಹ) ಪ್ರಜಯಾ ಪಶುಭಿರ್ನಾಸ್ಯಾಸ್ಮಾಲ್ಲೋಕಾತ್ ಪ್ರಜೋದ್ವರ್ತತೇ (5)**

ತಾ : ಆ ಗಾರ್ಗ್ಯನು ಆಕಾಶದಲ್ಲಿರುವ ಈ ಪ್ರಾಣ ಸ್ವರೂಪನಾದ ಪುರುಷನನ್ನೇ, ಶರೀರೇಂದ್ರಿಯ ಸಮುದಾಯದಲ್ಲಿ ಪರಬ್ರಹ್ಮವಾಗಿ ನಾನು ಉಪಾಸಿಸುತ್ತಿದ್ದೇನೆಂದು ನುಡಿದ. ಆಗ ಅಜಾತಶತ್ರುವಾದ ಕಾಶೀರಾಜನು "ಎಲೈ ಗಾರ್ಗ್ಯನೇ! ನೀನು ಪರಿಪೂರ್ಣನಾದಂತಹ ಕ್ರಿಯಾರಹಿತನಾದಂತಹ ಈ ಪ್ರಾಣಸ್ವರೂಪನಾದ ಪುರುಷನನ್ನು ಪರಬ್ರಹ್ಮವೆಂದು ಉಪಾಸಿಸುತ್ತಿರುವೆನೆಂದು ಮಾತಿನಲ್ಲಿ ಹೇಳಬೇಡ. ಪೂರ್ಣತ್ವಾದಿ ವಿಶೇಷಗಳೊಂದಿಗೆ ಇರುವ ಈ ಪುರುಷನನ್ನು ಈ ಪೂರ್ವೋಕ್ತ ಪ್ರಕಾರ ಉಪಾಸಿ-ಸುವವನಿಗೆ ಸಂತಾನವನ್ನು, ಪಶು ಸಂಪತ್ತನ್ನು ತುಂಬಿಕೊಡುತ್ತದೆ. ಈ ಉಪಾಸಕನ ಸಂತಾನದಿಂದ ಮತ್ತೊಂದು ಲೋಕವನ್ನು ಹೊಂದನು. (ಸಂತಾನ ವಿನಾಶವು ಆಗುವುದಿಲ್ಲ.) ಎಂದು ನನಗೆ ತಿಳಿದಿದೆ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಂ ವಾಯೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಇನ್ದ್ರೋ ವೈ**

**ಕುಣ್ಠೋऽಪರಾಜಿತಾ ಸೇನೇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಜಿಷ್ಣುರ್ಹಾಪರಾಜಿಷ್ಣುರ್ಭವತ್ಯನ್ಯತಸ್ತ್ಯಜಾಯೀ (6)**

ತಾ : ಆಗ ಆ ಗಾರ್ಗ್ಯನು ವಾಯುವಿನಲ್ಲಿದ್ದ ಈ ಪ್ರಾಣರೂಪನಾದ ಪುರುಷನೇ ಶರೀರೇಂದ್ರಿಯ ಸಮುದಾಯದಲ್ಲಿ ನಾನು ಪರಬ್ರಹ್ಮವಾಗಿ ಉಪಾಸಿಸುತ್ತಿರುವೆನೆಂದು ನುಡಿದ. ಅಜಾತಶತ್ರುವಾದ ಕಾಶೀರಾಜನು ಗಾರ್ಗ್ಯನೇ! ಪರಮೇಶ್ವರನು ವೈಕುಂಠಧಾಮನೆನ್ನುವ ಪರಾಜಯವನ್ನು ಹೊಂದದಂತಹ ಪ್ರಾಣರೂಪ ಪುರುಷನನ್ನು ಉಪಾಸಿಸುತ್ತಿದ್ದಾನೆಂದು ವಾದ ಮಾಡಬೇಡ. ಆ ಪುರುಷನು ಪೂರ್ವೋಕ್ತ ಪ್ರಕಾರವಾಗಿ ಉಪಾಸಿಸುವಂತಹವನು ಜಯಶೀಲನು, ಪರಾಜಯ-ವಿಲ್ಲದವನು, ಶತ್ರುಗಳನ್ನು ಜಯಿಸುವ ಸ್ವಭಾವವನ್ನು ಹೊಂದಿದವನಾಗಿಯೂ ಆಗುತ್ತಾನೆ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಮಗ್ನೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾಃ ವಿಷಾಸಹಿರಿತಿ ವಾ ಅಹಮೇ-ತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ವಿಷಾಸಹಿರ್ಹಾಸ್ಯ ಪ್ರಜಾ ಭವತಿ (7)**

ತಾ : ಆ ಕಾಶೀರಾಜನು ಮಾತನಾಡುತ್ತಾ ವಾಯು ಪುರುಷ ರೂಪವನ್ನು ತಿರಸ್ಕರಿಸಲು, ಗಾರ್ಗ್ಯನು ಬೇರೊಂದು ಪರಬ್ರಹ್ಮವನ್ನು ತಿಳಿಸಿದ. ಎಲೈ ರಾಜನೇ! ಅಗ್ನಿಯಲ್ಲಿಯೂ, ವಾಕ್ಕಿನಲ್ಲಿಯೂ, ಹೃದಯದಲ್ಲಿಯೂ ಅಭಿಮಾನಿಯಾಗಿ ನಾನು ಕರ್ತನು ಭೋಕ್ತನು ಎಂದು ತಿಳಿಸುವುದು ಪುರುಷ-ನೊಬ್ಬನೇ. ಇವನನ್ನೇ ನಾನು ದೇಹೇಂದ್ರಿಯಾದಿ ಸಮುದಾಯದೊಂದಿಗೆ ಪರಬ್ರಹ್ಮವಾಗಿ ಉಪಾಸಿಸುತ್ತಿದ್ದೇನೆ. ಆದ್ದರಿಂದ ನಾನು ಆ ಪ್ರಾಣಸ್ವರೂಪ ಪುರುಷನನ್ನು ನಿನ್ನ ನಿಮಿತ್ತವಾಗಿ ಹೇಳು-ತ್ತಿದ್ದೇನೆ. ನೀನು ಸಹ ಆ ಪುರುಷನನ್ನು ಉಪಾಸಿಸುವಂತಹವನಾಗು ಎಂದು ಹೇಳಿದ. ಕಾಶೀರಾಜನು ಎಲೈ ಗಾರ್ಗ್ಯನೇ! ಪ್ರಾಣ ಸ್ವರೂಪನಾದ ಪುರುಷನ ವಿಷಯದಲ್ಲಿ ನೀನು ಉಪಾಸಿಸಲು ನನಗೆ ಹೇಳಬೇಡ. ಹೀಗೆ ನೀನು ಹೇಳುತ್ತಿರುವ ವಿಷಯ ನನಗೆ ಗೊತ್ತಿದೆ. ಈ ಹಿಂದೆ ಹೇಳಿದ ಪ್ರಕಾರ ಅಗ್ನಿ ವಾಕ್ಕು. ಹೃದಯ ಇವುಗಳ ಅಭಿಮಾನಿಯಾದವನು. ಪ್ರಾಣ ಸ್ವರೂಪನು ಆದ ಪುರುಷನನ್ನು ಉಪಾಸಿಸುವವನು ಶತ್ರುಗಳಿಗೆ ಸಹಿಸಲಾರದವನಾಗುತ್ತಾನೆ. ಅಂತಹ ಉಪಾಸಕನ ಪುತ್ರನು ಸಹ ಶತ್ರುಗಳು ಸಹಿಸಲಾರದವನೇ ಆಗುವನು. ಅರ್ಪಿಸಲಾದ ಹವಿಸ್ಸನ್ನು ಪೂರ್ತಿಯಾಗಿ ಅಗ್ನಿಯು ಭಸ್ಮ ಮಾಡಿದಂತೆ ಆತ ಶತ್ರುಗಳೆಲ್ಲರನ್ನೂ ಜಯಿಸುವಂತಹವನಾಗುತ್ತಾನೆ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಮಪ್ಸು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾಃ ಪ್ರತಿರೂಪ ಇತಿ ವಾ ಅಹಾವೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಪ್ರತಿರೂಪಗ್ಂ ಹೈವೈನಮುಪಗಚ್ಛತಿ ನಾ ಪ್ರತಿರೂಪಮಥೋ ಪ್ರತಿರೂಪೋऽಸ್ಮಾಜ್ಜಾಯತೇ (8)**

ತಾ : ಆಗ ಆ ಗಾರ್ಗ್ಯನು ಉದಕಗಳಲ್ಲಿನ ಈ ಪ್ರಾಣರೂಪನಾದ ಪುರುಷನನ್ನೇ ದೇಹೇಂದ್ರಿ-ಯಾದಿಗಳಲ್ಲಿ ಪರಬ್ರಹ್ಮವಾಗಿ ಉಪಾಸಿಸುತ್ತಿರುವೆನೆಂದು ಹೇಳಿದ. ಅಜಾತಶತ್ರುವಾದ ಕಾಶೀರಾಜನು "ಗಾರ್ಗ್ಯನೇ! ನೀನು ಈ ಉದಕಗಳಲ್ಲಿನ ಪ್ರಾಣರೂಪನಾದ ಪುರುಷನನ್ನು ಉಪಾಸಿಸುತ್ತಿರುವೆನೆಂದು

ನನ್ನೊಂದಿಗೆ ಹೇಳಬೇಡ. ಜಲಗಳಲ್ಲಿರುವ ಪುರುಷನನ್ನು ಉಪಾಸಿಸು-ವವನು, ಶ್ರುತಿ ಸ್ಮೃತಿ ಶಾಸನಕ್ಕನುಕೂಲವಾದ ಫಲವನ್ನೇ ಹೊಂದುತ್ತಾನೆ. ಈ ಉಪಾಸಕನಿಗೆ ಪ್ರತಿಕೂಲ ಫಲವುಂಟಾಗುವುದಿಲ್ಲ. ಈ ಉಪಾಸಕನಿಗೆ ಪ್ರತಿಬಿಂಬರೂಪವಾದ ಪುತ್ರನು (ಸಮಾನ ರೂಪವುಳ್ಳ ಮಗ) ಹುಟ್ಟುವನು. ಈ ವಿಷಯಗಳು ನನಗೆ ತಿಳಿದಿದೆ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಮಾದರ್ಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ರೋಚಿಷ್ಣುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ರೋಚಿಷ್ಣುರ್ಹ ಭವತಿ ರೋಚಿಷ್ಣು -ರ್ಹಾಸ್ಯ ಪ್ರಜಾ ಭವತ್ಯಥೋಯೈಸ್ಸನ್ನಿಗಚ್ಛತಿ ಸರ್ವಾಗ್ಂಸ್ತಾನತಿರೋಚತೇ (9)**

ತಾ : ಆ ಗಾರ್ಗ್ಯನು ಬೇರೊಂದು ಬ್ರಹ್ಮೋಪಾಸನೆಯನ್ನು ಹೊಂದಿ, ಎಲೈ ರಾಜನೇ! ನಿರ್ಮಲವಾದ ಕನ್ನಡಿಯಲ್ಲಿಯೂ, ಇತರೆಯಾದ ಖಡ್ಗ ಮುಂತಾದವುಗಳಲ್ಲಿಯೂ ಪ್ರತಿಬಿಂಬಿತವಾಗಿ ಅಭಿಮಾನಿಯಾಗಿ ನಾನು ಕರ್ತನು, ನಾನು ಭೋಕ್ತನು ಎಂದು ಭಾವಿಸುವ ಪುರುಷನೊಬ್ಬನಿದ್ದಾನೆ. ನಾನುದೇಹೇಂದ್ರಿಯಾದಿ ಸಮುದಾಯದಲ್ಲಿ ಪರಬ್ರಹ್ಮವಾಗಿ ಅವನನ್ನು ಉಪಾಸಿಸುತ್ತಿದ್ದೇನೆ. ಎಲೈ (ಓ) ರಾಜನೇ! ಆ ಪ್ರಾಣ ಸ್ವರೂಪವಾದ ಪುರುಷನನ್ನು ಕುರಿತು ನಿನಗಾಗಿ ಹೇಳುತ್ತಿದ್ದೇನೆ. ನೀನು ಅವನನ್ನು ಉಪಾಸಿಸುವಂತಹವನಾಗು ಎಂದು ಹೇಳಿದ. ಆಗ ಆ ಕಾಶೀರಾಜನು, ಎಲೈ ಗಾರ್ಗ್ಯನೇ! ಆದರ್ಶಾದಿಗಳಲ್ಲಿ ಪ್ರತಿಫಲನಾತ್ಮಕವಾದ ಆ ಪ್ರಾಣಸ್ವರೂಪ ಪುರುಷನ ವಿಷಯವಾಗಿ ನನಗೆ ಹೇಳಬೇಡ. ಹೀಗೆ ನೀನು ಉಪದೇಶಿಸಿದ್ದು ನನಗೆ ಮೊದಲೇ ತಿಳಿದಿದೆ. ನಿರ್ಮಲವಾದ ಆದರ್ಶ್ಯಾದಿ-ಗಳಲ್ಲಿ ಪ್ರತಿಫಲಿಸುವ ಅಭಿಮಾನಿಯಾದವನನ್ನು, ಪ್ರಾಣಸ್ವರೂಪನಾದಂತಹವನ್ನು ಹೊಂದುತ್ತಿದ್ದಾನೆ. ಪುರುಷನನ್ನು ಧ್ಯಾನಿಸುವವನು ಪ್ರಕಾಶಸ್ವಭಾವ ಮತ್ತು ಆ ಉಪಾಸಕನು ಸಮಾನ-ವಾದವರೆಲ್ಲರನ್ನು ಅತಿಕ್ರಮಿಸಿ ಪ್ರಕಾಶಿಸುವನೆಂದು ಆ ರಾಜನು ಹೇಳಿದ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಂ ಯನ್ತಂ ಪಶ್ಚಾಚ್ಛಬ್ದೋಽನೂದೇತ್ಯೇತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಅಸುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಸರ್ವಗ್ಂ ಹೈವಾಸ್ಮಿಗ್ಂಲ್ಲೋಕ ಆಯುರೇತಿ ನೈನಂ ಪುರಾಕಾಲಾತ್ ಪ್ರಾಣೋ ಜಹಾತಿ (10)**

ತಾ : ಆಗ ಆ ಗಾರ್ಗ್ಯನು ನಡೆದು ಹೋಗುವವನನ್ನು ಕುರಿತು ಹಿಂಭಾಗದಲ್ಲಿ ಅನುಸರಿಸಿ ಹುಟ್ಟುವ ಶಬ್ದವೆನ್ನುವ ದೇಹೇಂದ್ರಿಯಾದಿ ಸಮುದಾಯದಲ್ಲಿ ನಾನು ಪರಬ್ರಹ್ಮವಾಗಿ ಉಪಾಸಿಸು-ತ್ತಿರುವೆನೆಂದು ಹೇಳಿದ. ಆ ಕಾಶೀರಾಜನು ಎಲೈ ಗಾರ್ಗ್ಯನೇ ನೀನು ಈ ಶಬ್ದವನ್ನು ಉಪಾಸಿಸು-ತ್ತಿರುವೆಯೆಂದು ನನ್ನೊಂದಿಗೆ ವಾದ ಬೆಳೆಸಬೇಡ. ಇದು ನನಗೆ ತಿಳಿದಿದೆ. ಈ ಪೂರ್ವೋಕ್ತ ಪ್ರಕಾರ ಉಪಾಸಿಸುವವನು ಈ ಲೋಕದಲ್ಲಿ ಸಮಸ್ತವಾದ ಆಯುಸ್ಸನ್ನು ಹೊಂದುತ್ತಿರುವನು. ಪ್ರಾಣವು ಕರ್ಮಫಲ ಪರಿಚ್ಛಿನ್ನ ಕಾಲಕ್ಕಿಂತ ಮೊದಲೇ ಅಪಮೃತ್ಯುವನ್ನು ಹೊಂದುವುದಿಲ್ಲ.

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಂ ದಿಕ್ಷು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ದ್ವಿತೀಯೋಽನಪಗ ಇತಿ**

**ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ದ್ವಿತೀಯವಾನ್ ಹ ಭವತಿ ನಾಸ್ಮಾದ್ಗಣಶ್ಛಿದ್ಯತೇ (11)**

ತಾ : ಮತ್ತೆ ಆ ಗಾರ್ಗ್ಯನು ಮತ್ತೊಂದು ಬ್ರಹ್ಮೋಪಾಸನೆಯನ್ನು ಹೇಳಿದನು. ಓ ರಾಜಾ! ಅಶ್ವನೀ ದೇವತೆಗಳೇ ಸ್ವರೂಪವಾಗಿ ಇರುವಂತಹ ದಿಕ್ಕುಗಳಲ್ಲಿಯೂ, ಶ್ರೋತ್ರಗಳಲ್ಲಿಯೂ, ಹೃದಯದಲ್ಲಿಯೂ, ಅಭಿಮಾನಿಯಾಗಿ ನಾನು ಕರ್ತ ಭೋಕ್ತ ಎಂದು ಭಾವಿಸುವವನು ಪುರುಷನೊಬ್ಬನೇ. ಆ ಪುರುಷನನ್ನು ನಾನು ದೇಹೇಂದ್ರಿಯಾದಿ ಸಮೂಹದಲ್ಲಿ ಪರಬ್ರಹ್ಮವಾಗಿ ಉಪಾಸಿಸುತ್ತಿದ್ದೇನೆ. ಆದ್ದರಿಂದ ನಾನು ಆ ಪ್ರಾಣ ಸ್ವರೂಪವನ್ನು ನಿನಗಾಗಿ ಹೇಳುತ್ತಿದ್ದೇನೆ. ನೀನು ಅವನನ್ನು ಉಪಾಸಿಸುವಂತಹವನಾಗು ಎಂದು ಕೋರಿದ. ಆಗ ಕಾಶೀರಾಜನು ಓ ಗಾರ್ಗ್ಯನೇ ಈ ದಿಕ್ಶ್ರೋತ್ರ ಹೃದಯಗಳಲ್ಲಿ ಇರುವ ಅಭಿಮಾನಿಯಾದ ಪ್ರಾಣ ಸ್ವರೂಪನಾದ ಈ ಪುರುಷನನ್ನು ಆ ಅಶ್ವಿನೀ ದೇವತೆಗಳ ಸಂಬಂಧವಾದ ಧರ್ಮವನ್ನು ಹೊಂದಿದವರೇ ಪರಬ್ರಹ್ಮವೆಂದು ನನಗೆ ತಿಳಿದಿದೆ. ನನ್ನನ್ನು ಉಪಾಸನೆ ಮಾಡೆಂದು ನನಗೆ ಹೇಳಬೇಡ. ಪ್ರಾಣ ಸ್ವರೂಪನಾದ ಪುರುಷನನ್ನು ಧ್ಯಾನಿಸುವಂತಹವನು ಸಾಧುಗಳಾದ ಭೃತ್ಯರೊಂದಿಗೆ, ಸಹಾಯ ಸಂಪತ್ತಿನೊಂದಿಗೆ ತುಂಬಿರುತ್ತಾನೆ. ಅಂತಹ ಉಪಾಸಕನಿಗೆ ಭೃತ್ಯ ಗಣವು ವೃದ್ಧಿಯಾಗುತ್ತಿರುತ್ತದೆ. (ಅಶ್ವಿನೀ ದೇವತೆಗಳ ಜೋಡಿ ದಿಕ್ಕುಗಳಲ್ಲಿ ವಾಸಿಸುತ್ತಾರೆ.)

**ಮಂ.ಶ್ಲೋ॥ ಸ ಹೋವಾಚ ಗಾರ್ಗ್ಯೋ ಯ ಏವಾಯಂ ಛಾಯಾಮಯಃ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಮೃತ್ಯುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಸರ್ವಗ್ಂ ಹೈವಾಸ್ಮಿಲ್ಲೋಕ ಆಯುರೇತಿ ನೈನಂ ಪುರಾಕಾಲಾನ್ ಮೃತ್ಯುರಾಗಚ್ಛತಿ (12)**

ತಾ : ಆಗ ಆ ಗಾರ್ಗ್ಯನು ಈ ಛಾಯಾ ಸ್ವರೂಪನಾದ ಪುರುಷನನ್ನು ದೇಹೇಂದ್ರಿಯಾದಿ ಸಮುದಾಯದಲ್ಲಿ ಪರಬ್ರಹ್ಮವಾಗಿ ಉಪಾಸಿಸುವೆನೆಂದು ಹೇಳಿದ. ಆಗ ಆ ಅಜಾತಶತ್ರುವಾದ ಕಾಶೀರಾಜನು, ಈ ಪುರುಷನ ವಿಷಯವು ಸಹ ನನಗೆ ತಿಳಿದಿದೆ. ನನ್ನೊಂದಿಗೆ ಈ ವಿಷಯವಾಗಿ ವಾದ ಬೇಡ. ಈ ಪುರುಷನನ್ನು ಪೂರ್ವೋಕ್ತ ಪ್ರಕಾರವಾಗಿ ಉಪಾಸನೆ ಮಾಡುವವನು ಈ ಲೋಕದಲ್ಲಿ ಸಮಸ್ತವಾದ ಆಯುರ್ದಾಯವನ್ನು ಹೊಂದುವನು. ಮೃತ್ಯುವು ಅವಸಾನ ಕಾಲಕ್ಕಿಂತ ಮೊದಲು ಈ ಉಪಾಸಕನ ಬಳಿಗೆ ಬರುವುದಿಲ್ಲ ಎಂದು ರಾಜನು ಹೇಳಿದ.

**ಮಂ.ಶ್ಲೋ॥ ಸಹೋವಾಚ ಗಾರ್ಗ್ಯೋ ಯ ಏವಾಯಮಾತ್ಮನಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಆತ್ಮನ್ವೀತಿ ವಾ ಅಹಮೇತ -ಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಆತ್ಮನ್ವೀಹ ಭವತ್ಯಾತ್ಮನ್ವಿನೀಹಾಸ್ಯ ಪ್ರಜಾಭವತಿ ಸ ಹ ತೂಷ್ಣಿಮಾಸ ಗಾರ್ಗ್ಯಃ (13)**

ತಾ : ಆ ಗಾರ್ಗ್ಯನು ಬುದ್ಧಿ ಸ್ವರೂಪನಾದ ಪ್ರಜಾಪತಿಯಲ್ಲಿರುವ ಪುರುಷನನ್ನು, ಈ ದೇಹೇಂದ್ರಿಯ ಸಮುದಾಯದಲ್ಲಿ ಪರಬ್ರಹ್ಮವಾಗಿ ನಾನು ಉಪಾಸಿಸುತ್ತಿದ್ದೇನೆಂದು ಹೇಳಿದ. ಆಗ ಆ

ಅಜಾತಶತ್ರುವಾದ ಕಾಶೀರಾಜನು, ಗಾರ್ಗ್ಯನೇ! ಅಧಿಕ ಬುದ್ಧಿಯುಳ್ಳವನಾಗಿ, ಈ ಪುರುಷನನ್ನು ಉಪಾಸಿಸುತ್ತಿರುವೆನೆಂದು ಹೇಳಬೇಡ. ಈ ಪೂರ್ವೋಕ್ತ ಪ್ರಕಾರವಾಗಿ ಉಪಾಸಿಸುವವನು ಅಧಿಕ ಬುದ್ಧಿಯುಳ್ಳವರಾಗಿರುವನು. ಈ ಉಪಾಸಕನ ಸಂತಾನವು ಅಧಿಕ ಬುದ್ಧಿಯುಳ್ಳವರಾಗುವರು. ಆಗ ಗಾರ್ಗ್ಯನು ಮತ್ತೇನೂ ಹೇಳಲಾರದ ತೂಷ್ಣೀಂಭಾವವನ್ನು ವಹಿಸಿದನು.

**ಮಂ.ಶ್ಲೋ॥ ಸ ಹೋವಾಚಾಜಾತಶತ್ರುರೇತಾವನ್ನೂ ಇತ್ಯೇತಾವದ್ಧೀತಿ ನೈತಾವತಾ ವಿದಿತಂ ಭವತೀತಿ ಸ ಹೋವಾಚ ಗಾರ್ಗ್ಯ ಉಪತ್ವಾಯಾನೀತಿ (14)**

ತಾ : ಆ ಅಜಾತಶತ್ರುವಾದ ಕಾಶೀರಾಜನು, ಇಷ್ಟೇನಾ! ಎಂದು ಕೇಳಿದ. ಆ ಗಾರ್ಗ್ಯನು ಇಷ್ಟೇ ಎಂದು ಸುಮ್ಮನಾಗಿಬಿಟ್ಟ. ಅಜಾತಶತ್ರುವಾದ ಕಾಶೀರಾಜನು "ಇಷ್ಟು ಮಾತ್ರ ತಿಳಿದುಕೊಂಡರೆ ಪರಬ್ರಹ್ಮವು ತಿಳಿಯುವುದಿಲ್ಲ ಎಂದನು. ಆಗ ಆ ಗಾರ್ಗ್ಯನು, ರಾಜನ್! ನಿನ್ನನ್ನು ಗುರುವಾಗಿ ಪ್ರಾರ್ಥಿಸಿ ಕೊಳ್ಳುತ್ತಿದ್ದೇನೆ. ನನ್ನನ್ನು ಶಿಷ್ಯನಾಗಿ ಅಂಗೀಕರಿಸು" ಎಂದು ಕೋರಿದ. (ಗಾರ್ಗ್ಯನಿಗೆ ಸೋಪಾದಿಕ ಬ್ರಹ್ಮಜ್ಞಾನ ಮಾತ್ರವೇ ತಿಳಿದಿತ್ತು.)

**ಮಂ.ಶ್ಲೋ॥ ಸ ಹೋವಾಚಾಜಾತಶತ್ರುಃ ಪ್ರತಿಲೋಮಂ (ಚೈ) ವೈತದ್ಯದ್ಬ್ರಾಹ್ಮಣಃ ಕ್ಷತ್ರಿಯಮುಪೇಯಾ -ದ್ಬ್ರಹ್ಮ ಮೇ ವಕ್ಷ್ಯತೀತಿವ್ಯೇವ ತ್ವಾ ಜ್ಞಾಪಯಿಷ್ಯಾಮೀತಿ ತಂ ಪಾಣಾವಾದಾಯೋತ್ತಸ್ಥೌ ತೌ ಹ ಪುರುಷಗ್ಂ ಸುಪ್ತ ಮಾ ಜಗ್ಮತುಸ್ತಮೇತ್ಯೈರ್ನಾಮಭಿರಾಮನ್ತ್ರಯಾಞ್ಚಕ್ರೇ ಬೃಹಾನ್ಪಾಣ್ಡರವಾಸಃ ಸೋಮರಾಜನ್ನಿತಿ ಸ ನೋತ್ತಸ್ಥೌತಂ ಪಾಣಿನಾ ಪೇಷಂ ಬೋಧಯಾ -ಞ್ಚಕಾರ ಸಹೋತ್ತಸ್ಥೌ (15)**

ತಾ: ಅಜಾತ ಶತ್ರುವಾದ ಕಾಶೀರಾಜನು ಈ ರೀತಿಯಾಗಿ ಭಾವಿಸಿದನು. ಬ್ರಹ್ಮ ಜ್ಞಾನವನ್ನು ಉಪದೇಶಿಸು ಎಂದು ಬ್ರಾಹ್ಮಣನು ಕ್ಷತ್ರಿಯನನ್ನು ಪ್ರಾರ್ಥಿಸುವುದು ಇಂದಿನ ಸಂಪ್ರದಾಯಕ್ಕೆ ವಿರುದ್ಧ-ವಾದುದು. ಆದರೂ ಈತನಿಗೆ ಆತ್ಮಜ್ಞಾನವನ್ನು ಬೋಧಿಸುತ್ತೇನೆ, ಎಂದು ಆ ಗಾರ್ಗ್ಯನ ಕೈ ಹಿಡಿದುಕೊಂಡು, ಎದ್ದು ಅವರಿಬ್ಬರೂ ಜೊತೆಯಾಗಿ ನಿದ್ರೆ ಮಾಡುತ್ತಿದ್ದ ಒಬ್ಬ ಮನುಷ್ಯನ ಹತ್ತಿರ ಹೋದರು. "ಎಲೈ ಸೋಮರಾಜಾ! ಶ್ವೇತವಸ್ತ್ರಗಳನ್ನು ಧರಿಸಿರುವಂತಹವನೇ!" ಎಂದು ಆತನನ್ನು ಅಜಾತಶತ್ರು ಕರೆದ. ನಿದ್ರೆ ಮಾಡುತ್ತಿರುವವನು ಏಳಲಿಲ್ಲ. ಆಗ ರಾಜನು ಆತನನ್ನು ಕೈಯಿಂದ ತಟ್ಟಿ ಕದಲಿಸಿದ. ಆಗ ಆತ ನಿದ್ರೆಯಿಂದ ಎಚ್ಚೆತ್ತ. ಸೋಪಾಧಿಕವಾದ ಪ್ರಾಣರೂಪರಾದ ಆದಿತ್ಯಾದಿ ಬ್ರಹ್ಮೋಪಾಸನೆಗಿಂತ ಬೇರೆಯಾದ ನಿರುಪಾಧಿಕ (ಬ್ರಹ್ಮ) ಪರಬ್ರಹ್ಮವು ಪ್ರತಿಪಾದಿಸತಕ್ಕದ್ದೆಂದು ಕಾಶೀರಾಜನು ಗಾರ್ಗ್ಯನಿಗೆ ಹೇಳಿದನು.

**ಮಂ.ಶ್ಲೋ॥ ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ ತದಾಭೂತ್ಕುತ ಏತದಾಗಾದಿತಿ ತದು ಹ ನ ಮೇನೇ ಗಾರ್ಗ್ಯಃ (16)**

ತಾ : ಕಾಶೀರಾಜನಾದ ಅಜಾತಶತ್ರುವು:- ಎಲೈ ಗಾರ್ಗ್ಯನೇ! ಈ ವಿಜ್ಞಾನಮಯ ಪುರುಷನು ನಿದ್ರಿಸಿದಾಗ ಎಲ್ಲಿಗೆ ಹೋಗಿರುತ್ತಾನೆ? ಆತ ಎಲ್ಲಿರುವನು? (ತ್ತಾನೆ) ಈಗ ಎಲ್ಲಿಂದ ಬಂದ? ಎಂದು ಪ್ರಶ್ನಿಸಿದ. ಗಾರ್ಗ್ಯನು "ನನಗೆ ಆ ವಿಷಯವು ಪೂರ್ತಿಯಾಗಿ ತಿಳಿಯದಾಗಿದೆ" ಎಂದ.

ಮಂ.ಶ್ಲೋ॥ ಸಹೋವಾಚಾಜಾತಶತ್ರುರ್ಯತ್ರೈಷ ಏತತ್ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷ -ಸ್ತದೈಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ ಶೇತೇ ತಾನಿ ಯದಾ ಗೃಹ್ಣಾತ್ಯಥ ಹೈತತ್ಪುರುಷಃ ಸ್ವಪಿತಿನಾಮ ತದ್ಗೃಹೀತ ಏವ ಪ್ರಾಣೋ ಭವತಿ ಗೃಹೀತಾ ವಾಕ್ ಗೃಹೀತಂ ಚಕ್ಷುಃ ಗೃಹೀತಗ್ಂ ಶ್ರೋತ್ರಂ ಗೃಹೀತಂ ಮನಃ (17)

ತಾ : ಕಾಶೀರಾಜ:- "ಈತನು ನಿದ್ರೆ ಮಾಡುತ್ತಿರುವ ಸಮಯದಲ್ಲಿ ಈ ವಿಜ್ಞಾನಮಯ ಪುರುಷನು, ಈ ಪ್ರಾಣಗಳು ವಿಜ್ಞಾನದೊಂದಿಗೆ ಸಹ ಸಂವೇದನ (ತಿಳಿದುಕೊಳ್ಳುವ ಶಕ್ತಿಯನ್ನು ಗ್ರಹಿಸಿ) ಸಾಮರ್ಥ್ಯವನ್ನು, ಹೃದಯಾಂತರ್ಗತವಾಗಿರುವ ಆಕಾಶದಲ್ಲಿ ವಿಶ್ರಾಂತಿ ಪಡೆಯುತ್ತಿರುತ್ತಾನೆ. ಪುರುಷನ ಜ್ಞಾನ ಸಾಮರ್ಥ್ಯಗಳು ಎಲ್ಲ ಕಾರಣಾಕಾರದಿಂದ ಘನೀಭವಿಸಿ ಏಕವಾಗಿರುವುದು ಆಗ ಪುರುಷನು ನಿದ್ರಿಸಿರುವನೆಂದು ಹೇಳುವರು. ಆಗ ಪ್ರಾಣವು ಒಳಕ್ಕೆ ಗ್ರಹಿಸಲ್ಪಟ್ಟಿರುತ್ತದೆ. ವಾಕ್ಕು, ಚಕ್ಷುಸ್ಸು, ಶ್ರೋತ್ರು ಮನಸ್ಸು ಇತ್ಯಾದಿ ವಿಜ್ಞಾನಸಾಮರ್ಥ್ಯವುಳ್ಳ ಇಂದ್ರಿಯಗಳೆಲ್ಲವೂ ಗ್ರಹಿಸಲ್ಪಟ್ಟಿರುತ್ತವೆ. ಈ ರೀತಿಯಾಗಿ ವಿಜ್ಞಾನಾತ್ಮವು ನಿದ್ರಾಸಮಯದಲ್ಲಿ ಸರ್ವೇಂದ್ರಿಯಗಳೆಲ್ಲವೂ ಉಪರತಿ ಹೊಂದಿ ಸೂಕ್ಷ್ಮ ದೇಹ ಸಂಬಂಧದ ಮೂಲಕ, ವಿಶೇಷಾತ್ಮ ಸ್ವರೂಪವನ್ನು ಬಿಟ್ಟು, ಅವಿಶೇಷವಾದ ಸ್ವಾಭಾವಿಕ-ವಾದಂತಹ ಕೇವಲಾತ್ಮದಲ್ಲಿದೆ.

ಮಂ.ಶ್ಲೋ॥ ಸ ಯತ್ರೈತತ್ ಸ್ವಪ್ನ್ಯಯಾ ಚರತಿ ತೇಹಾಸ್ಯ ಲೋಕಾಸ್ತದುತೇವ ಮಹರಾಜೋ ಭವತ್ಯುತೇವ ಮಹಾಬ್ರಾಹ್ಮಣ ಉತೇವೋಚ್ಚಾವಚಂ ನಿಗಚ್ಛತಿ ಸ ಯಥಾ ಮಹಾರಾಜೋ ಜಾನಪದಾನ್ ಗೃಹೀತ್ವಾ ಸ್ವೇ ಜನಪದೇ ಯಥಾ ಕಾಮಂ ಪರಿವರ್ತತ ಏವಮೇವೈಷ ಏತತ್ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ (18)

ತಾ : ವಿಜ್ಞಾನಮಯ ಸ್ವರೂಪನಾದ, ಈ ಜೀವಾತ್ಮ ಸ್ವಪ್ನವನ್ನು ಹೊಂದಿದಾಗ, ಪ್ರಸಿದ್ಧವಾದ ಲೋಕಗಳನ್ನು, (ಕರ್ಮಫಲಗಳನ್ನು) ಅನುಭವಿಸುತ್ತಿರುತ್ತದೆ. ಅಲ್ಲಿ ಮಹಾರಾಜನಂತೆಯೂ, ಮಹಾ ಬ್ರಾಹ್ಮಣನಂತೆಯೂ, ಅಧಿಕ ನೀಚಗಳಾದ ದೇವತ್ವ, ತಿರ್ಯಕ್ತ್ವಾದಿಕಗಳಂತೆಯೇ ಅನುಭವಿಸು-ತ್ತಿರುತ್ತದೆ. ಮಹಾರಾಜನಂತೆಯೇ ಈ ಜೀವನು ದೇಶದಲ್ಲಿರುವವರನ್ನು (ಭೃತ್ಯರನ್ನು ಅಥವಾ ಬೇರೆಯವರನ್ನು) ಪಾಲಿಸುತ್ತಾ ಸ್ವೇಚ್ಛೆಯಾಗಿ, (ಸ್ವತಂತ್ರವಾಗಿ) ತನ್ನ ಇಷ್ಟ ಪ್ರಕಾರ ನಡೆದುಕೊಳ್ಳು-ತ್ತಿದ್ದಾನೆ. ಈ ಪ್ರಕಾರವಾಗಿಯೇ, ಈ ವಿಜ್ಞಾನಮಯ ಆತ್ಮವನ್ನು, ವಾಗಾದೀಂದ್ರಿಯಗಳನ್ನು ಗ್ರಹಿಸಿ (ಜಾಗ್ರತ್‌ನಲ್ಲಿನ ಇಂದ್ರಿಯ (ವ್ಯಾಪಾರ)ಗಳನ್ನು ಉಪಸಂಹರಿಸಿ ತನ್ನ ದೇಹದಲ್ಲಿ ತನ್ನ ಇಷ್ಟಪ್ರಕಾರ ಜಾಗ್ರತಾವಸ್ಥೆಯಲ್ಲಿ ಅನುಭವಿಸಿದ ವಸ್ತುಗಳಿಗೆ ಸಮಾನವಾದ ಸ್ಮರಣೆಯನ್ನು ಅನುಭವಿಸುತ್ತಿರುತ್ತದೆ.

ಮಂ.ಶ್ಲೋ॥ ಅಥ ಯದಾ ಸುಷುಪ್ತೋ ಭವತಿ ಯದಾ ನ ಕಸ್ಯ ಚ ನ ವೇದ ಹಿತಾನಾಮ ನಾಡ್ಯೋ ದ್ವಾಸಪ್ತತಿಸಹಸ್ರಾಣಿ ಹೃದಯಾತ್ಪುರೀತತಮಭಿಪ್ರತಿಷ್ಠನ್ತೇ ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ ಸ ಯಥಾ ಕುಮಾರೋ ವಾ ಮಹಾರಾಜೋ ವಾ ಮಹಾಬ್ರಾಹ್ಮಣೋ ವಾತಿಘ್ನೀ -ಮಾನನ್ದಸ್ಯ ಗತ್ವಾ ಶಯೀತೈವಮೇವೈಷ ಏತಚ್ಛೇತೇ (19)

ತಾ : (ಸುಷುಪ್ತಿಯ ಸ್ವಭಾವ) ಇನ್ನು ಆತ ನಿದ್ರೆ ಮಾಡುತ್ತಿರುವಾಗ, ಎರಡನೆಯ ವಸ್ತುಜ್ಞಾನವು ಪೂರ್ತಿಯಾಗಿ ಇಲ್ಲದಿದ್ದಾಗ, ಹೃದಯದಿಂದ ಹೊರಟು, ಸರ್ವ ಶರೀರವನ್ನು ವ್ಯಾಪಿಸುವ ಹಿತಯೆನ್ನುವ ಹೆಸರುಳ್ಳ 72 ಸಾವಿರ ನಾಡಿಗಳಲ್ಲಿ ಹೊಕ್ಕು, ಅವನು ಶರೀರದಲ್ಲಿ ನಿದ್ರಿಸಿದ್ದಾನೆ. ಯಾವ ವಿಷಯ ವಾಸನೆಗಳೂ ಇಲ್ಲದೆ ಯಾರೋ, ಮಹಾರಾಜನೋ, ಬ್ರಾಹ್ಮಣನೋ, ಬಾಲನೋ ಅತ್ಯಂತ ಆನಂದ ಸ್ಥಿತಿಯಲ್ಲಿ ನಿದ್ರಿಸುವಂತೆ ಈಗ (ವಿಜ್ಞಾನಮಯ ಪುರುಷ) ನಿದ್ರಿಸುತ್ತಿರುತ್ತಾನೆ.

**ಮಂ.ಶ್ಲೋ॥ ಸ ಯಥೋರ್ಣ ನಾಭಿಸ್ತನ್ತುನೋಚ್ಚರೇದ್ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾವ್ಯುಚ್ಚರನ್ತೇವಮೇ -ವಾಸ್ಮಾದಾತ್ಮನಃ ಸರ್ವೇ ಪ್ರಾಣಾಸ್ಸರ್ವೇಲೋಕಾಸ್ಸರ್ವೇದೇವಾಸ್ಸರ್ವಾಣಿಭೂತಾನಿವ್ಯುಚ್ಚರನ್ತಿ ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್ (20)**

ತಾ : ಜೇಡರ ಹುಳುವಿನ ದೇಹದಿಂದ ಎಳೆಗಳು ದೇಹದಿಂದ ಹೊರಕ್ಕೆ ಬಂದಂತೆ, ಅಗ್ನಿಯಿಂದ ಕಿಡಿಗಳು ಹೊರಕ್ಕೆ ಹಾರುವಂತೆ, ಆತ್ಮದಿಂದ ಪ್ರಾಣಗಳು, ಸರ್ವಲೋಕಗಳು, ಸರ್ವದೇವತೆಗಳು, ಸಮಸ್ತ ಭೂತ ಪ್ರಾಣಿ ಜಾತವು ಉದ್ಭವಿಸುವವು. ಆ ಆತ್ಮ ಜ್ಞಾನವು ಸತ್ಯ ಸತ್ಯವಾಗಿದೆ. ಪ್ರಾಣಿಗಳ ಪರಮ ಸತ್ಯವಾದ ಅಸ್ತಿತ್ವವು ಆತ್ಮವೇ, ಪರಬ್ರಹ್ಮವೇ!

## ಚತುರ್ಥಾಧ್ಯಾಯ - ದ್ವಿತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಯೋ ಹ ವೈ ಶಿಶುಗ್ಂ ಸಾಧಾನಗ್ಂ ಸಪ್ರತ್ಯಾಧಾನಗ್ಂ ಸಸ್ಥೂಣಗ್ಂ ಸದಾಮಂ ವೇದ ಸಪ್ತ ಹ ದ್ವಿಷತೋ ಭ್ರಾತೃವ್ಯಾನವರುಣದ್ಧಿ । ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಸ್ತಸ್ಯೇದಮೇವಾಧಾನಮಿದಂ ಪ್ರತ್ಯಾಧಾನಂ - ಪ್ರಾಣಃ - ಸ್ಥೂಣಾನ್ನಂ-ದಾಮ (1)**

ತಾ : ಯಾರು ಸಾವಧಾನದಿಂದ ಪ್ರತ್ಯಾಧಾನದೊಂದಿಗೆ, ಸ್ತಂಭನದಿಂದ ಉಡುದಾರ-ದೊಂದಿಗಿರುವ ಪ್ರಾಣವೆನ್ನುವ ಶಿಶುವನ್ನು ತಿಳದುಕೊಳ್ಳುವನೋ, ಅವನು ದ್ವೇಷಿಸುವ ಸಹೋದರನ ಸಪ್ತಪುತ್ರರಾದ ವಿಷಯ ರಾಗಗಳನ್ನು ನಶಿಸಿಬಿಡುವಂತಹವಾಗುತ್ತಾನೆ. ಈ ಶರೀರದ ಮಧ್ಯ-ದಲ್ಲಿರುವ ಪ್ರಾಣವೇ ಶಿಶು. ಆ ಶಿಶುವಿಗೆ ಈ ಶರೀರವೇ ಆಧಾರ. ಈ ಶರೀರದಲ್ಲಿ ಅವನ ಸ್ವರೂಪವನ್ನು ಹೊಂದಿರುವ ಜ್ಞಾನೇಂದ್ರಿಯಗಳು ಪ್ರತ್ಯಾಧಾನ. ಪ್ರಾಣಶಕ್ತಿಯೇ ಸ್ತಂಭ. (ಪ್ರಾಣವೆನ್ನುವ ಶಿಶುವು ಈ ಶರೀರದಲ್ಲಿ ಆಧಾರಸ್ತಂಭವಾಗಿರುವ ಶಿಶುವಿನಂತರ ಇದೆ.) ಅನ್ನವು (ಭಕ್ಷಿಸಿದ ಅನ್ನವು ಮೂರು ವಿಧಗಳಾಗಿ ಮಾರ್ಪಡುತ್ತದೆ.) ಸ್ಥೂಲ-ಮಧ್ಯಮ-ಅಣಿಷ್ಠ(ಸೂಕ್ಷ್ಮ)ಗಳೆನ್ನುವ ಮೂರುರಸಗಳಲ್ಲಿ ಸ್ಥೂಲರಸ ಮೂತ್ರ-ಪುರೀಷಗಳಾಗಿ ಹೊರಬೀಳುತ್ತವೆ. ಎರಡನೆಯದಾದ ಮಧ್ಯಮರಸವು ರಕ್ತವಾಗಿಯೂ, ಸ್ವಕಾರ್ಯಗಳಾದ ತ್ವಕ್ಕು,ರಕ್ತ,ಮಾಂಸ,ಮೇಧಸ್ಸು,ಮಜ್ಜೆ,ಮೂಳೆ,ರೇತಸ್ಸು ಎನ್ನುವ ಏಳುರೂಪ(ಸಪ್ತಧಾತು)ಗಳಾಗಿ ವೃದ್ಧಿ ಹೊಂದುತ್ತವೆ. ಮೂರನೆಯದಾದ ಸೂಕ್ಷ್ಮರಸವು ಅಮೃತವೆಂದು, ಊರ್ಜವೆಂದು ಪ್ರಭಾವವೆಂದು ಹೇಳಲಾಗುತ್ತದೆ. ಅದು ನಾಭಿಗೆ ಊರ್ಧ್ವವಾಗಿ ಹೃದಯದಿಂದ ಹೊರಟು ದೇಹವನ್ನೆಲ್ಲ ವ್ಯಾಪಿಸಿರುವ ಎಪ್ಪತ್ತೆರಡುಸಾವಿರ ನಾಡಿಗಳಲ್ಲಿ ಪ್ರವೇಶಿಸಿ

ಸ್ಥೂಲವೆಂದು ಹೆಸರುಳ್ಳ ಬಲವನ್ನು ಉಂಟುಮಾಡುತ್ತದೆ. ಹೀಗೆ ಅನ್ನವು ಎರಡು ವಿಧವಾಗಿ (ಹುರಿ ಮಾಡಿದ ಹಗ್ಗದಂತೆಯೆ) ಪ್ರಾಣಶರೀರವನ್ನು ಬಂಧಿಸಿರುತ್ತದೆ.

**ಮಂ.ಶ್ಲೋ|| ತಮೇತಾಃ ಸಪ್ತಾಕ್ಷಿತ ಯ ಉಪತಿಷ್ಠನ್ತೇ ತದ್ಯಾ ಇಮಾ ಅಕ್ಷನ್ಲೋಹಿನ್ಯೋ ರಾಜಯಸ್ತಾಭಿ-ರೇನಗ್ಂ ರುದ್ರೋಽನ್ವಾಯತ್ತೋಽಥ ಯಾ ಅಕ್ಷನ್ನಾಪ ಸ್ತಾಭಿಃ ಪರ್ಜನ್ಯೋಯಾ ಕನೀನಿಕಾ ತಯಾದಿತ್ಯೋ ಯತ್ಕೃಷ್ಣಂ ತೇನಾಗ್ನಿರ್ಯಚ್ಛುಕ್ಲಂ ತೇನೇನ್ದ್ರೋಽಧರಯೈನಂ ವರ್ತನ್ಯಾ ಪೃಥಿವ್ಯನ್ವಾಯತ್ತಾ ದ್ಯೌರುತ್ತರಯಾ ನಾಸ್ಯಾನ್ನಂ ಕ್ಷೀಯತೇ ಯ ಏವಂ ವೇದ (2)**

ತಾ : ಈ ಪ್ರಾಣವು ಶಿಶು, ಸುಷುಪ್ತ್ಯವಸ್ಥೆಯಿಂದ ಜಾಗ್ರದವಸ್ಥೆಯಲ್ಲಿ ನೇತ್ರವನ್ನು ಹೊಂದಿರು-ವುದರಿಂದ. ಆ ಪ್ರಾಣವನ್ನು ರುದ್ರನು ನೇತ್ರದಲ್ಲಿನ ರಕ್ತ ರೇಖೆಗಳ ಮೂಲಕ ಹೊಂದುತ್ತಿದ್ದಾನೆ. ಪರ್ಜನ್ಯನು ನೇತ್ರದಲ್ಲಿ ಉಂಟಾಗುವ ಜಲದ ಮೂಲಕ ಹೊಂದುತ್ತಿದ್ದಾನೆ. ಸೂರ್ಯನು ನೇತ್ರದಲ್ಲಿನ ಕಪ್ಪು ಗುಡ್ಡೆಯ ಮೂಲಕ ಹೊಂದುತ್ತಿದ್ದಾನೆ. ಅಗ್ನಿಯು ನೇತ್ರದಲ್ಲಿರುವ ಕಪ್ಪು ಕಾಂತಿಯಿಂದ ಪಡೆಯುತ್ತಿದ್ದಾನೆ. ಇಂದ್ರನು ನೇತ್ರದಲ್ಲಿನ ಬಿಳಿಯ ಕಾಂತಿಯಿಂದ ಹೊಂದುತ್ತಿದ್ದಾನೆ. ಭೂಮಿಯು ನೇತ್ರದ ಕೆಳಗಿನ ರೆಪ್ಪೆಯ ಮೂಲಕ ಹೊಂದುತ್ತಿದೆ. ಅಂತರಿಕ್ಷವು ನೇತ್ರದ ಮೇಲಿನ ರೆಪ್ಪೆಯಿಂದ ಹೊಂದುತ್ತಿದೆ. ಈ ರೀತಿಯಾಗಿ ಅನ್ನ ಸ್ವರೂಪರಾದ ರುದ್ರಾದಿ ದೇವತೆಗಳು ಏಳು ಮಂದಿಯು, ಜಾಗ್ರತ್ತಿನಲ್ಲಿ ನೇತ್ರನಲ್ಲಿರುವ ಪ್ರಾಣವನ್ನು ಹೊಂದುವ ವಿವರಗಳನ್ನು ತಿಳಿದುಕೊಂಡವನಿಗೆ ಅನ್ನವು ಸಮೃದ್ಧಿಯಾಗಿ ದೊರೆಯುವುದು.

**ಮಂ.ಶ್ಲೋ|| ತದೇಷಶ್ಲೋಕೋ ಭವತಿ ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ಯಶೋ ನಿಹಿತಂ ವಿಶ್ವರೂಪಂ ತಸ್ಯಾಸತ ಋಷಯಸ್ಸಪ್ತತೀರೇವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ಯಶೋ ನಿಹಿತಂ ವಿಶ್ವರೂಪಮಿತಿ ಪ್ರಾಣಾ ವೈ ಯಶೋ ನಿಹಿತಂ ವಿಶ್ವರೂಪಂ ಪ್ರಾಣಾನೇತದಾಹ ತಸ್ಯಾಸತ ಋಷಯಃ ಸಪ್ತತೀರ ಇತಿ ಪ್ರಾಣಾ ವಾ ಋಷಯಃ ಪ್ರಾಣಾನೇತದಾಹ ವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ ವಾಗ್ಘ್ಯಷ್ಟಮೀ ಬ್ರಹ್ಮಣಾ ಸಂವಿಧತ್ತೇ (3)**

ತಾ : ಆ ಭಾವದಿಂದಾಗಿಯೇ ಕೆಳಗೆ ರಂಧ್ರವಿದ್ದು ಮೇಲೆ ದಪ್ಪಗಾಗಿರುವ ಚಮಸದಲ್ಲಿ ವಿಶ್ವರೂಪವಾದ ಯಶಸ್ಸನ್ನು ಇಡಲಾಗಿದೆ. ಆ ಪಾತ್ರೆಯ ಸಮೀಪದಲ್ಲಿ ಸಪ್ತಋಷಿಗಳು ಇದ್ದಾರೆ. ಬ್ರಹ್ಮವೇತ್ತ ಸಂವಾದ ನಡೆಸುವಂತಹ ವಾಕ್ಕು ಎಂಟನೆಯದು, ಇದೇ ಈ ಮಂತ್ರವಾಗಿದೆ. (ಮಂತ್ರಾರ್ಥವನ್ನು ಶ್ರುತಿಯೇ ವಿವರಿಸುತ್ತಿದೆ.) ಇದೇ ಕೆಳಗೆ ಬಿಲವನ್ನು ಹೊಂದಿ ಮೇಲೆ ದಪ್ಪಗಿರುವ ಸೋಮಪಾನ ಪಾತ್ರೆಯೆನ್ನುವ ಶಿರಸ್ಸು (ಅಂದರೆ ಶಿರಸ್ಸು ಪಾತ್ರೆಯ ಆಕಾರವನ್ನು ಹೊಂದಿದೆ.) ಇದು ಮುಖಬಿಲವನ್ನು ಹೊಂದಿ, ಮೇಲೆ ದಪ್ಪಗಿರುವುದರಿಂದ ಸೋಮಪಾನ ಆ ಪಾತ್ರೆಯಲ್ಲಿ (ಆ ಶಿರಸ್ಸಿನಲ್ಲಿ) ನಾನಾರೂಪವಾದ ಯಶಸ್ಸು ಅಡಗಿದೆ. ಪ್ರಾಣಗಳೇ ವಿಶ್ವರೂಪವಾದ ಯಶಸ್ಸು. ಈ ಮಂತ್ರವು ಶ್ರೋತ್ರಾದೀಂದ್ರಿಯಗಳನ್ನು ಕುರಿತು ಹೇಳಿದೆ. (ಶಿರಸ್ಸಿನಲ್ಲಿ ಶ್ರೋತ್ರ ಮೊದಲಾದ ಏಳು ವಾಯುಗಳು ಏಳು ವಿಧಗಳಾಗಿ ವ್ಯಾಪಿಸಿಕೊಂಡಿವೆ. ಇದನ್ನೇ ಯಶಸ್ಸು ಎಂದು ಮಂತ್ರವು ಹೇಳಿದೆ.)

ಆ ಪಾತ್ರೆಯ (ಶಿರಸ್ಸಿನ) ಸಮೀಪದಲ್ಲಿ ಏಳು ಋಷಿಗಳು ಇದ್ದಾರೆ. ಶ್ರೋತ್ರಾದಿಗಳಲ್ಲಿ ವ್ಯಾಪಿಸಿರುವ ಪ್ರಾಣವಾಯುಗಳೇ ಈ ಮಂತ್ರ, ಋಷಿಗಳು ಶ್ರೋತ್ರಾದಿಗಳನ್ನು ಕುರಿತು ಹೇಳಿದರು. ಬ್ರಹ್ಮ ಹೇಳಿದ ವಾಕ್ಕು ಎಂಟನೆಯದಾಗಿದೆ. (ವಾಗೀಂದ್ರಿಯವು ತಿನ್ನುವುದರಿಂದ ಸಪ್ತಮತ್ವವನ್ನು ಹೇಳುವುರಿಂದ ಅಷ್ಟಮತ್ವವು ಹೊಂದಲಾಗುವುದೆಂಬ ಭಾವ.)

**ಮಂ.ಶ್ಲೋ॥ ಇಮಾವೇವ ಗೌತಮ ಭರದ್ವಾಜಾವಯಮೇವ ಗೌತಮೋಽಯಂ ಭರದ್ವಾಜ ಇಮಾಮೇವ ವಿಶ್ವಾಮಿತ್ರ ಜಮದಗ್ನೀ ಅಯಮೇವ ವಿಶ್ವಾಮಿತ್ರೋಽಯಂ ಜಮದಗ್ನಿರಿಮಾವೇವ ವಸಿಷ್ಠ ಕಶ್ಯಪಾವಯಮೇವ ವಸಿಷ್ಠೋಽಯಂ ಕಶ್ಯಪೋ ವಾಗೇವಾತ್ರಿರ್ವಾಚಾಹ್ಯನ್ನಮದ್ಯತೇಽ-ತ್ರಿರ್ಹವೈ ನಾಮೈತದ್ಯದತ್ರಿರಿತಿ ಸರ್ವಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಂ ವೇದ (4)**

ತಾ : ಸೋಮಪಾನ ಪಾತ್ರಾಕೃತಿಯಾದ ಶಿರಸ್ಸಿನ ಸಮೀಪದಲ್ಲಿರುವ ಏಳು ಋಷಿಗಳು ಯಾರೆಂದರೆ, ದಕ್ಷಿಣದ ಕಿವಿ ಗೌತಮ ಋಷಿ. ಉತ್ತರದ ಕಿವಿ ಭರದ್ವಾಜ ಋಷಿ, ದಕ್ಷಿಣ ನೇತ್ರವು ವಿಶ್ವಾಮಿತ್ರ ಋಷಿ, ಉತ್ತರ ನೇತ್ರ ಜಮದಗ್ನಿ ಋಷಿ, ದಕ್ಷಿಣನಾಸಾಪುಟ (ಮೂಗಿನ ಹೊಳ್ಳೆ) ವಸಿಷ್ಠ ಋಷಿ, ಉತ್ತರನ್ಯಾಸಾಪುಟ ಕಶ್ಯಪ ಋಷಿ, ವಾಕ್ಕು ಅತ್ರಿಋಷಿ ಹೀಗೆ ಅತ್ರಿ ಶಬ್ದದ ನಿಶ್ಚಯವನ್ನು ತಿಳಿದುಕೊಂಡವನು ಪ್ರಾಣದ ಅನ್ನಜಾತವೆಲ್ಲದಕ್ಕೂ ಭೋಕ್ತನಾಗುವನು. ಈ ಪ್ರಕಾರವಾಗಿ ಶ್ರೋತ್ರಾ-ದೀಂದ್ರಿಯಗಳ ನಿಜಸ್ವರೂಪವನ್ನು ತಿಳಿದುಕೊಂಡವನು ಪ್ರಾಣದ ಅನ್ನಜಾತವೆಲ್ಲದಕ್ಕೂ ಭೋಕ್ತನಾ-ಗುವನು. ಈ ಪ್ರಕಾರವಾಗಿ ಶ್ರೋತ್ರಾದೀಂದ್ರಿಯಗಳ ನಿಜಸ್ವರೂಪವನ್ನು ತಿಳಿದು ಕೊಂಡವನು ಆಧಾನ ಪ್ರತ್ಯಾಧಾನಗಳನ್ನು ಹೊಂದಿ, ಮಧ್ಯಮ ಪ್ರಾಣ ಸ್ವರೂಪನಾಗಿ, ಅನ್ನಕ್ಕಿಂತ ಬೇರೆಯಾದ ಭೋಕ್ತನಾಗುತ್ತಿದ್ದಾನೆ. ಇವನಿಗೆ ಸಮಸ್ತವಾದ ಅನ್ನವು ಲಭಿಸುವುದು.

## ಚತುರ್ಥಾಧ್ಯಾಯ - ತೃತೀಯ ಬ್ರಾಹ್ಮಣಂ

**ಮಂ.ಶ್ಲೋ॥ ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ ಮರ್ತ್ಯಂ ಚಾಮೃತಂ ಚ ಸ್ಥಿತಂ ಚ ಯಚ್ಚ ಸಚ್ಚತ್ಯಚ್ಚ (1)**

ತಾ: ಪರಬ್ರಹ್ಮನಿಗೆ ಎರಡೇ ರೂಪಗಳು ಅವು ಯಾವುವೆಂದರೆ, ಮರಣಧರ್ಮವನ್ನು ಹೊಂದಿರುವಂತಹುದು. ಸ್ಥಿತವಾಗಿರುವಂತಹುದು (ಅವಧಿಯನ್ನು ಹೊಂದಿರುವಂತಹುದು). ಮೂರ್ತತ್ವ ಮರ್ತ್ಯತ್ವ ಸ್ಥಿತತ್ವಗಳಿಂದ ವಿಶೇಷ್ಯವಾದಂತಹುದಾಗಿ, ಸಾಧಾರಣ ಧರ್ಮವಿಶೇಷವನ್ನು ಹೊಂದಿರುವಂತಹುದಾಗಿರುತ್ತದೆ. ಅಮೂರ್ತ ಸ್ವರೂಪವೇ ಮರಣ ಧರ್ಮವಿಲ್ಲದಂತಹುದಾಗಿ, ಎಲ್ಲವನ್ನೂ ವ್ಯಾಪಿಸಿ ಅವಧಿ ಅಥವಾ ಇರುವಂತಹುದಾಗುವುದು. ಅದೇ ಪ್ರತ್ಯಕ್ಷವಾಗದ ಅಮೂರ್ತ ಸ್ವರೂಪವು ಕೂಡಾ (ಹೌದು.)

**ಮಂ.ಶ್ಲೋ॥ ತದೇತನ್ಮೂರ್ತಂ ಯದಸ್ಯದ್ವಾಯೋಶ್ಚಾನ್ತರಿಕ್ಷಾಚ್ಚೈತನ್ಮರ್ತ್ಯಮೇ ತತ್ಸ್ಥಿತಮೇತತ್ಸತ್ತಸ್ಯೈತಸ್ಯ ಮೂರ್ತಸ್ಯೈತಸ್ಯಮರ್ತ್ಯಸ್ಯೈತಸ್ಯಸ್ಥಿತಿಸ್ಯೈತಸ್ಯ ಸತ ಏಷ ರಸೋ ಯ ಏಷ ತಪತಿ ಸತೋಹ್ಯೇಷ ರಸಃ (2)**

ತಾ : ಪರಬ್ರಹ್ಮಕ್ಕೆ ಹೇಳಿದ ಮೂರ್ತಾ ಮೂರ್ತ ಸ್ವರೂಪಗಳೆರಡರಲ್ಲೂ; ಮೂರ್ತ ಸ್ವರೂಪವು ಯಾವುದೆಂದರೆ ವಾಯ್ವಾಕಾಶಗಳಿಗಿಂತ ಬೇರೆಯಾದ ಭೂಮಿ, ಜಲ, ತೇಜಸ್ಸು ಈ ಮೂರು. ಇದು ಅವಯವಗಳೊಂದಿಗೆ ಕೂಡಿದ ಆಕಾರವಾದುದರಿಂದ ಮರಣ ಧರ್ಮವಿದೆ. ಮತ್ತು ಅವಧಿಯುಳ್ಳದ್ದಾಗಿಯೂ ಪ್ರತ್ಯಕ್ಷವಾದಂತಹುದಾಗಿಯೂ ಆಗುತ್ತಿದೆ. ಈ ರೀತಿ ಆಕಾರವುಳ್ಳದ್ದಾಗಿಯೂ, ಮರಣ ಧರ್ಮವುಳ್ಳದ್ದಾಗಿಯೂ, ಅವಧಿಯನ್ನು ಹೊಂದಿರುವಂತಹದ್ದಾಗಿಯೂ, ಪ್ರತ್ಯಕ್ಷವಾದಂತಹ ಪೃಥಿವ್ಯಪ್ತೇಜಸ್ಸುಗಳ ಸಾರವೇ ಈ ಲೋಕವನ್ನು ತಪಿಸುವಂತೆ ಮಾಡುವ ಸೂರ್ಯ ಮಂಡಲ.

**ಮಂ.ಶ್ಲೋ॥ ಅಥಾಽಮೂರ್ತಂ ವಾಯುಶ್ಚಾನ್ತರಿಕ್ಷಂ ಚೈತದಮೃತಮೇತದ್ಯದೇತತ್ತ್ಯತ್ತಸ್ಯೈತಸ್ಯಾಮೂರ್ತಸ್ಯೈ -ತಸ್ಯಾಮೃತಸ್ಯೈತಸ್ಯ ಯತ ಏತಸ್ಯತ್ಯಸ್ಯೈಷ ರಸೋಽಯ ಏಷ ಏತಸ್ಮಿನ್ನಂಡಲೇ ಪುರುಷ -ಸ್ತ್ಯಸ್ಯ ಹ್ಯೇಷ ರಸ ಇತ್ಯಧಿದೈವತಮ್ (3)**

ತಾ : ಈಗ ಚೇತನಾತ್ಮಕವಾದ ಅಮೂರ್ತಸ್ವರೂಪವನ್ನು ವಿವರಿಸಲಾಗುತ್ತದೆ. ಆ ಅಮೂರ್ತ ಸ್ವರೂಪ ಯಾವುವೆಂದರೆ ಇದಕ್ಕೆ ಮುಂಚೆ ಹೇಳಿದ ಪೃಥಿವ್ಯಾಪ್‌ಸ್ತೇಜಸ್ಸುಗಳಿಗಿಂತ ಬೇರೆಯಾದ ಮರಣ ಧರ್ಮವಿಲ್ಲದಂತಹ ವಾಯ್ವಾಕಾಶಗಳು; ಮರಣ ಧರ್ಮವಿಲ್ಲದ್ದಾದುದರಿಂದಲೇ ಸರ್ವ ವ್ಯಾಪಕವಾದವುಗಳು. ವ್ಯಾಪಕವಾದುದರಿಂದಲೇ ಅದೃಶ್ಯವಾಗಿ ಇರುತ್ತವೆ. ಈ ವಾಯ್ವಾಕಾಶಗಳು ಭೂತದ್ವಯಗಳ ಸಾರವೇ, ಸೂರ್ಯಮಂಡಲಾಂತರ್ಗತವಾದ ಅಧಿದೈವಿಕ ಪುರುಷನು.

**ಮಂ.ಶ್ಲೋ॥ ಅಥಾಧ್ಯಾತ್ಮಮಿದಮೇವ ಮೂರ್ತಂ ಯದನ್ಯತ್ ಪ್ರಾಣಾಚ್ಚ ಯಶ್ಚಾಯಮನ್ತರಾತ್ಮನ್ನಾಕಾಶ ಏತನ್ಮರ್ತ್ಯಮೇತತ್ಸ್ಥಿತಮೇತತ್ಸತ್ತಸ್ಸ್ೕತಸ್ಯ ಮೂರ್ತಸ್ಯೈತಸ್ಯ ಮರ್ತ್ಯಸ್ಯೈತನ್ಯಸ್ಥಿತಸ್ಯೈತಸ್ಯ ಸತ ಏಷ ರಸೋ ಯಚ್ಚಕ್ಷುಃ ಸತೋ ಹ್ಯೇಷ ರಸಃ (4)**

ತಾ : ಈಗ ಅಧ್ಯಾತ್ಮ ಸ್ವರೂಪವನ್ನು ವಿವರಿಸಲಾಗುತ್ತಿದೆ. ಪ್ರಾಣವಾಯುವಿಗಿಂತಲೂ, ಶರೀರದ ಒಳಗಿರುವ ಆಕಾಶವು ಬೇರೆಯಾಗಿದೆ. ಇದೇ ಮೂರ್ತ ಸ್ವರೂಪ. ಇದು ಪರಿಚ್ಛಿನ್ನವಾದುದು ಮತ್ತು ಪ್ರತ್ಯಕ್ಷವಾದುದು. ಅಂತಹ ಸಮೂರ್ತಸ್ವರೂಪವುಳ್ಳ, ಪರಿಚ್ಛೇದವುಳ್ಳ ಮರಣಧರ್ಮವನ್ನು ಹೊಂದಿದ ಪೃಥಿವ್ಯಪ್ತೇಜಸ್ಸುಗಳನ್ನೊಳಗೊಂಡ ಸಾರವೇ ಈ ನೇತ್ರಗಳು. ಈ ಸ್ಥೂಲ ಶರೀರದಲ್ಲಿನ ನೇತ್ರವು ಅಧಿದೈವತದಲ್ಲಿ ಪೃಥಿವ್ಯಪ್ತೇಜಸ್ಸುಗಳ ಸಾರವಾದ ಸೂರ್ಯ ಮಂಡಲದಂತೆಯೇ, ಅಧ್ಯಾತ್ಮದಲ್ಲಿ ಭೂತತ್ರಯ ಸಾರವಾಗುತ್ತಿದೆ. (ಸೂರ್ಯ ಮಂಡಲವು ಅಧಿದೈವ)

**ಮಂ.ಶ್ಲೋ॥ ಅಥಾ ಮೂರ್ತಂ ಪ್ರಾಣಶ್ಚ ಯಶ್ಚಾಯಮನ್ತರಾತ್ಮನ್ನಾಕಾಶ ಏತದಮೃತಮೇತದ್ಯದೇ- ತತ್ತ್ಯತ್ತಸ್ಯೈತಸ್ಯಾಮೂರ್ತಸ್ಯೈತಸ್ಯಾಮೃತಸ್ಯೈತಸ್ಯ ಯತ ಏತಸ್ಯತ್ಯಸ್ಯೈಷ ರಸೋ ಯೋಽಯಂ ದಕ್ಷಿಣೇಽಕ್ಷನ್ ಪುರುಷ ಸ್ತ್ಯಸ್ಯ ಹ್ಯೇಷ ರಸಃ (5)**

ತಾ : ಈಗ ಅಮೂರ್ತ ಸ್ವರೂಪವನ್ನು ಹೇಳಲಾಗುತ್ತಿದೆ. ಈ ದೇಹದಲ್ಲಿನ ಪ್ರಾಣಾಕಾಶಗಳು ಎರಡೂ ಅಮೂರ್ತ ಸ್ವರೂಪವಾದುದು. ಇದು ಮರಣಧರ್ಮವಿಲ್ಲದಂತಹುದು, ವ್ಯಾಪಕವಾದುದು, ಪ್ರತ್ಯಕ್ಷವಲ್ಲದ್ದು ಆಗುತ್ತಿದೆ. ಈ ರೀತಿಯಾಗಿ ಅಮೂರ್ತತ್ವಾದಿ ಧರ್ಮದೊಂದಿಗೆ ಕೂಡಿದ

ವಾಯ್ವಾಕಾಶಗಳ ಸಾರವೇ ಈ ಲಿಂಗ ಶರೀರ. ಇದರ ದಕ್ಷಿಣ ನೇತ್ರದಲ್ಲಿರುವ ಪುರುಷನು. ವಾಯ್ವಾಕಾಶಗಳೆನ್ನುವ ಭೂತದ್ವಯದ ಸಾರವೇ ಆಗಿ ಅಧ್ಯಾತ್ಮ ಸ್ವರೂಪನಾಗುತ್ತಿದ್ದಾನೆ.

**ಮಂ.ಶ್ಲೋ॥ ತಸ್ಯ ಹೈತಸ್ಯ ಪುರುಷಸ್ಯ ರೂಪಂ ಯಥಾ ಮಹಾರಜನಂ ವಾಸೋ ಯಥಾ ಪಾಣ್ಡ್ವಾ-ವಿಕಂ ಯಥೇನ್ದ್ರಗೋಪೋ ಯಥಾಽಗ್ನ್ಯರ್ಚಿರ್ಯಥಾ ಪುಣ್ಡರೀಕಂ ಯಥಾ ಸಕೃದ್ವಿದ್ಯುತ್ತಗ್ಂ ಸಕೃದ್ವಿದ್ಯುತ್ತೇವ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ ವೇದಾಥಾತ ಆದೇಶೋ ನೇತಿ ಸ ಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತ್ಯಥ ನಾಮಧೇಯಗ್ಂ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್ (6)**

ತಾ : ಆ ಪ್ರಸಿದ್ಧವಾದ ಲಿಂಗಶರೀರಾತ್ಮಕ ಪುರುಷನ ಸ್ವರೂಪವು ಕೆಂಪಗಿರುವ ವಸ್ತ್ರದಂತೆಯೂ, ಬಿಳಿಯ ಕಂಬಳಿಯಂತೆಯೂ, ಮಿಂಚಿನ ಹುಳದಂತೆಯೂ, ಅಗ್ನಿಜ್ವಾಲೆಯಂತೆಯೂ, ಶುಕ್ಲ-ದಂತೆಯೂ, ಮಿಂಚಿನ ಹಾಗೆಯೂ ಇದೆ. ಯಾರು ಈ ಪ್ರಕಾರವಾಗಿ ತಿಳಿದುಕೊಳ್ಳುತ್ತಾನೋ, ಅಂತಹವನ ಶೋಭೆಯು ಪ್ರಸಿದ್ಧಿಯಾಗಿ ಎಲ್ಲೆಲ್ಲೂ ಪ್ರಕಾಶಿಸುತ್ತಿರುತ್ತದೆ. ಅನಂತರ ನೇತಿನೇತಿಯೆನ್ನುವ ಈ ನಕಾರಗಳೆರಡರಿಂದಲೂ, ಪರಬ್ರಹ್ಮನ ನಿರ್ದೇಶ(ಆದೇಶ)ವನ್ನು ಹೇಳಲಾಗಿದೆ. ಇದಕ್ಕಿಂತ ಬೇರೆಯಾದುದು ಇಲ್ಲವೇ ಇಲ್ಲ. ಈ ಹಿಂದೆ ಹೇಳಿರುವುದೇ ಪರಬ್ರಹ್ಮ ನಿರ್ದೇಶವು. ಪರಬ್ರಹ್ಮಕ್ಕೆ ಸತ್ಯಾಸತ್ಯವಾದುದೆಂಬ ಹೆಸರುಂಟು. ಶ್ರೋತ್ರಾದೀಂದ್ರಿಯಗಳು ಸತ್ಯ ಸ್ವರೂಪ. ಆ ಪ್ರಾಣಗಳಲ್ಲಿರುವ ಈ ಪ್ರತ್ಯಗಾತ್ಮ ವಿಜ್ಞಾನಾತ್ಮ ಸತ್ಯ ಸ್ವರೂಪ.

## ಚತುರ್ಥಾಧ್ಯಾಯ - ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ॥ ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯ ಉದ್ಯಾಸ್ಯನ್ವಾ ಅರೇಽಹಮಸ್ಮಾತ್ ಸ್ಥಾನಾದಸ್ಮಿ ಹನ್ತ ತೇಽನಯಾ ಕಾತ್ಯಾಯನ್ಯಾಽನ್ತಂ ಕರವಾಣೀತಿ (1)**

ತಾ : ಯಾಜ್ಞವಲ್ಕ್ಯ ಮಹರ್ಷಿ ಮೈತ್ರೇಯಿಯನ್ನು ಕರೆದು, ಮೈತ್ರೇಯೀ! ನಾನು ಈ ಗೃಹಸ್ಥಾಶ್ರಮದಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದಿದ್ದೇನೆ. ನಿನ್ನ ಅನುಮತಿಯನ್ನು ಕೋರುತ್ತಿದ್ದೇನೆ. ನಿನಗೆ, ಈ ಕಾತ್ಯಾಯಿನಿಗೆ ನನ್ನ ಸಂಪತ್ತನ್ನು ವಿಭಜಿಸಿ ಕೊಡುತ್ತಿದ್ದೇನೆ'' ಎಂದು ಹೇಳಿದನು.

**ಮಂ.ಶ್ಲೋ॥ ಸಾ ಹೋವಾಚ ಮೈತ್ರೇಯೀ ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾಸ್ಯಾತ್ಕಥಂ ತೇನಾಮೃತಾಸ್ಯಾಮಿತಿ ನೇತಿ ಹೋವಾಚ ಯಾಜ್ಞವಲ್ಕ್ಯೋ ಯಥೈ -ವೋಪಕರಣವತಾಂ ಜೀವಿತಂ ತಥೈವ ತೇ ಜೀವಿತಗ್ಂ ಸ್ಯಾದಮೃತತ್ವಸ್ಯ ತು ನಾಶಾಸ್ತಿ ವಿತ್ತೇನೇತಿ (2)**

ತಾ : ಈ ರೀತಿಯಾಗಿ ಯಾಜ್ಞವಲ್ಕ್ಯ ಮುನಿಯು ಹೇಳಲು ಮೈತ್ರೇಯಿ, "ಓ ಯಾಜ್ಞವಲ್ಕ್ಯ ಮಹರ್ಷಿಯೇ! ಸಮುದ್ರದಿಂದ ಆವರಿಸಲ್ಪಟ್ಟಿರುವ ಈ ಸಮಸ್ತ ಭೂಮಿಯನ್ನು ಧನದಿಂದ ತುಂಬಲಾಗುತ್ತದೆಯೇ? ಆ ಧನದಿಂದ ನಾನು ಮುಕ್ತಳಾಗಬಲ್ಲೆನೇ?'' ಎಂದು ಕೇಳಿದಳು. ಯಾಜ್ಞವಲ್ಕ್ಯ

ಮಹರ್ಷಿ:- ಲೋಕದಲ್ಲಿ ಸಮಸ್ತ ಸಾಧನಗಳುಳ್ಳವರಿಗೆ ಸುಖಜೀವನವು ಯಾವ ರೀತಿ ಪ್ರಾಪ್ತಿಯಾಗುವುದೋ ಆ ವಿಧವಾಗಿಯೇ ನಿನಗೂ ಧನದಿಂದ ಸುಖಜೀವನ ಪ್ರಾಪ್ತಿಯಾಗುತ್ತದೆ. ಆದರೆ ಮೋಕ್ಷವು ಲಭಿಸುವುದಿಲ್ಲ." ಎಂದ.

**ಮಂ.ಶ್ಲೋ॥ಸಾ ಹೋವಾಚ ಮೈತ್ರೇಯೀ ಯೇನಾಹಂ ನಾಮೃತಾಸ್ಯಾಂ ಕಿಮಹಂ ತೇನ ಕುರ್ಯಾಂ ಯದೇವ ಭಗವಾನ್ವೇದ ತದೇವ ಮೇ ಬ್ರೂಹೀತಿ (3)**

ತಾ: ಮೈತ್ರೇಯಿ ಯಾವ ಧನದಿಂದ ನನಗೆ ಮೋಕ್ಷವು ಲಭಿಸುವುದಿಲ್ಲವೋ ಅಂತಹ ಧನದಿಂದ ನನಗೇನು ಪ್ರಯೋಜನ? ಪೂಜ್ಯನಾದ ನೀನು ಯಾವುದನ್ನು ಮುಕ್ತಿಸಾಧನವಾಗಿ ತಿಳಿದುಕೊಂಡಿದ್ದೀಯೋ, ಅದನ್ನೇ ನನಗೂ ಕೂಡಾ ಅನುಗ್ರಹಿಸು.

**ಮಂ.ಶ್ಲೋ॥ ಸಹೋವಾಚ ಯಾಜ್ಞವಲ್ಕ್ಯಃ ಪ್ರಿಯಾ ಬತಾರೇ ನಃ ಸತೀಃ ಪ್ರಿಯಂ ಭಾಷ ಸ ಏಹ್ಯಾಸ್ಸ್ವವ್ಯಾಖ್ಯಾಸ್ಯಾಮಿ ತೇ ವ್ಯಾಚಕ್ಷಾಣಸ್ಯತು ಮೇ ನಿದಿಧ್ಯಾಸಸ್ವೇತಿ (4)**

ತಾ: ಆ ಯಾಜ್ಞವಲ್ಕ್ಯನು ಸಂತೋಷ ಗೊಂಡು ಮೈತ್ರೇಯೀ! ಹಿಂದೆ ನನಗೆ ನೀನು ಪ್ರಿಯಳಾಗಿದ್ದಿ. ಈಗಲೂ ಕೂಡಾ ಹಾಗೆಯೇ ಪ್ರಿಯವಾದ ಮಾತುಗಳನ್ನೇ ಆಡುತ್ತಿರುವೆ. ಬಾ ಕುಳಿತುಕೋ. ನಿನಗೆ ಪ್ರಿಯವಾದ ಮೋಕ್ಷಸಾಧಕವಾದ ಬ್ರಹ್ಮಜ್ಞಾನವನ್ನು ತಿಳಿಸಿ ಹೇಳುವೆನು. ನನ್ನ ಮಾತುಗಳನ್ನು ಅರ್ಥಮಾಡಿಕೊಂಡು ಧ್ಯಾನಿಸುತ್ತಾ ವಾಂಛಿಸು" ಎಂದು ನುಡಿದ.

**ಮಂ.ಶ್ಲೋ॥ ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ, ಸ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ, ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ, ಭವತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ, ನವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ, ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಬ್ರಹ್ಮಾ ಪ್ರಿಯಂ ಭವತಿ, ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ, ನ ವಾ ಅರೇ ಲೋಕಾನಾಂ ಕಾಮಾಯ ಲೋಕಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಲೋಕಾಃ ಪ್ರಿಯಾ ಭವನ್ತಿ, ನ ವಾ ಅರೇ ದೇವಾನಾಂ ಕಾಮಾಯ ದೇವಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವಂತಿ, ನ ವಾ ಅರೇ ಭೂತಾನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವನ್ತ್ಯಾತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವನ್ತಿ, ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ, ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಗ್ಂ ಸರ್ವಂ ವಿದಿತಮ್ (೫)**

ತಾ : ಯಾಜ್ಞವಲ್ಕ್ಯ:- ಓ ಮೈತ್ರೇಯಿ! ಹೆಂಡತಿಯಾದವಳು ತನ್ನ ಪತಿಯ ಪ್ರಯೋಜನಕ್ಕಾಗಿ ಪ್ರಿಯವಾಗಿ ಇರುವುದಿಲ್ಲ. ತನ್ನ ಆತ್ಮದ ಪ್ರಯೋಜನದ ನಿಮಿತ್ತವಾಗಿಯೇ ಪ್ರಿಯವಾಗುತ್ತಾಳೆ. ಅದೇ ರೀತಿಯಾಗಿ ಪತಿಯು ತನ್ನ ಪತ್ನಿಯಲ್ಲಿಯೂ, ತಂದೆಯು ಮಗನಲ್ಲಿಯೂ, ಒಬ್ಬರು ಧನದಲ್ಲಿಯೂ, ಮತ್ತೊಬ್ಬರು ಬ್ರಾಹ್ಮಣನಲ್ಲಿಯೂ, ಇನ್ನೊಬ್ಬರು ಕ್ಷತ್ರಿಯನಲ್ಲಿಯೂ, ಮತ್ತ್ಯಾರೋ ಜನರಲ್ಲಿಯೂ ಮತ್ತೊಬ್ಬರು ದೇವತೆಗಳಲ್ಲಿಯೂ, ಇನ್ನೊಬ್ಬರು ಪ್ರಾಣಿಗಳಲ್ಲಿಯೂ ಹಲವರು ಸಮಸ್ತ-ದಲ್ಲಿಯೂ ಪ್ರೀತಿಯುಳ್ಳವರಾಗಿರುತ್ತಾರೆ. ಎಲ್ಲವೂ ಆತ್ಮಕ್ಕಾಗಿಯೇ ಹೊರತು ಮತ್ತ್ಯಾವುದಕ್ಕಾಗಿಯೂ ಅಲ್ಲ. ಆತ್ಮವೇ ದರ್ಶನ ಮಾಡತಕ್ಕಂತಹುದಾಗಿರುತ್ತದೆ. ಆತ್ಮವೇ ಕೇಳತಕ್ಕದ್ದಾಗಿರುತ್ತದೆ. ಆತ್ಮವೇ ಭಾವಿಸತಕ್ಕಂತಹುದು. ಆತ್ಮವೇ ಧ್ಯಾನಿಸತಕ್ಕಂತಹುದು. ಆತ್ಮದ ದರ್ಶನದಿಂದಲೂ, ಶ್ರವಣದಿಂದಲೂ, ಸ್ಮರಣದಿಂದಲೂ, ಧ್ಯಾನದಿಂದಲೂ ಸಮಸ್ತವನ್ನು ಅನುಭವಕ್ಕೆ ತಂದುಕೊಳ್ಳಬಹುದು.

**ಮಂ.ಶ್ಲೋ॥ ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮವೇದ ಕ್ಷತ್ರಂ ತಂ ಪರಾರಾದ್ಯೋಽನ್ಯ-ತ್ರಾತ್ಮನಃ ಕ್ಷತ್ರಂ ವೇದ ಲೋಕಾಸ್ತಂ ಪರಾ ದುರ್ಯೋಽನ್ಯತ್ರಾತ್ಮನೋ ಲೋಕಾನ್ವೇದ ದೇವಾಸ್ತಂ ಪರಾದುರ್ಯೋನ್ಯತ್ರಾತ್ಮನೋ ದೇವಾನ್ವೇದ ಭೂತಾನಿ ತಂ ಪರಾದುರ್ಯೋಽ-ನ್ಯತ್ರಾತ್ಮನೋ ಭೂತಾನಿ ವೇದ ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದೇದಂ ಬ್ರಹ್ಮೇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮಾನಿ ಭೂತಾನೀದಗ್ಂ ಸರ್ವಂ ಯದಯಮಾತ್ಮಾ (6)**

ತಾ : ಆತ್ಮವೇ ಸರ್ವಸ್ವರೂಪವು. ಯಾರು ಈ ಬ್ರಾಹ್ಮಣ ಜಾತಿಯನ್ನು, ಕ್ಷತ್ರಿಯ ಜಾತಿಯನ್ನು, ಲೋಕಗಳನ್ನು, ದೇವತೆಗಳನ್ನು, ಭೂತಗಳನ್ನು ಮತ್ತು ಈ ಸಮಸ್ತವನ್ನೂ ಆತ್ಮ ಸ್ವರೂಪಕ್ಕಿಂತ ಬೇರೆಯಾಗಿ ಕಾಣುವನೋ, ಅವನನ್ನು ಈ ಬ್ರಾಹ್ಮಣಾದಿ ಸಮಸ್ತದಿಂದಲೂ ಬೇರೆಯಾಗಿ ಮಾಡುತ್ತದೆ. ಈ ಕಾಣಿಸುವ ಬ್ರಹ್ಮಕ್ಷತ್ರಾದಿ ಸಮಸ್ತವೂ ಸೃಷ್ಟಿಯ ಸಮಯದಲ್ಲಿ ಆತ್ಮದಿಂದ ಹುಟ್ಟಿ, ಲಯಕಾಲದಲ್ಲಿ ಆತ್ಮದಲ್ಲೇ ಲೀನವಾಗಿ, ಸ್ಥಿತಿ ಕಾಲದಲ್ಲಿ ಆತ್ಮಸ್ವರೂಪವಾಗುತ್ತದೆ. ಆತ್ಮಕ್ಕಿಂತ ಬೇರೆಯಾಗಿ ಇನ್ನ್ಯಾವುದನ್ನೂ ತಿಳಿಸಲಾಗುವುದಿಲ್ಲ. ಈ ಸರ್ವವೂ ಆತ್ಮ ಸ್ವರೂಪವಾಗಿಯೇ ಇದೆ. ಆದ್ದರಿಂದಲೇ ಈ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿದುಕೊಂಡು ಆತ್ಮವೇ ತಾನಾಗುವುದರಿಂದ, ಸರ್ವವೂ ಆತನೇ ಆಗುತ್ತಿದ್ದಾನೆ.

**ಮಂ.ಶ್ಲೋ॥ ಸ ಯಥಾ ದುನ್ದುಭೇರ್ಹನ್ಯಮಾನಸ್ಯ ನ ಬಾಹ್ಯಾಞ್ಛಬ್ದಾನ್ ಶಕ್ನುಯಾದ್ಗ್ರಹಣಾಯ ದುನ್ದುಭೇಸ್ತು ಗ್ರಹಣೇನ ದುನ್ದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ (7)**

ತಾ : ಲೋಕದಲ್ಲಿ ಕೋಲಿನಿಂದ ಭೇರಿ ಮುಂತಾದವುಗಳನ್ನು ಹೊಡೆದಾಗ, ಬಾಹ್ಯಶಬ್ದಗಳು ಆ ಭೇರಿಯ ಧ್ವನಿಯನ್ನು ಮೀರಲಾರದು. ಅದೇ ರೀತಿಯಾಗಿ ಪ್ರಜ್ಞಾನ ಸ್ವರೂಪಕ್ಕಿಂತ ಬೇರೆಯಾಗಿ ಯಾವುದೂ ಇಲ್ಲವಾದುದರಿಂದ, ಸ್ವಪ್ನ ಜಾಗ್ರದವಸ್ಥೆಗಳಲ್ಲಿಯೂ ಸಹ ಪ್ರಜ್ಞಾನವೇ ಪ್ರಕಾಶಿಸುತ್ತಿರುತ್ತದೆ. ಆದ್ದರಿಂದ ಪ್ರಜ್ಞಾನಸ್ವರೂಪವಾದ ಪರಬ್ರಹ್ಮರೂಪವನ್ನು ತಿಳಿದುಕೊಳ್ಳುವುದರಿಂದ ಅದಕ್ಕಿಂತ ಬೇರೆ ಯಾವುದೂ ಇಲ್ಲ. ಸರ್ವವೂ ಆತ್ಮ ಮಾತ್ರವೇ ಎಂದು ಸ್ಪಷ್ಟವಾಗುತ್ತಿದೆ.

ಮಂ.ಶ್ಲೋ॥ ಸ ಯಥಾ ಶಙ್ಖಸ್ಯ ಧ್ಮಾಯಮಾನಸ್ಯ ನ ಬಾಹ್ಯೋಽಞ್ಛಬ್ದಾನ್ ಶಕ್ನುಯಾದ್ಗ್ರಹಣಾಯಃ ಶಙ್ಖಸ್ಯ ತು ಗ್ರಹಣೇನ ಶಙ್ಖಧ್ಮಸ್ಯ ಶಬ್ದೋ ಗೃಹೀತಃ (8)

ತಾ : ಶಂಖವನ್ನು ಊದಿದಾಗ ಬಾಹ್ಯಶಬ್ದಗಳನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಶಂಖದ ಶಬ್ದ ಮಾತ್ರವೇ ಕೇಳಬರುವುದು. ಆ ಪ್ರಕಾರವಾಗಿ ಆತ್ಮಸ್ವರೂಪವನ್ನು ತಿಳಿದುಕೊಳ್ಳುವುದರಿಂದ ಅನ್ಯವಾದ ವಿಶೇಷವ್ಯಾವುದೂ ಇಲ್ಲದಿರುವುದರಿಂದ ಸರ್ವವೂ ಬ್ರಹ್ಮಸ್ವರೂಪವಾಗುತ್ತಿದೆ.

ಮಂ.ಶ್ಲೋ॥ ಸ ಯಥಾ ವೀಣಾಯ್ಯೈ ವಾದ್ಯಮಾನಾಯ್ಯೈ ಸ ಬಾಹ್ಯಾಞ್ಛಬ್ದಾನ್ ಶಕ್ನುಯಾದ್ಗ್ರಹಣಾಯ ವೀಣಾಯ್ಯೈ ತು ಗ್ರಹಾಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ (9)

ತಾ : ಅದು ಹೇಗೆಂದರೆ, ವೀಣೆಯನ್ನು ನುಡಿಸುವಾಗ, ಬಾಹ್ಯಶಬ್ದವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ವೀಣಾ ವಾದನದ ಧ್ವನಿ ಮಾತ್ರವೇ ತಿಳಿಯುವಂತಾಗುತ್ತದೆ. ಆ ಪ್ರಕಾರವೇ ಸ್ಥಿತಿ ಕಾಲದಲ್ಲಿ ಪರಬ್ರಹ್ಮವು ಸಾಮಾನ್ಯ ವಸ್ತುಗಳಗಿಂತ ಬೇರೆಯಾಗದಿರುವುದರಿಂದ ಸರ್ವವೂ ಪರಬ್ರಹ್ಮ ಮಾತ್ರವಾಗಿಯೇ ತಿಳಿದುಕೊಳ್ಳಲು ಸಾಧ್ಯವಾಗುವುದು.

ಮಂ.ಶ್ಲೋ॥ ಸ ಯಥಾರ್ದ್ರೈಧಾಗ್ನೇರಭ್ಯಾಹಿತಾತ್ ಪೃಥಗ್ಧೂಮಾ ವಿನಿಶ್ಚರನ್ತ್ಯೇವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥ -ರ್ವಾಙ್ಗೀರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಶ್ಲೋಕಾಃ ಸೂತ್ರಾಣ್ಯನು-ವ್ಯಾಖ್ಯಾನಾನಿವ್ಯಾಖ್ಯಾನಾನ್ಯಸ್ಯೈವೈತಾನಿ ಸರ್ವಾಣಿ ವಿಶ್ವಸಿತಾನಿ (10)

ತಾ: ಆ ದೃಷ್ಟಾಂತವು ಒಪ್ಪಿಕೊಳ್ಳುವಂತಹುದು ಸ್ವೀಕರಿಸುವಂತಹುದು. ಒದ್ದೆ (ಹಸಿ) ಸೌದೆ-ಯಲ್ಲಿರುವ ಅಗ್ನಿಯಿಂದ ಹೊಗೆಯು ಬೇರೆಬೇರೆಯಾಗಿ ಹೊರಬರುತ್ತಿರುತ್ತವೆ. ಈ ಪ್ರಕಾರವಾಗಿಯೇ ಓ ಮೈತ್ರೇಯಿ! ಈ ಅನ್ಯವಲ್ಲದ ಪರಮಾರ್ಥವು ನಿಟ್ಟುಸಿರಿನಂತಹುದೇ ಈ ಮೊದಲು ಹೇಳಿದ. ಎಲ್ಲವೂ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಇತಿಹಾಸ, ಪುರಾಣ, ಸಕಲ ವಿದ್ಯೆಗಳು, ಉಪನಿಷತ್ತುಗಳು, ಸೂತ್ರಗಳು, ಮಂತ್ರಗಳ ವಿವರಗಳು, ವ್ಯಾಖ್ಯಾನಗಳು: ಇವೆಲ್ಲವೂ ಲೋಕದಲ್ಲಿ ಪುರುಷನ ವಿಶ್ವಾಸಗಳಂತೆಯೇ, ಅಪ್ರಯತ್ನವಾಗಿ ಪರಮಾತ್ಮನ ನಿಶ್ವಾಸಗಳಿಂದ ಉಂಟಾದಂತಹುಗಳು. ಈ ಸಮಸ್ತವು ಪರಬ್ರಹ್ಮವೇ.

ಮಂ.ಶ್ಲೋ॥ ಸ ಯಥಾ ಸರ್ವಾಸಾಮಪಾಗ್ಂ ಸಮುದ್ರ ಏಕಾಯನಮೇವಗ್ಂ ಸರ್ವೇಷಾಗ್ಂ ಸ್ಪರ್ಶಾನಾಂ ತ್ವಗೇಕಾಯನಮೇವಗ್ಂ ಸರ್ವೇಷಾಗ್ಂ ರಸಾನಾಂ ಜಿಹ್ವೈಕಾಯನಮೇವಗ್ಂ ಸರ್ವೇಷಾಗ್ಂ ಗನ್ಧಾನಾಗ್ಂ ನಾಸಿಕೈಕಾಯನಮೇವಗ್ಂ ಸರ್ವೇಷಾಂಗ್ಂ ರೂಪಾಣಾಂ ಚಕ್ಷುರೇಕಾಯನಮೇವಗಂ ಸರ್ವೇಷಾಗ್ಂ ಶಬ್ದಾನಾಗ್ಂ ಶ್ರೋತ್ರಮೇಕಾಯನಮೇವಗ್ಂ ಸರ್ವೇಷಾಗ್ಂ ಸಙ್ಕಲ್ಪಾನಾಗ್ಂ ಮನಏಕಾಯನಮೇವಗಂ ಸರ್ವಾಸಾಗ್ಂ ವಿದ್ಯಾನಾಗ್ಂ ಹೃದಯಮೇಕಾಯನಮೇವಗ್ಂ ಸರ್ವೇಷಾಗ್ಂ ಕರ್ಮಣಾಗ್ಂ ಹಸ್ತಾವೇಕಾಯನಮೇವಗ್ಂ ಸರ್ವೇಷಾಮಾನನ್ದಾನಾಮುಪಸ್ಥ ಏಕಾಯನಮೇವಗ್ಂ ಸರ್ವೇಷಾಗ್ಂ ವಿಸರ್ಗಾಣಾಗ್ಂ

**ಪಾಯುರೇಕಾಯನಮೇವಗ್ಂ ಸರ್ವೇಷಾಮದ್ವನಾಗ್ಂ ಪಾದಾವೇಕಾಯನಮೇವಗ್ಂ ಸರ್ವೇಷಾಗ್ಂ ವೇದಾನಾಗ್ಂ ವಾಗೇಕಾಯನಮ್ (11)**

ತಾ: ಯಾವ ಪ್ರಕಾರವಾಗಿ ನದೀ ವಾಪಿ (ಬಾವಿ) ತಟಾಕಾದಿಗಳಲ್ಲಿನ ಸಮಸ್ತಜಲಕ್ಕೂ ಸಮುದ್ರವೇ ಏಕ ಸ್ವರೂಪವಾಗಿದೆಯೋ, ಆ ರೀತಿಯಾಗಿಯೇ ಮೃದು ಕಠಿಣಾದಿ ಸಮಸ್ತ ಸ್ಪರ್ಶಗಳಿಗೆ, ಚರ್ಮವು ಮಧುರಾಮ್ಲಾದಿ ಸಮಸ್ತ ರಸಗಳಿಗೆ ಜಿಹ್ವೆಯು ಸಮಸ್ತ ಗಂಧಗಳಿಗೆ ನಾಸಿಕ, ಸಮಸ್ತ ರೂಪಗಳಿಗೆ ನೇತ್ರ. ಎಲ್ಲ ಶಬ್ದಗಳಿಗೆ ಶ್ರೋತ್ರ, ಸಂಕಲ್ಪಗಳೆಲ್ಲದಕ್ಕೂ ಮನಸ್ಸು, ವಿದ್ಯೆಗಳೆಲ್ಲದಕ್ಕೂ ಹೃದಯ ಕರ್ಮಗಳೆಲ್ಲದಕ್ಕೆ ಹಸ್ತಗಳು, ಆನಂದಗಳೆಲ್ಲದಕ್ಕೂ ಗುಹ್ಯ, ವಿಸರ್ಜನೆಗಳೆಲ್ಲದಕ್ಕೆ ಗುದ, ಗಮಿಸಲೆಲ್ಲದಕ್ಕೆ ಪಾದಗಳು, ವೇದಗಳೆಲ್ಲದಕ್ಕೆ ವಾಕ್ಕು, ಬೇರೆ ಬೇರೆಯಾಗಿಲ್ಲದ ಕಾರಣ ಈ ವಿಷಯಗಳು ತಾವೇ ಆಗುತ್ತಿವೆ. ಈ ರೀತಿಯಾಗಿ ಸರ್ವೇಂದ್ರಿಯಗಳು ತಮ್ಮ ವಿಷಯಗಳೆಲ್ಲದ-ರೊಂದಿಗೆ ಕ್ರಮವಾಗಿ ಪ್ರಳಯವನ್ನು ಹೊಂದಿ ಮನೋಮಾತ್ರವಾಗುತ್ತಿವೆ. ಮನಸ್ಸು ವಿಜ್ಞಾನಮಾತ್ರ-ವಾಗುತ್ತಿದೆ. ಈ ವಿಜ್ಞಾನ ಸ್ವರೂಪವು ನೀರಿನಲ್ಲಿರುವ ಉಪ್ಪಿನ ಗಡ್ಡೆಯಂತೆ ನಿರುಪಾಧಿಕವಾಗುವುದರಿಂದ, ಪ್ರಜ್ಞಾನ ಸ್ವರೂಪವಾದ ಪರಮಾತ್ಮನಲ್ಲಿ ವಿಲೀನವಾಗುತ್ತಿದೆ.

**ಮಂ.ಶ್ಲೋ॥ ಸ ಯಥಾ ಸೈನ್ಧವ ಖಿಲ್ಯ ಉದಕೇ ಪ್ರಾಸ್ತ ಉದಕಮೇವಾನುವಿಲೀಯೇತ, ಸ ಹಾಸ್ಯೋದ್ಗ್ರಹ -ಣಾಯೇವ ಸ್ಯಾತ್, ಯತೋ ಯತಸ್ತ್ವಾದದಿತ ಲವಣಮೇವೈವಂ ವಾ ಅರ ಇದಂ ಮಹಾದ್ಭೂತಮನನ್ತಮಪಾರಂ ವಿಜ್ಞಾನಘನ ಏವ । ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ (12)**

ತಾ : ಜಲದಲ್ಲಿ ಹುಟ್ಟಿದ ಉಪ್ಪಿನ ಹರಳನ್ನು ಆ ಜಲದಲ್ಲಿಟ್ಟು, ಮತ್ತೆ ಹೊರಕ್ಕೆ ತೆಗೆಯಲು ಎಷ್ಟು ಹಿರಿಯ ಶ್ರೇಷ್ಠನಾದವನೆನಿಸಿಕೊಂಡವನೂ ಸಮರ್ಥನಾಗುವುದಿಲ್ಲ. ಆ ನೀರನ್ನು ರುಚಿ ನೋಡಿ ಉಪ್ಪಾಗಿದೆಯೆಂದು ತಿಳಿದುಕೊಳ್ಳಬಹುದು. ಈ ಪ್ರಕಾರವಾಗಿಯೇ ದೊಡ್ಡ ಪಾರಮಾರ್ಥಿಕ ಸ್ವರೂಪದಲ್ಲಿ ವಿಜ್ಞಾನ ಘನಸ್ವರೂಪನಾದ ಈ ಜೀವಾತ್ಮ ತುಂಬಿರುವನು. ನೀರಿನಿಂದ ಉಂಟಾದ ಸೂರ್ಯ ಚಂದ್ರಾದಿ ಪ್ರತಿಬಿಂಬದಂತೆ, ಸ್ವಚ್ಛವಾದ ಸ್ಫಟಿಕಕ್ಕೆ ರಕ್ತಪೀತಾದಿಭಾವಗಳಂತೆ (ಕೆಂಪು ಹಳದಿ ಬಣ್ಣ), ದೇಹೇಂದ್ರಿಯ ವಿಷಯಾಕಾರಗಳಾಗಿ ಪರಿಣಮಿಸಿದ ಭೂತಗಳೆಂಬ ಅಜ್ಞಾನದಿಂದ ನಾಮರೂಪಗಳು ಹುಟ್ಟಿ ಮತ್ತೆ ಆತ್ಮದಲ್ಲೇ ಲೀನವಾಗುತ್ತಿವೆ. ಶಾಸ್ತ್ರಾಚಾರ್ಯೋಪದೇಶವಾದ ಬ್ರಹ್ಮವಿದ್ಯೆ-ಯಿಂದ, ಸಮುದ್ರದಲ್ಲಿ ಸಲಿಲ ಫೇನಬುದ್ಬುದಾದಿಕಗಳು ಲೀನವಾಗುವಂತೆ, ಅಜ್ಞಾನದಿಂದ ಉಂಟಾದ ಈ ಜೀವಭಾವವು ನಶಿಸುತ್ತದೆ. ಹೀಗೆ ಅಜ್ಞಾನವು ನಶಿಸಿದ ನಂತರ ಜೀವಾತ್ಮನು, ಬ್ರಹ್ಮಜ್ಞಾನದಿಂದ ಸ್ವಚ್ಛವಾದ ಪ್ರಜ್ಞಾನ ಘನಸ್ವರೂಪವಾದ ಪರಮಾತ್ಮನೇ ಆಗುತ್ತಿದ್ದಾನೆ. ಮೈತ್ರೇಯಿ! ದೇಹೇಂದ್ರಿಯಾದಿ ಸಮುದಾಯಗಳಿಂದ ಮುಕ್ತಿಯನ್ನು ಹೊಂದಿ ಪರಮಾತ್ಮ ಸ್ವರೂಪವಾದವನಿಗೆ, ನಾನು, ಇವನು, ಇವನ ಮಗ, ನನ್ನ ಕ್ಷೇತ್ರ, ನನ್ನ ಧನ (ಹಣ) ನಾನು ಸುಖವಾಗಿರುವವನು, ನಾನು ದುಃಖವನ್ನು ಹೊಂದಿರುವವನು ಎನ್ನುವಂತಹ ಭೇದ ಭಾವವಿಲ್ಲವೆಂದು ಯಾಜ್ಞವಲ್ಕ್ಯ ಮಹರ್ಷಿಯು ಪತ್ನಿಯಾದ ಮೈತ್ರೇಯಿಗಾಗಿ ಪರಮಾರ್ಥ ಸ್ವರೂಪವನ್ನು ಬೋಧಿಸಿದ.

**ಮಂ.ಶ್ಲೋ॥ ಸಾ ಹೋವಾಚ ಮೈತ್ರೇಯ್ಯತ್ರೈವ ಮಾ ಭಗವಾನಮೂಮುಹನ್ನ ಪ್ರೇತ್ಯ ಸಂಜ್ಞಾಸ್ತೀತಿ ಸಹೋವಾಚ ಯಾಜ್ಞವಲ್ಕ್ಯೋ ನ ವಾ ಅರೇಹಂ ಮೋಹಂ ಬ್ರವೀಮ್ಯಲಂ ವಾ ಅರ ಇದಂ ವಿಜ್ಞಾನಾಯ (13)**

ತಾ : ಆ ಮೈತ್ರೇಯಿ ಹೀಗೆ ಹೇಳಿದಳು. ಪೂಜ್ಯನಾದ ನೀನು ಈ ಪರಬ್ರಹ್ಮದಲ್ಲಿಯೇ, ನಾನು ಮರಣ ಹೊಂದಿದಾಗ ಈ ಭೇದಭಾವವು (ನಾನು, ಇವನು ಎನ್ನುವಂತಹ ಲಕ್ಷಣಗಳುಳ್ಳ ವಿಶೇಷ ಸಂಜ್ಞೆ) ಇರುವುದಿಲ್ಲವೆಂದು ಭ್ರಮೆ ಹುಟ್ಟಿಸಿರುವೆ. ಯಾಜ್ಞವಲ್ಕ್ಯ ಋಷಿಯು "ಓ ಮೈತ್ರೇಯಿ! ನಾನು ಭ್ರಮೆಯನ್ನು ಹೊಂದಿಲ್ಲ. ಹೇಳಲಿಲ್ಲ. ಈ ಹೇಳಲ್ಪಟ್ಟ ವಿಜ್ಞಾನ ಘನಸ್ವರೂಪವು ತಿಳಿದುಕೊಳ್ಳಲು ಸಮರ್ಥವಾಗುತ್ತದೆ.

**ಮಂ.ಶ್ಲೋ॥ ಯತ್ರ ಹಿ ದ್ವೈತಮಿವ ಭವತಿ, ತದಿತರ ಇತರಂ ಪಶ್ಯತಿ, ತದಿತರ ಇತರಂ ಜಿಘ್ರತಿ, ತದಿತರ ಇತರಗ್ಂ ಶೃಣೋತಿ. ತದಿತರ ಇತರಮಭಿವದತಿ. ತದಿತರ ಇತರಂ ಮನುತೇ. ತದಿತರ ಇತರಂ ವಿಜಾನಾತಿ, ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಜಿಘ್ರೇತ್ ತತ್ಕೇನ ಕಂ ಪಶ್ಯೇತ್ತತ್ಕೇನ ಕಗ್ಂ ಶೃಣುಯಾತ್ತತ್ಕೇನ ಕಮಭಿವದೇತ್ತತ್ಕೇನ ಕಂ ಮನ್ವೀತ, ತತ್ಕೇನ ಕಂ ವಿಜಾನೀಯಾತ್, ಯೇನೇದಗ್ಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್, ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ (14)**

ತಾ : ಓ ಮೈತ್ರೇಯಿ! ಇದೇ ಬ್ರಹ್ಮಜ್ಞಾನಯೋಗ ಇದಕ್ಕೆ ಮೊದಲು ವಿಜ್ಞಾನ ಘನಸ್ವರೂಪವೆಂದು ಹೇಳಿದ ಕೇವಲಾತ್ಮನಿಗೆ ಅಜ್ಞಾನವಿಲ್ಲ. ನಾಮರೂಪ ಕ್ರಿಯಾತ್ಮಕವಾದ ದೇಹೇಂದ್ರಿಯಾದಿ ಸಂಬಂಧದಿಂದ ಉಂಟಾದ ಜೀವಭಾವದಲ್ಲಿ ನಾನು ಇವನು ಎನ್ನುವ ದ್ವೈತಭಾವನೆಯು ಏರ್ಪಡುತ್ತದೆ. ಬ್ರಹ್ಮಜ್ಞಾನದಿಂದ ದೇಹೇಂದ್ರಿಯಾದಿ ಸಂಬಂಧದಿಂದುಂಟಾದ ಜೀವಭಾವವು ನಶಿಸಿದಾಗ ಈ ದ್ವೈತಜ್ಞಾನವು ನಶಿಸುತ್ತದೆ. ಅವಿದ್ಯೆಯಿಂದ ಕಲ್ಪಿಸಲಾದ ದೇಹೇಂದ್ರಿಯಾ(ದಿ) ಸಂಘಾತೋಪಾಧಿಯಿಂದ ಹುಟ್ಟಿದ ಜೀವಭಾವದಲ್ಲಿ ಆತ್ಮವೆಲ್ಲವೂ (ಸರ್ವವು) ದ್ವೈತದಂತೆಯೇ ಕಾಣಿಸುತ್ತದೆ. ಆಗ ನೋಡುವುದು, ಆಘ್ರಾಣಿಸುವುದು, ಕೇಳುವುದು, ಮಾತನಾಡುವುದು, ನೆನಸಿಕೊಳ್ಳುವುದು, ತಿಳಿದುಕೊಳ್ಳುವುದು, ಇತ್ಯಾದಿ ದ್ವೈತಜ್ಞಾನವು ಉಂಟಾಗುತ್ತದೆ. ಯಾವಾಗ ಬ್ರಹ್ಮವೇತ್ತನಿಗೆ ಬ್ರಹ್ಮಜ್ಞಾನದಿಂದ ಸರ್ವವೂ ಆತ್ಮ ಮಾತ್ರವಾಗುತ್ತದೆಯೋ, ಆಗ ಯಾವುದರಿಂದ ಯಾವುದನ್ನು ನೋಡುವನು? ಯಾವುದರಿಂದ ಯಾವುದನ್ನು ಅರಿಯಬಲ್ಲನು? ಯಾವುದರಿಂದ ಯಾವುದನ್ನು ಕೇಳಬಲ್ಲನು, ಹೇಳಬಲ್ಲನು? ಯಾರಿಂದ ಸರ್ವವೂ ತಿಳಿದುಕೊಳ್ಳುವಂತಾಗುತ್ತದೆಯೋ, ಅವನನ್ನು ಯಾವುದರಿಂದ ತಿಳಿದುಕೊಳ್ಳ-ಬಹುದು? ಓ ಮೈತ್ರೇಯಿ! ಸರ್ವವನ್ನು ತಿಳಿದುಕೊಳ್ಳುವುದು ವಿಜ್ಞಾನಮಯಾತ್ಮವೇ!

## ಚತುರ್ಥಾಧ್ಯಾಯ – ಪಞ್ಚಮ ಬ್ರಾಹ್ಮಣಂ

**ಮಂ.ಶ್ಲೋ॥ ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧ್ವಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ**

**ಪುರುಷೋ ಯಶ್ಚಾಯಮಧ್ಯಾತ್ಮಗ್ಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (1)**

ತಾ : ಈ ಪೃಥಿವಿಯು ಸಮಸ್ತಭೂತಗಳ (ಜೀವಿಗಳ) ಮಧು ಸ್ವರೂಪವಾಗಿದೆ. ಪೃಥಿವ್ಯಾದಿ ಲಕ್ಷಣವಾದ ಈ ಜಗತ್ತೆಲ್ಲವೂ ಪರಸ್ಪರ ಕಾರ್ಯಕಾರಣವಾಗುವುದರಿಂದ, ಅದೇ ಪ್ರಕಾರವಾಗಿರಲು ಬದ್ಧವಾಗಿದೆ. ಈ ಅರ್ಥವೇ ಈ ಬ್ರಾಹ್ಮಣದಲ್ಲಿ ಪ್ರಕಾಶಪಡಿಸಲಾಗುತ್ತಿದೆ. ಏಕೆಂದರೆ ಈ ಪ್ರಸಿದ್ಧವಾದ ಭೂಮಿ ಬ್ರಹ್ಮನಿಂದ ಹಿಡಿದು ಸ್ತಂಭಪರ್ಯಂತ ಇರುವಂತಹ ಸಮಸ್ತ ಪ್ರಾಣಿಗಳ ಕಾರ್ಯವಾಗಿದೆ. ಸಮಸ್ತ ಭೂತಗಳು ಈ ಭೂಮಿಯ ಕಾರ್ಯ. ಈ ಭೂಮಿಯಲ್ಲಿನ ತೇಜಸ್ಸ್ವರೂಪನು, ಅಮೃತ ಸ್ವರೂಪನು ಆದ ಈ ಪುರುಷನು ದೇಹೇಂದ್ರಿಯ ಸಮುದಾಯ ಕರ್ತನಾಗುತ್ತಿದ್ದಾನೆ. ಈ ಶರೀರದಲ್ಲಿನ ತೇಜಸ್ಸ್ವರೂಪನು ಅಮೃತಸ್ವರೂಪನಾದ-ಆ ಜೀವನು ಆತ್ಮಸ್ವರೂಪವೇ; ಆತ್ಮ ಸ್ವರೂಪವೇ ಮೈತ್ರೇಯಿಗಾಗಿ ಹೇಳಲಾದ ಈ ಅಮೃತತತ್ವ ಸಾಧನ ರೂಪವಾದ ಆತ್ಮ ವಿಜ್ಞಾನವು. ಇದೇ ಪರಬ್ರಹ್ಮ ಸ್ವರೂಪ.

**ಮಂ.ಶ್ಲೋ॥ ಇಮಾ ಆಪಸ್ಸರ್ವೇಷಾಂ ಭೂತಾನಾಂ ಮಧ್ವಾಸಾಮಪಾಗ್ಂ ಸರ್ವಾಣಿ ಭೂತಾನಿ ಮಧು ಯಶ್ಚಾ ಯಮಾಸ್ವಪ್ಸು ತೇಜೋಮಯೋಽಮೃತಮಯಃ ಪುರುಷಾ ಯಶ್ಚಾಯ-ಮಧ್ಯಾತ್ಮಗ್ಂ ರೈ(ರೇ)ತಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (2)**

ತಾ : ಆ ಸುಪ್ರಸಿದ್ಧವಾದ ಜಲವು ಸಮಸ್ತಪ್ರಾಣಿಗಳ ಕಾರ್ಯಭೂತ ಸಾರಾಂಶವು. ಈ ಜಲದಲ್ಲಿರುವ ತೇಜೋಮಯನು, ಅಮೃತ ಸ್ವರೂಪನು ಆಗಿರುವ ಪುರುಷನೇ, ಈ ದೇಹೇಂದ್ರಿಯ ಸಮುದಾಯ ಕರ್ತನಲ್ಲಿರುವ ರೇತಸ್ಸಂಬಂಧನು ತೇಜೋಮಯನು, ಅಮೃತ ಸ್ವರೂಪನೂ ಆದ ಪುರುಷನು ಈತನೇ. ಈ ಪುರುಷನೇ ಆ ಆತ್ಮ ಸ್ವರೂಪ. ಈ ಆತ್ಮ ಸ್ವರೂಪವ್ಯಾವುದೋ ಅದೇ ಅಮೃತ ಸ್ವರೂಪ. ಇದೇ ಪರಬ್ರಹ್ಮ ಸ್ವರೂಪ. ಇದೇ ಸರ್ವವೂ ಆಗಿದೆ.

**ಮಂ.ಶ್ಲೋ॥ ಅಯಮಗ್ನಿಸ್ಸರ್ವೇಷಾಂ ಭೂತಾನಾಂ ಮಧ್ವಸ್ಯಾಗ್ನೇಃ ಸರ್ವಾಣಿಭೂತಾನಿ ಮಧು ಯಶ್ಚಾಯ -ಮಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷೋಯಶ್ಚಾಯಮಧ್ಯಾತ್ಮಂ ವಾಙ್ಮಯಸ್ತೇಜೋಮಯೋಽಮೃತಯಃ ಪುರುಷೋಽಯಮೇನ ಸ ಯೊಽಯ-ಮಾತ್ಮೆದಮಮೃತಮಿದಂ ಬ್ರಹ್ಮೇದಗಂ ಸರ್ವಂ (3)**

ತಾ : ಈ ಅಗ್ನಿಯೇ ಸಮಸ್ತವಾದ ಭೂತಗಳಲ್ಲಿನ ಮಧು ಸ್ವರೂಪ. ಸಮಸ್ತ ಭೂತಗಳು ಈ ಅಗ್ನಿಯ ಮಧು ಸ್ವರೂಪ. ಈ ಅಗ್ನಿಯಲ್ಲಿ ತೇಜೋಮಯ ಅಮೃತಮಯನು ಆದ ಪುರುಷನು. ದೇಹೇಂದ್ರಿಯ ಸಂಘಾತ ಕರ್ತನಲ್ಲಿರುವ ವಾಙ್ಮಯನು, ತೇಜೋಮಯನು, ಅಮೃತಮಯ-ನಾದಂತಹ ಪುರುಷನು ಈ ಇಬ್ಬರೂ ಒಂದೇ. ಈತನೇ ಆ ಆತ್ಮ ಸ್ವರೂಪ. ಇದೇ ಆತ್ಮ ಸ್ವರೂಪ. ಇದೇ ಬ್ರಹ್ಮ ಸ್ವರೂಪ. ಇದೇ ಸಮಸ್ತ ಸೃಷ್ಟಿಯಾಗುತ್ತಿದೆ.

ಮಂ.ಶ್ಲೋ॥ ಅಯಂ ವಾಯುಸ್ಸರ್ವೇಷಾಂ ಭೂತಾನಾಂ ಮಧ್ವಸ್ಯ ವಾಯೋಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ವಾಯೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಪ್ರಾಣಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್‌ಂ ಸರ್ವಮ್ (4)

ತಾ : ಈ ವಾಯುವು ಸಮಸ್ತ ಭೂತಗಳ ಸಾರಾಂಶ. ಸಮಸ್ತ ಭೂತಗಳು, ಈ ವಾಯುವಿನ ಸಾರಾಂಶ. ಈ ವಾಯುವಿನಿಂದ ತೇಜೋಮಯನು, ಅಮೃತಮಯನೂ ಆದ ಪುರುಷನು, ದೇಹೇಂದ್ರಿಯ ಸಂಘಾತ ಕರ್ತನಲ್ಲಿರುವ ಪ್ರಾಣಸ್ವರೂಪನು, ತೇಜೋರೂಪನು, ಅಮೃತಸ್ವರೂಪನೂ ಆದ ಪುರುಷ ಇಬ್ಬರೂ ಆ ಆತ್ಮಸ್ವರೂಪವೇ. ಈ ಆತ್ಮಸ್ವರೂಪವೇ ಅಮೃತಸ್ವರೂಪವು. ಪರಬ್ರಹ್ಮಸ್ವರೂಪವು ಸರ್ವವೂ ಆಗಿದೆ.

ಮಂ.ಶ್ಲೋ॥ ಅಯಮಾದಿತ್ಯಸ್ಸರ್ವೇಷಾಂ ಭೂತಾನಾಂ ಮಧ್ವಸ್ಯಾದಿತ್ಯಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾದಿತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ -ಮಧ್ಯಾತ್ಮಂ ಚಾಕ್ಷುಷಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್‌ಂ ಸರ್ವಮ್ (5)

ತಾ: ಈ ಸೂರ್ಯನು ಸಮಸ್ತ ಭೂತಗಳಲ್ಲಿನ ಸಾರಾಂಶ. ಸಮಸ್ತ ಭೂತಗಳು ಈ ಸೂರ್ಯನ ಸಾರಾಂಶ. ಈ ಸೂರ್ಯನಲ್ಲಿರುವ ತೇಜೋರೂಪನು ಅಮೃತ ಸ್ವರೂಪನಾದ ಪುರುಷನು, ದೇಹೇಂದ್ರಿಯ ಸಂಘಾತ ಕರ್ತನಲ್ಲಿರುವ ನೇತ್ರ ಸಂಬಂಧನು, ತೇಜೋಮಯನು ಅಮೃತ-ಮಯನಾದ ಪುರುಷನು, ಇಬ್ಬರೂ ಆತ್ಮ ಸ್ವರೂಪವೇ, ಈ ಆತ್ಮ ಸ್ವರೂಪವೇ ಅಮೃತ ಸ್ವರೂಪವು, ಪರಬ್ರಹ್ಮ ಸ್ವರೂಪನೂ, ಸಮಸ್ತವೂ ಆಗಿದೆ. (ಆದಿತ್ಯನು ನೇತ್ರಾಭಿಮಾನಿ ದೇವತೆ)

ಮಂ.ಶ್ಲೋ॥ ಇಮಾ ದಿಶಸ್ಸರ್ವೇಷಾಂ ಭೂತಾನಾಂ ಮಧ್ವಾಸಾಂ ದಿಶಾಗ್‌ಂ ಸರ್ವಾಣಿಭೂತಾನಿ ಮಧು ಯಶ್ಚಾಯಮಾಸುದಿಕ್ಷು ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಗ್‌ಂ ಶ್ರೌತ್ರಃ ಪ್ರಾತಿಶ್ರುತ್ಕಸ್ತೇಜೋಮಯೋಽಮೃತಮಯಃ ಪುರುಷೋಽ-ಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್‌ಂ ಸರ್ವಮ್ (6)

ತಾ: ಈ ದಿಕ್ಕುಗಳೆಲ್ಲವೂ ಸಮಸ್ತ ಭೂತಗಳ ಸಾರಾಂಶ, ಸರ್ವಭೂತಗಳು ಈ ದಿಕ್ಕುಗಳ ಸಾರಾಂಶವೇ (ಆಗಿದೆ). ಈ ದಿಕ್ಕುಗಳಲ್ಲಿನ ತೇಜೋಮಯನು ಅಮೃತಮಯನು ಆದಂತಹ ಪುರುಷನು, ಈ ದೇಹೇಂದ್ರಿಯ ಸಂಘಾತಕರ್ತನಲ್ಲಿ ಶ್ರೋತ್ರಸ್ಸಂಬಂಧನು, ಸರ್ವವನ್ನು ಶ್ರವಣ ಮಾಡುವ ತೇಜೋಮಯನು, ಅಮೃತಮಯನಾದ ಪುರುಷ ಇವರಿಬ್ಬರೂ ಆತ್ಮ ಸ್ವರೂಪವೇ. ಈ ಆತ್ಮ ಸ್ವರೂಪವೇ ಅಮೃತ ಸ್ವರೂಪವೂ, ಪರಬ್ರಹ್ಮ ಸ್ವರೂಪವೂ, ಸರ್ವವೂ ಆಗುತ್ತಿದೆ. (ದಿಕ್ಕುಗಳು ಶ್ರೋತ್ರಗಳಿಗೆ ದೇವತೆಗಳು)

ಮಂ.ಶ್ಲೋ॥ ಅಯಂ ಚನ್ದ್ರಸ್ಸರ್ವೇಷಾಂ ಭೂತಾನಾಂ ಮಧ್ವಸ್ಯ ಚನ್ದ್ರಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿಗ್‌ಂಶ್ಚನ್ದ್ರೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-

ಮಧ್ಯಾತ್ಮಂ ಮಾನಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (7)

ತಾ : ಈ ಚಂದ್ರನು ಸರ್ವಭೂತಗಳ ಸಾರಾಂಶ. ಸಮಸ್ತ ಭೂತಗಳು ಈ ಚಂದ್ರನ ಸಾರಾಂಶ. ಈ ಚಂದ್ರನಲ್ಲಿನ ತೇಜೋಮಯನು, ಅಮೃತಮಯನೂ ಆದ ಪುರುಷನು, ದೇಹೇಂದ್ರಿಯ ಸಂಘಾತಕರ್ತನಲ್ಲಿ ಮನಸ್ಸಂಬಂಧನು, ತೇಜೋಮಯನು, ಅಮೃತಮಯನು ಆದ ಪುರುಷನು ಈ ಇಬ್ಬರೂ (ಆತ್ಮ) ಪರಮಾತ್ಮ ಸ್ವರೂಪರೇ, ಈ ಆತ್ಮಸ್ವರೂಪವೇ ಅಮೃತರೂಪವು, ಪರಮಾತ್ಮ ಸ್ವರೂಪವು, ಸರ್ವವೂ ಆಗಿದೆ. (ಚಂದ್ರನು ಮನಸ್ಸಿಗೆ ಅಧಿದೇವತೆ.)

ಮಂ.ಶ್ಲೋ॥ ಇಯಂ ವಿದ್ಯುತ್ಸರ್ವೇಷಾಂ ಭೂತಾನಾಂ ಮಧ್ವಸ್ಯೈ ವಿದ್ಯುತೇ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಯಾಂ ವಿದ್ಯುತಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಂ ತೈಜಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (8)

ತಾ: ಈ ವಿದ್ಯುತ್ ಸರ್ವಭೂತಗಳ ಸಾರಾಂಶ. ಸಮಸ್ತ ಭೂತಗಳು ಈ ವಿದ್ಯುತ್ತಿನ ಸಾರಾಂಶ. ಈ ವಿದ್ಯುತ್‌ನಲ್ಲಿನ ತೇಜೋಮಯನು ಆನಂದಮಯನಾದ ಪುರುಷನು. ದೇಹೇಂದ್ರಿಯ ಸಂಘಾತ ಕರ್ತನಲ್ಲಿ ಚರ್ಮ ಸಂಬಂಧನು ತೇಜೋಮಯನು ಅಮೃತಮಯನಾದ ಪುರುಷನು, ಈ ಇಬ್ಬರೂ ಆತ್ಮ ಸ್ವರೂಪವೇ. ಈ ಆತ್ಮಸ್ವರೂಪವೇ ಅಮೃತ ರೂಪವೆನ್ನುವ ಪರಬ್ರಹ್ಮವೆನ್ನುವ ಸಮಸ್ತವು ಸೃಷ್ಟಿಯಾಗಿದೆ. (ಚರ್ಮಗತ ಕಾಂತಿಯೇ ಅಧ್ಯಾತ್ಮ ತೈಜಸ ಪುರುಷನು.)

ಮಂ.ಶ್ಲೋ॥ ಅಯಗ್ಂ ಸ್ತನಯಿತ್ನುಃ ಸರ್ವೇಷಾಂ ಭೂತಾನಾಂ ಮಧ್ವಸ್ಯ ಸ್ತನಯಿತ್ನೋಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿಗ್ಂ ಸ್ತನಯಿತ್ನೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂ ಶಾಬ್ದಸ್ಸೌವರ ಸ್ತೇಜೋಮಯೋಽಮೃತಮಯಃ ಪುರುಷೋಽ-ಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (9)

ತಾ : ಈ ಮೇಘ ಗರ್ಜನೆಯು ಸರ್ವಭೂತಗಳ ಸಾರವಾಗಿದೆ. ಸಮಸ್ತ ಭೂತಗಳು ಮೇಘ ಗರ್ಜನೆಯ ಸಾರ. ಈ ಮೇಘಗರ್ಜನೆಯಲ್ಲಿನ ತೇಜೋರೂಪನು, ಅಮೃತ ರೂಪನು ಆದ ಪುರುಷನು ದೇಹೇಂದ್ರಿಯ ಸಂಘಾತಕರ್ತದಲ್ಲಿನ ಶಬ್ದರೂಪನು, ಸರ್ವರೂಪನು, ತೇಜೋಮಯನು, ಅಮೃತಮಯನಾದ ಪುರುಷನು, ಇವರಿಬ್ಬರೂ ಆ ಆತ್ಮಸ್ವರೂಪವೇ. ಇದೇ ಅಮೃತಸ್ವರೂಪ, ಪರಬ್ರಹ್ಮ ಸ್ವರೂಪವೆನ್ನುವ ಸಮಸ್ತವು ಆಗುತ್ತದೆ.

ಮಂ.ಶ್ಲೋ॥ ಅಯಮಾಕಾಶಸ್ಸರ್ವೇಷಾಂ ಭೂತಾನಾಂ ಮಧ್ವಸ್ಯಾಕಾಶಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾಕಾಶೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಗ್ಂ ಹೃದ್ಯಾಕಾಶಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (10)

ತಾ : ಈ ಆಕಾಶವು ಸಮಸ್ತ ಭೂತಗಳ ಮಧು ಸ್ವರೂಪವಾಗಿದೆ. ಸಮಸ್ತ ಭೂತಗಳು ಈ ಆಕಾಶದ ಮಧು ಸ್ವರೂಪ. ಈ ಆಕಾಶದಲ್ಲಿ ತೇಜೋರೂಪನು ಅಮೃತ ಸ್ವರೂಪನಾದ ಈ ಪುರುಷನು ಮತ್ತು ದೇಹೇಂದ್ರಿಯ ಸಂಘೂತಕರ್ತನ ಹೃದಯದಲ್ಲಿ, ಆಕಾಶ ಸ್ವರೂಪನಾಗಿ ತೇಜೋ ರೂಪನಾಗಿ ಅಮೃತ ಸ್ವರೂಪನಾಗಿರುವ ಪುರುಷನು, ಇಬ್ಬರೂ ಒಂದೇ ಆತ್ಮ ಸ್ವರೂಪ. ಈ ಆತ್ಮ ಸ್ವರೂಪವೇ ಅಮೃತ ಸ್ವರೂಪವೆನ್ನುವ ಪರಬ್ರಹ್ಮ ಸ್ವರೂಪವೆಂದು ಸರ್ವವೂ ಆಗುವುದು.

**ಮಂ.ಶ್ಲೋ॥ ಅಯಂ ಧರ್ಮಸ್ಸರ್ವೇಷಾಂ ಭೂತಾನಾಂ ಮಧ್ವಸ್ಯ ಧರ್ಮಸ್ಯ ಸರ್ವಾಣಿಭೂತಾನಿ ಮಧು ಯಶ್ಚಾಯ -ಮಸ್ಮಿನ್ ಧರ್ಮೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಧಾರ್ಮಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದ-ಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (11)**

ತಾ : ಅಪೂರ್ವವೆನ್ನುವ ಹೆಸರುಳ್ಳ ಈ ಧರ್ಮವು ಸಮಸ್ತ ಭೂತಗಳ ಸಾರ. ಸಮಸ್ತ ಭೂತಗಳು ಈ ಧರ್ಮದ ಸಾರವೇ ಭೂಮ್ಯಾದಿ (ಭೂಮಿ ಮುಂತಾದ) ಭೂತಗಳಲ್ಲಿನ ಸಾಮಾನ್ಯ ಧರ್ಮದಲ್ಲಿ ತೇಜೋಮಯನಾದ ಅಮೃತಮಯನಾದ ಪುರುಷನು, ದೇಹೇಂದ್ರಿಯ ಸಂಘೂತ ಕರ್ತನಲ್ಲಿನ ತೇಜೋಮಯನು. ಅಮೃತಮಯನು, ಆದ ಪುರುಷ, ಇಬ್ಬರೂ ಆ ಆತ್ಮ ಸ್ವರೂಪವೇ, ಇದೇ ಅಮೃತ ಸ್ವರೂಪವು ಪರಬ್ರಹ್ಮ ಸ್ವರೂಪವು ಸರ್ವವೂ ಆಗುವುದು.

**ಮಂ.ಶ್ಲೋ॥ ಇದಗ್ಂ ಸತ್ಯಗ್ಂ ಸರ್ವೇಷಾಂ ಭೂತಾನಾಂ ಮಧ್ವಸ್ಯ ಸತ್ಯಸ್ಯ ಸರ್ವಾಣಿಭೂತಾನಿ ಮಧುಯಶ್ಚಾಽಯಮಸ್ಮಿನ್ಸತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಗ್ಂ ಸಾತ್ಯಸ್ತೇಜೋಮಯೋಽಮೃತಮಯಃ ಪುರುಷೋ ಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (12)**

ತಾ : ಈ ಸುಪ್ರಸಿದ್ಧ ಸತ್ಯವು ಸಮಸ್ತ ಭೂತಗಳ ಸಾರ. ಸರ್ವಭೂತಗಳು ಈ ಸತ್ಯದ ಸಾರವಾಗಿವೆ. ಭೂಮ್ಯಾದಿ ಭೂತಗಳಲ್ಲಿನ ಕ್ರಿಯಾರೂಪಸತ್ಯದಲ್ಲಿ ತೇಜೋಮಯನಾದ ಅಮೃತ ಮಯನಾದ ಪುರುಷನು, ದೇಹೇಂದ್ರಿಯ ಸಂಘೂತದಲ್ಲಿನ ಸತ್ಯಸ್ವರೂಪನು, ತೇಜೋಮಯ ಅಮೃತಮಯನಾದ ಪುರುಷನು ಇಬ್ಬರೂ ಆ ಆತ್ಮ ಸ್ವರೂಪವೇ. ಇದೇ ಅಮೃತ ಸ್ವರೂಪವು ಪರಬ್ರಹ್ಮಸ್ವರೂಪವು ಸರ್ವವೂ ಆಗಿದೆ.

**ಮಂ.ಶ್ಲೋ॥ ಇದಂ ಮಾನುಷಗ್ಂ ಸರ್ವೇಷಾಂ ಭೂತಾನಾಂ ಮಧ್ವಸ್ಯ ಮಾನುಷಸ್ಯಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ಮಾನುಷೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಮಾನುಷಸ್ತೇಜೋಮಯೋಽಮೃತಮಯಃ ಪುರುಷೋಽ-ಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಂ (13)**

ತಾ : ಈ ಮಾನುಷಜಾತಿ ಸಮಸ್ತ ಭೂತಗಳಲ್ಲಿನ ಸಾರ, ಸಮಸ್ತ ಭೂತಗಳು ಈ ಮನುಷ್ಯಜಾತಿಯ ಸಾರವಾಗಿವೆ. ಈ ಅನ್ಯವಾದ ಮನುಷ್ಯ ಜಾತಿಯಲ್ಲಿನ ತೇಜೋರೂಪನು ಅಮೃತ ರೂಪನು ಆದ ಪುರುಷನು ನಿರ್ದೇಶಿಸುವವನ ತನ್ನ ದೇಹೇಂದ್ರಿಯಾದಿ ಸಮುದಾಯದಲ್ಲಿನ

ಮನುಷ್ಯಜಾತಿ ಸಂಬಂಧನಾದ ತೇಜೋಮಯನು ಅಮೃತಮಯನು ಆದ ಪುರುಷನು ಇವರಿಬ್ಬರೂ ಪರಮಾತ್ಮ ಸ್ವರೂಪವೇ! ಇದೇ ಅಮೃತ ಸ್ವರೂಪವು ಪರಬ್ರಹ್ಮ ಸ್ವರೂಪವು ಆದ ಸಮಸ್ತವೂ ಆಗುತ್ತಿದೆ.

**ಮಂ.ಶ್ಲೋ॥ ಅಯಮಾತ್ಮಾ ಸರ್ವೇಷಾಂ ಭೂತಾನಾಂ ಮಧ್ವಸ್ಯಾತ್ಮನಃ ಸರ್ವಾಣಿ ಭೂತಾನಿ ಮಧುಯಶ್ಚಾಯ -ಮಸ್ಮಿನ್ನಾತ್ಮನಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಾತ್ಮಾ ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದ-ಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ (14)**

ತಾ : ಮಾನುಷಾದಿ ಜಾತಿಯ ದೇಹೇಂದ್ರಿಯ ಸಂಘೂತವಾದ ಈ ಆತ್ಮಸ್ವರೂಪವು ಸಮಸ್ತ ಭೂತಗಳ ಮಧುಸ್ವರೂಪ. ಸಮಸ್ತ ಭೂತಗಳು ಈ ಆತ್ಮಸ್ವರೂಪದ ಮಧುಸ್ವರೂಪ. ಈ ದೇಹೇಂದ್ರಿಯ ಸಂಘೂತಾತ್ಮದಲ್ಲಿ ತೇಜೋರೂಪ, ಅಮೃತ ರೂಪನಾದ ಪುರುಷನು, ವಿಜ್ಞಾನಮಯನು, ತೇಜೋಮಯನಾದ ಅಮೃತ ರೂಪನಾದ ಪುರುಷನು ಇಬ್ಬರೂ ಆ ಆತ್ಮಸ್ವರೂಪವೇ. ಇದೇ ಅಮೃತ ಸ್ವರೂಪವು, ಪರಬ್ರಹ್ಮಸ್ವರೂಪವು, ಸರ್ವವೂ ಆಗಿದೆ.

**ಮಂ.ಶ್ಲೋ॥ ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಸ್ಸರ್ವೇಷಾಂ ಭೂತಾನಾಗ್ಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಪ್ರಾಣಾ ಸಮರ್ಪಿತಾ ಏವಮೇವಾಸ್ಮಿನ್ನಾ-ತ್ಮನಿ ಸರ್ವೇಸ್ಸರ್ವೇಲೋಕಾಸ್ಸರ್ವೇದೇವಾಸ್ಸರ್ವಾಣಿಭೂತಾನಿ ಸರ್ವ ಏತ ಆತ್ಮಾನಸ್ಸಮರ್ಪಿತಾಃ (15)**

ತಾ : ಆ ಸುಪ್ರಸಿದ್ಧವಾದ ಈ ವಿಜ್ಞಾನಾತ್ಮವು ಸಮಸ್ತ ಭೂತಗಳಿಗೆ ಅಧಿಪತಿಯಾದ ರಾಜನಾಗುತ್ತಿದೆ. ಅಂತಹ ಆತ್ಮಸ್ವರೂಪದಲ್ಲಿ ಸರ್ವಪ್ರಾಣಿಗಳು, ಸಮಸ್ತ ಲೋಕಗಳು ಸರ್ವ ದೇವತೆಗಳು, ಸರ್ವಭೂತಗಳು, ಈ ಸಮಸ್ತ ಆತ್ಮಗಳು ಇವೆಲ್ಲವೂ ರಥಚಕ್ರದಲ್ಲಿರುವ ಅರೆಗಳಂತೆ ಮಧ್ಯದಲ್ಲಿ ಜೋಡಿಸಲ್ಪಟ್ಟಿವೆ.

**ಮಂ.ಶ್ಲೋ॥ ಇದಂ ವೈ ತಸ್ಮಧು ದಧ್ಯಙ್ಞಾಥರ್ವಣೋಽಶ್ವಿಭ್ಯಾಮುವಾಚ ತದೇತದೃಷಿಃ ಪಶ್ಯನ್ನವೋಚತ್ ತದ್ವಾಂ ನರಾನನಯೇದಗ್ಂ ಸ ಉಗ್ರಮಾವಿಷ್ಕೃಣೋಮಿ ತಸ್ಯ ತುರ್ನವೃಷ್ಟಿಂ । ದಧ್ಯಙ್ ಹಯನ್ಮಧ್ವಾಽಥರ್ವಣೋ ವಾಮಶ್ವಸ್ಯಶೀರ್ಷ್ಣಾ ಪ್ರಯದೀಮುವಾಚೇತಿ (16)**

ತಾ : ಈ ಸುಪ್ರಸಿದ್ಧವಾದ ಮಧುಸ್ವರೂಪವನ್ನು, ಅಥರ್ವಣ ಪುತ್ರನಾದ ದಧ್ಯಜ್ ಎನ್ನುವವನು, ಅಶ್ವಿನೀ ದೇವತೆಗಳಿಗಾಗಿ ಹೇಳಿದ. ಇದನ್ನು ಮಂತ್ರವಾಗಿಯೂ ಸಹ ಉಪದೇಶಿಸಿದ. ಓ ಅಶ್ವಿನೀ ದೇವತೆಗಳೇ! ನಿಮ್ಮ ಲಾಭದ ನಿಮಿತ್ತವಾಗಿ ಈ ಉಗ್ರವಾದ ದಂಸವೆನ್ನುವ ಹೆಸರುಳ್ಳ ಆ ಕರ್ಮವನ್ನು ಪರ್ಜನ್ಯನುವರ್ಷಿಸಿದ ರೀತಿಯಲ್ಲಿ ಪ್ರಕಟಪಡಿಸುತ್ತಿದ್ದೇನೆ ಎಂದು ಹೇಳಿದ. ಇಂದ್ರನು ಈ ಮಧು-ಬ್ರಾಹ್ಮಣದಿಂದ ಹೇಳಿದುದರಿಂದ ಮಧುವೆಂಬ ಹೆಸರುಳ್ಳ ಬ್ರಹ್ಮವಿದ್ಯೆಯನ್ನು ಯಾರಿಗೂ ಹೇಳಬಾರ-ದೆಂದು ಹೇಳಿದರೆ ನಿನ್ನ ಶಿರಸ್ಸು ಒಡೆದು ಚೂರಾಗುತ್ತದೆಯೆಂದು ಉಪದೇಶ ಸಮಯದಲ್ಲಿ ಪ್ರತಿಜ್ಞೆ ಮಾಡಿ ನನಗೆ ಹೇಳಿದ. ಆದ್ದರಿಂದ ನಿಮಗೆ ಹೇಳಲು ಭಯಪಡುತ್ತಿದ್ದೇನೆ. ಆ ಭಯವು ನಿಮ್ಮಿಂದ ದೂರವಾಗುವಂತಾದರೆ ನಿಮಗೆ ಆ ಮಧುವೆನ್ನುವ ಹೆಸರುಳ್ಳ ಬ್ರಹ್ಮವಿದ್ಯೆಯನ್ನು ಉಪದೇಶಿಸುತ್ತೇನೆ

ಎಂದು ನುಡಿದ. ಆಗ ಅಶ್ವಿನೀ ದೇವತೆಗಳು 'ಓ ಅಥರ್ವಣಾ! ನಿನಗೆ ಆ ಭಯವೆಷ್ಟು ಮಾತ್ರವೂ ಬೇಡ. ನಾವೀಗ ನಿನ್ನ ಶಿರಸ್ಸನ್ನು ಛೇದಿಸಿ ಮತ್ತೊಂದು ಕಡೆ ಇಟ್ಟು ಅಶ್ವದ ಶಿರಸ್ಸನ್ನು ನಿನಗೆ ಜೋಡಿಸುತ್ತೇವೆ. ಆ ಶಿರಸ್ಸಿನಲ್ಲಿ ನಮಗೆ ಉಪದೇಶ ಮಾಡುವಂತಹವನಾಗು! ಎಂದು ಹೇಳಿದರು. ಇಂದ್ರನು ಕೋಪಗೊಂಡು ಆ ಶಿರಸ್ಸನ್ನು ಛೇದಿಸಿದರೆ ಮತ್ತೆ ನಿನ್ನ ಶಿರಸ್ಸನ್ನು ಜೋಡಿಸುತ್ತೇವೆ. ಎಂದು ಪ್ರತಿಜ್ಞೆ ಮಾಡಿ ಆ ಪ್ರಕಾರ ಮಾಡಿದ ಅಶ್ವಿನೀ ದೇವತೆಗಳು ಅಥರ್ವಣನೆಂಬ ದಧ್ವಜ್ ಎನ್ನುವವನ ಮೂಲಕ ಬ್ರಹ್ಮವಿದ್ಯೆಯನ್ನು ಹೊಂದಿದರು. (ಮಧು ವಿದ್ಯೆಯ ಶ್ರೇಷ್ಠತೆಯನ್ನು ತಿಳಿಸುವುದೇ ಈ ಕಥೆಯ ಉದ್ದೇಶ.)

**ಮಂ.ಶ್ಲೋ|| ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋऽಶ್ವಿಭ್ಯಾಮುವಾಚ । ತದೇತದೃಷಿಃ ಪಶ್ಯನ್ನವೋಚತ್। ಅಥರ್ವಣಾಯಾಶ್ವಿನೌ ದಧೀಚೇऽಶ್ವ್ಯಂಗ್‌ಶಿರಃ ಪ್ರತ್ಯೈರಯತಂ । ಸ ವಾಂ ಮಧು ಪ್ರವೋಚ ದೃತಾಯನ್ ತ್ವಾಷ್ಟ್ರಂ ಯದ್ಧಸ್ರಾವ ವಿಕಕ್ಷ್ಯಂ ವಾಮಿತಿ (17)**

ತಾ : ಅಥರ್ವಣ ಪುತ್ರನಾದ ದಧ್ಯಜ್ ಎನ್ನುವವನು ಆ ಸುಪ್ರಸಿದ್ಧವಾದ ಮಧು ಸ್ವರೂಪವನ್ನು ದೇವ ವೈದ್ಯರಾದ ಅಶ್ವಿನೀದೇವತೆಗಳಿಗೆ ತಿಳಿಸಿಕೊಟ್ಟು ಮಂತ್ರ ಸಿದ್ಧಿಯೊಂದಿಗೆ ಓ ಅಶ್ವಿನೀ ದೇವತೆಗಳೇ! ನಿಮ್ಮಿಂದ ದಧ್ವಜ್ ಎನ್ನುವ ಮುನಿಗೆ ಅಶ್ವ ಶಿರಸ್ಸು ಲಭಿಸಿತು. ಆ ದಧ್ಯಜ್ ಎನ್ನುವ ಋಷಿ ತಾನು ಈ ಮೊದಲು ಮಾಡಿದ ವಾಗ್ದಾನವನ್ನು ಮರೆಯದೆ, ಉಪದೇಶ ಮಾಡಲು ಮುಂದಾಗಿ ಸತ್ಯವಾಕ್ಯ ಪಾಲನೆಯಲ್ಲಿ ಇಚ್ಛೆಯುಳ್ಳವರಾಗಿ, ಪ್ರವರ್ಗ್ಯ ಕರ್ಮಾಂಗ ಭೂತವಾದ ಶಿರಚ್ಛೇದನ, ಶಿರಸ್ಸಂಧಾನಾದಿ ರೂಪವಾದ ವಿಜ್ಞಾನವನ್ನು, ರಹಸ್ಯವಾದ ಪರಮಾತ್ಮ ಸಂಬಂಧವಾದ ವಿಜ್ಞಾನವನ್ನು ತಮಗೆ ಬೋಧಿಸಿದ ಎಂದು ಹೇಳಿದನು.

**ಮಂ.ಶ್ಲೋ|| ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋऽಶ್ವಿಭ್ಯಾಮುವಾಚ ತದೇತದೃಷಿಃ ಪಶ್ಯನ್ನವೋಚತ್। ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ । ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಅವಿಶದಿತಿ ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚ ನಾನಾವೃತಂ ನೈನೇನ ಕಿಂಚನಾ ಸಂವೃತಮ್ (18)**

ತಾ : ದಧ್ಯಜ್ ಎನ್ನುವ ಹೆಸರುಳ್ಳ ಅಥರ್ವಣ ಪುತ್ರನು ಈ ಪ್ರಸಿದ್ಧ ಮಧುಸ್ವರೂಪವನ್ನು ದೇವವೈದ್ಯರಾದ ಅಶ್ವಿನೀದೇವತೆಗಳಿಗೆ ಬೋಧಿಸಿದ. ಅದು ಮಂತ್ರ ಸಿದ್ಧಿಯನ್ನು ಹೊಂದಿದೆಯೆಂದು ಹೇಳಿದ. ಎರಡು ಪಾದಗಳುಳ್ಳ ಶರೀರಗಳನ್ನು (ಮನುಷ್ಯರನ್ನು) ಸೃಷ್ಟಿಸಿದ. ಅದೇ ರೀತಿ ನಾಲ್ಕು ಪಾದಗಳುಳ್ಳ (ಪಶು ಶರೀರಗಳನ್ನು) ಉಂಟುಮಾಡಿದ. ಆ ಈಶ್ವರನು ಮೊದಲು ಲಿಂಗ ಶರೀರವಾಗಿ ಮಾರ್ಪಟ್ಟು ಎಲ್ಲ ಶರೀರಗಳಲ್ಲೂ ಜೀವ ರೂಪನಾಗಿ ಪ್ರವೇಶಿಸಿದ. ಆ ಪ್ರಸಿದ್ಧನಾದ ಈ ಪುರುಷನೇ ಸಮಸ್ತ ದೇಹಗಳಲ್ಲಿ ಪುರ ಶಬ್ದವಾಚ್ಯವಾದ ದೇಹಗಳಲ್ಲಿರುವಂತಹವನಾಗಿ, ಎಲ್ಲೆಡೆಯೂ ತುಂಬಿದ್ದಾನೆ. ಪುರುಷ ಸ್ವರೂಪನಾದ ಈಶ್ವರನಿಂದ ಮುಚ್ಚಲ್ಪಟ್ಟಿರುವುದೆಂದು ಒಳಗೆ ಪ್ರವೇಶಿಸಲಾಗದಂತಹುದೆಂದು ಸ್ವಲ್ಪವೂ ಇಲ್ಲ. ಹೀಗೆ ಬಾಹ್ಯಾಂತರದಲ್ಲಿ ನಾಮರೂಪಾತ್ಮಕವಾದ ದೇಹೇಂದ್ರಿಯ ರೂಪದಲ್ಲಿರುವಂತಹ ಈಶ್ವರನಿಂದ ತುಂಬಿರುವುದು ಸ್ವಲ್ಪವೂ ಇಲ್ಲವಾದುದರಿಂದ ಈತನನ್ನು ಪೂರ್ಣನೆಂದು ಪುರುಷನೆಂದು ಹೇಳುವರು.

ಮಂ.ಶ್ಲೋ॥ ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ ತದೇತದೃಷಿಃ ಪಶ್ಯನ್ನವೋಚತ್। ರೂಪಗ್ಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ। ಇನ್ದ್ರೋ ಮಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹಾರಯಃ ಶತಾ ದಶೇತಿ। ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಬಹೂನಿ ಚಾನನ್ತಾನಿ ಚ ತದೇತದ್ಬ್ರಹ್ಮಾ ಪೂರ್ವಮನಪರಮನನ್ತರಮಬಾಹ್ಯಾಮಯಮಾತ್ಮಾ ಬ್ರಹ್ಮಾ ಸರ್ವಾನುಭೂರಿತ್ಯನು ಶಾಸನಮ್ (19)

ತಾ : ದಧ್ಯಙ್ ಎನ್ನುವ ಹೆಸರುಳ್ಳ ಅಥರ್ವಣ ಮುನಿಯ ಮಗನಾದ ಈತ ಈ ಪ್ರಸಿದ್ಧನಾದ ಮಧು ಸ್ವರೂಪವನ್ನು ದೇವವೈದ್ಯರಾದ ಅಶ್ವಿನೀ ದೇವತೆಗಳಿಗೆ ಬೋಧಿಸಿದ. ಇದನ್ನೇ ಮಂತ್ರವಾಗಿ ಉಪದೇಶಿಸಿದ. ಆ ಪರಮೇಶ್ವರನು ಈ ಆತ್ಮ ಸ್ವರೂಪವನ್ನು ಬೋಧಿಸುವುದಕ್ಕಾಗಿ ಸಮಾನವಾದ ಮತ್ತೊಂದು ರೂಪವನ್ನು ಧರಿಸಿದ. ಪರಮೇಶ್ವರನು ಮಾಯಾ ಪ್ರಜ್ಞೆಯಿಂದ ಅನೇಕ ರೂಪಗಳನ್ನುಳ್ಳ-ವಾಗಿದ್ದಾನೆ. ಆ ಪರಮೇಶ್ವರನಿಗಿರುವ ಇಂದ್ರಿಯಗಳು, ಹತ್ತಾಗಿ, ನೂರಾಗಿ, ಆಗುತ್ತಿವೆ. ಆದ್ದರಿಂದ ಆ ಪರಮೇಶ್ವರನೇ ಹತ್ತಾಗಿ ನೂರಾಗಿ ಆಗುತ್ತಿದ್ದಾನೆ. ಆದ್ದರಿಂದ ಈ ಪರಮೇಶ್ವರನೇ, ಇಂದ್ರಿಯಗಳು. ಈ ಪರಮೇಶ್ವರನೇ ಹತ್ತು ಸಾವಿರವಾಗಿ ಅನೇಕವಾಗಿ, ಅಂತ್ಯವಿಲ್ಲದ್ದಾಗಿ, ಆಗುತ್ತಿದ್ದಾನೆ. ಈ ಆತ್ಮ ಅಪೂರ್ವವಾದುದು; ಪರ ಇಲ್ಲದಂತಹುದು, ಆನಂತರವು, ಬಾಹ್ಯವಿಲ್ಲದ್ದು. ಇದೇ ಆ ಪರಬ್ರಹ್ಮ. ಸರ್ವ ಸ್ವರೂಪದೊಂದಿಗೆ ಸಮಸ್ತವನ್ನು ಅನುಭವಿಸುತ್ತಿರುವ ಈ ಆತ್ಮವೇ ಪರಬ್ರಹ್ಮ ಸ್ವರೂಪವೆಂದು ಉಪದೇಶವಾಯಿತು.

## ಚತುರ್ಥಾಧ್ಯಾಯ – ಷಷ್ಠ ಬ್ರಾಹ್ಮಣಂ

ಮಂ.ಶ್ಲೋ॥ ಅಥ ವಗ್ಂಶಃ ಪೌತಿಮಾಷ್ಯೋ ಗೌಪನಾದ್ಗೌಪವನಃ ಪೌತಿಮಾಷ್ಯಾ ಗೌಪವನಾದ್ಗೌಪವನಃ ಕೌಶಿಕಾತ್ಕೌಶಿಕಃ ಕೌಂಡಿನ್ಯಾತ್ಕೌಂಡಿನ್ಯಃ ಶಾಂಡಿಲ್ಯಾಚ್ಛಾಂಡಿಲ್ಯಃ ಕೌಶಿಕಾಚ್ಚ ಗೌತಮಾಚ್ಚ ಗೌತಮಃ (1) ಅಗ್ನಿವೇಶ್ಯಾದಾಗ್ನಿವೇಶ್ಯಃ ಶಾಣ್ಡಿಲ್ಯಾಚ್ಚಾನಭಿಮ್ಲಾತಾಚ್ಚಾನಭಿಮ್ಲಾತ ಆನಭಿಮ್ಲಾತಾದಾನಭಿಮ್ಲಾತ ಆನಭಿಮ್ಲಾತಾದಾನಭಿಮ್ಲಾತೋ ಗೌತಮಾದ್ಗೌತಮಃ ಸೈತವ ಪ್ರಾಚೀನಯೋಗ್ಯಾಭ್ಯಾಗ್ಂ ಸೈತವಪ್ರಾಚೀನಯೋಗ್ಯೌ ಪಾರಾಶರ್ಯಾತ್ಪಾರಾಶರ್ಯೋ ಭಾರದ್ವಾಜಾದ್ಭಾರದ್ವಾಜೋ ಭಾರದ್ವಾಜಾಚ್ಚ ಗೌತಮಾಚ್ಚ ಗೌತಮೋ ಭಾರದ್ವಾಜಾ-ದ್ಭಾರದ್ವಾಜಃ ಪಾರಾಶರ್ಯಾತ್ಪಾರಾಶರ್ಯೋ ಬೈಜವಾಪಾಯನಾದ್ಬೈಜವಾಪಾಯನಃ ಕೌಶಿಕಾಯನೇಃ ಕೌಶಿಕಾಯನಿಃ (2) ಘೃತಕೌಶಿಕಾದ್ಘೃತಕೌಶಿಕಃ ಪಾರಾಶರ್ಯಾಯಣಾ-ತ್ಪಾರಾಶರ್ಯಾಯಣಃ ಪರಾಶರ್ಯಾತ್ಪಾರಾಶರ್ಯೋ ಜಾತೂಕರ್ಣ್ಯಾಜ್ಜಾತೂಕರ್ಣ್ಯ ಆಸುರಾಯಣಾಚ್ಚ ಯಾಸ್ಕಾಚ್ಚಾಸುರಾಯಣಸ್ತ್ರೈವಣೇ ಸ್ತ್ರೈವಣೇ ರೌಪಜುನ್ನನೇ ರೌಪನಜುನ್ಧನಿ - ರಾಸುರೇ ರಾಸುರಿರ್ಭಾರದ್ವಾಜಾದ್ಭಾರದ್ವಾಜಾ ಆತ್ರೇಯಾದಾತ್ರೇಯೋ ಮಾಣ್ಟೇರ್ಮಾಣ್ಟೇ-ರ್ಗೌತಮಾದ್ಗೌತಮೋ ಗೌತಮಾದ್ಗೌತಮೋ ವಾತ್ಸ್ಯಾದ್ವಾತ್ಸ್ಯಃ ಶಾಣ್ಡಿಲ್ಯಾಚ್ಛಾಣ್ಡಿಲ್ಯಃ

ಕೈಶೋರ್ಯಾತ್ಕಾಶೋರ್ಯಃ ಕಾಪ್ಯಃ ಕುಮಾರಹಾರಿತಾತ್ ಕುಮಾರಹಾರಿತೋ ಗಾಲವಾ-
ದ್ಗಾಲವೋ ವಿದರ್ಭೀಕೌಣ್ಡಿನ್ಯಾದ್ವಿದರ್ಭೀಕೌಣ್ಡಿನ್ಯೋ ವತ್ಸನಪಾತೋ ಬಾಭ್ರವಾದ್ವತ್ಸನ-
ಪಾದ್ಬಾಭ್ರವಃ ಪಥಸ್ಸೌಭರಾತ್ಪನ್ಥಾಸ್ಸೌಭರೋಽಯಾಸ್ಯಾದಾಙ್ಗಿರಸಾದಯಾಸ್ಯಆಙ್ಗೀರಸ
ಆಭೂತೇ ಸ್ತ್ವಾಷ್ಟ್ರಾದಾಭೂತಿ ಸ್ತ್ವಾಷ್ಟ್ರೋ ವಿಶ್ವರೂಪಾತ್ತ್ವಾಷ್ಟ್ರಾದ್ವಿಶ್ವರೂಪ ಸ್ತ್ವಾಷ್ಟ್ರೋಽ-
ಶ್ವಿಭ್ಯಾಮಶ್ವಿನೌ ದಧೀಚ ಅಥರ್ವಣಾದ್ಧಧ್ಯಙ್ಙಾಥರ್ವಣೋಽಥರ್ವಣೋ ದೈವಾದಥರ್ವಾದೈವೋ
ಮೃತ್ಯೋಃ ಪ್ರಾಧ್ವಗ್‌ಂ ಸನ್ಮಾನ್ಮೃತ್ಯುಃ ಪ್ರಾಧ್ವಗ್‌ಂ ಸನಃ ಪ್ರಧ್ವಗ್‌ಂ ಸನಾತ್ಪ್ರಧ್ವಗ್‌ಂ ಸನ
ಏಕರ್‌ಷೇರೇಕರ್‌ಷಿರ್ವಿಪ್ರಚಿತ್ತೇರ್ವಿಪ್ರಚಿತ್ತಿರ್ವ್ಯಷ್ಟೇರ್ವ್ಯಷ್ಟೇಸ್ಸನಾರೋಃ ಸನಾರುಸ್ಸನಾತನಾತ್ಸನಾತನ
ಸ್ಸನಕಾತ್ಸನಕಃ ಪರಮೇಷ್ಠಿನಃ ಪರಮೇಷ್ಠೀ ಬ್ರಹ್ಮಣೋ ಬ್ರಹ್ಮ ಸ್ವಯಮ್ಭು ಬ್ರಹ್ಮಣೇ ನಮಃ (3)

ತಾ : ಇದುವರೆಗೂ ಬೋಧಿಸಿರುವ ಬ್ರಹ್ಮವಿದ್ಯೆಗೆ ಆಚಾರ್ಯ ಪರಂಪರೆ, ಗುರು ಶಿಷ್ಯ ಪರಂಪರೆ, ಪೌತಿಮಾಷ್ಯ ಋಷಿಯಿಂದ ವೇದವೆನ್ನುವ ಹೆಸರುಳ್ಳ ಬ್ರಹ್ಮ ಪರ್ಯಂತವು ಹೇಳಲಾಗಿದೆ. ಗುರುಶಿಷ್ಯ ವಂಶ ಪರಂಪರೆಯಲ್ಲಿ ಆದ್ಯಂತಗಳಲ್ಲಿ ಮಾಡತಕ್ಕ ಪ್ರಾರ್ಥನೆ, ಮಂಗಳವನ್ನು ತಿಳಿಯ ಪಡಿಸಲು ಅದಕ್ಕೆ ಮೊದಲು ಪರಬ್ರಹ್ಮವನ್ನು ಕುರಿತು ನಮಸ್ಕಾರವೆಂದು ಹೇಳಲಾಗಿದೆ. (ಈ ಮಂತ್ರದಲ್ಲಿ ಆಚಾರ್ಯ ಋಷಿಗಳ ಹೆಸರುಗಳು, ಗುರುಶಿಷ್ಯ ಪರಂಪರೆಯಲ್ಲಿನ ಹೆಸರುಗಳು ಮಾತ್ರ ಕ್ರಮವಾಗಿ ಹೇಳಲಾಗಿದೆ. ಆದ್ದರಿಂದ ಪ್ರತ್ಯೇಕವಾದ ತಾತ್ಪರ್ಯವನ್ನು ಬರೆಯಲಿಲ್ಲ.) (ಈ ಅಧ್ಯಾಯದಲ್ಲಿ 6 ಬ್ರಾಹ್ಮಣಗಳು 66 ಮಂತ್ರಗಳು ಇವೆ.)

# ಪಞ್ಚಮಾಧ್ಯಾಯ – ಪ್ರಥಮ ಬ್ರಾಹ್ಮಣಂ

ಮಂ.ಶ್ಲೋ॥ ಜನಕೋ ಹ ವೈದೇಹೋ ಬಹುದಕ್ಷಿಣೇನ ಯಜ್ಞೇನೇಜೇ ತತ್ರ ಹ ಕುರುಪಾಂಚಾಲಾನಾಂ
ಬ್ರಾಹ್ಮಣಾ ಅಭಿಸಮೇತಾ ಬಭೂವು ಸ್ತಸ್ಯಹ ಜನಕಸ್ಯ ವೈದೇಹಸ್ಯ ವಿಜಿಜ್ಞಾಸಾ ಬಭೂವ
ಕಸ್ವಿದೇಷಾಂ ಬ್ರಾಹ್ಮಣಾನಾಮನೂಚಾನತಮ? ಇತಿ ಸ ಹ ಗವಾಗ್‌ಂ ಸಹಸ್ರಮವರು-
ರೋಧ ದಶ ದಶ ಪಾದಾ ಏಕೈಕಸ್ಯಾಃ ಶೃಙ್ಗಯೋರಾಬದ್ಧಾ ಬಭೂವುಃ (1)

ತಾ : (ಈ 5,6ನೆಯ ಅಧ್ಯಾಯಗಳನ್ನು ಯಾಜ್ಞವಲ್ಕ್ಯಕಾಂಡ ಅಥವಾ ಮುನಿಕಾಂಡ ಎಂದು ಹೇಳುವರು.) ವಿದೇಹ ದೇಶದ ಜನಕ ಮಹಾರಾಜನು ಬಹುವಾಗಿ ದಕ್ಷಿಣೆಯನ್ನು ನೀಡಿ ಅಶ್ವಮೇಧ ಯಜ್ಞವನ್ನು ಮಾಡಿದ. ಕುರುಪಾಂಚಾಲ ದೇಶದಿಂದ ಅನೇಕ ಮಂದಿ ಬ್ರಾಹ್ಮಣೋತ್ತಮ-ರೆಲ್ಲರೂ ಯಜ್ಞಕ್ಕೆ ದಯಮಾಡಿಸಿದ್ದರು. ಅವರಲ್ಲಿ ಯಾರು ವೇದಜ್ಞರೋ (ಬ್ರಹ್ಮಜ್ಞನೋ) ತಿಳಿಯಲು ನಿಶ್ಚಯಿಸಿ. ಸಾವಿರ ಗೋವುಗಳನ್ನು ಒಂದೊಂದು ಗೋವಿಗೆ ಹತ್ತು ಹತ್ತು ಚಿನ್ನದ ನಾಣ್ಯಗಳ ಲೆಕ್ಕದೊಂದಿಗೆ, ಚಿನ್ನದ ತೊಡುಗೆಗಳನ್ನು ಗೋಶೃಂಗ(ಕೊಂಬು)ಗಳಿಗೆ ಅಲಂಕಾರ ಮಾಡಿ ಸಿದ್ಧ ಪಡಿಸಿದ್ದ. ಒಂದೊಂದು ಗೋಶೃಂಗಕ್ಕೆ ಐದೈದು ಬಂಗಾರದ ನಾಣ್ಯಗಳನ್ನು ಕಟ್ಟಿದರು)

ಮಂ.ಶ್ಲೋ॥ ತಾನ್ ಹೋವಾಚ ಬ್ರಾಹ್ಮಣಾ ಭಗವನ್ತೋ। ಯೋ ವೋ ಬ್ರಹ್ಮಿಷ್ಠಃ ಸ ಏತಾ ಗಾ
ಉದಜತಾಮಿತಿ। ತೇ ಹ ಬ್ರಾಹ್ಮಣಾ ಸ ದಧೃಷುರಥ ಹ ಯಾಜ್ಞವಲ್ಕ್ಯಃ ಸ್ವಮೇವ ಬ್ರಹ್ಮಚಾರಿಣ

**-ಮುವಾಚೈತಾಃ ಸೋಮ್ಯೋದಜಸಾಮಶ್ರವ ಇತಿ ತಾ ಹೋದಾ ಚಕಾರ ತೇ ಹ ಬ್ರಾಹ್ಮಣಾ ಶ್ಚುಕ್ರುಧುಃ ಕಥಂ ನೋ ಬ್ರಹ್ಮಿಷ್ಠೋ ಬ್ರವೀತೇತ್ಯಥ ಹಾ ಜನಕಸ್ಯ ವೇದೇಹಸ್ಯಹೋತಾ -ಶ್ವಲೋ ಬಭೂವ ಸ ಹೈನಂ ಪಪ್ರಚ್ಛ ತ್ವಂ ನು ಖಲು ನೋ ಯಾಜ್ಞವಲ್ಕ್ಯ ಬ್ರಹ್ಮಿಷ್ಠೋಸೀ ಇತಿ ಸ ಹೋವಾಚ ನಮೋ ವಯಂ ಬ್ರಹ್ಮೀಷ್ಠಾಯ ಕುರ್ಮೋ ಗೋಕಾಮ ಏವ ವಯಗ್ಂ ಸ್ಮ ಇತಿ ತಗ್ಂ ಹ ತತ ಏವ ಪ್ರಷ್ಟುಂ ದಧ್ರೇ ಹೋತಾಽಶ್ವಲಃ (2)**

ತಾ : ಎಲೈ ಬ್ರಾಹ್ಮಣೋತ್ತಮರೇ! ನಿಮ್ಮೆಲ್ಲರಲ್ಲಿ ಯಾರು ಬ್ರಹ್ಮನಿಷ್ಠರೋ ಅವರು ಈ ಗೋವು-ಗಳನ್ನು ತೆಗೆದುಕೊಂಡು ಹೋಗಬಹುದು ಎಂದು ಮಹಾರಾಜನು ಎಲ್ಲರಿಗೂ ತಿಳಿಸಿದ. ಆಗ ಆ ಗೋವುಗಳನ್ನು ಹೊಡೆದುಕೊಂಡು ಹೋಗುವುದಕ್ಕೆ ಆ ಬ್ರಾಹ್ಮಣರಿಗ್ಯಾರಿಗೂ ಶಕ್ತಿ ಸಾಲಲಿಲ್ಲ. ಧೈರ್ಯ ಬರಲಿಲ್ಲ. ಯಾಜ್ಞವಲ್ಕ್ಯ ಮಹಾಮುನಿಯು ತನ್ನ ಶಿಷ್ಯನಾದ ಸೋಮಶ್ರವ ಎನ್ನುವ ಬ್ರಹ್ಮಚಾರಿಯನ್ನು ಬರುವಂತೆ ಕರೆದು "ಓ ಸೌಮ್ಯಾ! ಈ ಗೋವುಗಳನ್ನು ನಮ್ಮ ಆಶ್ರಮಕ್ಕೆ ಹೊಡೆದುಕೊಂಡು ಹೋಗು" ಎಂದು ಆಜ್ಞೆ ಮಾಡಿದ. ಹಾಗೆಯೇ ಆಗಲೆಂದು ಆ ಶಿಷ್ಯನು ಗುರುಗಳು ಹೇಳಿದ ರೀತಿಯಲ್ಲಿ ಹಸುಗಳನ್ನು ಹೊಡೆದುಕೊಂಡು ಹೋದ. ಆಗ ನೆರೆದಿದ್ದ ಆ ಬ್ರಾಹ್ಮಣರು ಎಲ್ಲರಲ್ಲೂ ತಾನೊಬ್ಬನೇ ದೊಡ್ಡ ಬ್ರಹ್ಮನಿಷ್ಠನೆಂದು ಈತ ಹೇಗೆ ಹೇಳಿದನೆಂದು ಕುಪಿತರಾದರು. ಜನಕ ಮಹಾರಾಜನ ಹತ್ತಿರ ಅಶ್ವಲನೆನ್ನುವ ಒಬ್ಬ ಋತ್ವಿಕನಿದ್ದ. ಆ ಅಶ್ವಲನು ಯಾಜ್ಞವಲ್ಕ್ಯನನ್ನು ಕುರಿತು "ಓ ಯಾಜ್ಞವಲ್ಕ್ಯಾ! ನೀನೇ ನಮ್ಮೆಲ್ಲರಿಗಿಂತ ದೊಡ್ಡ ಬ್ರಹ್ಮವೇತ್ತನು, ಹೇಗಾದೆ? ಎಂದು ಪ್ರಶ್ನಿಸಿದ. ಹೀಗೆ ಕೇಳಿದಾಗ ಆ ಯಾಜ್ಞವಲ್ಕ್ಯನು ಆ ಅಶ್ವಲನನ್ನು ನೋಡಿ, "ನಾವು ಬ್ರಹ್ಮವೇತ್ತನಿಗೆ ನಮಸ್ಕರಿಸುತ್ತಿದ್ದೇವೆ. ನಾವು ಬ್ರಹ್ಮವೇತೃತ್ವಕ್ಕೆ ಪಣವಾಗಿಟ್ಟಿರುವ ಗೋವುಗಳನ್ನು, ಗೋಕಾಮರಾಗಿ, ಹೊಡೆದುಕೊಂಡು ಹೋದುವೇ ಹೊರತು, ಬ್ರಹ್ಮವೇತತ್ತ್ವದಲ್ಲಿನ ಅಭಿಮಾನದಿಂದ ತೆಗೆದುಕೊಂಡು ಹೋಗಲಿಲ್ಲ. ಆದ್ದರಿಂದ ನಾವು ಗೋವುಗಳನ್ನು ಕೋರಿದವರೇ ಆದವೆಂದು ಪರಿಹಾಸದಿಂದ ನುಡಿದರು. ಹೀಗೆ ಬ್ರಹ್ಮಿಷ್ಠಿ ಪಣವನ್ನು ಗ್ರಹಿಸಿದುದರಿಂದ ಋತ್ವಿಕ್ಕನಾದ ಅಶ್ವಲನು ಆ ಯಾಜ್ಞವಲ್ಕ್ಯನನ್ನು ಪ್ರಶ್ನಿಸಲು ಪ್ರಯತ್ನಿಸಿದ. (ಯಾಜ್ಞವಲ್ಕ್ಯನು ಯಜುಶ್ಶಾಖಾಧ್ಯಾಪಕನಾದರೂ 4 ವೇದಗಳಲ್ಲೂ ಪಾರಂಗತನಾಗಿದ್ದನು.)

**ಮಂ.ಶ್ಲೋ॥ ಯಾಜ್ಞವಲ್ಕ್ಯೆತಿ ಹೋವಾಚ ಯದಿದಗ್ಂ ಸರ್ವಂ ಮೃತ್ಯುನಾಪ್ತಗ್ಂ ಸರ್ವಂ ಮೃತ್ಯು-ನಾಭಿಪನ್ನಂ ಕೇನ ಯಜಮಾನೋ ಮೃತ್ಯೋರಾಪ್ತಿಮತಿಮುಚ್ಯತ ಇತಿ ಹೋತ್ರರ್ತ್ವಿಜಾಗ್ನಿನಾ ವಾಚಾ ವಾಗ್ವೈ ಯಜ್ಞಸ್ಯ ಹೋತಾ ತದ್ಯೇಯಂ ವಾಕ್ ಸೋಽಯಮಗ್ನಿಃ ಸ ಹೋತಾ ಸಮುಕ್ತಿಸ್ಸಾತಿಮುಕ್ತಿಃ (3)**

ತಾ : ಅಶ್ವಲನು:- ಓ ಯಾಜ್ಞವಲ್ಕ್ಯಾ! ಅಗ್ನಿ ಮೊದಲಾದ ಈ ಸರ್ವವು ಕರ್ಮಲಕ್ಷಣವಾದ ಮೃತ್ಯುವಿನಿಂದ ವ್ಯಾಪಿಸಿ ಮೃತ್ಯುವಿನ ಸ್ವಾಧೀನವಾಗಿದೆ. ಯಜಮಾನನು ಯಾವ ಸಾಧನದಿಂದ ಮೃತ್ಯುವನ್ನು ಅತಿಕ್ರಮಿಸಬಲ್ಲ? ಯಾಜ್ಞವಲ್ಕ್ಯ ಎಲೈ ಅಶ್ವಲಾ! ಯಜಮಾನನ ವಾಕ್ಕೇ ಹೋತ್ರವಾಗಿ, ಈ ವಾಕ್ಕೇ ಆ ಅಗ್ನಿಯಾಗಿ, ಈ ಅಗ್ನಿಯೇ ಆ ಹೋತ್ರವಾಗಿ, ತಿಳಿದುಕೊಂಡು ಹೋತಾಗ್ನಿ-ಗಳೆರಡನ್ನೂ ಅಧಿದೈವತವಾದ ಅಗ್ನಿರೂಪದಲ್ಲಿ ನೋಡುವುದೇ ಮುಕ್ತಿ. ಅಧಿದೇವತಾ ಸ್ವರೂಪವಾದ

ಅಗ್ನಿ ಭಾವನೆಯ ಪ್ರಾಪ್ತಿ ಅತಿಮುಕ್ತಿ. ಹೀಗೆ ಯಜಮಾನನು ಕರ್ಮಸಾಧನಗಳಾದ ಹೋತಾಗ್ನಿ ಎರಡನ್ನು ಅಗ್ನಿ ಸ್ವರೂಪವಾಗಿ ದರ್ಶಿಸುವುದರಿಂದ ಮೃತ್ಯುವನ್ನು ಅತಿಕ್ರಮಿಸಿ ಪ್ರಕಾಶಿಸುತ್ತಿದ್ದಾನೆ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್‌ಂ ಸರ್ವಮಹೋರಾತ್ರಾಭ್ಯಾಮಾಪ್ತಗ್‌ಂ ಸರ್ವ-ಮಹೋರಾತ್ರಾಭ್ಯಾಮಭಿಪನ್ನಂ ಕೇನ ಯಜಮಾನೋಽಹೋರಾತ್ರಯೋರಾಪ್ತಿಮತಿ-ಮುಚ್ಯತ ಇತ್ಯಧ್ವರ್ಯುಣರ್ತ್ವಿಜಾ ಚಕ್ಷುಷಾಽಽದಿತ್ಯೇನ ಚಕ್ಷುರ್ವೈ ಯಜ್ಞಸ್ಯಾಧ್ವರ್ಯುಸ್ತದ್ಯದಿದಂ ಚಕ್ಷುಃ ಸೋಽಸಾವಾದಿತ್ಯಃ ಸೋಽಧ್ವರ್ಯುಃ ಸ ಮುಕ್ತಿಃ ಸಾತಿಮುಕ್ತಿಃ (4)**

ತಾ : ಅಶ್ವಲಮುನಿ:- ಅಯ್ಯಾ! ಈ ಸಮಸ್ತವು ಹಗಲುರಾತ್ರಿಗಳಿಂದ ವ್ಯಾಪ್ತವಾಗಿದೆ. ಹಗಲು ರಾತ್ರಿಗಳಿಗೆ ವಶವಾಗಿದೆ. ಯಜಮಾನನು ಯಾವ ಸಾಧನದಿಂದ ಈ ಅಹೋರಾತ್ರಿಗಳನ್ನು ಕಳೆದು ಮೋಕ್ಷವನ್ನು ಹೊಂದುವನು? ಯಾಜ್ಞವಲ್ಕ್ಯ ಮುನಿ:- ಅಧ್ವರ್ಯುವೆನ್ನುವ ಋತ್ವಿಜನ ಮೂಲಕ, ನೇತ್ರರೂಪನಾದ ಆದಿತ್ಯನ ಮೂಲಕ, ಚಕ್ಷುಸ್ಸೇ ಯಜ್ಞದ ಅಧ್ವರ್ಯನು ಈ ನೇತ್ರವೇ ಆದಿತ್ಯ. ಅದೇ ಅಧ್ವರ್ಯುವು ಮುಕ್ತಿಯು ಅತಿ ಮುಕ್ತಿಯೂ ಸಹ. ಹೀಗೆ ಅಧ್ಯಾತ್ಮ ರೂಪವಾದ ಚಕ್ಷುಸ್ಸನ್ನು ಕರ್ಮ ಸಾಧನಗಳಾದ ಆದಿತ್ಯಾಧ್ವರ್ಯುಗಳನ್ನು ಅಧಿದೇವತಾರೂಪವಾದ ಸೂರ್ಯ ಸ್ವರೂಪದಲ್ಲಿ ನೋಡುವುದೇ ಮೋಕ್ಷ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್‌ಂ ಸರ್ವಂ ಪೂರ್ವಪಕ್ಷಾಪರಪಕ್ಷಾಭ್ಯಾಮಾಪ್ತಗ್‌ಂ ಸರ್ವಂ ಪೂರ್ವಪಕ್ಷಾಪರಪಕ್ಷಾಭ್ಯಾಮಭಿಪನ್ನಂ ಕೇನ ಯಜಮಾನಃ ಪೂರ್ವಪಕ್ಷಾಪರಪಕ್ಷ-ಯೋರಾಪ್ತಿಮತಿ ಮುಚ್ಯತ ಇತ್ಯುದ್ಗಾತ್ರರ್ತ್ವಿಜಾ ವಾಯುನಾ ಪ್ರಾಣೇನ ಪ್ರಾಣೋ ವೈ ಯಜ್ಞಸ್ಯೋದ್ಗಾತಾ ತದ್ಯೋಽಯಂ ಪ್ರಾಣಸ್ಸ ವಾಯುಃ ಸ ಉದ್ಗಾತಾ ಸ ಮುಕ್ತಿಃ ಸಾತಿಮುಕ್ತಿಃ (5)**

ತಾ : ಅಶ್ವಲನು:- ಓ ಯಾಜ್ಞವಲ್ಕ್ಯಾ! ಇದೆಲ್ಲವೂ ಪೂರ್ವಪಕ್ಷ. ಅಪರ ಪಕ್ಷ; ಎಂದರೆ ಶುಕ್ಲ ಪಕ್ಷ, ಕೃಷ್ಣ ಪಕ್ಷಗಳಿಂದ ವ್ಯಾಪಿಸಲ್ಪಟ್ಟಿದೆ. ಇದು ಪೂರ್ವ ಅಪರ ಪಕ್ಷಗಳ ವಶವಾಗಿದೆ. ಯಜಮಾನನು ಯಾವ ಸಾಧನದಿಂದ ಈ ಎರಡು ಪಕ್ಷಗಳನ್ನು ದಾಟಿ ಮೋಕ್ಷವನ್ನು ಹೊಂದುವನು? ಯಾಜ್ಞವಲ್ಕ್ಯ ಹೇಳುತ್ತಾನೆ; ಪ್ರಾಣಶಕ್ತಿಯಿಂದ ಉದ್ಗಾತವೆಂಬ ವಾಯುವಿನಿಂದ ಅತಿಕ್ರಮಿಸಬಹುದು. ಪ್ರಾಣವೇ ಈ ಯಜ್ಞದ ಉದ್ಗಾತ. ಈ ಪ್ರಾಣವೇ ವಾಯುವು. ಇದೇ ಉದ್ಗಾತ. ಈ ಪ್ರಕಾರ ಅಭೇದವಾಗಿ ತಿಳಿದುಕೊಂಡಲ್ಲಿ ಅದೇ ಮೋಕ್ಷ, ಅದೇ ಅತಿಮುಕ್ತಿ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯದಿದಮನ್ತರಿಕ್ಷಮನಾರಮ್ಭಣಮಿವ ಕೇನಾಕ್ರಮೇಣ ಯಜಮಾನಃ ಸ್ವರ್ಗಂ ಲೋಕಮಾಕ್ರಮತ ಇತಿ ಬ್ರಹ್ಮಣರ್ತ್ವಿಜಾ ಮನಸಾ ಚನ್ದ್ರೇಣ ಮನೋ ವೈ ಯಜ್ಞಸ್ಯ ಬ್ರಹ್ಮಾ ತದ್ಯದಿದಂ ಮನಃ ಸೋಽಸಾ ಚನ್ದ್ರಃ ಸ ಬ್ರಹ್ಮಾ ಸಮುಕ್ತಿಃ ಸಾತಿಮುಕ್ತಿರಿತ್ಯತಿಮೋಕ್ಷಾ ಅಥ ಸಮ್ಪದಃ (6)**

ತಾ : ಓ ಯಾಜ್ಞವಲ್ಕ್ಯಾ! ಈ ಅಂತರಿಕ್ಷವು ಯಾವ ಆಧಾರವೂ ಇಲ್ಲದೆ ಇರುವ ಹಾಗೆ

ಕಾಣಿಸುತ್ತಿದೆ. ಯಜಮಾನನು ಯಾವ ಆಧಾರದ ಮೇಲೆ ಕರ್ಮಫಲವಾದ ಸ್ವರ್ಗಕ್ಕೆ ಹೋಗುತ್ತಿದ್ದಾನೆ? ಎಂದು ಪ್ರಶ್ನಿಸಿದ. ಹೀಗೆ ಕೇಳಲು ಯಾಜ್ಞವಲ್ಕ್ಯನು:- ಓ ಅಶ್ವಲಾ! ಯಜಮಾನನು ಬ್ರಹ್ಮನೆನ್ನುವ ಋತ್ವಿಕ್ಕಿನ ರೂಪನು ಮನೋರೂಪನಾದ ಚಂದ್ರನಿಂದ ಕರ್ಮಫಲವಾದ ಸ್ವರ್ಗಲೋಕಕ್ಕೆ ತೆರಳಿ ಅತಿಮುಕ್ತನಾಗುತ್ತಾನೆ. ಆ ಯಜಮಾನನ ಮನಸ್ಸೇ ಬ್ರಹ್ಮ ಎನ್ನುವ ಋತ್ವಿಕ್ಕು. ಈ ರೀತಿಯಾಗಿ ಅಧ್ಯಾತ್ಮ ಸ್ವರೂಪವಾದ ಆ ಯಜಮಾನನ ಮನಸ್ಸೇ ಅದಿದೈವತವಾದ ಈ ಚಂದ್ರ. ಈ ಚಂದ್ರನೇ ಬ್ರಹ್ಮನೆನ್ನುವ ಋತ್ವಿಕ್ಕು. ಈ ರೀತಿಯಾಗಿ ಅಧ್ಯಾತ್ಮ ರೂಪವಾದ ಮನಸ್ಸನ್ನು ಕರ್ಮಸಾಧನವಾದ ಬ್ರಹ್ಮಯೆನ್ನುವ ಋತ್ವಿಕ್ಕನನ್ನು ಚಂದ್ರನ ಒಂದೇ ಆದ (ಅಧಿದೈವವಾದ) ರೂಪದಲ್ಲಿ ಕಾಣುವುದೇ ಮುಕ್ತಿ. ಈ ಪ್ರಕಾರ ಅತಿಮುಕ್ತಿಗಳನ್ನು ಹೇಳಿ ಈಗ ಕರ್ಮಸಾಧನಗಳಾದ ಆಜ್ಯಾದ್ಯಾಹುತಿ ಸಂಪಾದನೆಯ ರೂಪವಾದ ಸಂಪತ್ತುಗಳನ್ನು ವಿವರಿಸುತ್ತಿದ್ದಾನೆ. (ಯಾಗಪರ್ಯವೇಷಿಕನನ್ನು ಬ್ರಹ್ಮವೆನ್ನುವರು.)

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಕತಿಭಿರಯಮದ್ಯರ್ಗ್ಭಿ ರ್ಹೋತಾಸ್ಮಿನ್ಯಜ್ಞೇ ಕರಿಷ್ಯತೀತಿ ತಿಸೃಭಿರಿತಿ ಕತಮಾ ಸ್ತಾಸ್ತಿಸ್ರ ಇತಿ ಪುರೋಽನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ಚ ತೃತೀಯಾ ಕಿಂತಾಭಿರ್ಜಯತೀತಿ ಯತ್ಕಿಂಚೇದಂ ಪ್ರಾಣಭೃದಿತಿ (7)**

ತಾ : ಆ ಅಶ್ವಲನು, "ಓ ಯಾಜ್ಞವಲ್ಕ್ಯಾ!" ಎಂದು ಕರೆದ. ಈ ಋತ್ವಿಕ್ಕು, ಈಗ ಯಜ್ಞದಲ್ಲಿ ಎಷ್ಟು ಋಙ್ಮಂತ್ರಗಳಿಂದ ಹೋತ್ರವನ್ನು ಮಾಡುವನು?" ಎಂದು ಪ್ರಶ್ನಿಸಿದ. ಯಾಜ್ಞವಲ್ಕ್ಯನು ಮೂರರಿಂದ ಎಂದು ಹೇಳಿದ. ಆ ಮೂರು ಯಾವುವು? ಎಂದು ಅಶ್ವಲನು ಕೇಳಿದ. ಒಂದು ಪುರೋನು ವಾಕ್ಯ ಎನ್ನುವುದು. ಎರಡನೆಯದು ಆಜ್ಯ. ಮೂರನೆಯದು ಶಸ್ಯವೆನ್ನುವುದಾಗಿದೆ. ಈ ರೀತಿಯಾಗಿ ಯಾಜ್ಞವಲ್ಕ್ಯನು ಉತ್ತರ ಹೇಳಿದ. ಅವುಗಳಿಂದ ಯಜಮಾನ ಏನನ್ನು ಜಯಿಸುತ್ತಾನೆ? ಎಂದು ಅಶ್ವಲನು ಮತ್ತೆ ಪ್ರಶ್ನಿಸಿದ. ಈ ಸಮಸ್ತವಾದ ಪ್ರಾಣಿ ಸಮುದಾಯವನ್ನು ಜಯಿಸುವಂತಹವನಾಗುವನು ಎಂದು ಯಾಜ್ಞವಲ್ಕ್ಯನು ಉತ್ತರ ಹೇಳಿದ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಕತ್ಯಯಮದ್ಯಾಧ್ವರ್ಯುರಸ್ಮಿನ್ಯಜ್ಞ ಆಹುತೀರ್ಹೋಷ್ಯತೀತಿ ತಿಸ್ರ ಇತಿ ಕತಮಾ ಸ್ತಾಸ್ತಿಸ್ರ ಇತಿ ಯಾ ಹುತಾ ಉಜ್ಜ್ವಲನ್ತಿ ಯಾ ಹುತಾ ಅತಿನೇದನ್ತೇ-ಯಾ ಹುತಾ ಅಧಿಶೇರತೇ ಕಿಂ ತಾಭಿರ್ಜಯತೀತಿ ಯಾ ಹುತಾ ಉಜ್ಜ್ವಲನ್ತಿ ದೇವ-ಲೋಕಮೇವ ತಾಭಿರ್ಜಯತಿ ದೀಪ್ಯತ ಇವ ಹಿ ದೇವಲೋಕೋ ಯಾ ಹುತಾ ಅತಿನೇದನ್ತೇ ಪಿತೃಲೋಕಮೇವ ತಾಭಿರ್ಜಯತ್ಯತೀವ ಹಿ ಪಿತೃಲೋಕೋ ಯಾ ಹುತಾ ಅಧಿಶೇರತೇ ಮನುಷ್ಯಲೋಕಮೇವ ತಾಭಿರ್ಜಯತ್ಯಧ ಇವ ಹಿ ಮನುಷ್ಯಲೋಕಃ (8)**

ತಾ : ಅಶ್ವಲ:- ಈ ಯಜ್ಞದಲ್ಲಿ ಅಧ್ವರ್ಯನು ಎಷ್ಟು ಆಹುತಿಗಳನ್ನು ಹೋಮ ಮಾಡುತ್ತಿದ್ದಾನೆ? ಯಾಜ್ಞವಲ್ಕ್ಯ:- ಮೂರು ಆಹುತಿಗಳನ್ನು. ಅಶ್ವಲ:- ಆ ಆಹುತಿಗಳು ಯಾವುವು? ಯಾಜ್ಞವಲ್ಕ್ಯ:- ಜ್ವಾಲೆಗಳಂತೆ ಮೇಲಕ್ಕೇಳುವ ಆಹುತಿಗಳು, ಎಂದರೆ ಪ್ರಜ್ವಲಿಸುವಂತಹುದು. ಹೆಚ್ಚಿನ ಶಬ್ದ ಮಾಡುವ ಆಹುತಗಳು. ಕೆಳಗಿನ ಭಾಗಕ್ಕೆ ಹೋಗುವಂತಹ ಆಹುತಗಳು. ಅಶ್ವಲ:-ಆ ಯಜಮಾನನಿಗೆ ಇದರಿಂದ

ಯಾವ ವಿಜಯವು ಲಭಿಸುವುದು? ಯಾಜ್ಞವಲ್ಕ್ಯ:- ಮೇಲಕ್ಕೇಳುವ ಆಹುತಿಗಳಿಂದ ದೇವಲೋಕವನ್ನು ಜಯಿಸುವನು. ಏಕೆಂದರೆ ದೇವಲೋಕವು ಪ್ರಕಾಶವಂತವಾದುದು. ಹೆಚ್ಚು ಶಬ್ದ ಮಾಡುವ ಆಹುತಿಗಳಿಂದ ಪಿತೃಲೋಕವನ್ನು ಜಯಿಸುವನು. ಏಕೆಂದರೆ ಪಿತೃಲೋಕವು ಅತಿ ಹೆಚ್ಚಿನ ಶಬ್ದದಿಂದ ತುಂಬಿರುವುದು. ಕೆಳಮುಖವಾಗಿರುವ ಆಹುತಿಗಳಿಂದ ಮನುಷ್ಯಲೋಕವನ್ನು ಜಯಿಸುತ್ತಾನೆ. ಏಕೆಂದರೆ ಮನುಷ್ಯ ಲೋಕವು ದೇವಲೋಕಾದಿಗಳ ಕೆಳಗಿನ ಭಾಗದಲ್ಲಿ ಇದೆ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಕತಿಭಿರಯಮದ್ಯ ಬ್ರಹ್ಮಾ ಯಜ್ಞಂ ದಕ್ಷಿಣತೋ ದೇವತಾಭಿರ್ಗೋಪಾಯತೀತ್ಯೇಕಯೇತಿ ಕತಮಾ ಸೈಕೇತಿ ಮನ ಏವೇತ್ಯನನ್ತಂ ವೈ ಮನೋನ್ತಾ ವಿಶ್ವೇದೇವಾ ಅನನ್ತಮೇವ ಸ ತೇನ ಲೋಕಂ ಜಯತಿ (9)**

ತಾ : ಅಶ್ವಲ: ಈ ಬ್ರಹ್ಮನೆನ್ನುವ ಋತ್ವಿಕ್ಕು, ದಕ್ಷಿಣದಿಕ್ಕಿನಿಂದ ಯಜ್ಞದಲ್ಲಿ ಎಷ್ಟು ದೇವತೆಗಳಿಂದ ರಕ್ಷಿಸಲ್ಪಡುವವನಾಗಿದ್ದಾನೆ? ಯಾಜ್ಞವಲ್ಕ್ಯ:- ಒಬ್ಬ ದೇವತೆಯಿಂದ ರಕ್ಷಿಸಲ್ಪಡುತ್ತಿದ್ದಾನೆ. ಅಶ್ವಲ:- ಆ ದೇವತೆ ಯಾರು? ಮನಸ್ಸು ಎಂದು ಯಾಜ್ಞವಲ್ಕ್ಯ ಹೇಳಿದ. ಮನಸ್ಸು ಪ್ರಸಿದ್ಧವಾದಂತಹುದು: ಅನಂತವಾದುದು. ಸಮಸ್ತ ದೇವತೆಗಳು ಅನಂತವಾದವರು. ಆ ಬ್ರಾಹ್ಮವೆನ್ನುವ, ಋತ್ವಿಕ್ಕು ಮನಸ್ಸಿನಲ್ಲಿ ವಿಶ್ವೇ ದೇವ ದೃಷ್ಟಿಯೊಂದಿಗೆ ಧ್ಯಾನಿಸುವುದರಿಂದ ಅನಂತವಾದ ಲೋಕಗಳನ್ನು ಜಯಿಸುತ್ತಾನೆ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಕತ್ಯಯಮದ್ಯೋದ್ಗಾತಾऽಸ್ಮಿನ್ಯಜ್ಞೇ ಸ್ತೋತ್ರಿಯಾ ಸ್ತೋಷ್ಯತೀತಿ ತಿಸ್ರ ಇತಿ ಕತಮಾಸ್ತಾ ಸ್ತಿಸ್ರ ಇತಿ ಪುರೋऽನುವಾಕ್ಯ ಚ ಯಾಜ್ಯಾ ಚ ಶಸ್ಯೈವ ಚ ತೃತೀಯಾ ಕತಮಸ್ತಾ ಯಾ ಅಧ್ಯಾತ್ಮಮಿತಿ ಪ್ರಾಣ ಏವ ಪುರೋನುವಾಕ್ಯಾऽಪಾನೋ ಯಾಜ್ಯಾ ವ್ಯಾನಶ್ಶಸ್ಯಾ ಕಿಂ ತಾಭಿರ್ಜಯತೀತಿ ಪೃಥಿವೀಲೋಕಮೇವ ಪುರೋऽನುವಾಕ್ಯಯಾ ಜಯತ್ಯನ್ತರಿಕ್ಷಲೋಕಂ ಯಾಜ್ಯಯಾ ದ್ಯುಲೋಕಗ್ಂ ಶಸ್ಯಯಾ ತತೋ ಹ ಹೋತಾऽऽಶ್ವಲ ಉಪರರಾಮ (10)**

ತಾ : ಅಶ್ವಲ: ಓ ಯಾಜ್ಞವಲ್ಕ್ಯಾ! ಯಜ್ಞದಲ್ಲಿ ಉದ್ಗಾತನೆನ್ನುವ ಋತ್ವಿಕ್ಕು ಎಷ್ಟು ಋಜ್ಮಂತ್ರಗಳೊಂದಿಗೆ ಸ್ತುತಿಸುತ್ತಿದ್ದಾನೆ? ಯಾಜ್ಞವಲ್ಕ್ಯ: ಓ ಅಶ್ವಲನೇ! ಪುರೋನುವಾಕ್ಯ, ಯಾಜ್ಯ, ಶಸ್ಯಗಳೆಂಬ ಈ ಮೂರು ಮಂತ್ರಗಳೊಂದಿಗೆ ಸ್ತೋತ್ರಗಳನ್ನು ಮಾಡುವನು. ಅಶ್ವಲ: ಆ ಪುರೋನು ವಾಕ್ಯಾದಿಗಳು ಮೂರು ಅಧ್ಯಾತ ಸ್ವರೂಪವಾದಂತಹ ದೇಹೇಂದ್ರಿಯ ಸಮುದಾಯ ಕರ್ತನಲ್ಲಿ ಹೇಗಿರುವುದು? ಯಾಜ್ಞವಲ್ಕ್ಯ: ಅಧ್ಯಾತ್ಮದಲ್ಲಿ ಪ್ರಾಣವೇ ಪುರೋನುವಾಕ್ಯ. ಅಪಾನವೇ ಆಜ್ಯ, ವ್ಯಾನವೇ ಶಸ್ಯವಾಗಿದೆ ಎಂದ. ಅಶ್ವಲ: ಈ ಮೂರರಿಂದಲೂ ಉದ್ಗಾತಯೆನ್ನುವ ಋತ್ವಿಕ್ಕು ಏನನ್ನು ಜಯಿಸುವನು? ಯಾಜ್ಞವಲ್ಕ್ಯ: ಉದ್ಗಾತನು ಪ್ರಾಣರೂಪವಾದ ಪುರೋನುವಾಕ್ಯಯೆನ್ನುವುದರ ಮೂಲಕ ಭೂಲೋಕವನ್ನು, ಅಪಾನರೂಪವಾದ ಆಜ್ಯವೆನ್ನುವುದರ ಮೂಲಕ ಅಂತರಿಕ್ಷ ಲೋಕವನ್ನು ವ್ಯಾನರೂಪವಾದ ಶಸ್ಯದಿಂದ ದ್ಯುಲೋಕವನ್ನು ಜಯಿಸುತ್ತಿರುವನು. ಯಾಜ್ಞವಲ್ಕ್ಯನು ಈ ರೀತಿಯಾಗಿ ತಾನು ಕೇಳಿದ ಮೇಲೆ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಡುವುದನ್ನು ಕೇಳಿ ಅಶ್ವಲನು ತೃಪ್ತಿಹೊಂದಿ ಶಾಂತಿಸಿದನು.

# ಪಂಚಮಾಧ್ಯಾಯ - ದ್ವಿತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹೈನಂ ಜಾರತ್ಕಾರವ ಆರ್ತಭಾಗಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಕತಿ ಗ್ರಹಾಃ ಕತ್ಯತಿಗ್ರಹಾ ಇತಿ ಅಷ್ಟೌ ಗ್ರಹಾ ಅಷ್ಟಾವತಿಗ್ರಹಾ ಇತಿ ಯ ಏತೇಽಷ್ಟಾಗ್ರಹಾ ಅಷ್ಟಾವತಿ ಗ್ರಹಾಃ ಕತಮೇ ತ ಇತಿ (1)**

ತಾ : ಆನಂತರ, ಜರತ್ಕಾರ ವಂಶೋದ್ಭವನು, ಋತುಭಾಗನ ಪುತ್ರನು, ಆರ್ತ ಭಾಗನು ಈ ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದನು. "ಓ ಯಾಜ್ಞವಲ್ಕ್ಯ, ಜ್ಞಾನಸಾಧನಗಳು ಮತ್ತು ಅವುಗಳ ಸಹಾಯಕವಾದ ಸಾಧನಗಳು ಎಷ್ಟಿವೆ? ಎಂದರೆ ಗ್ರಹಗಳೆಷ್ಟು? ಅತಿ ಗ್ರಹಗಳೆಷ್ಟು?" ಯಾಜ್ಞವಲ್ಕ್ಯ: ಗ್ರಹಗಳು ಸಾಧನಗಳು, ಎಂಟು. ಅತಿ ಗ್ರಹಗಳು ಸಹಾಯಕವಾದವುಗಳು ಎಂಟು. ಆರ್ತಭಾಗನು: ಆ ಎಂಟು ಸಾಧನಗಳು, ಮತ್ತು ಸಹಾಯಕವಾದಂತಹುಗಳು ಎಷ್ಟು?

**ಮಂ.ಶ್ಲೋ॥ ಪ್ರಾಣೋ ವೈ ಗ್ರಹಃ ಸೋಽಪಾನೇನಾತಿಗ್ರಾಹೇಣ ಗೃಹಿತೋಽಪಾನೇನ ಹಿ ಗನ್ಧಾನ್ ಜಿಘ್ರತಿ (2)**

ತಾ : ಪ್ರಾಣವೇ (ಇಲ್ಲಿ ಪ್ರಾಣಶಬ್ದಕ್ಕೆ ಘ್ರಾಣೇಂದ್ರಿಯವೆಂದು ಅರ್ಥ). ಗಂಧವನ್ನು ಗ್ರಹಿಸುವುದು. ಆ ಘ್ರಾಣೇಂದ್ರಿಯವು (ಪ್ರಾಣವು) ಹೊರಕ್ಕೆ ಹೋಗುವ ವಾಯು, ಇದು ಸಾಧನ. ಇದು ಅಪಾನವಾಯುವಿನಿಂದ ಹೆಚ್ಚು ಬಲವನ್ನು ಹೊಂದಿರುವಂತಹುದು. ಅಪಾನ ವಾಯುವಿನಿಂದಲೇ ಗಂಧವನ್ನು ಗ್ರಹಿಸಲ್ಪಡುವುದು. ಗಂಧಶಕ್ತಿಯಿಂದಲೇ ಮಾನವನು ಸಮಸ್ತವನ್ನು ವಾಸನೆ ನೋಡಬಲ್ಲ. ಘ್ರಾಣವು ಗ್ರಹ. ಗಂಧವು ಅತಿಗ್ರಹವೆಂದು ಅರ್ಥ.

**ಮಂ.ಶ್ಲೋ॥ ವಾಗ್ವೈ ಗ್ರಹಃ ಸ ನಾಮ್ನಾತಿಗ್ರಾಹೇಣ ಗೃಹೀತೋ ವಾಚಾ ಹಿ ನಾಮಾನ್ಯಭಿವದತಿ (3)**

ತಾ : ವಾಕ್ಕು ಸಾಧನವು ಗ್ರಹ. ವಕ್ತವ್ಯ ವಿಷಯವೇ ಅತಿಗ್ರಹ. ಆ ವಾಕ್ಕು ಎನ್ನುವುದು ಅನುಗ್ರಹ. ಅತಿಗ್ರಹವಾದ ವಕ್ತವ್ಯ ವಿಷಯದಿಂದ ಗ್ರಹಿಸಲ್ಪಟ್ಟದ್ದಾಗಿ ವ್ಯಾಪಿಸಿದೆ. ಆ ವಾಕ್ಕಿನಿಂದಲೇ ಲೋಕದಲ್ಲಿ ನಾಮಗಳೆಲ್ಲವನ್ನೂ ಹೇಳಲಾಗುತ್ತಿದೆ.

**ಮಂ.ಶ್ಲೋ॥ ಜಿಹ್ವಾ ವೈ ಗ್ರಹಃ ಸ ರಸೇನಾತಿಗ್ರಾಹೇಣ ಗೃಹೀತೋ ಜಿಹ್ವಯಾ ಹಿ ರಸಾನ್ವಿಜಾನಾತಿ (4)**

ತಾ : ಜಿಹ್ವವೇ ಗ್ರಹ. ಇದಕ್ಕೆ ವಿಷಯವಾದ ರಸವೇ ಅತಿಗ್ರಹ. ಈ ನಾಲಗೆಯೆನ್ನುವ ಗ್ರಹವು. ಅತಿಗ್ರಹವಾದ ರಸದಿಂದ ಗ್ರಹಿಸಲ್ಪಟ್ಟು ವ್ಯಾಪಿಸಿದೆ. ಅಂತಹ ನಾಲಗೆಯಿಂದಲೇ ಲೋಕವು ರಸಗಳನ್ನು ಗ್ರಹಿಸುತ್ತಿದೆ. ಅದರಿಂದಲೇ ರಸವು ಅತಿಗ್ರಹವಾಗಿದೆ.

**ಮಂ.ಶ್ಲೋ॥ ಚಕ್ಷುರ್ವೈ ಗ್ರಹಃ ಸ ರೂಪೇಣಾತಿಗ್ರಾಹೇಣ ಗೃಹೀತಶ್ಚಕ್ಷುಷಾ ಹಿ ರೂಪಾಣಿ ಪಶ್ಯತಿ (5)**

ತಾ : ನೇತ್ರವು ಗ್ರಹ, ಆ ನೇತ್ರವೆನ್ನುವ ಗ್ರಹವು, ಅತಿಗ್ರಹವಾದ ರೂಪದಿಂದ ಗ್ರಹಿಸಲ್ಪಟ್ಟಿದೆ. ಆದ್ದರಿಂದ ನೇತ್ರದಿಂದಲೇ ಲೋಕವು ರೂಪಗಳನ್ನು ನೋಡುತ್ತಿದೆ.

**ಮಂ.ಶ್ಲೋ॥ ಶ್ರೋತ್ರಂ ವೈ ಗ್ರಹಃ ಸಶಬ್ದೇನಾತಿಗ್ರಾಹೇಣ ಗೃಹೀತಃ ಶ್ರೋತ್ರೇಣ ಹಿ ಶಬ್ದಾನ್ ಶೃಣೋತಿ(6)**

ತಾ : ಸಾಧನವಾದ ಶ್ರೋತ್ರವೇ ಗ್ರಹ. ಆ ಶ್ರೋತ್ರಕ್ಕೆ ವಿಷಯವಾದ ಶಬ್ದವೇ ಅತಿಗ್ರಹ. ಆ

ಶ್ರೋತ್ರವೆನ್ನುವ ಗ್ರಹವು ಅತಿ ಗ್ರಹವಾದ ಶಬ್ದದಿಂದ ಗ್ರಹಿಸಲ್ಪಟ್ಟು ವ್ಯಾಪಿಸಿದೆ. ಆದ್ದರಿಂದಲೇ ಶ್ರೋತ್ರದಿಂದಲೇ ಲೋಕವು ಶಬ್ದವನ್ನು ಆಲಿಸುತ್ತಿದೆ. (ಕೇಳುತ್ತಿದೆ.)

**ಮಂ.ಶ್ಲೋ॥ ಮನೋ ವೈ ಗ್ರಹಃ ಸ ಕಾಮೇನಾತಿಗ್ರಾಹೇಣ ಗೃಹೀತೋ ಮನಸಾ ಹಿ ಕಾಮನ್ಕಾಮಯತೇ (7)**

ತಾ : ಸಾಧನವಾದ ಮನಸ್ಸೇ ಗ್ರಹವು. ಆ ಮನಸ್ಸೆಂಬ ಗ್ರಹವು, ಅತಿಗ್ರಹವಾದ ಕಾಮದಿಂದ ಗ್ರಹಿಸಲ್ಪಟ್ಟಿದೆ. ಮನಸ್ಸಿನ ಮೂಲಕವೇ ಲೋಕದಲ್ಲಿ ಕಾಮನೆಗಳನ್ನು ಕೋರಿಕೊಳ್ಳುವುದು.

**ಮಂ.ಶ್ಲೋ॥ ಹಸ್ತೌ ವೈ ಗ್ರಹಃ ಸ ಕರ್ಮಣಾತಿ ಗ್ರಾಹೇಣ ಗೃಹೀತೋ ಹಸ್ತಾಭ್ಯಾಗ್‌ಂ ಹಿ ಕರ್ಮ ಕರೋತಿ(8)**

ತಾ : ಹಸ್ತಗಳೇ ಸಾಧನ. ಅಂದರೆ ಗ್ರಹ. ಆ ಹಸ್ತಗಳೆಂಬ ಅತಿ ಗ್ರಹವಾದ ಕರ್ಮದಿಂದ ಗ್ರಹಿಸಲ್ಪಟ್ಟಿವೆ. ಹಸ್ತಗಳಿಂದಲೇ ಕರ್ಮಗಳು ಜರುಗುತ್ತವೆಯಲ್ಲವೆ?

**ಮಂ.ಶ್ಲೋ॥ ತ್ವಗ್ವೈ ಗ್ರಹಃ ಸ ಸ್ಪರ್ಶೇನಾತಿಗ್ರಾಹೇಣ ಗೃಹೀತಸ್ತ್ವಚಾ ಹಿ ಸ್ಪರ್ಶಾನ್ವೇದಯತ ಇತ್ಯೇತೇಽಷ್ಟೌ ಗ್ರಹ ಅಷ್ಟಾವತಿಗ್ರಹಾಃ (9)**

ತಾ : ತ್ವಗಿಂದ್ರಿಯವೇ ಸಾಧನ. ಆ ತ್ವಗಿಂದ್ರಿಯ ವಿಷಯವಾದ ಸ್ಪರ್ಶವೇ ಅತಿಗ್ರಹ. ಆ ತ್ವಗಿಂದ್ರಿಯವಾದ ಗ್ರಹವು, ಅತಿಗ್ರಹವಾದ ಸ್ಪರ್ಶದಿಂದ ಗ್ರಹಿಸಲ್ಪಟ್ಟು ವ್ಯಾಪಿಸಿದೆ. ಅಂತಹ ತ್ವಗಿಂದ್ರಿಯ-ದಿಂದಲೇ ಸ್ಪರ್ಶವನ್ನು ತಿಳಿಯಲಾಗುತ್ತದೆ. ಆರ್ತಭಾಗನೇ! ಹೀಗೆ ತ್ವಗಿಂದ್ರಿಯ ಪರ್ಯಂತ ಹೇಳಿದ ಈ ಎಂಟು ಗ್ರಹಗಳು ಸ್ಪರ್ಶಪರ್ಯಂತ ಹೇಳಲಾದ ಈ ಎಂಟು ಅತಿಗ್ರಹಗಳನ್ನು ತಿಳಿದು ಕೊಳ್ಳಬೇಕು ಎಂದು ಯಾಜ್ಞವಲ್ಕ್ಯನು ಗ್ರಹಾತಿಗ್ರಹಗಳನ್ನು ವಿವರಿಸಿದನು.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್‌ಂ ಸರ್ವಂ ಮೃತ್ಯೋರನ್ನಂ ಕಾಸ್ವಿತ್ಸಾ ದೇವತಾ ಯಸ್ಯಾ ಮೃತ್ಯುರನ್ನಮಿತ್ಯಗ್ನಿರ್ವೈ ಮೃತ್ಯುಃ ಸೋಽಪಾಮನ್ನಮಪ ಪುನರ್ಮೃತ್ಯುಂ ಜಯತಿ (10)**

ತಾ : ಆರ್ತ ಭಾಗನು: "ಓ ಯಾಜ್ಞವಲ್ಕ್ಯಾ! ಈ ಸಮಸ್ತವೂ ಮೃತ್ಯುವಿಗೆ ಭೋಜನವಾಗುತ್ತಿದೆ. ಮೃತ್ಯುವು ಯಾವ ದೇವತೆಗೆ ಅನ್ನವಾಗುತ್ತಿದೆಯೋ ಆ ದೇವತೆ ಯಾರು? ಯಾಜ್ಞವಲ್ಕ್ಯಾ: ಓ ಆರ್ತಭಾಗಾ! ಅಗ್ನಿಯೇ ಮೃತ್ಯು. ಆ ಅಗ್ನಿಯೇ ಉದಕಗಳಿಗೆ ಭೋಜನ. ಈ ಆತ್ಮಜ್ಞಾನದಿಂದಲೇ ಪುರುಷನು ಮರಣಹೊಂದಿದ ಮೇಲೆ ಪುನಃ ಜನ್ಮ ತಳೆದು ಮತ್ತೆ ಮರಣವನ್ನು ಹೊಂದುವುದಿಲ್ಲ ಎಂದ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಯಂ ಪುರುಷೋ ಮ್ರಿಯತೇ ಉದಸ್ಮಾತ್ಪ್ರಾಣಾಃ ಕಾಮನ್ತ್ಯಾಹೋ ನೇತಿ ನೇತಿ ಹೋವಾಚ ಯಾಜ್ಞವಲ್ಕ್ಯೋಽತ್ರೈವ ಸಮವನೀಯನ್ತೇ ಸ ಉಚ್ಛ್ವಯತ್ಯಾಧ್ಮಾ ಯತ್ಯಾಧ್ಮಾತೋ ಮೃತಶ್ಶೇತೇ (11)**

ತಾ : ಆರ್ತಭಾಗಾ:- ಯಾಜ್ಞವಲ್ಕ್ಯಾ ಪರಬ್ರಹ್ಮವೇತ್ತನಾದ ಪುರುಷನು ಮರಣವನ್ನು ಹೊಂದಿದಾಗ ಆ ಪುರುಷನ ಪ್ರಾಣಗಳು ಎದ್ದು ಹೋಗುತ್ತವೆಯೋ? ಅಥವಾ ಇಲ್ಲವೇ? ಯಾಜ್ಞವಲ್ಕ್ಯಾ: ಓ ಆರ್ತಭಾಗಾ! ಈ ಪುರುಷನ ಪ್ರಾಣಗಳು ಆ ಪರಬ್ರಹ್ಮತತ್ತ್ವದಲ್ಲಿ ಲೀನವಾಗುತ್ತವೆ. ಅನಂತರ

ಈ ಪುರುಷನು ನಿದ್ರೆಗೊಳಗಾದಂತೆ ಬಾಹ್ಯವಾಯುವಿನಿಂದ ತುಂಬಿದವನಾಗಿ ನಿಶ್ಚೇಷ್ಟಿತನಾಗಿರುವನು. ಬಂಧವು ನಶಿಸಿದ ಕೂಡಲೇ ಮುಕ್ತನಾಗುವವನು ಎಲ್ಲಿಗೂ ಹೋಗದೆ ಎಲ್ಲೆಡೆಯೂ ತುಂಬಿಕೊಂಡಿದ್ದು ಪರಿಪೂರ್ಣನಾಗಿರುವನು.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಯಂ ಪುರುಷೋ ಮ್ರಿಯತೇ ಕಿಮೇನಂ ನ ಜಹಾತೀತಿ ನಾಮೇತ್ಯನನ್ತಂ ಹವೈ ನಾಮಾನನ್ತಾ ವಿಶ್ವೇದೇವಾ ಅನನ್ತಮೇವ ಸ ತೇನ ಲೋಕಂ ಜಯತಿ (12)**

ತಾ : ಆರ್ತಭಾಗಃ ಯಾಜ್ಞವಲ್ಕ್ಯಾ! ಈ ಪುರುಷನು ಮರಣವನ್ನು ಹೊಂದಿದ ಮೇಲೆ ಏನು ಉಳಿಯುತ್ತದೆ? ಯಾಜ್ಞವಲ್ಕ್ಯಃ ನಾಮವು ಅನಂತವಾದುದು. ವಿಶ್ವ ದೇವತೆಗಳು ಅನಸ್ತವಾದವರು. ನಾಮವೇ ಉಳಿಯುವುದು ನಿತ್ಯತ್ವವೇ ನಾಮಕ್ಕೆ ಅನಂತತ್ವವಾಗಿದೆ. ಆ ಪುರುಷನು ಅನಂತವಾದ ಲೋಕವನ್ನೇ ಜಯಿಸುತ್ತಿದ್ದಾನೆ. ಅಂದರೆ ಬ್ರಹ್ಮೈಕ್ಯವನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾದಿತ್ಯಂ ಮನಶ್ಚಂದ್ರಂ ದಿಶಃ ಶ್ರೋತ್ರಂ ಪೃಥಿವೀಗ್ಂ ಶರೀರಮಾಕಾಶ-ಮಾತ್ಮೌಷಧೀರ್ಲ್ಲೋಮಾನಿ ವನಸ್ಪತಿನ್ಕೇಶಾ ಅಪ್ಸು ಲೋಹಿತಂ ಚ ರೇತಶ್ಚ ನಿಧೀಯತೇ ಕ್ವಾಯಂ ತದಾ ಪುರುಷೋ ಭವತೀತ್ಯಾಹರ ಸೋಮ್ಯ ಹಸ್ತಮಾರ್ತಭಾಗಾವಮೇವೈ ತಸ್ಯ ವೇದಿಷ್ಯಾವೋ ನ ನಾವೇತತ್ ಸಜನ ಇತಿತೌ ಹೋತ್ಕ್ರಮ್ಯ ಮನ್ತ್ರಯಾಞ್ಚಕ್ರಾತೇ ತೌ ಹ ಯದೂ ಚತುಃ ಕರ್ಮ ಹೈವ ತದೂಚತುರಥ ಯತ್ಪ್ರಶಶಗ್ಂ ಸತುಃ ಕರ್ಮ ಹೈವ ತತ್ಪ್ರಶಶಗ್ಂ ಸತುಃ ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನೇತಿ ತತೋ ಹ ಜಾರತ್ಕಾರವ ಆರ್ತಭಾಗ ಉಪರರಾಮ (13)**

ತಾ : ಆರ್ತಭಾಗಃ ಓ ಯಾಜ್ಞವಲ್ಕ್ಯಾ! ಮರಣವನ್ನು ಹೊಂದಿದ ಅಜ್ಞಾನಿ ಪುರುಷನ ವಾಗೀಂದ್ರಿಯವು ಅಗ್ನಿಯನ್ನು ಹೊಂದುತ್ತದೆ. ಪ್ರಾಣವು ವಾಯುವನ್ನು ಹೊಂದುತ್ತದೆ. ನೇತ್ರವು ಸೂರ್ಯನನ್ನು ಸೇರುತ್ತದೆ. ಮನಸ್ಸು ಚಂದ್ರನಲ್ಲಿಯೂ, ಶ್ರೋತ್ರುವು ದಿಕ್ಕುಗಳಲ್ಲಿಯೂ, ಶರೀರವು ಭೂಮಿಯಲ್ಲಿಯೂ, ಜೀವನು ಹೃದಯಾಕಾಶದಲ್ಲಿಯೂ, ಶರೀರ ರೋಮಗಳು ಓಷಧಗಳಲ್ಲಿಯೂ, ರೇತಸ್ಸು ರಕ್ತಗಳು ಜಲದಲ್ಲಿಯೂ ಒಂದಾಗಿ ಸೇರಿಹೋಗುವುದು, ಅಲ್ಲವೇ ಆನಂತರ ಈ ಪುರುಷನು ಎಲ್ಲಿರುವನು? ಯಾವ ಆಶ್ರಮದಲ್ಲಿರುವನು? ಯಾವ ರೀತಿ ಕಾರ್ಯಕಾರಣ ರೂಪ ಸಂಘಾತವಾದ ದೇಹವನ್ನು ಮತ್ತೆ ಸ್ವೀಕರಿಸುವಂತಾಗುತ್ತಾನೆ? ಎಂದು ಪ್ರಶ್ನಿಸಿದ. ಯಾಜ್ಞವಲ್ಕ್ಯನು ನಿನ್ನ ಹಸ್ತವನ್ನು ಕೊಡು. ಇಲ್ಲಿ ಬಾ. ಈ ಉತ್ತರವು ನಮ್ಮಿಬ್ಬರಿಗೆ ಮಾತ್ರವೇ ತಿಳಿಯಬೇಕಾದುದಾಗಿದೆ. ಈ ಪ್ರಶ್ನೆಯನ್ನು ಇಲ್ಲಿ ನೆರೆದಿರುವ ಜನ ಸಮೂಹದ ಎದುರಿಗೆ ಹೇಳತಕ್ಕದ್ದಲ್ಲ ಎಂದು ಹೇಳಿ ಆತನ ಕೈಯನ್ನು ಹಿಡಿದುಕೊಂಡನು. ಇಬ್ಬರೂ ಏಕಾಂತ ಸ್ಥಳಕ್ಕೆ ಹೋಗಿ ಮಾತನಾಡಿಕೊಂಡರು. ಏನೆಂದರೆ ಅದು ಕರ್ಮ ವಿಷಯಕವಾದ ಪ್ರಶಂಸವೆಂದು ಮಾತ್ರ ಸ್ಪಷ್ಟವಾಯಿತು. ಪುಣ್ಯ ಕರ್ಮದಿಂದ ಮನುಷ್ಯನು ಪುಣ್ಯವಂತನಾಗುತ್ತಾನೆ. ಪಾಪಕರ್ಮದಿಂದ ಪಾಪಿಯಾಗುತ್ತಾನೆ. ಇದೇ ರಹಸ್ಯ. ಈ ಪ್ರಕಾರವಾಗಿ

ಆಲಿಸಿದ ಜರತ್ಕಾರನೆಂಬ ಆರ್ತಭಾಗನು ಸಮಾಧಾನ ಹೊಂದಿ ಶಾಂತನಾದ. (ಅಗ್ನಿ ಮೃತ್ಯು, ಅಗ್ನಿಗೆ ಜಲ ಮೃತ್ಯು, ಎಂದು ವರ್ಣಿಸಲಾಗಿದೆ.)

# ಪಂಚಮಾಧ್ಯಾಯ - ತೃತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹೈನಂ ಭುಜ್ಯುರ್ಲಾಹ್ಯಯನಿಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ । ಮದ್ರೇಷು ಚರಕಾಃ ಪರ್ಯ ಪ್ರಜಾಮ ತೇ ಪತಞ್ಚ(ಞ್ಚ)ಲಸ್ಯ ಕಾಪ್ಯಸ್ಯ ಗೃಹಾಹೋನ್ಯೆಮ ತಸ್ಯಾಸೀ-ದ್ದುಹಿತಾ ಗನ್ಧರ್ವ ಗೃಹೀತಾ ತಮಪೃಚ್ಛಾಮಕೋಽಸೀತಿಸೋಽಬ್ರವೀತ್ಸುಧನ್ವಾಽಙ್ಗಿರಸ ಇತಿ ತಂ ಯದಾ ಲೋಕಾನಾಮನ್ತಾನ ಪೃಚ್ಛಾಮಾಥೈನಮಬ್ರೂಮ ಕ್ವ ಪಾರಿಕ್ಷಿತಾ ಅಭವನ್ನಿತಿ ಕ್ವ ಪಾರಿಕ್ಷಿತಾ ಅಭವನ್ವ ತ್ವಾ ಪೃಚ್ಛಾಮಿ ಯಾಜ್ಞವಲ್ಕ್ಯ ಕ್ವ ಪಾರಿಕ್ಷಿತಾ ಅಭವನ್ನಿತಿ(1)**

ತಾ : ಆನಂತರ ಲಹ್ಯನ ಪೌತ್ರನಾದ ಭುಜ್ಯನೆಂಬ ಹೆಸರುಳ್ಳ ಮುನಿಯು ಪ್ರಶ್ನಿಸಿದ. "ಓ ಯಾಜ್ಞವಲ್ಕ್ಯಾ! ವೇದಾಧ್ಯಯನ ವ್ರತವನ್ನು ಆಚರಿಸುತ್ತಿರುವ ನಾವು ಮದ್ರದೇಶದಲ್ಲಿ ತಿರುಗಾಡುತ್ತಿದ್ದ ದಿನಗಳಲ್ಲಿ ಕಪಿಗೋತ್ರದವನಾದ ಪತಂಜಲಿಯೆನ್ನುವವನ ಮನೆಗೆ ಒಮ್ಮೆ ಹೋದೆವು. ಆ ಪತಂಜಲಿಯೆನ್ನುವವನಿಗೆ ಗಂಧರ್ವ ಗ್ರಹದಿಂದ ಗ್ರಹಿಸಲ್ಪಟ್ಟ, (ಗಂಧರ್ವ ಗ್ರಹಾವಿಷ್ಟಯಾದ) ಪುತ್ರಿ-ಯಿದ್ದಳು. ಆವೇಶಿಸಿದ್ದ ಆ ಗಂಧರ್ವನನ್ನು, ನೀನು ಯಾರು? ಎಂದು ನಾವು ಪ್ರಶ್ನಿಸಿದೆವು. ಆ ಗಂಧರ್ವನು "ನಾನು ಆಂಗೀರಸ ಗೋತ್ರದಲ್ಲಿ ಹುಟ್ಟಿದ ಸುಧನ್ವನೆಂಬ ಹೆಸರುಳ್ಳವನೆಂದು ಹೇಳಿದ. ಆ ಗಂಧರ್ವನ ಲೋಕದ ಅವಸಾನವನ್ನು ಕುರಿತು ಕೇಳಿದೆವು. ಮತ್ತು ಪಾರಿಕ್ಷಿತರು (ಅಶ್ವಮೇಧ ಯಾಗವನ್ನು ಮಾಡಿದವರು) ಯಾವ ಲೋಕದಲ್ಲಿರುವವರೆಂದು ಸಹ ಆ ಗಂಧರ್ವನನ್ನು ಕೇಳಿದೆವು. ಆ ಗಂಧರ್ವನು ಪಾರಿಕ್ಷಿತರು (ಪರೀಕ್ಷಿತ್ ಪುತ್ರರು) ಎಲ್ಲಿರುವರೋ ಆ ವಿವರಗಳನ್ನೆಲ್ಲ ನಮಗೆ ತಿಳಿಸಿರುತ್ತಾನೆ. ಈಗ ಆ ಪ್ರಶ್ನೆಯನ್ನೇ ನಿನ್ನನ್ನು ನಾನು ಕೇಳುತ್ತಿದ್ದೇನೆ. ಯಾಜ್ಞವಲ್ಕ್ಯಾ! ನೀನು ಪೂರ್ತಿ ವಿವರಗಳನ್ನು ನಮಗೆ ಹೇಳು ಎಂದು ಭೃಜ್ಯನೆಂಬಾತನು ಪ್ರಶ್ನಿಸಿದ.

**ಮಂ.ಶ್ಲೋ॥ ಸ ಹೋವಾಚೋವಾಚ ವೈ ಸೋಽಗಚ್ಛನ್ವೈ ತೇ ತದ್ಯತ್ರಾಶ್ವಮೇಧಯಾಜಿನೋ ಗಚ್ಛನ್ತೀತಿ ಕ್ವನ್ವಶ್ವಮೇಧಯಾಜಿನೋ ಗಚ್ಛನ್ತೀತಿ ದ್ವಾತ್ರಿಗ್ಂಶತಂ ವೈ ದೇವರಥಾಹ್ನ್ಯಾನ್ಯಯಂ ಲೋಕಸ್ತಗ್ಂ ಸಮನ್ತಂ ಪೃಥಿವೀ ದ್ವಿಸ್ತಾಪತ್ಪರ್ಯೇತಿ ತಾಗ್ಂ ಸಮಸ್ತಂ ಪೃಥಿವೀಂ ದ್ವಿಸ್ತಾವತ್ಸಮುದ್ರಃ ಪರ್ಯೇತಿ ತದ್ಯಾವತೀ ಕ್ಷುರಸ್ಯಧಾರಾ ಯಾವದ್ವಾ ಮಕ್ಷಿಕಾಯಾಃ ಪತ್ರಂ ತಾಪನನ್ತರೇಣಾಕಾಶಸ್ತಾನಿನ್ದ್ರಃ ಸುಪರ್ಣೋ ಭೂತ್ವಾ ವಾಯವೇ ಪ್ರಾಯಚ್ಛತ್ತಾನ್ವಾಯುರಾತ್ಮನಿ ಧಿತ್ವಾ ತತ್ರಾಗಮಯದ್ಯತ್ರಾಶ್ವಮೇಧ ಯಾಜಿನೋಽಭವನ್ನಿತ್ಯೇವಮಿವ ವೈ ಸ ವಾಯುಮೇವ ಪ್ರಶಶಗ್ಂ ಸ ತಸ್ಮಾದ್ವಾಯುಠೇವ ವ್ಯಷ್ಟಿರ್ವಾಯುಸ್ಸಮಷ್ಟಿರಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ ತತೋ ಹ ಭುಜ್ಯುರ್ಲಾಹ್ಯಾಯನಿರುಪರರಾಮ(2)**

ತಾ : ಯಾಜ್ಞವಲ್ಕ್ಯ: ಅಶ್ವಮೇಧ ಯಾಗವನ್ನು ಮಾಡಿದವನು ಹೋಗುವ ಜಾಗಕ್ಕೇ ಇವರು ಸಹ ಹೋಗುವರೆಂದು ನಿಮಗೆ ಆ ಗಂಧರ್ವನು ಹೇಳಿರುತ್ತಾನೆ. ಅಷ್ಟು ಮಾತ್ರ ಸಾಕು. ಭುಜ್ಯ:-

ಓ ಮುನೀ, ಆ ಅಶ್ವಮೇಧಯಾಜರುಗಳು ಎಲ್ಲಿಗೆ ಹೋಗುವರು? ಯಾಜ್ಞವಲ್ಕ್ಯ:- ಅಯ್ಯಾ ಸೂರ್ಯನ ರಥವು ಮೂವತ್ತೆರಡು ದಿನಗಳಲ್ಲಿ ಎಷ್ಟು ದೂರ ಕ್ರಮಿಸುವುದೋ ಅಷ್ಟು ಈ ಮಾನವ ಲೋಕವು ವಿಸ್ತಾರವಾಗಿರುವುದು. ಈ ಭೂಮಿ ಅದಕ್ಕೆ ಎರಡರಷ್ಟು ಪ್ರಮಾಣವಾಗಿದ್ದು ಲೋಕವನ್ನು ಆವರಿಸಿದೆ. ಈ ಭೂಮಿಯ ಸುತ್ತಮುತ್ತಲೂ ಅದಕ್ಕೆ ಎರಡರಷ್ಟು ಸಮುದ್ರವು ಸುತ್ತುವರಿಯಲ್ಪಟ್ಟಿದೆ. ಅಲ್ಲಿ ಕತ್ತಿಯ ಚೂಪಾದ ಮೊನೆಯಷ್ಟು, ಇಲ್ಲವೆ ಚಿಕ್ಕ ನೊಣದ ರೆಕ್ಕೆಯಂತಹ ತೆಳ್ಳಗಿನ ಆಕಾಶವಿದೆ. ದೇವೇಂದ್ರನು ತಾನು ಪಕ್ಷಿಯಾಗಿ ಆ ಪಾರಿಕ್ಷಿತರನ್ನು ಕರೆದುಕೊಂಡು ಹೋಗಿ ವಾಯುವಶಕ್ಕೆ ಒಪ್ಪಿಸುವನು. ವಾಯುವು ತನ್ನಲ್ಲಿ ಲೀನ ಮಾಡಿಕೊಂಡು ಅಶ್ವಮೇಧಯಾಗ ಮಾಡಿದವರು ಹೋಗುವ ಜಾಗಕ್ಕೆ ಇವರನ್ನು ಕೂಡಾ ಸೇರಿಸುವನು. "ಈ ವಿಧವಾಗಿ ಗಂಧರ್ವನು ವಾಯುವನ್ನು ಹೊಗಳಿದ. ಆದ್ದರಿಂದಲೇ ವಾಯುವು ವ್ಯಷ್ಟಿ ಹಾಗೂ ಸಮಷ್ಟಿಯಾಗಿದೆ. ಇದನ್ನು ತಿಳಿದುಕೊಂಡವನು ಮೃತ್ಯುವನ್ನು ಜಯಿಸುವನು. ಈ ರೀತಿಯಾಗಿ ಯಾಜ್ಞವಲ್ಕ್ಯನು ತನ್ನ ಪ್ರಶ್ನೆಗಳನ್ನು ನಿರ್ಣಯಿಸಿ ಉತ್ತರಗಳನ್ನು ಹೇಳಿದ್ದರಿಂದ ಲಹ್ಯನ ಪೌತ್ರನಾದ ಭುಜ್ಯನೆನ್ನುವ ಮುನಿ ಸಮಾಧಾನ ಹೊಂದಿ ಸುಮ್ಮನಾದ.

## ಪಂಚಮಾಧ್ಯಾಯ - ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯಾತ್ಸಾಕ್ಷಾದ-ಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ ಕತಮೋ ಯಾಜ್ಞವಲ್ಕ್ಯ ಸರ್ವಾನ್ತರೋ ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾನ್ತರೋ ಯೋಽಪಾನೇನಾಪಾನಿತಿ ಸ ತ ಆತ್ಮಾ ಸರ್ವಾನ್ತರೋ ಯೋ ವ್ಯಾನೇನ ವ್ಯಾನಿತಿ ಸ ತ ಆತ್ಮಾ ಸರ್ವಾನ್ತರೋ ಯ ಉದಾನೇನೋದಾನಿತಿ ನ ತ ಆತ್ಮಾ ಸರ್ವಾನ್ತರ ಏಷ ತ ಆತ್ಮಾ ಸರ್ವಾನ್ತರಃ (1)**

ತಾ : ಆನಂತರ ಚಕ್ರನ ಮಗನಾದ ಉಷಸ್ತನೆನ್ನುವ ಮುನಿ ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದ. ಓ ಯಾಜ್ಞವಲ್ಕ್ಯಾ! ದ್ರಷ್ಟಯೆನ್ನುವವನಿಗೆ ಸಮೀಪವಾಗಿರುವುದು, ಪ್ರತ್ಯಕ್ಷವಾದುದು ಆದ ಪರಬ್ರಹ್ಮವು, ಸಮಸ್ತಕ್ಕೂ ಅಂತರದಲ್ಲಿರುವಂತಹ ಆತ್ಮ ಸ್ವರೂಪವಾಗಿದೆ; ಅಂತಹ ಆತ್ಮ ಸ್ವರೂಪವನ್ನು ನನಗೆ ಸ್ಪಷ್ಟವಾಗಿ ತಿಳಿಸಿ ಹೇಳುವಂತಹವನಾಗು ಎಂದು ಕೋರಿಕೊಂಡ. ದೇಹೇಂದ್ರಿಯ ಸಂಘಾತವಾದ ನಿನ್ನ ಆತ್ಮ ಸಮಸ್ತಕ್ಕೂ ಒಳಗಡೆ ಇದೆ ಎಂದು ಯಾಜ್ಞವಲ್ಕ್ಯನು ನುಡಿದ. ಓ ಯಾಜ್ಞವಲ್ಕ್ಯಾ! ಸಮಸ್ತಕ್ಕೂ ಒಳಗಿರುವ ಆ ನನ್ನ ಆತ್ಮ ಎಲ್ಲಿದೆ? ಎಂದು ಉಷಸ್ಸು ಮತ್ತೆ ಪ್ರಶ್ನಿಸಿದ. ಎಲೈ ಉಷಸ್ತನೇ! ಯಾವುದರಿಂದ ನಿನ್ನ ಮುಖ, ನಾಸಿಕ, ಸಂಚಾರವುಳ್ಳ ಪ್ರಾಣವಾಯುವು, ಪ್ರಾಣವಾಯುವನ್ನು ಹೊಂದಲ್ಪಡುತ್ತಿದೆಯೋ, ಅದೇ ಈ (ನಿನ್ನ) ದೇಹೇಂದ್ರಿಯಾದಿ ಸಂಘಾತಕ್ಕೆ ವಿಜ್ಞಾನಮಯವಾದ ಆತ್ಮ ಸ್ವರೂಪ. ಈ ರೀತಿಯಾಗಿಯೇ ಯಾವುದರಿಂದ ನಿನ್ನ ಅಪಾನ ವ್ಯಾನೋದಾನಗಳನ್ನು, ಅವುಗಳ ವ್ಯಾಪಾರಗಳನ್ನು, ಹೊಂದಿಸಲ್ಪಟ್ಟಿದೆಯೋ ಅದೇ ವಿಜ್ಞಾನವೆನ್ನುವ ನಿನ್ನ (ಈ) ಆತ್ಮ ಸ್ವರೂಪ. ದೇಹೇಂದ್ರಿಯಾದಿ ವಿಲಕ್ಷಣವಾದ ಅಂತಹ ವಿಜ್ಞಾನಮಯಾತ್ಮದಿಂದ ದೇಹೇಂದ್ರಿಯ ಸಂಘಾತವು, ಪ್ರಾಣ ವ್ಯಾಪಾರವನ್ನು ಹೊಂದುತ್ತಿದೆ. ಆದ್ದರಿಂದ ಈ ದೇಹೇಂದ್ರಿಯಾದಿ

ಸಮುದಾಯಕ್ಕಿಂತ ಬೇರೆಯಾದ ವಿಜ್ಞಾನಮಯವಾದ ಆತ್ಮವು ಇದೆ. ಇದೇ ಸರ್ವಾಂತರವಾದಂತಹ ನಿನ್ನ ಆತ್ಮ ಎಂದು ಯಾಜ್ಞವಲ್ಕ್ಯನು ವಿವರವಾಗಿ ಬೋಧಿಸಿದನು.

**ಮಂ.ಶ್ಲೋ॥ ಸ ಹೋವಾಚೋಷಸ್ತಶ್ಚಾಕ್ರಾಯಣೋ ಯಥಾ ವಿಬ್ರೂಯಾದಸೌ ಗೌರಸಾವಶ್ವ ಇತ್ಯೇವಮೇವೈತದ್ವ್ಯಪದಿಷ್ಟಂ ಭವತಿ ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ ಕತಮೋ ಯಾಜ್ಞವಲ್ಕ್ಯ ಸರ್ವಾನ್ತರಃ ನ ದೃಷ್ಟೇರ್ದ್ರಷ್ಟಾರಂ ಪಶ್ಯೇರ್ನ ಶ್ರುತೇಃ ಶ್ರೋತಾರಗ್‌ಂ ಶೃಣುಯಾನ್ನ ಮತೇರ್ಮನ್ತಾರಂ ಮನ್ವೀಥಾನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ ಏಷ ತ ಆತ್ಮಾ ಸರ್ವಾನ್ತರೋತೋಽನ್ಯದಾರ್ತ್ತಂ ತತೋ ಹೋಷಸ್ತಶ್ಚಾಕ್ರಾಯಣ ಉಪರರಾಮ (2)**

ತಾ : ಉಷಸ್ತ: ಯಾಜ್ಞವಲ್ಕ್ಯಾ! ಇದು ಗೋವು, ಇದು ಅಶ್ವವೆಂದು ಹೇಳಿದ ಹಾಗೆ ನೀನು ಈ ಬ್ರಹ್ಮವನ್ನು ಕುರಿತು ವರ್ಣಿಸಿರುವೆ. ಸರ್ವಸಾಕ್ಷಿಯು ಅಪರೋಕ್ಷನಾದ, ಸರ್ವಾಂತರ್ಯಾಮಿಯಾದ ಆ ಬ್ರಹ್ಮವನ್ನು ಕುರಿತು ನನಗೆ ಮತ್ತೆ ವಿಪುಲವಾಗಿ ವಿವರಿಸು. ಯಾಜ್ಞ:- ನಿನ್ನ ಆತ್ಮನೇ ಸರ್ವಾಂತರ-ವಾಗಿರುತ್ತಾನೆ. ಸರ್ವಾಂತರ್ಯಾಮಿಯೇ ನಿನ್ನ ಆತ್ಮ. ಸರ್ವವನ್ನೂ ನೋಡುವ ದೃಗ್ರೂಪವಾದ ಪರಬ್ರಹ್ಮವನ್ನು ಈ ನಿನ್ನ ನೋಟದಿಂದ ಕಾಣಲಾರೆ. ಕೇಳುವ ಶಕ್ತಿಯಿಂದ ಕೇಳಬಲ್ಲವನನ್ನು ನೀನು ಶ್ರವಣ ಮಾಡಲಾರೆ. ಆಲೋಚಿಸುವ ಶಕ್ತಿಯನ್ನೇ ವಿಚಾರಿಸುವವನನ್ನು ನೀನು ಆಲೋ-ಚಿಸಲಾರೆ. ತಿಳಿದುಕೊಳ್ಳುವ ಶಕ್ತಿಯನ್ನೇ ತಿಳಿಯುವವನನ್ನು ನೀನು ತಿಳಿಯಲಾರೆ. ಈ ನಿನ್ನ ಆತ್ಮವೇ ಸರ್ವಾಂತರನು. ಸರ್ವಾಂತರನಲ್ಲಿರುವವನೇ ಆತ್ಮ. ಈ ಪರಮತತ್ವವನ್ನು ಬಿಟ್ಟು ಉಳಿದುದೆಲ್ಲ ಶುಕ್ತಿರಜತಗಳಂತೆ ಮಿಥ್ಯಃ ಭ್ರಾಂತಿ. ಇಲ್ಲವೆ ವಿನಾಶ ಶೀಲವೆಂದು ಅರ್ಥ. ಈ ಪ್ರಕಾರವಾಗಿ ಆಲಿಸಿದ ಉಷಸ್ತನು (ಚಾಕ್ರಾಯಣನು) ಕೇಳಿ ಸುಮ್ಮನಾದ.

## ಪಂಚಮಾಧ್ಯಾಯ - ಪಂಚಮ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹೈನಂ ಕಹೋಳಃ ಕೌಷೀತಕೇಯಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರ ಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ ಕತಮೋ ಯಾಜ್ಞವಲ್ಕ್ಯ ಸರ್ವಾನ್ತರೋ ಯೋಽಶನಾಯಾ ಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ। ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾ ಯಾಶ್ಚ ವಿತ್ತೈಷಣಾ ಯಾಶ್ಚ ಲೋಕೈಷಣಾ ಯಾಶ್ಚ ವ್ಯುತ್ಥಾಯ। ಅಥಭಿಕ್ಷಾಚರ್ಯಂ ಚರನ್ತಿ ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋಭೇ ಹ್ಯೇತೇ ಏಷಣೇ ಏವ ಭವತಃ । ತಸ್ಮಾದ್ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾ ಸೇತ್ ಬಾಲ್ಯಂ ಚ ಪಾಣ್ಡಿತ್ಯಂ ಚ ನಿರ್ವಿದ್ಯಾಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಽಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವಾತೋಽನ್ಯದಾರ್ತ್ತಂ ತತೋಽಹ ಕಹೋಳಃ ಕೌಷಿತಕೇಯ ಉಪರರಾಮ (1)**

ತಾ : ಕುಷೀತಕ ಮುನಿಯ ಪುತ್ರನಾದ ಕಹೋಳನೆನ್ನುವನು ಯಾಜ್ಞವಲ್ಕ್ಯನನ್ನು ಕುರಿತು "ಓ ಯಾಜ್ಞವಲ್ಕ್ಯಾ!" ಎಂದು ಕರೆದು. ಸನ್ನಿಹಿತವಾಗಿ ಪ್ರತ್ಯಕ್ಷವಾಗಿ ಇರುವ ಪರಬ್ರಹ್ಮ ಸ್ವರೂಪವನ್ನು, ಸರ್ವಾಂತರವಾದ ಪ್ರತ್ಯಗಾತ್ಮ ಸ್ವರೂಪವಾದ ಈ ಆತ್ಮ ಸ್ವರೂಪವನ್ನು ನನಗೆ ತಿಳಿಸಿ ಹೇಳು" ಎಂದು ಕೋರಿದ. ಯಾಜ್ಞವಲ್ಕ್ಯನು ಓ ಕಹೋಳಾ! ನಿನ್ನ ಈ ಆತ್ಮ ರೂಪವು ಸರ್ವಾಂತರವಾದುದು ಎಂದನು. ಕಹೋಳನು:- ಯಾಜ್ಞವಲ್ಕ್ಯಾ! ಸರ್ವಾಂತರವಾದ ನನ್ನ ಆತ್ಮ ಸ್ವರೂಪವು ಯಾವುದು? ಎಂದು ಪ್ರಶ್ನಿಸಿದ. ಯಾಜ್ಞವಲ್ಕ್ಯ:- ಓ ಕಹೋಳನೇ! ಪ್ರಾಣ ಮನಶ್ಶರೀರಗಳೇ ಅಧಿಕರಣವಾಗಿರುವ ಕ್ಷುತ್ಪಿಪಾಸೆಗಳು, ಶೋಕಮೋಹಗಳು, ಜರಾಮರಣಗಳು, ಪ್ರಾಣಗಳಲ್ಲಿ ಅಹೋರಾತ್ರಿಗಳಂತೆ, ಸಮುದ್ರ ತರಂಗಗಳಂತೆ ಇರುವಂತಹುದೇ ಸಂಸಾರವೆಂದು ಕರೆಸಿಕೊಳ್ಳುತ್ತದೆ. ಬ್ರಹ್ಮಾದಿ ಸ್ತಂಭ ಪರ್ಯಂತ-ವಿರುವುದು ಜೀವಿಗಳ ಕ್ಷುತ್ಪಿಪಾಸಾದಿಗಳ ಸಮೀಪವು ಪ್ರತ್ಯಕ್ಷವು ಸರ್ವಾಂತರವು ಆದ ಆತ್ಮ ಸ್ವರೂಪವು. (ಮೇಘದ ಮಾಲಿನ್ಯವು ಆಕಾಶವನ್ನು ಸ್ಪರ್ಶಿಸದ ರೀತಿಯಲ್ಲಿ) ಮಾಲಿನ್ಯವನ್ನು ಹೊಂದುವುದಿಲ್ಲ. ಇಂತಹ ಪರಬ್ರಹ್ಮ ಸ್ವರೂಪವನ್ನು ತಿಳಿದುಕೊಂಡ ಬ್ರಹ್ಮಜ್ಞಾನಿಗಳು ಈಷಣತ್ರಯ ವಿರಕ್ತರಾಗಿ ದೇಹ ಪೋಷಣಾರ್ಥವಾಗಿ ಭಿಕ್ಷಾಚರಣೆಯನ್ನು ಮಾತ್ರ ಮಾಡುತ್ತಿರುವರು. ಹೀಗೆ ಬ್ರಹ್ಮಜ್ಞಾನಿಗಳು ಆತ್ಮಜ್ಞಾನವನ್ನು ತಿಳಿದುಕೊಂಡು ಕರ್ಮವನ್ನು, ಕರ್ಮಸಾಧನವನ್ನು ತ್ಯಜಿಸಿ, ಸಂನ್ಯಾಸಿಯಾಗಿ, ಭಿಕ್ಷಾಚರಣೆಯನ್ನು ಮಾಡಬೇಕು. ಬ್ರಹ್ಮವೇತ್ತನು ಆತ್ಮವಿಜ್ಞಾನವನ್ನು (ವೆನ್ನುವ) ಆಚಾರ್ಯಾಗಮ-ಗಳಿಂದ ನಿಶ್ಶೇಷವಾಗಿ ತಿಳಿದುಕೊಂಡು ಸಮಸ್ತ ವಿಷಯಗಳಲ್ಲಿನ ದೃಷ್ಟಿಯನ್ನು ತಿರಸ್ಕರಿಸಬೇಕು. ಈ ರೀತಿಯಾಗಿ ಆತ್ಮವಿಜ್ಞಾನವೆನ್ನುವ(ವನ್ನು) ಅನಾತ್ಮಜ್ಞಾನದೃಷ್ಟಿಯನ್ನು ತಿರಸ್ಕರಿಸುತ್ತ ನಿಶ್ಶೇಷವಾಗಿ ತಿಳಿದುಕೊಂಡು ಜ್ಞಾನಿಯು ಕೃತಕೃತ್ಯನಾಗುತ್ತಿರುವನು. ಸ್ವರೂಪವಾಗಿರುವ ಮೌನವನ್ನು (ಮುನಿ ಭಾವವಾದ ಮೌನವನ್ನು) ನಿಶ್ಶೇಷವಾಗಿ ತಿಳಿದುಕೊಂಡು ಸಮಸ್ತವು ಬ್ರಹ್ಮ ಸ್ವರೂಪವೇ ಎನ್ನು-ವಂತಹ ಜ್ಞಾನವುಳ್ಳ ಬ್ರಾಹ್ಮಣನಾಗುತ್ತಾನೆ. ಆ ರೀತಿಯ ಬ್ರಾಹ್ಮಣನು ಈ ಹಿಂದೆ ವಿವರಿಸಿದ ಆಚರಣೆ-ಯಿಂದಲೇ ಆಗುತ್ತಿದ್ದಾನೆ. ಈ ಏಷಣಾತ್ರಯ ಲಕ್ಷಣವಾದ ವಸ್ತುವು, ಸ್ವಪ್ನಮಾಯಾ ಮರೀಚಿಕೆಯ ಉದಕಕ್ಕೆ ಸಮಾನವಾಗಿ ನಶಿಸುತ್ತದೆ. ಹೀಗೆ ಯಾಜ್ಞವಲ್ಕ್ಯನು ತಾನು ಕೇಳಿದ ಪ್ರಶ್ನೆಗೆ ನಿರ್ಧಾರವಾಗಿ ಹೇಳಿದ್ದರಿಂದ ಕೌಷೀತಕಿ ಪುತ್ರನಾದ ಕಹೋಳನು ಸಮಾಧಾನ ಹೊಂದಿ ಮತ್ತೊಂದು ಪ್ರಶ್ನೆ ಹಾಕದೆ ಮೌನವಹಿಸಿದ.

## ಪಂಚಮಾಧ್ಯಾಯ – ಷಷ್ಠ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹೈನಂ ಗಾರ್ಗೀವಾಚಕ್ನವೀ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್ಂ ಸರ್ವಮಪ್ಸ್ವೋತಂ ಚ ಪ್ರೋತಂ ಚ ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ। ವಾಯೌ ಗಾರ್ಗೀತಿ ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತ್ಯನ್ತರಿಕ್ಷಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವನ್ತರಿಕ್ಷಲೋಕಾ ಓತಾಶ್ಚ ಪ್ರೋತಾಶ್ಚೇತಿ ಗನ್ಧರ್ವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಗನ್ಧರ್ವಲೋಕಾ ಓತಾಶ್ಚ ಪ್ರೋತಾಶ್ಚೇತ್ಯಾದಿತ್ಯಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಾದಿತ್ಯಲೋಕಾ ಓತಾಶ್ಚ ಪ್ರೋತಾಶ್ಚೇತಿ ಚನ್ದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಚನ್ದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ನಕ್ಷತ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು**

**ನಕ್ಷತ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ದೇವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ದೇವಲೋಕಾ ಓತಾಶ್ಚ ಪ್ರೋತಾಶ್ಚೇತೀನ್ದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಿಂದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ಪ್ರಜಾಪತಿಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಪ್ರಜಾಪತಿಲೋಕಾ ಓತಾಶ್ಚ ಪ್ರೋತಾಶ್ಚೇತಿ ಬ್ರಹ್ಮಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಬ್ರಹ್ಮಲೋಕಾ ಓತಾಶ್ಚ ಪ್ರೋತಾಶ್ಚೇತಿ ಸಹೋವಾಚ ಗಾರ್ಗಿಮಾತಿಪ್ರಾಕ್ಷಿರ್ಮಾತೇಮೂರ್ಧಾ ವ್ಯಪಪ್ತದನತಿ ಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ ಗಾರ್ಗಿಮಾತಿಪ್ರಾಕ್ಷೀರಿತಿ ತತೋ ಹ ಗಾರ್ಗೀ ವಾಚಕ್ನವ್ಯುಪರರಾಮ(1)**

ತಾ : ಆಮೇಲೆ ವಚಕ್ನನ ಮಗಳಾದ ಗಾರ್ಗಿ ಎದ್ದು ನಿಂತು "ಯಾಜ್ಞವಲ್ಕ್ಯಾ! ಈ ಸಮಸ್ತ ವಸ್ತು ಜಾತವು ಜಲದಲ್ಲಿ ಓತಪ್ರೋತವಾಗಿದೆಯಲ್ಲವೇ ಆ ಜಲವು ಓತಪ್ರೋತವಾಗಿ ಯಾವುದರಲ್ಲಿದೆ? ಅಂದರೆ ಉದಕಕ್ಕೆ ಆಧಾರವ್ಯಾವುದು? (ಆಧಾರವೆಲ್ಲಿಯದು?) ಯಾಜ್ಞವಲ್ಕ್ಯಃ- ಅದು ವಾಯುವಿನಿಂದಾಗಿ ಓತಪ್ರೋತವಾಗಿದೆ. ಇಲ್ಲಿ ಜಲಕ್ಕೆ ನಂತರ ಅಗ್ನಿಯೆಂದು ಹೇಳದ ಕಾರಣವೇನೆಂದರೆ ಅಗ್ನಿಗೆ ಭೂಜಲಗಳ ಸಂಬಂಧ ಇಲ್ಲದೆ ಸ್ಥಿತಿಯಿರುವುದಿಲ್ಲ. ಆದ್ದರಿಂದ ಅಗ್ನಿ ಈ ಎರಡರಲ್ಲೂ ಅಂತರ್ಗತವಾಗಿದೆಯೆಂದೇ ಊಹಿಸಬೇಕು. ಗಾರ್ಗಿ:- "ಈ ವಾಯುವು ಯಾವುದರಲ್ಲಿ ಓತಪ್ರೋತ ಭಾವವನ್ನು ಹೊಂದಿದೆ? (ಹೀಗೆ ಒಂದೊಂದು ಭೂತವನ್ನು ಕುರಿತು ಗಾರ್ಗಿ ಪ್ರಶ್ನಿಸು- ತ್ತಿರುವುದರಿಂದ ಇಲ್ಲಿ ಅವೆಲ್ಲಕ್ಕೂ ಒಂದೇ ಸಾರಿ (ಬಾರಿಗೆ) ಉತ್ತರವನ್ನು ಕೊಡಲಾಗಿದೆ.) ಯಾಜ್ಞವಲ್ಕ್ಯಃ- "ವಾಯುವು ಅಂತರಿಕ್ಷದಲ್ಲಿಯೂ, ಅಂತರಿಕ್ಷವು ಗಂಧರ್ವ ಲೋಕದಲ್ಲಿಯೂ, ಗಂಧರ್ವ ಲೋಕ ಆದಿತ್ಯ ಲೋಕದಲ್ಲಿಯೂ, ಆದಿತ್ಯ ಲೋಕವು ಚಂದ್ರ ಲೋಕದಲ್ಲಿಯೂ, ಚಂದ್ರಲೋಕವು ನಕ್ಷತ್ರ ಲೋಕದಲ್ಲಿಯೂ, ನಕ್ಷತ್ರ ಲೋಕವು ದೇವಲೋಕದಲ್ಲಿಯೂ, ದೇವಲೋಕವು ಇಂದ್ರಲೋಕ- ದಲ್ಲಿಯೂ, ಇಂದ್ರಲೋಕವು ಪ್ರಜಾಪತಿ ಲೋಕದಲ್ಲಿಯೂ, ಪ್ರಜಾಪತಿ ಲೋಕವು ಬ್ರಹ್ಮಲೋಕ- ದಲ್ಲಿಯೂ, ಓತಪ್ರೋತ ಭಾವವನ್ನು ಹೊಂದಿದೆ. (ಹೊಂದಿರುತ್ತದೆ) ಬ್ರಹ್ಮಲೋಕವು ಯಾವುದರಲ್ಲಿ ಓತಪ್ರೋತವಾಗಿದೆಯೆಂದು ಗಾರ್ಗಿ ಕೇಳಲು "ಓ ಗಾರ್ಗಿ! ಇನ್ನು ಪ್ರಶ್ನಿಸಬೇಡ. ಇದುವರೆಗೂ ಕೇಳಿದ್ದು ಸರಿಯಾದುದು, ನ್ಯಾಯವಾದುದು. ಸರ್ವಕ್ಕೂ ಅತೀತವಾಗಿ ಬ್ರಹ್ಮ ವಸ್ತು ಮಾತ್ರವೇ ಇದೆ. ಅದೇ ಎಲ್ಲವೂ. ಅದನ್ನು ವರ್ಣಿಸುವುದಕ್ಕೆ ಸಾಧ್ಯವಾಗದು. ತರ್ಕ ಮಾಡಲು ಅರ್ಹವಾಗ- ದಿರುವಂತಹ, ಆಗಮ ಪ್ರಮಾಣದಿಂದ ತಿಳಿದುಕೊಳ್ಳುವಂತಹುದು ಆದ ದೇವತಾ ಸ್ವರೂಪವನ್ನು ತಿಳಿದುಕೊಳ್ಳಲು, ಹಿಂದೆ ಪ್ರಶ್ನಿಸಿದ ಹಾಗೆ ಪ್ರಶ್ನಿಸಬಾರದು. ಓ ಗಾರ್ಗೀ! ಹೀಗೆ ನ್ಯಾಯವನ್ನು ಅತಿಕ್ರಮಿಸಿ, ಪ್ರಶ್ನೆ ಹಾಕಿದಲ್ಲಿ ನಿನ್ನ ಶಿರಸ್ಸು ಒಡೆದು ಕೆಳಗೆ ಬೀಳುವುದು, ಆದ್ದರಿಂದ, ನೀನು ಬದುಕಲು ಇಚ್ಛೆಯುಳ್ಳವಳಾಗಿದ್ದರೆ ಈ ಪ್ರಶ್ನೆಯನ್ನು ಹಾಕಬೇಡ ಎಂದು ಯಾಜ್ಞವಲ್ಕ್ಯನು ಹೇಳಲು, ಪಚಕ್ನುನ ಮಗಳಾದ ಗಾರ್ಗೀ ಮತ್ತೇನೂ ಪ್ರಶ್ನೆ ಹಾಕದೆ ಸುಮ್ಮನಾದಳು.

## ಪಂಚಮಾಧ್ಯಾಯ - ಸಪ್ತಮ ಬ್ರಾಹ್ಮಣಂ

**ಮಂ.ಶ್ಲೋ|| ಅಥ ಹೈನಮುದ್ದಾಲಕಆರುಣೀಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಮದ್ರೇಷ್ವವಸಾಮ ಪತಂಜಲಸ್ಯ ಕಾಪ್ಯಸ್ಯ ಗೃಹೇಷು ಯಜ್ಞಮಧೀಯಾನಾನ್ತಸ್ಯಾಸೀದ್ಭಾರ್ಯಾ ಗಂಧರ್ವ ಗೃಹೀತಾ**

**ತಮಪೃಚ್ಛಾಮ ಕೋಽಸೀತಿ ಸ್ತೋಽಬ್ರವೀತ್ ಕಬನ್ಧಆಥರ್ವಣ ಇತಿ ಸೋಽಬ್ರವೀತ್ಪತಞ್ಚಲಂ ಕಾಪ್ಯಂ ಯಾಜ್ಞಿಕಾಗ್‌ಂಶ್ಚ ವೇತ್ಥ ನು ತ್ವಂ ಕಾಪ್ಯ ತತ್ಸೂತ್ರಂ ಯೇನಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸನ್ದೃಬ್ಧಾನಿ ಭವನ್ತೀತಿ ಸೋಽಬ್ರವೀತ್ಪತಂಚಲಃ ಕಾಪ್ಯೋಽನಾಹಂ ತಂ ಭಗವನ್ವೇದೇತಿ। ಸೋಽಬ್ರವೀತ್ಪತಞ್ಚಲಂ ಕಾಪ್ಯಂ ಯಾಜ್ಞಿಕಾಗ್‌ಂಶ್ಚ ವೇತ್ಥ ನು ತ್ವಂ ಕಾಪ್ಯ ತಮನ್ತರ್ಯಾಮಿಣಂ ಯ ಇಮಂ ಚ ಲೋಕಂ ಪರಂ ಚ ಲೋಕಗ್‌ಂ ಸರ್ವಾಣಿ ಚ ಭೂತಾನಿ ಯೋಽನ್ತರೋ ಯಮಯತೀತಿ ಸೋಽಬ್ರವೀತ್ಪತಂಚಲಃ ಕಾಪ್ಯೋಽನಾಹಂತಂ ಭಗವನ್ವೇದೇತಿ ಸೋಽಬ್ರವೀತ್ಪತಂಚಲಂ ಕಾಪ್ಯಂ ಯಾಜ್ಞಿಕಾಗ್‌ಂಶ್ಚ ಯೋ ವೈ ತತ್ಕಾಪ್ಯ ಸೂತ್ರಂ ವಿದ್ಯಾತ್ತಂ ಚಾನ್ತರ್ಯಾಮಿಣಮಿತಿ ಸ ಬ್ರಹ್ಮ ವಿತ್ಸಲೋಕವಿತ್ಸ -ದೇವವಿತ್ಸವೇದವಿತ್ಸಭೂತವಿತ್ಸಆತ್ಮವಿತ್ಸಸರ್ವವಿದಿತಿ ತೇಭ್ಯೋಽಬ್ರವೀತ್ತದಹಂ ವೇದ ತಚ್ಚೇತ್ತ್ವಂ ಯಾಜ್ಞವಲ್ಕ್ಯಸೂತ್ರಮವಿದ್ವಾಗ್‌ಂ ಸ್ತಂಚಾನ್ತರ್ಯಾಮಿಣಂ ಬ್ರಹ್ಮಗವೀ-ರುದಜಸೇಮೂರ್ಧಾ ತೇ ವಿಪತಿಷ್ಯತೀತಿ ವೇದ ವಾ ಅಹಂ ಗೌತಮ ತತ್ಸೂತ್ರಂ ತಂ ಚಾನ್ತರ್ಯಾಮಿಣಮಿತಿ ಯೋ ವಾ ಇದಂ ಕಶ್ಚಿದ್ಬ್ರೂಯಾದ್ವೇದ ವೇದೇತಿ ಯಥಾ ವೇತ್ಥ ತಥಾ ಬ್ರೂಹೀತಿ (1)**

ತಾ : ಆನಂತರ ಆರುಣಿಪುತ್ರನಾದ ಉದ್ದಾಲಕ ಮುನಿಯು ಈ ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದ. "ಓ ಯಾಜ್ಞವಲ್ಕ್ಯಾ! ನಾವು ಒಮ್ಮೆ ಮದ್ರದೇಶದಲ್ಲಿ ಕಪಿಗೋತ್ರೋದ್ಭವನಾದ ಪತಂಜಲನ ಗೃಹದಲ್ಲಿ, ಯಜ್ಞಶಾಸ್ತ್ರವನ್ನು (ಕಲ್ಪಸೂತ್ರವನ್ನು) ಅಧ್ಯಯನ ಮಾಡುವುದಕ್ಕಾಗಿ ವಾಸ್ತವ್ಯ ಹೂಡಿದ್ದೆವು. ಆ ಪತಂಜಲಿಯ ಪತ್ನಿಯ ಮೈಮೇಲೆ ಗಂಧರ್ವನ ಆವೇಶವಾಗುತ್ತಿತ್ತು. ನೀನು ಯಾರೆಂದು ಪ್ರಶ್ನಿಸಿದೆವು. ನಾನು ಅಥರ್ವನ ಪುತ್ರನಾದ ಕಬಂಧನೆಂದು ಆ ಗಂಧರ್ವನು ಹೇಳಿದ. ಮತ್ತು ಆ ಗಂಧರ್ವನು ಪತಂಜಲಿಯನ್ನು ಯಾಜ್ಞಿಕರನ್ನು ಕುರಿತು ಹೀಗೆ ಪ್ರಶ್ನಿಸಿದ. ಓ ಕಾಪ್ಯನೆ! ಈ ಲೋಕ, ಪರಲೋಕ ಮತ್ತು ಸರ್ವಭೂತಗಳೂ ಯಾವ ಸೂತ್ರದಿಂದ ಬಂಧಿಸಲ್ಪಟ್ಟಿದೆಯೋ ನಿನಗೆ ತಿಳಿದಿದೆಯೇ? ಅದಕ್ಕೆ ಪತಂಜಲನು, "ನನಗೆ ಗೊತ್ತಿಲ್ಲ" ಎಂದು ಉತ್ತರವನ್ನಿತ್ತ. ಮತ್ತೆ ಗಂಧರ್ವನು ಪತಂಜಲನನ್ನು ಕುರಿತು ಯಾರು ಈ ಲೋಕ, ಪರಲೋಕಗಳನ್ನು ಹಾಗೂ ಸಮಸ್ತ ಭೂತಗಳಿಗೂ ಅಂತರ್ಯಾಮಿ-ಯಾಗಿದ್ದುಕೊಂಡು ನಿಯಂತ್ರಿಸುತ್ತಿದ್ದಾನೋ ಆ ಅಂತರ್ಯಾಮಿಯನ್ನು ನೀನು ಕೇಳಿದ್ದೀಯಾ? ಪತಂಜಲನು:- "ಓ ಭಗವನ್! ನನಗೆ ಗೊತ್ತಿಲ್ಲ" ಎಂದು ಉತ್ತರವನ್ನಿತ್ತ "ಎಲೈ ಕಾಪ್ಯನೇ! ಯಾರು ಈ ಸೂತ್ರ ಹಾಗೂ ಅಂತರ್ಯಾಮಿಯನ್ನು ತಿಳಿದಿರುತ್ತಾನೋ, ಆತನೇ ಬ್ರಹ್ಮವನ್ನು, ಲೋಕಗಳನ್ನು, ದೇವತೆಗಳನ್ನು, ವೇದಗಳನ್ನು, ಭೂತಗಳನ್ನು, ಆತ್ಮವನ್ನು, ಸರ್ವವನ್ನೂ ತಿಳಿದಿರುವಂತಹವನಾಗಿರುತ್ತಾನೆ ಎಂದು ಗಂಧರ್ವನು ಮತ್ತೆ ಹೇಳಿದ. ಈ ಜ್ಞಾನವನ್ನು ಪ್ರಾರ್ಥನಾ ಪೂರ್ವಕವಾಗಿ ಆತನಿಂದ ತಿಳಿದುಕೊಂಡೆ. ಯಾಜ್ಞವಲ್ಕ್ಯಾ! ನೀನು ಆ ಸೂತ್ರದ ಬಗ್ಗೆ ಹಾಗೂ ಅಂತರ್ಯಾಮಿಯ ಬಗ್ಗೆ ಅರಿವಿಲ್ಲದೆಯೇ ಜ್ಞಾನಿಗಳಿಗೆ ಮಾತ್ರವೇ ಸಲ್ಲತಕ್ಕ ಗೋವುಗಳನ್ನು ತೆಗೆದುಕೊಂಡು ಹೋದಲ್ಲಿ ನಿನ್ನ ಶಿರಸ್ಸು ಒಡೆದು ಹೋಳಾಗುವುದು. ಯಾಜ್ಞವಲ್ಕ್ಯ:- ಓ ಗೌತಮನೇ ಆ ಸೂತ್ರವನ್ನು ಹಾಗೂ ಅಂತರ್ಯಾಮಿ ತತ್ತ್ವವನ್ನು ನಾನು ಪೂರ್ತಿಯಾಗಿ ತಿಳಿದುಕೊಂಡಿದ್ದೇನೆ"

ಎಂದ. ಆರುಣಿ:- ನನಗೆ ಗೊತ್ತಿದೆ, ನನಗೆ ಗೊತ್ತಿದೆ ಎಂದು ಎಲ್ಲರೂ ಹೇಳಬಲ್ಲರು. ಹಾಗಾದರೆ - ನಿನಗೆ ಏನು ಗೊತ್ತಿದೆಯೋ ಅದನ್ನು ಹೇಳು. ನಾವು ನೋಡಬೇಕು" ಎಂದ.

**ಮಂ.ಶ್ಲೋ॥ ಸ ಹೋವಾಚ ವಾಯುರ್ವೈ ಗೌತಮ ತತ್ಸೂತ್ರಂ ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚಲೋಕಃ ಸರ್ವಾಣಿ ಚ ಭೂತಾನಿ ಸನ್ದೃಬ್ಧಾನಿ ಭವನ್ತಿ ತಸ್ಮಾದ್ವೈ ಗೌತಮ ಪುರುಷಂ ಪ್ರೇತಮಾಹುರ್ವ್ಯಸ್ರಗ್ಂಸಿಷತಾಸ್ಯಾಙ್ಗಾನೀತಿ ವಾಯುನಾ ಹಿ ಗೌತಮ ಸೂತ್ರೇಣ ಸನ್ದೃಬ್ಧಾನಿ ಭವನ್ತೀತ್ಯೇವಮೇವೈ ತದ್ಯಾಜ್ಞವಲ್ಕ್ಯಾನ್ತರ್ಯಾಮಿಣಂ ಬ್ರೂಹೀತಿ (2)**

ತಾಃ ಯಾಜ್ಞವಲ್ಕ್ಯನು ಓ ಉದ್ದಾಲಕಾ! ಈ ಸೂತ್ರವು ವಾಯುವೇ ಸೂತ್ರರೂಪವಾದ ವಾಯು-ವಿನಿಂದಲೇ ಈ ಜನ್ಮ ಪರಜನ್ಮ ಸಮಸ್ತ ಭೂತಗಳು, ಕಟ್ಟುಬಿದ್ದಿವೆ. ಈ ಕಾರಣದಿಂದ ಪುರುಷನನ್ನು ಸತ್ತವನೆಂದು ಹೇಳಿದರು. ಈ ಪುರುಷನ ಅವಯವಗಳು ಜಾರಿಹೋದವು. ಆದ್ದರಿಂದ ಓ ಗೌತಮಾ! ಸೂತ್ರರೂಪವಾದ ವಾಯು ಸ್ವರೂಪದಿಂದಲೇ ಅವಯವಗಳು ಜೋಡಿಸಲ್ಪಟ್ಟಿವೆ. ಉದ್ಧಾಲಕ:- ಈ ಸೂತ್ರ ಸ್ವರೂಪವು ಈ ಪ್ರಕಾರವಾಗಿಯೇ ಓ ಯಾಜ್ಞವಲ್ಕ್ಯಾ! ಅಂತರ್ಯಾಮಿ ಸ್ವರೂಪವನ್ನು ವಿಪುಲವಾಗಿ ಹೇಳು.

**ಮಂ.ಶ್ಲೋ॥ ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅನ್ತರೋ ಯಂ ಪೃಥಿವೀ ನ ವೇದಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (3)**

ತಾ : ಯಾವುದು ಭೂಮಿಯಲ್ಲಿದ್ದು, ಭೂಮಿಗಿಂತ ಅಭ್ಯಂತರವಾಗಿರುವುದೋ, ಪೃಥಿವಿಯು ಯಾವುದನ್ನು ತಿಳಿದುಕೊಳ್ಳುವುದಿಲ್ಲವೋ, ಭೂಮಿಯು ಯಾರಿಗೆ ದೇಹವೋ, ಯಾವುದು ಪೃಥಿವಿಯ ಒಳಗಿರುವಂತಹುದಾಗಿ ನಿಯಮಿತವಾಗಿದೆಯೋ, ಅದೇ ನಿನ್ನ ಈ ಅಂತರ್ಯಾಮಿ ರೂಪವಾದ ಆತ್ಮ ಸ್ವರೂಪವಾಗಿದೆ.

**ಮಂ.ಶ್ಲೋ॥ ಯೋಽಪ್ಸು ತಿಷ್ಠನ್ನದ್ಭ್ಯೋಽನ್ತರೋ ಯಮಾಪೋ ನ ವಿದುರ್ಯಸ್ಯಾಪಶ್ಶರೀರಂ ಯೋಽಪಾಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (4)**

ತಾ : ಯಾವುದು ನೀರಿನಲ್ಲಿದ್ದುದಂತಹುದಾಗಿ, ಉದಕಗಳಿಗಿಂತಲೂ ಒಳಗೆ ಬೇರೆಯಾಗಿರು-ವುದೋ, ಉದಕಗಳು ಯಾವುದನ್ನು ತಿಳಿದುಕೊಳ್ಳಲಾರವೋ, ಯಾವುದನ್ನು ಉದಕಗಳನ್ನು ನಿಯಮಿತಗೊಳಿಸುವುದೋ, ಅದೇ ನಿನ್ನ ಅಂತರ್ಯಾಮಿ ರೂಪವಾದ ಆತ್ಮಸ್ವರೂಪ.

**ಮಂ.ಶ್ಲೋ॥ ಯೋಽಗ್ನೌ ತಿಷ್ಠನ್ನಗ್ನೇರನ್ತರೋ ಯಮಗ್ನಿರ್ನವೇದ ಯಸ್ಯಾಗ್ನಿಃ ಶರೀರಂ ಯೋಽಗ್ನಿಮನ್ತರೋ -ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (5)**

ತಾ : ಯಾರು ಅಗ್ನಿಯಲ್ಲಿದ್ದು, ಅಗ್ನಿಯನ್ನು ನಿಯಮಿಸುತ್ತಿರುವನೋ, ಅಗ್ನಿ ದೇವತೆಗೆ ಯಾರನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಶಕ್ತಿಯಿಲ್ಲವೋ, ಅಗ್ನಿಯು ಯಾರ ಶರೀರವೋ, ಅಗ್ನಿಗೆ ಒಳಗಿನಿಂದ ಅಗ್ನಿಯನ್ನು ಯಾರು ನಿಯಮಿಸುವನೋ, ಆತನೇ ನಿನ್ನ ಈ ಆತ್ಮ, ಆತನೇ ನೀನೂ, ನಾನೂ, ಅದೇ ಅಮೃತ ಅಂತರ್ಯಾಮಿ.

**ಮಂ.ಶ್ಲೋ॥ ಯೋಽನ್ತರಿಕ್ಷೇ ತಿಷ್ಠನ್ನನ್ತರಿಕ್ಷಾದನ್ತರೋ ಯಮನ್ತರಿಕ್ಷಂ ನ ವೇದ ಯಸ್ಯಾನ್ತರಿಕ್ಷಗ್ಂ ಶರೀರಂ ಯೋಽನ್ತರಿಕ್ಷಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (6)**

ತಾ : ಯಾವುದು ಅಂತರಿಕ್ಷದಲ್ಲಿದ್ದು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿರುವುದೋ, ಯಾವುದು ಅಂತರಿಕ್ಷವನ್ನು ಅರಿಯಲಾರದೋ, ಅಂತರಿಕ್ಷವು ಯಾವುದರ ಶರೀರವೋ, ಒಳಗಿನಿಂದ ಅದನ್ನು ಯಾವುದು ನಿಯಮಿಸುವುದೋ, ಅದೇ ನಿನ್ನ ಆತ್ಮ. ಅದೇ ಅಂತರ್ಯಾಮಿ. ಆತನೇ ಅಮೃತ.

**ಮಂ.ಶ್ಲೋ॥ ಯೋ ವಾಯೌ ತಿಷ್ಠನ್ವಾಯೋರನ್ತರೋಯಂ ವಾಯುರ್ನವೇದ ಯಸ್ಯವಾಯುಃ ಶರೀರಂ ಯೋ ವಾಯುಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (7)**

ತಾ : ಯಾವುದು ವಾಯುವಿನಲ್ಲಿದ್ದು, ವಾಯುವಿಗೆ ಒಳಗಿರುವುದೋ, ಯಾವುದನ್ನು ವಾಯುವು ತಿಳಿಯಲಾರದೋ, ವಾಯುವು ಯಾವುದರ ಶರೀರವೋ, ಒಳಗಿನಿಂದ ಯಾವುದು ವಾಯುವನ್ನು ನಿಯಮಿಸುತ್ತಿರುವುದೋ, ಅದೇ ನಿನ್ನ ಆತ್ಮ. ಅದೇ ನಿನ್ನ ಅಂತರ್ಯಾಮಿ. ಅದೇ ಅಮೃತ.

**ಮಂ.ಶ್ಲೋ॥ ಯೋ ದಿವಿ ತಿಷ್ಠನ್ದಿವೋಽನ್ತರೋ ಯಂ ದ್ಯೌರ್ನವೇದ ಯಸ್ಯ ದ್ಯೌಃ ಶರೀರಂ ಯೋ ದಿವಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (8)**

ತಾ : ಯಾವುದು ದ್ಯುಲೋಕದಲ್ಲಿ ಒಳಗೆ ಹೊರಗೆ ಇರುವುದೋ, ಯಾವುದನ್ನು ದ್ಯುಲೋಕವು ತಿಳಿಯಲಾರದೋ ದ್ಯುಲೋಕವು ಯಾವುದಕ್ಕೆ ಶರೀರವೋ, ಯಾವುದು ದ್ಯುಲೋಕವನ್ನು ನಿಯಮಿಸುವುದೋ, ಇದೇ ನಿನ್ನ ಆತ್ಮ, ಅಮೃತಮಯವಾದ ಅಂತರ್ಯಾಮಿ ಸ್ವರೂಪವಾದ ಆತ್ಮ.

**ಮಂ.ಶ್ಲೋ॥ ಯ ಆದಿತ್ಯೇ ತಿಷ್ಠನ್ನಾದಿತ್ಯಾದನ್ತರೋಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ಯ ಆದಿತ್ಯಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (9)**

ತಾ : ಯಾವುದು ಸೂರ್ಯನಲ್ಲಿದ್ದು, ಸೂರ್ಯನಿಗಿಂತ ಒಳಗೆ ಇರುವುದೋ, ಸೂರ್ಯನು ಯಾವುದನ್ನು ತಿಳಿದುಕೊಳ್ಳಲಾರನೋ, ಸೂರ್ಯನು ಯಾವುದಕ್ಕೆ ದೇಹವೋ ಯಾವುದು ಸೂರ್ಯನ ಒಳಗಿರುವಂತಹದಾಗಿ, ನಿಯಮಿಸುತ್ತಿರುವುದೋ, ಇದೇ ನಿನ್ನ ಆತ್ಮ ಅದೇ ಅಮೃತ ಮಯವಾದ ಅಂತರ್ಯಾಮಿ ಸ್ವರೂಪವಾದ ಆತ್ಮ.

**ಮಂ.ಶ್ಲೋ॥ ಯೋ ದಿಕ್ಷು ತಿಷ್ಠನ್ದಿಗ್ಭ್ಯೋಽನ್ತರೋಯಂ ದಿಶೋ ನ ವಿದುರ್ಯಸ್ಯ ದಿಶಶ್ಶರೀರಂ ಯೋ ದಿಶೋಽನ್ತರೋ ಯಮಯತ್ಯೇಷ ತ ಅತ್ಮಾನ್ತರ್ಯಾಮ್ಯಮೃತಃ (10)**

ತಾ : ಯಾವುದು ದಿಕ್ಕುಗಳಲ್ಲಿದ್ದು, ದಿಕ್ಕುಗಳಿಗಿಂತ, ಒಳಗಡೆ ವ್ಯಾಪಿಸಿರುವುದೋ, ದಿಕ್ಕುಗಳು ಯಾವುದನ್ನು ತಿಳಿದುಕೊಳ್ಳಲಾರವೋ, ದಿಕ್ಕುಗಳು ಯಾವುದಕ್ಕೆ ದೇಹವೋ, ಯಾವುದು ದಿಕ್ಕುಗ-ಳೊಳಗೆ ಇದ್ದು ನಿಯಮಿಸುವುದೋ, ಅದೇ ನಿನ್ನ ಅಮೃತಮಯವಾದ, ಅಂತರ್ಯಾಮಿಯಾದ ಆತ್ಮ.

**ಮಂ.ಶ್ಲೋ॥ ಯಶ್ಚನ್ದ್ರತಾರಕೇ ತಿಷ್ಠಗ್ಂಶ್ಚನ್ದ್ರತಾರಕಾದನ್ತರೋ ಯಂ ಚನ್ದ್ರತಾರಕಂ ನ ವೇದ ಯಸ್ಯ ಚನ್ದ್ರತಾರಕಗ್ಂ ಶರೀರಂ ಯಶ್ಚನ್ದ್ರತಾರಕಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾ-ಮ್ಯಮೃತಃ (11)**

ತಾ : ಯಾವುದು ಚಂದ್ರ ನಕ್ಷತ್ರಗಳಲ್ಲಿರುವಂತಹುದ್ದಾಗಿದ್ದು, ಚಂದ್ರ ನಕ್ಷತ್ರಗಳಗಿಂತಲೂ ವ್ಯಾಪಿಸಿ ಒಳಗಡೆಯಿದೆಯೋ, ಚಂದ್ರನಕ್ಷತ್ರಗಳು ಯಾವುದನ್ನು ತಿಳಿದುಕೊಳ್ಳಲಾರವೋ, ಯಾವುದಕ್ಕೆ ಚಂದ್ರ ನಕ್ಷತ್ರಗಳು ಶರೀರವೋ, ಯಾವುದು ಚಂದ್ರ ನಕ್ಷತ್ರಗಳನ್ನು ವ್ಯಾಪಿಸಿ ಒಳಗಡೆ ಇರುವಂತಹುದಾಗಿದೆಯೋ, ಇದೇ ನಿನ್ನ ಅಮೃತಮಯವಾದ ಅಂತರ್ಯಾಮಿ ಸ್ವರೂಪವಾದ ಆತ್ಮ.

**ಮಂ.ಶ್ಲೋ॥ ಯ ಆಕಾಶೇ ತಿಷ್ಠನ್ನಾಕಾಶಾದನ್ತರೋ ಯಮಾಕಾಶೋ ನ ವೇದ ಯಸ್ಯಾಕಾಶಶ್ಶರೀರಂ ಯ ಆಕಾಶಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (12)**

ತಾ : ಯಾವುದು ಆಕಾಶಕ್ಕೆ ಹೊರಗಡೆಗೂ, ಒಳಗಡೆಗೂ ಇದೆಯೋ, ಯಾವುದನ್ನು ಆಕಾಶವು ತಿಳಿದುಕೊಳ್ಳಲಾರದೋ, ಆಕಾಶವು ಯಾವುದಕ್ಕೆ ಶರೀರವೋ, ಅಂತರ್ಯಾಮಿಯಾಗಿ ಆಕಾಶವನ್ನು ಯಾರು ನಿಯಂತ್ರಿಸುವರೋ, ಆತನೇ ನಿನ್ನ ಆತ್ಮ, ಅದೇ ಅಂತರ್ಯಾಮಿ, ಆತನೇ ಅಮೃತ.

**ಮಂ.ಶ್ಲೋ॥ ಯಸ್ತಮಸಿ ತಿಷ್ಠಗ್ಂಸ್ತಮಸೋನ್ತರೋಯಂ ತಮೋ ನ ವೇದ ಯಸ್ಯ ತಮಶ್ಶರೀರಂ ಯಸ್ತಮೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (13)**

ತಾ : ಯಾರು ತಮಸ್ಸಿನ ಒಳಕ್ಕೂ ಹೊರಗಡೆಯೂ ಇರುವನೋ, ಯಾರನ್ನು ತಮಸ್ಸು ಅರಿಯಲಾರದೋ, ತಮಸ್ಸು ಯಾರ ಶರೀರವೋ, ಯಾರು ಅಂತರ್ಯಾಮಿಯಾಗಿದ್ದು, ತಮಸ್ಸನ್ನು (ನಿಯಮಿಸು) ನಿಯಂತ್ರಿಸುವನೋ, ಆತನೇ ನಿನ್ನ ಆತ್ಮ, ಆತನೇ ಅಂತರ್ಯಾಮಿ. ಆತನೇ ಅಮೃತವಾಗಿರುವವನು.

**ಮಂ.ಶ್ಲೋ॥ ಯ ಸ್ತೇಜಸಿ ತಿಷ್ಠಗ್ಂ ಸ್ತೇಜಸೋಽನ್ತರೋಽಯಂ ತೇಜೋ ನ ವೇದ ಯಸ್ಯ ತೇಜಶ್ಶರೀರಂ ಯಸ್ತೇಜೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ಇತ್ಯಧಿದೈವತ-ಮಥಾಧಿಭೂತಮ್ (14)**

ತಾ : ಯಾವುದು ತೇಜಸ್ಸಿನ ಒಳಗಡೆಯೂ ಹೊರಗಡೆಯೂ ಇದೆಯೋ, ಯಾರ ತೇಜಸ್ಸು ತಿಳಿದುಕೊಳ್ಳಲಾರದೋ, ತೇಜಸ್ಸು ಯಾವುದಕ್ಕೆ ಶರೀರವೋ, ಯಾರು ಅಂತರ್ಯಾಮಿಯಾಗಿದ್ದು, ತೇಜಸ್ಸನ್ನು ನಿಯಮಿಸುವುದೋ, ಆತನೇ ನಿನ್ನ ಆತ್ಮ. ಆತನೇ ಅಮೃತಮಯವಾದ ಅಂತರ್ಯಾಮಿ ಅಧಿದೈವತ ಸ್ವರೂಪ. ಅದೇ ಭೂತ ಸ್ವರೂಪವೆಂದು ಹೇಳಲಾಗುತ್ತದೆ. (ಒಳಗಡೆ ನಿವಾಸ ಮಾಡಿ ನಿಯಮವನ್ನು ಮಾಡುವವನು ಅಂತರ್ಯಾಮಿ ಪರಮಾತ್ಮ.)

**ಮಂ.ಶ್ಲೋ॥ ಯಸ್ಸರ್ವೇಷುಭೂತೇಷು ತಿಷ್ಠನ್ಸರ್ವೇಭ್ಯೋ ಭೂತೇಭ್ಯೋಽನ್ತರೋಽಯಗ್ಂ ಸರ್ವಾಣಿಭೂತಾನಿ ನ ವಿದುರ್ಯಸ್ಯ ಸರ್ವಾಣಿಭೂತಾನಿ ಶರೀರಂ ಯಸ್ಸರ್ವಾಣಿಭೂತಾನ್ಯನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತ ಇತ್ಯಧಿಭೂತಮಥಾಧ್ಯಾತ್ಮಂ (15)**

ತಾ : ಯಾವುದು ಸಕಲ ಭೂತಗಳ ಹೊರಗೂ ಒಳಗೂ ಇರುವುದೋ, ಯಾವುದನ್ನು ಭೂತಗಳು ಅರಿಯಲಾರವೋ, ಯಾವುದು ಭೂತಗಳಿಗೆ ಶರೀರವೋ, ಯಾರು ಅಂತರ್ಯಾಮಿ-ಯಾಗಿದ್ದು (ಕೊಂಡು) ಭೂತಗಳನ್ನು ನಿಯಂತ್ರಿಸುವುದೋ, ಆತನೇ ನಿನ್ನ ಆತ್ಮ. ಆತನೇ

ಅಂತರ್ಯಾಮಿ, ಆತನೇ ಅಮೃತ. ಈ ಪ್ರಕಾರವಾಗಿ ಅಧಿಭೂತ ಸ್ವರೂಪವನ್ನು ಆನಂತರ ಅಧ್ಯಾತ್ಮ ಸ್ವರೂಪವನ್ನು ಹೇಳಲಾಗುತ್ತದೆ.

**ಮಂ.ಶ್ಲೋ॥ ಯಃ ಪ್ರಾಣೇ ತಿಷ್ಠನ್ ಪ್ರಾಣಾದನ್ತರೋಽಯಂ ಪ್ರಾಣೋ ನ ವೇದ ಯಸ್ಯಪ್ರಾಣ-ಶ್ಶರೀರಂ ಯಃ ಪ್ರಾಣಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (16)**

ತಾ : ಯಾವುದು ಪ್ರಾಣವಾಯು(ಘ್ರಾಣ)ವಿನಲ್ಲಿದ್ದು ಪ್ರಾಣಕ್ಕಿಂತ ಅಂತರದಲ್ಲಿರುವುದೋ, ಪ್ರಾಣವು ಯಾವುದನ್ನು ತಿಳಿದುಕೊಳ್ಳಲಾರದೋ, ಪ್ರಾಣವು ಯಾವುದಕ್ಕೆ ಶರೀರವೋ, ಯಾವುದು ಪ್ರಾಣದ ಒಳಗಿರುವುದೋ, ಇದು ನಿನ್ನ ಅಮೃತಮಯವಾದ ಅಂತರ್ಯಾಮಿ ಸ್ವರೂಪವಾದ ಆತ್ಮ.

**ಮಂ.ಶ್ಲೋ॥ ಯೋ ವಾಚಿ ತಿಷ್ಠನ್ವಾಚೋಽನ್ತರೋಽಯಂ ವಾಙ್ನವೇದ ಯಸ್ಯ ವಾಕ್ಶರೀರಂ ಯೋವಾಚ -ಮನ್ತರೋ ಯಮಯತ್ಯೇಷ ತ ಆತ್ಮಾಸ್ತರ್ಯಾಮ್ಯಮೃತಃ (17)**

ತಾ : ಯಾವುದು ವಾಕ್ಕಿನಲ್ಲಿರುವುದಾಗಿ, ವಾಕ್ಕಿಗಿಂತ ಒಳಗಿದೆಯೋ, ವಾಕ್ಕು ಯಾವುದನ್ನು ತಿಳಿದುಕೊಳ್ಳಲಾರದೋ, ಯಾವುದಕ್ಕೆ ವಾಕ್ಕು ದೇಹವೋ, ಯಾವುದು ವಾಕ್ಕಿನ ಒಳಗಡೆ ಇದ್ದು ನಿಯಮಕ್ಕೊಳಪಡಿಸುತ್ತದೆಯೋ, ಇದೇ ನಿನ್ನ ಅಮೃತಮಯವಾದ ಅಂತರ್ಯಾಮಿಯಾದ ಆತ್ಮಸ್ವರೂಪ.

**ಮಂ.ಶ್ಲೋ॥ ಯಶ್ಚಕ್ಷುಷಿ ತಿಷ್ಠಗ್ಂಶ್ಚಕ್ಷುಷೋಽನ್ತರೋಽಯಂ ಚಕ್ಷುರ್ನವೇದ ಯಸ್ಯ ಚಕ್ಷುಶ್ಶರೀರಂ ಯಶ್ಚಕ್ಷುರನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (18)**

ತಾ : ಯಾವುದು ನೇತ್ರದಲ್ಲಿರುವಂತಹುದಾಗಿ ನೇತ್ರಕ್ಕಿಂತಲೂ ಒಳಗಿದೆಯೋ, ನೇತ್ರವು ಯಾವುದನ್ನು ತಿಳಿದುಕೊಳ್ಳಲಾರದೋ, ಯಾವುದಕ್ಕೆ ನೇತ್ರವು ದೇಹವೋ, ಯಾವುದು ನೇತ್ರದ ಒಳಗಡೆಯಿದ್ದು ನಿಯಮಿಸು (ನಿಯಂತ್ರಿಸು)ತ್ತಿದೆಯೋ, ಇದು ನಿನ್ನ ಅಮೃತಮಯವಾದ ಅಂತರ್ಯಾಮಿ ರೂಪವಾದ ಆತ್ಮ.

**ಮಂ.ಶ್ಲೋ॥ ಯಶ್ರೋತ್ರೇ ತಿಷ್ಠನ್ ಶ್ರೋತ್ರಾದನ್ತರೋ ಯಗ್ಂ ಶ್ರೋತ್ರಂ ನ ವೇದ ಯಸ್ಯ ಶ್ರೋತ್ರಗ್ಂ ಶರೀರಂ ಯಶ್ರೋತ್ರಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (19)**

ತಾ: ಯಾವುದು ಶ್ರೋತ್ರದಲ್ಲಿದ್ದು ಶ್ರೋತ್ರಕ್ಕಿಂತ ಅಭ್ಯಂತರವಾಗಿದೆಯೋ. ಶ್ರೋತ್ರವು ಯಾವುದನ್ನು ಅರಿಯಲಾರದೋ, ಶ್ರೋತ್ರವು ಯಾವುದಕ್ಕೆ ದೇಹವೋ, ಯಾವುದು ಶ್ರೋತ್ರವನ್ನು ಒಳಗಿನಿಂದ ನಿಯಮಿಸು (ನಿಯಂತ್ರಿಸು)ತ್ತಿದೆಯೋ, ಇದು ನಿನ್ನ ಅಮೃತಮಯವಾದ ಅಂತರ್ಯಾಮಿ ರೂಪವಾದ ಆತ್ಮ.

**ಮಂ.ಶ್ಲೋ॥ ಯೋ ಮನಸಿ ತಿಷ್ಠನ್ಮನಸೋಽನ್ತರೋ ಯಂ ಮನೋ ನ ವೇದ ಯಸ್ಯ ಮನಃ ಶರೀರಂ ಯೋ ಮನೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (20)**

ತಾ : ಯಾರು ಮನಸ್ಸಿನ ಒಳಗೂ ಹೊರಗೂ ಇರುವನೋ, ಯಾರನ್ನು ಮನಸ್ಸು ತಿಳಿಯ

ಲಾರದೋ, ಮನಸ್ಸು ಯಾರ ಶರೀರವೋ, ಯಾರು ಅಂತರ್ಯಾಮಿಯಾಗಿದ್ದು ಮನಸ್ಸನ್ನು ನಿಯಮಿಸು (ನಿಯಂತ್ರಿಸು)ವನೋ, ಆತನೇ ನಿನ್ನ ಆತ್ಮ. ಆತನೇ ಅಂತರ್ಯಾಮಿ, ಆತನೇ ಅಮೃತ.

**ಮಂ.ಶ್ಲೋ॥ ಯಸ್ತ್ವಚಿ ತಿಷ್ಠಗ್ಂ ಸ್ತ್ವಚೋಽನ್ತರೋ ಯಂ ತ್ವಙ್ನವೇದ ಯಸ್ಯತ್ವಕ್ಶರೀರಂ ಯಸ್ತ್ವ ಚ ಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ (21)**

ತಾ : ಯಾರು ತ್ವಗಿಂದ್ರಿಯದ ಒಳಗೆ, ಹೊರಗೆ ಇರುವನೋ, ಯಾರನ್ನು ತ್ವಗಿಂದ್ರಿಯವು ತಿಳಿಯಲಾರದೋ ತ್ವಕ್ಕು ಯಾರ ಶರೀರವೋ, ಯಾರು ಅಂತರ್ಯಾಮಿಯಾಗಿದ್ದು ತ್ವಕ್ಕನ್ನು ನಿಯಮಿಸುವನೋ, ಆತನೇ ನಿನ್ನ ಆತ್ಮ. ಆತನೇ ಅಂತರ್ಯಾಮಿ. ಆತನೇ ಅಮೃತ ಸ್ವರೂಪನು.

**ಮಂ.ಶ್ಲೋ॥ ಯೋ ವಿಜ್ಞಾನೇತಿಷ್ಠನ್ವಿಜ್ಞಾನಾದನ್ತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಗ್ಂ ಶರೀರಂ ಯೋ ವಿಜ್ಞಾನಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ(22)**

ತಾ : ಯಾರು ವಿಜ್ಞಾನ(ಬುದ್ಧಿಯಲ್ಲಿ)ದಲ್ಲಿ ಒಳಗೆ ಹೊರಗೆ ಇರುವನೋ, ಯಾರನ್ನು ವಿಜ್ಞಾನವು ತಿಳಿಯಲಾರದೋ, ವಿಜ್ಞಾನವು ಯಾರ ಶರೀರವೋ, ಯಾರು ಅಂತರ್ಯಾಮಿಯಾಗಿದ್ದು ವಿಜ್ಞಾನವನ್ನು ನಿಯಮಿಸು(ನಿಯಂತ್ರಿಸು)ವನೋ, ಆತನೇ ನಿನ್ನ ಆತ್ಮ ಆತನೇ ಅಂತರ್ಯಾಮಿ. ಆತನೇ ಅಮೃತ ಸ್ವರೂಪ.

**ಮಂ.ಶ್ಲೋ॥ ಯೋ ರೇತಸಿ ತಿಷ್ಠನ್ರೇತಸೋಽನ್ತರೋಽಯಗ್ಂ ರೇತೋ ನ ವೇದ ಯಸ್ಯ ರೇತ-ಶ್ಶರೀರಂ ಯೋ ರೇತೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತೋಽದೃಷ್ಟೋ -ದ್ರಷ್ಟಾಽಶ್ರುತಃ ಶ್ರೋತಾಽಮತೋಽಮನ್ತಾಽವಿಜ್ಞಾತೋಽವಿಜ್ಞಾತಾ ನಾನ್ಯೋಽತೋಽಸ್ತಿ ದ್ರಷ್ಟಾ-ನಾನ್ಯೋಽತೋಽಸ್ತಿ ಶ್ರೋತಾ ನಾಽನ್ಯೋಽತೋಽಸ್ತಿ ಮನ್ತಾ ನಾಽನ್ಯೋಽತೋಽಸ್ತಿ ವಿಜ್ಞಾತೈಷ ತ ಆತ್ಮಾನ್ತರ್ಯಾಮ್ಯಮೃತೋಽತೋಽನ್ಯದಾರ್ತಂ ತತೋ ಹೋದ್ದಾಲಕ ಆರುಣಿ-ರುಪರರಾಮ (23)**

ತಾ : ಯಾವುದು ರೇತಸ್ಸಿನಲ್ಲಿದ್ದು ರೇತಸ್ಸಿಗಿಂತ ಒಳಗಿರುವುದೋ, ರೇತಸ್ಸು ಯಾವುದನ್ನು ತಿಳಿದುಕೊಳ್ಳಲಾರದೋ. ರೇತಸ್ಸು ಯಾವುದಕ್ಕೆ ದೇಹವೋ, ಯಾವುದು ರೇತಸ್ಸನ್ನು ಒಳಗಿನಿಂದ (ಉಂಟುಮಾಡುತ್ತದೋ) ನಿಯಮಿಸು(ನಿಯಂತ್ರಿಸು)ವುದೋ, ಇದು ನಿನ್ನ ಅಮೃತಮಯ ಅಂತರ್ಯಾಮಿ ಸ್ವರೂಪವಾದ ಆತ್ಮ. ಆ ಅಂತರ್ಯಾಮಿ ಸ್ವರೂಪವಾದ ಆತ್ಮವು ಆ ನೇತ್ರದ ದೃಷ್ಟಿಗೆ ಗೋಚರವಾಗದೆ ದೃಕ್ ಸ್ವರೂಪವಾಗಿದೆ. ಕಿವಿಗೆ ಕೇಳಿಸದಂತೆ ಶ್ರೋತ್ರವನ್ನು ನಡೆಸುತ್ತಿರುತ್ತದೆ. ಮನಸ್ಸಂಕಲ್ಪಕ್ಕೆ ಗೋಚರವಾಗದಂತಿದ್ದು ಸಂಕಲ್ಪಿಸುತ್ತಿರುತ್ತದೆ. ನಿಶ್ಚಯಕ್ಕೆ ವಿಷಯವಾಗಿಲ್ಲದೆ ನಿಶ್ಚಯಕ್ಕೆ ಬರುತ್ತದೆ. ಈ ಅಂತರ್ಯಾಮಿ ಸ್ವರೂಪಕ್ಕಿಂತ ಬೇರೆಯಾದ ದ್ರಷ್ಟನಿಲ್ಲ; ಈ ಅಂತರ್ಯಾಮಿಗಿಂತ ಬೇರೆಯಾದ ಶ್ರೋತನಿಲ್ಲ. ಈ ಅಂತರ್ಯಾಮಿಗಿಂತ ಬೇರೆಯಾದ ಸಂಕಲ್ಪಿಸುವಂತಹ ಶಕ್ತಿಯಿಲ್ಲ.

ಈ ಅಂತರ್ಯಾಮಿಗಿಂತ ಬೇರೆಯಾದ ಅರಿತುಕೊಳ್ಳುವಂತಹ ಶಕ್ತಿ ಇನ್ನೊಂದಿಲ್ಲ. ಅಮೃತಮಯ-ವಾದ ಇದೇ ನಿನ್ನ ಅಂತರ್ಯಾಮಿ ರೂಪವಾದ ಆತ್ಮ. ಈ ಪರಮಾತ್ಮನಾದ ಅಂತರ್ಯಾಮಿ ಸ್ವರೂಪಕ್ಕಿಂತ ಇತರವಾದುದು ನಶಿಸುತ್ತದೆ. ಈ ಪ್ರಕಾರ ಪ್ರಶ್ನೆಯನ್ನು ನಿರ್ಣಯಿಸಿ ಹೇಳಿದ್ದರಿಂದ ಆರುಣಿ ಪುತ್ರನಾದ ಉದ್ದಾಲಕನು ಬೇರೇನೂ ಪ್ರಶ್ನೆಯನ್ನು ಹಾಕದೆ ಸುಮ್ಮನಾದ. (ಸೋಲನ್ನು ಅಂಗೀಕರಿಸಿ ಸುಮ್ಮನಾದ.)

## ಪಂಚಮಾಧ್ಯಾಯ – ಅಷ್ಟಮ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹ ವಾಚಕ್ನವ್ಯುವಾಚ ಬ್ರಾಹ್ಮಣಾಭಗವನ್ತೋ ಹನ್ತಾಹಮಿಮಂ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ ತೌ ಚೇನ್ಮೇವಕ್ಷ್ಯತಿ ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ಬ್ರಹ್ಮೋದ್ಯಂ ಜೇತೇತಿ ಪೃಚ್ಛ –ಗಾರ್ಗೀತಿ (1)**

ತಾ : ಅನಂತರ ವಚಕ್ನನ ಮಗಳಾದ ಗಾರ್ಗಿಯು ಹೀಗೆ ಹೇಳಿದಳು. ಓ ಬ್ರಾಹ್ಮಣೋತ್ತಮರೇ! ಪೂಜಾರ್ಹರಾದ ನೀವು ನನಗೆ ಅನುಮತಿ ಕೊಟ್ಟಲ್ಲಿ ಈ ಯಾಜ್ಞವಲ್ಕ್ಯನನ್ನು ಎರಡು ಪ್ರಶ್ನೆ ಕೇಳುವೆನು. ಆ ಪ್ರಶ್ನೆಗೆ ನನಗೆ ಉತ್ತರ ಕೊಟ್ಟಲ್ಲಿ ನಿಮ್ಮಲ್ಲಿ ಯಾರೂ ಈ ಯಾಜ್ಞವಲ್ಕ್ಯನನ್ನು ಬ್ರಹ್ಮಸಂಬಂಧ ವಾದದಲ್ಲಿ ಜಯಿಸುವವರು ಇಲ್ಲವೆಂದು ನಿಶ್ಚಯಿಸೋಣ ಎಂದು ಹೇಳಲು ಹಾಗೆ ಆಗಲಿ ಎಂದು ಆ ಬ್ರಾಹ್ಮಣರು ಒಪ್ಪಿದರು.

**ಮಂ.ಶ್ಲೋ॥ ಸಾ ಹೋವಾಚಾಹಂ ವೈ ತ್ವಾ ಯಾಜ್ಞವಲ್ಕ್ಯ ಯಥಾಕಾಶ್ಯೋ ವಾ ವೈದೇಹೋ ವೋಗ್ರಪುತ್ರ ಉಜ್ಜ್ಯಂ ಧನುರಧಿಜ್ಯಂ ಕೃತ್ವಾ ದ್ವೌ ಬಾಣವನ್ತೌ ಸಪತ್ನಾತಿವ್ಯಾಧಿನೌ ಹಸ್ತೇ ಕೃತ್ವೋ-ಪೋತ್ತಿಷ್ಠೇ ದೇವಮೇವಾಹಂ ತ್ವಾಂ ದ್ವಾಭ್ಯಾಂ ಪ್ರಶ್ನಾಭ್ಯಾಮುಪಾದಸ್ಥಾಂತೌ ಮೇ ಬ್ರೂಹೀತಿ ಪೃಚ್ಛ ಗಾರ್ಗೀತಿ (2)**

ತಾ : ಗಾರ್ಗೀ: "ಓ ಯಾಜ್ಞವಲ್ಕ್ಯಾ! ವೀರರಾದ ಕಾಶೀದೇಶದ ರಾಜನಾಗಲಿ, ವಿದೇಹ ಚಕ್ರವರ್ತಿಯಾಗಲಿ, ತಮ್ಮ ಧನುಸ್ಸಿನಲ್ಲಿ ಬಾಣಗಳನ್ನು ಸಂಧಿಸಿ ಬಿಟ್ಟಾಗ ಆ ಬಾಣವು ಹೇಗೆ ಶತ್ರುಗಳನ್ನು ಬಾಧಿಸುವುದೋ ಆ ರೀತಿಯಾಗಿ ನಾನು ನಿನ್ನನ್ನು ಎರಡು ಪ್ರಶ್ನೆಗಳನ್ನು ಕೇಳುತ್ತಿದ್ದೇನೆ. ಎಚ್ಚರಿಕೆಯಿಂದ ಉತ್ತರವನ್ನು ಹೇಳು" ಎಂದಳು. ಯಾಜ್ಞವಲ್ಕ್ಯನು ಈ ಮಾತುಗಳನ್ನು ಕೇಳಿ ಓ ಗಾರ್ಗೀ! ಪ್ರಶ್ನೆಗಳನ್ನು ಕೇಳುವಂತಹಳಾಗು" ಎಂದು ಆಕೆಯ ಮಾತಿಗೆ ಸಮ್ಮತಿಸಿ ಹೇಳಿದ.

**ಮಂ.ಶ್ಲೋ॥ ಸಾ ಹೋವಾಚ ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ ಯದವಾಕ್ಪೃಥಿವ್ಯಾ ಯದನ್ತರಾ ದ್ಯಾವಾ ಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಗ್ಂ ಸ್ತದೋತಂ ಚ ಪ್ರೋತಂ ಚೇತಿ (3)**

ತಾ : ಗಾರ್ಗೀ:– ಯಾಜ್ಞವಲ್ಕ್ಯಾ! ದ್ಯುಲೋಕಕ್ಕೆ ಮೇಲೆಯು; ಪೃಥಿವಿಗೆ ಕೆಳಗೂ ಅಂದರೆ ಆಕಾಶಕ್ಕೆ ಮೇಲೆ ಭೂಮಿಗೆ ಕೆಳಗೆ ಯಾವುದು ಇದೆಯೋ; ಮತ್ತು ಭೂತದಲ್ಲಿ, ವರ್ತಮಾನದಲ್ಲಿ

ಭವಿಷ್ಯತ್ತಿನಲ್ಲಿ ಸಮಸ್ತವು ಯಾವುದರಲ್ಲಿ ಓತಪ್ರೋತವಾಗಿರುವುದೋ ಅದನ್ನು ವಿವರವಾಗಿ ಹೇಳು ಎಂದಳು. (ಈ ದ್ವಂದ್ವಗಳಿಗೆ ಸೂತ್ರವಾಗಿರುವುದು ಯಾವುದು? ಎನ್ನುವುದು ಪ್ರಶ್ನೆ.)

**ಮಂ.ಶ್ಲೋ॥ ಸ ಹೋವಾಚ ಯದೂರ್ಧ್ವಂ ಗಾರ್ಗಿ ದಿವೋ ಯದವಾಕ್ ಪೃಥಿವ್ಯಾ ಯದನ್ತರಾ ದ್ಯಾವಾ ಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶೇ ತದೋತಂ ಚ ಪ್ರೋತಂ ಚೇತಿ (4)**

ತಾ : ಆ ಯಾಜ್ಞವಲ್ಕ್ಯನು ಹೀಗೆ ನುಡಿದನು:- "ಓ ಗಾರ್ಗೀ! ದ್ಯುಲೋಕಕ್ಕಿಂತ ಮೇಲೆ, ಭೂಮಿಗಿಂತ ಕೆಳಗೆ, ಮಧ್ಯದಲ್ಲಿ, ಭೂತ ವರ್ತಮಾನ ಭವಿಷ್ಯತ್ತುಗಳಾದ ಜಗತ್ತೆಲ್ಲವೂ ರೂಪವಿಲ್ಲದ ಅವ್ಯಾಕೃತಾಕಾಶದಲ್ಲಿ ಏಕವಾಗಿ (ಆತ್ಮ) ಕಲ್ಪಿಸಲ್ಪಟ್ಟಿದೆಯೆಂದು ಯಾಜ್ಞವಲ್ಕ್ಯನು ಹೇಳಿದ.

**ಮಂ.ಶ್ಲೋ॥ ಸಾ ಹೋವಾಚ ನಮಸ್ತೇಽಸ್ತು ಯಾಜ್ಞವಲ್ಕ್ಯ ಯೋ ಮ ಏತಂ ವ್ಯವೋಚೋಽಪರಸ್ಮೈ ಧಾರಯಸ್ವೇತಿ ಪೃಚ್ಛ ಗಾರ್ಗೀತಿ (5)**

ತಾ : ಓ ಯಾಜ್ಞವಲ್ಕ್ಯಾ! ನೀನು ನಾನು ಕೇಳಿದ ಪ್ರಶ್ನೆಗೆ ಚೆನ್ನಾಗಿ ಆಲೋಚಿಸಿ ಉತ್ತರವನ್ನಿತ್ತೆ. ಆದ್ದರಿಂದ ನಿನಗೆ ನಮಸ್ಕರಿಸುತ್ತಿದ್ದೇನೆ. ಇನ್ನೊಂದು ಪ್ರಶ್ನೆ ಕೇಳಲು ಅಂಗೀಕರಿಸು ಎಂದಳು ಗಾರ್ಗೀ. ಓ ಗಾರ್ಗೀ! ನೀನು ಪ್ರಶ್ನೆಯನ್ನು ಕೇಳು ಎಂದು ಯಾಜ್ಞವಲ್ಕ್ಯನು ಹೇಳಿದ.

**ಮಂ.ಶ್ಲೋ॥ ಸಾ ಹೋವಾಚ ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ ಯದವಾಕ್ ಪೃಥಿವ್ಯಾ ಯದನ್ತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಗ್ಂ ಸ್ತದೋತಂ ಚ ಪ್ರೋತಂ ಚೇತಿ (6)**

ತಾ : ಆಗ ಗಾರ್ಗಿಯು ಹೀಗೆ ಹೇಳಿದಳು:- "ಓ ಯಾಜ್ಞವಲ್ಕ್ಯಾ! ದ್ಯುಲೋಕಕ್ಕಿಂತ ಮೇಲೆಯೂ ಭೂಮಿಗಿಂತ ಕೆಳಗಡೆಯೂ ಅಂಡ ಕಪಾಲಗಳ ಮಧ್ಯದಲ್ಲಿ, ಈ ಭೂಮಿ ಅಂತರಿಕ್ಷಗಳು, ಮತ್ತು ಭೂತ ವರ್ತಮಾನ ಭವಿಷ್ಯತ್ತುಗಳು ಯಾವುದೋ, ಆ ಸಮಸ್ತವನ್ನು ಯಾವ ಸೂತ್ರವೆಂದು ಹೇಳುತ್ತಿದ್ದಾರೋ, ಆ ಸೂತ್ರವು ಯಾವುದರಲ್ಲಿ ಓತಪ್ರೋತವಾಗಿದೆ? ಎಂದು ಮತ್ತೆ ಪ್ರಶ್ನಿಸಿದಳು.

**ಮಂ.ಶ್ಲೋ॥ ಸ ಹೋವಾಚ ಯದೂರ್ಧ್ವಂ ಗಾರ್ಗಿ ದಿವೋ ಯದವಾಕ್ ಪೃಥಿವ್ಯಾ ಯದನ್ತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚೇತಿ ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ (7)**

ತಾ : ಯಾಜ್ಞ:- ಓ ಗಾರ್ಗೀ! ಬ್ರಹ್ಮಾಂಡದ ಊರ್ಧ್ವಅಧೋಭಾಗಗಳಲ್ಲಿಯೂ, ಮಧ್ಯ ಭಾಗದಲ್ಲಿಯೂ, ಭೂತ ಭವಿಷ್ಯತ್ ವರ್ತಮಾನ ಕಾಲಗಳಲ್ಲಿ ಈ ಸೂತ್ರರೂಪವಾದ ಸಮಸ್ತವನ್ನು ಯಾವುದೆಂದು ಹೇಳುತ್ತಿರುವರೋ, ಆ ಸರ್ವವನ್ನೂ ಅವ್ಯಾಕೃತವಾದ ಆಕಾಶದಲ್ಲಿ ನೂಲುವ ಲಾಳಿಗಳಂತೆ ಕಲ್ಪಿಸಲ್ಪಟ್ಟಿದೆ. ಗಾರ್ಗಿ ಅವ್ಯಾಕೃತಾಕಾಶದ ಸ್ವರೂಪವು ಅವಾಚ್ಯವಾದುದರಿಂದ ಅವಾಚ್ಯವಾದುದನ್ನು ಹೇಳಿದ್ದಲ್ಲಿ, ಅಪ್ರತಿಪತ್ತಿ, ವಿಪ್ರತಿಪತ್ತಿಯೆನ್ನುವ ಎರಡು ದೋಷಗಳು

ಉಂಟಾಗುತ್ತದೆ. ಓ ಯಾಜ್ಞವಲ್ಕ್ಯ! ಆ ಅವ್ಯಾಕೃತವಾದ ಆಕಾಶವು ಯಾವುದರಲ್ಲಿ ನೂಲುವ ಲಾಳಗಳಂತೆ ಕಲ್ಪಿಸಲ್ಪಟ್ಟಿದೆ?"

**ಮಂ.ಶ್ಲೋ॥ ಸಹೋವಾಚೈತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತ್ಯಸ್ಥೂಲಮನಣ್ವಹ್ರಸ್ವಮದೀರ್ಘ -ಮಲೋಹಿತಮಸ್ನೇಹಾಮಚ್ಛಾಯಮತಮೋऽವಾಯ್ವನಾಕಾಶಮನಙ್ಗಮರಸಮಗನ್ಧ- ಮಚಕ್ಷುಷ್ಕಮಶ್ರೋತ್ರಮವಾಗಮನೋऽತೇಜಸ್ಕಮಪ್ರಾಣಮಮುಖಮಮಾತ್ರಮನನ್ತರ- ಮಬಾಹ್ಯಂ ಸ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ (8)**

ತಾ : ಯಾಜ್ಞವಲ್ಕ್ಯ: ಓ ಗಾರ್ಗಿ! ಬ್ರಹ್ಮಜ್ಞಾನಿಗಳು ಅದನ್ನು ಅಕ್ಷರದಲ್ಲಿದೆ ಎಂದು ಹೇಳುವರು. ನಾಶರಹಿತವಾದ ಅದರಲ್ಲಿ ಓತಪ್ರೋತವಾಗಿದೆಯೆಂದು ಹೇಳುವರು. ಅದು ಸ್ಥೂಲವಾಗಿಯೂ, ಸೂಕ್ಷ್ಮವಾಗಿಯೂ, ಅಣುವಾಗಿಯೂ ಕುಳ್ಳಾಗಿಯೂ, ಉದ್ದವಾಗಿಯೂ ಇರುವಂತಹದಲ್ಲ. ಅಲೋಹಿತ (ರಕ್ತವಿಲ್ಲದ್ದು) ಅಸ್ನೇಹವಾದುದು ಅಚ್ಛಾಯ (ಕೊಬ್ಬು ಇಲ್ಲದ್ದು) (ನೆರಳಿಲ್ಲದ್ದು), ಅತಮ (ತಮಸ್ಸು, ಅಜ್ಞಾನ, ಕತ್ತಲಿಲ್ಲದ್ದು), ಅವಾಯು (ಅದು ವಾಯುವಲ್ಲ), ಅನಾಕಾಶ (ಅದು ಆಕಾಶವಲ್ಲ), ಅಸಂಗ (ಸಂಗವಿಲ್ಲದ್ದು), ಅರಸ (ರಸವಿಲ್ಲದ್ದು), ಅಗಂಧ (ಗಂಧವಿಲ್ಲದ್ದು), ಅಚಕ್ಷು (ಕಣ್ಣುಗಳಿಲ್ಲದ್ದು), ಅಶ್ರೋತ್ರ (ಕಿವಿಗಳಿಲ್ಲದ್ದು), ಅವಾಕ್ಕು (ಮಾತುಗಳಿಲ್ಲದ್ದು), ಮನಸ್ಸು (ಮನಸ್ಸು ಇಲ್ಲದ್ದು), ಅತೇಜಸ್ಕವು (ತೇಜಸ್ಸು ಇಲ್ಲದ್ದು), ಅಪ್ರಾಣವು (ಪ್ರಾಣವಿಲ್ಲದ್ದು), ಅಮುಖ (ಬಾಯಿ ಇಲ್ಲದ್ದು), ಅಮಾತ್ರವು (ಪರಿಮಾಣವಿಲ್ಲದ್ದು), ಒಳಹೊರಗಿಲ್ಲದ್ದು ಇಲ್ಲದ್ದು; ಅದೇ ಇರುವುದು. ಅದು ಯಾವುದಕ್ಕೂ ಭೋಕ್ತವಲ್ಲ. ಯಾವುದಕ್ಕೂ ಭೋಜ್ಯವೂ ಅಲ್ಲ. ಅಕ್ಷರವೆನ್ನುವ ವ್ಯಾಪಕವಾದ ಸ್ವರೂಪವು. ಅಪೂರ್ವವಾದ ಆ ತತ್ತ್ವವನ್ನು ತಿಳಿದುಕೊಳ್ಳಬೇಕು.

**ಮಂ.ಶ್ಲೋ॥ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತಃ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾ ಪೃಥಿವ್ಯೌ ವಿಧೃತೇ ತಿಷ್ಠತಃ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠನ್ತ್ಯೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋऽನ್ಯಾ ನದ್ಯಃ ಸ್ಯನ್ದನ್ತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋऽನ್ಯಾ ಯಾಂ ಯಾಂ ಚ ದಿಶಮನ್ವೇ ತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಗ್ಂಸನ್ತಿ ಯಜಮಾನಂ ದೇವಾ ದರ್ವೀಂ ಪಿತರೋऽನ್ವಾಯತ್ತಾಃ (9)**

ತಾ : ಓ ಗಾರ್ಗಿ! ಈ ಅಕ್ಷರನ ಆಜ್ಞೆಯಿಂದ ಸೂರ್ಯಚಂದ್ರರು ಸಂಚರಿಸುತ್ತಿರುವರು. ಈ ಅಕ್ಷರದ ಆಜ್ಞೆಯಿಂದಲೇ ಭೂಮಂತರಿಕ್ಷಗಳೂ ಶಕ್ತಿಯುಳ್ಳದ್ದಾಗಿವೆ. ಓ ಗಾರ್ಗಿ ಈ ಅಕ್ಷರದ ಆಜ್ಞೆಯಲ್ಲಿ ನಿಮೇಷಗಳನ್ನು, ಮುಹೂರ್ತಗಳನ್ನು, ಪಕ್ಷಗಳನ್ನು, ಅಹೋರಾತ್ರಿಗಳನ್ನು, ಮಾಸಗಳನ್ನು, ಋತು-ಗಳನ್ನು, ಸಂವತ್ಸರಗಳನ್ನು ಎಲ್ಲವನ್ನೂ ಧರಿಸಿರುವಂತಹುವಾಗಿರುವ ಶಕ್ತಿಯಾಗಿ ತುಂಬಿಕೊಂಡಿದೆ. ಓ ಗಾರ್ಗಿ! ಈ ಅಕ್ಷರದ ಶಾಸನದಿಂದ ಹಿಮವಂತ ಮೊದಲಾದ ಪರ್ವತಗಳಿಂದ, ಗಂಗಾದಿ ನದಿಗಳು, ಪ್ರಾಙ್ಮುಖಗಳಾಗಿಯೂ, ಇತರ ನದಿಗಳಾದ ಸಿಂಧು ಮುಂತಾದ ನದಿಗಳು ಪಶ್ಚಿಮಾಭಿ-

ಮುಖವಾಗಿಯೂ ಪ್ರವಹಿಸುತ್ತಿವೆ. ಓ ಗಾರ್ಗಿ! ಈ ಅಕ್ಷರದ ಆಜ್ಞೆಯಿಂದ ದಾನಾರ್ಹವಾದ ಚಿನ್ನ ಮೊದಲಾದವುಗಳನ್ನು ಮನುಷ್ಯರು ಶ್ಲಾಘಿಸುತ್ತಿದ್ದಾರೆ. ದೇವತೆಗಳು ಯಜಮಾನನನ್ನು, ಪಿತೃ ದೇವತೆಗಳು ದರ್ವೀ ಹೋಮವನ್ನು ಅನುಸರಿಸಿ ಪ್ರವರ್ತಿಸುತ್ತಿದ್ದಾರೆ (ಎಲ್ಲರೂ ಅಕ್ಷರನ ಪ್ರಶಾಸನವನ್ನು ಅನುಸರಿಸುತ್ತಿದ್ದಾರೆ.)

**ಮಂ.ಶ್ಲೋ॥ ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಽಸ್ಮಿಲ್ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷ ಸಹಸ್ರಾಣ್ಯನ್ತವದೇವಾಸ್ಯ ತದ್ಭವತಿ। ಯೋವಾ ಏತದಕ್ಷರಂ ಗಾರ್ಗ್ಯವಿದಿತ್ವಾ -ಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣೋಽಥ ಯ ಏತದಕ್ಷರಂ ಗಾರ್ಗಿ ವಿದಿತ್ವಾಽಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ (10)**

ತಾ : ಓ ಗಾರ್ಗಿ! ಯಾರು ಈ ಅಕ್ಷರಪರ ಬ್ರಹ್ಮವನ್ನು ತಿಳಿದುಕೊಂಡು ಯಾಗ (ಹೋಮ)ವನ್ನು ಮಾಡುವರೋ, ತಪಸ್ಸನ್ನು ಬಹಳ ವರ್ಷಗಳ ಕಾಲ ಮಾಡುತ್ತಿರುವರೋ, ಅಂತಹವನ ಈ ಕರ್ಮಫಲವೆಲ್ಲವೂ ಅಂತ್ಯ ಉಳ್ಳದ್ದೇ ಆಗಿದೆ. ಯಾರು ಈ ಅಕ್ಷರ ಪರಬ್ರಹ್ಮವನ್ನು ತಿಳಿದುಕೊಳ್ಳದೆ ಈ ಲೋಕದಿಂದ ಮರಣವನ್ನು ಹೊಂದುವನೋ, ಅವನು ಜನನ ಮರಣ ರೂಪ ಸಂಸಾರಕಷ್ಟವನ್ನು ನಿರಂತರವಾಗಿ ಹೊಂದುತ್ತಾನೆ. ಯಾರು ಈ ಅಕ್ಷರ ಪರಬ್ರಹ್ಮವನ್ನು ತಿಳಿದುಕೊಂಡು ಈ ಲೋಕದಿಂದ ಮರಣವನ್ನು ಹೊಂದುವರೋ, ಅವರು ಆ ಅಕ್ಷರ ಪರಬ್ರಹ್ಮ ಸ್ವರೂಪನೇ ಆಗುವರು.

**ಮಂ.ಶ್ಲೋ॥ ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟ್ರಶ್ರುತಗ್ಂ ಶ್ರೋತ್ರಮತಂ ಮನ್ತ್ರವಿಜ್ಞಾತಂ ವಿಜ್ಞಾತೃನಾನ್ಯ -ದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃನಾನ್ಯದತೋಽಸ್ತಿ ಮನ್ತೃನಾನ್ಯದತೋಽಸ್ತಿ ವಿಜ್ಞಾತ್ರೇತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ (11)**

ತಾ : ಓ ಗಾರ್ಗಿ! ಈ ಅಕ್ಷರ (ಆತ್ಮ)ವು ತಾನು ಯಾರಿಗೂ ಕಾಣಿಸದೆ ಎಲ್ಲರನ್ನೂ ನೋಡುವುದು. ಕೇಳಿಸಲಾರದಂತಿದ್ದು ಕಿವಿಗೊಟ್ಟು ಕೇಳುವುದು. ಆಲೋಚನಾರ್ಹವಾಗದಿದ್ದರೂ ವಿಚಾರಾರ್ಹ-ವಾಗಿರುವುದು. ತಿಳಿಯಲಾಗುವುದಿಲ್ಲ, ತಿಳಿದುಕೊಳ್ಳುತ್ತದೆ. ಇದು ಅಲ್ಲದೆ ಮತ್ತ್ಯಾರೂ ನೋಡುವವರಿಲ್ಲ. ಈ ಸತ್ಯ ವಸ್ತುವಲ್ಲದೆ ಮತ್ತ್ಯಾರೂ ಕೇಳುವವರಿಲ್ಲ ಇದನ್ನು ಬಿಟ್ಟು ನೋಡುವವರಿಲ್ಲ. ಈ ಸತ್ಯವಸ್ತುವಲ್ಲದೆ ಮತ್ತ್ಯಾರೂ ಕೇಳುವವರಿಲ್ಲ. ಇದನ್ನು ಬಿಟ್ಟು ಆಲೋಚಿಸುವವರು ಇಲ್ಲ ಮತ್ತು ತಿಳಿಯುವವರೂ ಇಲ್ಲ ಓ ಗಾರ್ಗಿ! ಈ ಅಕ್ಷರದಲ್ಲೇ ಆಕಾಶವು ಓತಪ್ರೋತವಾಗಿ ಕಲ್ಪಿಸಲ್ಪಟ್ಟಿದೆ.

**ಮಂ.ಶ್ಲೋ॥ ಸಾ ಹೋವಾಚ ಬ್ರಾಹ್ಮಣಾ ಭಗವನ್ತಸ್ತದೇವ ಬಹುಮನ್ಯೇಧ್ವಂ ಯದಸ್ಮಾನ್ನಮಸ್ಕಾರೇಣ ಮುಚ್ಯೇಧ್ವಂ ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ಬ್ರಹ್ಮೋದ್ಯಂ ಜೇತೇತಿ ತತೋ ಹ ವಾಚಕ್ನವ್ಯುಪರರಾಮ (12)**

ತಾ : ಅನಂತರ ಗಾರ್ಗಿಯು, ಓ ಪೂಜ್ಯರಾದ ಬ್ರಾಹ್ಮಣರೇ! ಯಾಜ್ಞವಲ್ಕ್ಯ ಮಹಾಮುನಿಗೆ ವಂದನೆಯನ್ನು ಮಾಡಿ, ಅವರೊಂದಿಗೆ ವಾದವನ್ನು ಬೆಳಸದೆ ವಿರಮಿಸುವುದು ಒಳ್ಳೆಯದು. ನಿಮ್ಮಲ್ಲಿ ಯಾರೂ ಇವರನ್ನು ಬ್ರಹ್ಮವಿದ್ಯಾ ಚರ್ಚೆಯಲ್ಲಿ ಜಯಿಸಲಾರಿರೆಂದು ಹೇಳಿ, ವಾಚಕ್ನವಿಯಾದ ಗಾರ್ಗಿ ಸಮಾಧಾನ ಹೊಂದಿ ಸುಮ್ಮನಾದಳು.

# ಪಂಚಮಾಧ್ಯಾಯ - ನವಮ ಬ್ರಾಹ್ಮಣಂ

ಮಂ.ಶ್ಲೋ॥ ಅಥ ಹೈನಂ ವಿದಗ್ಧಃ ಶೌಕಲ್ಯಃ ಪಪ್ರಚ್ಛ ಕತಿ ದೇವಾ ಯಾಜ್ಞವಲ್ಕ್ಯೇತಿ ಸಹೈತಯ್ಯೈವ ನಿವಿದಾ ಪ್ರತಿಪೇದೇ, ಯಾವನ್ತೋ ವೈಶ್ವದೇವಸ್ಯ ನಿವಿದ್ಯುಚ್ಯನ್ತೇ, ತ್ರಯಶ್ಚ ತ್ರೀಚ ಶತಾತ್ರಯಶ್ಚ ತ್ರೀಚ ಸಹಸ್ರೇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯಸ್ತ್ರಿಗ್ಂಶದಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ಷಡಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ದ್ವಾವಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇ-ತ್ಯಧ್ಯರ್ಧ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತೀತ್ಯೇಕ ಇತ್ಯೋಮಿತಿ ಹೋವಾಚ ಕತಮೇತೇ ತ್ರಯಶ್ಚ ತ್ರೀಚ ಶತಾತ್ರಯಚ್ಛ ತ್ರೀಚ ಸಹಸ್ರೇತಿ (1)

ತಾ : ಶಾಕಲ್ಯ:- ಓ ಯಾಜ್ಞವಲ್ಕ್ಯಾ! ದೇವತೆಗಳು ಎಷ್ಟು ಮಂದಿ? ಯಾಜ್ಞವಲ್ಕ್ಯ:-ಓ ಶಾಕಲ್ಯನೆ! ವೈಶ್ವದೇವ ಶಸ್ತ್ರದ ದೇವತಾ ಸಂಖ್ಯೆಯನ್ನು ತಿಳಿಸುವ ಮಂತ್ರ(ದಲ್ಲಿ) ದೊಂದಿಗೆ ಎಷ್ಟು ಸಂಖ್ಯೆಯನ್ನು ತಿಳಿಸುವಂತಹ ನಿವಿತ್ತವೆಂಬ ಮಂತ್ರ(ದಲ್ಲಿ)ದೊಂದಿಗೆ ಎಷ್ಟು ಸಂಖ್ಯೆಯು ದೇವತೆಗಳು ಏರ್ಪಡುತ್ತಾರೋ, ಅಷ್ಟು ದೇವತೆಗಳು ಇರುವರು. ಶಾಕಲ್ಯ:- ಆ ನಿವಿತ್ತವೆನ್ನುವ ಮಂತ್ರದಲ್ಲಿ ಎಷ್ಟು ಸಂಖ್ಯೆ ಹೇಳಲಾಗುತ್ತಿದೆ? ಯಾಜ್ಞವಲ್ಕ್ಯ: "ಮುನ್ನೂರ ಮೂರು, ಮೂರು ಸಾವಿರದ ಮೂರು, (303+3003=3306 ಮಂದಿ ದೇವತೆಗಳು) ಎಂದು ಹೇಳುತ್ತಿದೆ. ಶಾಕಲ್ಯ:- ಓ ಯಾಜ್ಞವಲ್ಕ್ಯಾ! ಆ ದೇವತೆಗಳೆಷ್ಟು ಮಂದಿ? ಯಾಜ್ಞ:- ಮೂವತ್ತ ಮೂರು. ಶಾಕಲ್ಯ:- ಅವರು ಮತ್ತೆ ಎಷ್ಟು ದೇವತೆಗಳು? (ಗಳಾಗುತ್ತಾರೆ) ಯಾಜ್ಞವಲ್ಕ್ಯಾ:- ಆರು ಮಂದಿ. ಶಾಕಲ್ಯ:- ಮತ್ತೆ ಎಷ್ಟು ದೇವತೆಗಳು? ಯಾಜ್ಞ :- ಮೂವರು. ಶಾಕಲ್ಯ:- ಮತ್ತೆ ಎಷ್ಟು ದೇವತೆಗಳು? ಯಾಜ್ಞವಲ್ಕ್ಯಾ:- ಇಬ್ಬರು. ಶಾಕಲ್ಯ:- ಮತ್ತೆ ಎಷ್ಟು ದೇವತೆಗಳು? ಯಾಜ್ಞ :- ಒಂದೂವರೆ ದೈವ. ಶಾಕಲ್ಯ:- ಮತ್ತೆ ದೇವತೆಗಳೆಷ್ಟು ಮಂದಿ? ಯಾಜ್ಞವಲ್ಕ್ಯಾ:- ಒಬ್ಬನೇ. ಶಾಕಲ್ಯನು ಸರಿಯೆಂದು ಮುನ್ನೂರ ಮೂರು, ಮೂರು ಸಾವಿರದ ಮೂರು, ಮೂರು ಸಂಖ್ಯೆಯುಳ್ಳ ಆ ದೇವತೆಗಳು ಯಾರೆಂದು ಕೇಳಿದ.

ಮಂ.ಶ್ಲೋ॥ ಸ ಹೋವಾಚ ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಗ್ಂಶತ್ತ್ವೇವ ದೇವಾ ಇತಿ ಕತಮೇ ತೇ ತ್ರಯಸ್ತ್ರಿಂಗ್ಂಶದಿತ್ಯಷ್ಟೌ ವಸವ ಏಕಾದಶರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಗ್ಂಶ-ದಿನ್ದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಗ್ಂಶಾವಿತಿ (2)

ತಾ : ಯಾಜ್ಞವಲ್ಕ್ಯ:- ಆ ಮೂವತ್ತು ಮೂರು ದೇವತೆಗಳ ವಿಭೂತಿ (ಮಹಿಮೆ)ಗಳೇ ಈ ಹಿಂದೆ ಹೇಳಲಾದ ಮುನ್ನೂರ ಮೂವರು ದೇವತೆಗಳು. ಪರಮಾರ್ಥವಾಗಿ ಮೂವತ್ತು ಮೂರು ದೇವತೆಗಳೇ, ಶಾಕಲ್ಯ:- ಆ ಮೂವತ್ತು ಮೂರು ದೇವತೆಗಳು ಯಾರು? ಯಾಜ್ಞ : ಎಂಟು ಮಂದಿ ವಸುಗಳು, ಹನ್ನೊಂದು ಮಂದಿ ರುದ್ರರು, ಹನ್ನೆರಡು ಮಂದಿ ಆದಿತ್ಯರು, ಇಂದ್ರ, ಬ್ರಹ್ಮ ಒಟ್ಟು ಮೂವತ್ತ ಮೂರು.

**ಮಂ.ಶ್ಲೋ॥ ಕತಮೇ ವಸವ ಇತ್ಯಗ್ನಿಶ್ಚ ಪೃಥಿವೀಚ ವಾಯುಶ್ಚಾನ್ತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚ ಚನ್ದ್ರಮಾಶ್ಚ ನಕ್ಷತ್ರಾಣಿಚೈತೇ ವಸವ ಏತೇಷು ಹೀದಂ ವಸು ಸರ್ವ್ಗಂ ಹಿತಮಿತಿ ತಸ್ಮಾದ್ವಸವ ಇತಿ (3)**

ತಾ : ಶಾಕಲ್ಯ: ಅಷ್ಟವಸುಗಳು ಯಾರು? ಯಾಜ್ಞ: ಅಗ್ನಿ, ಪೃಥಿವಿ, ವಾಯು, ಅಂತರಿಕ್ಷ, ಆದಿತ್ಯ, ದ್ಯುಲೋಕ, ಚಂದ್ರ, ನಕ್ಷತ್ರಗಳು, ಸರ್ವವೂ ಈ ವಸುಗಳಲ್ಲಿ ಅಡಕವಾಗಿದೆ. ಅದರಿಂದ ಅವರಿಗೆ ವಸುಗಳೆಂದು ನಾಮಧೇಯ.

**ಮಂ.ಶ್ಲೋ॥ ಕತಮೇ ರುದ್ರಾ ಇತಿ ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಾಸ್ತೇ ಯದಾಸ್ಮಾಚ್ಛರೀರಾನ್ಮರ್ತ್ಯಾ ದುತ್ಕ್ರಾಮನ್ತ್ಯಥ ರೋದಯನ್ತಿ ತದ್ಯದ್ರೋದಯನ್ತಿ ತಸ್ಮಾದ್ರುದ್ರಾ ಇತಿ (4)**

ತಾ : ಶಾಕಲ್ಯ: ಏಕಾದಶರುದ್ರರೆಂದರೆ ಯಾರು? ಯಾಜ್ಞವಲ್ಕ್ಯ: ಪುರುಷನಲ್ಲಿರುವ ಪ್ರಾಣಗಳು, ಮನಸ್ಸು ಮತ್ತು ಜೀವಾತ್ಮ ಇವೆಲ್ಲವೂ ಸೇರಿ ಒಂದು. ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು ಒಟ್ಟು ಈ ಹನ್ನೊಂದು ಮಂದಿ ರುದ್ರರು. ಆತ್ಮನೇ ಹನ್ನೊಂದನೆಯವನು. ಇವು ಈ ಮರ್ತ್ಯ ಶರೀರವನ್ನು ಬಿಟ್ಟು ಹೋಗುವುದಿಲ್ಲವೆಂದು ಹೇಳಲು ಮಾನವನು ದುಃಖಿತನಾಗುವಂತೆ ಮಾಡುವುವು. ಹೀಗೆ ಅಳುವಂತೆ ಮಾಡುವುದರಿಂದಲೇ 'ರೋದಯಂತಿ' ರುದ್ರರೆಂದು ಇವಕ್ಕೆ ವ್ಯಾಪಕ ನಾಮಗಳು.

**ಮಂ.ಶ್ಲೋ॥ ಕತಮ ಆದಿತ್ಯಾ ಇತಿ ದ್ವಾದಶ ವೈ ಮಾಸಾಃ ಸಂವತ್ಸರಸ್ಯೈತ ಆದಿತ್ಯಾ ಏತೇ ಹೀದಗ್ಂ ಸರ್ವಮಾದದಾನಾಯನ್ತಿತೇ ಯದಿದಗ್ಂ ಸರ್ವಮಾದದಾನಾಯನ್ತಿ ತಸ್ಮಾದಾದಿತ್ಯಾ ಇತಿ(5)**

ತಾ : ಶಾಕಲ್ಯ: ದ್ವಾದಶಾದಿತ್ಯರ್ಯಾರು? ಯಾಜ್ಞವಲ್ಕ್ಯ: ಸಂವತ್ಸರದಲ್ಲಿನ ಹನ್ನೆರಡು ತಿಂಗಳುಗಳು, ಆದಿತ್ಯ ದೇವತೆಗಳು ಇವರು ಆಯಾ ಸಮಯದಲ್ಲಿ ಪರಿವರ್ತನೆ ಹೊಂದುತ್ತ ಜೀವಿಗಳ ಆಯಸ್ಸನ್ನು ಕರ್ಮಫಲವನ್ನು ಹರಣ ಮಾಡುವುದರಿಂದ "ಆದದಾನಃ" ಆದಿತ್ಯರೆಂದು ಕರೆಯುತ್ತಾರೆ.

**ಮಂ.ಶ್ಲೋ॥ ಕತಮ ಇನ್ದ್ರಃ ಕತಮಃ ಪ್ರಜಾಪತಿರಿತಿ ಸ್ತನಯಿತ್ನುರೇವೇನ್ದ್ರೋ ಯಜ್ಞಃ ಪ್ರಜಾಪತಿರಿತಿ ಕತಮಸ್ತ್ಸನಯಿತ್ನುರಿತ್ಯಶನಿರಿತಿ ಕತಮೋ ಯಜ್ಞ ಇತಿ ಪಶವ ಇತಿ (6)**

ತಾ : ಶಾಕಲ್ಯ:- ಓ ಯಾಜ್ಞವಲ್ಕ್ಯ! ಇಂದ್ರ ಪ್ರಜಾಪತಿಗಳು ಯಾರು? ಯಾಜ್ಞ:-ಸ್ತನಯಿತ್ನುವೇ ಇಂದ್ರ. ಯಜ್ಞವೇ ಪ್ರಜಾಪತಿ ಶಾಕಲ್ಯ:- ಸ್ತನಯಿತ್ನು, ಯಜ್ಞವೆಂದರೆ ಏನು? ಯಾಜ್ಞವಲ್ಕ್ಯ: ವಜ್ರವೇ ಸ್ತನಯಿತ್ನು, ಪಶುವೇ ಯಜ್ಞ.

**ಮಂ.ಶ್ಲೋ॥ ಕತಮೇ ಷಡಿತ್ಯಗ್ನಿಶ್ಚ ಪೃಥಿವೀಚ ವಾಯುಶ್ಚಾನ್ತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚೈತೇ ಷಡೇತೇ ಹೀದಗ್ಂ ಸರ್ವ್ಗಂ ಷಡಿತಿ (7)**

ತಾ: ಶಾಕಲ್ಯ: ಓ ಯಾಜ್ಞವಲ್ಕ್ಯ! ಆರು ಮಂದಿ ದೇವತೆಗಳು ಯಾರು? ಯಾಜ್ಞವಲ್ಕ್ಯ: ಶಾಕಲ್ಯನೇ! ಅಗ್ನಿ, ಭೂಮಿ, ವಾಯು, ಅಂತರಿಕ್ಷ, ಸೂರ್ಯ, ದ್ಯುಲೋಕ ಇವರೇ ಆರು ದೇವತೆಗಳು. ಇದುವರೆಗೂ ಹೇಳಿದ ಮೂವತ್ತು ಮೂರು ಈ ಸಮಸ್ತವು ಈ ಆರು ಮಂದಿಯೇ ಆಗುವರು.

**ಮಂ.ಶ್ಲೋ॥ ಕತಮೇತೇ ತ್ರಯೋ ದೇವಾ ಇತೀ ಮ ಏವ ತ್ರಯೋ ಲೋಕಾ ಏಷು ಹೀಮೇ ಸರ್ವೇ ದೇವಾ ಇತಿ ಕತಮೌ ತೌ ದ್ವೌ ದೇವಾವಿತ್ಯನ್ನಂ ಚೈವ ಪ್ರಾಣಶ್ಚೇತಿ ಕತಮೋಽಧ್ಯರ್ಧ ಇತಿ ಯೋಽಯಂ ಪವತ ಇತಿ (8)**

ತಾ : ಶಾಕಲ್ಯ: ಆ ಪೂರ್ವೋಕ್ತವಾದ ಮೂವರು ದೇವತೆಗಳು ಯಾರು? ಯಾಜ್ಞವಲ್ಕ್ಯ: ಈ ಮೂರು ಲೋಕಗಳೇ ಮೂವರು ದೇವತೆಗಳು. ಸರ್ವದೇವತೆಗಳು ಇವರಲ್ಲಿ ಅಂತರ್ಭಾವವನ್ನು ಹೊಂದಿರುವರು. ಶಾಕಲ್ಯಾ: ಪೂರ್ವೋಕ್ತವಾದ ಇಬ್ಬರು ದೇವತೆಗಳು ಯಾರು? ಯಾಜ್ಞವಲ್ಕ್ಯ: ಅನ್ನ ಮತ್ತು ಪ್ರಾಣ. ಶಾಕಲ್ಯ: ಅರ್ಧ ಹೆಚ್ಚಾಗಿರುವ ಒಂದು ದೈವವು ಯಾರು? ಯಾಜ್ಞವಲ್ಕ್ಯಾ: ಬೀಸುತ್ತಿರುವ ಗಾಳಿ.

**ಮಂ.ಶ್ಲೋ॥ ತದಾಹುರ್ಯದಯಮೇಕ ಇವೈವ ಪವತೇಽಥ ಕಥಮಧ್ಯರ್ಧ ಇತಿ ಯದಸ್ಮಿನ್ನಿದಗ್ಂ ಸರ್ವ -ಮಧ್ಯಾರ್ಧ್ನೋತ್ತೇನಾಧ್ಯರ್ಧ ಇತಿ ಕತಮ ಏಕೋ ದೇವ ಇತಿ ಪ್ರಾಣ ಇತಿ ಸ ಬ್ರಹ್ಮ ತದಿತ್ಯಾಚಕ್ಷತೇ (9)**

ತಾ : ವಾಯುವು ಅಧ್ಯರ್ಥವೆಂದು ಹೇಳಿದ ವಿಷಯವಾಗಿ ಕೆಲವರು ಒಂದೇ ಆದ ವಾಯುವು (ಗಾಳಿ) ಬೀಸುತ್ತಿದೆ ಎನ್ನುವರು. ಒಂದೂವರೆ ಎಂದು ಏಕೆ ಹೇಳಬೇಕು ಅಂದರೆ, ಈ ವಾಯುವಿನಿಂದಲೇ ಸಮಸ್ತವೂ ಅಭಿವೃದ್ಧಿ ಹೊಂದುವುದರಿಂದ ಇದನ್ನು "ಅಧ್ಯರ್ಧ" ಒಂದೂವರೆ-ಯೆಂದು ಹೇಳುವರು. ಒಬ್ಬ ದೇವರು ಯಾರು? ಪ್ರಾಣ, ಈ ಪ್ರಾಣವೇ ಸರ್ವದೇವಾತಾತ್ಮಕವಾದ ಬ್ರಹ್ಮ. ಇದನ್ನು "ತ್ಯತ್" ಎನ್ನುವರು. ಆ ಪ್ರಾಣವೇ ಬೃಹತ್ಸ್ವರೂಪವಾದ ಆ ಪರಬ್ರಹ್ಮವೆಂದು ಹೇಳಲಾಗುತ್ತಿದೆ ಎಂದು ಯಾಜ್ಞವಲ್ಕ್ಯನು ಹೇಳಿದ. (ಪ್ರಾಣ, ಬ್ರಹ್ಮವು ಒಂದು ದೇವತೆ. ಈ ಪ್ರಾಣ ದೇವತೆಯ ರೂಪಗಳೇ 3306 ಮಂದಿ ದೇವತೆಗಳು.)

**ಮಂ.ಶ್ಲೋ॥ ಪೃಥಿವ್ಯೇವ ಯಸ್ಯಾಯತನಮಗ್ನಿರ್ಲೋಕೋ ಮನೋಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಗ್ಂ ಶಾರೀರಃ ಪುರುಷಃ ಸ ಏಷವದೈವ ಶಾಕಲ್ಯ ತಸ್ಯ ಕಾ ದೇವತೇತ್ಯಮೃತಮಿತಿ ಹೋವಾಚ (10)**

ತಾ : ಶಾಕಲ್ಯ: ಯಾಜ್ಞವಲ್ಕ್ಯಾ! ಭೂಮಿಯು ಯಾವ ಪುರುಷನ ಅಧಿಷ್ಠಾನವೋ, ಅಗ್ನಿಯು ಯಾರ ದರ್ಶನ ಶಕ್ತಿಯೋ, ಮನಸ್ಸು ಯಾರ ಜ್ಯೋತಿಯೋ ಇಂತಹ ಪುರುಷನನ್ನು ಯಾರು ತಿಳಿದಿರುವರೋ, ಆತ ಸರ್ವ ವಸ್ತುಗಳ ಅಧಿಷ್ಠಾನವಾದ ಆತ್ಮವನ್ನು ತಿಳಿದುಕೊಳ್ಳುವನು. ಆ ಪುರುಷನನ್ನು ನೀನು ಬಲ್ಲೆಯಾ? ಯಾಜ್ಞವಲ್ಕ್ಯ: ಸರ್ವವಸ್ತುಗಳು ಯಾವ ಆತ್ಮಾಧಿಷ್ಠಾನದಲ್ಲಿದೆ-ಯೆಂದು, ಯಾರನ್ನು ಕುರಿತು ನೀನು ಹೇಳಿದೆಯೋ, ಆ ಆತ್ಮವನ್ನು ನಾನು ತಿಳಿದಿದ್ದೇನೆ. ಈ ಶರೀರದಲ್ಲಿರುವ ಪುರುಷನೇ ಆತ. ಶಾಕಲ್ಯಾ: ಮತ್ತೇನಾದರೂ ಪ್ರಶ್ನೆ ಇದೆಯೆ? ಶಾಕಲ್ಯ:- ಆ ಪುರುಷನು ಯಾರು? ಯಾಜ್ಞವಲ್ಕ್ಯ: ಆತನು ಅಮೃತ ಸ್ವರೂಪನು.

**ಮಂ.ಶ್ಲೋ॥ ಕಾಮ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸವ್ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಕಾಮಮಯಃ ಪುರುಷಃ ಸ ಏಷವದ್ಯೈವ ಶಾಕಲ್ಯ ತಸ್ಯ ಕಾ ದೇವತೇತಿ ಸ್ತ್ರಿಯ ಇತಿ ಹೋವಾಚ (11)**

ತಾ : ಶಾಕಲ್ಯ:- ಯಾವ ದೇವನಿಗೆ ಕಾಮಶರೀರವು ಸ್ಥಾನವೋ, ಹೃದಯವು ಲೋಕವೋ, ಮನಸ್ಸೇ ಜ್ಯೋತಿಸ್ಸೋ, ಈ ಪುರುಷನನ್ನು ಯಾರು ದೇಹೇಂದ್ರಿಯಾದಿ ಸಮುದಾಯಕ್ಕೆ, ಸ್ಥಾನವಾಗಿ, ತಿಳಿದುಕೊಳ್ಳುವನೋ, ಆತನೇ ಆತ್ಮವನ್ನು ಅರಿತುಕೊಂಡವನು. ಓ ಯಾಜ್ಞವಲ್ಕ್ಯಾ, ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯವಾದ ಆ ಪುರುಷನ ಗುರುತನ್ನು ತಿಳಿದುಕೊಳ್ಳಬಲ್ಲೆಯಾ? ಯಾಜ್ಞವಲ್ಕ್ಯಾ: ಕಾಮರೂಪವಾದ ಈ ಪುರುಷನೇ ನಿನ್ನಿಂದ ಕೇಳಲ್ಪಟ್ಟ ಆ ಪುರುಷ. ಓ ಶಾಕಲ್ಯನೇ! ನೀನು ಇನ್ನೂ ವಿಶೇಷವಾಗಿ ಕೇಳಬೇಕೆಂದಿದ್ದರೆ ಕೇಳು. ಶಾಕಲ್ಯ: ಆ ಕಾಮರೂಪನಾದ ಪುರುಷನಿಗೆ ದೇವತೆ ಯಾರು? ಯಾಜ್ಞವಲ್ಕ್ಯ: ಸ್ತ್ರೀಯರು. (ಸ್ತ್ರೀಯರಿಂದಲೇ ಮೇಲೆ ತಿಳಿಸಿದಂತಹ ಕಾಮ ಉದ್ದೀಪನೆಯುಂಟಾಗುತ್ತದೆ.)

**ಮಂ.ಶ್ಲೋ॥ ರೂಪಾಣ್ಯೇವ ಯಸ್ಯಾಯತನಂ ಚಕ್ಷುರ್ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪಾರಾಯಣಗ್ಂ ಸ ವೈ ವೇದಿತಾ ಸ್ಯಾತ್ ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾ- ಸಾವಾದಿತ್ಯೇ ಪುರುಷಃ ಸ ಏಷವದ್ಯೈವ ಶಾಕಲ್ಯ ಕಾ ದೇವತೇತಿ ಸತ್ಯಮಿತಿ ಹೋವಾಚ (12)**

ತಾ : ಯಾಜ್ಞವಲ್ಕ್ಯ: ಓ ಶಾಕಲ್ಯನೇ ಯಾರಿಗೆ ರೂಪಗಳೇ ನಿವಾಸವಾಗಿ; ನೇತ್ರದಿಂದಲೇ ನೋಟ, ಮನಸ್ಸೆಂಬ, ಜ್ಯೋತಿಸ್ಸಿನಿಂದಲೇ ಸಂಕಲ್ಪ ವಿಕಲ್ಪಗಳು ಆಗುತ್ತಿವೆಯೋ, ಇಂತಹ ಪುರುಷನನ್ನು ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯವಾಗಿ ತಿಳಿದುಕೊಳ್ಳುವನೋ ಆತನೇ ಪಂಡಿತನಾಗುವನು. ಶಾಕಲ್ಯ: ಓ ಯಾಜ್ಞವಲ್ಕ್ಯಾ! ನೀನು ಅರಿತಿರುವಂತಹ ಆ ಪುರುಷನನ್ನು ನಾನು ಸಹ ಗುರುತಿಸಬಲ್ಲೆ. (ನನಗೂ ತಿಳಿದಿದೆ.) ಅವನನ್ನು ಕುರಿತು ಹೇಳು. ಯಾಜ್ಞವಲ್ಕ್ಯ: ಓ ಶಾಕಲ್ಯನೇ, ಈ ಸೂರ್ಯನಲ್ಲಿರುವ ಪುರುಷನೇ ಈ ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯವಾದ ಪುರುಷ. ಇನ್ನೂ ಏನಾದರೂ ಕೇಳಬೇಕೆಂದಿದ್ದರೆ ಕೇಳು! ಶಾಕಲ್ಯ: ಓ ಯಾಜ್ಞವಲ್ಕ್ಯಾ! ಆ ಪುರುಷನಿಗೆ ದೇವತೆ ಯಾರು? ಯಾಜ್ಞವಲ್ಕ್ಯ: ಸತ್ಯ (ಸತ್ಯವೆಂದರೆ ಪೃಥಿವಿ, ಅಪಃತೇಜಸ್ಸುಗಳು)

**ಮಂ.ಶ್ಲೋ॥ ಆಕಾಶ ಏವ ಯಸ್ಯಾಯತನಗ್ಂ ಶ್ರೋತ್ರಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸವ್ವೈ ವೇದಿತಾ ಸ್ಯಾತ್ ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಗ್ಂ ಶ್ರೌತ್ರಃ ಪ್ರಾತಿ ಶ್ರುತ್ಕಃ ಪುರುಷಃ ಸ ಏಷವದ್ಯೈವ ಶಾಕಲ್ಯ ತಸ್ಯ ಕಾ ದೇವತೇತಿ ದಿಶ ಇತಿ ಹೋವಾಚ (13)**

ತಾ : ಶಾಕಲ್ಯ: ಯಾಜ್ಞವಲ್ಕ್ಯಾ! ಆಕಾಶವು ಯಾವ ಪುರುಷನ ಅಧಿಷ್ಠಾನವೋ, ಶ್ರೋತ್ರವು ದರ್ಶನಸ್ಥಾನವೋ, ಮನಸ್ಸು ಜ್ಯೋತಿಯೋ, ಆ ಪುರುಷನನ್ನು ತಿಳಿದುಕೊಂಡವನು ಸರ್ವವಸ್ತುಗಳ ಅಧಿಷ್ಠಾನವಾದ ಆತ್ಮವನ್ನು ತಿಳಿದುಕೊಳ್ಳುವನು. ಯಾಜ್ಞವಲ್ಕ್ಯ! ಸರ್ವವಸ್ತುಗಳ ಆತ್ಮದ ಅಧಿಷ್ಠಾನ-ದಲ್ಲಿರುವೆನೆಂದು ಯಾವ ಆತ್ಮವನ್ನು ಕುರಿತು ನೀನು ಮಾತನಾಡಿದೆಯೋ, ಆ ಆತ್ಮವನ್ನು ನಾನು ಅರಿತಿದ್ದೇನೆ. ಶಬ್ದವಿಷಯಕವಾದ ಕಿವಿಗೆ ಆಶ್ರಯಸ್ಥಾನವಾದ ಪುರುಷನೇ ಆತ. ಶಾಕಲ್ಯ:- ಆ ಪುರುಷನ ದೇವತೆ ಯಾರು? ಯಾಜ್ಞವಲ್ಕ್ಯ: ದಿಕ್ಕುಗಳು (ದಿಕ್ಕುಗಳಿಂದ ಈ ದೇಹದಲ್ಲಿ ಪ್ರಾತಿಶ್ರುತ್ಕನು ಜನಿಸಿರುವನು.)

**ಮಂ.ಶ್ಲೋ॥ ತಮ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸವೈ ವೇದಿತಾಸ್ಯಾತ್ ಯಾಜ್ಞವಲ್ಕ್ಯವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಛಾಯಾಮಯಃ ಪುರುಷಃ ಸ ಏಷವದ್ಯೈವ ಶಾಕಲ್ಯ ತಸ್ಯ ಕಾ ದೇವತೇತಿ ಮೃತ್ಯುರಿತಿ ಹೋವಾಚ (14)**

ತಾ : ಶಾಕಲ್ಯ: ಓ ಯಾಜ್ಞವಲ್ಕ್ಯಾ! ತಮಸ್ಸು ಯಾವ ಪುರುಷನ ಅಧಿಷ್ಠಾನ? ಮತ್ತು ಯಾವ ಪುರುಷನ ಹೃದಯವು ದರ್ಶನ ಸ್ಥಾನವೋ, ಮನಸ್ಸು ಜ್ಯೋತಿಯೋ, ಆ ಪುರುಷನನ್ನು ತಿಳಿದವನು ಸರ್ವವಸ್ತುಗಳ ಅಧಿಷ್ಠಾನವಾದ ಪರಮಾತ್ಮನನ್ನು ತಿಳಿದವನಾಗಿರುತ್ತಾನೆ. ಓ ಯಾಜ್ಞವಲ್ಕ್ಯಾ! ನೀನು ತಿಳಿದಿರುವೆನೆನ್ನುವಂತಹ ಆ ಪುರುಷನನ್ನು ನಾನು ಕೂಡಾ ತಿಳಿದಿದ್ದೇನೆ. ಆ ಪುರುಷನನ್ನು ಕುರಿತು ಹೇಳುವಂತಹವನಾಗು. ಯಾಜ್ಞವಲ್ಕ್ಯಾ: ಓ ಶಾಕಲ್ಯನೇ! ಆ ಜ್ಞಾನ ಸ್ವರೂಪನಾದ ಈ ಪುರುಷನೇ ಆ ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯವಾದ ಆ ಪುರುಷನು. ಇನ್ನೂ ನೀನು ಕೇಳಬೇಕಾ-ಗಿರುವುದು ಏನಾದರೂ ಇದ್ದರೆ ಕೇಳು ಎನ್ನಲು, ಶಾಕಲ್ಯನು:- ಓ ಯಾಜ್ಞವಲ್ಕ್ಯಾ! ಆ ಅಜ್ಞಾನಮಯ ಪುರುಷನಿಗೆ ದೇವತೆ ಯಾರು? ಯಾಜ್ಞವಲ್ಕ್ಯ: ಮೃತ್ಯು (ಅವ್ಯಾಕೃತವಾದ ಈಶ್ವರನೇ ಮೃತ್ಯು.)

**ಮಂ.ಶ್ಲೋ॥ ರೂಪಾಣ್ಯೇವ ಯಸ್ಯಾಯತನಂ ಚಕ್ಷುರ್ಲೋಕೋ ಮನೋಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸವೈ ವೇದಿತಾ ಸ್ಯಾತ್ ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಮಾದರ್ಶೇ ಪುರುಷಃ ಸ ಏಷವದ್ಯೈವ ಶಾಕಲ್ಯ ತಸ್ಯ ಕಾ ದೇವತೇತ್ಯಸುರಿತಿ ಹೋವಾಚ (15)**

ತಾ : ಯಜ್ಞ: ಓ ಶಾಕಲ್ಯನೇ! ಯಾರಿಗೆ ರೂಪಗಳೇ ಸ್ಥಾನವಾಗಿಯೂ, ನೇತ್ರಗಳಿಂದ ನೋಡುವುದು, ಮನಸ್ಸಿನಿಂದ ತಿಳಿದುಕೊಳ್ಳಲು ಇವೆಯೋ, ಇಂತಹ ಪುರುಷನನ್ನು ಸಮಸ್ತವಾದ ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯವೆಂದು ತಿಳಿದುಕೊಂಡವನು ಜ್ಞಾನಿ. ಶಾಕಲ್ಯ: ಓ ಯಾಜ್ಞವಲ್ಕ್ಯಾ! ನೀನು ತಿಳಿದುಕೊಂಡಿರುವಂತಹ (ವೆಂದು ಹೇಳುತ್ತಿರುವ) ಆ ಪುರುಷನನ್ನು ನಾನು ತಿಳಿದಿದ್ದೇನೆ. ಅವನನ್ನು ಕುರಿತು ಹೇಳು. ಯಾಜ್ಞವಲ್ಕ್ಯಾ : ಓ ಶಾಕಲ್ಯನೇ! ಕನ್ನಡಿಯೊಳಗಿನ

ಪ್ರತಿಬಿಂಬದಂತೆ ಇರುವ ಆ ಪುರುಷನೇ ಈ ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯನಾದ ಪುರುಷ. ನೀನು ಇನ್ನೂ ಏನಾದರೂ ಕೇಳಬೇಕೆಂದಿದ್ದರೆ ಕೇಳು. ಶಾಕಲ್ಯ: ಓ ಯಾಜ್ಞವಲ್ಕ್ಯಾ! ಆ ಪ್ರತಿಬಿಂಬ ಸ್ವರೂಪವಾದ ಪುರುಷನಿಗೆ ದೇವತೆ ಯಾರು? ಯಾಜ್ಞವಲ್ಕ್ಯಾ:- ಆ ಪ್ರತಿಬಿಂಬ ರೂಪನಾದ ಪುರುಷನಿಗೆ ಪ್ರತಿಬಿಂಬ ಕಾರಣವಾದ ಪ್ರಾಣವೇ ದೇವತೆ.

**ಮಂ.ಶ್ಲೋ॥ ಆಪ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸವ್ವೈ ವೇದಿತಾ ಸ್ಯಾತ್ ಯಾಜ್ಞವಲ್ಕ್ಯ ವೇದವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯ-ಮಪ್ಸು ಪುರುಷಃ ಸ ಏಷವದೈವ ಶಾಕಲ್ಯ ತಸ್ಯ ಕಾ ದೇವತೇತಿ ವರುಣ ಇತಿ ಹೋವಾಚ (16)**

ತಾ : ಯಾಜ್ಞವಲ್ಕ್ಯ: ಓ ಶಾಕಲ್ಯನೇ! ಯಾರಿಗೆ ಜಲಗಳೇ ಸ್ಥಾನವೆಂದು, ಹೃದಯದಿಂದಲೇ ನೋಡಲು, ಮನಸ್ಸಿನಿಂದಲೇ ತಿಳಿದುಕೊಳ್ಳುವುದು, ಎಂಬುದಿದೆಯೋ, ಅಂತಹ ಪುರುಷನನ್ನು ಸಮಸ್ತವಾದ ದೇಹೇಂದ್ರಿಯಾದಿ ಸಮುದಾಯದಲ್ಲಿ ಆಶ್ರಯವೆಂದು ತಿಳಿದುಕೊಂಡವನು ಬ್ರಹ್ಮಜ್ಞಾನಿ. ಶಾಕಲ್ಯ: ಓ ಯಾಜ್ಞವಲ್ಕ್ಯಾ! ನೀನು ತಿಳಿದಿರುವೆನೆಂದು ಹೇಳುತ್ತಿರುವ ಆ ಪುರುಷನನ್ನು ಕುರಿತು ಹೇಳು. ನನಗೂ ತಿಳಿದಿದೆ. ಅವನನ್ನು ಕುರಿತು ಹೇಳುತ್ತೀಯಾ? ಯಾಜ್ಞವಲ್ಕ್ಯಾ ಓ ಶಾಕಲ್ಯನೇ! ಜಲಗಳಲ್ಲಿರುವ ಆ ಪುರುಷನೇ ದೇಹೇಂದ್ರಿಯಾದಿ ಸಮುದಾಯಕ್ಕೆ ಆಶ್ರಯನಾದ ಆ ಪುರುಷ. ಇನ್ನೂ ಏನಾದರೂ ನೀನು ಕೇಳತಕ್ಕದ್ದು ಇದ್ದರೆ ಕೇಳು. ಶಾಕಲ್ಯ: "ಓ ಯಾಜ್ಞವಲ್ಕ್ಯ! ಉದಕಗಳಲ್ಲಿರುವ ಆ ಪುರುಷನಿಗೆ ದೇವತೆ ಯಾರು? ಯಾಜ್ಞ: ಉದಕಗಳಲ್ಲಿರುವ ಈ ಪುರುಷನಿಗೆ ವರುಣನು ದೇವತೆ.

**ಮಂ.ಶ್ಲೋ॥ ರೇತ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾದ್ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಪುತ್ರಮಯಃ ಪುರುಷಃ ಸ ಏಷವದೈವ ಶಾಕಲ್ಯ ತಸ್ಯ ಕಾ ದೇವತೇತಿ ಪ್ರಜಾಪತಿರಿತಿ ಹೋವಾಚ (17)**

ತಾ : ಶಾಕಲ್ಯ: ಓ ಯಾಜ್ಞವಲ್ಕ್ಯಾ! ರೇತಸ್ಸು ಯಾವ ಪುರುಷನ ಅಧಿಷ್ಠಾನವೋ, ಹೃದಯವು ದರ್ಶನ ಸ್ಥಾನವೋ, ಮನಸ್ಸು ಜ್ಯೋತಿಯೋ, ಆ ಪುರುಷನನ್ನು ತಿಳಿದುಕೊಂಡವನು ಸೂರ್ಯಾಧಿಷ್ಠಾನವಾದ ಆತ್ಮವನ್ನು ಅರಿಯಬಲ್ಲ. ಯಾಜ್ಞ:- ಸರ್ವ ವಸ್ತುಗಳ ಅಧಿಸ್ಥಾನವೆಂದು ಯಾವ ಆತ್ಮವನ್ನು ಕುರಿತು ನೀನು ಹೇಳುತ್ತಿರುವೆಯೋ, ಆ ಆತ್ಮವನ್ನು ನಾನು ಬಲ್ಲೆ. ಪುತ್ರಮಯ ಪುರುಷನೇ ಆತ. ಶಾಕಲ್ಯನೇ! ಇನ್ನೇನಾದರೂ ಮಾತನಾಡಬೇಕೆಂದಿದ್ದರೆ ಮಾತನಾಡು? ಶಾಕಲ್ಯ: ಈ ಪುರುಷನ ದೇವತೆ ಯಾರು? ಯಾಜ್ಞವಲ್ಕ್ಯ: ಪ್ರಜಾಪತಿ (ತಂದೆಯ ರೂಪದಲ್ಲಿರುವ ಪ್ರಜಾಪತಿ).

**ಮಂ.ಶ್ಲೋ॥ ಶಾಕಲ್ಯೇತಿ ಹೋವಾಚ ಯಾಜ್ಞವಲ್ಕ್ಯಸ್ತ್ವಾಗ್‌ಂಸ್ವಿದಿಮೇ ಬ್ರಾಹ್ಮಣಾ ಅಙ್ಗಾರಾವಕ್ಷಯಣ -ಮಕ್ರತಾ ಇತಿ (18)**

ತಾ : ಯಾಜ್ಞ: ಓ ಶಾಕಲ್ಯನೇ! ಈ ಬ್ರಾಹ್ಮಣರು ನಿನ್ನನ್ನು ಇಕ್ಕಳದಂತೆ ಹಿಡಿದುಕೊಂಡು ಆಟವಾಡಿಸುತ್ತಿದ್ದಾರೆ. ನಿನ್ನ ಮೂಲಕ ನನ್ನನ್ನು ಸೋಲಿಸಲು ಪ್ರಯತ್ನಿಸುತ್ತಿದ್ದಾರೆ. ಪ್ರಶಾಂತ ಮನಸ್ಕನಾಗಿ ಶಾಂತಿ, ಸಮಾಧಾನ ಹೊಂದುವಂತಹವನಾಗು, ಶುಭವಾಗುತ್ತದೆ.

**ಮಂ.ಶ್ಲೋ॥ ಯಾಜ್ಞವಲ್ಕ್ಯೇತಿ ಹೋವಾಚ ಶಾಕಲ್ಯೋ ಯದಿದಂ ಕುರುಪಾಞ್ಚಾಲಾನಾಂ ಬ್ರಹ್ಮಣಾ ಸತ್ಯವಾದೀಃ ಕಿಂ ಬ್ರಹ್ಮ ವಿದ್ಯಾನಿತಿ ದಿಶೋ ವೇದ ಸದೇವಾಸ್ಸ ಪ್ರತಿಷ್ಠಾ ಇತಿ ಯದ್ದಿಶೋ ವೇತ್ಥ ಸ ದೇವಾಸ್ಸ ಪ್ರತಿಷ್ಠಾಃ (19)**

ತಾ : ಶಾಕಲ್ಯ:- ಯಾಜ್ಞವಲ್ಕ್ಯನೇ! ಕುರುಪಾಂಚಾಲ ದೇಶಗಳಲ್ಲಿನ ಬ್ರಾಹ್ಮಣರನ್ನು ಅತಿಕ್ರಮಿಸಿ ಬ್ರಹ್ಮವಾದವನ್ನು (ಮಾಡಿ) ಮಂಡಿಸಿದ್ದೀಯೆ. ನೀನು ಬ್ರಹ್ಮವೇತ್ತನೇ? ಯಾಜ್ಞವಲ್ಕ್ಯ : ನಾನು ದೇವತೆಗಳೊಂದಿಗೆ ಕೂಡಿಕೊಂಡಿರುವುದನ್ನು ಪ್ರತಿಷ್ಠೆಗಳೊಂದಿಗೆ ಕೂಡಿಕೊಂಡಿರುವಂತಹ ದಿಕ್ಕುಗಳನ್ನು (ಗುರುತು) ತಿಳಿದುಕೊಂಡಿದ್ದೇನೆ. ಶಾಕಲ್ಯ: "ಓ ಯಾಜ್ಞವಲ್ಕ್ಯಾ! ನೀನು ಅಧಿಷ್ಠಾನ ದೇವತೆಗಳೊಂದಿಗೆ, ಸ್ಥಿತಿಗಳೊಂದಿಗೆ ಕೂಡಿಕೊಂಡ ದಿಗ್ವಿಷಯಕವಾದ ಜ್ಞಾನವನ್ನು ತಿಳಿದು ಕೊಂಡಿರುವುದನ್ನೆಲ್ಲ ವಿವರವಾಗಿ ಹೇಳು. (ಉಪಾಸನಾ ವಿವರಗಳನ್ನು ಹೇಳಬೇಕೆಂದು ಕೇಳಿದ.)

**ಮಂ.ಶ್ಲೋ॥ ಕಿಂ ದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸೀತ್ಯಾದಿತ್ಯ ದೇವತ ಇತಿ ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ ಚಕ್ಷುಷೀತಿ ಕಸ್ಮಿನ್ನು ಚಕ್ಷುಃ ಪ್ರತಿಷ್ಠಿತಮಿತಿ ರೂಪೇಷ್ವಿತಿ ಚಕ್ಷುಷಾ ಹಿ ರೂಪಾಣಿ ಪಶ್ಯತಿ ಕಸ್ಮಿನ್ನು ರೂಪಾಣಿ ಪ್ರತಿಷ್ಠಿತಾನೀತಿ ಹೃದಯ ಇತಿ ಹೋವಾಚ ಯಸ್ಮಾದ್ಧೃದಯೇನ ಹಿ ರೂಪಾಣಿ ಸರ್ವೋ ಲೋಕೋ ಜಾನಾತಿ ತಸ್ಮಾದ್ಧೃದಯೇ ಹ್ಯೇವ ರೂಪಾಣಿ ಪ್ರತಿಷ್ಠಿತಾನಿ ಭವನ್ತೀತ್ಯೇವಮೇವೈತದ್ಯಾಜ್ಞವಲ್ಕ್ಯ (20)**

ತಾ : ಶಾಕಲ್ಯಾ: ಓ ಯಾಜ್ಞವಲ್ಕ್ಯಾ! ಈ ಪ್ರಾಗ್ದಿಕ್ಕಿನಲ್ಲಿ ನೀನು ಯಾವ ದೇವತಾ ಸ್ವರೂಪ-ನಾಗಿರುವೆ? ಯಾಜ್ಞವಲ್ಕ್ಯಾ:- ಸೂರ್ಯದೇವತಾ ಸ್ವರೂಪನು. ಶಾಕಲ್ಯ: ಈ ಸೂರ್ಯನೆಲ್ಲಿರುವನು? ಯಾಜ್ಞವಲ್ಕ್ಯ: ನೇತ್ರದಲ್ಲಿರುವನು. ಶಾಕಲ್ಯ: ಆ ನೇತ್ರವು ಎಲ್ಲಿರುವುದು. (ನೇತ್ರವನ್ನು ಎಲ್ಲಿಡಲಾಗಿದೆ)? ಯಾಜ್ಞವಲ್ಕ್ಯ: ನೇತ್ರವನ್ನು ಆಕಾರಗಳಲ್ಲಿ ಇಡಲಾಗಿದೆ. ಶಾಕಲ್ಯ: ಆ ರೂಪಗಳು ಯಾವುದರಲ್ಲಿ ಇಡಲಾಗಿದೆ? ಯಾಜ್ಞವಲ್ಕ್ಯ: ಹೃದಯದ ಮೂಲಕವೇ ಆಕಾರಗಳು ತಿಳಿಯಲ್ಪಡುತ್ತಿವೆ. ಆದ್ದರಿಂದ ಹೃದಯದಲ್ಲೇ ರೂಪಗಳನ್ನು ಇಡಲಾಗಿದೆ. ಶಾಕಲ್ಯ: ಓ ಯಾಜ್ಞವಲ್ಕ್ಯಾ! ನೀನು ಹೇಳಿದುದನ್ನು ನಾನು ಅಂಗೀಕರಿಸುತ್ತಿದ್ದೇನೆ.

**ಮಂ.ಶ್ಲೋ॥ ಕಿಂ ದೇವತೋಽಸ್ಯಾಂ ದಕ್ಷಿಣಾಯಾಂ ದಿಶ್ಯಸೀತಿ ಯಮ ದೇವತ ಇತಿ ಸ ಯಮಃ ಕಸ್ಮಿನ್ ಪ್ರತಿಷ್ಠಿತ ಇತಿ ಯಜ್ಞ ಇತಿ ಕಸ್ಮಿನ್ನು ಯಜ್ಞಃ ಪ್ರತಿಷ್ಠಿತ ಇತಿ ದಕ್ಷಿಣಾಯಾಮಿತಿ ಕಸ್ಮಿನ್ನು ದಕ್ಷಿಣಾ ಪ್ರತಿಷ್ಠಿತೇತಿ ಶ್ರದ್ಧಾಯಾಮಿತಿ ಯದಾ ಹ್ಯೇವ ಶ್ರದ್ಧತ್ತೇಽಥ ದಕ್ಷಿಣಾಂ**

**ದದಾತಿ ಶ್ರದ್ಧಾಯಾಗ್ಂ ಹ್ಯೇವ ದಕ್ಷಿಣಾ ಪ್ರತಿಷ್ಠಿತೇತಿ ಕಸ್ಮಿನ್ನು ಶ್ರದ್ಧಾ ಪ್ರತಿಷ್ಠಿತೇತಿ ಹೃದಯ ಇತಿ ಹೋವಾಚ ಹೃದಯೇನ ಹಿ ಶ್ರದ್ಧಾಂ ಜಾನಾತಿ ಹೃದಯೇ ಹ್ಯೇವ ಶ್ರದ್ಧಾ ಪ್ರತಿಷ್ಠಿತಾ ಭವತೀತ್ಯೇವಮೇವೈತದ್ಯಾಜ್ಞವಲ್ಕ್ಯ (21)**

ತಾ : ಶಾಕಲ್ಯ: ದಕ್ಷಿಣ ದಿಕ್ಕಿನಲ್ಲಿ ಯಾವ ದೇವತೆ ಇರುವುದು? ಯಾಜ್ಞವಲ್ಕ್ಯ: ಯಮ ದೇವತೆ. ಶಾಕಲ್ಯ: ಆ ಯಮನ ಪ್ರತಿಷ್ಠೆ ಯಾವುದು? ಯಾಜ್ಞವಲ್ಕ್ಯ: ಯಜ್ಞ ಶಾಕಲ್ಯ: ಯಜ್ಞವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞವಲ್ಕ್ಯ: ದಕ್ಷಿಣೆ ಕೊಡುವುದರಿಂದ. ಶಾಕಲ್ಯ: ದಕ್ಷಿಣೆಗಳು ಯಾವುದರಲ್ಲಿ ಪ್ರತಿಷ್ಠಿತವಾಗಿವೆ. ಯಾಜ್ಞವಲ್ಕ್ಯ: ಶ್ರದ್ಧೆಯಲ್ಲಿ. ಏಕೆಂದರೆ ಶ್ರದ್ಧೆಯಿರುವುದರಿಂದಲೇ ಮನುಷ್ಯ ದಕ್ಷಿಣೆ ಕೊಡುವನು. ಶ್ರದ್ಧೆಯಲ್ಲೇ ದಕ್ಷಿಣೆ ಪ್ರತಿಷ್ಠಿತವಾಗಿದೆ. ಶಾಕಲ್ಯ: ಶ್ರದ್ಧೆ ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞವಲ್ಕ್ಯ: ಹೃದಯದಲ್ಲಿ, ಹೃದಯದಿಂದಲೇ ಮನುಷ್ಯನು ಶ್ರದ್ಧೆಯನ್ನು ತಿಳಿದುಕೊಳ್ಳಬಲ್ಲ. ಆದ್ದರಿಂದ ಹೃದಯವೇ ಶ್ರದ್ಧೆಯ ಪ್ರತಿಷ್ಠಾ ಸ್ಥಾನವಾಗುತ್ತದೆ. ಶಾಕಲ್ಯ: ನಿನ್ನ ಉತ್ತರಗಳನ್ನು ಒಪ್ಪುತ್ತೇನೆ.

**ಮಂ.ಶ್ಲೋ॥ ಕಿಂ ದೇವತೋಽಸ್ಯಾಂ ಪ್ರತೀಚ್ಯಾಂ ದಿಶ್ಯಸೀತಿ ವರುಣದೇವತ ಇತಿ ಸ ವರುಣಃ ಕಸ್ಮಿನ್ ಪ್ರತಿಷ್ಠಿತ ಇತ್ಯಪ್ಸ್ವೀತಿ ಕಸ್ಮಿನ್ನ್ವಾಪಃ ಪ್ರತಿಷ್ಠಿತಾ ಇತಿ ರೇತಸೀತಿ ಕಸ್ಮಿನ್ನು ರೇತಃ ಪ್ರತಿಷ್ಠಿತಮಿತಿ ಹೃದಯ ಇತಿ ತಸ್ಮಾದಪಿ ಪ್ರತಿರೂಪ ಜಾತಮಾಹುಃ ಹೃದಯಾದಿವ ಸೃಪ್ತೋ ಹೃದಯಾದಿವ ನಿರ್ಮಿತ ಇತಿ ಹೃದಯೇ ಹ್ಯೇವ ರೇತಃ ಪ್ರತಿಷ್ಠಿತಂ ಭವತಿತ್ಯೇವಮೇವೈ ತದ್ಯಾಜ್ಞವಲ್ಕ್ಯ (22)**

ತಾ : ಶಾಕಲ್ಯ: ಓ ಯಾಜ್ಞವಲ್ಕ್ಯಾ! ನೀನು ಈ ಪಶ್ಚಿಮ ದಿಕ್ಕಿನಲ್ಲಿ ಯಾವ ದೇವತೆ ಸ್ವರೂಪನಾಗಿರುವೆ? ಯಾಜ್ಞವಲ್ಕ್ಯ! ನಾನು ವರುಣ ದೇವತಾ ಸ್ವರೂಪನು. ಶಾಕಲ್ಯ: ಆ ವರುಣನು ಎಲ್ಲಿರತಕ್ಕವನು? ಯಾಜ್ಞವಲ್ಕ್ಯ: ಉದಕಗಳಲ್ಲಿ ಇರತಕ್ಕವನು. ಶಾಕಲ್ಯ: ಆ ಉದಕಗಳು ಯಾವುದರಲ್ಲಿ ಇಡಲಾಗಿವೆ? ಯಾಜ್ಞವಲ್ಕ್ಯ: ರೇತಸ್ಸಿನಲ್ಲಿ ಇಡಲಾಗಿದೆ. ಶಾಕಲ್ಯ: ಆ ರೇತಸ್ಸು ಯಾವುದರಲ್ಲಿ ಇಡಲಾಗಿದೆ? ಯಾಜ್ಞವಲ್ಕ್ಯ: ಪುತ್ರನು ಹೃದಯದಿಂದಲೇ ಜಾರುತ್ತಾನೆಂದು ಹೇಳುವರು. ಲೋಕದ ಜನರು ಕುಮಾರನನ್ನು ತನಗೆ ಸಮಾನ ರೂಪನಾಗಿ ಹೇಳುವರು. ಆದ್ದರಿಂದ ರೇತಸ್ಸು ಹೃದಯದಲ್ಲಿಯೇ ಇಡಲಾಗಿದೆ. ಶಾಕಲ್ಯ: ಓ ಯಾಜ್ಞವಲ್ಕ್ಯಾ! ಈ ಪ್ರಕಾರವಾಗಿಯೇ ನೀನು ಹೇಳಿದುದನ್ನು ನಾನು ಅಂಗೀಕರಿಸುತ್ತಿದ್ದೇನೆ.

**ಮಂ.ಶ್ಲೋ॥ ಕಿಂ ದೇವತೋಽಸ್ಯಾಮುದೀಚ್ಯಾಂ ದಿಶ್ಯಸೀತಿ ಸೋಮ ದೇವತ ಇತಿ ಸ ಸೋಮಃ ಕಸ್ಮಿನ್ ಪ್ರತಿಷ್ಠಿತ ಇತಿ ದೀಕ್ಷಾಯಾಮಿತಿ ಕಸ್ಮಿನ್ನು ದೀಕ್ಷಾ ಪ್ರತಿಷ್ಠಿತೇತಿ ಸತ್ಯ ಇತಿ ತಸ್ಮಾದಪಿ ದೀಕ್ಷಿತಮಾಹುಃ ಸತ್ಯಂ ವದೇತಿ ಸತ್ಯೇ ಹ್ಯೇವದೀಕ್ಷಾ ಪ್ರತಿಷ್ಠಿತೇತಿ ಕಸ್ಮಿನ್ನು ಸತ್ಯಂ ಪ್ರತಿಷ್ಠಿತಮಿತಿ ಹೃದಯ ಇತಿ ಹೋವಾಚ ಹೃದಯೇನ ಹಿ ಸತ್ಯಂ ಜಾನಾತಿ ಹೃದಯೇ ಹ್ಯೇವ ಸತ್ಯಂ ಪ್ರತಿಷ್ಠಿತಂ ಭವತೀತ್ಯೇವಮೇವೈತದ್ಯಾಜ್ಞವಲ್ಕ್ಯ (23)**

ತಾ : ಶಾಕಲ್ಯ: ಉತ್ತರ ದಿಕ್ಕಿನಲ್ಲಿ ನೀನು ಯಾವ ದೇವತಾ ಸ್ವರೂಪನು? ಯಾಜ್ಞವಲ್ಕ್ಯ: ನಾನು ಸೋಮದೇವತಾ ಸ್ವರೂಪನು. ಶಾಕಲ್ಯ: ಸೋಮನೆನ್ನುವ ದೇವತೆ ಯಾವುದರಲ್ಲಿ ಪ್ರತಿಷ್ಠಿತ-ವಾಗಿರುವುದು? ಯಾಜ್ಞವಲ್ಕ್ಯ: ಯಜ್ಞದೀಕ್ಷೆಯಲ್ಲಿ. ಶಾಕಲ್ಯ: ಯಜ್ಞದೀಕ್ಷೆ ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞ: ಸತ್ಯದಲ್ಲಿ. ಶಾಕಲ್ಯ: ಆ ಸತ್ಯವು ಯಾವುದರಲ್ಲಿ ಸ್ಥಾಪಿತವಾಗಿದೆ? ಯಾಜ್ಞವಲ್ಕ್ಯ: ಸತ್ಯವು ಹೃದಯದಲ್ಲೇ ಇಡಲಾಗಿರುವಂತಹುದು. ಶಾಕಲ್ಯ: ಓ ಯಾಜ್ಞವಲ್ಕ್ಯ ಈ ಪ್ರಕಾರವಾಗಿರುವಂತಹ ಈ ಎಲ್ಲಾ ಮಾತುಗಳನ್ನು ನಾನು ಅಂಗೀಕರಿಸುತ್ತಿದ್ದೇನೆ.

**ಮಂ.ಶ್ಲೋ|| ಕಿಂ ದೇವತೋಽಸ್ಯಾಂ ಧ್ರುವಾಯಾಂ ದಿಶ್ಯಸೀತ್ಯಗ್ನಿ ದೇವತ ಇತಿ ಸೋಽಗ್ನಿಃ ಕಸ್ಮಿನ್ ಪ್ರತಿಷ್ಠಿತ ಇತಿ ವಾಚೀತಿ ಕಸ್ಮಿನ್ನು ವಾಕ್ ಪ್ರತಿಷ್ಠಿತೇತಿ ಹೃದಯ ಇತಿ ಕಸ್ಮಿನ್ನು ಹೃದಯಂ ಪ್ರತಿಷ್ಠಿತಮಿತಿ (24)**

ತಾ : ಶಾಕಲ್ಯ: ಈ ಧ್ರುವ ನಕ್ಷತ್ರಾದಿ ದಿಕ್ಕುಗಳಲ್ಲಿ ಯಾವ ದೇವತೆ ಇರುವುದು? ಯಾಜ್ಞವಲ್ಕ್ಯ: ಅಗ್ನಿದೇವತೆ, ಶಾಕಲ್ಯ: ಅಗ್ನಿದೇವತೆ ಯಾವುದರಿಂದ ಪ್ರತಿಷ್ಠಿತವಾಗಿರುತ್ತದೆ? ಯಾಜ್ಞ್ಯ:- ವಾಕ್ಕಿನಲ್ಲಿ, ಶಾಕಲ್ಯ:- ವಾಕ್ಕು ಯಾವುದರಲ್ಲಿ ಪ್ರತಿಷ್ಠಿತವಾಗಿದೆ. ಯಾಜ್ಞ್ಯ:- ಹೃದಯದಲ್ಲಿ. ಶಾಕಲ್ಯ:- ಹೃದಯವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ. (ಇಲ್ಲಿ ಹೃದಯವೆಂದರೆ ವಿಶ್ವಹೃದಯವೆಂದು ತಿಳಿಯಬೇಕು.)

**ಮಂ.ಶ್ಲೋ|| ಅಹಲ್ಲಿಕೇತಿ ಹೋವಾಚ ಯಾಜ್ಞವಲ್ಕ್ಯೋ ಯತ್ರೈತದನ್ಯತ್ರಾಸ್ಮನ್ಮನ್ಯಾಸ್ಯೆ ಯದ್ಧ್ಯೇತದನ್ಯ-ತ್ರಾಸ್ಮತ್ಸ್ಯಾಚ್ಛ್ವಾನೋ ವೈನದದ್ಯುರ್ವಯಾಗ್ಂಸಿ ವೈ ನದ್ವಿಮಥ್ನೀರನ್ನಿತಿ (೨೫)**

ತಾ : ಯಾಜ್ಞವಲ್ಕ್ಯ: ಓ ಅಹಲ್ಲಿಕಾ! ಅತಿ ಮೂಢನೇ! ಈ ಹೃದಯವು ನಮ್ಮನ್ನು ಬಿಟ್ಟು (ನನ್ನನ್ನು ಬಿಟ್ಟು) ಬೇರೊಂದರಲ್ಲಿ ಪ್ರತಿಷ್ಠಿತವಾಗಿದೆಯೆಂದು ನೀನು ತಿಳಿದುಕೊಂಡಲ್ಲಿ, ಎರಡನೆಯ ಸ್ಥಾನದಲ್ಲಿ ಪ್ರತಿಷ್ಠಿತವಾಗಿದೆಯಾದರೆ ಅದನ್ನು ನಾಯಿಗಳು ತಿಂದುಹಾಕುವುದು, ಪಕ್ಷಿಗಳು ಕೂಡಾ ತಿನ್ನುವವು, ಹೃದಯನಿನಗಿಂತ ಬೇರೆಯಾಗಿ ಪ್ರತಿಷ್ಠಿತವಾಗಿರುವುದಿಲ್ಲ. ಶರೀರದಲ್ಲಿ ಈ ಹೃದಯ-ದಲ್ಲಿರುವಂತಹುದು.

**ಮಂ.ಶ್ಲೋ|| ಕಸ್ಮಿನ್ನು ತ್ವಂ ಚಾತ್ಮಾವ ಪ್ರತಿಷ್ಠಿತೌ ಸ್ಥ ಇತಿ ಪ್ರಾಣ ಇತಿ ಕಸ್ಮಿನ್ನು ಪ್ರಾಣಃ ಪ್ರತಿಷ್ಠಿತ ಇತ್ಯಪಾನ ಇತಿ ಕಸ್ಮಿನ್ನ್ವಪಾನಃ ಪ್ರತಿಷ್ಠಿತ ಇತಿ ವ್ಯಾನ ಇತಿ ಕಸ್ಮಿನ್ನು ವ್ಯಾನಃ ಪ್ರತಿಷ್ಠಿತ ಇತ್ಯುದಾನ ಇತಿ ಕಸ್ಮಿನ್ನುದಾನಃ ಪ್ರತಿಷ್ಠಿತ ಇತಿ ಸಮಾನ ಇತಿ ಸ ಏಷ ನೇತಿ ನೇತಿತ್ಯಾ-ತ್ಮಾಽಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯ-ತೇಽಸಿತೋ ನ ವ್ಯಥತೇ ನರಿಷ್ಯತಿ। ಏತಾನ್ಯಷ್ಟಾವಾಯತನಾನ್ಯಷ್ಟೌ ಲೋಕಾ ಅಷ್ಟೌದೇವಾ ಅಷ್ಟಾಮರುಷಾಃ ಸ ಯಸ್ತಾನ್ಪುರುಷಾನ್ನಿರೂಹ್ಯಾ ಪ್ರತ್ಯೂಹ್ಯಾತ್ಯಕ್ರಾಮತ್ತನ್ತ್ವೌಪನಿಷದಂ ಮರುಷಂ ಪೃಚ್ಛಾಮಿ ತಂ ಚೇನ್ಮೇ ನ ವಿವಕ್ಷ್ಯಸಿ ಮೂರ್ಧಾತೇ ವಿಪತಿಷ್ಯತೀತಿ । ತಗ್ಂಹ ಸ ಮೇನೇ ಶಾಕಲ್ಯಸ್ತಸ್ಯ ಹ ಮೂರ್ಧಾ ವಿಪಪಾತಾಪಿ ಹಾಸ್ಯ ಪರೀಮೋಷಿಣೋಽ-ಸ್ಥಿನ್ಯಪಜಹ್ರುರನ್ಯನ್ಮನ್ಯಮಾನಾಃ (26)**

ತಾ : ಶಾಕಲ್ಯ: ನೀನು (ನಿನ್ನ ಶರೀರವು) ನಿನ್ನ ಹೃದಯದಲ್ಲಿ ಯಾವುದರಲ್ಲಿ ಪ್ರತಿಷ್ಠಿತವಾಗಿದೆ-ಯೆಂದು ಹೇಳುವೆ? ಯಾಜ್ಞವಲ್ಕ್ಯ: ಪ್ರಾಣವಾಯುವಿನಲ್ಲಿ. ಶಾಕಲ್ಯ: ಪ್ರಾಣವಾಯುವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞವಲ್ಕ್ಯ: ಅಪಾನವಾಯುವಿನಲ್ಲಿ; ಶಾಕಲ್ಯ: ಅಪಾನವಾಯುವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞವಲ್ಕ್ಯ: ವ್ಯಾನ ವಾಯುವಿನಲ್ಲಿ. ಶಾಕಲ್ಯ: ವ್ಯಾನವಾಯುವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞವಲ್ಕ್ಯ: ಉದಾನ ವಾಯುವಿನಲ್ಲಿ. ಶಾಕಲ್ಯ: ಉದಾನವಾಯುವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ? ಯಾಜ್ಞ: ಸಮಾನವಾಯು. ಶಾಕಲ್ಯಾ: ಶರೀರದಲ್ಲಿ ಹೃದಯವು ಪ್ರಾಣಾದಿ ವಾಯು ಎನ್ನುವ ಸಮೂಹದಿಂದ ಒಂದರಲ್ಲೊಂದು ಯಾವುದರಿಂದ ಇಡಲಾಗುತ್ತದೆ-ಯಿಂದಾಗಿ ವಿಜ್ಞಾನಕ್ಕಾಗಿ ಉಪಯುಕ್ತವಾಗಿ ಯಾರಿಂದ ಆಕಾಶಾಂತದವರೆಗೂ ಇರುವ ಸಮಸ್ತವೂ ನಿಯಮ ಪ್ರಕಾರವಾಗಿ ಪ್ರವರ್ತಿಸುತ್ತವೆ. ಈ ಸಮಸ್ತವು ಯಾರ ಕೈಯಿಂದ ನಿಯಮಿತವಾಗಿವೆಯೋ, ಅಂತಹ ನಿರುಪಾದಿಕವಾದ ಪರಬ್ರಹ್ಮದ ನಿರ್ದೇಶವು ಮಾಡಬೇಕು. ಓ ಶಾಕಲ್ಯನೇ! ನೇತಿ ನೇತಿ-ಯನ್ನುವ ವಾಕ್ಯದಿಂದ ಸಮಸ್ತವನ್ನು ನಿಷೇಧಿಸಿ ಏರ್ಪಡಿಸಿರುವ ಆತ್ಮಸ್ವರೂಪವು, ಶರೀರ ಧರ್ಮ-ಗಳನ್ನು ಅತಿಕ್ರಮಿಸಿ ಇರುವುದು. ಗ್ರಹಿಸಲು ಸಾಧ್ಯವಿಲ್ಲದ್ದು. ಅಂತಹುದು ಆದುದರಿಂದಲೇ ಶಿಥಿಲ-ವಾಗದಿರುವುದು, ಆಕಾರವಿಲ್ಲದ್ದು ಆಗಿದೆ. ಈ ಆತ್ಮವು ಪೃಥಿವಿ ಮೊದಲಾದ ಎಂಟು ಸ್ಥಾನಗಳಲ್ಲಿ, ಅಗ್ನಿ ಮೊದಲಾದ ಎಂಟು ಲೋಕಗಳಲ್ಲಿ ಅಮೃತ ಮೊದಲಾದ ಎಂಟು ಮಂದಿ ದೇವತೆಗಳಲ್ಲಿ, ಶರೀರ ಮುಂತಾದ ಎಂಟು ಮಂದಿ ಪುರುಷರಲ್ಲಿ, ಸ್ವಸ್ವರೂಪದೊಂದಿಗೆ, ಆತ್ಮಸ್ವರೂಪದೊಂದಿಗೆ, ಹೃದಯದಲ್ಲಿ ಉಪಾಧಿಧರ್ಮವನ್ನತಿಕ್ರಮಿಸಿ ಇದೆ. ಉಪನಿಷತ್ತುಗಳ ಮೂಲಕ ತಿಳಿದುಕೊಳ್ಳುವಂತಹ ಅಂತಹ ಆತ್ಮದ ಬಗ್ಗೆ ನಿನ್ನನ್ನು ಕೇಳುತ್ತಿದ್ದೇನೆ! ಅದನ್ನು ನೀನು ಹೇಳದೆ ಹೋದರೆ ನಿನ್ನ ಶಿರಸ್ಸು ಒಡೆದು ಹೋಗುವುದು ಎಂದು ಯಾಜ್ಞವಲ್ಕ್ಯನು ಹೇಳಲು, ಆಗ ಶಾಕಲ್ಯನು ಆತ್ಮಸ್ವರೂಪವನ್ನು ತಿಳಿಯದವನಾದ್ದರಿಂದ ಆ ಶಾಕಲ್ಯನ ಶಿರಸ್ಸು ಒಡೆದು ಕೆಳಕ್ಕೆ ಬಿದ್ದುಹೋಯಿತು. ಹೀಗೆ ಬ್ರಾಹ್ಮಣ ಶಾಪಹತನಾದ ಶಾಕಲ್ಯನಿಗೆ ಊರ್ಧ್ವಲೋಕ ಕ್ರಿಯೆಗಳನ್ನು ಮಾಡಿ ಪುಣ್ಯಲೋಕಾವಾಪ್ತಿ ಉಂಟು ಮಾಡಬೇಕೆಂದು ಶಿಷ್ಯರು, ಆತನ ಅಸ್ತಿಗಳನ್ನು ತೆಗೆದುಕೊಂಡು ಹೋಗುತ್ತಿರಲು ಮಾರ್ಗಮಧ್ಯದಲ್ಲಿ ಕಳ್ಳರು ಆ ಅಸ್ತಿಗಳನ್ನು ಧನವೆಂದು ಭಾವಿಸಿ ಅಪಹರಿಸಿಕೊಂಡು ಹೋದರು. ಆದ್ದರಿಂದ ಬ್ರಹ್ಮ-ವೇತ್ತನನ್ನು ದ್ವೇಷಿಸುವವರಿಗೆ ಇಹಪರಲೋಕಗಳೆರಡೂ ಇಲ್ಲ. (ಅಹಂಕಾರದಿಂದ ಕೂಡಿದ ಬ್ರಹ್ಮಜ್ಞಾನಿಯೊಂದಿಗೆ ವಾದ ಮಾಡಕೂಡದೆಂದು ಈ ಉದಂತ(ಕರ್ಣಾಕರ್ಣಿಕೇಳಲ್ಪಟ್ಟಕಥೆ) ತಿಳಸುತ್ತದೆ.)

**ಮಂ.ಶ್ಲೋ॥ ಅಥ ಹೋವಾಚ ಬ್ರಾಹ್ಮಣಾ ಭಗವನ್ತೋ ಯೋ ವಃ ಕಾಮಯತೇ ಸ ಹೋ ಪೃಚ್ಛತು**
**ಸರ್ವೇ ವಾ ಮಾ ಪೃಚ್ಛತ ಯೋ ವಃ ಕಾಮಯತೇ ತಂ ವಃ ಪೃಚ್ಛಾಮಿ ಸರ್ವಾನ್ವಾವಃ**
**ಪೃಚ್ಛಾಮೀತಿ ತೇಹ ಬ್ರಾಹ್ಮಣಾ ಸ ದದೃಷುಃ (27)**

ತಾ : ಯಾಜ್ಞವಲ್ಕ್ಯ: ಪೂಜ್ಯರಾದ ಓ ಬ್ರಾಹ್ಮಣರೇ! ನಿಮ್ಮಲ್ಲಿ ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ನಾನು ಮತ್ತೆ ನಿಮ್ಮನ್ನು ಪ್ರಶ್ನಿಸುತ್ತೇನೆ, ಎನ್ನಲು ಅಲ್ಲಿದ್ದ ಬ್ರಾಹ್ಮಣರು ಪ್ರಶ್ನಿಸಲು ಧೈರ್ಯ ಸಾಲದೆ ಸುಮ್ಮನಿದ್ದುಬಿಟ್ಟರು.

**ಮಂ.ಶ್ಲೋ॥ ತಾನ್ ಹೈತ್ಯೈಃ ಶ್ಲೋಕ್ಯೈಃ ಪಪ್ರಚ್ಛ। ಯಥಾ ವೃಕ್ಷೋ ವನಸ್ಪತಿಸ್ತಥೈವ ಪುರುಷೋಽಮೃಷಾ।**
**ತಸ್ಯ ಲೋಮಾನಿ ಪರ್ಣಾನಿ ತ್ವಗಸ್ಯೋತ್ಪಾಟಿಕಾ ಬಹಿಃ। ತ್ವಚ ಏವಾಸ್ಯ ರುಧಿರಂ ಪಸ್ಯನ್ಧಿ**

**ತ್ವಚ ಉತ್ಪಟಃ ತಸ್ಮಾತ್ತದಾತೃಣ್ಣಾತ್ ಪ್ರೈತಿ ರಸೋ ವೃಕ್ಷಾದಿ ವಾಹತಾತ್। ಮಾಗ್ಂ ಸಾನ್ಯಸ್ಯ ಶಕರಾಣಿ ಕಿನಾಟಗ್ಂ ಸ್ನಾವ ತತ್ಸ್ಥಿರಮ್ । ಅಸ್ಥೀನ್ಯನ್ತರತೋ ದಾರೂಣಿ ಮಜ್ಞಾ ಮಜ್ಞೋಪಮಾ ಕೃತಾ। ಯದ್ವೃಕ್ಷೋ ವೃಕ್ಣೋ ರೋಹತಿ ಮೂಲಾನ್ನವತರಃ ಪುನಃ। ಮರ್ತ್ಯಃ ಸ್ವಿನ್ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ ಪ್ರರೋಹತಿ। ರೇತಸ ಇತಿ ಮಾಽವೋಚತ ಜೀವತಸ್ತ್ರತ್ ಪ್ರಜಾಯತೇ ಧಾನಾರುಹ ಇವವೈ ವೃಕ್ಷೋಽಙ್ಞಸಾ ಪ್ರೇತ್ಯ ಸಮ್ಭವಃ। ಯತ್ಸಮೂಲಮಾವೃಹೇಯುರ್ವೃಕ್ಷಂ ನ ಪುನರಾಭವೇತ್ ಮರ್ತ್ಯಃ ಸ್ವಿನ್ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ ಪ್ರರೋಹತಿ। ಜಾತ ಏವ ನ ಜಾಯತೇ ಕೋನ್ವೇನಂ ಜನಯೇತ್ಪುನಃ । ವಿಜ್ಞಾನಮಾನನ್ದಂ ಬ್ರಹ್ಮರಾತಿರ್ದಾತುಃ ಪರಾಯಣಮ್ ತಿಷ್ಠಮಾನಸ್ಯ ತದ್ವಿದ ಇತಿ ॥ (28)**

ತಾ : ಬ್ರಾಹ್ಮಣರೆಲ್ಲರೂ ಏನೂ ಮಾತನಾಡದೆ ಸುಮ್ಮನಿರಲು, ಯಾಜ್ಞವಲ್ಕ್ಯನು ಆ ಬ್ರಾಹ್ಮಣರನ್ನು ಕುರಿತು ಕೇಳುತ್ತಿದ್ದಾನೆ. "ಓ ಬ್ರಾಹ್ಮಣರೇ ಶರೀರಾಕೃತಿಯುಳ್ಳ ಈ ಪುರುಷನು, ಪುಷ್ಪ ಫಲಾದಿಗಳುಳ್ಳ ವೃಕ್ಷಗಳು, ಸತ್ಯವಾದವುಗಳು. ತ್ವಕ್ಕು, ಚರ್ಮ, ರಕ್ತ, ಮಾಂಸ, ನರಗಳು, ಮಜ್ಜೆ, ಮೂಳೆಗಳುಳ್ಳ ಶರೀರವು ಪುರುಷನಿಗಿರುತ್ತದೆ. ತೊಗಟೆ, ಕಾಂಡ, ರಸ, ಅಂಟು, ನಾರು ಆರ್ದ್ರತೆ, ಇವು ವೃಕ್ಷಗಳಿಗೆ ಇರುವವು. ಪುರುಷ ಹಾಗೂ ವೃಕ್ಷಗಳೆರಡೂ ಸಮಾನವಾಗಿವೆ. ಆದರೂ ಕಡಿಯಲ್ಪಟ್ಟ ವೃಕ್ಷವು ಮೊದಲಿಗಿಂತಲೂ ಮತ್ತೆ ಇನ್ನಷ್ಟು ಹೊಸದಾಗಿ ಬೆಳೆಯುತ್ತದೆ. ಆ ಪ್ರಕಾರವಾಗಿಯೇ ಮೃತ್ಯು ದೇವತೆಯು ಸಾಯಿಸಿದ ಈ ಶರೀರವೆನ್ನುವ ಪುರುಷನು ಯಾವ ಮೂಲದಿಂದ ಹುಟ್ಟುವನು ಎಂದು ಯಾಜ್ಞವಲ್ಕ್ಯನು ಪ್ರಶ್ನಿಸಿದ. ಮತ್ತೆ ತಾನೇ ಹೇಳತೊಡಗಿದ "ಈ ಶರೀರವು ರೇತಸ್ಸಿನಿಂದ ಜನಿಸುತ್ತದೆಯೇ? ಹಾಗಿದ್ದಲ್ಲಿ ಬದುಕಿರುವವರಿಗೇ ರೇತಸ್ಸು ಇರುವುದು. ಮೃತ್ಯುವಿನಿಂದ ಹುಟ್ಟುವುದಕ್ಕೆ ಸಾಧ್ಯವಿಲ್ಲ. ಗಿಡವು ಬೀಜದಿಂದ ಹುಟ್ಟಲು ಸಾಧ್ಯವಿದೆ. ವೃಕ್ಷವನ್ನು ಬೇರುಸಹಿತ ಕಿತ್ತುಹಾಕಿದರೂ (ಮೇಲಕ್ಕೆಬ್ಬಿಸಿದರೂ, ಬುಡಮೇಲು ಮಾಡಿದರೂ) ತಿರುಗಿ ಮೂಲ (ತಾಯಿ ಬೇರು)ದಿಂದ ಚಿಗುರಲು ಆಗುವುದಿಲ್ಲ. ಆದ್ದರಿಂದ ಬ್ರಾಹ್ಮಣೋತ್ತಮರೇ! ನಿಮ್ಮನ್ನು ಸಮಸ್ತ ಜಗತ್ತಿಗೆ ಮೂಲವಾದುದು ಯಾವುದೆಂದು ಹೇಳಬೇಕೆಂದು ಕೇಳುತ್ತಿದ್ದೇನೆ. ಎಂದ ಯಾಜ್ಞವಲ್ಕ್ಯ ಮತ್ತೆ ಹೇಳತೊಡಗಿದ "ಓ ಬ್ರಾಹ್ಮಣರೇ! ಹುಟ್ಟಿದ ಮನುಷ್ಯ ಮತ್ತೆ ಹುಟ್ಟುವುದಿಲ್ಲವೆಂದು ಖಂಡಿತವಾಗಿ ನಿಯಮವಿಲ್ಲ. ಹುಟ್ಟಿದವನಿಗೆ, ಸತ್ತ ಮೇಲೆ ಜನ್ಮವು ಇಲ್ಲವೆಂದಾದ ಮೇಲೆ ಈ ಮನುಷ್ಯನಿಗೆ ಮಾಡಿದ ಪಾಪಪುಣ್ಯ ಫಲವು ನಶಿಸುವುದು. ಮಾಡದ ಪುಣ್ಯಾಪಾಪಫಲವು ಲಭಿಸುವುದು ಅಲ್ಲವೆ? ಮರಣವನ್ನು ಹೊಂದಿದವರು ಮತ್ತೆ ಜನಿಸುತ್ತಿದ್ದಾರೆ. ಮನುಷ್ಯನ ವಿಷಯವಾಗಿ ಮೃತ್ಯುದೇವತೆ ಸಾಯಿಸಿದಂತಹ ಪುರುಷನು ಯಾವ ಮೂಲದಿಂದ ಏರ್ಪಡುವನೆಂದು ಕೇಳಿದ ಪ್ರಶ್ನೆಯು ಸರಿಯಾದುದೇ. ಓ ಬ್ರಾಹ್ಮಣರೇ! ಮರಣವನ್ನು ಹೊಂದಿದ ಈ ಮನುಷ್ಯನನ್ನು ಮತ್ತೆ ಯಾರು ಹುಟ್ಟಿಸುವೆನೆಂದು ನಾನು ಕೇಳುತ್ತಿದ್ದೇನೆ ಎನ್ನಲು, ಆ ಜನರ ಸಭೆಯಲ್ಲಿನ ಬ್ರಾಹ್ಮಣರು ಸಮಸ್ತಕ್ಕೂ ಕಾರಣವಾದ ಪರಬ್ರಹ್ಮವನ್ನು ತಿಳಿದುಕೊಳ್ಳಲಾರದೆ ಹೋದುದರಿಂದ ಪ್ರತ್ಯುತ್ತರವನ್ನು ಕೊಡಲಾರದೆ ಹೋದರು. ಆಗ ಯಾಜ್ಞವಲ್ಕ್ಯನು ಆ ಬ್ರಾಹ್ಮಣರನ್ನು ಜಯಿಸಿದವನಾಗಿ, ಆ ಗೋವುಗಳನ್ನು ಹೊಡೆದುಕೊಂಡು

ಹೋದ. ಹೀಗೆ ಯಾಜ್ಞವಲ್ಕ್ಯನು ಹಾಕಿದ ಪ್ರಶ್ನೆಗಳೆಲ್ಲದಕ್ಕೂ ಮೂಲವಾದ ಆ ಪರಬ್ರಹ್ಮ ವಸ್ತುವು, ವಿಜ್ಞಾನ ಸ್ವರೂಪವೂ, ಆನಂದ ಸ್ವರೂಪವೂ ಆದ ಪರಬ್ರಹ್ಮಸ್ವರೂಪವೇ. ಆ ಪರಬ್ರಹ್ಮವೇ ಕರ್ಮ ಮಾಡುವವನಿಗೆ ಕರ್ಮಫಲವನ್ನು ಪ್ರಸಾದಿಸುತ್ತಿರುವ ಬ್ರಹ್ಮವೇತ್ತವಾಗಿ ನಿಂತಿದೆ ಸಹ. ಶ್ರುತಿ ಭಗವತಿಯೇ ಹೀಗೆ ಸ್ವಯಂ ನುಡಿದಿದ್ದಾಳೆ.

(ಈ ಅಧ್ಯಾಯದಲ್ಲಿ 9 ಬ್ರಾಹ್ಮಣಗಳು, 92 ಮಂತ್ರಗಳು ಇವೆ.)

# ಷಷ್ಠಾಧ್ಯಾಯ - ಪ್ರಥಮ ಬ್ರಾಹ್ಮಣಂ

**ಮಂ.ಶ್ಲೋ॥ ಓಂ ಜನಕೋ ಹ ವೈದೇಹ ಅಸಾಞ್ಚಕ್ರೇಽಥ ಹ ಯಾಜ್ಞವಲ್ಕ್ಯ ಅವವ್ರಾಜ। ತಗ್ಂ ಹೋವಾಚ ಯಾಜ್ಞವಲ್ಕ್ಯ ಕಿಮರ್ಥಮಚಾರೀಃ ಪಶೂನಿಚ್ಛನ್ನಣ್ವನ್ತಾನಿತಿ। ಉಭಯಮೇವ ಸಮ್ರಾಡಿತಿ ಹೋವಾಚ (1)**

ತಾ : ಒಮ್ಮೆ ವಿದೇಹ ದೇಶದ ಚಕ್ರವರ್ತಿಯಾದ ಜನಕನು ಸಿಂಹಾಸನಾರೂಢನಾಗಿದ್ದ ಸಮಯದಲ್ಲಿ ಆತನ ಬಳಿಗೆ ಯಾಜ್ಞವಲ್ಕ್ಯ ಮುನಿ ಬಂದನು. ಆಗ ಜನಕನು "ಓ ಮುನೀಂದ್ರಾ! ತಮ್ಮ ಆಗಮನದ ಉದ್ದೇಶವೇನು? ಗೋವುಗಳು ಬೇಕೆ? ಇಲ್ಲವೆ ಸೂಕ್ಷ್ಮವಾದ ಪ್ರಶ್ನೆಗಳನ್ನು ನನ್ನನ್ನು ಕೇಳುವುದಕ್ಕಾಗಿ ಬಂದಿದ್ದೀರಾ? ಎಂದು ಕೇಳಿದ. ಓ ಜನಕ ರಾಜಾ! ಆ ಎರಡನ್ನೂ ವಾಂಛಿಸಿ ಬಂದಿದ್ದೇನೆ" ಎಂದು ಹೇಳಿದ.

**ಮಂ.ಶ್ಲೋ॥ ಯತ್ತೇ ಕಶ್ಚಿದಬ್ರವೀತ್ತತ್ ಶೃಣವಾಮೇತ್ಯ ಬ್ರವೀನ್ಮೇ ಜಿತ್ವಾ ಶೈಲಿನಿರ್ವಾಗ್ವೈ ಬ್ರಹ್ಮೇತಿ ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ್ಬ್ರೂಯಾತ್ತಥಾ ತಚ್ಛೈಲಿನೋಽಬ್ರವೀದ್ವಾಗ್ವೈ ಬ್ರಹ್ಮೇತ್ಯವದತೋ ಹಿ ಕಿಗ್ಂಸ್ಯಾದಿತ್ಯಬ್ರವಿತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವಿದಿತ್ಯೇಕ ಪಾದ್ವಾ ಏತತ್ಸಮ್ರಾಡಿತಿ ಸವ್ವೈ ನೋ ಬ್ರೂಹಿ ಯಾಜ್ಞವಲ್ಕ್ಯ ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇನದುಪಾಸೀತ। ಕಾ ಪ್ರಜ್ಞತಾ ಯಾಜ್ಞವಲ್ಕ್ಯ ವಾಗೇವ ಸಮ್ರಾಡಿತಿ ಹೋವಾಚಃ ವಾಚಾವ್ವೈ ಸಮ್ರಾಡ್ಬನ್ಧುಃ ಪ್ರಜ್ಞಾಯತೇ ಋಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವಾಙ್ಗೀರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಗ್ಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಜ್ಞಾಯತೇ ವಾಗ್ವೈ ಸಮ್ರಾಟ್ಪರಮಂ ಬ್ರಹ್ಮಾನ್ಯೈನಂ ವಾಗ್ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾದೇವಾನಪ್ಯೇತಿ ಯ ಏವಂ ವಿದ್ಯಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ। ಸಹೋವಾಚ ಯಾಜ್ಞವಲ್ಕ್ಯಃ ಪಿತಾಮೇಽಮನ್ಯತನಾನನುಶಿಷ್ಯ ಹರೇತೇತಿ (2)**

ತಾ : ಯಾಜ್ಞವಲ್ಕ್ಯ:- ಯಾವ ಯಾವ ಆಚಾರ್ಯನು ನಿನಗೆ ಏನೇನು ಬೋಧಿಸಿದನೋ, ನನಗೆ ವಿವರವಾಗಿ ಹೇಳು. ಜನಕ: ಶಾಲಿನನ ಮಗ ಜಿತ್ವಯೆನ್ನುವ ಮುನಿಯು ಬಂದು ವಾಕ್ಕೇ

ಬ್ರಹ್ಮವೆಂದು ನನಗೆ ಹೇಳಿದನು. ತಂದೆ ತಾಯಿಗಳಿಂದಲೂ, ಆಚಾರ್ಯರಿಂದಲೂ ಶಿಕ್ಷಿತನಾದವನು ಹೇಗೆ ಪ್ರಮಾಣವಾಕ್ಯವನ್ನು ನುಡಿಯುವನೋ, ಆ ಪ್ರಕಾರವಾಗಿಯೇ, ವಾಕ್ಕು ಬ್ರಹ್ಮವೆಂದು ನನಗೆ ಹೇಳಿದ. ಯಾಜ್ಞವಲ್ಕ್ಯ: ಓ ಜನಕನೇ! ಆ ಶೈಲಿನಿಯೆನ್ನುವವನು ವಾಗ್ರೂಪವಾದ ಬ್ರಹ್ಮಕ್ಕೆ ಶರೀರ ಆಶ್ರಯವೆಂದು ಹೇಳಿರುವನೇ? ಜನಕ:- ಆ ರೀತಿಯಾಗಿ ನನಗೆ ಹೇಳಿಲ್ಲ. ಯಾಜ್ಞವಲ್ಕ್ಯ: ಓ ಜನಕನೇ! ಇದು ಏಕಪಾದ ಸ್ವರೂಪವಾದ ಬ್ರಹ್ಮವೆಂದು ತಿಳಿದುಕೋ. ಜನಕ:- ಓ ಯಾಜ್ಞವಲ್ಕ್ಯಾ! ನಮಗೆ ಏಕಪಾದ ಸ್ವರೂಪವಾದ ಆ ಬ್ರಹ್ಮವನ್ನು ತಿಳಿಸಿಹೇಳು. ಯಾಜ್ಞವಲ್ಕ್ಯ: ಓ ಜನಕನೇ! ಈ ವಾಗ್ರೂಪವಾದ ಬ್ರಹ್ಮಕ್ಕೆ ವಾಕ್ಕೇ ಶರೀರ. ಅವ್ಯಾಕೃತಾಕಾಶವೇ ಆಶ್ರಯ. ಇಂತಹ ಏಕಪಾದ ಸ್ವರೂಪವಾದ ವಾಗ್ರೂಪ ಬ್ರಹ್ಮವನ್ನು ಪ್ರಜ್ಞೆಯೆಂದು ಉಪಾಸನೆ ಮಾಡಬೇಕು.

ಜನಕ: ಯಾಜ್ಞವಲ್ಕ್ಯಾ! ಪ್ರಜ್ಞೆ ಯಾವುದು? ಯಾಜ್ಞ:- ಓ ಜನಕನೇ ವಾಕ್ಕಿನಿಂದ ನಮಗೆ ಇವನು ಬಂಧು ಎಂದು ತಿಳಿಯುತ್ತದೆ. ಮತ್ತು ಋಗ್ವೇದ, ಯಜುರ್ವೇದ, ಸಾಮ ವೇದಾಥರ್ವಣ- ವೇದಗಳನ್ನು, ರಾಮಾಯಣಾದಿ ಇತಿಹಾಸಗಳನ್ನು, ವಿಷ್ಣ್ವಾದಿ ಪುರಾಣಗಳನ್ನು, 64 ವಿದ್ಯೆಗಳನ್ನು, ಉಪನಿಷತ್ತುಗಳನ್ನು, ಮನ್ವಾದಿ ಸ್ಮೃತಿಗಳನ್ನು, ಬ್ರಹ್ಮಸೂತ್ರಗಳನ್ನು, ಭಾಷ್ಯಗಳನ್ನು, ಭಾಷ್ಯ ವ್ಯಾಖ್ಯಾನ- ಗಳನ್ನು, ಯಾಗ ನಿಮಿತ್ತವಾದ ಧರ್ಮವನ್ನು, ಹೋಮ ನಿಮಿತ್ತವಾದ ಧರ್ಮವನ್ನು, ಭಕ್ಷಣ ನಿಮಿತ್ತವಾದ ಧರ್ಮವನ್ನು, ಪಾನ ನಿಮಿತ್ತವಾದ ಧರ್ಮವನ್ನು, ಈ ಜನ್ಮವನ್ನು, ಪರ ಜನ್ಮವನ್ನು ಸಮಸ್ತ ಭೂತಗಳನ್ನು ವಾಕ್ಕಿನಿಂದಲೇ ತಿಳಿಯಲಾಗುತ್ತದೆ. ಆದ್ದರಿಂದ ವಾಕ್ಕೇ ಪರಬ್ರಹ್ಮ. ಹೀಗೆಂದು ಉಪಾಸನೆ ಮಾಡುವವನನ್ನು ವಾಕ್ಕು ಎಂದಿಗೂ ಬಿಟ್ಟುಹೋಗುವುದಿಲ್ಲ. ಅಂತಹ ಉಪಾಸಕನು ಅಧ್ಯಯನ ಮಾಡಿದ ಬ್ರಹ್ಮವಿದ್ಯೆಯನ್ನು ಎಂದಿಗೂ ಮರೆತುಹೋಗುವುದಿಲ್ಲ. ಅವನನ್ನು ಸಮಸ್ತ ಭೂತಗಳು, ಗೋವು (ಕರುವನ್ನು) ಪ್ರೀತಿಸುವಂತೆ ಇರುವುದು. ಹೀಗೆ ತಿಳಿದುಕೊಂಡು ಉಪಾಸನೆ ಮಾಡುವವನು ಇಲ್ಲಿಯೇ ದೈವಸ್ವರೂಪನಾಗಿ ದೇಹಪಾತದ ನಂತರ ದೇವತೆಗಳನ್ನು ಹೊಂದುತ್ತಾನೆ. ಜನಕ ಮಹಾರಾಜ: ಓ ಯಾಜ್ಞವಲ್ಕ್ಯಾ! ನಿನಗೆ ಆನೆಗಳಿಗೆ ಸಮಾನವಾದ ಸಾವಿರ ವೃಷಭಗಳನ್ನು ಕೊಡುತ್ತೇನೆ. ಯಾಜ್ಞವಲ್ಕ್ಯಾ: ಓ ಜನಕ ರಾಜನೇ! ನಮ್ಮ ತಂದೆಯು ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ ಶಿಷ್ಯನಿಂದ ಧನವನ್ನು ಸ್ವೀಕರಿಸಬಾರದೆಂದು ನನಗೆ ಬೋಧಿಸಿದ್ದಾರೆ. ನನ್ನ ಅಭಿಪ್ರಾಯವೂ ಅದೇ. ನಾನು ಇವುಗಳನ್ನು ತೆಗೆದುಕೊಳ್ಳುವುದಿಲ್ಲ.

**ಮಂ.ಶ್ಲೋ॥ ಯದೇವ ತೇ ಕಶ್ಚಿದಬ್ರವೀತ್ತತ್ ಶೃಣವಾಮೇತ್ಯ ಬ್ರವೀನ್ಮ ಉದಙ್ಕಃಶೌಲ್ಬಾಯನಃ ಪ್ರಾಣೋ ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛೌಲ್ಬಾ- ಯನೋಽಬ್ರವೀತ್ ಪ್ರಾಣೋ ವೈ ಬ್ರಹ್ಮೇತ್ಯಪ್ರಾಣತೋ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಪ್ರಾಣ ಏವಾಯತನಮಾಕಾಶಃ ಪ್ರತಿಷ್ಠಾ ಪ್ರಿಯಮಿತ್ಯೇ- ನದುಪಾಸೀತ ಕಾ ಪ್ರಿಯತಾ ಯಾಜ್ಞವಲ್ಕ್ಯ ಪ್ರಾಣ ಏವ ಸಮ್ರಾಡಿತಿ ಹೋವಾಚ ಪ್ರಾಣಸ್ಯ ವೈ ಸಮ್ರಾಟ್ಕಾಮಾಯಾಯಾಜ್ಯಂ ಯಾಜಯತ್ಯಪ್ರತಿಗೃಹ್ಯಸ್ಯ ಪ್ರತಿಗೃಹ್ಣಾತ್ಯಪಿ ತತ್ರ ವಧಾ ಶಙ್ಕಂ ಭವತಿ ಯಾಂ ದಿಶಮೇತಿ ಪ್ರಾಣಸ್ಯೈವ ಸಮ್ರಾಟ್ಕಾಮಾಯ ಪ್ರಾಣೋ ವೈ**

**ಸಮ್ರಾಟ್ಪರಮಂ ಬ್ರಹ್ಮ ನೈನಂ ಪ್ರಾಣೋ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ (3)**

ತಾ : ಯಾಜ್ಞವಲ್ಕ್ಯಾ: ಓ ಜನಕ ಚಕ್ರವರ್ತಿ! ಇನ್ನೂ ಇತರ ಆಚಾರ್ಯರು ಏನೇನು ಬೋಧಿಸಿದ್ದಾರೋ ಅದನ್ನು ನನಗೆ ವಿವರಿಸುವಂತಹವನಾಗು. ಜನಕ ಮಹಾರಾಜ: ಓ ಯಾಜ್ಞವಲ್ಕ್ಯಾ! ಶುಲ್ಬ ಪುತ್ರನಾದ ಉದಂಕನೆನ್ನುವ ಮುನಿಯು, ಲೋಕದಲ್ಲಿ ಮಾತಾಪಿತೃ ಆಚಾರ್ಯರೊಂದಿಗೆ ಶಿಕ್ಷಿತನಾದವನು, ಹೇಗೆ ಸತ್ಯವನ್ನು ನುಡಿಯುವನೋ, ಆ ಪ್ರಕಾರವಾಗಿಯೇ (ಪ್ರಾಣವು ಇಲ್ಲದವನಿಗೆ ಏನೂ ಉಂಟಾಗುವುದಿಲ್ಲ.) ಪ್ರಾಣವೇ ಬ್ರಹ್ಮಸ್ವರೂಪವೆಂದು ನಿಶ್ಚಯವಾಗಿ ನನಗೆ ಹೇಳಿದ. ಯಾಜ್ಞ: ಓ ಜನಕನೇ! ಉದಂಕನು ಈ ಪ್ರಾಣರೂಪ ಪರಬ್ರಹ್ಮಕ್ಕೆ ಶರೀರವು ಆಶ್ರಯವೆಂದು ನಿನಗೆ ಹೇಳಿದನೇ? ಜನಕ: ನನಗೆ ಹೇಳಿಲಲ್ಲ. ಯಾಜ್ಞವಲ್ಕ್ಯ: ಓ ಜನಕನೇ! ಈ ಪ್ರಾಣಬ್ರಹ್ಮವು ಏಕಪಾದ ಸ್ವರೂಪವಾದ ಪರಬ್ರಹ್ಮ. ಜನಕ: ಓ ಯಾಜ್ಞವಲ್ಕ್ಯ! ಅದನ್ನು ವಿಪುಲವಾಗಿ ನಾಲ್ಕು ಪಾದಗಳನ್ನು ನನಗೆ ವಿವರಿಸು. ಯಾಜ್ಞವಲ್ಕ್ಯ: ಓ ಜನಕಾ ಆ ಪ್ರಾಣರೂಪ ಪರಬ್ರಹ್ಮಕ್ಕೆ ಪ್ರಾಣವೇ ಶರೀರ. ಅವ್ಯಾಕೃತ ಆಕಾಶವೇ ಉತ್ಪತ್ತಿ ಸ್ಥಿತಿಲಯ ಕಾಲಗಳಲ್ಲಿ ಆಶ್ರಯ. ಇಂತಹ ಪರಬ್ರಹ್ಮಕ್ಕೆ ಏಕಪಾದ ಸ್ವರೂಪವಾದ ಪ್ರಾಣರೂಪ ಬ್ರಹ್ಮವನ್ನು ಪ್ರಿಯವೆಂದು ಉಪಾಸನೆ ಮಾಡಬೇಕು. ಜನಕ: ಓ ಯಾಜ್ಞವಲ್ಕ್ಯಾ! ಪ್ರಿಯವಾದುದು ಹೇಗಿರುತ್ತದೆ? ಯಾಜ್ಞ: ಓ ಜನಕನೆ! ಪ್ರಾಣವೇ ಪ್ರಿಯವಾದುದು. ಏಕೆಂದರೆ ಜನನು ಪ್ರಾಣವನ್ನು ಕಾಪಾಡಿ ಕೊಳ್ಳಬೇಕೆಂಬ ಇಚ್ಛೆಯಿಂದ ಧನವನ್ನು ಆರ್ಜಿಸಲು, ಯಾಗವನ್ನು ಮಾಡುವುದಕ್ಕೆ ಅರ್ಹತೆಯಿಲ್ಲದ ಪತಿತನಿಂದ ಯಾಗವನ್ನು ಮಾಡಿಸುವನು. ಗ್ರಹಿಸುವುದಕ್ಕೆ ಆಗದಿರುವಂತಹ ತೀಕ್ಷ್ಣವಾದ ವಸ್ತುಗಳನ್ನು ಗ್ರಹಿಸುತ್ತಿದ್ದಾನೆ. ಪ್ರಾಣವನ್ನು ಪೋಷಿಸಿಕೊಳ್ಳಬೇಕೆನ್ನುವ ವಾಂಛೆಯಿಂದ ಸಂಹಾರ ನಿಮಿತ್ತಕವಾದ ಭಯಂಕರ ದಿಕ್ಕಿಗೆ ಹೋಗುತ್ತಿರುವನು. ಆದ್ದರಿಂದ ಎಲ್ಲಕ್ಕಿಂತ ಪ್ರಿಯವಾದುದು ಪ್ರಾಣವೇ. ಇದು ಪರಬ್ರಹ್ಮ. ಹೀಗೆ ಪ್ರಾಣವನ್ನು ಪರಬ್ರಹ್ಮವೆಂದು ಉಪಾಸಿಸುವವನನ್ನು ಪ್ರಾಣವು ಬಿಟ್ಟುಹೋಗುವುದಿಲ್ಲ. ಸಮಸ್ತ ಭೂತಗಳೂ ಪ್ರೇಮಿಸುತ್ತಿರುತ್ತವೆ. ಹೀಗೆ ಅರಿತುಕೊಂಡು ಪ್ರಾಣ ಬ್ರಹ್ಮೋಪಾಸನೆಯನ್ನು ಮಾಡಿದವನು, ಇಲ್ಲಿಯೇ ದೈವಸ್ವರೂಪನಾಗಿ ದೇಹಪಾತಾನಂತರ ದೇವತೆಗಳನ್ನು ಹೊಂದುವನು. ಜನಕ ಮಹಾರಾಜ: ಓ ಯಾಜ್ಞವಲ್ಕ್ಯನೇ! ನಿನಗೆ ಆನೆಗಳಿಗೆ ಸಮಾನವಾದ, ಸಹಸ್ರ ವೃಷಭಗಳನ್ನು ದಾನ ಮಾಡುತ್ತಿದ್ದೇನೆ. ಸ್ವೀಕರಿಸು. ಯಾಜ್ಞವಲ್ಕ್ಯ: ಓ ಜನಕನೇ! ನನ್ನ ತಂದೆಯು ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ ಶಿಷ್ಯನಿಂದ ಧನವನ್ನು ಸ್ವೀಕರಿಸಬಾರದೆಂದು ನನಗೆ ಬೋಧಿಸಿದ. ನನಗೂ ಅದೇ ಅಭಿಪ್ರಾಯವಿದೆ. ನೀನು ನೀಡುವ ಬಹುಮಾನವನ್ನು ಸ್ವೀಕರಿಸಲಾರೆ.

**ಮಂ.ಶ್ಲೋ॥ ಯದೇವ ತೇ ಕಶ್ಚಿದಬ್ರವೀತ್ತತ್ಶೃಣವಾಮೇತ್ಯ ಬ್ರವೀನ್ಮೇ ಬರ್ಕುರ್ವಾರ್ಷ್ಣಶ್ಚಕ್ಷುರ್ವೈ ಬ್ರಹ್ಮೇತಿ ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತದ್ವಾರ್ಷ್ಣೋಽಬ್ರವೀಚ್ಚಕ್ಷುರ್ವೈ ಬ್ರಹ್ಮೇತ್ಯಪಶ್ಯತೋ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾನ ಮೇಽಬ್ರವಿ**

-ದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಚಕ್ಷುರೇವಾ ಯತನಮಾಕಾಶಃ ಪ್ರತಿಷ್ಠಾ ಸತ್ಯಮಿತ್ಯೇನದುಪಾಸೀತ ಕಾ ಸತ್ಯತಾ ಯಾಜ್ಞವಲ್ಕ್ಯ ಚಕ್ಷುರೇವ ಸಮ್ರಾಡಿತಿ ಹೋವಾಚ ಚಕ್ಷುಷಾ ವೈ ಸಮ್ರಾಟ್ ಪಶ್ಯನ್ತಮಾಹುರದ್ರಾಕ್ಷೀರಿತಿ ಸ ಆಹಾ ದ್ರಾಕ್ಷಮಿತಿ ತತ್ಸತ್ಯಂ ಭವತಿ ಚಕ್ಷುರ್ವೈ ಸಮ್ರಾಟ್ ಪರಮಂ ಬ್ರಹ್ಮಾನೈನಂ ಚಕ್ಷುರಹಾತಿ ಸರ್ವಾಣ್ಯೇನಂ ಭೂತಾನ್ಯಭಿ ಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತ -ದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮಿತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ (4)

ತಾ : ಯಾಜ್ಞವಲ್ಕ್ಯ: ಇನ್ನೂ ಯಾವ ಯಾವ ಆಚಾರ್ಯರು ಏನೇನು ಹೇಳಿದ್ದಾರೋ ನನಗೆ ಹೇಳು. ಜನಕ: ನೇತ್ರವೇ ಬ್ರಹ್ಮವೆಂದು ವರ್ಕು ವಾರ್ಷ್ಣನೆಂಬ ಮುನಿಯು ಹೇಳಿರುವನು. ಉತ್ತಮರಾದ ತಂದೆ ತಾಯಿ, ಗುರುಗಳಂತೆ ನನಗೆ ವಾರ್ಷ್ಣನು ನೇತ್ರವು ಬ್ರಹ್ಮನೆಂದು ಬೋಧಿಸಿದನು. ಕಣ್ಣಿಲ್ಲದವನು ಏನೂ ಮಾಡಲಾರನಲ್ಲವೆ? ಯಾಜ್ಞ: ಬ್ರಹ್ಮದ ಆಯತನವನ್ನು ಪ್ರತಿಷ್ಠೆಯನ್ನು ನಿನಗೆ ತಿಳಿಸಿರುವನೇ? ಜನಕ: ನನಗೆ ಆತ ತಿಳಿಸಲಿಲ್ಲ. ಯಜ್ಞ: ಓ ರಾಜಾ! ಇದು ಬ್ರಹ್ಮದ ಒಂದು ಪಾದ ಮಾತ್ರ. ಜನಕ: ನನಗೆ ಪುನಃ ಆ ಪೂರ್ಣತತ್ತ್ವವನ್ನು ಬೋಧಿಸುವಂತಹವನಾಗು. ಯಾಜ್ಞವಲ್ಕ್ಯ: ನೇತ್ರವೇ ಶರೀರವು. ಅವ್ಯಾಕೃತಾಕಾಶ ಆಶ್ರಯವಾಗಿದೆ. ಈ ನೇತ್ರರೂಪ ಬ್ರಹ್ಮವನ್ನು ಸತ್ಯಸ್ವರೂಪವೆಂದು ಧ್ಯಾನಿಸಬೇಕು. ಜನಕ: ಓ ಯಾಜ್ಞವಲ್ಕ್ಯ! ಸತ್ಯಸ್ವರೂಪ ಯಾವುದು? ಯಜ್ಞ: ಸಾರ್ವಭೌಮನಾದ ಓ ಜನಕನೇ! ನೇತ್ರವೇ ಸತ್ಯ. ಓ ಜನಕ ಮಹಾರಾಜ! ಜನರು ನೋಡುವಂತಹುದನ್ನು (ನೋಡಿದ್ದನ್ನು) ನೋಡಿದೆಯಾ ಎಂದು ಕೇಳುವರು. ಅವರು ಸಹ ನೋಡಿದೆನೆಂದು ಹೇಳುವರು ಅಲ್ಲವೇ ಅದು ಸತ್ಯವಾದುದು. ನೇತ್ರವೇ ಪರಬ್ರಹ್ಮ. ಈ ರೀತಿಯಾಗಿ ಗ್ರಹಿಸಿಕೊಂಡು ಉಪಾಸಿಸುವವನನ್ನು ನೇತ್ರವು ಬಿಟ್ಟುಹೋಗದು. ಈ ಉಪಾಸಕನನ್ನು ಸಮಸ್ತ ಭೂತಗಳು ಪ್ರೀತಿಸುವವು. ಯಾರು ಈ ಪ್ರಕಾರವಾಗಿ ತಿಳಿದುಕೊಂಡು ಈ ನೇತ್ರರೂಪ ಬ್ರಹ್ಮವನ್ನು ಧ್ಯಾನಿಸುತ್ತಿರುವನೋ, ಆತ ದೇವನಾಗಿ, ದೇಹವು (ಪತನ) ಬಿದ್ದುಹೋದ ಮೇಲೆ ದೇವತೆಗಳನ್ನು ಹೊಂದುತ್ತಿದ್ದಾನೆ. ಜನಕ ಮಹಾರಾಜ: ಆನೆಗಳ ಸಮಾನವಾಗಿರುವ ಎತ್ತುಗಳನ್ನು ಸಾವಿರ ಸಂಖ್ಯೆಯಲ್ಲಿ ನಿಮಗೆ ದಾನ ಮಾಡುತ್ತಿದ್ದೇನೆ. ಯಾಜ್ಞವಲ್ಕ್ಯ: ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ ಶಿಷ್ಯನಿಂದ ಧನವನ್ನು ತೆಗೆದುಕೊಳ್ಳಬಾರದೆಂದು ನನ್ನ ತಂದೆ ನನಗೆ ಹೇಳಿದರು. ಈ ದಾನವನ್ನು ಸ್ವೀಕರಿಸಲಾರೆ.

ಮಂ.ಶ್ಲೋ॥ ಯದೇವ ತೇ ಕಶ್ಚಿದಬ್ರವೀತ್ತತ್ ಶೃಣವಾಮೇತ್ಯಬ್ರವೀನ್ಮೇ ಗರ್ದಭೀವಿಪೀತೋ ಭಾರದ್ವಾಜಃ ಶ್ರೋತ್ರಂ ವೈ ಬ್ರಹ್ಮೇತಿ ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ್ ಬ್ರೂಯತ್ತಥಾ ತದ್ಭಾರದ್ವಾಜೋಽಬ್ರವೀತ್ ಶ್ರೋತ್ರಂ ವೈ ಬ್ರಹ್ಮೇತ್ಯಶೃಣ್ವತೋ ಹಿ ಕಿಗ್ಂ ಸ್ಯಾದಿತ್ಯಬ್ರವಿತ್ತುತೇ ತಸ್ಯಾಯತನಂ ಪ್ರತಿಷ್ಠಾಂ ನಮೇಽಬ್ರವೀದಿತ್ಯೇಕ ಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಶ್ರೋತ್ರಮೇವಾಯತನಮಾಕಾಶಃ ಪ್ರತಿಷ್ಠಾನನ್ತ ಇತ್ಯೇನದುಪಾಸೀತ ಕಾಽನನ್ತತಾ ಯಾಜ್ಞವಲ್ಕ್ಯ ದಿಶ ಏವ ಸಮ್ರಾಡಿತಿ ಹೋವಾಚ ತಸ್ಮಾದ್ವೈ ಸಮ್ರಾಡಪಿ

**ಯಾಂ ಕಾಂ ಚ ದಿಶಂ ಗಚ್ಛತಿ ನೈವಾಸ್ಯಾ ಅನ್ತಂ ಗಚ್ಛತ್ಯನನ್ತಾ ಹಿ ದಿಶೋ ದಿಶೋ ವೈ ಸಮ್ರಾಟ್ ಶ್ರೋತ್ರಗ್ಂ ಶ್ರೋತ್ರಂ ವೈ ಸಮ್ರಾಟ್ ಪರಮಂ ಬ್ರಹ್ಮನೈನಗ್ಂ ಶ್ರೋತ್ರಂ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾಮೇऽಮನ್ಯತ ನಾನನುಶಿಷ್ಯ ಹರೇತೇತಿ (೫)**

ತಾ : ಓ ಜನಕ ಮಹಾರಾಜ! ಇನ್ನೂ ಯಾರ್ಯಾರು ಏನೇನು ಹೇಳಿದ್ದಾರೋ ಅದನ್ನು ನಾನು ಕೇಳಬೇಕು. ಹೇಳು. ಜನಕ: ಓ ಯಾಜ್ಞವಲ್ಕ್ಯಾ! ಭರದ್ವಾಜ ಮಗನಾದ ಗರ್ಧಭೀವಿಪೀತನೆಂಬ ಮುನಿಯು ಮಾತಾ ಪಿತೃ ಆಚಾರ್ಯರಿಂದ ಶಿಕ್ಷಿತನಾದವನು (ಸತ್ಯವನ್ನು ಹೇಳುವನು) ಹೇಗೆ ಸತ್ಯವನ್ನು ಹೇಳುವನೋ ಆ ವಿಧವಾಗಿಯೇ ಸತ್ಯವನ್ನು ಶ್ರವಣ ಮಾಡದೆ ಹೋದರೆ ಏನೂ ಸಿದ್ಧಿಸದು. ಆದ್ದರಿಂದ ಶ್ರೋತ್ರವೇ ಬ್ರಹ್ಮವೆಂದು ಸತ್ಯವಾಗಿ ನುಡಿದ. ಯಾಜ್ಞವಲ್ಕ್ಯ: ಓ ಜನಕನೇ! ಗರ್ಧಭೀವಿಪೀತನೆನ್ನುವ ಮುನಿ ಶ್ರೋತ್ರಬ್ರಹ್ಮಕ್ಕೆ ಶರೀರವನ್ನು, ಆಶ್ರಯವನ್ನು ತಿಳಿಸಿದ್ದಾನೆಯೇ? ಜನಕ: ಆ ಗರ್ಧಭೀವಿಪೀತನು ಶ್ರೋತ್ರಬ್ರಹ್ಮದ ಶರೀರಾಶ್ರಯಗಳನ್ನು ನನಗೆ ತಿಳಿಸಲಿಲ್ಲ. ಯಾಜ್ಞವಲ್ಕ್ಯ: ಸಾರ್ವಭೌಮಾ! ಈ ಶ್ರೋತ್ರಬ್ರಹ್ಮವು ಪರಬ್ರಹ್ಮದ ನಾಲ್ಕನೆಯ ಒಂದು ಭಾಗ. ಜನಕ: ಯಾಜ್ಞವಲ್ಕ್ಯಾ! ಪರಬ್ರಹ್ಮದಲ್ಲಿ ನಾಲ್ಕನೆಯ ಭಾಗವಾದ ಆ ಶ್ರೋತ್ರ ಬ್ರಹ್ಮವನ್ನು ನನಗೆ ತಿಳಿಸಿ ಹೇಳು. ಯಾಜ್ಞವಲ್ಕ್ಯಾ: ಓ ಜನಕನೇ! ಆ ಶ್ರೋತ್ರಬ್ರಹ್ಮಕ್ಕೆ ಶ್ರೋತ್ರವೇ ಶರೀರ. ಅವ್ಯಾಕೃತಾಕಾಶವು ಆ ಶ್ರೋತ್ರಬ್ರಹ್ಮನಿಗೆ ಉತ್ಪತ್ತಿ ಸ್ಥಿತಿ ಲಯಕಾಲಗಳಲ್ಲಿ ಆಶ್ರಯವಾಗಿದೆ. ಪರಬ್ರಹ್ಮದ ನಾಲ್ಕನೆಯ ಒಂದು ಭಾಗವಾದ ಶ್ರೋತ್ರಬ್ರಹ್ಮನನ್ನು ಅನಂತವಾಗಿ ಉಪಾಸಿಸಬೇಕು. ಜನಕ : ಓ ಯಾಜ್ಞವಲ್ಕ್ಯಾ! ಅನಂತವೆಂದರೆ ಯಾವುದು? ಯಾಜ್ಞವಲ್ಕ್ಯ: ಓ ಜನಕನೇ! ದಿಕ್ಕುಗಳೇ ಅನಂತವಾದುವು. ಏಕೆಂದರೆ ಯಾರಾದರೂ ಪೂರ್ವ ಮೊದಲಾದ ದಿಕ್ಕುಗಳಲ್ಲಿ ಯಾವ ದಿಕ್ಕನ್ನಾಗಲೀ ಅನುಸರಿಸಿ ಹೋದಲ್ಲಿ, ಆ ದಿಕ್ಕಿನ ಕೊನೆಯನ್ನು ಹೊಂದುವುದೇ ಇಲ್ಲ. ಆದ್ದರಿಂದ ದಿಕ್ಕುಗಳು ಅನಂತವಾದವುಗಳು. ಓ ಜನಕನೇ! ಆ ದಿಕ್ಕುಗಳೇ ಶ್ರೋತ್ರರೂಪ. ಆ ಶ್ರೋತ್ರವೇ ಪರಬ್ರಹ್ಮ ಸ್ವರೂಪ. ಶ್ರೋತ್ರಬ್ರಹ್ಮವನ್ನು ಉಪಾಸಿಸುವವನನ್ನು ಶ್ರೋತ್ರವು ಬಿಟ್ಟುಹೋಗುವುದಿಲ್ಲ. ಅವನನ್ನು ಸಮಸ್ತ ಭೂತಗಳು, ಗೋವು ಕರುವನ್ನು ಪ್ರೇಮಿಸಿದಂತೆ ಪ್ರೇಮಿಸುತ್ತವೆ. ಈ ಶ್ರೋತ್ರ ಬ್ರಹ್ಮೋಪಾಸಕನು (ಇಲ್ಲಿಯೇ) ಇಲ್ಲೇ ದೈವಸ್ವರೂಪನಾಗಿ ದೇಹಾಪಾತಾನಂತರ ದೇವತೆಗಳನ್ನು ಹೊಂದುವನು. ಜನಕ: ಓ ಯಾಜ್ಞವಲ್ಕ್ಯಾ! ನಿನಗೆ, ಆನೆಗಳಿಗೆ ಸಮಾನವಾದ ಸಾವಿರ ಎತ್ತುಗಳನ್ನು ಕೊಡುತ್ತೇನೆ. ಯಾಜ್ಞವಲ್ಕ್ಯ, ಓ ಜನಕನೇ! ನಮ್ಮ ತಂದೆ, ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ, ಶಿಷ್ಯನಿಂದ ಧನವನ್ನು ತೆಗೆದುಕೊಳ್ಳಬಾರದೆಂದು ನನಗೆ ಬೋಧಿಸಿರುವನು. ನನಗೂ ಅದೇ ಅಭಿಪ್ರಾಯ. ಆದ್ದರಿಂದ ನಾನು ಗೋಧನವನ್ನು ನಿಮ್ಮಿಂದ ತೆಗೆದುಕೊಳ್ಳಲಾರೆ.

**ಮಂ.ಶ್ಲೋ॥ ಯದೇವ ತೇ ಕಶ್ಚಿದಬ್ರವೀತ್ತತ್ ಶೃಣವಾಮೇತ್ಯಬ್ರವೀನ್ಮೇ ಸತ್ಯಕಾಮೋ ಜಾಬಾಲೋ ಮನೋ ವೈ ಬ್ರಹ್ಮೇತಿ ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಜ್ಜಾಬಾಲೋऽಬ್ರವೀನ್ಮನೋ ವೈ ಬ್ರಹ್ಮೇತ್ಯಮನಸೋ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ**

ತಸ್ಯಾಯತನಂ ಪ್ರತಿಷ್ಠಾಂ ನಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ನವೈ ನೋ ಬ್ರೂಹಿ ಯಾಜ್ಞವಲ್ಕ್ಯ ಮನ ಏವಾಯತನಮಾಕಾಶಃ ಪ್ರತಿಷ್ಠಾಽಽನನ್ದ ಇತ್ಯೇನದುಪಾಸೀತ ಕಾ ಆನನ್ದತಾ ಯಾಜ್ಞವಲ್ಕ್ಯಾ ಮನ ಏವ ಸಮ್ರಾಡಿತಿ ಹೋವಾಚ ಮನಸಾ ವೈ ಸಮ್ರಾಟ್ ಸ್ತ್ರೀಯಮಭಿಹಾರ್ಯತೇ ತಸ್ಯಾಂ ಪ್ರತಿರೂಪಃ ಪುತ್ರೋ ಜಾಯತೇ ಸ ಆನನ್ದೋ ಮನೋ ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ಮನೋ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ (6)

ತಾ : ಯಾಜ್ಞವಲ್ಕ್ಯ: ನಿನಗೆ ಇನ್ಯಾರಾದರೂ ಏನನ್ನಾದರೂ ತಿಳಿಸಿಕೊಟ್ಟಿದ್ದರೆ ಅವುಗಳನ್ನು ಸಹ ತಿಳಿಸುವಂತಹನಾಗು. ಜನಕ: ಒಳ್ಳೆಯ ತಂದೆ, ತಾಯಿ ಗುರುಗಳು ಇದ್ದವರಂತೆ, ಸತ್ಯಕಾಮ ಜಾಬಾಲನು ಮನಸ್ಸು ಬ್ರಹ್ಮವೆಂದು ನನಗೆ ಬೋಧಿಸಿರುವನು. ಏಕೆಂದರೆ ಮನಸ್ಸು ಇಲ್ಲದವನು ಏನನ್ನು ತಾನೆ ಮಾಡಬಲ್ಲ? ಯಜ್ಞ: ಮನೋಬ್ರಹ್ಮದ ಶರೀರವನ್ನು ಪ್ರತಿಷ್ಠೆಯನ್ನು ಆತ ನಿನಗೆ ತಿಳಿಸಿರುವನೇ (ಆಯತನ=ಶರೀರ ನಿವಾಸ, ಪ್ರತಿಷ್ಠೆ=ಆಧಾರ) ತಿಳಿದಿದ್ದರೆ ನನಗೆ ವಿವರಿಸಿ ಹೇಳು. ಜನಕ: ತಿಳಿಸಿಲ್ಲ. ಯಜ್ಞ: ಓ ರಾಜಾ! ಅದು ಬ್ರಹ್ಮದ ಒಂದು ಪಾದ ಮಾತ್ರ; ಜನಕ: ಆ ಪೂರ್ತಿಯಾದ ತತ್ತ್ವವನ್ನು ನನಗೆ ತಿಳಿಸಿಕೊಡು. ಯಾಜ್ಞ: ಮನಸ್ಸೇ ಆನಂದ. ಮನಸ್ಸಿನಿಂದಲೇ ಮನುಷ್ಯನು ಸ್ತ್ರೀಯನ್ನು ವಾಂಛಿಸುವನು. ಆಕೆಗೆ ತನ್ನಂತಹ ಮಗನೇ ಹುಟ್ಟುವನು. ಆ ಪುತ್ರನು ಆನಂದ ರೂಪನಾಗಿರುವನು. ಆದ್ದರಿಂದ ರಾಜಾ ಮನಸ್ಸೇ ಬ್ರಹ್ಮ. ಆ ಮನೋಬ್ರಹ್ಮೋಪಾಸಕನನ್ನು ಮನಸ್ಸು ಬಿಟ್ಟುಹೋಗುವುದಿಲ್ಲ. ಇವನನ್ನು ಸಮಸ್ತ ಭೂತಗಳು ಪ್ರೇಮಿಸುತ್ತವೆ. ಯಾರು ಈ ಪ್ರಕಾರವಾಗಿ ತಿಳಿದುಕೊಂಡವರಾಗಿ ಮನೋಬ್ರಹ್ಮವನ್ನು ಉಪಾಸನೆ ಮಾಡುತ್ತಿರುವನೋ, ಅವನು ಇಲ್ಲಿ ದೇವರಾಗಿ, ದೇವತೆಗಳನ್ನು ಹೊಂದುವನು. ಜನಕ ಮಹಾರಾಜ: ಆನೆಗಳಂತಹ ಸಾವಿರ ವೃಷಭಗಳನ್ನು ಕೊಡುತ್ತಿದ್ದೇನೆ. ಸ್ವೀಕರಿಸು." ಯಾಜ್ಞವಲ್ಕ್ಯ: ಶಿಷ್ಯನು ಕೃತಾರ್ಥನಾಗದೆ ಧನವನ್ನು ಪಡೆಯಲಾಗದು ಎಂದು ನನ್ನ ತಂದೆ ಬೋಧಿಸಿದ್ದಾನೆ. ಆದ್ದರಿಂದ ನಾನು ಸ್ವೀಕರಿಸಲಾರೆ.

ಮಂ.ಶ್ಲೋ|| ಯದೇವ ತೇ ಕಶ್ಚಿದಬ್ರವೀತ್ತತ್ ಶೃಣವಾಮೇತ್ಯಬ್ರವೀನ್ಮೇ ವಿದಗ್ಧಃ ಶಾಕಲ್ಯೋ ಹೃದಯಂ ವೈ ಬ್ರಹ್ಮೇತಿ ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛಾ-ಕಲ್ಯೋಽಬ್ರವೀದ್ಧೃದಯಂ ವೈ ಬ್ರಹ್ಮೇತ್ಯಹೃದಯಸ್ಯ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವಿದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ನವೈ ನೋ ಬ್ರೂಹಿ ಯಾಜ್ಞವಲ್ಕ್ಯ ಹೃದಯಮೇವಾಯತನಮಾಕಾಶಃ ಪ್ರತಿಷ್ಠಾ ಸ್ಥಿತಿರಿತ್ಯೇನದುಪಾಸೀತ ಕಾ ಸ್ಥಿತತಾ ಯಾಜ್ಞವಲ್ಕ್ಯ ಹೃದಯಮೇವ ಸಮ್ರಾಡಿತಿ ಹೋವಾಚ ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಮಾಯತನಗ್ಂ ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಂ ಪ್ರತಿಷ್ಠಾ ಹೃದಯೇ ಹ್ಯೇವ ಸಮ್ರಾಟ್ ಸರ್ವಾಣಿಭೂತಾನಿ ಪ್ರತಿಷ್ಠಿತಾನಿ ಭವನ್ತಿ

**ಹೃದಯಂ ವೈ ಸಮ್ರಾಟ್ ಪರಮಂ ಬ್ರಹ್ಮನೈನಗ್ಂ ಹೃದಯಂ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾಽ ಮೇಮನ್ಯತ ನಾ ನನುಶಿಷ್ಯ ಹರೇತೇತಿ (7)**

ತಾ : ಯಾಜ್ಞವಲ್ಕ್ಯ: ಇನ್ಯಾರು ಈ ಆತ್ಮತತ್ತ್ವವನ್ನು ಕುರಿತು ಹೇಳಿರುವರೋ ನನಗೆ ತಿಳಿಸು. ಜನಕ: ಶಕಲನ ಮಗನಾದ ವಿದಗ್ಧನೆಂಬ ಋಷಿಯು ಹೃದಯವೇ (ಬುದ್ಧಿಯೇ) ಬ್ರಹ್ಮವೆಂದು ನನಗೆ ಹೇಳಿರುವನು. ತಾಯಿಯುಳ್ಳವನೂ, ತಂದೆಯುಳ್ಳವನೂ, ಆಚಾರ್ಯನನ್ನು ಹೊಂದಿರುವವನೂ ಯಾವ ಪ್ರಕಾರವಾಗಿ ಸತ್ಯವನ್ನು ನುಡಿಯುವನೋ, ಆ ಪ್ರಕಾರವಾಗಿ ಶಾಕಲ್ಯನು ಸತ್ಯವನ್ನೇ ಹೇಳಿರುವನು. ಹೃದಯವಿಲ್ಲದವನಿಗೆ ಏನು ಲಭ್ಯವಾಗಲು ಸಾಧ್ಯ? ಯಾಜ್ಞವಲ್ಕ್ಯ: ಓ ಜನಕನೇ! ಆ ಹೃದಯ ಪರಬ್ರಹ್ಮದ ಶರೀರವನ್ನು ಆಶ್ರಯವನ್ನು ಕುರಿತು ಹೇಳಿರುವನೇ? ಜನಕ: ನನಗೆ ಆ ವಿಷಯವನ್ನು ಹೇಳಲಿಲ್ಲ. ಗುರುದೇವ! ನನಗೆ ಆ ಪೂರ್ಣ ತತ್ವವನ್ನು ತಿಳಿಸಿಕೊಡು. ಯಾಜ್ಞ: ಹೃದಯವೇ ಆಯತನ. ಆಕಾಶವೇ ಪ್ರತಿಷ್ಠೆ ಸ್ಥಿತಿಯೆಂದು ಉಪಾಸಿಸು. ಜನಕ: ಸ್ಥಿತಿಯೆಂದರೆ ಏನು? ಯಾಜ್ಞ:- ರಾಜಾ! ಹೃದಯವೇ ಸ್ಥಿತಿ. ಹೃದಯವೇ ಸರ್ವ ಭೂತಗಳಿಗೆ ಆಶ್ರಯಸ್ಥಾನ. ಸರ್ವಭೂತಗಳ ಪ್ರತಿಷ್ಠೆ ಆಧಾರ. ಹೃದಯದಿಂದಲೇ ಎಲ್ಲ ಭೂತಗಳು ಪ್ರತಿಷ್ಠಿತವಾಗಿವೆ. ಯಾಜ್ಞ:- ರಾಜನೇ! ಹೃದಯವೇ ಪರಬ್ರಹ್ಮ. ಇದನ್ನು ಅರಿತು ಉಪಾಸಿಸುವವನಿಗೆ ಬ್ರಹ್ಮವು ದೂರವಾಗುವುದಿಲ್ಲ. ಎಲ್ಲ ಭೂತಗಳು ಈತನ ಬಳಿಗೆ ಹೋಗುವುವು. ಆತನು ದೇವತೆಯಾಗಿ ದೇವತೆಗಳ ಬಳಿಗೆ ಹೋಗುವನು. ಜನಕ: ಆನೆಗಳಷ್ಟು ಬಲವಾದ ಸಾವಿರ ಗೋವುಗಳನ್ನು ನಿನಗೆ ಕೊಡುತ್ತೇನೆ. ಯಾಜ್ಞವಲ್ಕ್ಯ: ನೀನು ಪೂರ್ಣವಿದ್ಯೆಯನ್ನು ಗ್ರಹಿಸದೆ ನಾನು ನಿನ್ನ ದಾನವನ್ನು ಸ್ವೀಕರಿಸಲಾರೆ. ಇದು ನನ್ನ ತಂದೆಯ ಆಜ್ಞೆ. ಎಂದು ಮತ್ತೆ ನುಡಿದ. ಈ ಬ್ರಾಹ್ಮಣಗಳಲ್ಲಿ ಬೋಧನೆಗಳ ಸಾರಾಂಶಗಳು ಇಂತಿವೆ.

| ಬೋಧಿಸಿದ ಋಷಿ | ಪರಬ್ರಹ್ಮ ಸ್ವರೂಪ | ಆಯತನ | ಪ್ರತಿಷ್ಠೆ | ಉಪಾಸನಾ ರೂಪ |
|---|---|---|---|---|
| ಜಿತ್ವಾ ಋಷಿ | ವಾಕ್ | ನಿವಾಸ ಅಥವಾ | ಆಕಾಶ | ಪ್ರಿಯತ್ವ |
| ಉದಕ | ಪ್ರಾಣ | ಪ್ರಾಣ | ಆಕಾಶ | ಸತ್ಯತ್ವ |
| ಬರ್ಕ | ನೇತ್ರ | ನೇತ್ರ | ಆಕಾಶ | ಸತ್ಯತ್ವ |
| ಗರ್ದಬೀವಿಪೀತ | ಶ್ರೋತ್ರ | ಶೋತ್ರ | ಆಕಾಶ | ಆನಂತತ್ವ |
| ಸತ್ಯಕಾಮ | ಮನಸ್ಸು | ಮನಸ್ಸು | ಆಕಾಶ | ಆನಂದ |
| ಶಾಕಲ್ಯ | ಹೃದಯ | ಹೃದಯ | ಆಕಾಶ | ಸ್ಥಿತಿ |

# ಷಷ್ಠಾಧ್ಯಾಯ - ದ್ವಿತೀಯ ಬ್ರಾಹ್ಮಣಂ

ಮಂ.ಶ್ಲೋ॥ ಜನಕೋ ಹ ವೈದೇಹಃ ಕೂರ್ಚಾದುಪಾವಸರ್ಪನ್ನುವಾಚ ನಮಸ್ತೇಽಸ್ತು ಯಾಜ್ಞವಲ್ಕ್ಯಾನು ಮಾ ಶಾಧೀತಿ ಸಹೋವಾಚ ಯಥಾ ವೈ ಸಮ್ರಾಣ್ಮಹಾನ್ತ ಮಧ್ವಾನಮೇಷ್ಯನ್ ರಥಂ ವಾ ನಾವಂ ವಾ ಸಮಾದದೀತ್ಯೈವಮೇ ವೈ ತಾಭಿರುಪನಿಷದ್ಭಿಃ ಸಮಾಹಿತಾತ್ಮಾಽಸ್ಯೇವಂ ಬೃನ್ದಾರಕ ಆಢ್ಯಸ್ಸನ್ನಧೀತ ವೇದ ಉಕ್ತೋಪನಿಷತ್ಕ ಇತೋ ವಿಮುಚ್ಯಮಾನಃ ಕ್ವ ಗಮಿಷ್ಯಸೀತಿ ನಾಹಂ ತದ್ಭಗವನ್ವೇದ ಯತ್ರ ಗಮಿಷ್ಯಾಮೀತ್ಯಥ ವೈ ತೇಽಹಂ ತದ್ವಕ್ಷ್ಯಾಮಿ ಯತ್ರ ಗಮಿಷ್ಯಸೀತಿ ಬ್ರವೀತು ಭಗವಾನಿತಿ (1)

ತಾ : ವಿದೇಹದೇಶದ ಚಕ್ರವರ್ತಿ ಜನಕ ಮಹಾರಾಜನು ತನ್ನ ಆಸನದಿಂದ ಎದ್ದು ಯಾಜ್ಞವಲ್ಕ್ಯನ ಪಾದಗಳಿಗೆ ನಮಸ್ಕರಿಸಿ, ನನಗೆ ವಿದ್ಯೆಯನ್ನು ಬೋಧಿಸಿ ಎಂದು ಕೇಳಿಕೊಂಡ. ಯಾಜ್ಞವಲ್ಕ್ಯ ಮುನಿಯು:- "ಓ ರಾಜಾ! ದೂರ ದೇಶಕ್ಕೆ ಹೋಗಬೇಕೆಂದುಕೊಳ್ಳುವವನು ರಥವನ್ನೋ, ಇಲ್ಲವೆ ನಾವೆಯನ್ನೋ, ಸಿದ್ಧಪಡಿಸಿಕೊಳ್ಳುವಂತೆ, ನೀನು ಬ್ರಹ್ಮಜ್ಞಾನಿಯಾಗಬೇಕೆಂದು ಉಪನಿಷತ್ತುಗಳನ್ನು ಅಭ್ಯಾಸ ಮಾಡಿ, ಸ್ಥಿರಚಿತ್ತನಾಗಿರುವೆ. ಪೂಜ್ಯನೂ, ಈಶ್ವರನೂ, ವೇದಾಧ್ಯಯನ ಮಾಡಿದವನು, ಆಚಾರ್ಯರಿಂದ ಸರ್ವೋಪನಿಷತ್ತುಗಳನ್ನು ಉಪದೇಶಿಸಿದಂತಹವನು ಆಗಿದ್ದೀಯೆ. ಈ ದೇಹವನ್ನು ಬಿಟ್ಟು ನೀನು ಎಲ್ಲಿಗೆ ಹೋಗಬಲ್ಲೆ? ಜನಕ: ಪೂಜ್ಯನಾದ ಓ ಯಾಜ್ಞವಲ್ಕ್ಯಾ! ನಾನು ಎಲ್ಲಿಗೆ ಹೋಗುವೆನೋ, ಯಾವ ವಸ್ತುವನ್ನು ಹೊಂದುವೆನೋ ನನಗೆ ಗೊತ್ತಿಲ್ಲ. ಯಾಜ್ಞ: ಜನಕನೇ! ನಿನಗೆ ತಿಳಿಯದೇ ಹೋದರೆ ನಾನು ನೀನು ಹೊಂದಬಲ್ಲ ವಸ್ತುವನ್ನು ಕುರಿತು ಹೇಳುವೆನು. ಜನಕ: ಯಾಜ್ಞವಲ್ಕ್ಯ! ನನ್ನನ್ನು ಅನುಗ್ರಹಿಸಿ ಬೋಧಿಸಿರಿ.

ಮಂ.ಶ್ಲೋ॥ ಇನ್ಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ಪುರುಷಸ್ತಂ ವಾ ಏತಮಿನ್ಧಗ್ಂ ಸನ್ತ -ಮಿನ್ದ್ರ ಇತ್ಯಾಚಕ್ಷತೇ ಪರೋಕ್ಷೇಣೈವ ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ (2)

ತಾ : ಓ ಜನಕನೇ! ದೇವತೆಗಳು ಅಪ್ರತ್ಯಕ್ಷವಾಗಿ ಪ್ರೀತಿಯುಳ್ಳವರೂ, ಪ್ರತ್ಯಕ್ಷವಾಗಿ ದ್ವೇಷಿಸುವರೂ ಆಗುತ್ತಿದ್ದಾರೆ. ಈ ದಕ್ಷಿಣ ನೇತ್ರದಲ್ಲಿ ಪ್ರಕಾಶಿಸುತ್ತಿರುವ ಪುರುಷನು. ಈ ಸೂರ್ಯಮಂಡಲದಲ್ಲಿ ಪ್ರಕಾಶಿಸುವ ಪುರುಷನೂ ಒಬ್ಬನಾಗಿ ಪ್ರತ್ಯಕ್ಷವಾಗಿ ಇನ್ಧನೆಂಬ ಹೆಸರುಳ್ಳವನಾಗಿದ್ದಾನೆ. ಈ ಪುರುಷನು ಅಪ್ರತ್ಯಕ್ಷವಾಗಿ ಇಂದ್ರನೆಂದು ಕರೆಸಿಕೊಳ್ಳುವನು. ಈತನೇ ಜಾಗ್ರದವಸ್ಥೆಯಲ್ಲಿ ದಕ್ಷಿಣನೇತ್ರದಲ್ಲಿ ಪ್ರಕಾಶಿಸುವ ಪುರುಷ. ನೀನು ವಿಶ್ವವೆನ್ನುವ ಹೆಸರುಳ್ಳ ಪುರುಷನಾಗುತ್ತಿರುವೆಯೆಂದು ಯಾಜ್ಞವಲ್ಕ್ಯನು ಬೋಧಿಸಿದ.

ಮಂ.ಶ್ಲೋ॥ ಅಥೈತದ್ವಾಮೇಕ್ಷಿಣಿ ಪುರುಷರೂಪಮೇಷಾಸ್ಯ ಪತ್ನೀ ವಿರಾಟ್ ತಯೋರೇಷ ಸಗ್ಂ ಸ್ತಾವೋ ಯ ಏಷೋಽನ್ತರ್ಹೃದಯ ಆಕಾಶೋಽಥೈನಯೋರೇತದನ್ನಂ ಯ ಏಷೋಽ-ನ್ತರ್ಹೃದಯೇ ಲೋಹಿತ ಪಿಣ್ಡೋಽಥೈನಯೋರೇತತ್ ಪ್ರಾವರಣಂ ಯದೇತದನ್ತರ್ಹೃದಯೇ

**ಜಾಲಕಮಿನಾಥೈನಯೋರೇಷಾಸೃತಿಃ ಸಞ್ಚರಣೀ ಯೈಷಾ ಹೃದಯಾದೂರ್ಧ್ವಾ-ನಾಡ್ಯುಚ್ಚರತಿ ಯಥಾ ಕೇಶಃ ಸಹಸ್ರಧಾ ಭಿನ್ನ ಏವಮಸ್ಯೈತಾ ಹಿತಾನಾಮ ನಾಡ್ಯೋಽ-ನ್ತರ್ಹೃದಯೇ ಪ್ರತಿಷ್ಠಿತಾ ಭವನ್ತ್ಯೇತಾಭಿರ್ವಾ ಏತದಾಸ್ರವದಾ ಸ್ರವತಿ ತಸ್ಮಾದೇಷ ಪ್ರವಿವಿಕ್ತಾಹೋರತರ ಇವೈವ ಭವತ್ಯಸ್ಮಾಚ್ಛಾರೀರಾದಾತ್ಮನಃ (3)**

ತಾ : ಓ ಜನಕ ಮಹಾರಾಜಾ! ಬಲಗಣ್ಣಿನಲ್ಲಿ ಪ್ರಕಾಶಿಸುವ ಪುರುಷನು ಭೋಕ್ತನು (ಭರ್ತ) ಪತಿಯು, ಆದ ಇಂದ್ರನು ಎಡಗಣ್ಣಿನಲ್ಲಿರುವ ಪುರುಷ ರೂಪನು. ಭೋಗ್ಯವಾದ ಅನ್ನ, ಪತ್ನಿಯಾದ ಇಂದ್ರಾಣಿಯು ಆಗುವರು. (ಆಗಿದ್ದಾರೆ.) ಇದೇ ಜಾಗ್ರದವಸ್ಥೆಯಲ್ಲಿ ವಿಶ್ವನೆಂಬ ಹೆಸರಿನೊಂದಿಗೆ ಹೇಳತಕ್ಕ ಎಡಬಲ ಕಣ್ಣುಗಳಲ್ಲಿನ ಸ್ತ್ರೀಪುರುಷ ದ್ವಂದ್ವ. ಈ ಸ್ತ್ರೀಪುರುಷ ದ್ವಂದ್ವಕ್ಕೆ, ಹೃದಯದಲ್ಲಿನ ಮಾಂಸಪಿಂಡದ ಮಧ್ಯೆ ಇರುವ ಚಿದಾಕಾಶವು ಸಂಭೋಗಸ್ಥಾನ. ಹೃದಯದಲ್ಲಿನ ಮೇಲ್ಭಾಗ ನಾಡಿಯು ಅದರ ಮಾರ್ಗ. ಅಂದರೆ ಸ್ವಪ್ನದಿಂದ ಜಾಗ್ರತ್ತಿಗೆ, ಜಾಗ್ರತ್ತಿನಿಂದ ಸ್ವಪ್ನಕ್ಕೆ ಹೋಗುವ ಮಾರ್ಗ. ಸಹಸ್ರಶಃ ವಿಭಾಗವನ್ನಾಗಿ ಮಾಡಿ ಕೇಶದಂತೆ ಸೂಕ್ಷ್ಮವಾದ ಹಿತವೆನ್ನುವ ಹೆಸರುಳ್ಳ ನಾಡಿಗಳು ಅಂತರ್‌ಹೃದಯದಲ್ಲಿ (ಹೃದಯಾಂತರಾಳದಲ್ಲಿ) ಪ್ರತಿಷ್ಠಿತವಾಗಿವೆ. ಅನ್ನವು ಈ ನಾಡಿಗಳ ದ್ವಾರದಿಂದ ಹೋಗುವುದು. ಆತನು ಈ ಶರೀರಾತ್ಮಕ್ಕಿಂತ ಸೂಕ್ಷ್ಮತರ ಆಹಾರವು ಉಳ್ಳವನಾಗಿರುತ್ತಾನೆ. ಆತ್ಮಾಸ್ತಿತ್ವವು ಅತ್ಯಂತ ಸೂಕ್ಷ್ಮವಾದುದು.

**ಮಂ.ಶ್ಲೋ॥ ತಸ್ಯ ಪ್ರಾಚೀ ದಿಕ್ ಪ್ರಾಞ್ಚಃ ಪ್ರಾಣಾ ದಕ್ಷಿಣಾ ದಿಗ್ದಕ್ಷಿಣೇ ಪ್ರಾಣಾಃ ಪ್ರತೀಚೀ ದಿಕ್ ಪ್ರತ್ಯಞ್ಚಃ ಪ್ರಾಣಾ ಉದೀಚೀ ದಿಗುದಞ್ಚಃ ಪ್ರಾಣಾ ಊರ್ಧ್ವಾ ದಿಗೂರ್ಧ್ವಾಃ ಪ್ರಾಣಾ ಅವಾಚೀ ದಿಗವಾಞ್ಚಃ ಪ್ರಾಣಾಃ ಸರ್ವಾದಿಶಃ ಸರ್ವೇ ಪ್ರಾಣಾಸ್ಸ ಏಷ ನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇ ಶೀರ್ಯೋ ನಹಿ ಶೀರ್ಯತೇ ಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತ್ಯಭಯಂ ವೈ ಜನಕ ಪ್ರಾಪ್ತೋಽಸೀತಿ ಹೋವಾಚ ಯಾಜ್ಞವಲ್ಕ್ಯಃ ಸ ಹೋವಾಚ ಜನಕೋ ವೈದೇಹೋ ಭಯಂತ್ವಾ ಗಚ್ಛತಾದ್ಯಾಜ್ಞವಲ್ಕ್ಯ ಯೋನೋ ಭಗವನ್ನಭಯಂ ವೇದಯಸೇ ನಮಸ್ತೇಽಸ್ತ್ವಿ-ಮೇ ವಿದೇಽಹಾ ಅಯಮಹಾಮಸ್ಮೀ3 ಇತಿ (4)**

ತಾ : ಪೂರ್ವ ದಿಕ್ಕಿನವನಿಗೆ ಪೂರ್ವ ಪ್ರಾಣಗಳು, ದಕ್ಷಿಣ ದಿಕ್ಕಿನವನಿಗೆ ದಕ್ಷಿಣ ಪ್ರಾಣಗಳು, ಪಶ್ಚಿಮ ದಿಕ್ಕು ಪಶ್ಚಿಮ ಪ್ರಾಣಗಳು, ಉತ್ತರ ದಿಕ್ಕು ಅವನಿಗೆ ಉತ್ತರ ಪ್ರಾಣಗಳು. ಎಲ್ಲ ದಿಕ್ಕುಗಳು ಎಲ್ಲ ಪ್ರಾಣಗಳು ಅದೇ ಆಗಿವೆ. ಆ ಆತ್ಮವು, ನೇತಿ, ನೇತಿ ಇದಲ್ಲ ಇದಲ್ಲ, ಎಂದು ವರ್ಣಿಸುವಂತಹುದಾಗಿ ಬಂಧಿಸಲಾರದಂತಹುದಾಗಿದೆ. ಏಕೆಂದರೆ ಅದು ಅವಿನಾಶಿ. ಯಾರೂ ಆತ್ಮವನ್ನು ನಾಶಗೊಳಿಸ-ಲಾರರು. ಅದು ಅಸಂಗವಾದುದು. ಆತ್ಮಕ್ಕೆ ಆಸಕ್ತಿ ಇಲ್ಲ. ಅದನ್ನು ಕಟ್ಟಿ ಹಾಕಲಾಗುವುದಿಲ್ಲ. ಅದನ್ನು ಯಾರೂ ವ್ಯಥೆಗೀಡುಮಾಡಲಾರರು. ಜನಕರಾಜಾ! ನಿನಗೆ ಅಭಯವು ಪ್ರಾಪ್ತವಾಗಿದೆ. ಅಭಯ ಸ್ವರೂಪನೆಂದು ಈ ವಿಧವಾಗಿ ಯಾಜ್ಞವಲ್ಕ್ಯನು ನುಡಿದ. ಆಗ ಜನಕನು:- ಯಾಜ್ಞವಲ್ಕ್ಯ ಮುನಿ! ನೀನು ಭಯರಹಿತ ಬ್ರಹ್ಮವನ್ನು ತಿಳಿಸಿರುವೆ. ನಿನಗೆ ನಮಸ್ಕಾರ ಮಾಡುತ್ತಿದ್ದೇನೆ. ವಿದೇಹ ದೇಶದಲ್ಲಿ ಸಂಬಂಧಿಸಿದುದನ್ನೆಲ್ಲವನ್ನೂ ಯಥೇಚ್ಛವಾಗಿ ನೀನು ಅನುಭವಿಸುವಂತಾಗಲಿ! ಈ ನಾನು ಕೂಡಾ ನಿನ್ನವನೇ. (ಈ ಉಪದೇಶವು ಅಮೂಲ್ಯವಾದುದು.)

# ಷಷ್ಠಾಧ್ಯಾಯ - ತೃತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಜನಕಗ್ಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ ಸ ಮೇನೇ ನ ವದಿಷ್ಯ ಇತ್ಯಥ ಹ ಯಜ್ಜನಕಶ್ಚ ವೈದೇಹೋ ಯಾಜ್ಞವಲ್ಕ್ಯಶ್ಚಾಗ್ನಿಹೋತ್ರೇ ಸಮುದಾತೇ ತಸ್ಮೈ ಹ ಯಾಜ್ಞವಲ್ಕ್ಯೋ ವರಂ ದದೌ ಸಹ ಕಾಮ ಪ್ರಶ್ನಮೇವ ವವ್ರೇತಗ್ಂ ಹಾಸ್ಮೈ ದದೌ ತಗ್ಂ ಹ ಸಮ್ರಾಡೇವ ಪೂರ್ವಂ ಪಪ್ರಚ್ಛ (1)**

ತಾ : ಯಾಜ್ಞವಲ್ಕ್ಯನು ಜನಕ ಮಹಾರಾಜನನ್ನು ನೋಡಲು ಹೋಗುವ ಮಾರ್ಗದಲ್ಲಿ ರಾಜನ ಸನ್ನಿಧಿಯಲ್ಲಿ ಸ್ವಲ್ಪವೂ ಮಾತನಾಡದೆ ಸುಮ್ಮನಿರಬೇಕೆಂದು ಸಂಕಲ್ಪಿಸಿಕೊಂಡ. ಹೀಗೆ ಸಂಕಲ್ಪ ಮಾಡಿಕೊಂಡರೂ ಯಾಜ್ಞವಲ್ಕ್ಯನು ಜನಕ ಮಹಾರಾಜನು ಕೇಳಿದ ಪ್ರಶ್ನೆಗಳಿಗೆ ತೃಪ್ತಿಯಾಗಿ ಉತ್ತರ ಕೊಡುತ್ತಿದ್ದ. ಈ ವಿಧವಾಗಿ ಸಂಕಲ್ಪಕ್ಕೆ ವಿರೋಧವಾಗಿ ನಡೆದುಕೊಳ್ಳಲು ಕಾರಣವೇನೆಂದರೆ ಹಿಂದೆ ಜನಕ ಯಾಜ್ಞವಲ್ಕ್ಯರಿಬ್ಬರೂ ಅಗ್ನಿಹೋತ್ರದ ವಿಷಯವಾಗಿ ಸಂವಾದವನ್ನು ನಡೆಸಿದಾಗ, ಅಗ್ನಿಹೋತ್ರ ವಿಷಯವಾಗಿ ವಿಜ್ಞಾನವನ್ನು ಹೊಂದಿ ಸಂತೋಷಪಟ್ಟವನಾಗಿ ಜನಕನಿಗೆ ಒಂದು ವರವನ್ನಿತ್ತ. ಆ ವರದಾನ ಸಾಮರ್ಥ್ಯದಿಂದಲೇ ಜನಕ ಮಹಾರಾಜನು ಯಾಜ್ಞವಲ್ಕ್ಯನು ಸುಮ್ಮನಿದ್ದರೂ ಪ್ರಶ್ನೆಗಳನ್ನು ಹಾಕಿದ.

**ಮಂ.ಶ್ಲೋ॥ ಯಾಜ್ಞವಲ್ಕ್ಯ ಕಿಂ ಜ್ಯೋತಿರಯಂ ಪುರುಷ ಇತಿ। ಆದಿತ್ಯ ಜ್ಯೋತಿಃ ಸಮ್ರಾಡಿತಿ ಹೋವಾಚ ಆದಿತ್ಯೇ ನೈವ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮಕುರುತೇ ವಿಪಲ್ಯೇತೀತ್ಯೇವಮೇವೈ ತದ್ಯಾಜ್ಞವಲ್ಕ್ಯ (2)**

ತಾ : ಜನಕ: ಓ ಯಾಜ್ಞವಲ್ಕ್ಯಾ! ಕರಚರಣಾದ್ಯವಯವಗಳುಳ್ಳ ಈ ಪುರುಷನಿಗೆ ಗಮನಾದಿ ಸಾಧನವಾದ ತೇಜಸ್ಸು ಯಾವುದು? ಯಾಜ್ಞ:- ಓ ಜನಕ ಮಹಾರಾಜಾ! ಈ ಪ್ರಾಕೃತನಾದ ಪುರುಷನು ಸೂರ್ಯ ತೇಜಸ್ಸಿನಿಂದಲೇ ತುಂಬಿದವನಾಗಿದ್ದಾನೆ. ಕ್ಷೇತ್ರಾರಣ್ಯಗಳನ್ನು ಕುರಿತು ಹೋಗುತ್ತಿದ್ದಾನೆ. ಮತ್ತೆ ಬರುತ್ತಾನೆ. ಲೌಕಿಕ ವೈದಿಕ ಕರ್ಮಗಳನ್ನು ಮಾಡುತ್ತಿದ್ದಾನೆ. ಆದ್ದರಿಂದ ಸೂರ್ಯನೇ ತೇಜಸ್ಸೆಂದು ಗ್ರಹಿಸುವಂತಹವನಾಗು. ಜನಕ: ಓ ಯಾಜ್ಞವಲ್ಕ್ಯ! ಅಂಗೀಕರಿಸುತ್ತಿದ್ದೇನೆ.

**ಮಂ.ಶ್ಲೋ॥ ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಕಿಂ ಜ್ಯೋತಿರೇವಾಯಂ ಪುರುಷ ಇತಿ ಚನ್ದ್ರಮಾ ಏವಾಸ್ಯ ಜ್ಯೋತಿರ್ಭವತೀತಿ ಚನ್ದ್ರಮ ಸೈವಾಯಂ ಜ್ಯೋತಿಷಾಸ್ತೇಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತ್ಯೇವಮೇವೈ ತದ್ಯಾಜ್ಞವಲ್ಕ್ಯ (3)**

ತಾ : ಜನಕ: ಯಾಜ್ಞವಲ್ಕ್ಯಾ! ಭಾನುವು (ಸೂರ್ಯನು) ಅಸ್ತಮಿಸಿದಾಗ ಈ ಪುರುಷನು ಯಾವ ಜ್ಯೋತಿಯೊಂದಿಗೆ ಕೂಡಿರುವನು? ಯಾಜ್ಞವಲ್ಕ್ಯ:- ಚಂದ್ರನೇ ಆಗ ಆತನ ಜ್ಯೋತಿ. ಚಂದ್ರಜ್ಯೋತಿಯೊಂದಿಗೆ ಆತನು ಆಗ ಕೂಡಿ ಚಲಿಸುತ್ತಿರುವನು. ಕರ್ಮ ಮಾಡುತ್ತಿರುವನು. ಮತ್ತೆ ಬರುತ್ತಿರುವನು.

**ಮಂ.ಶ್ಲೋ॥ ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಕಿಂ ಜ್ಯೋತಿರೇವಾಯಂ ಪುರುಷ ಇತ್ಯಗ್ನಿರೇವಾಸ್ಯ ಜ್ಯೋತಿರ್ಭವತೀತ್ಯಗ್ನಿನೈವಾಯಂ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತ್ಯೇವಮವೈ ತದ್ಯಾಜ್ಞವಲ್ಕ್ಯ (4)**

ತಾ : ಜನಕ: ಯಾಜ್ಞವಲ್ಕ್ಯಾ! ಸೂರ್ಯ ಚಂದ್ರಾದಿಗಳು ಸಹ ಅಸ್ತಮಿಸಿದಾಗ ಈ ಪುರುಷನಿಗೆ ಜ್ಯೋತಿ ಯಾವುದು? ಯಾಜ್ಞವಲ್ಕ್ಯ : ಆಗ ಅಗ್ನಿಯೇ ಆತನಿಗೆ ಜ್ಯೋತಿ. ಅದರ ಸಹಾಯದಿಂದ ಚಲಿಸುವುದು. ಕರ್ಮಮಾಡುವುದು ಇತ್ಯಾದಿಗಳು ಜರುಗುತ್ತವೆ.

**ಮಂ.ಶ್ಲೋ॥ ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಶಾನ್ತೇಽಗ್ನೌ ಕಿಂ ಜ್ಯೋತಿರೇವಾಯಂ ಪುರುಷ ಇತಿ ವಾಗೇವಾಸ್ಯ ಜ್ಯೋತಿರ್ಭವತೀತಿ ವಾಚೈವಾಯಂ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ ತಸ್ಮಾದ್ವೈ ಸಮ್ರಾಡಪಿ ಯತ್ರ ಸ್ವಃ ಪಾಣಿರ್ನವಿನಿರ್ಜ್ಞಾಯತೇಽಥ ಯತ್ರ ವಾಗುಚ್ಚರತ್ಯುಪೈವ ತತ್ರನ್ಯೇತೀತ್ಯೇವಮವೈತದ್ಯಾಜ್ಞವಲ್ಕ್ಯ (5)**

ತಾ : ಜನಕ: ಯಾಜ್ಞವಲ್ಕ್ಯಾ! ಸೂರ್ಯ, ಚಂದ್ರ, ಅಗ್ನಿ ಇವೆಲ್ಲವೂ ಅಸ್ತಮಿಸಿದಾಗ (ಇಲ್ಲವಾದಾಗ) ಈ ಪುರುಷನಿಗೆ ಜ್ಯೋತಿ ಯಾವುದು? ಯಾಜ್ಞವಲ್ಕ್ಯ: ವಾಕ್ಕೇ ಆತನ ಜ್ಯೋತಿಯಾಗುತ್ತದೆ. ವಾಕ್ಸಹಾಯದಿಂದಲೇ ಆತ ಎಲ್ಲೆಲ್ಲೂ ಓಡಾಡುವಂತಾಗುತ್ತಾನೆ. ಕರ್ಮವನ್ನಾಚರಿಸುವಂತಾಗುತ್ತಾನೆ. ಪುನಃ ಬರುವಂತಾಗುತ್ತಾನೆ. ಓ ರಾಜನೇ! ತನ್ನ ಹಸ್ತವು ಸಹ ತನಗೆ ಕಾಣಿಸದೆ ಇರುವ ಅಂಧಕಾರದಲ್ಲಿ ವಾಕ್ಕು ಯಾವ ದಿಕ್ಕಿನಿಂದ ಬರುವುದೋ ಆ ದಿಕ್ಕಿಗೆ ಮನುಷ್ಯ ಹೋಗುತ್ತಾನಲ್ಲವೆ?!

**ಮಂ.ಶ್ಲೋ॥ ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಶಾನ್ತೇಽಗ್ನೌ ಶಾನ್ತಾಯಾಂ ವಾಚಿ ಕಿಂ ಜ್ಯೋತಿರೇವಾಯಂ ಪುರುಷ ಇತ್ಯಾತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮಕುರುತೇ ವಿಪಲ್ಯೇತೀತಿ (6)**

ತಾ : ಜನಕ: ಓ ಯಾಜ್ಞವಲ್ಕ್ಯಾ! ಈ ಪುರುಷನು ಸೂರ್ಯಚಂದ್ರಾಗ್ನಿ ವಾಕ್ಕುಗಳ್ಯಾವುವೂ ಇಲ್ಲದ ಸಮಯದಲ್ಲಿ ಯಾವ ತೇಜಸ್ಸನ್ನು ಹೊಂದಿರುತ್ತಾನೆ? ಯಾಜ್ಞವಲ್ಕ್ಯ: ಓ ಜನಕನೇ ಈ ಪುರುಷನು ಆತ್ಮ ತೇಜಸ್ಸಿನಿಂದ ತುಂಬಿರುವನು. ಕ್ಷೇತ್ರಾರಣ್ಯಗಳನ್ನು ಕುರಿತು ಹೋಗುವನು. ಮತ್ತೆ ಬರುತ್ತಾನೆ. ಲೌಕಿಕ ವೈದಿಕ ಕರ್ಮಗಳನ್ನಾಚರಿಸುತ್ತಾನೆ. ಆದ್ದರಿಂದ ಈ ಪುರುಷನಿಗೆ ಸೂರ್ಯ ಚಂದ್ರಾಗ್ನಿಗಳು ಇಲ್ಲದಿದ್ದಾಗ ಆತ್ಮವೇ ತೇಜಸ್ಸಾಗಿರುತ್ತದೆ.

**ಮಂ.ಶ್ಲೋ॥ ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ। ಪುರುಷಃ ಸ ಸಮಾನಸ್ಸನ್ನುಭೌ ಲೋಕಾವಸು ಸಞ್ಚರತಿ ಧ್ಯಾಯತೀವ ಲೇಲಾಯತೀವ ಸ ಹಿ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋರೂಪಾಣಿ (7)**

ತಾ : ಜನಕ: ದೇಹೇಂದ್ರಿಯ ಪ್ರಾಣ ಮನಸ್ಸುಗಳಲ್ಲಿ ವಿಜ್ಞಾನ ಸ್ವರೂಪನಾದ ಆತ್ಮ ಯಾವುದು? ಯಾಜ್ಞ:- ಬುದ್ಧಿಯಲ್ಲಿ ಒಳಗಿರುವ ತೇಜೋರೂಪನಾದ ಪುರುಷನು ಆತ್ಮ; ಮತ್ತು ಆ ವಿಜ್ಞಾನ

ಸ್ವರೂಪವಾದ ಆತ್ಮವು ಧ್ಯಾನಿಸುತ್ತಿರುವುದರಿಂದಲೇ ಚಲಿಸುತ್ತಿರುವಂತಿರುವುದರಿಂದಲೇ ಬುದ್ಧಿ-ಯೊಂದಿಗೆ ಸಮಾನ ರೂಪವನ್ನು ತಳೆದು, ಇಹಪರಲೋಕಗಳನ್ನು ಅನುಸರಿಸಿ ತಿರುಗುತ್ತಿದೆ. ಈ ಆತ್ಮವೇ. ಸ್ವಪ್ನ ಸ್ವರೂಪವಾಗಿ ಈ ಲೋಕವನ್ನು ಮೃತ್ಯುವಿನ ರೂಪಗಳಾದ ದೇಹೇಂದ್ರಿಯಗಳನ್ನು ಅತಿಕ್ರಮಿಸಿದೆ. ಪರಿಶುದ್ಧವಾಗಿದೆ.

**ಮಂ.ಶ್ಲೋ॥ ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಮ್ಪದ್ಯಮಾನಃ ಪಾಪ್ಮಭಿಃ ಸಗ್ಂ ಸೃಜ್ಯತೇ ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ (8)**

ತಾ : ಯಾಜ್ಞವಲ್ಕ್ಯ: ಆ ಆತ್ಮಸ್ವರೂಪನಾದ ಈ ಪುರುಷನು, ಜನಿಸಿ ದೇಹವನ್ನು ಹೊಂದಿದವನಾಗಿ ಪಾಪಗಳಿಂದ ಕೂಡಿದವನಾಗಿದ್ದಾನೆ. ಆ ಪುರುಷನು ಬೇರೊಂದು ಶರೀರವನ್ನು ಹೊಂದುತ್ತಾ (ಸತ್ತುಹೋದಮೇಲೆ) ಪಾಪರೂಪವಾದ ದೇಹೇಂದ್ರಿಯಗಳನ್ನು ತ್ಯಜಿಸುತ್ತಾನೆ.

**ಮಂ.ಶ್ಲೋ॥ ತಸ್ಯ ವಾ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಭವತಃ ಇದಂ ಚ ಪರಲೋಕ ಸ್ಥಾನಂ ಚ ಸನ್ಧ್ಯಂ ತೃತೀಯಗ್ಂ ಸ್ವಪ್ನಸ್ಥಾನಂ ತಸ್ಮಿನ್ಸನ್ಧ್ಯೇ ಸ್ಥಾನೇ ತಿಷ್ಠನ್ನೇತೇ ಉಭೇ ಸ್ಥಾನೇ ಪಶ್ಯತೀದಂ ಚ ಪರಲೋಕಸ್ಥಾನಂ ಚ, ಅಥ ಯಥಾ ಕ್ರಮೋಽಯಂ ಪರಲೋಕಸ್ಥಾನೇ ಭವತಿ ತಮಾಕ್ರಮಮಾಕ್ರಮ್ಯೋ ಭಯಾನ್ಪಾಪ್ಮನ ಆನನ್ದಾಗ್ಂಶ್ಚ ಪಶ್ಯತಿ ಸ ಯತ್ರ ಪ್ರಸ್ವಪಿತ್ಯಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾಸ್ವೇನ ಜ್ಯೋತಿಷಾ ಪ್ರಸ್ವಪಿತ್ಯತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ (9)**

ತಾ : ಯಾಜ್ಞವಲ್ಕ್ಯ: ಈ ಲೋಕ ಮತ್ತು ಪರಲೋಕವೆನ್ನುವ ಎರಡು ಸ್ಥಾನಗಳಿವೆ. ಮೂರನೆಯದು ಸ್ವಪ್ನ ಸ್ಥಾನವೆನ್ನುವುದು. ಈ ಎರಡನ್ನೂ ಸೇರಿಸುವಂತಹುದು. ಈ ಪುರುಷನು ಸಂಧಿಯಲ್ಲಿ ನಿಂತು ಈ ಎರಡು ಸ್ಥಾನಗಳ ಕಡೆಗೂ ನೋಡುವನು. ಆತ ತನ್ನ ಸಾಧನೆಗಳನ್ನು ಅನುಸರಿಸಿ ಪರಲೋಕದಲ್ಲಿ ಪಾಪ ಮತ್ತು ಆನಂದವನ್ನು ಅನುಭವಿಸುವನು. ನಿದ್ರಾ ಸಮಯದಲ್ಲಿ ಆತ ಈ ಲೋಕದಲ್ಲಿನ ಸಮಸ್ತ ವಸ್ತುಗಳ ಸೂಕ್ಷ್ಮಾಂಶದಲ್ಲಿದ್ದು ಈ ದೇಹವನ್ನು ಕೆಳಗೆ ಬೀಳಿಸಿ (ಸ್ವಪ್ನದಲ್ಲಿ) ವಾಸನಾರೂಪದಲ್ಲಿ ಸ್ವಯಂ ಪ್ರಕಾಶಮಾನನಾಗಿರುವನು. ಈ ಅವಸ್ಥೆಯಲ್ಲಿ ಪುರುಷನು ಸ್ವಯಂಜ್ಯೋತಿಯಾಗುವನು. ದೃಕ್ಸ್ವರೂಪವಾದ ಆತ್ಮಜ್ಯೋತಿಯು. ಒರೆಯಿಂದ ತೆಗೆದ ಕತ್ತಿಯಂತೆ ಸ್ವಕೀಯ, ರೂಪದಲ್ಲಿ ಪ್ರಕಾಶಿಸುತ್ತದೆ. (ಸ್ವಪ್ನದ್ರಷ್ಟನಾದ ಪುರುಷ ತೈಜಸನು.)

**ಮಂ.ಶ್ಲೋ॥ ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತ್ಯಥ ರಥಾನ್ ರಥಯೋಗಾನ್ಪಥಃ ಸೃಜತೇ ನ ತತ್ರಾನನ್ದಾಮುದಃ ಪ್ರಮುದೋ ಭವನ್ತ್ಯಥಾನನ್ದಾನ್ಮುದಃ ಪ್ರಮುದಃ ಸೃಜತೇ ಸ ತತ್ರ ವೇಶಾನ್ತಾಃ ಪುಷ್ಕರಿಣ್ಯಃ ಸ್ರವನ್ತ್ಯೋ ಭವನ್ತ್ಯಥ ವೇಶಾನ್ತಾಃ ಪುಷ್ಕರಿಣ್ಯ ಸ್ರವನ್ತ್ಯಃ ಸೃಜತೇ ಸ ಹಿ ಕರ್ತಾ (10)**

ತಾ : ಯಾಜ್ಞವಲ್ಕ್ಯ: ಅಲ್ಲಿ ಸ್ವಪ್ನದಲ್ಲಿ ರಥಗಳಾಗಲೀ, ರಥಗಳನ್ನು ಜೋಡಿಸುವ ಕುದುರೆ-ಗಳಾಗಲೀ, ದಾರಿಗಳಾಗಲೀ, ಇಲ್ಲ. ಅವೆಲ್ಲವನ್ನೂ ಆತ್ಮ ಪ್ರಕಾಶದಿಂದ ಮನಸ್ಸೇ ನಿರ್ಮಿಸುವುದು.

ಅಲ್ಲಿ ಪ್ರಿಯವೂ, ಸಂತೋಷವೂ, ಪ್ರಮೋದಗಳ್ಯಾವುವೂ ಇಲ್ಲ. ಅವುಗಳನ್ನು ಕೂಡಾ ಆತನೇ ನಿರ್ಮಿಸುವನು. ಆ ಸ್ವಪ್ನಗಳಲ್ಲಿ, ನೀರಹಳ್ಳಗಳಾಗಲೀ, ಕೆರೆಗಳಾಗಲೀ, ನದಿಗಳಾಗಲೀ ಇರುವುದಿಲ್ಲ. ಮತ್ತೆ ಆ ಸ್ವಪ್ನಗಳಲ್ಲಿ ನೀರಿನ ಚಿಕ್ಕ ಚಿಕ್ಕ ಹಳ್ಳಗಳನ್ನು, ಕೆರೆಗಳನ್ನು, ತಟಾಕಗಳನ್ನು ನದಿಗಳನ್ನು ಸೃಜಿಸುತ್ತಾನೆ. ಆ ಆತ್ಮವೇ ಸರ್ವಕರ್ತನಾಗುವನು.(ನಾಗುತ್ತಿದ್ದಾನೆ.)

**ಮಂ.ಶ್ಲೋ॥ ತದೇತೇ ಶ್ಲೋಕಾ ಭವನ್ತಿಃ ಸ್ವಪ್ನೇ ನ ಶಾರೀರಮಭಿ ಪ್ರಹತ್ಯಾಽಸುಪ್ತಃ ಸುಪ್ತಾನಭಿಚಾಕಶೀತಿ ಶುಕ್ರಮಾದಾಯ ಪುನರೇತಿ ಸ್ಥಾನಗ್ಂ ಹಿರಣ್ಮಯಃ ಪುರುಷ ಏಕಹಗ್ಂಸಃ (11)**

ತಾ : ಈ ಅರ್ಥದಲ್ಲಿ (ದೊಂದಿಗೆ) ಮಂತ್ರಗಳು ಇವೆ. ಚೈತನ್ಯಜ್ಯೋತಿ ಸ್ವಭಾವವನ್ನು, ಜಾಗ್ರತ್ ಸ್ವಪ್ನಗಳನ್ನು, ಇಹಪರಲೋಕಗಳನ್ನು ಪಡೆಯುವಂತಹ ಒಂದೇ ಆದ ಸ್ವಯಂಜ್ಯೋತಿ ಸ್ವರೂಪವಾದ ಈ ಆತ್ಮವು ತಾನು ನಿದ್ರಿಸದೆ, ಸ್ವಪ್ನಾವಸ್ಥೆಯಿಂದ ಈ ದೇಹವನ್ನು ನಿಶ್ಚೇಷ್ಟಿತಗೊಳಿಸಿ ಅಂತಃಕರಣವೃತ್ತಿಯನ್ನಾಶ್ರಯಿಸಿ, ಜಾಗ್ರದ್ವಾಸನೆಯೊಂದಿಗೆ ಹುಟ್ಟಿದ ಎಲ್ಲಾ ಭಾವಗಳನ್ನು ಸ್ವಪ್ನದಲ್ಲಿ ನೋಡುತ್ತ ತೇಜಸ್ಸುಳ್ಳ ಪರಿಶುದ್ಧವಾದ ಇಂದ್ರಿಯ ಮಾತ್ರ ರೂಪವನ್ನು ತೆಗೆದುಕೊಂಡು ಮತ್ತೆ ಜಾಗರಿಕ ಸ್ಥಾನವನ್ನು ಸೇರುವುದು.

**ಮಂ.ಶ್ಲೋ॥ ಪ್ರಾಣೇನ ರಕ್ಷನ್ನ ವರಂ ಕುಲಾಯಂ ಬಹಿಷ್ಕುಲಾಯಾದಮೃತಶ್ಚರಿತ್ವಾ ಸ ಈಯತೇ ಅಮೃತೋ ಯತ್ರ ಕಾಮಗ್ಂ ಹಿರಣ್ಮಯಃ ಪುರುಷ ಏಕ ಹಗ್ಂಸಃ (12)**

ತಾ : ಈ ಪ್ರಸಿದ್ಧನಾದ ಅಮೃತಮಯನಾದ ತೇಜೋಮಯನಾದವನಾಗಿ, ಒಬ್ಬನೇ ಆಗಿ ಜಾಗ್ರತ್ ಸ್ವಪ್ನಗಳನ್ನು ಇಹಪರ ಲೋಕಗಳನ್ನು ಹೊಂದಿದವನಾಗಿ ಪುರುಷನು (ಆತ್ಮ), ಪ್ರಾಣ ವಾಯುವಿನಿಂದ ನೀಚವಾದ ಗೂಡನ್ನು (ಶರೀರವನ್ನು) ಕಾಪಾಡಿಕೊಳ್ಳುತ್ತಾ, ಈ ಶರೀರಕ್ಕಿಂತ ಹೊರಗೆ ಸಂಚರಿಸುತ್ತಾ ಅಮೃತಮಯನಾಗಿ, ಎಲ್ಲಿ ಭೋಗ್ಯಪದಾರ್ಥವಿರುವುದೋ, ಅಲ್ಲಿ ಆ ಭೋಗ್ಯಪದಾರ್ಥವನ್ನು ಅನುಭವಿಸುತ್ತಿದ್ದಾನೆ.

**ಮಂ.ಶ್ಲೋ॥ ಸ್ವಪ್ನಾನ್ತೇ ಉಚ್ಚಾವಚಮೀಯಮಾನೋ ರೂಪಾಣಿ ದೇವಃ ಕುರುತೇ ಬಹುನಿ ಉತೇವಸ್ತ್ರೀಭಿಃ ಸಹ ಮೋದಮಾನೋ ಜಕ್ಷದುತೇ ವಾಪಿ ಭಯಾನಿ ಪಶ್ಯನ್ (13)**

ತಾ : ಇಷ್ಟೇ ಅಲ್ಲ. ಓ ಜನಕಾ! ಸ್ವಯಂ ಜ್ಯೋತಿ ಸ್ವರೂಪವಾದ ಈ ಆತ್ಮ ಸ್ವಪ್ನಸ್ಥಾನದಲ್ಲಿ ಉಚ್ಚ ನೀಚ ಸ್ಥಾನಗಳಿಗೆ ದೇವತಿರ್ಯಗಾದಿ ಭಾವನಗಳನ್ನು ಹೊಂದುತ್ತ, ಅನೇಕವಾದ ವಾಸನಾ ರೂಪಗಳನ್ನು ಮಾಡುತ್ತಾ, (ಧರಿಸುತ್ತಾ) ಸ್ತ್ರೀಯರೊಂದಿಗೆ ಸಂತೋಷಿಸುವವನಂತೆ ಸ್ನೇಹಿತರೊಂದಿಗೆ ನಗುನಗುತ್ತಾ ಇರುವವನಂತೆ, ಭಯಂಕರವಾದವುಗಳನ್ನು ನೋಡುತ್ತಿರುವಂತೆ ಅನುಭವಿಸುತ್ತಿದ್ದಾನೆ.

**ಮಂ.ಶ್ಲೋ॥ ಆರಾಮಮಸ್ಯ ಪಶ್ಯನ್ತಿ ನ ತಂ ಪಶ್ಯತಿ ಕಶ್ಚನೇತಿ। ತಂ ನಾಯತಂ ಬೋಧಯೇದಿತ್ಯಾಹುಃ। ದುರ್ಭಿಷಜ್ಯಗ್ಂ ಹಾಸ್ಮೈ ಭವತಿ ಯಮೇಷ ನ ಪ್ರತಿಪದ್ಯತೇ ಅಥೋ ಖಲ್ವಾಹುರ್ಜಾಗರಿತ ದೇಶ ಏವಾಸ್ಯೈಷ ಇತಿ ಯಾನಿ ಹ್ಯೇವ ಜಾಗ್ರತ್ಪಶ್ಯತಿ ತಾನಿ ಸುಪ್ತ ಇತ್ಯತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯ ಬ್ರೂಹೀತಿ (14)**

ತಾ : ಆತನ ಕ್ರೀಡಾಸ್ಥಾನಗಳನ್ನು ಜನರು ನೋಡುತ್ತಿರುತ್ತಾರೆ. ಆದರೆ ಆತನನ್ನು ಯಾರೂ ಕಾಣರು. ಆದ್ದರಿಂದಲೇ ನಿದ್ರಿಸಿದವನನ್ನು ಒಮ್ಮೆಲೇ ಎಬ್ಬಿಸಬಾರದೆಂದು ಹೇಳುವರು. ಆತನಿಗೆ ಈ ಶರೀರದಲ್ಲಿ ತಾನು ಹೋಗಿಬರುವ ದ್ವಾರವು ಸಿಗದಿದ್ದಲ್ಲಿ ಆತನ ಆತ್ಮ (ಶರೀರವು) ಎಚ್ಚರಗೊಳ್ಳುವುದು ಕಷ್ಟವಾಗುತ್ತದೆ. ಜಾಗ್ರದವಸ್ಥೆಯೇ ಒಂದು ಸ್ಥಾನ. ಅಲ್ಲಿಯೇ ಸ್ವಪ್ನವನ್ನು ನೋಡುವನೆಂದು ಕೆಲವರು ಹೇಳುವರು. ಎಚ್ಚರವಿದ್ದಾಗ ನೋಡಿದುದನ್ನೇ, ಸ್ವಪ್ನದಲ್ಲಿಯೂ ಸಹ ನೋಡುವನು. ಆದ್ದರಿಂದ ಈ ಎರಡೂ ಅವಸ್ಥೆಗಳು ಒಂದೇ ಎಂದು ಹೇಳುವರು. ಆದರೆ ಅದು (ಒಂದೇ ಅಲ್ಲ) ಹಾಗೆ ಅಲ್ಲ. ಸ್ವಪ್ನದಲ್ಲಿ ಸ್ವಯಂಜ್ಯೋತಿಯಾಗುವುದು. ಯಾಜ್ಞವಲ್ಕ್ಯನು ಈ ರೀತಿಯಾಗಿ ಸ್ವಯಂಜ್ಯೋತಿ ಸ್ವರೂಪವನ್ನು ಬೋಧಿಸಲು, ಆ ಜನಕ ಮಹಾರಾಜನು, "ಓ ಯಾಜ್ಞವಲ್ಕ್ಯಾ! ನಾನು ನಿನಗೆ ನಾನು ಸಾವಿರ ಗೋವುಗಳನ್ನು ಕೊಡುತ್ತಿದ್ದೇನೆ. ಮೋಕ್ಷಕಾರಕವಾದ ಸಾಧನವನ್ನು ಬೋಧಿಸೆಂದು ಪ್ರಾರ್ಥಿಸಿದ.

**ಮಂ.ಶ್ಲೋ॥ ಸ ವಾ ಏಷ ಏತಸ್ಮಿನ್ ಸಮ್ಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ।**
**ಪುನಃ ಪ್ರತಿನ್ಯಾಯಮ್ ಪ್ರತಿಯೋನ್ಯಾದ್ರವತಿ ಸ್ವಪ್ನಾಯೈವ ಸಯತ್ತತ್ರ ಕಿಂಚಿತ್ಪಶ್ಯತ್ಯ**
**ನನ್ವಾಗತಸ್ತೇನ ಭವತ್ಯಸಙ್ಗೋಹ್ಯಯಮ್ ಪುರುಷ ಇತ್ಯೇವಮೇವೈತದ್ಯಾಜ್ಞವಲ್ಕ್ಯ ಸೋಽಹಂ**
**ಭಗವತೀ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈನ ಬ್ರೂಹೀತಿ (15)**

ತಾ : ಆ ಸ್ವಯಂಜ್ಯೋತಿ ಸ್ವರೂಪವಾದ ಆತ್ಮವು, ಈ ಪುರುಷನು ಸುಷುಪ್ತಿಯಲ್ಲಿ ಮುಳುಗಿ, ರಮಿಸುತ್ತಾ, ವಿಹರಿಸುತ್ತಾ, ಪುಣ್ಯಪಾಪಗಳನ್ನು ನೋಡಿ ಮತ್ತೆ ಹೋದ ದಾರಿಯಲ್ಲಿಯೇ ಮೊದಲಿನ ಸ್ಥಾನಕ್ಕೆ ಅಂದರೆ ಸ್ವಪ್ನ ಸ್ಥಾನಕ್ಕೆ ಬರುವನು. ಸ್ವಲ್ಪ ಹೊತ್ತು ಸುಷುಪ್ತಿಯಲ್ಲಿರುವನು. ಪುನಃ ಸ್ವಪ್ನಗಳಿಗೆ ನ್ಯಾಯಪ್ರಕಾರವಾಗಿ ಬರುವನು. ಆ ಆತ್ಮ ಆ ಸ್ವಪ್ನಸ್ಥಾನದಲ್ಲಿ ಯಾವ ಪುಣ್ಯಪಾಪಫಲವನ್ನು ನೋಡುತ್ತಿರುವನೋ, ಆ ಪುಣ್ಯಪಾಪಗಳನ್ನು ಅನುಸರಿಸಿ ಹೊಂದದಿರುವವನಾಗುವನು. ಆ ಪುರುಷನು (ಈ ಆತ್ಮ) ಅಸಂಗನೇ, ಎಂದು ಯಾಜ್ಞವಲ್ಕ್ಯನು ಹೇಳಿದನು. ಆ ಜನಕ ಮಹಾರಾಜನು, ಓ ಯಾಜ್ಞವಲ್ಕ್ಯಾ! ನೀನು ಹೇಳಿದ ಬೋಧನೆಗಳನ್ನು ಅಂಗೀಕರಿಸಿದ್ದೇನೆ. ಸಾವಿರ ಗೋವುಗಳನ್ನು ಸ್ವೀಕರಿಸಿ ಮೋಕ್ಷಕ್ಕಾಗಿ ಬ್ರಹ್ಮವಿದ್ಯೆಯನ್ನು ಬೋಧಿಸುವಂತಹನಾಗು ಎಂದು ಪ್ರಾರ್ಥಿಸಿದ.

**ಮಂ.ಶ್ಲೋ॥ ಸ ವಾ ಏಷ ಏತಸ್ಮಿನ್ ಸ್ವಪ್ನೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ**
**ಪ್ರತಿನ್ಯಾಯಮ್ ಪ್ರತಿಯೋನ್ಯಾ ದ್ರವತಿ ಬುದ್ಧಾನ್ತಾಯೈವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾ**
**-ಗತಸ್ತೇನ ಭವತ್ಯಸಙ್ಗೋಹ್ಯಯಮ್ ಪುರುಷ ಇತ್ಯೇವಮೇವೈ ತದ್ಯಾಜ್ಞವಲ್ಕ್ಯ ಸೋಽಹಂ**
**ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತಿ (16)**

ತಾ : ಆ ಸ್ವಯಂಜ್ಯೋತಿ ಸ್ವರೂಪವಾದ ಈ ಆತ್ಮವು ಈ ಸ್ವಪ್ನಸ್ಥಾನದಲ್ಲಿ ಅನುರಾಗವನ್ನು ಹೊಂದಿ ಸಂಚರಿಸಿ, ಪುಣ್ಯಪಾಪಗಳನ್ನು ನೋಡಿಯೇ ಮತ್ತೆ ಜಾಗರಿತ ಸ್ಥಾನದಲ್ಲಿ ನ್ಯಾಯಪ್ರಕಾರವಾಗಿ ಪ್ರತಿಸ್ಥಾನವನ್ನು ಹೊಂದುತ್ತಿದ್ದಾನೆ. ಆ ಆತ್ಮವು ಆ ಸ್ವಪ್ನ ಸ್ಥಾನದಲ್ಲಿ, ಯಾವ ಯಾವ ಪುಣ್ಯಪಾಪಗಳನ್ನು ನೋಡುತ್ತಿರುವನೋ, ಆ ಪುಣ್ಯಪಾಪಫಲಗಳಿಗೆ ಬದ್ಧನಾಗುವುದಿಲ್ಲ. ಆ ಪುರುಷನು (ಈ ಆತ್ಮ) ಅಸಂಗವಾದುದು ಎಂದು ಹೇಳಲು ಆ ಜನಕ ಮಹಾರಾಜನು, ಹೇ ಯಾಜ್ಞವಲ್ಕ್ಯಾ! ನಾನು ನಿನಗೆ

ಸಾವಿರ ಗೋವುಗಳನ್ನು ಸಮರ್ಪಿಸುತ್ತೇನೆ. ಮೋಕ್ಷಕ್ಕಾಗಿ ಇರುವ ಸಾಧನವನ್ನು ತಿಳಿಸಿಕೊಡು ಎಂದನು.

**ಮಂ.ಶ್ಲೋ॥ ಸ ವಾ ಏಷ ಏತಸ್ಮಿನ್ ಬುದ್ಧಾನ್ತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾನ್ತಾಯೈವ (17)**

ತಾ : ಓ ಜನಕಾ! ಈ ಪುರುಷನು ಸ್ವಪ್ನದಲ್ಲಿರುವಂತೆಯೇ, ಈ ಜಾಗ್ರತ ಸ್ಥಾನದಲ್ಲಿಯೂ ಬಂಧುಮಿತ್ರಾದಿಗಳೊಂದಿಗೆ ಅನುರಾಗವನ್ನು ಅನುಭವಿಸಿ, ನಾನಾ ವಿಧಗಳಾಗಿ ಕ್ರೀಡಿಸಿ, ಶ್ರಮವನ್ನು ಹೊಂದಿ, ಪುಣ್ಯ ಪಾಪಫಲಗಳನ್ನು ನೋಡಿಯೇ, ಆ ಫಲಗಳಿಂದ ಬದ್ಧನಾಗುವುದಿಲ್ಲ. (ಆ ಫಲಗಳಿಗೆ ಕಟ್ಟಿಬೀಳುವುದಿಲ್ಲ.) ಅಸಂಗನಾಗಿ ಮತ್ತೆ ಸ್ವಪ್ನ ಸ್ಥಾನಕ್ಕೆ, ಯಥಾಪ್ರಕಾರ ಹೋಗುತ್ತಿರುತ್ತಾನೆ. (ಎಲ್ಲ ಅವಸ್ಥೆಗಳಲ್ಲಿ ಆತ್ಮವು ಅಸಂಗವಾಗಿಯೇ ಇರುತ್ತದೆ.)

**ಮಂ.ಶ್ಲೋ॥ ತದ್ಯಥಾ ಮಹಾಮತ್ಸ್ಯ ಉಭೇ ಕೂಲೇ ಅನುಸಞ್ಚರತಿ ಪೂರ್ವಂ ಚಾಪರಂ ಚೈವಮೇವಾಯಂ ಪುರುಷ ಏತಾವುಭಾವನ್ತಾವನುಸಞ್ಚರತಿ ಸ್ವಪ್ನಾನ್ತಂ ಚ ಬುದ್ಧಾನ್ತಂ ಚ (18)**

ತಾ : ಇದಕ್ಕೆ ದೃಷ್ಟಾಂತವೇನೆಂದರೆ ತಿಮಿಂಗಲವಾದ ದೊಡ್ಡ ಮತ್ಸ್ಯವು, ಈಚೆಕಡೆ ಆಚೆ-ಕಡೆಯ ತೀರಗಳನ್ನು ಅನುಸರಿಸಿ ಚಲಿಸುತ್ತಿರುತ್ತದೆ. ಈ ಪ್ರಕಾರವಾಗಿಯೇ ಈ ಪುರುಷನು (ಈ ಆತ್ಮ) ಸ್ವಪ್ನ ಸ್ಥಾನ ಮತ್ತು ಜಾಗ್ರತೆಯ ಸ್ಥಾನ ಈ ಎರಡು ಸ್ಥಾನಗಳನ್ನು ಅನುಸರಿಸಿ ತಿರುಗಾಡುತ್ತಿರುತ್ತಾನೆ.

**ಮಂ.ಶ್ಲೋ॥ ತದ್ಯಥಾಸ್ಮಿನ್ನಾಕಾಶೇ ಶ್ಯೇನೋ ವಾ ಸುಪರ್ಣೋ ವಾ ವಿಪರಿಪತ್ಯ ಶ್ರಾನ್ತಸ್ಸಗ್ಂ ಹತ್ಯಪಕ್ಷೌ ಸಲ್ಲಯಾಯೈವ ಧ್ರಿಯತ ಏವಮೇವಾಯಂ ಪುರುಷ ಏತಸ್ಮಾ ಅನ್ತಾಯ ಧಾವತಿ ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ (19)**

ತಾ : ಆಕಾಶದಲ್ಲಿ ಸಂಚರಿಸಿ ಆಯಾಸಗೊಂಡ ಹದ್ದು ಎನ್ನುವ ಪಕ್ಷಿಯಾಗಲೀ, ರಣಹದ್ದು ಆಗಲೀ, ತನ್ನ ರೆಕ್ಕೆಗಳನ್ನು ಮುದುರಿಕೊಂಡು ನೇರವಾಗಿ ತನ್ನ ಗೂಡಿಗೆ ತೆರಳುವಂತೆ, ಈ ಪುರುಷನು ತನ್ನ ಸ್ಥಾನವಾದ ಸುಷುಪ್ತಿಗೆ ಹೋಗುವನು. ಅಲ್ಲಿ ನಿದ್ರಿಸುವನು. ಅಲ್ಲಿ ಯಾವ ಕಾಮಗಳನ್ನು ಕಾಮಿಸುವುದಿಲ್ಲ (ಇಚ್ಛಿಸುವುದಿಲ್ಲ.) ಯಾವ ಸ್ವಪ್ನಗಳನ್ನು ನೋಡದೆ ಇರುವನು. (ಸುಷುಪ್ತಿಯಲ್ಲಿ ಪ್ರಾಜ್ಞನಂತೆ ಪ್ರವರ್ತಿಸುವನು.)

**ಮಂ.ಶ್ಲೋ॥ ತಾವಾ ಅಸ್ಯೈತಾ ಹಿತಾನಾಮ ನಾಡ್ಯೋ ಯಥಾ ಕೇಶಃ ಸಹಸ್ರಧಾ ಭಿನ್ನಸ್ತಾವತಾಽಣಿಮ್ನಾ ತಿಷ್ಠನ್ತಿ ಶುಕ್ಲಸ್ಯ ನೀಲಸ್ಯ ಪಿಙ್ಗಳಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾ ಅಥ ಯತ್ರೈನಂ ಘನ್ತೀವ ಜಿನನ್ತೀವ ಹಸ್ತೀವ ವಿಚ್ಛಾಯಯತಿ ಗರ್ತಮಿವ ಪತತಿ। ಯದೇವ ಜಾಗ್ರದ್ಭಯಂ ಪಶ್ಯತಿ ದತತ್ರಾಽವಿದ್ಯಯಾ ಮನ್ಯತೇ ಅಥ ಯತ್ರ ದೇವ ಇವ ರಾಜೇವಾಹಮೇವೇದಗ್ಂ ಸರ್ವೋಽಸ್ಮೀತಿ ಮನ್ಯತೇ ಸೋಽಸ್ಯ ಪರಮೋಲೋಕಃ (20)**

ತಾ : ಸಹಸ್ರಾರು ವಿಭಾಗಗಳನ್ನಾಗಿ ಮಾಡಲ್ಪಟ್ಟ ಕೂದಲಿನಂತೆ, ಅತಿ ಸೂಕ್ಷ್ಮವಾದ ಹಿತಯೆನ್ನುವ

ಹೆಸರುಳ್ಳ ನಾಡಿಗಳು ಶುಭ್ರ ವರ್ಣ, ರಕ್ತವರ್ಣ, ನೀಲವರ್ಣ, ಸಸ್ಯವರ್ಣ ಮತ್ತು ಹಸಿರು ಬಣ್ಣಗಳಂತಹ ರಸಗಳಿಂದ ತುಂಬಿವೆ. ಸ್ವಪ್ನದಲ್ಲಿ ಈತನನ್ನು ಹೊಡೆದಾಡುತ್ತಾರೆ. ಹಿಡಿದುಕೊಂಡು ವಶಪಡಿಸಿಕೊಳ್ಳುತ್ತಾರೆ. ಆನೆಯು ಅಟ್ಟಿಸಿಕೊಂಡು ಬರುತ್ತದೆ. ನಾನು ಹಳ್ಳದ ಕಡೆಗೆ ಜಾರುತ್ತಿರುವೆನೆಂದು, ಇತ್ಯಾದಿಯಾದ ಅಜ್ಞಾನ ಭಾವದಿಂದ ತಿಳಿಯುವನು. ಮತ್ತೆ ಎಚ್ಚರಗೊಂಡು ಯಾವಾಗ ತನ್ನನ್ನು ತಾನು ದೇವತೆ, ನಾನು ರಾಜ, ನಾನೇ ಈ ಸರ್ವವೆಂದು ಭಾವಿಸಿರುವನೋ, ಆಗ ಅದು ಆತ್ಮಕ್ಕೆ ಪರಲೋಕ, ಮೋಕ್ಷ!

ಮಂ.ಶ್ಲೋ॥ ತದ್ವಾ ಅಸ್ಯೈತದತಿಚ್ಛಂದಾ ಅಪಹತ ಪಾಪ್ಮಾಽಭಯಗ್ಂ ರೂಪಂ। ತದ್ಯಥಾ ಪ್ರಿಯಯಾ ಸ್ತ್ರಿಯಾ ಸಮ್ಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮೇವ ಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಮ್ಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಂ। ತದ್ವಾ ಅಸ್ಯೈ ತದಾಪ್ತಕಾಮಮಾತ್ಮಕಾಮಮಕಾಮಗ್ಂ ರೂಪಗ್ಂ ಶೋಕಾನ್ತರಮ್ (21)

ತಾ: ಈ ಆತ್ಮಕ್ಕೆ ಅದೇ ರೂಪ. ಕಾಮರಹಿತವಾಗಿರುವಂತಹುದು. ಧರ್ಮಾಧರ್ಮವರ್ಜಿತ-ವಾದುದು ಭಯರಹಿತವಾದುದು ಆದ ಸ್ವರೂಪವು ಅಲ್ಲಿ ಪ್ರಿಯಳಾದಂತಹ ಸ್ತ್ರೀಯನ್ನು ಆಲಿಂಗನ ಮಾಡಿಕೊಂಡಾಗ ಏಕವಾಗಿರುವಂತೆ ಈ ಪುರುಷನು (ಈ ಆತ್ಮ) ಸ್ವಾಭಾವಿಕವಾದ ಪರಮಾತ್ಮ ಸ್ವರೂಪವಾದ ಸ್ವಕೀಯ ಆತ್ಮದೊಂದಿಗೆ ಏಕಸ್ವರೂಪನಾಗಿರುವಂತಹುದಾಗಿ ಹೊರಗಡೆಯಿರುವು-ದನ್ನು ಒಳಗಿರುವುದನ್ನು ತಿಳಿದುಕೊಳ್ಳಲಾರದು. ಅದೇ ಈ ಆತ್ಮಕ್ಕೆ ಸ್ವರೂಪ. ಇದು ಆಪ್ತ ಕಾಮವನ್ನು ಹೊಂದಿರುವಂತಹುದಾಗಿ, ಆತ್ಮವೇ ಕಾಮವಾಗಿರುವಂತಹುದಾಗಿ, ಕಾಮವು ಇಲ್ಲದಿರುವಂತಹುದಾಗಿ ಶೋಕವಾಗಿರುವಂತಹುದಾಗಿ, ಕಾಮವು ಇಲ್ಲದಿರುವಂತಹುದಾಗಿ ಶೋಕಶೂನ್ಯವಾದುದಾಗಿಯೂ ಇರುವಂತಹ ಸ್ವರೂಪವನ್ನು ಹೊಂದುತ್ತದೆ.

ಮಂ.ಶ್ಲೋ॥ ಅತ್ರ ಪಿತಾಽಪಿತಾಭವತಿ ಮಾತಾಽಮಾತಾ ಲೋಕಾಅಲೋಕಾ ದೇವಾಅದೇವಾ ವೇದಾ ಅವೇದಾ॥ ಅತ್ರಸ್ತೇನೋಽಸ್ತೇನೋ ಭವತಿ ಭ್ರೂಣಹಾಽಭ್ರೂಣಹಾ ಚಾಂಡಾಲೋಽ-ಚಾಂಡಾಲಃ ಪೌಲ್ಕಸೋಽಪೌಲ್ಕಸಃ ಶ್ರಮಣೋಽಶ್ರಮಣ ಸ್ತಾಪಸೋಽತಾಪಸೋ ನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ ತೀರ್ಣೋಹಿ ತದಾ ಸರ್ವಾಞ್ಛೋಕಾನ್ ಹೃದಯಸ್ಯ ಭವತಿ (22)

ತಾ : ಆ ಸುಷುಪ್ತಿಯಲ್ಲಿ ಆನಂದರೂಪವಾದ ಆತ್ಮಕ್ಕೆ ಬಾಹ್ಯದಲ್ಲಿನ ಪಿತಾಪುತ್ರ ಸಂಬಂಧ ನಿಮಿತ್ತವಾದ ಕರ್ಮವು ಬಿಟ್ಟು ಹೋಗುವುದರಿಂದ, ತಂದೆಯು ಇಲ್ಲ, ತಾಯಿಯು ಇಲ್ಲ, ಪುತ್ರತ್ವವು ಇಲ್ಲ. ಲೋಕಗಳು ಸಹ ಇಲ್ಲ. ಕರ್ಮಾಂಗಭೂತರಾದ ದೇವತೆಗಳು ಇಲ್ಲ. ಆ ಕರ್ಮ ಪ್ರತಿಪಾದಕ-ವಾದಂತಹ ವೇದಗಳು ಇಲ್ಲ. ಈ ರೀತಿಯಾಗಿ ಆತ್ಮವು ಸುಷುಪ್ತಿಯಲ್ಲಿ ಶುಭಕರ್ಮಗಳನ್ನು, ಅಶುಭ ಕರ್ಮಗಳನ್ನು ಸಹ ಅತಿಕ್ರಮಿಸುತ್ತಿರುತ್ತದೆ. ಹೇಗೆಂದರೆ ಆತ್ಮ ಸುಷುಪ್ತಿಯಲ್ಲಿ ಸುವರ್ಣವನ್ನು ಅಪಹರಿಸುವುದಿಲ್ಲ. ಭ್ರೂಣಹತ್ಯೆ ಮಾಡುವುದಿಲ್ಲ. ಚಂಡಾಲತ್ವವಿಲ್ಲ. ಪುಲ್ಕಸತ್ವವು ಇಲ್ಲ. ಕರ್ಮ ಸಂಬಂಧವೂ ಇಲ್ಲವಾದುದರಿಂದ ಸನ್ಯಾಸಾಶ್ರಮ ಕರ್ಮವು ಇಲ್ಲ. ವಾನಪ್ರಸ್ಥತ್ವವು ಇಲ್ಲ. ಆತ್ಮವು,

ಶಾಸ್ತ್ರವಿಹಿತವಾದ ಪುಣ್ಯಕರ್ಮವನ್ನು ಅನುಸರಿಸುವುದಿಲ್ಲ. ಶಾಸ್ತ್ರವಿಹಿತವಲ್ಲದ ಪಾಪಕರ್ಮವನ್ನು ಕೂಡಾ ಅನುಸರಿಸುವುದಿಲ್ಲ. ಹೀಗೆ ಸುಷುಪ್ತಿಯಲ್ಲಿ ಸ್ವಯಂ ಜ್ಯೋತಿ ಸ್ವರೂಪವಾದ ಆತ್ಮವು ಸಮಸ್ತ ವಾಂಛೆಗಳಗೆ ಅತಿಕ್ರಮಿಸಿದುದ್ದಾಗಿ, ಸ್ವಸ್ವರೂಪದಲ್ಲಿರುವುದು.

**ಮಂ.ಶ್ಲೋ॥ ಯದ್ವೈ ತನ್ನ ಪಶ್ಯತಿ ಪಶ್ಯನ್ವೈ ತನ್ನಪಶ್ಯತಿ। ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇಽ -ವಿನಾಶಿತ್ವಾತ್ । ನ ತು ತದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್ (23)**

ತಾ : ಆ ಪರಿಸ್ಥಿತಿಯಲ್ಲಿ ಆತನು ನೋಡುವುದಿಲ್ಲವೆಂದರೂ ಹಾಗೆ ಹೇಳಲಾಗದು. ನೋಡಬಲ್ಲ ಸಾಮರ್ಥ್ಯವಿದ್ದರೂ ಆತನು ನೋಡುವುದಿಲ್ಲ. ದ್ರಷ್ಟನ ದೃಷ್ಟಿಗೆ ಎಂದೂ ನಷ್ಟವೇರ್ಪಡುವುದಿಲ್ಲ. ಏಕೆಂದರೆ, ಆತ ಅವಿನಾಶಿಯಾಗಿರುತ್ತಾನೆ. ಆತನಿಗಿಂತ ಬೇರೆಯಾಗಿ ನೋಡುವುದಕ್ಕೆ ಬರುವ ದೃಷಿಗೆ ವಿಷಯವಾಗುವ ಅನ್ಯಪದಾರ್ಥ ಯಾವುದೂ ಇಲ್ಲ.

**ಮಂ.ಶ್ಲೋ॥ ಯದ್ವೈ ತನ್ನ ಜಿಘ್ರತಿ ಜಿಘ್ರನ್ವೈ ತನ್ನ ಜಿಘ್ರತಿ ನ ಹಿ ಘ್ರಾತುರ್ಘ್ರಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನತು ತದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯಜ್ಜಿಘ್ರೇತ್ (24)**

ತಾ : ಆ ಸ್ಥಿತಿಯಲ್ಲಿ ಆತ ವಾಸನೆ ನೋಡುವುದಿಲ್ಲ. ವಾಸನೆ ನೋಡುತ್ತಿಲ್ಲವೆಂದು ಯಾರಾದರೂ ಹೇಳಿದರೂ ಅದು ಹಾಗಲ್ಲ. ವಾಸನೆ ನೋಡುವ ಸಾಮರ್ಥ್ಯವನ್ನು ಹೊಂದಿದ್ದರೂ ಆತ ಯಾವುದನ್ನೂ ಆಘ್ರಾಣಿಸುವುದಿಲ್ಲ. ಆಘ್ರಾಣಿಸುವವನ ಘ್ರಾಣಶಕ್ತಿಗೆ ಲೋಪವು ಇಲ್ಲ. ಏಕೆಂದರೆ ಅದು ಅವಿನಾಶ. ಆತನಿಂದ ಬೇರೆಯಾಗಿ ವಾಸನೆ ನೋಡಲು ಎರಡನೆಯ ಪದಾರ್ಥವೇ ಅಲ್ಲಿ ಇಲ್ಲವಲ್ಲ!

**ಮಂ.ಶ್ಲೋ॥ ಯದ್ವೈ ತನ್ನ ರಸಯತೇ ರಸಯನ್ವೈ ತನ್ನ ರಸಯತೇ ನ ಹಿ ರಸಯಿತೂ ರಸಯತೇ-ರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನತು ತದ್ವಿತೀಯಮಸ್ತಿ ತತೋಽನ್ಯ ದ್ವಿಭಕ್ತಂ ಯದ್ರಸಯೇತ್ (25)**

ತಾ : ಆ ಪರಿಸ್ಥಿತಿಯಲ್ಲಿ ರುಚಿ ನೋಡಲಿಲ್ಲವೆಂದು ಯಾರಾದರೂ ಹೇಳಿದರೂ, ಅದು ಸರಿಯಾದ ಮಾತಲ್ಲ. ರುಚಿ ನೋಡುವ ಸಾಮಥ್ಯವಿದ್ದೂ ಆತ ಯಾವ ರುಚಿಯನ್ನೂ ನೋಡುವುದಿಲ್ಲ. ರುಚಿ ನೋಡುವವನ ರುಚಿಸುವ ಸಾಮರ್ಥ್ಯ ಲೋಪವಾಗುವುದಿಲ್ಲ. ಏಕೆಂದರೆ ಅದು ಆತ್ಮ ಅವಿನಾಶವಾಗಿರುತ್ತದೆ. ಎರಡನೆಯ ವಸ್ತುವಿಲ್ಲ. ಆದ್ದರಿಂದ ಬೇರೆ ರೀತಿ ರುಚಿಸುವುದು ಸಾಧ್ಯವಿಲ್ಲ.

**ಮಂ.ಶ್ಲೋ॥ ಯದ್ವೈ ತನ್ನ ವದತಿ ವದನ್ವೈ ತನ್ನವದತಿ ನಹಿ ವಕ್ತುರ್ವಕ್ತೇರ್ವಿಪರಿಲೋಪೋ ವಿದ್ಯತೇಽ-ವಿನಾಶಿತ್ವಾನ್ನತು ತದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ವದೇತ್ (26)**

ತಾ : ಸುಷುಪ್ತಿಯಲ್ಲಿರುವ ಆ ಆತ್ಮಕ್ಕೆ ಮಾತನಾಡುವ ಶಕ್ತಿಯಿರುವುದಾದರೂ ಮಾತನಾಡುವುದಿಲ್ಲ. ಮಾತನಾಡಲು ಸಾಧನವಾದ ವಾಗೀಂದ್ರಿಯವು ಇಲ್ಲವಾದುದರಿಂದ ನಾಶವಾಗದಿರುವಂತಹವಾದುದರಿಂದ ಆತನ ಮಾತು ನಾಶವಾಗುವುದೆಂಬುದು ಇಲ್ಲವೇ ಇಲ್ಲ. ಆ ಆಡುವ ಆತ್ಮಕ್ಕಿಂತ, ಬೇರೆಯಾಗಿ ಎರಡನೆಯದು (ಸುಷುಪ್ತಿಯಲ್ಲಿ) ಇಲ್ಲವೇ ಇಲ್ಲ.

**ಮಂ.ಶ್ಲೋ|| ಯದ್ವೈ ತನ್ನ ಶೃಣೋತಿ ಶೃಣ್ವಸ್ವೈತನ್ನ ಶೃಣೋತಿ ನ ಹಿ ಶ್ರೋತುಃ ಶ್ರುತೇರ್ವಿಪರಿ ಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯಚ್ಛೃಣುಯಾತ್ (27)**

ತಾ : ಸುಷುಪ್ತಿಯಲ್ಲಿರುವ ಆ ಆತ್ಮ ಕೇಳುವುದಿಲ್ಲ. ಕೇಳುವಂತಹ ಶಕ್ತಿಯಿದೆ. ಶ್ರವಣೇಂದ್ರಿಯವು ಇಲ್ಲವಾದ್ದರಿಂದ ನಾಶವಾಗದಿರುವುದರಿಂದ ಆಲಿಸುವ ಶಕ್ತಿಗೆ ನಾಶವಿಲ್ಲ. ಆ ಕೇಳುವಂತಹ ಆತ್ಮಕ್ಕಿಂತ ಬೇರೆಯಾಗಿ ಎರಡನೆಯದು (ಸುಷುಪ್ತಿಯಲ್ಲಿ) ಇಲ್ಲವೇ ಇಲ್ಲ.

**ಮಂ.ಶ್ಲೋ|| ಯದ್ವೈ ತನ್ನ ಮನುತೇ ಮಾನ್ವಾನೋ ವೈ ತನ್ನ ಮನುತೇ ನಹಿ ಮನ್ತುರ್ಮತೇರ್ವಿಪರಿಲೋಪಾ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯನ್ಮನ್ವೀತ(28)**

ತಾ : ಆ ಸುಷುಪ್ತಿಯಲ್ಲಿ ಚಿಂತನೆಯನ್ನು ಮಾಡುವುದಿಲ್ಲ. (ಭಾವಿಸುವುದಿಲ್ಲ) (ಮನಸ್ಸು ಇಲ್ಲವಾದುದರಿಂದ) ನಾಶ ಇಲ್ಲದಿರುವುದರಿಂದ ಚಿಂತನೆ ಮಾಡುವಂತಹ ಆತ್ಮದ ಚಿಂತನೆಗೆ ನಾಶವಿಲ್ಲ. (ಇದ್ದೇ ಇರುತ್ತದೆ) ಆ ಚಿಂತಿಸುವ ಆತ್ಮಕ್ಕಿಂತ ಬೇರೆಯಾದುದು ಎರಡನೆಯದಾಗಿ (ಸುಷುಪ್ತಿಯಲ್ಲಿ) ಇಲ್ಲ.

**ಮಂ.ಶ್ಲೋ|| ಯದ್ವೈ ತನ್ನ ಸ್ಪೃಶತಿ ಸ್ಪೃಶನ್ವೈ ತನ್ನಸ್ಪೃಶತಿ ನಹಿ ಸ್ಪ್ರಷ್ಟುಃ ಸ್ಪೃಷ್ಟೇರ್ವಿಪರಿಲೋಪೋ ವಿದ್ಯತೇಽ -ವಿನಾಶಿತ್ವಾನ್ನತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ ಸ್ಪೃಶೇತ್ (29)**

ತಾ : ಆ ಸ್ಥಿತಿಯಲ್ಲಿ ಸ್ಪರ್ಶಿಸುವ ಶಕ್ತಿಯಿಲ್ಲವೆಂದು ಹೇಳಲಾಗದು. ಆ ಸುಷುಪ್ತಿಯಲ್ಲಿ ಸ್ಪರ್ಶಿಸುವುದನ್ನು ಸ್ಪರ್ಶಿಸಲಾರದು. ತ್ವಗೀಂದ್ರಿಯವು ಇಲ್ಲವಾದುದರಿಂದ, ನಾಶವಿಲ್ಲದ್ದಾದುದರಿಂದ, ಆತ್ಮಕ್ಕೆ ನಾಶವಿಲ್ಲ. ಆ ಸ್ಪರ್ಶಿಸದಂತಹ ಆತ್ಮಕ್ಕಿಂತ ಬೇರೆಯಾಗಿ ವಿಭಜಿಸಲ್ಪಟ್ಟ ಮತ್ತೊಂದು ವಸ್ತುವು ಎರಡನೆಯದು (ಸುಷುಪ್ತಿಯಲ್ಲಿ) ಇಲ್ಲವೇ ಇಲ್ಲ.

**ಮಂ.ಶ್ಲೋ|| ಯದ್ವೈ ತನ್ನ ವಿಜಾನಾತಿ ವಿಜಾನನ್ವೈ ತನ್ನ ವಿಜಾನಾತಿ ನ ಹಿ ವಿಜ್ಞಾತುರ್ವಿಜ್ಞಾತೇ-ರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ವಿಜಾನೀಯಾತ್ (30)**

ತಾ : ಆ ಸ್ಥಿತಿಯಲ್ಲಿ ಆತ ತಿಳಿಯಲಾರ. ತಿಳಿಯುತ್ತಿಲ್ಲವೆಂದು ಹೇಳಲು ಸಾಧ್ಯವಿಲ್ಲ. ತಿಳಿಯುವ ಸಾಮರ್ಥ್ಯವಿದ್ದೂ ಆತ್ಮವು ಯಾವುದನ್ನು ಸಹ ತಿಳಿದುಕೊಳ್ಳುವುದಿಲ್ಲ. ತಿಳಿಯುವಂತಹವನ ತಿಳುವಳಿಕೆಯ (ಗ್ರಹಿಸುವ) ಸಾಮರ್ಥ್ಯಕ್ಕೆ (ಬುದ್ಧಿಗಳ ನಾಶವಿಲ್ಲ.) ಏಕೆಂದರೆ ಅದು ಅವಿನಾಶಿಯಾಗಿದೆ. ಬೇರೆಯಾಗಿ ತಿಳಿಯುವುದಕ್ಕೆ ಎರಡನೆಯ ಪದಾರ್ಥವಿಲ್ಲ. ಅದೇ ಆತ್ಮ.

**ಮಂ.ಶ್ಲೋ|| ಯತ್ರ ವಾ ಅನ್ಯದಿವಸ್ಯಾತ್ತತ್ರಾನ್ಯೋಽನ್ಯತ್ಪಶ್ಯೇದನ್ಯೋಽನ್ಯಜ್ಜಿಘ್ರೇದನ್ಯೋಽನ್ಯದ್ರಸಯೇ -ದನ್ಯೋಽನ್ಯದ್ವದೇದನ್ಯೋಽನ್ಯಚ್ಛೃಣುಯಾದನ್ಯೋಽನ್ಯನ್ಮನ್ವೀತಾನ್ಯೋಽನ್ಯತ್ ಸ್ಪೃಶೇ-ದನ್ಯೋಽನ್ಯದ್ವಿಜಾನೀಯಾತ್ (31)**

ತಾ : ಯಾವ ಪರಿಸ್ಥಿತಿಯಲ್ಲಿ ಈ ಆತ್ಮಕ್ಕಿಂತ ಬೇರೆಯಾದ ವಸ್ತುವಿರುವುದೋ, ಆಗ ಎರಡನೆಯ

ವಸ್ತುವನ್ನು ನೋಡಬಲ್ಲ. ಎರಡನೆಯದನ್ನು ಮೊದಲನೆಯದು ವಾಸನೆ ನೋಡಬಲ್ಲದು. ರುಚಿ ನೋಡಬಲ್ಲದು. ಒಂದು ಮತ್ತೊಂದನ್ನು ಕೇಳಬಲ್ಲದು. ಒಂದು ಮತ್ತೊಂದರೊಂದಿಗೆ ಮಾತನಾಡ ಬಲ್ಲದು. ಒಂದು ಮತ್ತೊಂದನ್ನು ಕುರಿತು ಚಿಂತನೆ ಮಾಡಬಲ್ಲದು. ಒಂದು ಮತ್ತೊಂದನ್ನು ಸ್ಪರ್ಶಿಸ ಬಲ್ಲದು. ಒಂದು ಮತ್ತೊಂದನ್ನು ಗ್ರಹಿಸಬಲ್ಲದು. ವಿಚಾರಿಸಬಲ್ಲುದು. ಆದರೆ ಒಂದೇ ವಸ್ತುವಾಗಿರುವಾಗ ಎಂತಹ ಚಲನೆಯೂ ಇರುವುದಿಲ್ಲ.

**ಮಂ.ಶ್ಲೋ॥ ಸಲಿಲ ಏಕೋ ದ್ರಷ್ಟಾಽದ್ವೈತೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯ ಏಷಾಸ್ಯ ಪರಮಾಗತಿರೇಷಾಸ್ಯಪರಮಾಸಮ್ಪದೇಷೋಸ್ಯಪರಮೋಲೋಕ ಏಷೋಽಸ್ಯ ಪರಮ ಆನನ್ದ ಏತಸ್ಯೈವಾನನ್ದಸ್ಯಾನ್ಯಾನಿಭೂತಾನಿ ಮಾತ್ರಾಮುಪಜೀವನ್ತಿ (32)**

ತಾ : ಆತ್ಮವು ಸ್ವಚ್ಛವಾದ ನೀರು. ನೀರಿನಂತೆಯೇ ಸುಷುಪ್ತಿಯಲ್ಲಿ ಎರಡನೆಯ ವಸ್ತುವಿಲ್ಲ. ಜನಕ ಮಹಾರಾಜಾ! ದೇಹೇಂದ್ರಿಯೋಪಾದಿ ಬೇಧವಿಲ್ಲದ ಈ ಆತ್ಮ ಈ ಸುಷುಪ್ತಿ ಕಾಲದಲ್ಲಿ ಸ್ವಕೀಯವಾದ ಆತ್ಮ ತೇಜಸ್ಸನ್ನು ಒಳಗೊಂಡಿದೆ. ಈ ಆತ್ಮವೆಂಬುದು ಬ್ರಹ್ಮಸ್ವರೂಪವಾದ ಒಂದು ಲೋಕ. ಈ ವಿಧವಾಗಿ ಯಾಜ್ಞವಲ್ಕ್ಯ ಋಷಿ, ಈ ಜನಕಮಹಾರಾಜನಿಗೆ ಬೋಧಿಸಿದನು. ಈ ವಿಜ್ಞಾನಮಯಾತ್ಮಕ್ಕೆ ಇದು ಶ್ರೇಷ್ಠಸ್ಥಾನವಾಗಿದೆ. ಅಲ್ಲದೆ ಶ್ರೇಷ್ಠ ಸಂಪತ್ತೂ ಸಹ. ಇದುವೇ ಶ್ರೇಷ್ಠವಾದ ಲೋಕ. ಇದೇ ಶ್ರೇಷ್ಠವಾದ ಆನಂದ (ಸಂತೋಷ) ಇತರೆ ಜಂತುಗಳು ಈ ಆನಂದದ ಅಂಶವನ್ನು ಅನುಸರಿಸುತ್ತಾ ಜೀವಿಸುತ್ತಿವೆ.

**ಮಂ.ಶ್ಲೋ॥ ಸ ಯೋ ಮನುಷ್ಯಾಣಾಗ್ಂ ರಾದ್ಧಃ ಸಮೃದ್ಧೋ ಭವತ್ಯನ್ಯೇಷಾಮಧಿಪತಿಸ್ಸರ್ವೈ-ರ್ಮಾನುಷ್ಯಕೈರ್ಭೋಗೈಸ್ಸಮ್ಪನ್ನತಮಃ ಸ ಮನುಷ್ಯಾಣಾಂ ಪರಮ ಆನನ್ದೋಽಥ ಯೇ ಶತಂ ಮನುಷ್ಯಾಣಾಮಾನನ್ದಾಃ ಸ ಏಕಃ ಪಿತೃಣಾಂ ಜಿತಲೋಕಾನಾಮಾನನ್ದೋಥ ಯೇ ಶತಂ ಪಿತೃಣಾಂ ಜಿತಲೋಕಾನಾಮಾನನ್ದಾಃ ಸ ಏಕೋ ಗಂಧರ್ವಲೋಕ ಆನನ್ದೋಽಥ ಯೇ ಶತಂ ಗನ್ಧರ್ವಲೋಕಆನನ್ದಾಃ ಸ ಏಕಃ ಕರ್ಮದೇವಾನಾಮಾನನ್ದೋ ಯೇ ಕರ್ಮಣಾ-ದೇವತ್ವಮಭಿಸಮ್ಪದ್ಯನ್ತೇ॥ ಅಥ ಯೇ ಶತಂ ಕರ್ಮದೇವಾನಾಮಾನನ್ದೋ ಸ ಏಕ ಆಜಾನದೇವಾನಾಮಾನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥ ಯೇ ಶತಮಾಜಾನದೇವಾನಾಮಾನನ್ದಾಃ ಸ ಏಕಃ ಪ್ರಜಾಪತಿಲೋಕಆನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥ ಯೇ ಶತಂ ಪ್ರಜಾಪತಿಲೋಕ ಆನನ್ದಾಃ ಸ ಏಕೋ ಬ್ರಹ್ಮಲೋಕಆನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥೈಷ ಏವ ಪರಮಆನನ್ದಃ ಏಷ ಬ್ರಹ್ಮಲೋಕಸ್ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತ್ಯತ್ರಹ ಯಾಜ್ಞವಲ್ಕ್ಯೋ ಬಿಭಯಾಞ್ಚಕಾರ ಮೇಧಾವೀ ರಾಜಾ ಸರ್ವೇಭ್ಯೋಮಾಽನ್ತೇಭ್ಯ ಉದರೌತ್ಸೀದಿತಿ (33)**

ತಾ : ಮಾನವರಲ್ಲಿ ಯಾರು ಸರ್ವಾವಯವಗಳನ್ನು ಸರಿಯಾಗಿ ಹೊಂದಿರುವನೋ, ಸಮಸ್ತ ಉಪಕರಣಗಳನ್ನು ಸಮೃದ್ಧಿಯಾಗಿ ಹೊಂದಿರುವನೋ, ಮನುಷ್ಯನೆನ್ನುವವನು ಅನುಭವಿಸತಕ್ಕ ಭೋಗಗಳಲ್ಲಿ ಯಾವುದೂ ಕೊರತೆಯಿಲ್ಲದೆ ಇರುವಂತಹವನಾಗಿದ್ದಾನೋ, ಎಲ್ಲರಿಗೂ ಯಜಮಾನಿ(ನ)ಯಾಗಿರುವನೋ, ಅಂತಹವನ ಆನಂದ ಒಂದು ಮನುಷ್ಯ ಆನಂದವೆಂದು ಹೇಳಲಾಗಿದೆ. ಅದಕ್ಕೆ ನೂರರಷ್ಟು ಹೆಚ್ಚಿನದ್ದು ಪಿತೃಗಳ ಆನಂದ. ಅದಕ್ಕೆ ನೂರರಷ್ಟು ಮಿಗಿಲಾದುದು ಗಂಧರ್ವಾನಂದ. ಅದಕ್ಕೆ ನೂರರಷ್ಟು ಹೆಚ್ಚಿನದು ಕರ್ಮದೇವತೆಗಳ ಆನಂದ. ಅದಕ್ಕೆ ನೂರರಷ್ಟು ಹೆಚ್ಚಿನದು ಅಜಾನ ದೇವತೆಗಳ ಆನಂದ.

ವೇದಾಧ್ಯಯನ ಮಾಡಿದವನು, ಪಾಪರಹಿತನು, ಕೋರಿಕೆಗಳು ಇಲ್ಲದವನು, ಅಜಾನ ದೇವತೆಗಳ ಆನಂದಕ್ಕೆ ಸಮಾನವಾದ ಆನಂದವನ್ನು ಹೊಂದಿದವನಾಗುವನು. ಆ ಆನಂದಕ್ಕೆ ನೂರುಪಟ್ಟು ಹೆಚ್ಚಿನದಾದುದು ಪ್ರಜಾಪತಿ ಆನಂದ. ಅದಕ್ಕೆ ನೂರು ಪಾಲು ಅಧಿಕವಾದುದು ಬ್ರಹ್ಮಾನಂದ.

ಇದೇ ಪರಬ್ರಹ್ಮ ಮಾತ್ರವಾದ ಆನಂದವೆಂದು ಯಾಜ್ಞವಲ್ಕ್ಯನು ಹೇಳಿದ. ಮತ್ತೆ ಜನಕ ಮಹಾರಾಜನು ಓ ಯಾಜ್ಞವಲ್ಕ್ಯ! ನಿನಗೆ ಸಾವಿರ ಗೋವುಗಳನ್ನು ಕೊಡುತ್ತೇನೆ. ಇನ್ನು ಮುಂದೆ ಮೋಕ್ಷವು ಪ್ರಾಪ್ತವಾಗುವ ಬಗೆಯನ್ನು ನನಗೆ ಬೋಧಿಸು. ಹೀಗೆ ಕೇಳಲು ಜನಕ ಮಹಾರಾಜನು ಮಹಾ ಪ್ರಜ್ಞಾಶಾಲಿ ಆದುದರಿಂದ ಸಮಸ್ತವಾದ ಪ್ರಶ್ನೆಗಳ ನಿರ್ಣಯಗಳ ಕೊನೆಯಲ್ಲಿ ನಿರೋಧಿಸುವನೆಂದು ಯಾಜ್ಞವಲ್ಕ್ಯನು ಭಯಪಟ್ಟನು.

**ಮಂ.ಶ್ಲೋ॥ ಸ ವಾ ಏಷ ಏತಸ್ಮಿನ್ ಸ್ವಪ್ನಾನ್ತೇ ರತ್ವಾ, ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾಧ್ರವತಿ ಬುದ್ಧಾನ್ತಾಯ್ಯೆವ (34)**

ತಾ : ಈ ಆತ್ಮವು (ಪುರುಷನು) ಸ್ವಪ್ನವನ್ನು ಹೊಂದಿದಾಗ, ಅಲ್ಲಿ ವಿಹರಿಸಿ, ಕೇವಲ ಪುಣ್ಯಪಾಪಗಳ ದರ್ಶನಮಾತ್ರದಿಂದಲೇ ತೃಪ್ತಿ ಹೊಂದಿ ಹೋದ ಮಾರ್ಗದಿಂದಲೇ ಮತ್ತೆ ಜಾಗರಿತ ಸ್ಥಾನವನ್ನು ಹೊಂದುವುದು.

**ಮಂ.ಶ್ಲೋ॥ ತದ್ಯಥಾಽನಸ್ಸುಸಮಾಹಿತಮುತ್ಸರ್ಜದ್ಯಾಯಾ ದೇವಮೇವಾಯಗ್ಂ ಶಾರೀರ ಆತ್ಮಾ ಪ್ರಾಜ್ಞೇನಾತ್ಮಾನ್ವಾರೂಢ ಉತ್ಸರ್ಜನ್ಯಾತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ (35)**

ತಾ : ಈ ಆತ್ಮವು ಯಾವ ರೀತಿ ಸ್ವಪ್ನ ಸ್ಥಾನದಿಂದ ಜಾಗರಿತ ಸ್ಥಾನವನ್ನು ಹೊಂದುವುದೋ, ಆ ರೀತಿಯಲ್ಲಿಯೇ, ಆತ್ಮವು ಈ ದೇಹದಿಂದ ಮತ್ತೊಂದು ದೇಹವನ್ನು ಹೊಂದುತ್ತಿದೆ. ಹೇಗೆಂದರೆ ಓ ಜನಕಾ! ಲೋಕದಲ್ಲಿ ಶಕಟವು ಭಾರವಾದ ವಸ್ತುಗಳಿಂದ ತುಂಬಿದ್ದು, ಗಾಡಿಯವನಿಂದ ಅಧಿಷ್ಟಿಸಲ್ಪಟ್ಟು, ಧ್ವನಿ (ಶಬ್ದ)ಯನ್ನು ಮಾಡುತ್ತಾ ಮತ್ತೊಂದು ಕಡೆಗೆ ಹೋಗುವಂತೆ, ಈ ದೇಹವು ಊರ್ಧ್ವಶ್ವಾಸದಲ್ಲಿರುವಾಗ ಲಿಂಗಾತ್ಮ (ಜೀವನು) ಪ್ರಜ್ಞಾತ್ಮನಿಂದ ಅಧಿಷ್ಠಿತನಾಗಿ ಧ್ವನಿಗೈಯುತ್ತಾ ಮತ್ತೊಂದು ಶರೀರವನ್ನು ಧರಿಸುವುದು.

**ಮಂ.ಶ್ಲೋ॥ ಸ ಯತ್ರಾಯಮಣಿಮಾನಂ ನ್ಯೇತಿ ಜರಯಾ ವೋ ಪತಪತಾವಾಣಿಮಾನಂ ನಿಗಚ್ಛತಿ ತದ್ಯಥಾಽಮ್ರಂ ವೋದುಮ್ಬರಂ ವಾ ಪಿಪ್ಪಲಂ ವಾ ಬನ್ಧನಾತ್ ಪ್ರಮುಚ್ಯತೇ**

**ಏವಮೇವಾಯಂ ಪುರುಷ ಏಭ್ಯೋಽಙ್ಗೇಭ್ಯಸ್ಸಮ್ಪ್ರಮುಚ್ಯ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಪ್ರಾಣಾಯೈವ (36)**

ತಾ : ಶಿರಃ ಪಾಣ್ಯಾದಿ (ಕೈಕಾಲು ಮುಂತಾದವುಗಳು)ಗಳೊಂದಿಗೆ ಕೂಡಿದ ಈ ದೇಹವು ಯಾವ ಕಾಲದಲ್ಲಿ ಅಣುತ್ವವನ್ನು ಹೊಂದುವುದೋ, ವೃದ್ಧತ್ವದಿಂದಾಗಲಿ, ಜ್ವರಾದಿ ರೋಗದಿಂದಾಗಲಿ, ಅಣುತ್ವವನ್ನು ಹೊಂದುವುದೋ, ಆಗ ಈ ದೇಹವು ಊರ್ಧ್ವಶ್ವಾಸವಿರುವಂತಹದಾಗುತ್ತದೆ. ಹೇಗೆಂದರೆ ಮಾವಿನ ಹಣ್ಣಾಗಲೀ, ಅತ್ತಿಯ ಹಣ್ಣಾಗಲಿ, ಅರಳಿ (ಅಶ್ವತ್ಥ) ಹಣ್ಣಾಗಲೀ, ಯಾವ ಪ್ರಕಾರವಾಗಿ ತೊಟ್ಟಿನಿಂದ ಹೊರಕ್ಕೆ ಕಳಚಿಕೊಳ್ಳುವುದೋ, ಆ ರೀತಿಯಾಗಿಯೇ ಈ ಪುರುಷನು (ಜೀವನು) ಈ ಅವಯವಗಳಿಂದ ಹೊರಕ್ಕೆ ಬಂದು ಪ್ರತಿ ಯೋನಿಯನ್ನು ಪ್ರಾಣಕ್ಕಾಗಿಯೇ ಸೇರುತ್ತಾನೆ. (ಪ್ರಾಣಾದಿಗಳು ಅವಯವಗಳು ಇದ್ದಾಗಲೇ ಕರ್ಮಫಲವನ್ನು ಅನುಭವಿಸಬಲ್ಲವು. ಆದ್ದರಿಂದ ಮತ್ತೊಂದು ಶರೀರಕ್ಕಾಗಿ ಹುಡುಕಾಡುತ್ತಿರುತ್ತದೆ.)

**ಮಂ.ಶ್ಲೋ॥ ತದ್ಯಥಾ ರಾಜಾನಮಾಯಾನ್ತಮುಗ್ರಾಃ ಪ್ರತ್ಯೇನಸಃ ಸೂತ ಗ್ರಾಮಣ್ಯೋಽನ್ನೈಃ ಪಾನೈ ರಾವಸಥೈಃ ಪ್ರತಿಕಲ್ಪನ್ತೇಽಯಮಾಯಾತ್ಯಯಮಾಗಚ್ಛತೀತ್ಯೇವಗ್ಂ ಹೈವಂ ವಿದಗ್ಂ ಸರ್ವಾಣಿಭೂತಾನಿ ಪ್ರತಿಕಲ್ಪನ್ತ ಇದಂ ಬ್ರಹ್ಮಾಽಽಯಾತೀದಮಾಗಚ್ಛತೀತಿ (37)**

ತಾ : ಓ ಜನಕಾ! (ಜೀವನು ಮರಣವನ್ನು ಹೊಂದಿ ದೇಹಾಂತರವನ್ನು ಹೊಂದಿದಾಗ) ಲೋಕದಲ್ಲಿ ತಪ್ಪು ಮಾಡಿದವರನ್ನು ಶಿಕ್ಷಿಸುವುದಕ್ಕಾಗಿ ಪ್ರಯೋಗಿಸುವ ಉಗ್ರಕರ್ಮಗಳನ್ನು ಮಾಡುವ ಸೂತರು, ಗ್ರಾಮಾಧಿಕಾರಿಗಳೂ ಚಕ್ರವರ್ತಿಯು ಬಂದಾಗ ಭಕ್ಷ್ಯಭೋಜ್ಯಾದಿಗಳೊಂದಿಗೆ, ಮದ್ಯ ಮುಂತಾದ ಪಾನದ್ರವ್ಯಗಳೊಂದಿಗೆ, ಉಪ್ಪರಿಗೆ ಮನೆ ಮುಂತಾದ ನಿವಾಸಗಳೊಂದಿಗೆ ನಿರೀಕ್ಷಿಸುವಂತೆ ಕರ್ಮಫಲವನ್ನು ತಿಳಿದಿರುವ ಈ ಜೀವನನ್ನು ಕುರಿತು ಈ ಪರಬ್ರಹ್ಮವು ಬರುತ್ತಿದೆ. (ಬ್ರಹ್ಮವೇ ಬರುತ್ತಿರುವುದೆಂದು ಸರ್ವಭೂತಗಳು ನಿರೀಕ್ಷಿಸುತ್ತವೆ.

**ಮಂ.ಶ್ಲೋ॥ ತದ್ಯಥಾ ರಾಜಾನಂ ಪ್ರಯಿಯಾಸನ್ತಮುಗ್ರಾಃ ಪ್ರತ್ಯೇನಸಸ್ಸೂತ ಗ್ರಾಮಣ್ಯೋಽಭಿಸಮಾಯ-ನ್ತ್ಯೇವಮೇವೇಮಮಾತ್ಮಾನಮನ್ತಕಾಲೇ ಸರ್ವೇ ಪ್ರಾಣಾ ಅಭಿಸಮಾಯನ್ತಿ ಯತ್ರೈತ-ದೂರ್ಧ್ವೋಚ್ಛ್ವಾಸೀ ಭವತಿ (38)**

ತಾ : ಯಾವ ರೀತಿಯಾಗಿ ಸೈನ್ಯ ಸಮೇತನಾಗಿ ಹೊರಡಲು ಸಿದ್ಧನಾದ ಮಹಾರಾಜನನ್ನು ಅನುಸರಿಸಿ ಆತನ ಸೈನಿಕರು, ಅಂಗರಕ್ಷಕರು, ಸೇವಕರು, ಗ್ರಾಮಾಧಿಕಾರಿಗಳೆಲ್ಲರೂ ಆತನ ಬಳಿಗೆ ಬರುವರೋ, ಆ ರೀತಿಯಾಗಿ ಈತನ ಶ್ವಾಸವು ಅಂತ್ಯಕಾಲದಲ್ಲಿ ಮೇಲಕ್ಕೆ ಹೋಗಲಾರಂಭಿಸಿದಾಗ, ಆತ್ಮದೆಡೆಗೆ ಎಲ್ಲ ಪ್ರಾಣಗಳು ಬಂದು ಸೇರುವುವು.

## ಷಷ್ಠಾಧ್ಯಾಯ – ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ॥ ಸ ಯತ್ರಾಯಮಾತ್ಮಾಽಬಲ್ಯಂ ನೇತ್ಯಸಮ್ಮೋಹಮಿವನ್ಯೇತ್ಯಥೈನಮೇತೇ ಪ್ರಾಣಾ ಅಭಿಸಮಾಯನ್ತಿ ಸ ಏತಾಸ್ತೇಜೋ ಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವ-**

**ಕ್ರಾಮತಿ ಸ ಯತ್ರೈಷ ಚಾಕ್ಷುಷಃ ಪುರುಷಃ ಪರಾಙ್ಪರ್ಯಾವರ್ತತೇ ತಥಾಽರೂಪಜ್ಞೋ ಭವತಿ (1)**

ತಾ : ಶರೀರಸ್ಥವಾದ ಜೀವಾತ್ಮನು ದುರ್ಬಲನಾದಾಗ, ಮರಣಕಾಲದಲ್ಲಿ ಮತ್ತು ಮೂರ್ಛೆ ಹೋದಾಗ ಈ ಪ್ರಾಣಗಳೆಲ್ಲವೂ ಆ ಜೀವನ ಕಡೆಗೆ ಹೋಗುವುದು. ತೇಜಸ್ಸುಳ್ಳ ಚಕ್ಷುರಾದಿ ಅವಯವಗಳನ್ನೆಲ್ಲ ಆಕರ್ಷಿಸಿ ಆತ ಹೃದಯದಲ್ಲಿ ಪ್ರವೇಶಿಸುವನು. ನೇತ್ರದಲ್ಲಿರುವ ಪುರುಷನು ವಿಮುಖನಾಗಿ ಎಲ್ಲೆಡೆಯು ವ್ಯಾಪಿಸುವನು. ಅನಂತರ (ಆತ್ಮಕ್ಕೆ) ರೂಪಜ್ಞಾನವು ಇರುವುದಿಲ್ಲ (ಆಗ ಸ್ವಪ್ನಕಾಲದಲ್ಲಿರುವಂತೆಯೇ ಆತ್ಮನು, ಚಕ್ಷುರಾದಿಂದ್ರಿಯಗಳ ತೇಜೋಂಶಗಳನ್ನು ಹೊಂದಿದವನಾಗುತ್ತಾನೆ.)

**ಮಂ.ಶ್ಲೋ॥ ಏಕೀಭವತಿ ಪಶ್ಯತೀತ್ಯಾಹುರೇಕೀಭವತಿ ನ ಜಿಘ್ರತೀತ್ಯಾಹುರೇಕೀಭವತಿ ನ ರಸಯತ ಇತ್ಯಾಹುರೇಕೀಭವತಿ ನ ವದತೀತ್ಯಾಹುರೇಕೀಭವತಿ ನ ಶೃಣೋತೀತ್ಯಾಹುರೇಕೀಭವತಿ ನ ಮನುತ ಇತ್ಯಾಹುರೇಕೀಭವತಿ ನ ಸ್ಪೃಶತೀತ್ಯಾಹುರೇಕೀಭವತಿ ನ ವಿಜಾನಾತೀತ್ಯಾಹುಸ್ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷಾ ವಾ ಮೂರ್ಧ್ನೋ ವಾಽನ್ಯೇಭ್ಯೋ ವಾ ಶರೀರದೇಶೇಭ್ಯಸ್ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಗ್ಂ ಸರ್ವೇಪ್ರಾಣಾ ಅನೂತ್ಕ್ರಾಮನ್ತಿಸವಿಜ್ಞಾನೋ ಭವತಿ ಸವಿಜ್ಞಾನಮೇವಾನ್ವವಕ್ರಾಮತಿ ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ (2)**

ತಾ : ಇಂದ್ರಿಯ ಸಮುದಾಯವು ಲಿಂಗಾತ್ಮದೊಂದಿಗೆ ಸೇರಿ ಒಂದಾದಾಗ, ಈ ಪುರುಷನ ಪಾರ್ಶ್ವದಲ್ಲಿರುವ ಜನರು ನೋಡುತ್ತಿಲ್ಲವೆಂದು, ಆಘ್ರಾಣಿಸುತ್ತಿಲ್ಲವೆಂದು, ರುಚಿ ನೋಡುತ್ತಿಲ್ಲವೆಂದು, ಮಾತನಾಡುತ್ತಿಲ್ಲವೆಂದು, ಕೇಳಿಸಿಕೊಳ್ಳುತ್ತಿಲ್ಲವೆಂದು, ಆಲೋಚಿಸುತ್ತಿಲ್ಲವೆಂದು, ಸ್ಪರ್ಶ ತಿಳಿಯುತ್ತಿಲ್ಲವೆಂದು ತಿಳಿದುಕೊಳ್ಳುತ್ತಿಲ್ಲವೆಂದು ಹೇಳುವರು. ಈ ರೀತಿಯಾಗಿ ಸರ್ವೇಂದ್ರಿಯಗಳು ಪರವನ್ನು ಹೊಂದಿ, ವಿಜ್ಞಾನಮಯಾತ್ಮದೊಂದಿಗೆ ಕೂಡಿಕೊಂಡಾಗ ಆ ಹೃದಯ ರಂಧ್ರದಲ್ಲಿನ ಜೀವ ನಿರ್ಗಮ ಸ್ಥಾನವಾದ ನಾಡೀದ್ವಾರವು ಆತ್ಮತೇಜಸ್ಸಿನಿಂದ ಪ್ರಕಾಶಿಸುತ್ತದೆ. ಅದೇ ರೀತಿಯಾಗಿ ಈ ಲಿಂಗ ಶರೀರೋಪಾಧಿಕನಾದ (ವಾದಂತಹ) ವಿಜ್ಞಾನ ಮಯಾತ್ಮನೇತ್ರದಮೂಲಕವಾಗಲೀ, ಶಿರಸ್ಸಿನ ಮೂಲಕವಾಗಲೀ, ಇತರ ಶರೀರ ಪ್ರದೇಶಗಳ ಮೂಲಕವಾಗಲೀ ಹೊರಕ್ಕೆ ಹೋಗುತ್ತದೆ. (ನಿಷ್ಕ್ರಮಿಸುತ್ತದೆ.) ಹೀಗೆ ಈ ದೇಹವನ್ನು ಬಿಟ್ಟು ಹೊರಕ್ಕೆ ಹೋದ (ಜೀವನ(ದ)) ವಿಜ್ಞಾನ ಮಯಾತ್ಮವನ್ನು ಈ ದೇಹೇಂದ್ರಿಯಾದಿ ಸರ್ವಕ್ಕೂ ಅಧಿಕಾರಿಯಾದ ಪ್ರಾಣವನ್ನು ಅನುಸರಿಸಿ ಹೋಗುತ್ತದೆ. ವಾಗಾದೀಂದ್ರಿಯಗಳೆಲ್ಲವೂ ಸಹ ಅನುಸರಿಸಿ ಹೊರಡುತ್ತವೆ. ಆತ್ಮವು, ಕರ್ಮಾಧೀನದಿಂದ (ಸ್ವಪ್ನದಲ್ಲಿರುವಂತೆಯೇ) ವಿಶೇಷಜ್ಞಾನ ಸಹಿತವಾದುದನ್ನೇ ಹೊಂದುತ್ತದೆ. ಹೀಗೆ ಪರಲೋಕವನ್ನು ಹೊಂದಿದ ಆತ್ಮವು ವಿಧಿಪ್ರತಿಷೇಧರೂಪವಾದ ವಿದ್ಯೆಯನ್ನು, ಕರ್ಮವನ್ನು, ಅನುಭವರೂಪವಾದ ವಾಸನೆಗಳನ್ನು ಎಲ್ಲವನ್ನೂ ಅನುಸರಿಸಿಯೇ ಹೊರಡುತ್ತದೆ.

ಮಂ.ಶ್ಲೋ॥ ತದ್ಯಥಾ ತೃಣಜಲಾಯುಕಾ ತೃಣಸ್ಯಾನ್ತಂ ಗತ್ವಾಽನ್ಯಮಾಕ್ರಮಮಾಕ್ರಮ್ಯಾತ್ಮಾನ-
ಮುಪಸಗ್ಂಹರತ್ಯೇವಮೇವಾಯಮಾತ್ಮೇದಗ್ಂ ಶರೀರಂ ನಿಹತ್ಯಾವಿದ್ಯಾಂ
ಗಮಯಿತ್ವಾಽಽನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಗ್ಂಹರತಿ (3)

ತಾ : ಈ ದೇಹವನ್ನು ತ್ಯಜಿಸಿ, ಅನ್ಯ ಶರೀರಕ್ಕೆ ಆತ್ಮ ಯಾವ ರೀತಿಯಾಗಿ ಹೋಗುವುದೆನ್ನುವು-ದರ ವಿಷಯವನ್ನು ದೃಷ್ಟಾಂತವಾಗಿ; ತೃಣಜಲೂಕವೆನ್ನುವ ಒಂದು ಹುಲ್ಲಿನ ಕೀಟವು ಯಾವ ರೀತಿಯಾಗಿ ಒಂದು ಹುಲ್ಲು ಕಡ್ಡಿಯ ಕೊನೆಯವರೆಗೂ ಹೋಗಿ, ಮತ್ತೊಂದು ಹುಲ್ಲುಕಡ್ಡಿಯನ್ನು ಅವಲಂಬನೆ ಮಾಡಿಕೊಂಡು ಆನಂತರ ತನ್ನ ದೇಹವನ್ನು ಮೊದಲಿನ ಹುಲ್ಲು ಕಡ್ಡಿಯಿಂದ ತೆಗೆದು ಕೊಂಡು ಹೋಗುವುದೋ ಅದೇ ವಿಧವಾಗಿ ಆತ್ಮವು, ಶರೀರವನ್ನು ಕೆಳಕ್ಕೆ ಬೀಳಿಸಿ, ನಿಶ್ಚೇಷ್ಟಿತಗೊಳಿಸಿ, ಎರಡನೆಯ ಶರೀರವನ್ನು ಹೊಂದಿ, ತನ್ನನ್ನು ಈ ಶರೀರದಿಂದ ಉಪಸಂಹರಿಸಿಕೊಳ್ಳುವುದು. ಬೇರೊಂದು ದೇಹವನ್ನು ಹೊಂದಿ ಪೂರ್ವವಾಸನೆಯಿಂದ ಮತ್ತೆ ತಾನು ಹೊಂದಿದ ದೇಹದಲ್ಲಿ ಆತ್ಮ ಭಾವವನ್ನು ಮಾಡುತ್ತಿದ್ದಾನೆ.

ಮಂ.ಶ್ಲೋ॥ ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯಾನ್ಯನ್ನವತರಂ ಕಲ್ಯಾಣತರಗ್ಂ
ರೂಪಂ ತನುತ ಏವಮೇವಾಯಮಾತ್ಮೇದಗ್ಂ ಶರೀರಂ ನಿಹತ್ಯಾಽವಿದ್ಯಾಂ
ಗಮಯಿತ್ವಯಾನ್ಯಽನ್ನವತರಂ ಕಲ್ಯಾಣತರಗ್ಂ ರೂಪಂ ಕುರುತೇ ಪಿತ್ರ್ಯಂ ವಾ ಗಾನ್ಧರ್ವಂ
ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾಽನ್ಯೇಷಾಂ ವಾ ಭೂತಾನಾಮ್ (4)

ತಾ : ಸ್ವರ್ಣಕಾರ (ಅಕ್ಕಸಾಲಿಗ)ನು ಯಾವ ರೀತಿಯಾಗಿ ಸ್ವಲ್ಪ ಚಿನ್ನವನ್ನು ತೆಗೆದುಕೊಂಡು ನೂತನ ಶೋಭೆಯಿಂದ ಕೂಡಿದ ಸುಂದರವಾದ ಆಭರಣವನ್ನು ನಿರ್ಮಿಸುವನೋ, ಅದೇ ವಿಧವಾಗಿ ಆತ್ಮನು ಶರೀರವನ್ನು ಬಿಟ್ಟು ಕೆಳಕ್ಕೆ ಬೀಳುವಂತೆ ಮಾಡಿ, ಅದನ್ನು ನಿಶ್ಚೇಷ್ಟಿತಗೊಳಿಸಿ, ನೂತನವಾದ ಹಾಗೂ ಸುಂದರವಾದ ಮತ್ತೊಂದು ಶರೀರವನ್ನು ನಿರ್ಮಿಸಿಕೊಳ್ಳುವನು. ಪಿತೃಗಳ, ಇಲ್ಲವೆ ಗಂಧರ್ವರ, ಅಥವಾ ದೇವತೆಗಳ, ಇಲ್ಲವೆ ಪ್ರಜಾಪತಿ ಅಥವಾ ಅನ್ಯಭೂತಗಳ ಶರೀರ ನಿರ್ಮಾಣ-ವನ್ನು ಮಾಡಿಕೊಳ್ಳುವನು.

ಮಂ.ಶ್ಲೋ॥ ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ
ಶ್ರೋತ್ರಮಯಃ ಪೃಥಿವೀಮಯ ಆಪೋಮಯೋ ವಾಯುಮಯ ಆಕಾಶಮಯ-
ಸ್ತೇಜೋಮಯೋ ತೇಜೋಮಯಃ ಕಾಮಮಯೋಽಕಾಮಮಯಃ ಕ್ರೋಧಮಯೋಽ-
ಕ್ರೋಧಮಯೋ ಧರ್ಮಮಯೋಽಧರ್ಮಮಯಃ ಸರ್ವಮಯಸ್ತದ್ಯದೇತದಿದಂ ಮಯೋಽ-
ಧೋಮಯ ಇತಿ ಯಥಾಕಾರೀ ಯಥಾಚಾರೀ ತಥಾ ಭವತಿ ಸಾಧುಕಾರೀ ಸಾದುರ್ಭವತಿ
ಪಾಪಕಾರೀ ಪಾಪೋ ಭವತಿ ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ ಅಥೋ
ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ ಸ ಯಥಾಕಾಮೋ ಭವತಿ ತತ್
ಕ್ರತುರ್ಭವತಿ ಯತ್ ಕ್ರತುರ್ಭವತಿ ತತ್ಕರ್ಮಕುರುತೇ ಯತ್ಕರ್ಮಕುರುತೇ ತದಭಿಸಮ್ಪದ್ಯತೇ (೫)

ತಾ : ಆ ಪ್ರಸಿದ್ಧವಾದ, ವಿಜ್ಞಾನ ಸ್ವರೂಪವಾದ ಈ ಆತ್ಮ ಪರಬ್ರಹ್ಮ, ಮನಃಸ್ವರೂಪನು, ಪ್ರಾಣಸ್ವರೂಪನು, ನೇತ್ರಸ್ವರೂಪನು, ಶ್ರೋತ್ರಸ್ವರೂಪನು, ಭೂಸ್ವರೂಪನು, ಉದಕ ಸ್ವರೂಪನು, ವಾಯುಸ್ವರೂಪನು, ಆಕಾಶಸ್ವರೂಪನು, ತೇಜಸ್ವರೂಪನು, ತೇಜೋರಹಿತಸ್ವರೂಪನು, ಕಾಮ-ರೂಪನು, ಅಕಾಮಸ್ವರೂಪನು, ಸರ್ವಸ್ವರೂಪನು, ಕ್ರೋಧರೂಪನು, ಕ್ರೋಧರಹಿತಸ್ವರೂಪನು, ಧರ್ಮಸ್ವರೂಪನು, ಅಧರ್ಮಸ್ವರೂಪನು, ಸರ್ವಸ್ವರೂಪನೂ ಆಗಿದ್ದಾನೆ. ಈ ಆತ್ಮವು ಪ್ರತ್ಯಕ್ಷವಾದ ಇಂದ್ರಿಯ ಗೋಚರ ಶಬ್ದಾದಿ ವಿಷಯ ಸ್ವರೂಪವಾಗಿದೆ. ಮತ್ತು ಅಪ್ರತ್ಯಕ್ಷವಾಗಿ ಅಂತಃಕರಣನಲ್ಲಿರುವ ಶಬ್ದಾದಿ ವಿಷಯ ರೂಪವಾಗಿದೆ. ಈ ಆತ್ಮವೇ ಜೀವರೂಪನಾಗಿ ಇದ್ದು ಪುಣ್ಯಕರ್ಮಮಾಡುವವನಾಗಿ, ಪುಣ್ಯಾತ್ಮನಾಗಿಯೂ ಪಾಪಕರ್ಮವನ್ನಾಚರಿಸುವಂತಹವನಾಗಿ ಪಾಪಾತ್ಮನಾಗಿಯೂ ಆಗುತ್ತಿದ್ದಾನೆ. ಮತ್ತೆ ಕೆಲವರು ಈ ಜೀವನು, ಕಾಮಸ್ವರೂಪನೆಂದು ಸಹ ಹೇಳುತ್ತಿದ್ದಾರೆ. ಆ ಕಾಮರೂಪನಾದ ಪುರುಷನು ತನ್ನ ವಾಂಛೆ (ಕೋರಿಕೆ)ಯ ಪ್ರಕಾರ, ಯಾವ ಕರ್ಮವನ್ನು ಮಾಡುವನೋ, ಆ ಕರ್ಮಫಲವನ್ನು ಹೊಂದುತ್ತಿದ್ದಾನೆ. ( ಆತ್ಮವೇ ಬ್ರಹ್ಮವು ಅಂದರೆ ಕೂಟಸ್ಥನು! ಈ ಆತ್ಮ ವಿಜ್ಞಾನಮಯಾತ್ಮ.)

**ಮಂ.ಶ್ಲೋ॥ ತದೇಷ ಶ್ಲೋಕೋ ಭವತಿ ತದೇವ ಸಕ್ತಸ್ಸಹ ಕರ್ಮಣೈತಿ ಲಿಙ್ಗಂ ಮನೋ ಯತ್ರ ನಿಷಕ್ತಮಸ್ಯ-ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹಕರೋತ್ಯಯಂ॥ ತಸ್ಮಾಲ್ಲೋಕಾತ್ಪುನರೇತ್ಯಸ್ಮೈ-ಲೋಕಾಯ ಕರ್ಮಣ ಇತಿ ತು (ನು) ಕಾಮಯಮಾನೋಽಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮಃ ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ (6)**

ತಾ : ಆ ಪೂರ್ವಾರ್ಥದಲ್ಲಿ ಈ ಮಂತ್ರವಿದೆ. ಪುರುಷನು ಆಸಕ್ತನಾಗಿ ಕರ್ಮದಲ್ಲಿಯೂ ಸಹ ಆ ಫಲವನ್ನೇ ಹೊಂದುತ್ತಿದ್ದಾನೆ. ಈ ಪುರುಷನ ಮನಸ್ಸು ಯಾವುದರಲ್ಲಿ ಆಸಕ್ತವಾಗಿದೆಯೋ, ಅದೇ ಕರ್ಮಲಿಂಗವಾಗುತ್ತಿದೆ. ಈ ಸಂಸಾರಿಯಾದ ಪುರುಷನು, ಈ ಲೋಕದಲ್ಲೇ ಆ ಕರ್ಮದ ಫಲವನ್ನು ಅನುಭವಿಸಿ ಮರಣವನ್ನು ಹೊಂದಿ, ಆಯಾ ಲೋಕಗಳಿಂದ ಮತ್ತೆ ಈ ಲೋಕಕ್ಕೆ ಕರ್ಮ ಮಾಡುವುದಕ್ಕೆ ಬರುತ್ತಿದ್ದಾನೆ. ಈ ರೀತಿಯಾಗಿ ಕರ್ಮಫಲವನ್ನು ಬಯಸುವವನು ಜನನಮರಣ ರೂಪಸಂಸಾರವನ್ನು ಹೊಂದುತ್ತಿರುತ್ತಾನೆ. ಜ್ಞಾನಿ ಕರ್ಮಫಲವನ್ನು ಕೋರದವನು, ನಿಷ್ಕಾಮನಾಗಿ ಆಪ್ತಕಾಮನಾಗಿದ್ದು, ಆತ್ಮಕಾಮನಾಗಬಯಸಿ (ತನ್ನ ಸ್ವರೂಪವನ್ನು ಮಾತ್ರವೇ ಕೋರುವವನು) ಆಗುತ್ತಿದ್ದಾನೆ. ಅವನ ವಾಗಾದೀಂದ್ರಿಯಗಳು ಇಲ್ಲೇ ಬ್ರಹ್ಮವೇ ಆಗಿ ಪರಬ್ರಹ್ಮವನ್ನು ಹೊಂದುತ್ತಿವೆ.

**ಮಂ.ಶ್ಲೋ॥ ತದೇಷ ಶ್ಲೋಕೋ ಭವತಿ ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿಶ್ರಿತಾಃ॥ ಅಥ ಮರ್ತ್ಯೋ ಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತಿ ಇತಿ । ತದ್ಯಥಾಽಹಿ ನಿರ್ಲ್ವಯನೀ-ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತೈವಮೇವೇದಗ್ಂ ಶರೀರಗ್ಂ ಶೇತೇ ಅಥಾಯ -ಮಶರೀರೋಽಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ ಸೋಽಹಂ ಭಗವತೇ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಽಹಃ (7)**

ತಾ : ಆ ಅರ್ಥದಲ್ಲಿ ಈ ಮಂತ್ರವಿದೆ. ಯಾವಾಗ ಜೀವಿಯ ಹೃದಯದಲ್ಲಿರುವ ಕೋರಿಕೆ-ಗಳೆಲ್ಲವೂ ನಶಿಸಿಹೋಗುವುದೋ, ಆಗ ಮನುಜನು ಅಮೃತಪದನಾಗುತ್ತಾನೆ. ಹೀಗೆಯೇ ಬ್ರಹ್ಮವನ್ನು ಪಡೆಯುತ್ತಾನೆ. ಯಾವ ಪ್ರಕಾರವಾಗಿ ಸರ್ಪವೊಂದರ ಪೊರೆಯು ಹುಟ್ಟುತ್ತಲೇ ಕಳಚಿಕೊಂಡು ಮರಣಹೊಂದಿದಂತೆ ಮಲಗಿಬಿಡುವುದೋ, ಅದೇ ರೀತಿ ಈ ದೇಹವು ಕೆಳಕ್ಕೆ ಬಿದ್ದು ಹೋಗಿದೆ. ಅನಂತರ ಶರೀರವಿಲ್ಲದವನೂ, ಮರಣವಿಲ್ಲದವನೂ ಆದ ಪರಮಾತ್ಮನೇ ತೇಜಸ್ಸೇ ಆಗುತ್ತಾನೆ. ವಿದೇಹರಾಜ ಜನಕಮಹಾರಾಜನು ನಿನಗೆ ಒಂದು ಸಾವಿರ ಗೋವುಗಳನ್ನು ಕೊಡುತ್ತಿರುವನೆಂದು ಯಾಜ್ಞ್ಯವಲ್ಕ್ಯನಿಗೆ ಹೇಳಿದನು.

**ಮಂ.ಶ್ಲೋ॥ ತದೇತೇ ಶ್ಲೋಕಾ ಭವನ್ತಿ, ಅಣುಃ ಪನ್ಥಾ ವಿತತಃ ಪುರಾಣೋ ಮಾಗ್ಂ ಸ್ಪೃಷ್ಟೋಽನುವಿತ್ತೋ ಮಯ್ಯೈವ ತೇನ ಧೀರಾ ಅಪಿಯನ್ತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವ ವಿಮುಕ್ತಾಃ (8)**

ತಾ : ಆತ್ಮಕಾಮನಾದ ಬ್ರಹ್ಮವೇತ್ತನಿಗೆ ಮೋಕ್ಷವು ದೊರಕುವಂತಹ ಅರ್ಥವಿರುವ ಶ್ಲೋಕಗಳು ಇವೆ. ಪ್ರಾಚೀನವು, ಸೂಕ್ಷ್ಮವು ಧನ್ಯತೆಯನ್ನುಂಟುಮಾಡುವುದು. ಆದಂತಹ ಜ್ಞಾನ ಮಾರ್ಗವು ನನ್ನನ್ನು ಹೊಂದಿದೆ. ನನ್ನಿಂದಲೇ ಅನುಸರಣೆ ಮಾಡಿ ತಿಳಿದುಕೊಳ್ಳಲಾಗಿದೆ. ಆ ಮಾರ್ಗದಿಂದಲೇ ಪ್ರಜ್ಞಾವಂತರಾದ ಬ್ರಹ್ಮವೇತ್ತರು ಬದುಕಿರುವಾಗಲೇ, ಮುಕ್ತರಾಗಿ, ಈ ದೇಹವಿರುವಾಗಲೇ ಮೋಕ್ಷವನ್ನು ಪಡೆಯುತ್ತಾರೆ.

**ಮಂ.ಶ್ಲೋ॥ ತಸ್ಮಿನ್ ಶುಕ್ಲಮುತ ನೀಲಮಾಹುಃ ಪಿಙ್ಗಳಗ್ಂ ಹರಿತಂ ಲೋಹಿತಂ ಚ। ಏಷ ಪನ್ಥಾ ಬ್ರಹ್ಮಣಾ ಹಾನುವಿತ್ತಃ ತೇನೈತಿ ಬ್ರಹ್ಮವಿತ್ಪುಣ್ಯಕೃತ್ತೈಜಸಶ್ಚ (9)**

ತಾ : ಓ ಜನಕಾ! ಆ ಜ್ಞಾನಮಾರ್ಗದ ವಿಷಯವಾಗಿ, ಕೆಲವು ಪಂಡಿತರು, ಶುಕ್ಲ ನಾಡಿಯನ್ನು, ಮತ್ತೆ ಕೆಲವರು ನೀಲಿ ನಾಡಿಯನ್ನು ಇನ್ನು ಕೆಲವರು ಹಳದಿ ಬಣ್ಣದ ನಾಡಿಯನ್ನು, ಮತ್ತೆ ಕೆಲವರು ಹಸಿರು ಬಣ್ಣದ ನಾಡಿಯನ್ನು, ಕೆಂಪು ಬಣ್ಣದ್ದನ್ನು ಮೋಕ್ಷಮಾರ್ಗವೆಂದು ಹೇಳಿದರು. ಬ್ರಹ್ಮವಿದ್ಯಾ ರೂಪವಾದ ಮೋಕ್ಷಮಾರ್ಗವು ಪರಮಾತ್ಮ ಸ್ವರೂಪವಾದ ಬ್ರಾಹ್ಮಣನಿಂದ ತಿಳಿದುಕೊಳ್ಳಲಾಗಿದೆ. ಬ್ರಹ್ಮವಿದ್ಯಾ ಸ್ವರೂಪವಾದ ಆ ಮೋಕ್ಷಮಾರ್ಗವನ್ನು ಪರಮಾತ್ಮ ಸ್ವರೂಪವಾದ ಬ್ರಹ್ಮಜ್ಞಾನಿಯು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಅನ್ಧಂತಮಃ ಪ್ರವಿಶನ್ತಿ ಯೇಽವಿದ್ಯಾಮುಪಾಸತೇ। ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್ಂ ರತಾಃ (10)**

ತಾ : ಅವಿದ್ಯೆಯನ್ನು (ಅಜ್ಞಾನವನ್ನು) ಉಪಾಸಿಸುವವರು ತಮಸ್ಸನ್ನು (ಅಂಧಕಾರ ಬಂಧುರ-ವಾದ ಸಂಸಾರವನ್ನು) ಹೊಂದುವರು. ವೇದದಲ್ಲಿ ಆಸಕ್ತಿಯಿರುವವರು ಆ ಪೂರ್ವಜ್ಞಾನಕ್ಕಿಂತಲೂ ಅತಿ ಹೆಚ್ಚಿನ ಅಜ್ಞಾನವನ್ನು ಹೊಂದುತ್ತಿರುತ್ತಾರೆ. (ವಿದ್ಯೆಗೆ, ಅವಿದ್ಯೆಗೆ ಅತೀತವಾದುದು, ಆತ್ಮಜ್ಞಾನವೆಂದು ತಿಳಿಯಬೇಕು.)

**ಮಂ.ಶ್ಲೋ॥ ಅನನ್ದಾ ನಾಮ ತೇ ಲೋಕಾ ಅನ್ಧೇನತಮಸಾವೃತಾಃ ॥ ತಾಗ್ಂ ಸ್ತೇ**
**ಪ್ರೇತ್ಯಾಭಿಗಚ್ಛನ್ತ್ಯವಿದ್ವಾಗ್ಂ ಸೋಽಬುಧೋ ಜನಾಃ (11)**

ತಾ : ಓ ಜನಕನೇ! ಅಜ್ಞಾನಾವೃತಗಳಾದ ಅಸುಖಕರಗಳಾದ ಲೋಕಗಳವೆ. ಅಜ್ಞಾನದಿಂದ ಆವರಿಸಲ್ಪಟ್ಟು ಕರ್ಮಗಳನ್ನು ಮಾಡುತ್ತಾ ಆತ್ಮಜ್ಞಾನವಿಲ್ಲದೆ ದೇಹವನ್ನು ಸಂಸಾರವನ್ನು ಹೊಂದಿರುವ ಈ ಜನರು ಮರಣವನ್ನು ಹೊಂದಿ ತಮಸ್ಸಿನಿಂದ ತುಂಬಿರುವ ಲೋಕಗಳಿಗೆ ಹೋಗುವರು. (ಆತ್ಮಜ್ಞಾನ ಮಾತ್ರವೇ ಮೋಕ್ಷಕ್ಕೆ ಸಾಧನ.)

**ಮಂ.ಶ್ಲೋ॥ ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ಕಸ್ಯ ಕಾಮಾಯ ಶರೀರಮನುಸಞ್ಜ್ವರೇತ್ (12)**

ತಾ : "ಈ ಆತ್ಮನು ನಾನೇ ಆಗಿದ್ದೇನೆ" ಎಂದು ತಿಳಿದುಕೊಂಡ ಮನುಷ್ಯನು ಇನ್ನು ಯಾವುದಕ್ಕೂ ತನ್ನ ದೇಹವನ್ನು ಕಷ್ಟಕ್ಕೀಡುಮಾಡುವ ಅಗತ್ಯವಿಲ್ಲ. ಅವನು ಯಾವಾಗಲೂ ಆತ್ಮವಾಗಿಯೇ ಇರುವುದರಿಂದ ಅನ್ಯವಾದ ಯಾವ ಕೋರಿಕೆಗಳೂ ಅವರಿಗಿರುವುದಿಲ್ಲ.

**ಮಂ.ಶ್ಲೋ॥ ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಽಸ್ಮಿನ್ಸನ್ದೇಹ್ಯೇ ಗಹನೇ ಪ್ರವಿಷ್ಟಃ ।**
**ಸ ವಿಶ್ವಕೃತ್ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಸ್ಸತುಲೋಕ ಏವ (13)**

ತಾ : ಸಂದೇಹದಿಂದ ಕೂಡಿದ ಗಹನವಾದ ಸಂಸಾರದಲ್ಲಿ ಪ್ರವೇಶವನ್ನು ಮಾಡಿ, ಆತ್ಮ ತತ್ತ್ವವನ್ನು ಯಾರು ತಿಳಿದಿರುವನೋ, ಸಾಕ್ಷಾತ್ಕಾರವನ್ನು ಹೊಂದಿದ್ದಾನೋ, ಆತನೇ ವಿಶ್ವಕರ್ತ! ಸರ್ವಕರ್ತ! ಸಮಸ್ತ ಲೋಕಗಳು ಆತನೇ! ಆತನೇ ಈ ಲೋಕವೆಲ್ಲವೂ ಅವರಿಗೆ ಎಲ್ಲವೂ ಆತ್ಮವೇ. ಸರ್ವಕ್ಕೂ ಅವನು ಆತ್ಮವಾಗುತ್ತಿದ್ದಾನೆ. ಆದ್ದರಿಂದ ಅದ್ವಿತೀಯವಾದುದನ್ನು, ಏಕವಾದುದನ್ನು ಪರಮಾತ್ಮವೆಂದೇ ಭಾವಿಸಬೇಕು.

**ಮಂ.ಶ್ಲೋ॥ ಇಹೈವ ಸನ್ತೋಽಥ ವಿದ್ಮಸ್ತದ್ವಯಂ ನ ಚೇದವೇದಿರ್ಮಹತೀ ವಿನಷ್ಟಿಃ ।**
**ಯ ಏತದ್ವಿದುರಮೃತಾಸ್ತೇ ಭವನ್ತ್ಯಥೇತರೇ ದುಃಖಮೇವಾಪಿಯನ್ತಿ (14)**

ತಾ : ಈ ಪ್ರಪಂಚದಲ್ಲಿ ನಾವು ಸಾಧನೆಯಿಂದ ಬ್ರಹ್ಮತ್ವವನ್ನು ಹೊಂದಿದವರಾಗಿದ್ದೇವೆ. ಇಲ್ಲವಾದಲ್ಲಿ ಮಹಾಕಷ್ಟವುಂಟಾಗುವುದು. ಬ್ರಹ್ಮವಿದ್ಯೆಯಿಂದ ಮೋಕ್ಷವು ದೊರಕುವುದು. ಅದಿಲ್ಲವಾದರೆ ದುಃಖವುಂಟಾಗುವುದು. ಪರಬ್ರಹ್ಮವನ್ನು ತಿಳಿದುಕೊಳ್ಳುವನು ಜನನ ಮರಣಾದಿ ದುಃಖವನ್ನು ಅನುಭವಿಸುತ್ತಾನೆ.

**ಮಂ.ಶ್ಲೋ॥ ಯದ್ಯೈತಮನುಪಶ್ಯತ್ಯಾತ್ಮಾನಂ ದೇವಮಞ್ಜಸಾ ।**
**ಈಶಾನಂ ಭೂತಭವ್ಯಸ್ಯ ಸ ತತೋ ವಿಜುಗುಪ್ಸತೇ (15)**

ತಾ : ಓ ಜನಕ ಮಹಾರಾಜಾ! ಭೂತಭವಿಷ್ಯವರ್ತಮಾನಗಳ ಕಾಲತ್ರಯಕ್ಕೂ ನಿಯಾಮಕನಾದ ಈಶ್ವರನನ್ನು ತನ್ನ ಆತ್ಮವಾಗಿ (ತನ್ನದಾಗಿ) ತಾನೇ ಎಂದು ತಿಳಿದುಕೊಂಡವನು ಸರ್ವಸ್ವರೂಪ-ನಾಗುವನು. ಆತ ಯಾವುದಕ್ಕೂ ಭಯಪಡಬೇಕಾದ ಅಗತ್ಯವಿಲ್ಲ.

**ಮಂ.ಶ್ಲೋ॥ ಯಸ್ಮಾದರ್ವಾಕ್ಸಂವತ್ಸರೋಽಹೋಭಿಃ ಪರಿವರ್ತತೇ ತದ್ದೇವಾ**
**ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಂ (16)**

ತಾ : ಈಶ್ವರನಿಗಿಂತ ಬೇರೆಯಾಗಿರುವ ಸಂವತ್ಸರವು (ಕಾಲಾತ್ಮ) ಕಾಲಾವಯವಾದ ದಿನಗಳಿಂದ ಎಲ್ಲೆಡೆಯೂ ತುಂಬಿದೆ. ಆ ಸೂರ್ಯಾದಿ ತೇಜಸ್ಸುಗಳಿಗೆ ಪ್ರಕಾಶವಾದ ಅಮೃತವನ್ನು ದೇವತೆಗಳು ಆಯುಸ್ಸು ಎಂದು ಧ್ಯಾನಿಸುತ್ತಿರುವರು.

**ಮಂ.ಶ್ಲೋ॥ ಯಸ್ಮಿನ್ಪಞ್ಚ ಪಞ್ಚಜನಾ ಆಕಾಶಶ್ಚ ಪ್ರತಿಷ್ಠಿತಃ ತಮೇವ**
**ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮೋಽಮೃತೋಽಮೃತಂ (17)**

ತಾ : ಐದು ಮಂದಿ ಗಂಧರ್ವರು (ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಕ್ಕಸರು) ಆಕಾಶವನ್ನು ಯಾವುದರಲ್ಲಿ (ಅಕ್ಷರಸ್ವರೂಪದಲ್ಲಿ) ಇಡಲಾಗಿದೆಯೋ, ಆ ಪರಮಾತ್ಮನನ್ನೇ ಆತ್ಮಸ್ವರೂಪವಾಗಿ ಭಾವಿಸುತ್ತಿದ್ದೇನೆ. ನಾಶರಹಿತವಾದ ಪರಬ್ರಹ್ಮವನ್ನು ತಿಳಿದುಕೊಂಡವನಾಗಿ ಅಮೃತಮಯನಾದ ಪರಮಾತ್ಮನಾದೆನು.

**ಮಂ.ಶ್ಲೋ॥ ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ।**
**ಮನಸೋ ಯೇ ಮನೋವಿದುಃ । ತೇ ನಿಚಿಕ್ಯುಃ ಬ್ರಹ್ಮ ಪುರಾಣಮಗ್ರ್ಯಂ (18)**

ತಾ : ಓ ಜನಕಾ! ಅಕ್ಷರ ಸ್ವರೂಪವಾದ ಆತ್ಮವನ್ನು ಪ್ರಾಣವ್ಯಾಪಾರಕ್ಕೆ ಆಧಾರವಾಗಿಯೂ, ನೇತ್ರಕ್ಕೆ ಆಧಾರವಾಗಿಯೂ, ಶ್ರೋತ್ರಕ್ಕೆ ಆಧಾರವಾಗಿಯೂ ಮನಸ್ಸಿಗೆ ಮನಸ್ಸಾಗಿಯೂ, ತಿಳಿದು ಕೊಂಡವರೇ ಪರಬ್ರಹ್ಮವನ್ನು ನಿಶ್ಚಯವಾಗಿ ತಿಳಿದುಕೊಂಡವರಾಗಿದ್ದಾರೆ.

**ಮಂ.ಶ್ಲೋ॥ ಮನಸೈವಾನು ದ್ರಷ್ಟವ್ಯಂ ನೇಹ ನಾನಾಸ್ತಿ ಕಿಞ್ಚನ।**
**ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ (19)**

ತಾ : ಆ ಪರಬ್ರಹ್ಮವನ್ನು ಮನಸ್ಸಿನಿಂದಲೇ ತಿಳಿದುಕೊಳ್ಳಬೇಕು. ಬ್ರಹ್ಮದರ್ಶನ ವಿಷಯದಲ್ಲಿ ಸ್ವಲ್ಪವು ಸಹ ಅನೇಕತ್ವವೆಂಬುದಿಲ್ಲ. ಪರಬ್ರಹ್ಮದರ್ಶನ ವಿಷಯದಲ್ಲಿ ನಾನಾತ್ವವನ್ನು ಕಾಣುವವನು ಮರಣದಿಂದ ಮರಣವನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಏಕಧೈವಾನು ದ್ರಷ್ಟವ್ಯಮೇತದಪ್ರಮೇಯಂ ಧ್ರುವಂ । ವಿರಜಃ**
**ಪರ ಆಕಾಶಾದಜ ಆತ್ಮಾ ಮಹಾನ್ ಧ್ರುವಃ (20)**

ತಾ : ಈ ಬ್ರಹ್ಮವನ್ನು ಒಂದೇ ಆಗಿ (ಏಕವೆಂದೇ) ಕಾಣಬೇಕು. ಅದು ಅಪ್ರಮೇಯವಾದುದು. ಧ್ರುವವಾದುದು. ನಿತ್ಯವಾದುದು. ಮಾಲಿನ್ಯರಹಿತವಾದುದು; ಆಕಾಶಕ್ಕಿಂತ ಸೂಕ್ಷ್ಮವಾದುದು; ಜನ್ಮವಿಲ್ಲದಂತಹುದು. ಸರ್ವ ಶ್ರೇಷ್ಠವಾದುದು. ಧ್ರುವವಾದುದು.

**ಮಂ.ಶ್ಲೋ॥ ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ**
**ನಾನುಧ್ಯಾಯಾದ್ಬಹೂನ್ ಶಬ್ದಾನ್ವಾಚೋ ವಿಗ್ಲಾಪನಗ್ಂ ಹಿ ತದಿತಿ (21)**

ತಾ: ವಿಜ್ಞಾನಿಯಾದ ಬ್ರಹ್ಮವಿದನಾದ ಬ್ರಾಹ್ಮಣನು ಆತ್ಮತತ್ತ್ವವನ್ನು ತಿಳಿದು ತನ್ನಿಷ್ಠಾವಂತನಾಗಬೇಕು. ಬಹುಳಕವಾದ ಇತರ ಅನಾತ್ಮ ಶಬ್ದಗಳನ್ನು (ವಿಷಯಗಳನ್ನು) ಅಭ್ಯಾಸ ಮಾಡಬಾರದು. ಕಾರಣವೇನೆಂದರೆ ಅಂತಹ ವೃಥಾ ಶಬ್ದಗಳು ಶ್ರಮವನ್ನುಂಟು ಮಾಡುತ್ತವೆ.

**ಮಂ.ಶ್ಲೋ॥ ಸ ವಾ ಏಷ ಮಹಾನಜ ಆತ್ಮಾಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಂಛೇತೇ ಸರ್ವಸ್ಯವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯನ್ನೋ ಏವಾ ಸಾಧು ನಾ ಕನೀಯಾನ್। ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ । ಯಜ್ಞೇನ ದಾನೇನ ತಪಸಾಽನಾಶಕೇನೈತಮೇವ ವಿದಿತ್ವಾ ಮುನಿರ್ಭವತಿ। ಏತಮೇವ ಪ್ರವ್ರಾಜಿನೋಲೋಕಮಿಚ್ಛನ್ತಃ ಪ್ರವ್ರಜನ್ತಿ। ಏತದ್ಧಸ್ಮವೈ ತತ್ಪೂರ್ವೇ ವಿದ್ವಾಗ್ಂ ಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮಃ । ಯೇಷಾಂ ನೋಽಯಮಾತ್ಮಾಽಯಂ ಲೋಕ ಇತಿ ತೇಽಹ ಸ್ಮ ಪುತ್ರೈಷಣಾ ಯಾಶ್ಚ ವಿತ್ತೈಷಣಾ ಯಾಶ್ಚ ಲೋಕೈಷಣಾ ಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ ಯಾಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋ ಭೇಹ್ಯೇತೇ ಏಷಣೇ ಏವ ಭವತಃ। ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತ್ಯೇತಮು ಹೈವೈತೇ ನ ತರತ ಇತಿ। ಅತಃ ಪಾಪಮಕರವಮಿತ್ಯತಃ ಕಲ್ಯಾಣಮಕರವಮಿತ್ಯುಭೇ ಉ ಹ್ಯೈವೈಷ ಏತೇ ತರತಿ ನೈನಂ ಕೃತಾಕೃತೇ ತಪತಃ(22)**

ತಾ : ಪ್ರಾಣದಲ್ಲಿರುವ ಈ ವಿಜ್ಞಾನ ಸ್ವರೂಪನು (ಅಂದರೆ ಜೀವನು) ಆ ಪೂರ್ವೋಕ್ತವಾದ (ಈ ಹಿಂದೆಯೇ ಹೇಳಿದ) ಪರಮಾತ್ಮನೇ. ಅಂತಹ ಪರಮಾತ್ಮ ಹೃತ್ಪುಂಡರೀಕದ ಮಧ್ಯೆ ಇರುವ (ಬುದ್ಧಿಯ ವಿಜ್ಞಾನಕ್ಕೆ ಆಶ್ರಯವಾದ ಆಕಾಶದಲ್ಲಿ) ನಿವಸಿಸುತ್ತಿದ್ದಾನೆ. ಆ ಪರಮಾತ್ಮನೇ ಸರ್ವರನ್ನು ವಶದಲ್ಲಿಟ್ಟುಕೊಳ್ಳುತ್ತಾನೆ. ಸರ್ವಾಧಿಪತಿ, ಸರ್ವಶಾಸಕನಾದ ಈಶ್ವರನು, ಒಳ್ಳೆಯ ಕರ್ಮಗಳಿಂದ ದೊಡ್ಡವನಾಗುವುದಿಲ್ಲ. ಕೆಟ್ಟಕರ್ಮಗಳಿಂದ ಚಿಕ್ಕವನಾಗುವುದಿಲ್ಲ. ಆತ ಸರ್ವೇಶ್ವರನು. ಭೂತಾಧಿಪತಿ, ಭೂತಪಾಲಕನು. ಆತನೇ ಸೇತುವಾಗಿದ್ದಾನೆ. ಈ ಲೋಕಗಳು ಸ್ಥಿರವಾಗಿರಲು ಆತನು ಆಧಾರದ ರೀತಿಯಲ್ಲಿದ್ದಾನೆ. ಆ ಬ್ರಹ್ಮವನ್ನು ವೇದವಿದರಾದ ಬ್ರಾಹ್ಮಣರು ವೇದವಚನಗಳಿಂದಲೂ, ಯಜ್ಞದಿಂದಲೂ, ದಾನದಿಂದಲೂ, ತಪಸ್ಸಿನಿಂದಲೂ, ಉಪವಾಸ ವ್ರತಗಳಿಂದಲೂ, ತಿಳಿಯಬೇಕಾಗಿದೆಯೆಂದು ಹೇಳುವರು; ಈ ಬ್ರಹ್ಮತತ್ತ್ವವನ್ನು ತಿಳಿದವರನ್ನು ಋಷಿಯೆಂದು ಕರೆಯುವರು. ಈ ಬ್ರಹ್ಮತತ್ತ್ವವನ್ನು ಅಪೇಕ್ಷಿಸಿಯೇ ಸಂನ್ಯಾಸಿಗಳು ಸಂನ್ಯಾಸ ದೀಕ್ಷೆಯನ್ನು ಹೊಂದುವರು. ಈ ಕಾರಣದಿಂದಲೇ ಪ್ರಜೆಗಳು ನಿಶ್ಚಯಿಸುವುದಿಲ್ಲ. ನಾವು ಪ್ರಜೆಗಳನ್ನು ಅಂದರ ಸಂತಾನವನ್ನು ವಾಂಛಿಸಿ ಹೊಂದಬೇಕಾದುದೇನಿದೆ? ಈ ಆತ್ಮವೇ ನಮ್ಮ ಸರ್ವಸ್ವವಾದ ಲೋಕವಾಗಿದೆ. ಆದ್ದರಿಂದಲೇ ಅವರು ಪುತ್ರೇಷಣ, ವಿತ್ತೇಷಣ, ಲೋಕೈಷಣಗಳನ್ನು ತ್ಯಜಿಸಿ ಭಿಕ್ಷಾಟನೆ ಮಾಡುವರು. ಪುತ್ರೇಚ್ಛೆಯೇ

ವಿತ್ತೇಚ್ಛೆ, ವಿತ್ತೇಚ್ಛೆಯೇ ಲೋಕೇಚ್ಛ ಹೀಗೆ ದ್ವಿವಿಧಗಳೇ ವಾಂಛೆಗಳು. ಆತ್ಮವೆಂದರೆ "ನೇತಿನೇತಿ" ಇದಲ್ಲ ಇದಲ್ಲ ಎಂದು ವರ್ಣಿಸಲ್ಪಟ್ಟಿದ್ದಾನೆ. ಆತನು ಅಗ್ರಾಹ್ಯನು. ಏಕೆಂದರೆ ಕರ್ಮೇಂದ್ರಿಯಗಳಿಂದ ಬಂಧಿಸಲ್ಪಟ್ಟವನಲ್ಲ. ಆತನೇ ಅಶೀರ್ಯನು. ಅಂದರೆ ನಾಶವಿಲ್ಲದವನು. ಅಸಂಗನು. ಆದ್ದರಿಂದ ಆಸಕ್ತನಲ್ಲ, ಬದ್ಧನಲ್ಲ. ಅವಿನಾಶಿಯು, ಬ್ರಹ್ಮಜ್ಞಾನಿಯಾದ ಆತನಿಗೆ ಪಾಪಪುಣ್ಯಗಳು ಎರಡೂ ಸೋಕುವುದಿಲ್ಲ. ಆದ್ದರಿಂದಲೇ ಆತನು ನಾನು ಪಾಪವನ್ನು ಮಾಡಿದೆ ಇಲ್ಲವೆ ಪುಣ್ಯದ ಕೆಲಸ ಮಾಡಿದೆ ಎನ್ನುವುದಿಲ್ಲ. ಆತನು ಈ ಎರಡಕ್ಕೂ ಅತೀತನು. ಆತನಿಗೆ ಇವು ತಾಪವನ್ನುಂಟು ಮಾಡುವುದಿಲ್ಲ. ಹೀಗೆ ಈ ಬ್ರಹ್ಮವೇತ್ತನು ಪುಣ್ಯಪಾಪ ಎರಡನ್ನೂ ಅತಿಕ್ರಮಿಸುತ್ತಿದ್ದಾನೆ. ವಿಹಿತ ಕರ್ಮವನ್ನು ಮಾಡುವುದಕ್ಕೂ ಮಾಡದಿರುವುದಕ್ಕೂ ಈ ಎರಡಕ್ಕೂ ಬ್ರಹ್ಮವೇತ್ತನು ಸಂತಾಪವನ್ನು ಸೂಚಿಸುವುದಿಲ್ಲ.

**ಮಂ.ಶ್ಲೋ॥ ತದೇತದೃಚಾಭ್ಯುಕ್ತಂ। ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ವರ್ಧತೇ ಕರ್ಮಣಾ ನೋ ಕನೀಯಾನ್ । ತಸ್ಯೈವಸ್ಯಾತ್ಪದವಿತ್ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪ ಕೇನೇತಿ। ತಸ್ಮಾದೇವಂ ವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಸ್ಸಮಾಹಿತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯತಿ ಸರ್ವಮಾತ್ಮಾನಂ ಪಶ್ಯತಿ ನೈನಂ ಪಾಪ್ಮಾ ತರತಿ ಸರ್ವಂ ಪಾಪ್ಮಾನಂ ತರತಿಽಽ ನೈನಂ ಪಾಪ್ಮಾ ತಪತಿ ಸರ್ವಂ ಪಾಪ್ಮಾನಂ ತಪತಿ ವಿಪಾಮೋ ವಿರಜೋಽಽವಿಚಿಕಿತ್ಸೋ ಬ್ರಾಹ್ಮಣೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ ಸೋಽಹಂ ಭಗವತೇ ವಿದೇಹಾನ್ ದದಾಮಿ ಮಾಂ ಚಾಪಿ ಸಹಾ ದಾಸ್ಯಾಯೇತಿ (23)**

ತಾ : ಇಂತಹ ಆತ್ಮವನ್ನು ಕುರಿತು ವೇದಋಕ್ಕುವೇ ಸ್ಪಷ್ಟವಾಗಿ ಹೇಳಿದೆ. ಈ ಆತ್ಮವು ನಿತ್ಯವಾದುದು. ಬ್ರಹ್ಮವೇತ್ತನ ಮಹಿಮೆಯಾಗಿದೆ. ಅದು ಪುಣ್ಯಕರ್ಮದಿಂದ ವೃದ್ಧಿಯನ್ನಾಗಲೀ, ಪಾಪಕರ್ಮದಿಂದ ಕ್ಷೀಣತ್ವವನ್ನಾಗಲೀ ಹೊಂದುವುದಿಲ್ಲ. ಅದರ ಮಹಿಮೆಯನ್ನರಿತವನೇ "ಪದವಿತ್" ಎಂದು ಕರೆಯಲ್ಪಡುವವನು. ಆ ಮಹಿಮೆಯನ್ನು ಅರಿತವನಿಗೆ ಇನ್ನು ಕರ್ಮಗಳೊಂದಿಗೆ ಸಂಬಂಧವಿಲ್ಲವೇ ಇಲ್ಲ. ಆತನು ಶಾಂತನು ಇಂದ್ರಿಯ ನಿಗ್ರಹವುಳ್ಳವನು. ಉಪರತನು, ತಿತಿಕ್ಷುವು. ಏಕಾಗ್ರಚಿತ್ತನು. ಇಂತಹ ಸಲ್ಲಕ್ಷಣಗಳೊಂದಿಗೆ ತುಂಬಿರುವ ಆ ಮಹನೀಯನು ತನ್ನಲ್ಲೇ ಪರಮಾತ್ಮನನ್ನು ದರ್ಶಿಸುವನು. ಸಮಸ್ತವನ್ನೂ ಆತ್ಮವಾಗಿ ನೋಡುವವನು. ಆತನಿಗೆ ಪುಣ್ಯಪಾಪಗಳು ಅಂಟುವುದಿಲ್ಲ. ಆತನು ಪುಣ್ಯಪಾಪಗಳನ್ನು ದಾಟಿಬಿಟ್ಟಿದ್ದಾನೆ. ಅಂತಹ ಬ್ರಹ್ಮಜ್ಞಾನಿಯನ್ನು ಕೃತಾಕೃತಕರ್ಮಗಳು ಬಾಧಿಸುವುದಿಲ್ಲ. ಅಂತಹ ಕರ್ಮಗಳನ್ನು ಆತ ಭಸ್ಮ ಮಾಡಿದ್ದಾನೆ. ಆತ ಪಾಪರಹಿತನಾಗಿ, ವಿರಜನಾಗಿ, ಇಚ್ಛಾರಹಿತನಾಗಿ, ಸಂಶಯವರ್ಜಿತನಾಗಿ ಬ್ರಹ್ಮವನ್ನು ತಿಳಿದವನಾಗಿ ಇರುತ್ತಾನೆ. ಇದೇ ಬ್ರಹ್ಮಲೋಕ ಎಂದು ಯಾಜ್ಞವಲ್ಕ್ಯನು ಜನಕ ಮಹಾರಾಜನಿಗೆ ಬೋಧಿಸಿದ. ಆಗ ಜನಕನು ಯಾಜ್ಞವಲ್ಕ್ಯನೊಂದಿಗೆ ಮಹಾತ್ಮಾ! ನೀವು ನನಗೆ ಈ ಅಮೂಲ್ಯವಾದ ಉಪದೇಶವನ್ನು ಮಾಡಿದ್ದಕ್ಕೆ ನಿಮ್ಮ ಸೇವೆಯ ನಿಮಿತ್ತ ನನ್ನ ರಾಜ್ಯವನ್ನು ನಿಮಗೆ ಕೊಡುತ್ತಿದ್ದೇನೆ. ನಾನು ನಿಮ್ಮ ದಾಸನಾಗುವೆನು ಎಂದು ಹೇಳಿದ.

**ಮಂ.ಶ್ಲೋ॥ಸ ವಾ ಏಷ ಮಹಾನಜ ಆತ್ಮಾನ್ನಾದೋ ವಸುದಾನೋ ವಿನ್ದತೇ ವಸು ಯ ಏವಂ ವೇದ(24)**

ತಾ : ಆ ಪ್ರಸಿದ್ಧವಾದ ಆತ್ಮಸ್ವರೂಪವೂ, ಅನ್ನವನ್ನು ಭಕ್ಷಿಸುವಂತಹುದೂ, ಕರ್ಮ ಪ್ರಾಣಿಗಳ

ಫಲವನ್ನು ಹೊಂದಿರುವಂತಹದೂ ಆಗುವುದು. ಯಾರು ಈ ಪ್ರಕಾರವಾಗಿ ಅರ್ಥಮಾಡಿಕೊಂಡಿರುವನೋ, ಅವನು ಸರ್ವಭೂತಗಳಲ್ಲಿಯೂ ಆತ್ಮಸ್ವರೂಪನಾಗಿ, ಅನ್ನವನ್ನು ಭಕ್ಷಿಸುತ್ತಿರುವನು. ಸಮಸ್ತ ಕರ್ಮಫಲಗಳನ್ನು ಹೊಂದುವನು.

**ಮಂ.ಶ್ಲೋ॥ ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮಾಭಯಂ ವೈ ಬ್ರಹ್ಮಾಭಯಗ್ಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ (25)**

ತಾ : ಈ ಪುರುಷನು ಮಹಾತ್ಮನು, ಅಜನು, ಆತ್ಮವೇ! ಈತ ಜರಾಮರಣಗಳಿಲ್ಲದವನು. ಅಮರನು. ಅಮೃತನು. ಅಭಯ ಸ್ವರೂಪನಾದ ಪರಬ್ರಹ್ಮ. ಈ ಪ್ರಕಾರ ಯಾರು ತಿಳಿದುಕೊಳ್ಳುವನೋ ಆತನು ಭಯರಹಿತನಾದ ಪರಬ್ರಹ್ಮ ಸ್ವರೂಪವೇ!

## ಷಷ್ಠಾಧ್ಯಾಯ – ಪಂಚಮ ಬ್ರಾಹ್ಮಣಂ

**ಮಂ.ಶ್ಲೋ॥ ಅಥ ಹ ಯಾಜ್ಞವಲ್ಕ್ಯಸ್ಯ ದ್ವೇ ಭಾರ್ಯೇ ಬಭೂವತುರ್ಮೈತ್ರೇಯೀ ಚ ಕಾತ್ಯಾಯನೀ ಚ ತಯೋರ್ಹ ಮೈತ್ರೇಯೀ ಬ್ರಹ್ಮವಾದಿನೀ ಬಭೂವ ಸ್ತ್ರೀ ಪ್ರಜ್ಞೈವ ತರ್ಹಿ ಕಾತ್ಯಾಯನ್ಯಥ ಹ ಯಾಜ್ಞವಲ್ಕ್ಯೋಽನ್ಯದ್ವೃತ್ತಮುಪಾಕರಿಷ್ಯನ್ (1)**

ತಾ : ಯಾಜ್ಞವಲ್ಕ್ಯ ಋಷಿಗೆ ಮೈತ್ರೇಯಿ, ಕಾತ್ಯಾಯಿನಿಯೆನ್ನುವ ಇಬ್ಬರು ಪತ್ನಿಯರಿದ್ದರು. ಆ ಇಬ್ಬರು ಭಾರ್ಯೆಯರಲ್ಲಿ ಮೈತ್ರೇಯಿ ಎನ್ನುವಾಕೆ ಬ್ರಹ್ಮವಾದಿನಿಯಾಗಿದ್ದಳು. ಆಗ ಕಾತ್ಯಾಯಿನಿ ಮಾತ್ರ ಸ್ತ್ರೀಗೆ ಉಚಿತವಾದ ಜ್ಞಾನವನ್ನು ಹೊಂದಿದವಳಾಗಿದ್ದಳು. ಈ ಪ್ರಕಾರವಾಗಿ ಇರಲು, ಯಾಜ್ಞವಲ್ಕ್ಯನು ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ನಿರ್ಧರಿಸಿದ.

**ಮಂ.ಶ್ಲೋ॥ ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ ಪ್ರವ್ರಜಿಷ್ಯನ್ವಾ ಅರೇಽಹಮಸ್ಮಾತ್ ಸ್ಥಾನಾದಸ್ಮಿ ಹಸ್ತ ತೇಽನಯಾ ಕಾತ್ಯಾಯನ್ಯಾಂತಂ ಕರವಾಣೀತಿ (2)**

ತಾ : ಸಂನ್ಯಾಸ ಸ್ವೀಕರಿಸಲು ನಿಶ್ಚಯಿಸಿದವನಾಗಿ ಯಾಜ್ಞವಲ್ಕ್ಯನು ಮೈತ್ರೇಯಿಯನ್ನು ಕರೆದು, ಓ ಮೈತ್ರೇಯಿ! ನಾನು ಈ ಗೃಹಸ್ಥಾಶ್ರಮದಿಂದ ಸಂನ್ಯಾಸ ತೆಗೆದುಕೊಳ್ಳಲು ಇಚ್ಛೆಯುಳ್ಳವನಾಗಿದ್ದೇನೆ. ಆದ್ದರಿಂದ ನಿನಗೆ ಸಮ್ಮತವಾದ ಪಕ್ಷದಲ್ಲಿ ಈ ಕಾತ್ಯಾಯಿನಿಯೊಂದಿಗೆ ನನ್ನ ಸಂಪತ್ತನ್ನು ವಿಭಜಿಸಿಕೊಟ್ಟು ಸ್ನೇಹವನ್ನು ಉಳಿಸಬೇಕೆಂದುಕೊಂಡಿದ್ದೇನೆ.

**ಮಂ.ಶ್ಲೋ॥ ಸಾ ಹೋವಾಚ ಮೈತ್ರೇಯೀ ಯನ್ನು ಮ ಇಯಂ ಭಗೋಸ್ಸರ್ವಾ ಪೃಥಿವೀ ವಿತ್ತೇನ ಪೂರ್ಣಾಸ್ಯಾತ್ ಸ್ಯಾನ್ನ್ವಹಂ ತೇನಾಮೃತಾ ಅಹೋ3 ನೇತಿ ನೇತಿ ಹೋವಾಚ ಯಾಜ್ಞವಲ್ಕ್ಯೋ ಯಥೈವೋಪಕರಣತಾಂ ಜೀವಿತಂ ತಥೈವ ತೇ ಜೀವಿತಗ್ಂ ಸ್ಯಾದಮೃತತ್ವಸ್ಯತು ನಾ ಶಾಸ್ತಿ ವಿತ್ತೇನೇತಿ (3)**

ತಾ : ಓ ಯಾಜ್ಞವಲ್ಕ್ಯಾ! ಈ ಸಮಸ್ತ ಭೂಮಿಯು ಅನಂತ ಧನವನ್ನು ಹೊಂದಿದರೆ ಮಾತ್ರ,

ಆ ಧನದಿಂದ ನನಗೆ ಹೇಗೆ ಮೋಕ್ಷವು ಲಭಿಸುವುದು? ಎಂದು ಈ ರೀತಿಯಾಗಿ ಮೈತ್ರೇಯಿ ಪ್ರಶ್ನಿಸಲು, ಯಾಜ್ಞವಲ್ಕ್ಯನು ಓ ಮೈತ್ರೇಯಿಯೇ, ಲೋಕದಲ್ಲಿ ಸಮಸ್ತ ಸಾಧನ ಸಂಪತ್ತುಳ್ಳವರಿಗೆ ಸುಖಜೀವನ ಉಂಟಾಗುವಂತೆ ಧನದಿಂದ ಸುಖಜೀವನ ಲಭಿಸುವುದೇ ಹೊರತು ಮೋಕ್ಷವು ಬೇಕೆಂಬ ಆಶೆ ಅವರಿಗೆ ಲವಲೇಶವೂ ಇಲ್ಲ.

**ಮಂ.ಶ್ಲೋ॥ ಸ ಹೋವಾಚ ಮೈತ್ರೇಯಿೀ ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ಯದೇವ ಭಗವಾನ್ವೇತ್ಥ ತದೇವ ಮೇ ಬ್ರೂಹೀತಿ (4)**

ತಾ : ಆ ಮೈತ್ರೇಯಿ! ಈ ರೀತಿಯಾಗಿ ಹೇಳಿದಳು. ನಾನು ಯಾವುದರಿಂದ ಮುಕ್ತಳಾಗುವುದಿಲ್ಲವೋ, ಆ ಸಂಪತ್ತನ್ನು ನಾನು ಏನು ಮಾಡಿಕೊಳ್ಳಲಿ? ಪೂಜ್ಯನಾದ ಓ ಯಾಜ್ಞವಲ್ಕ್ಯ! ಯಾವುದರಿಂದ ಬ್ರಹ್ಮವನ್ನು ಗುರುತಿಸಲಾಗುವುದೋ, ಅದನ್ನೇ ನನಗೆ ಬೋಧಿಸು ಎಂದು ಮೈತ್ರೇಯಿ ಕೇಳಿಕೊಂಡಳು.

**ಮಂ.ಶ್ಲೋ॥ ಸ ಹೋವಾಚ ಯಾಜ್ಞವಲ್ಕ್ಯಃ ಪ್ರಿಯಾ ವೈ ಖಲು ನೋ ಭವತೀ ಸತೀ ಪ್ರಿಯಮವೃಧದ್ಧಂತ ತರ್ಹಿ ಭವತ್ಯೇತದ್ವ್ಯಾಖ್ಯಾಸ್ಯಾಮಿ ತೇ ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವೇತಿ (5)**

ತಾ: ಓ ಮೈತ್ರೇಯಿ! ನನಗೆ ಪ್ರಿಯಳಾಗಿ ನೀನು ಪ್ರಿಯವನ್ನೇ ಅಭಿವೃದ್ಧಿಗೊಳಿಸುವಂತಹವಳಾಗಿರುವೆ. ಆದ್ದರಿಂದ ನೀನು ಮೋಕ್ಷಸಾಧನವನ್ನು ಬಯಸುತ್ತಿರುವೆಯಾದರೆ ನಿನಗೆ ಅದನ್ನೇ ಹೇಳುವೆ. ಈಗ ಹೇಳುವಂತಹ ನನ್ನ ವಾಕ್ಯವನ್ನು ಸಾವಧಾನಚಿತ್ತದಿಂದ ಆಲಿಸು ಎಂದು ಯಾಜ್ಞವಲ್ಕ್ಯನು ನುಡಿದ.

**ಮಂ.ಶ್ಲೋ॥ ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತುಕಾಮಾಯ ಪತಿಃ ಪ್ರಿಯೋ ಭವತಿ। ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ। ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ। ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ। ನ ವಾ ಅರೇ ಪಶೂನಾಂ ಕಾಮಾಯ ಪಶವಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪಶವಃ ಪ್ರಿಯಾ ಭವನ್ತಿ। ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಬ್ರಹ್ಮ ಪ್ರಿಯಂ ಭವತಿ। ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ। ನ ವಾ ಅರೇ ಲೋಕಾನಾಂ ಕಾಮಾಯ ಲೋಕಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಲೋಕಾಃ ಪ್ರಿಯಾಭವನ್ತಿ। ನ ವಾ ಅರೇ ದೇವಾನಾಂ ಕಾಮಾಯ ದೇವಾಃ ಪ್ರಿಯಾಭವನ್ತ್ಯಾತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವನ್ತಿ। ನ ವಾ ಅರೇ ವೇದಾನಾಂ ಕಾಮಾಯ ವೇದಾಃ ಪ್ರಿಯಾಭವನ್ತ್ಯಾತ್ಮನಸ್ತು ಕಾಮಾಯ ವೇದಾಃ ಪ್ರಿಯಾಭವನ್ತ್ಯಾತ್ಮನಸ್ತು ಕಾಮಾಯ**

**ವೇದಾಃ ಪ್ರಿಯಾ ಭವನ್ತಿ। ನ ವಾ ಅರೇ ಭೂತಾನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವನ್ತ್ಯಾತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವನ್ತಿ। ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ। ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಗ್ಂ ಸರ್ವಂ ವಿದಿತಂ (6)**

ತಾ : ಓ ಮೈತ್ರೇಯಿ! ಪತಿಯ ಆನಂದಕ್ಕಾಗಿ ಪತ್ನಿಯು ತನ್ನ ಪತಿಯನ್ನು ಪ್ರೇಮಿಸುವುದಿಲ್ಲ. ತನ್ನ ಆನಂದವನ್ನು ಬಯಸಿಯೇ ಪತಿಯನ್ನು ಪ್ರೀತಿಸುತ್ತಾಳೆ. ಪತ್ನಿಯ ಸಂತೋಷಕ್ಕಾಗಿ ಪತ್ನಿಯನ್ನು ಪತಿಯು ಪ್ರೀತಿಸುವುದಿಲ್ಲ. ತನ್ನ ಸಂತೋಷಕ್ಕಾಗಿಯೇ, ಯಾರ್‍ಯಾರು ಯಾವುದನ್ನು ಪ್ರೀತಿಸುವರೋ ಆಯಾ ಪದಾರ್ಥಕ್ಕಾಗಿ ಪ್ರೀತಿಸುವುದಿಲ್ಲ. ತನ್ನ ಸಂತೋಷಕ್ಕಾಗಿ ಆಯಾ ಪದಾರ್ಥಗಳನ್ನು ಪ್ರೀತಿಸುತ್ತಾರೆ. ತನ್ನನ್ನು ಪ್ರೀತಿಸುವುದೆನ್ನುವುದು ಯಾರ ಸಂತೋಷಕ್ಕಾಗಿಯೂ ಅಲ್ಲ. ಆ ಪ್ರೀತಿ ನಿರ್ಹೇತುಕವು ಆನಂದ ಸ್ಥಾನವು, ಆತ್ಮ. ಆದ್ದರಿಂದ ಓ ಮೈತ್ರೇಯಿ! ಆತ್ಮವೇ ನೋಡತಕ್ಕದ್ದು (ತಾನೇ ಆಗಿರುವಂತಹುದು.) ಆಚಾರ್ಯಾಗಮದಿಂದ ಕೇಳತಕ್ಕದ್ದು. ತರ್ಕದಿಂದಲೂ, ಉಪಪತ್ತಿಯಿಂದಲೂ, ವಿಚಾರಿಸಬೇಕಾದುದು (ಮನನ ಮಾಡುವಂತಹುದು) ಧ್ಯಾನಿಸುವಂತಹುದು. ಹೀಗೆ ಶ್ರವಣ ಮನನ, ನಿದಿಧ್ಯಾಸನಗಳಿಂದ ಆತ್ಮವನ್ನು ಕಾಣುವಂತಾಗಿ ಆತ್ಮ ನೋಡಲ್ಪಟ್ಟು ತನ್ನನ್ನು ತಾನು ಅರಿತುಕೊಳ್ಳಲು ಸರ್ವವೂ ತಿಳಿಯುತ್ತದೆ. (ಯಾಜ್ಞವಲ್ಕ್ಯನು ಮೈತ್ರೇಯಿಯೊಂದಿಗೆ ಹೇಳಿದ.)

**ಮಂ.ಶ್ಲೋ॥ ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮವೇದ ಕ್ಷತ್ರಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಕ್ಷತ್ರಂ ವೇದ ಲೋಕಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ಲೋಕಾನ್ವೇದ ದೇವಾಸ್ತಂ ಪರಾದುರ್ಯೋಽಸ್ಯತ್ರಾತ್ಮನೋ ದೇವಾನ್ವೇದ ವೇದಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ವೇದಾನ್ವೇದಾನ್ವೇದ ಭೂತಾನಿ ತಂ ಪರಾದುರ್ಯೋಽನ್ಯತ್ರಾತ್ಮನೋ ಭೂತಾನಿ ವೇದ ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಸ್ಸರ್ವಂ ವೇದೇದಂ ಬ್ರಹ್ಮೇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮೇ ವೇದಾ ಇಮಾನಿ ಸರ್ವಾಣಿ ಭೂತಾನೀದಗ್ಂ ಸರ್ವಂ ಯದಯಮಾತ್ಮಾ (7)**

ತಾ : ಓ ಮೈತ್ರೇಯಿ! ಆ ಬ್ರಹ್ಮಕ್ಷತ್ರಾದಿ ಜಾತಿಗಳೆಲ್ಲವೂ ಆತ್ಮಸ್ವರೂಪವಾಗಿಯೇ ಇವೆ. ಈ ಮಂತ್ರದಲ್ಲಿ ಹೇಳಿರುವ ಬ್ರಹ್ಮಕ್ಷತ್ರಾದಿ ಸರ್ವವೂ ಆತ್ಮಕ್ಕಿಂತ ಅನ್ಯವಾಗಿ ಕಾಣುವವನನ್ನು ಕುರಿತು, ಬ್ರಹ್ಮಕ್ಷತ್ರಾದಿ ಜಾತಿಗಳು ಬೇರೆಯಾಗಿ ಭಾವಿಸುವುದೆಂದು ಯಾಜ್ಞವಲ್ಕ್ಯನು ಹೇಳಿದ.

**ಮಂ.ಶ್ಲೋ॥ ಸ ಯಥಾ ದುನ್ದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ಗ್ರಹಣಾಯ ದುನ್ದುಭೇಸ್ತು ಗ್ರಹಣೇನ ದುನ್ದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ (8)**

**ಸ ಯಥಾ ಶಙ್ಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ಗ್ರಹಣಾಯ ಶಙ್ಖಸ್ಯತು ಗ್ರಹಾಣೇ ಸ ಶಙ್ಖಧ್ಮನ್ಯ ವಾ ಶಬ್ದೋ ಗೃಹೀತಃ (9)**

ಸ ಯಥಾ ವೀಣಾಯೈ ವಾದ್ಯಮಾನಾಯೈ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ಗ್ರಹಣಾಯ ವೀಣಾಯೈತು ಗ್ರಹಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ (10)

ತಾ : ಓ ಮೈತ್ರೇಯಿೀ! ಆತ್ಮಕ್ಕಿಂತ (ಬೇರೆ ಯಾವುದೂ) ಬೇರೆಯಾಗಿ ಯಾವುದೂ ಇಲ್ಲದೆ ಎಲ್ಲವೂ ಆತ್ಮ ಮಾತ್ರವೇ ಆಗಿದೆ. ಆತ್ಮವನ್ನು ತಿಳಿದುಕೊಳ್ಳುವುದರಿಂದ ಎಲ್ಲವೂ ತಿಳಿಯಲು ಆಗುವುದು. ಹೇಗೆಂದರೆ ಭೇರಿ ಮೊಳಗುತ್ತಿರುವಾಗ ಇತರ ಧ್ವನಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಗದೆ, ಭೇರಿ ಧ್ವನಿಯನ್ನು ಮಾತ್ರವೇ ತಿಳಿದುಕೊಂಡಂತೆ, ಶಂಖವನ್ನು ಊದುತ್ತಿರುವಾಗ ಇತರ ಧ್ವನಿಗಳನ್ನು ಕೇಳಲು ಅಶಕ್ಯವಾದಂತೆ, ಕೇವಲ ಶಂಖದ ಧ್ವನಿ ಮಾತ್ರವೇ ಕೇಳಬರುವಂತೆ, ವೀಣೆ ನುಡಿಸುವಾಗ, ಇತರ ಶಬ್ದಗಳನ್ನು ಕೇಳಿಸಿಕೊಳ್ಳಲು ಅಶಕ್ಯವಾದಂತೆ, ವೀಣೆಯ ನಾದವನ್ನು ಮಾತ್ರವೇ ತಿಳಿದು ಕೊಳ್ಳುವಂತೆ, ಆತ್ಮಕ್ಕಿಂತ ಬೇರೆ ಯಾವುದೂ ಇಲ್ಲವಾದ್ದರಿಂದ ಆತ್ಮವನ್ನು ತಿಳಿದುಕೊಂಡ ಕ್ಷಣವೇ ಆತ್ಮ ಸ್ವರೂಪವಾದ ಎಲ್ಲವನ್ನೂ ತಿಳಿಯಲಾಗುತ್ತದೆ ಎಂದು ಯಾಜ್ಞವಲ್ಕ್ಯನು ಹೇಳಿದನು.

ಮಂ.ಶ್ಲೋ॥ ಸ ಯಥಾರ್ದ್ರೈದಾಗ್ನೇರಭ್ಯಾಹಿತಸ್ಯ ಪೃಥಗ್ಧೂಮಾ ವಿನಿಶ್ಚರನ್ತ್ಯೇವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವಾಙ್ಗೀರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಗ್ಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಸ್ಸರ್ವಾಣಿ ಚ ಭೂತಾನ್ಯಸ್ಯೈವೈತಾನಿ ಸರ್ವಾಣಿ ನಿಶ್ವಸಿತಾನಿ (11)

ತಾ : ಈ ಸಮಸ್ತವು ಆತ್ಮದಿಂದಲೇ ಯಾವ ರೀತಿಯಾಗಿ ಬರುತ್ತದೆಯೆಂದರೆ ಓ ಮೈತ್ರೇಯಿೀ! ಒದ್ದೆ ಸೌದೆಯ ಬೆಂಕಿಯಲ್ಲಿನ ಹೊಗೆಯು ಅಗ್ನಿ(ಗಿಂತ)ಯಿಂದ ಬೇರೆಯಾಗಿ ಹೋಗುವಂತೆ ಆ ಪರಮಾತ್ಮನಿಂದ ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣ ವೇದಗಳು ಇತಿಹಾಸ ಪುರಾಣಾದಿಕಗಳು, ಇಹಲೋಕ, ಪರಲೋಕ, ಸಮಸ್ತಭೂತಗಳು, ಈ ಪರಬ್ರಹ್ಮದ ನಿಟ್ಟುಸಿರಿನ (ದೀರ್ಘವಾದ ಶ್ವಾಸದ) ವಾಯುಗಳಾಗಿ ಏರ್ಪಡುವುದೆಂದು (ವಾಯುಗಳಿಂದ ಉಂಟಾಗುವುದು) ಯಾಜ್ಞವಲ್ಕ್ಯನು ಬೋಧಿಸಿದನು.

ಮಂ.ಶ್ಲೋ॥ ಸ ಯಥಾ ಸರ್ವಾಸಾಮಪಾಗ್ಂ ಸಮುದ್ರ ಏಕಾಯನಮೇವಗ್ಂ ಸರ್ವೇಷಾಗ್ಂ ಸ್ಪರ್ಶಾನಾಂ ತ್ವಗೇಕಾಯನಮೇವಗ್ಂ ಸರ್ವೇಷಾಗ್ಂ ರಸನಾಂ ಜಿಹ್ವೈಕಾಯನಮೇವಗ್ಂ ಸರ್ವೇಷಾಂ ಗನ್ಧಾನಾಂ ನಾಸಿಕೈಕಾಯನಮೇವಗ್ಂ ಸರ್ವೇಷಾಗ್ಂ ರೂಪಾಣಾಂ ಚಕ್ಷುರೇಕಾಯನ-ಮೇವಗ್ಂ ಸರ್ವೇಷಾಗ್ಂ ಶಬ್ದಾನಾಗ್ಂ ಶ್ರೋತ್ರಮೇಕಾಯನಮೇವಗ್ಂ ಸರ್ವೇಷಾಗ್ಂ ಸಂಕಲ್ಪಾನಾಂ ಮನ ಏಕಾಯನಮೇವಗ್ಂ ಸರ್ವಾಸಾಂ ವಿದ್ಯಾನಾಗ್ಂ ಹೃದಯಮೇಕಾ-ಯನಮೇವಗ್ಂ ಸರ್ವೇಷಾಗ್ಂ ಕರ್ಮಣಾಗ್ಂ ಹಸ್ತಾವೇಕಾಯನಮೇವಗ್ಂ ಸರ್ವೇಷಾಮಾ-ನ್ದಾನಾಮುಪಸ್ಥ ಏಕಾಯನಮೇವಗ್ಂ ಸರ್ವೇಷಾಂ ವಿಸರ್ಗಾಣಾಗ್ಂ ಪಾಯುರೇಕಾಯನ-ಮೇವಗ್ಂ ಸರ್ವೇಷಾಮಧ್ವನಾಂ ಪಾದವೇಕಾಯನಮೇವಗ್ಂ ಸರ್ವೇಷಾಂ ವೇದಾನಾಗ್ಂ ವಾಗೇಕಾಯನಂ (12)

ತಾ : ಸಮಸ್ತವಾದ ಜಲಗಳಿಗೆ ಸಮುದ್ರವು ಮುಖ್ಯಸ್ಥಾನ. ಸಮಸ್ತವಾದ ಸ್ಪರ್ಶಗಳಿಗೆ ತ್ವಗಿಂದ್ರಿಯವು ಮುಖ್ಯಸ್ಥಾನ. ನಾಲಿಗೆ ಸಮಸ್ತವಾದ ರಸಗಳಿಗೆ ಮುಖ್ಯಸ್ಥಾನ; ಘ್ರಾಣೇಂದ್ರಿಯವು ಸಮಸ್ತ ಗಂಧಗಳಿಗೆ ಮುಖ್ಯಸ್ಥಾನ. ನೇತ್ರವು ಸಮಸ್ತವಾದ ರೂಪಗಳಿಗೆ ಮುಖ್ಯಸ್ಥಾನ: ಶ್ರವಣೇಂದ್ರಿಯವು ಸಮಸ್ತವಾದ ಶಬ್ದಗಳಿಗೆ ಮುಖ್ಯ ಸ್ಥಾನ. ಮನಸ್ಸು ಸಮಸ್ತವಾದ ಸಂಕಲ್ಪಗಳಿಗೆ ಮುಖ್ಯಸ್ಥಾನ: ಬುದ್ಧಿ ಸಮಸ್ತವಾದ ವಿದ್ಯೆಗಳಿಗೆ ಮುಖ್ಯಸ್ಥಾನ. ಹಸ್ತಗಳು ಸಮಸ್ತವಾದ ಕರ್ಮಗಳಿಗೆ ಮುಖ್ಯಸ್ಥಾನ: ಉಪಸ್ಥವು ಸಮಸ್ತವಾದ ಆನಂದಗಳಿಗೆ ಮುಖ್ಯಸ್ಥಾನ; ಗುದವು ಸಮಸ್ತವಾದ ಮಲೋತ್ಸರ್ಜನಾದಿಗಳಿಗೆ ಮುಖ್ಯಸ್ಥಾನ. ಪಾದಗಳು ಸಮಸ್ತವಾದ ಮಾರ್ಗಗಳಿಗೆ ಮುಖ್ಯಸ್ಥಾನ: ವಾಗೀಂದ್ರಿಯವು ಸಮಸ್ತವಾದ ವೇದಗಳಿಗೆ ಮುಖ್ಯ ಸ್ಥಾನ.

**ಮಂ.ಶ್ಲೋ॥ ಸ ಯಥಾ ಸೈನ್ಧವಘನೋಽನನ್ತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯ -ಮಾತ್ಮಾಽನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವೈ ತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ (13)**

ತಾ : ಓ ಮೈತ್ರೇಯಿ! ಬಾಹ್ಯಾಂತರ ಬೇಧವಿಲ್ಲದ ಉಪ್ಪುಹರಳಿನ ಪೂರ್ವ ರೂಪವು ನೀರುಗಡ್ಡೆಯೇ ಆಗಿರುವಂತೆ. ಬಾಹ್ಯಾಂತರವಿಲ್ಲದ ಈ ಸರ್ವಾತ್ಮವೂ ಪ್ರಜ್ಞಾನದ ಘನೀಭಾವವೇ ಆಗುವುದು. ಇಂತಹ ಆತ್ಮವು ಈ ಭೂತಗಳಿಂದ ಹುಟ್ಟಿ, ಆ ಭೂತಗಳನ್ನನುಸರಿಸಿಯೇ ಮರಣವನ್ನು ಹೊಂದುತ್ತದೆ. ಜ್ಞಾನೋದಯಕ್ಕೆ ಮೊದಲು ವಿಶೇಷ ಜ್ಞಾನವನ್ನು ಹೊಂದಿದಂತಹುದಾಗಿ, ಮರಣಾನಂತರ, ಭೇದವಿಷಯಕ ಸೂಚನೆಯಿಲ್ಲದೆ ಬ್ರಹ್ಮಮಾತ್ರವೇ ಆಗಿದೆಯೆಂದು ಹೇಳುತ್ತಿರುವೆನು. (ಯಾಜ್ಞವಲ್ಕ್ಯನು ಹೀಗೆ ಬೋಧಿಸಿದನು.)

**ಮಂ.ಶ್ಲೋ॥ ಸಾ ಹೋವಾಚ ಮೈತ್ರೇಯ್ಯತ್ರೈವ ಮಾ ಭಗವಾನ್ ಮೋಹಾನ್ತಮಾಪೀಪಿಪನ್ನ ವಾ ಅಹಮಿಮಂ ವಿಜಾನಾಮೀತಿ ಸ ಹೋವಾಚ ನ ವಾ ಅರೇಽಹಂ ಮೋಹಂ ಬ್ರವೀಮ್ಯ ವಿನಾಶೀ ವಾ ಅರೇಽಯಮಾತ್ಮಾನುಚ್ಛಿತ್ತಿಧರ್ಮಾ (14)**

ತಾ : ಮೈತ್ರೇಯಿ: "ಓ ಯಾಜ್ಞವಲ್ಕ್ಯಾ! ಪೂಜ್ಯನಾದ ನೀನು ನನ್ನನ್ನು ಈ ಪ್ರಜ್ಞಾನಘನ ಸ್ವರೂಪವಾದ ಬ್ರಹ್ಮ ವಸ್ತುವಿನ ವಿಷಯವಾಗಿ ಮೋಹವನ್ನುಂಟು ಮಾಡುತ್ತಿದ್ದೀಯೆ. ಈ ಆತ್ಮ ಸ್ವರೂಪವನ್ನು ನಾನು ಗ್ರಹಿಸಲಾರೆ. ಯಾಜ್ಞವಲ್ಕ್ಯ: ಓ ಮೈತ್ರೇಯಿ! ನಾನು ಮೋಹದ ಬಗ್ಗೆ ಹೇಳಲೇ ಇಲ್ಲ. ಈ ಆತ್ಮಸ್ವರೂಪವು ವಿನಾಶ ಸ್ವಭಾವವಿಲ್ಲದಿರುವುದಂತಹುದಾಗಿ, ವಿಕಾರ ರೂಪವಾದ ನಾಶವಾಗಲಿ, ಅಭಾವರೂಪವಾದ ನಾಶವಾಗಲಿ ಇಲ್ಲದಂತಹುದಾಗಿದೆಯೆಂದು ತಿಳಿದುಕೊಳ್ಳಬೇಕು.

**ಮಂ.ಶ್ಲೋ॥ ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ತದಿತರ ಇತರಂ ಜಿಘ್ರತಿ ತದಿತರ ಇತರಗ್ಂ ರಸಯತೇ ತದಿತರ ಇತರಮಭಿವದತಿ ತದಿತರ ಇತರಗ್ಂ ಶೃಣೋತಿ ತದಿತರ ಇತರಂ ಮನುತೇ ತದಿತರ ಇತರಗ್ಂ ಸ್ಪೃಶತಿ ತದಿತರ ಇತರಂ ವಿಜಾನಾತಿ ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ತತ್ಕೇನ ಕಂ ಜಿಘ್ರೇತ್ತತ್ಕೇನ ಕಗ್ಂ**

**ರಸಯೇತ್ತತ್ಕೇನ ಕಮಭಿವದೇತ್ತತ್ಕೇನ ಕಗ್ಂ ಶೃಣುಯಾತ್ತತ್ಕೇನ ಕಂ ಮನ್ವೀತ ತತ್ಕೇನ ಕಗ್ಂ ಸ್ಪೃಶೇತ್ತತ್ಕೇನ ಕಂ ವಿಜಾನೀಯಾದ್ಯೇನೇದಗ್ಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ಸ ಏಷನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇऽಶೀರ್ಯೋ ನ ಹಿ ಶೀರ್ಯತೇऽಸಙ್ಗೋ ನ ಹಿ ಸಜ್ಯತೇऽಸಿತೋ ನ ವ್ಯಥತೇ ನ ರಿಷ್ಯತಿ ವಿಜ್ಞಾತಾರಮರೇ ಕೇನ ವಿಜಾನೀಯಾದಿತ್ಯುಕ್ತಾನುಶಾಸನಾನಿ ಮೈತ್ರೇಯ್ಯೈ ತಾವದರೇ ಖಲ್ವಮೃತತ್ವಮಿತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ (15)**

ತಾ : ಯಾಜ್ಞ: ಓ ಮೈತ್ರೇಯಿ! ಆತ್ಮ ಯಾವಾಗ ಬೇಧವನ್ನು ಹೊಂದಿರುವಂತೆ ಕಾಣಿಸುತ್ತಿದೆಯೋ, ಆಗ ಆ ಆತ್ಮವೇ ತಾನು ಬೇರೆಯಾಗಿ ತನಗೆ ಬೇರೆಯಾಗಿರುವ ರೂಪ ರಸ ಗಂಧಾದಿಗಳನ್ನು ನೇತ್ರಜಿಹ್ವಾಘ್ರಾಣಾದಿಗಳ ಮೂಲಕ ತಿಳಿದುಕೊಳ್ಳುವುದು. ಆತ್ಮವು ಅಜ್ಞಾನಾವಸ್ಥೆಯಲ್ಲಿ ಭೇದವಿಲ್ಲದಂತೆಯೇ ಇದ್ದು ಜ್ಞಾನಾವಸ್ಥೆಯಲ್ಲಿ ಸರ್ವಾತ್ಮ ಸ್ವರೂಪವಾದ ತಾನು, ತನಗೆ ಬೇರೆಯಲ್ಲದೆ ಒಂದೇ ಆಗಿ ಇರುವುದು. ದ್ವೈತವಿರುವ ಕಡೆ ಅಂದರೆ ಎರಡನೆಯ ಪದಾರ್ಥವಿದ್ದಲ್ಲಿ, ಒಂದು ಮತ್ತೊಂದನ್ನು ನೋಡುತ್ತಾ, ಮತ್ತೊಂದನ್ನು ಆಲಿಸುತ್ತಾ, ಇನ್ನೊಂದನ್ನು ಮಾತನಾಡಿಸುತ್ತಾ ವಿಚಾರಿಸುವುದು, ತಿಳಿದುಕೊಳ್ಳುವುದು ಜರುಗುತ್ತದೆ. ಆದರೆ ಯಾರಿಗೆ ಸರ್ವವೂ ಆತ್ಮರೂಪವೆಂದು ಏಕತ್ವಾನುಭವವು ಏರ್ಪಡುವುದೋ, ಆಗ ಆತ ಯಾವುದರಿಂದ ಯಾವುದನ್ನು ಆಘ್ರಾಣಿಸುವನು? ಯಾವುದರಿಂದ ಯಾವುದನ್ನು ಮಾತನಾಡುತ್ತ ವಿಚಾರಿಸಿಕೊಳ್ಳುವನು? ಯಾವುದರಿಂದ ಇನ್ನೊಂದನ್ನು ತಿಳಿದುಕೊಳ್ಳಬಲ್ಲ? ಯಾವ ಆತ್ಮ ಮೂಲವಾದ ಈ ಸಮಸ್ತವನ್ನು ಆತ ತಿಳಿಯುವನೋ ಅಂತಹ ಆತ್ಮವನ್ನು ಮತ್ಯಾವುದರಿಂದ ತಿಳಿದುಕೊಳ್ಳಬೇಕು? ತಿಳಿಯುವುದಕ್ಕೆ ಸಾಧ್ಯವೇ ಇಲ್ಲ. ಆತ್ಮವೇ ಆತ್ಮವನ್ನು ತಿಳಿದುಕೊಳ್ಳುವುದು. ಹೀಗೆ ಆಜ್ಞಾಪಿಸುವಂತಹವಳಾದೆ. ಓ ಮೈತ್ರೇಯಿ! ಆತ್ಮವು ತನಗೆ ಬೇರು ಇಲ್ಲದಿದ್ದುದರಿಂದಲೇ ಸರ್ವವಿಜ್ಞಾತವಾಗಿ ತಾನು ನಿಂತತಹ ಇದೇ ಮುಕ್ತಿಯೆಂದು ತಿಳಿದುಕೊ. ಯಾಜ್ಞವಲ್ಕ್ಯನು ಭಾರ್ಯೆಯಾದ ಮೈತ್ರೇಯಿಗೆ ಸ್ವಸ್ವರೂಪವನ್ನು ಈ ರೀತಿಯಾಗಿ ಉಪದೇಶಿಸಿ ಸಂನ್ಯಾಸ ಸ್ವೀಕಾರ ಮಾಡಿದ.

## ಷಷ್ಠಾಧ್ಯಾಯ – ಷಷ್ಠ ಬ್ರಾಹ್ಮಣಂ

ಮಂ.ಶ್ಲೋ॥ **ಅಥ ವಗ್ಂಶಃ ಪೌತಿಮಾಷ್ಯಾತ್ಪೌತಿಮಾಷ್ಯೋ ಗೌಪವನಾದ್ಗೌಪವನಃ ಪೌತಿಮಾಷ್ಯಾ-ತ್ಪೌತಿಮಾಷ್ಯೋ ಗೌಪವನಾದ್ಗೌಪವನೋ ಕೌಶಿಕಾತ್ಕೌಶಿಕಃ, ಕೌಣ್ಡಿನ್ಯಾತ್ಕೌಣ್ಡಿನ್ಯಃ, ಶಾಣ್ಡಿಲ್ಯಾ-ಚ್ಛಾಣ್ಡಿಲ್ಯಃ, ಕೌಶಿಕಾಚ್ಚ ಗೌತಮಾಚ್ಚ ಗೌತಮಃ (1)**

ಮಂ.ಶ್ಲೋ॥ **ಅಗ್ನಿವೇಶ್ಯಾದಾಗ್ನಿವೇಶ್ಯೋ ಗಾರ್ಗ್ಯಾದ್ಗಾರ್ಗ್ಯೋ ಗಾರ್ಗ್ಯಾದ್ಗಾರ್ಗ್ಯೋ ಗೌತಮಾದ್ಗೌತಮಃ ಸೈತವಾತ್ಸೈತವಃ ಪರಾಶರ್ಯಾಯಣಾತ್ಪಾರಾಶರ್ಯಾಯಣೋ ಗಾರ್ಗ್ಯಾಯಣಾದ್ಗಾರ್ಗ್ಯಾಯಣ ಉದ್ದಾಲಕಾಯನಾದುದ್ದಾಲಕಾಯನೋ ಜಾಬಾಲಾಯನಾಜ್ಜಾಬಾಲಾಯನೋ**

ಮಾಧ್ಯನ್ದಿನಾಯನಾನ್ಮಾಧ್ಯನ್ದಿನಾಯನಾಸ್ಸೌಕರಾಯಣಾತ್ಸೌಕರಾಯಣಃ ಕಾಷಾಯಣಾತ್ಕಾಷಾಯಣಃ ಸಾಯಕಾಯನಾತ್ಸಾಯಕಾಯನಃ ಕೌಶಿಕಾಯನೇಃ ಕೌಶಿಕಾಯನಿಃ (2)

ಮಂ.ಶ್ಲೋ॥ ಘೃತಕೌಶಿಕಾದ್ಘೃತಕೌಶಿಕಃ ಪಾರಾಶರ್ಯಾಯಣಾತ್ಪಾರಾಶರ್ಯಾಯಣಃ ಪಾರಾಶರ್ಯಾತ್ಪಾರಾಶರ್ಯೋ ಜಾತೂಕರ್ಣ್ಯಾಜ್ಜಾತೂಕರ್ಣ್ಯ ಅಸುರಾಯಣಾಚ್ಚಯಾಸ್ಕಾಚ್ಚಾಸುರಾಯಣ ಸ್ತ್ರೈವಣೇಸ್ತ್ರೈವಣೀ ರೌಪಜನ್ದನೇರೌಪಜನ್ದನಿರಾಸುರೇರಾಸುರಿರ್ಭಾರದ್ವಾಜಾದ್ಭಾರದ್ವಾಜ ಆತ್ರೇಯಾದಾತ್ರೇಯೋಮಾಣ್ಟೇರ್ಮಾಣ್ಟಿರ್ಗೌತಮಾದ್ಗೌತಮೋ ಗೌತಮಾದ್ಗೌತಮೋ ವಾತ್ಸ್ಯಾದ್ವಾತ್ಸ್ಯಃ ಶಾಣ್ಡಿಲ್ಯಾಚ್ಛಾಣ್ಡಿಲ್ಯಃ ಕೈಶೋರ್ಯಾತ್ಕಾಪ್ಯಾತ್ಕೈಶೋರ್ಯಃ ಕಾಪ್ಯಃ ಕುಮಾರಹಾರಿತಾತ್ಕುಮಾರಹರಿತೋ ಗಾಲವಾದ್ಗಾಲವೋ ವಿದರ್ಭೀಕೌಣ್ಡಿನ್ಯಾದ್ವಿದರ್ಭೀ-ಕೌಣ್ಡಿನ್ಯೋ ವತ್ಸನ-ಪಾತೋ ಬಾಭ್ರವಾದ್ವತ್ಸನಪಾದ್ಬಾಭ್ರವಃ ಪಥಸ್ಸೌಭರಾತನ್ಪನ್ಥಾಸೌಭರೋ ಯಸ್ಯಾದಾಙ್ಗಿರಸಾದಯಾಸ್ಯ ಆಙ್ಗೀರಸ ಅಭೂತೇಸ್ತ್ವಾಷ್ಟ್ರಾದಾಭೂತಿಸ್ತ್ವಾಷ್ಟ್ರೋ ವಿಶ್ವರೂಪಾತ್ತ್ವಾಷ್ಟ್ರಾದ್ವಿಶ್ವರೂಪಸ್ತ್ವಾಷ್ಟ್ರೋಽಶ್ವಿಭ್ಯಾಮಶ್ವಿನೌ ದಧೀಚ ಅಥರ್ವಣಾದ್ದಧ್ಯಙ್ಙಾಥರ್ವಣೋಽಥರ್ವಣೋ ದೈವಾದಥರ್ವಾ ದೈವೋ ಮೃತ್ಯೋಃ ಪ್ರಾಧ್ವಗ್ಂಸನಾನ್ಮೃತ್ಯುಃ ಪ್ರಾಧ್ವಂಸನಃ ಪ್ರಧ್ವಗ್ಂಸನಾತ್ ಪ್ರಧ್ವಗ್ಂಸನ ಏಕಋಷೇರೇಕರ್ಷಿರ್ವಿಪ್ರಚಿತ್ತೇರ್ವಿಪ್ರಚಿತ್ತಿರ್ವ್ಯಷ್ಟೇರ್ವ್ಯಷ್ಟಿಸ್ಸನಾರೋಃ ಸನಾರುಃ ಸನಾತನಾತ್ಸನಾತನಃ ಸನಕಾತ್ಸನಕಃ ಪರಮೇಷ್ಠಿನಃ ಪರಮೇಷ್ಠೀ ಬ್ರಹ್ಮಣೋ ಬ್ರಹ್ಮಸ್ವಯಮ್ಭು ಬ್ರಹ್ಮಣೇ ನಮಃ (3)

ತಾ : ಈ ಮೂರು ಮಂತ್ರಗಳಲ್ಲಿ ಇದುವರೆಗೂ ಬೋಧಿಸಿರುವ ಬ್ರಹ್ಮವಿದ್ಯೆಗೆ ಆಚಾರ್ಯ ಪರಂಪರೆ, ಗುರುಶಿಷ್ಯ ಪರಂಪರೆಯನ್ನು ಹೇಳಲಾಗಿದೆ. ಗುರುಶಿಷ್ಯ ಪರಂಪರೆಯಲ್ಲಿ ಆದ್ಯಂತದಲ್ಲಿ ಮಾಡುವ ಪ್ರಾರ್ಥನೆ, ಮಂಗಳ ಕೊನೆಯಲ್ಲಿ, ಪರಬ್ರಹ್ಮಕ್ಕೆ ನಮಸ್ಕಾರ ಹೇಳಲ್ಪಟ್ಟಿವೆ. ಋಷೀಶ್ವರರ ನಾಮಧೇಯಗಳು ಮಾತ್ರವೇ ಹೇಳಿರುವುದರಿಂದಲೂ, ವಿವರಗಳನ್ನು ಬರೆಯಲಿಲ್ಲ. (ಈ ಅಧ್ಯಾಯದಲ್ಲಿ 6 ಬ್ರಾಹ್ಮಣಗಳು, 92 ಮಂತ್ರಗಳು ಇವೆ.)

## ಸಪ್ತಮಾಧ್ಯಾಯ – ಪ್ರಥಮ ಬ್ರಾಹ್ಮಣಂ

ಮಂ.ಶ್ಲೋ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ ॥

ತಾ : ಕಾರಣ ಕಾರ್ಯಗಳೆರಡರಲ್ಲೂ ಕಾರಣ ಸ್ವರೂಪವಾದ ಪರಬ್ರಹ್ಮವು ಕಾರ್ಯರೂಪಕ್ಕಿಂತ ಉತ್ತಮವಾದುದು. ಅದರಲ್ಲಿ ಕಾರ್ಯದಲ್ಲಿನ ಕಲ್ಪಿತವಾದ ನಾಮರೂಪಾದಿಗಳನ್ನು ಪರಿತ್ಯಜಿಸಿ ಕಾರ್ಯಕ್ಕೆ ಲಕ್ಷ್ಯವಾದ ಕಾರಣಾತ್ಮಕ ಪರಬ್ರಹ್ಮವನ್ನು ತಿಳಿದುಕೊಳ್ಳುವುದರಿಂದ, ಕಲ್ಪಿತವಾದ ನಾಮರೂಪಾಧಿಕವು ನಶಿಸಿ ಕಾರಣಸ್ವರೂಪವು ಪೂರ್ಣವಾಗಿ ಶೇಷವಾಗುತ್ತದೆ.

**ಮಂ.ಶ್ಲೋ॥ ಓಂ ಖಂ ಬ್ರಹ್ಮಾ । ಖಂ ಪುರಾಣಂ ವಾಯುರಂ ಖಮಿತಿ ಹ ಸ್ಮಾಹಾ ಕೌರವ್ಯಾಯಣೀ ಪುತ್ರೋ ವೇದೋಽಯಂ ಬ್ರಾಹ್ಮಣಾ ವಿದುರ್ವೇದೈನೇನ ಯದ್ವೇದಿತವ್ಯಮ್ (1)**

ತಾ : ಓಂ ಖಂ ಬ್ರಹ್ಮಾ ಎನ್ನುವ ಈ ಮಂತ್ರವು ಬ್ರಾಹ್ಮಣರಿಂದ ಧ್ಯಾನಕರ್ಮದಲ್ಲಿ ವಿನಿಯೋಗಿಸಲಾಗುತ್ತಿದೆ. ಕೌರವ್ಯಾಯಣಿ ಪುತ್ರನಾದ ಒಬ್ಬ ಋಷಿ ಆ ಓಂಕಾರವನ್ನು ಪ್ರಾಚೀನವಾದ ಪರಮಾತ್ಮಾಕಾಶವೆಂದು, (ಚಿದಾಕಾಶವೆಂದು) ವಾಯುವಿರುವ ಆಕಾಶವೆಂದು ಹೇಳಿರುವನು. ಸಾಧಕನಾದ ಮಾನವನು ಈ ಓಂಕಾರದಿಂದ (ದ ಮೂಲಕ) ತಿಳಿದುಕೊಳ್ಳುವಂತಹ ಬ್ರಹ್ಮ ವಿಷಯವನ್ನು ತಿಳಿದುಕೊಳ್ಳುತ್ತಿದ್ದಾನೆ. ಬ್ರಾಹ್ಮಣರು ಈ ಓಂಕಾರವು ವೇದವೆಂದು ತಿಳಿದುಕೊಂಡರು.

# ಸಪ್ತಮಾಧ್ಯಾಯ – ದ್ವಿತೀಯ ಬ್ರಾಹ್ಮಣಂ

**ಮಂ.ಶ್ಲೋ॥ ತ್ರಯಾಃ ಪ್ರಜಾಪತ್ಯಾಃ ಪ್ರಜಾಪತೌ ಪಿತರಿ ಬ್ರಹ್ಮಚರ್ಯಮೂಷುರ್ದೇವಾ ಮನುಷ್ಯಾ ಅಸುರಾ ಊಷಿತ್ವಾ ಬ್ರಹ್ಮಚರ್ಯಂ ದೇವಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದಕ್ಷರ -ಮುವಾಚ ದ ಇತಿ ವ್ಯಜ್ಞಾಸಿಷ್ಟಾ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಾಮ್ಯತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ (1)**

ತಾ : ಬ್ರಹ್ಮಪುತ್ರರಾದ ದೇವ ಮನುಷ್ಯ ರಾಕ್ಷಸರು, ತಂದೆಯಾದ ಬ್ರಹ್ಮನನ್ನು ಸಮೀಪಿಸಿ ಬ್ರಹ್ಮಚರ್ಯ ನಿಯಮಗಳನ್ನು ಪಡೆದುಕೊಂಡರು. ಅವರಲ್ಲಿ ದೇವತೆಗಳು "ಓ ಬ್ರಹ್ಮದೇವಾ! ನಮಗೆ ನಿಯಮವನ್ನು ಉಪದೇಶಿಸುವಂತಹವನಾಗು" ಎಂದರು. ಆಗ ಬ್ರಹ್ಮನು ದೇವತೆಗಳಿಗಾಗಿ "ದ" ಎನ್ನುವ ಅಕ್ಷರವನ್ನು ಉಪದೇಶಿಸಿದ. ಹೀಗೆ ಉಪದೇಶಿಸಿ ಓ ದೇವತೆಗಳಿರಾ! ನಾನು ಉಪದೇಶಿಸಿದ ಅಕ್ಷರದಲ್ಲಿನ ಅರ್ಥವನ್ನು ಗ್ರಹಿಸಿರುವಿರಾ?" ಎಂದು ಬ್ರಹ್ಮನು ಹೇಳಿದ. ದೇವತೆಗಳು ತಿಳಿದುಕೊಂಡೆವೆಂದು ಹೇಳಿದರು. ಬ್ರಹ್ಮನು, "ಓ ದೇವತೆಗಳೇ! ನಿಮಗೆ ತಿಳಿದಿದ್ದರೆ ನಾನು ಏನು ಹೇಳಿದೆನೋ ಅದನ್ನು ವಿವರಿಸಿ" ಎಂದ. ಆಗ ದೇವತೆಗಳು: ಓ ಬ್ರಹ್ಮದೇವಾ! ಇಂದ್ರಿಯ ನಿಗ್ರಹವಿಲ್ಲದವರಾದ, ನೀವು ಇಂದ್ರಿಯ ನಿಗ್ರಹವನ್ನು ಬೆಳಸಿಕೊಳ್ಳಿ" ಎಂದು ನಮಗೆ ಉಪದೇಶಿಸಿದಿರಿ ಎಂದು ಹೇಳಿದರು. ಹೀಗೆ ನುಡಿದ ತಕ್ಷಣ ಬ್ರಹ್ಮನು:- "ಓ ದೇವತೆಗಳೇ ನೀವು ಚೆನ್ನಾಗಿ ಗ್ರಹಿಸಿರುವಿರಿ." ಎಂದು ಹೇಳಿದ. (ದಮ ಎಂದರೆ ಇಂದ್ರಿಯ ನಿಗ್ರಹ.)

**ಮಂ.ಶ್ಲೋ॥ ಅಥ ಹೈನಂ ಮನುಷ್ಯಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರ-ಮುವಾಚ ದ ಇತಿ ವ್ಯಜ್ಞಾಸಿಷ್ಟಾ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದತ್ತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ (2)**

ತಾ : ಆನಂತರ ಮನುಷ್ಯರು "ಓ ಬ್ರಹ್ಮ ದೇವಾ! ನೀನು ನಮಗೆ ನಿಯಮವನ್ನು ಬೋಧಿಸುವನಾಗು" ಎಂದರು. ಆಗ ಪ್ರಜಾಪತಿಯು ಮನುಷ್ಯರಿಗಾಗಿ "ದ" ಎನ್ನುವ ಅಕ್ಷರವನ್ನು ಉಪದೇಶಿಸಿದ. ಹೀಗೆ ಉಪದೇಶಿಸಿ ನಂತರ (ಎಲೈ) "ಓ ಮನುಷ್ಯರೇ! ನಾನು ಉಪದೇಶಿಸಿದ ಅಕ್ಷರದ ಅರ್ಥವನ್ನು ತಿಳಿದುಕೊಂಡಿರಾ?" ಎಂದು ಬ್ರಹ್ಮನು ಕೇಳಿದ. ಮತ್ತೆ ಆ ಮನುಷ್ಯರು

ಬ್ರಹ್ಮವನ್ನು ಕುರಿತು ತಿಳಿದುಕೊಂಡೆವು ಎಂದು ಹೇಳಿದರು. ಬ್ರಹ್ಮನು:- ಎಲೈ ಮನುಷ್ಯರೇ (ಓ ಮನುಷ್ಯರೇ) ನೀವು ತಿಳಿದುಕೊಂಡಿರುವುದೇನೋ ನಾನೇನು ಹೇಳಿದೆನೋ ಅದನ್ನು ಹೇಳಿಯೆಂದನು. ಆಗ ಮನುಷ್ಯರು ಓ ಬ್ರಹ್ಮದೇವಾ! "ದಾನವಿಲ್ಲದ ನೀವು ದಾನ ಮಾಡಿ" ಎಂದು ನೀವು ನಮಗೆ ಉಪದೇಶ ಮಾಡಿದಿರೆಂದು ಹೇಳಿದರು. ಹೀಗೆ ಹೇಳಲು ಬ್ರಹ್ಮನು ಮನುಷ್ಯರೇ (ಮಾನವರೇ) ನೀವು ಸತ್ಯವಾದುದನ್ನು ಗ್ರಹಿಸಿರುವಿರಿ" ಎಂದು ಹೇಳಿದ.

**ಮಂ.ಶ್ಲೋ॥ ಅಥ ಹೈನಮಸುರಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಯಧ್ವಮಿತಿ ಸ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ ತದೇ ತದೇವೈಷಾ ದೈವೀವಾಗನುವದತಿ ಸ್ತನಯಿತ್ನುರ್ದದದ ಇತಿ ದಾಮ್ಯತ ದತ್ತ ದಯಧ್ವಮಿತಿ ತದೇತತ್ತ್ರಯಗ್ಗ್ಂ ಶಿಕ್ಷೇದ್ದಮಂ ದಾನಂ ದಯಾಮಿತಿ (3)**

ತಾ : ಆನಂತರ ದೈತ್ಯರು ಸಹ ಉಪದೇಶ ಮಾಡಿರೆಂದು ಬ್ರಹ್ಮನನ್ನು ಪ್ರಾರ್ಥಿಸಿದರು. ಪ್ರಜಾಪತಿಯು ಆ ರಾಕ್ಷಸರನ್ನು ಕುರಿತು "ದ" ಎನ್ನುವ ಅಕ್ಷರವನ್ನೇ ಉಪದೇಶಿಸಿದ. ಆ ರಾಕ್ಷಸರನ್ನು ಕುರಿತು ಬ್ರಹ್ಮನು ಅರ್ಥವನ್ನು ಗ್ರಹಿಸಿದಿರಾ? ಎಂದು ಕೇಳಿದ. ಆ ರಾಕ್ಷಸರು ತಿಳಿದುಕೊಂಡೆವೆಂದು ಹೇಳಿದರು. ಆಗ ಬ್ರಹ್ಮನು ಓ ರಾಕ್ಷಸರೇ ನೀವು ತಿಳಿದುಕೊಂಡೆವೆಂದು ಹೇಳಿದರು. ಆಗ ಬ್ರಹ್ಮನು, ಓ ರಾಕ್ಷಸರೇ ನೀವು ತಿಳಿದುಕೊಂಡಿದ್ದರೆ ನಾನು ಹೇಳಿದುದೇನೆಂದು ಹೇಳಿ" ಎಂದು ಕೇಳಿದ. ರಾಕ್ಷಸರು ಮತ್ತೆ ಓ ಬ್ರಹ್ಮದೇವಾ! ಜೀವಿಗಳಲ್ಲಿ (ಪ್ರಾಣಿಗಳಲ್ಲಿ) ದಯೆಯುಳ್ಳವರಾಗಿ ಎಂದು ನಮ್ಮನ್ನು ಕುರಿತು ಬೋಧಿಸಿರುವೆ. ಪ್ರಜಾಪತಿ ಬ್ರಹ್ಮನು ನೀವು ಚೆನ್ನಾಗಿ ಅರ್ಥಮಾಡಿಕೊಂಡಿರುವಿರಿ ಎಂದು ಹೇಳಿದ. ಇದನ್ನೇ (ಅಂದು ಪ್ರಜಾಪತಿ ಹೇಳಿದ ಅನುಶಾಸನದ ಪ್ರಕಾರ) ಇಂದಿಗೂ ಸಹ ಮೇಘ ಗರ್ಜನೆಯ ರೂಪದಲ್ಲಿ ದದದ ಎಂದು ದೈವವಾಣಿಯು ಕೇಳಬರುತ್ತದೆ. ಅಂದರೆ ದಮನ ಮಾಡುವುದು, ದಾನ ಮಾಡುವುದು, ದಯೆಯನ್ನು ತೋರಿಸುವುದು ಎಂದು. ಪ್ರಜಾಪತಿ ಬ್ರಹ್ಮನು "ದದದ" ಎಂದು ದಕಾರವನ್ನು ಮೂರು ಬಾರಿ ಉಚ್ಚರಿಸುವುದರೊಂದಿಗೇ ಅವರವರ ಸಂದೇಹಗಳ ಪ್ರಕಾರ ಈ ಹಿಂದೆ ಹೇಳಿದಂತೆ ಬೇರೆ ಬೇರೆ ಅರ್ಥಗಳನ್ನು ಗ್ರಹಿಸಿದರು. (ಅಂದರೆ ದೇವಾಸುರರು ಮನುಷ್ಯರಿಗಿಂತ ಬೇರೆಯಾಗಿಲ್ಲ. ಆದ್ದರಿಂದ ಮನುಷ್ಯರಲ್ಲಿಯೇ ಸಮಸ್ತ ಗುಣ ಸಂಪತ್ತು ಇದ್ದು ಇಂದ್ರಿಯ ನಿಗ್ರಹವಿಲ್ಲದೆ, ದೇವತೆಗಳಾಗುವರನ್ನು ಇಂದ್ರಿಯ ನಿಗ್ರಹವನ್ನು ಪಾಲಿಸಿರಿ ಎಂದೂ, ದಾನವಿಲ್ಲದ ಮನುಷ್ಯರಾದವರನ್ನು ದಾನ ಮಾಡಿ ಎಂದೂ ಪ್ರಾಣಿಗಳ ಬಗ್ಗೆ ದಯೆಯಿಲ್ಲದೆ ರಾಕ್ಷಸ-ರಾಗುವವರನ್ನು ಜೀವಿಗಳ ಬಗ್ಗೆ ದಯೆಯುಳ್ಳವರಾಗಿ ಎಂದು, ಮನುಷ್ಯರನ್ನು ಕುರಿತಾಗಿಯೇ ಈ ದಕಾರತ್ರಯ)

## ಸಪ್ತಮಾಧ್ಯಾಯ – ತೃತೀಯ ಬ್ರಾಹ್ಮಣ

**ಮಂ.ಶ್ಲೋ॥ ಏಷ ಪ್ರಜಾಪತಿರ್ಯದ್ಧೃದಯಮೇತದ್ಬ್ರಹ್ಮೈತತ್ಸರ್ವಂ ತದೇತತ್ ತ್ರ್ಯಕ್ಷರಗ್ಂ ಹೃದಯಮಿತಿ ಹೃ ಇತ್ಯೇಕಮಕ್ಷರಮಭಿಹರನ್ತ್ಯಸ್ಮೈಸ್ವಾಶ್ಚಾನ್ಯೇಚ ಯ ಏವಂ ವೇದ ದ ಇತ್ಯೇಕಮಕ್ಷರಂ**

**ದದತ್ಯಸ್ಮೈಸ್ವಾಶ್ಚಾನ್ಯೇ ಚ ಯ ಏವಂ ವೇದ ಯಮಿತ್ಯೇಕಮಕ್ಷರಮೇತಿ ಸ್ವರ್ಗಂ ಲೋಕಂ ಯ ಏವಂ ವೇದ (1)**

ತಾ : ದಮ, ದಾನ, ದಯೆ – ಈ ಮೂರು ಸದ್ಗುಣಗಳನ್ನು ಹೊಂದಿದವನು ಸರ್ವೋಪಾಸನೆ-ಯಲ್ಲಿಯೂ ಅಧಿಕಾರಿಯಾಗುವನು. ಇದಕ್ಕೆ ಮೊದಲು ನಿರುಪಾಧಿಕ ಪರಬ್ರಹ್ಮೋಪಾಸನೆ ಹೇಳಲಾಗಿದೆ. ಈಗ ಸೋಪಾಧಿಕ ಪರಬ್ರಹ್ಮದ ಉಪಾಸನೆಯ ಫಲಗಳನ್ನು ಹೇಳಬೇಕೆಂದು ಈ ಮಂತ್ರವನ್ನು ಆರಂಭಿಸಲಾಗಿದೆ. ಇದುವರೆಗೆ ದಾಂತದಾನದಯೆಗಳನ್ನು ಉಪದೇಶಿಸಿದ ಸೃಷ್ಟಿಕರ್ತನಾದ ಬ್ರಹ್ಮನು ಯಾರೆಂದರೆ, ಈ ಹೃದಯವೇ ಪರಬ್ರಹ್ಮ. ಈ ಹೃದಯವೇ ಸರ್ವವು. ಆದ್ದರಿಂದ ಹೃದಯವೇ ಪರಬ್ರಹ್ಮವೆಂದು ಉಪಾಸಿಸಬೇಕು. ಇಷ್ಟೇ ಅಲ್ಲ. ಈ ಹೃದಯವೆಂಬ ನಾಮದಲ್ಲಿನ ಮೂರು ಅಕ್ಷರಗಳಲ್ಲಿ ಒಂದೊಂದು ಅಕ್ಷರವನ್ನು ಉಪಾಸಿಸುವುದರಿಂದಲೇ ಮಾನವನು ವಿಶೇಷ ಫಲವನ್ನು ಹೊಂದುತ್ತಿದ್ದಾನೆ. ಹೃದಯದ ನಾಮದಲ್ಲಿನ "ಹೃ" ಎನ್ನುವ ಅಕ್ಷರವನ್ನು ಬ್ರಹ್ಮಸ್ವರೂಪವಾಗಿ ಗ್ರಹಿಸಿ, ಉಪಾಸಿಸುವವರಿಗೋಸ್ಕರ ಹೃದಯಬ್ರಹ್ಮೋಪಾಸನೆಯನ್ನು ಹೇಳಲಾಗಿದೆ. ಹೃದಯದ ನಾಮದಲ್ಲಿನ "ದ" ಯೆನ್ನುವ ಅಕ್ಷರವನ್ನು ಬ್ರಹ್ಮವಾಗಿ ಉಪಾಸಿಸುವವನಿಗೆ ಇಂದ್ರಿಯಗಳ, ವಿಷಯಗಳು ಅವುಗಳ ಶಕ್ತಿಗಳನ್ನು ನೀಡುತ್ತಿವೆ. ಹೃದಯದ ನಾಮದಲ್ಲಿನ "ಯ" ಎನ್ನುವ ಅಕ್ಷರವನ್ನು ಬ್ರಹ್ಮವಾಗಿ ಉಪಾಸಿಸುವವರು ದೇವಲೋಕವನ್ನು ಸೇರುವರು. (ಹೀಗೆ ಹೃದಯದ ನಾಮದಲ್ಲಿನ ಒಂದೊಂದು ಅಕ್ಷರವನ್ನು ಉಪಾಸಿಸುವುದರಿಂದಲೇ ಇಂತಹ ಫಲವನ್ನು ಹೊಂದುತ್ತಿರುವಾಗ ಹೃದಯವೆನ್ನುವ ನಾಮವನ್ನು ಪರಬ್ರಹ್ಮವಾಗಿ ಉಪಾಸಿಸುವವನ ಫಲವೆಷ್ಟಿರಬಹುದೆಂದು ಹೇಳಿಬಿಡ-ಬಹುದು. ಹೃದಯವು ಬ್ರಹ್ಮೋಪಾಸನೆಗೆ ವಿಶೇಷ ಫಲವೆಂಬ ಭಾವವು ಸೂಚಿತವಾಗುತ್ತದೆ. ಇಲ್ಲಿ ಹೃದಯವೆಂಬ ನಾಮದಲ್ಲಿ ಮೂರು ಉಪಾಸನೆಗಳಾಗಿ ವಿಭಜಿಸಿ ಹೇಳಲಾಗಿದೆ.

## ಸಪ್ತಮಾಧ್ಯಾಯ – ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ|| ತದ್ವೈತದೇತದೇವ ತದಾಸ ಸತ್ಯಮೇವ ಸ ಯೋ ಹೈತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ ಜಯತೀಮಾಲ್ಲೋಕಾನ್ಜಿತ ಇನ್ನ್ವಸಾವಸದ್ಯ ಏವಮೇತಂ ಮಹಾದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ ಸತ್ಯಗ್ಂ ಹ್ಯೇವ ಬ್ರಹ್ಮ (1)**

ತಾ : ಇದಕ್ಕೆ ಮೊದಲು ಹೇಳಿದ ಹೃದಯಪರಬ್ರಹ್ಮವು ಮೂರ್ತಾಮೂರ್ತಸ್ವರೂಪವಾಗಿರುವ ಪಂಚಭೂತಾತ್ಮಕವಾಗಿದೆ. ಹಿರಿದಾದುದೂ, ಪೂಜ್ಯವೂ ಆಗಿರುವ ಮೊದಲು ಹುಟ್ಟಿದಂತಹ ಪಂಚ-ಭೂತಾತ್ಮಕ ಹೃದಯ ಬ್ರಹ್ಮವನ್ನು ಅರಿತುಕೊಂಡು ಉಪಾಸಿಸುವವನು ಈ ಸರ್ವಲೋಕಗಳನ್ನೂ ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಾನೆ. ಈ ರೀತಿಯಾಗಿ ತಿಳಿದುಕೊಂಡು ಉಪಾಸಿಸುವವನನ್ನು ತನಗಿಂತ ಬೇರೆಯಾಗಿ ಮತ್ಯಾವುದೂ ಇಲ್ಲವಾದುದರಿಂದ ಸರ್ವವೂ ಸ್ವಾಧೀನವಾಗಿ ಅಜಾತಶತ್ರುವಾಗುತ್ತಾನೆ.

**ಮಂ.ಶ್ಲೋ|| ಆಪ ಏವೇದಮಗ್ರ ಆಸು ಸ್ತಾ ಆಪಃ ಸತ್ಯಮಸೃಜನ್ತ ಸತ್ಯಂ ಬ್ರಹ್ಮ ಪ್ರಜಾಪತಿಂ ಪ್ರಜಾತಿರ್ದೇವಾಗ್ಂ ಸ್ತೇದೇವಾಸ್ಸತ್ಯಮೇವೋಪಾಸತೇ ತದೇತತ್ ತ್ರ್ಯಕ್ಷರಗ್ಂ ಸತ್ಯಮಿತಿ ಸ ಇತ್ಯೇಕಮಕ್ಷರಂ ತೀತ್ಯೇಕಮಕ್ಷರಂ ಯಮಿತ್ಯೇಕಮಕ್ಷರಂ ಪ್ರಥಮೋತ್ತಮೇ ಅಕ್ಷರೇ**

**ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಸ್ಸತ್ಯೇನ ಪರಿಗೃಹೀತಗ್ಂ ಸತ್ಯಭೂಯಮೇವ ಭವತಿ ನೈನಂ ವಿದ್ವಾಗ್ಂಸಮನೃತಗ್ಂ ಹಿನಸ್ತಿ (2)**

ತಾ : ಪರಬ್ರಹ್ಮವನ್ನು ಉಪಾಸಿಸುವ ವಿಧಾನವನ್ನು ಹೇಳಲಾಗುತ್ತಿದೆ. ಈ ವಿಕಾರಜಾತವಾದ ಜಗತ್ತು ಸೃಷ್ಟಿಗೆ ಮೊದಲು ಉದಕವಾಗಿಯೇ ಇತ್ತು. ಉದಕಗಳು ಸತ್ಯವೇ ಆಗಿತ್ತು. ಆ ಸತ್ಯವು ಹಿರಣ್ಯಗರ್ಭನನ್ನು (ಚತುರ್ಮುಖ ಬ್ರಹ್ಮನನ್ನು) ಸೃಷ್ಟಿಸಿತು. ಚತುರ್ಮುಖನು ವಿರಾಟ್ಪುರುಷನನ್ನು ಸೃಷ್ಟಿಸಿದ. ವಿರಾಟ್ಪುರುಷನು ದೇವತೆಗಳನ್ನು ಸೃಷ್ಟಿಸಿದ. ಆ ದೇವತೆಗಳು, ಸತ್ಯಬ್ರಹ್ಮವನ್ನೇ ಧ್ಯಾನಿಸುತ್ತಿರುವರು. ಸತ್ಯವೆನ್ನುವುದು ಮೂರು ಅಕ್ಷರಗಳನ್ನೊಳಗೊಂಡಿದೆ. (ಅವು ಯಾವುವೆಂದರೆ) "ಸ", ಎನ್ನುವ ಒಂದು ಅಕ್ಷರ; "ತೀ", ಯೆನ್ನುವುದು ಇನ್ನೊಂದು ಅಕ್ಷರ "ಯ" ಎನ್ನುವುದು ಮತ್ತೊಂದು ಅಕ್ಷರ. ಆ ಮೂರಕ್ಷರಗಳಲ್ಲಿ ಮೊದಲನೆಯದು ಕೊನೆಯದು ಆದಂತಹ ಸಕಾರ ಯಕಾರವೆನ್ನುವ ಅಕ್ಷರಗಳೆರಡು (ಸತ್ಯವಾಯಿತು) ಸತ್ಯವೆಂದು ಕರೆಯಲ್ಪಟ್ಟಿತು. (ಎಂದಿಗೂ ನಾಶವಾಗದಂತಹುದು) ಮಧ್ಯದಲ್ಲಿದ್ದ ತಿಕಾರವು ಅಬದ್ಧ (ಸುಳ್ಳಾಯಿತು)ವಾಯಿತು. (ಮೃತ್ಯು-ಸ್ವರೂಪವಾಯಿತು.) ಎರಡನೆಯ ಸಕಾರಯಂಕಾರಗಳೇ ಲಕ್ಷಣವಾಗುಳ್ಳ ಸತ್ಯ ಸ್ವರೂಪದಿಂದ ಗ್ರಹಿಸಲಾದ ಆ ಸ್ವರೂಪವು ಸತ್ಯಾಧಿಕ್ಯವನ್ನು ಹೊಂದಿದಂತಹುದೇ ಆಗುತ್ತದೆ. (ಮೃತ್ಯುವು ಸ್ವಲ್ಪವಾಗುತ್ತಿದೆ) ಈ ರೀತಿಯಾಗಿ ತಿಳಿದುಕೊಂಡ ವಿದ್ವಾಂಸನನ್ನು ಮೃತ್ಯುವು ಎಂದಿಗೂ ಹಿಂಸೆಪಡಿಸುವುದಿಲ್ಲ.)

## ಸಪ್ತಮಾಧ್ಯಾಯ - ಪಂಚಮ ಬ್ರಾಹ್ಮಣಂ

ಮಂ.ಶ್ಲೋ॥ **ತದ್ಯತ್ತತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ಪುರುಷಸ್ತಾವೇತಾವನ್ಯೋನ್ಯಸ್ಮಿನ್ ಪ್ರತಿಷ್ಠಿತೌ ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ ಪ್ರಾಣೈರಯಮಮುಷ್ಮಿನ್ಸ ಯದೋತ್ಕ್ರಮಿಷ್ಯನ್ಭವತಿ ಶುದ್ಧಮೇವೈತನ್ಮಂಡಲಂ ಪಶ್ಯತಿ ನೈನಮೇತೇ ರಶ್ಮಯಃ ಪ್ರತ್ಯಾಯನ್ತಿ (1)**

ತಾ : ಸತ್ಯಸ್ವರೂಪವೇ ಆದಿತ್ಯನು. ಅವ್ಯಕ್ತವಾದ ಪೃಥಿವ್ಯಾದಿ ಪಂಚಭೂತಗಳ ಸಾರಾಂಶವೇ ಸತ್ಯ. ಈ ಆದಿತ್ಯ ಮಂಡಲದಲ್ಲಿನ ಸೂರ್ಯನೂ, ಈ ದೇಹದಲ್ಲಿನ ಬಲಗಣ್ಣಿನಲ್ಲಿನ ವಿಜ್ಞಾನ ಸ್ವರೂಪನಾದ ಜೀವನು. ಇವರಿಬ್ಬರೂ ಒಬ್ಬರಿಂದೊಬ್ಬರು ಪ್ರಕಾಶಿಸುತ್ತಿರುವರು. ಈ ಸೂರ್ಯನು ಕಿರಣದಿಂದ ಅಧ್ಯಾತ್ಮ ರೂಪನಾದ ನೇತ್ರದಲ್ಲಿಯೂ, ಜೀವನು ಪ್ರಾಣಗಳಿಂದ ಅಧಿದೈವಸ್ವರೂಪವಾದ ಸೂರ್ಯಮಂಡಲದಲ್ಲಿಯೂ ಪ್ರಕಾಶಿಸುತ್ತಿರುವರು. ಹೀಗೆ ಅರಿತುಕೊಂಡಾಗ ಜೀವನು ಯಾವಾಗ ದೇಹವನ್ನು (ಬಿಡಲು) ತ್ಯಜಿಸಲು ಇಚ್ಛೆಯುಳ್ಳವನಾಗುವನೋ, ಆಗಲೇ ಈ ಚಾಕ್ಷುಸ ಸ್ವರೂಪನಾದ ಈ ಸೂರ್ಯನು ತನ್ನ ಕಿರಣಗಳನ್ನು ಉಪಸಂಹರಿಸಿಕೊಂಡು, ಕೇವಲ ತಟಸ್ಥರೂಪದಲ್ಲಿರುವನು. ಆಗ ಈ ಜೀವನು ಕಿರಣಗಳಿಲ್ಲದ ಸೂರ್ಯಮಂಡಲವನ್ನು, ಚಂದ್ರ ಮಂಡಲಗಳಂತೆ, ಪರಿಶುದ್ಧ-ವಾದದೆಂದು ಭಾವಿಸುತ್ತಾನೆ. ಈ ಸೂರ್ಯನ ನೇತ್ರದಲ್ಲಿನ ವಿಜ್ಞಾನ ಸ್ವರೂಪನನ್ನು ಒಂದಾಗಿ ಭಾವಿಸಿ ಉಪಾಸಿಸಿದಲ್ಲಿ ಅಂತಹವನನ್ನು ಈ ಸೂರ್ಯ ಕಿರಣಗಳು ಬಾಧಿಸುವುದಿಲ್ಲ.

**ಮಂ.ಶ್ಲೋ॥ ಯ ಏಷ ಏತ ಏತಸ್ಮಿನ್ಮಣ್ಡಲೇ ಪುರುಷಸ್ತಸ್ಯ ಭೂರಿತಿ ಶಿರ ಏಕಗ್ಂ ಶಿರ ಏಕಮೇತದಕ್ಷರಂ ಭುವ ಇತಿ ಬಾಹು ದ್ವೌ ಬಾಹು ದ್ವೇ ಏತೇ ಅಕ್ಷರೇ ಸುವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹರಿತಿ ಹನ್ತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ (2)**

ತಾ : ಆದಿತ್ಯಮಂಡಲಾಂತರ್ಗತನಾದ ಈ ಪುರುಷನಿಗೆ, ಭೂಃ ಎನ್ನುವ ವ್ಯಾಹೃತಿ ಒಂದಾದ ಶಿರಸ್ಸು; ಭುವಃ ಎನ್ನುವ ವ್ಯಾಹೃತಿ ಭುಜಗಳು (ಎರಡು ಭುಜಗಳು) ಸುವಃ ಎನ್ನುವ ವ್ಯಾಹೃತಿ ಪಾದಗಳು (ಸುವಃ ಎನ್ನುವ ಅಕ್ಷರಗಳು ಎರಡು ಪಾದಗಳು) ಭೂರಾದಿ ವ್ಯಾಹೃತಿಗಳೇ ಅವಯವ-ಗಳಾಗಿ ಹೊಂದಿರುವ ಆ ಸತ್ಯಸ್ವರೂಪ ಸೂರ್ಯ ಮಂಡಲಾಂತರ್ಗತ ಪುರುಷನಿಗೆ ಅಹಃ ಎನ್ನುವುದು ರಹಸ್ಯವಾದ ಹೆಸರು. ಈ ಪ್ರಕಾರವಾಗಿ ತಿಳಿದುಕೊಂಡವನು ಪಾಪಗಳನ್ನು ನಾಶ ಮಾಡುವಂತಹವನಾಗುತ್ತಾನೆ. ಹಾಗೂ ಬಿಟ್ಟುಬಿಡುತ್ತಾನೆ.

**ಮಂ.ಶ್ಲೋ॥ ಯೋಽಯಂ ದಕ್ಷಿಣೇಽಕ್ಷನ್ಪುರುಷಸ್ತಸ್ಯ ಭೂರಿತಿ ಶಿರ ಏಕಗ್ಂ ಶಿರ ಏಕಮೇತದಕ್ಷರಂ ಭುವ ಇತಿ ಬಾಹು ದ್ವೌ ಬಾಹು ದ್ವೇ ಏತೇ ಅಕ್ಷರೇ ಸುವರಿತಿ ಪ್ರತಿಷ್ಠಾ ಪ್ರತಿಷ್ಠೇ ದ್ವೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹಮಿತಿ ಹನ್ತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ (3)**

ತಾ : ಈ ಮೊದಲು ಹೇಳಿದ ಸತ್ಯಪುರುಷನಿಗೆ ಮತ್ತೆ ಶಿರಸ್ಸು ಮೊದಲಾದ ಅವಯವಗಳನ್ನು ಹೇಳಲಾಗಿದೆ. ಈ ದೇಹದಲ್ಲಿನ ದಕ್ಷಿಣ ನೇತ್ರದಲ್ಲಿರುವ ಸತ್ಯಾತ್ಮಕವಾದ ಅಧ್ಯಾತ್ಮ ಪುರುಷನಿಗೆ "ಭೂಃ ಭುವಃ ಸುವಃ" ಎನ್ನುವ ವ್ಯಾಹೃತಿಗಳು ಮೂರರಲ್ಲಿ ಮೊದಲನೆಯದಾದ ಭೂಃ ಎನ್ನುವ ವ್ಯಾಹೃತಿಯಾದ ಅಕ್ಷರವೇ ಶಿರಸ್ಸು. ಭುವಃ ಎನ್ನುವ ವ್ಯಾಹೃತಿಯಲ್ಲಿನ ಎರಡು ಅಕ್ಷರಗಳು ಎರಡು ಭುಜಗಳು, ಸುವಃ ಎನ್ನುವ ವ್ಯಾಹೃತಿಯಲ್ಲಿನ ಎರಡು ಅಕ್ಷರಗಳು ಎರಡು ಪಾದಗಳು. ಹೀಗೆ ಭೂರಾದಿ ವ್ಯಾಹೃತಿಗಳೇ ಅವಯವಗಳಾಗಿ ಉಳ್ಳ ಆ ಸತ್ಯಸ್ವರೂಪನ ಬಲಗಣ್ಣಿನಲ್ಲಿರುವ ಅಧ್ಯಾತ್ಮ ಪುರುಷನು ಸಮಸ್ತ ಪಾಪಗಳನ್ನು ನಾಶಮಾಡುವುದರಿಂದ, ಅಹ ಎನ್ನುವ ರಹಸ್ಯವಾದ ಹೆಸರುಳ್ಳವ-ನಾದನು. ಆ ಸತ್ಯಪುರುಷನನ್ನು ತಿಳಿದುಕೊಂಡವನು ಪಾಪಗಳನ್ನು ನಾಶಗೊಳಸು-ವಂತಹವ-ನಾಗುತ್ತಾನೆ. ಮತ್ತು ಪಾಪಗಳಿಂದ ಬಿಡಿಸಿಕೊಳ್ಳುವವನಾಗುತ್ತಾನೆ. ಈ ಸತ್ಯಾತ್ಮಕ ಬ್ರಹ್ಮನಿಗೆ ರಹಸ್ಯನಾಮವು "ಉಪನಿಷತ್".

## ಸಪ್ತಮಾಧ್ಯಾಯ – ಷಷ್ಠ ಬ್ರಾಹ್ಮಣಂ

**ಮಂ.ಶ್ಲೋ॥ ಮನೋಮಯೋ ಯಂ ಪುರುಷೋ ಭಾಸ್ವತ್ಯಸ್ತಸ್ಮಿನ್ನನ್ತರ್ಹೃದಯೇ ಯಥಾ ವ್ರೀಹಿರ್ವಾಯವೋ -ವಾಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಸ್ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಞ್ಚ (1)**

ತಾ : ಈ ಮನೋಹರೂಪದ ಪುರುಷನು ಕಾಂತಿಯನ್ನೇ ಸತ್ಯಸ್ವರೂಪವಾಗಿ ಹೊಂದಿದವ-ನಾಗಿ, ಹೃದಯಮಧ್ಯದಲ್ಲಿ ಜವೇಗೋಧಿ, ಭತ್ತದಂತೆ ಚಿಕ್ಕ ಪರಿಮಾಣವನ್ನು ಹೊಂದಿ, ಸಮಸ್ತಕ್ಕೂ ನಿಯಾಮಕನಾಗಿರುವವನು. ಸಮಸ್ತಕ್ಕೂ ಪ್ರಭುವಾಗಿರುವವನು. ಈ ಎಲ್ಲವನ್ನೂ ನಿಯಮವಾಗಿ ಶಾಸಿಸುತ್ತಿರುವವನು. (ಜ್ಯೋತಿಯೇ ಸತ್ಯವೆಂದು ಉಪಾಸನೆ)

## ಸಪ್ತಮಾಧ್ಯಾಯ - ಸಪ್ತಮ ಬ್ರಾಹ್ಮಣಂ

**ಮಂ.ಶ್ಲೋ॥ ವಿದ್ಯುದ್ಬ್ರಹ್ಮೇತ್ಯಾಹುರ್ವಿದಾನಾದ್ವಿದ್ಯುದ್ವಿದ್ಯತ್ಯೇನಂ ಪಾಪ್ಮನೋ ಯ ಏವಂ ವೇದ ವಿದ್ಯುದ್ಬ್ರಹ್ಮೇತಿ ವಿದ್ಯುದ್ಧ್ಯೇವ ಬ್ರಹ್ಮ (1)**

ತಾ : ವಿದ್ಯುತ್ತು ಅಂಧಕಾರವನ್ನು ಖಂಡಿಸುವುದರಿಂದ ಪರಬ್ರಹ್ಮವೆಂದು ಹೇಳಿದ್ದಾರೆ. ಈ ಆತ್ಮವನ್ನು ಕುರಿತು, (ನಿರೋಧವಾದ) ಪಾಪಗಳನ್ನು ಮಿಂಚಿನ ರೂಪವಾದ ಪರಬ್ರಹ್ಮವು ಖಂಡಿಸುತ್ತಿದೆ. ಯಾರು ಈ ಪ್ರಕಾರವಾಗಿ ವಿದ್ಯುತ್ತನ್ನು ಪರಬ್ರಹ್ಮವೆಂದು ತಿಳಿದುಕೊಂಡಿರುವನೋ, ಆತನು ಬ್ರಹ್ಮ ಸ್ವರೂಪವಾದ ವಿದ್ಯುತ್ತೇ ಆಗುವನು.

## ಸಪ್ತಮಾಧ್ಯಾಯ - ಅಷ್ಟಮ ಬ್ರಾಹ್ಮಣಂ

**ಮಂ.ಶ್ಲೋ॥ ವಾಚಂ ಧೇನುಮುಪಾಸೀತ ತಸ್ಯಾಶ್ಚತ್ವಾರಃ ಸ್ತನಾಃ ಸ್ವಾಹಾಕಾರೋ ವಷಟ್ಕಾರೋ ಹನ್ತಕಾರಃ ಸ್ವಧಾಕಾರಸ್ತಸ್ಯಾ ದ್ವೌ ಸ್ತನೌ ದೇವಾ ಉಪಜೀವನ್ತಿ ಸ್ವಾಹಾಕಾರಂ ಚ ವಷಟ್ಕಾರಂ ಚ, ಹನ್ತಕಾರಂ ಮನುಷ್ಯಾಃ, ಸ್ವಧಾಕಾರಂ ಪಿತರಸ್ತಸ್ಯಾಃ ಪ್ರಾಣ ಋಷಭೋ ಮನೋ ವತ್ಸಃ (1)**

ತಾ : ವಾಕ್ಕೆನ್ನುವುದು ಶಬ್ದ(ವೇದ.) ಆ ವಾಕ್ಕನ್ನೇ ಕಾಮಧೇನುವಾಗಿ ಉಪಾಸಿಸಬೇಕು. ಈ ವಾಗ್ರೂಪವಾದ ಕಾಮಧೇನುವಿಗೆ ಸ್ವಾಹಾ ಎನ್ನುವ, ವಷಟ್ ಎನ್ನುವ ಹಂತಯೆನ್ನುವ, ಸ್ವಧಾ ಎನ್ನುವ ನಾಲ್ಕು ಸ್ತನಗಳಿವೆ. ಇವುಗಳಲ್ಲಿ ಮೊದಲನೆಯ ಎರಡು ಸ್ತನಗಳಿಂದ ಸ್ವಾಹಾ ವಷಟ್‌ಗಳಿಂದ ದೇವತೆಗಳಿಗೆ ಹವಿಸ್ಸನ್ನು ಕೊಡಲಾಗುತ್ತದೆ. ಹಂತ ಎನ್ನುವ ಸ್ತನದಿಂದ, ಮನುಷ್ಯರಿಗೆ ಅನ್ನ ಕೊಡಲಾಗುತ್ತದೆ. ಸ್ವಧಾಯೆನ್ನುವ ಸ್ತನದಿಂದ ಪಿತೃದೇವತೆಗಳಿಗೆ ಹವ್ಯವನ್ನು ನೀಡಲಾಗುತ್ತದೆ. ಈ ವಾಗ್ರೂಪ ಕಾಮಧೇನುವಿನ ಪ್ರಾಣವು ಹುಟ್ಟುತ್ತದೆ. ಆದ್ದರಿಂದ ಇದಕ್ಕೆ ಪ್ರಾಣವೇ ವೃಷಭ. ಮನಸ್ಸಿನಿಂದ ವಾಕ್ಕೆನ್ನುವ ಕ್ಷೀರಗಳು ಸ್ರವಿಸಲ್ಪಡುವುದು. ಆದ್ದರಿಂದ ಮನಸ್ಸೇವತ್ಸ (ಕರು).

ಆದ್ದರಿಂದ ಈ ರೀತಿಯಾಗಿ ವಾಗ್ರೂಪ ಕಾಮಧೇನುವನ್ನು ತಿಳಿದುಕೊಂಡು ಧ್ಯಾನಿಸ-ಬೇಕು.

## ಸಪ್ತಮಾಧ್ಯಾಯ - ನವಮ ಬ್ರಾಹ್ಮಣಂ

**ಮಂ.ಶ್ಲೋ॥ ಅಯಮಗ್ನಿರ್ವೈಶ್ವಾನರೋ ಯೋಽಯಮನ್ತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿ ಯಮೇತತ್ಕರ್ಣಾವಪಿಧಾಯ ಶೃಣೋತಿ ಸ ಯದೋತ್ಕ್ರಮಿಷ್ಯನ್ಭವತಿ ನೈನಂ ಘೋಷಗ್ಂ ಶೃಣೋತಿ (1)**

ತಾ: ಇದೇ ವೈಶ್ವಾನರವೆನ್ನುವ (ಅಗ್ನಿ) ಜಠರಾಗ್ನಿ. ಇದು ಭೂರಗ್ನಿ ಅಲ್ಲ. ಪುರುಷನ ಒಳಗಿರುವ ಈ ಅಗ್ನಿ (ಜಾಠರಾಗ್ನಿ) ಅನ್ನವನ್ನು ಪಚನಮಾಡುತ್ತದೆ. ಅನ್ನವೇನೆಂದರೆ ಪುರುಷನು ಅನ್ನವು ಯಾವುದೆಂದರೆ ಪುರುಷನು ಭುಜಿಸುವ ಅನ್ನ. ಅನ್ನವನ್ನು ಪಚನ ಮಾಡುವಂತಹ ಅಗ್ನಿಗೆ ಒಂದು ಧ್ವನಿ ಉಂಟಾಗುತ್ತದೆ. (ಆ ಧ್ವನಿ ಏನೆಂದರೆ) ಕಿವಿಗಳನ್ನು ಮುಚ್ಚಿ ಕೊಂಡು ಆ ಧ್ವನಿಯನ್ನು

ಕೇಳಬಹುದು. ಆ ಶರೀರದಲ್ಲಿ ಭೋಕ್ತನಾದ ಪುರುಷನು ಯಾವಾಗ ಶರೀರದಿಂದ ಎದ್ದು ಹೋಗುವುದಕ್ಕೆ ಪ್ರಯತ್ನಿಸುವನೋ ಆಗ ಆ ಧ್ವನಿ ಕೇಳಿಸುವುದಿಲ್ಲ.

# ಸಪ್ತಮಾಧ್ಯಾಯ - ದಶಮ ಬ್ರಾಹ್ಮಣಂ

**ಮಂ.ಶ್ಲೋ॥ ಯದಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ ತಸ್ಮೈ ಸ ತತ್ರ ವಿಜಿಹೀತೇ ಯಥಾ ರಥಚಕ್ರಸ್ಯ ಖಂ ತೇನ ಸ ಊರ್ಧ್ವ ಆಕ್ರಮತೇ ಸ ಆದಿತ್ಯಮಾಗಚ್ಛತಿ ತಸ್ಮೈ ಸ ತತ್ರ ವಿಜಿಹೀತೇ ಯಥಾಡಮ್ಬರಸ್ಯ ಖಂ ತೇನ ಸ ಊರ್ಧ್ವ ಆಕ್ರಮತೇ ಸ ಚನ್ದ್ರಮಸಮಾಗಚ್ಛತಿ ತಸ್ಮೈ ಸ ತತ್ರ ವಿಜಿಹೀತೇ ಯಥಾ ದುನ್ದುಭೇಃ ಖಂ ತೇನ ಸ ಊರ್ಧ್ವ ಆಕ್ರಮತೇ ಸ ಲೋಕಮಾಗಚ್ಛತ್ಯಶೋಕಮಹಿಮಂ ತಸ್ಮಿನ್ವಸತಿ ಶಾಶ್ವತೀಸ್ಸಮಾಃ (1)**

ತಾ : ವಿದ್ವಾಂಸನಾದ ಪುರುಷನು ಈ ಲೋಕದಿಂದ ಶರೀರವನ್ನು ಬಿಟ್ಟು ವಾಯುರೂಪವನ್ನು ಹೊಂದುತ್ತಾನೆ. ಮಹಾ ವಾಯುವು ಈ ಪುರುಷನಿಗಾಗಿ ರಥಚಕ್ರದ ರಂಧ್ರದಂತಹ ಮಾರ್ಗವನ್ನು ಮಾಡಿಕೊಡುತ್ತದೆ. ಆ ಮಾರ್ಗದಿಂದ ಆ ಪುರುಷನು ವಾಯುಮಂಡಲವನ್ನು ದಾಟಿ ಸೂರ್ಯನನ್ನು ಸೇರುತ್ತಾನೆ. ಆಮೇಲೆ ಆದಿತ್ಯನು ವಾಯುರೂಪದಲ್ಲಿರುವ ಆ ಪುರುಷನಿಗೆ ಸೂರ್ಯಮಂಡಲದಲ್ಲಿ ಆಡಂಬರದ ಒಂದು ರಂಧ್ರದಂತಹ ಮಾರ್ಗವನ್ನು ಕೊಡುತ್ತಿದ್ದಾನೆ. ಆ ಮಾರ್ಗದಿಂದ ಆ ಪುರುಷನು ಸೂರ್ಯಮಂಡಲವನ್ನು ದಾಟಿ ಚಂದ್ರನನ್ನು ಹೊಂದುತ್ತಾನೆ. ಆಮೇಲೆ ಚಂದ್ರನು ಆ ಪುರುಷನಿಗೆ ತನ್ನ ಮಂಡಲದಲ್ಲಿ ಭೇರೀ ವಾದ್ಯದ ರಂಧ್ರದಂತಹ ಮಾರ್ಗವನ್ನು ಉಂಟುಮಾಡುವನು. ಆ ಮಾರ್ಗದಿಂದ ಆ ಪುರುಷನು ಚಂದ್ರಮಂಡಲವನ್ನು ಅತಿಕ್ರಮಿಸಿ, ಮೇಲಕ್ಕೆ ಹೋಗಿ ಶೀತಲವಾಗಿಲ್ಲದ, ದುಃಖರಹಿತವಾದ ಬ್ರಹ್ಮಲೋಕವನ್ನು ಸೇರಿ ಅಲ್ಲಿ ಶಾಶ್ವತ ಸಂವತ್ಸರಗಳು ವಾಸವಾಗಿರುತ್ತಾನೆ.

# ಸಪ್ತಮಾಧ್ಯಾಯ - ಏಕಾದಶ ಬ್ರಾಹ್ಮಣಂ

**ಮಂ.ಶ್ಲೋ॥ ಏತದ್ವೈ ಪರಮಂ ತಪೋ ಯದ್ವ್ಯಾಹಿತಸ್ತಪ್ಯತೇ ಪರಮಗ್ಂ ಹ್ಯೇವ ಲೋಕಂ ಜಯತಿ ಯ ಏವಂ ವೇದೈ ತದ್ವೈ ಪರಮಂ ತಪೋ ಯಂ ಪ್ರೇತ ಮರಣ್ಯಗ್ಂ ಹರನ್ತಿ ಪರಮಗ್ಂ ಹ್ಯೇವ ಲೋಕಂ ಜಯತಿ ಯ ಏವ ವೇದೈ ತದ್ವೈ ಪರಮಂ ತಪೋ ಯಂ ಪ್ರೇತಮಗ್ನಾವಭ್ಯಾ ದಧತಿ ಪರಮಗ್ಂ ಹ್ಯೇವ ಲೋಕಂ ಜಯತಿ ಯ ಏವಂ ವೇದ (1)**

ತಾ : ಜ್ವರಪೀಡಿತನಾದ ಜೀವನು ಸಂತಾನವನ್ನು ಹೊಂದುವುದೆನ್ನುವುದು ಕೂಡಾ ಶ್ರೇಷ್ಠವಾದ ಒಂದು ತಪಸ್ಸು. ಈ ವಿಷಯವನ್ನೀರೀತಿಯಾಗಿ ಯಾರು ತಿಳಿದುಕೊಳ್ಳುವನೋ, ಅವನು ಪರಮ ಲೋಕವನ್ನೇ ಜಯಿಸುತ್ತಾನೆ. ಋತ್ವಿಕರು ಮರಣವನ್ನು ಹೊಂದಿದವನನ್ನು, ಅಂತ್ಯಕರ್ಮಕ್ಕಾಗಿ ಗ್ರಾಮದಿಂದ ಕಾಡಿಗೆ ಕರೆದುಕೊಂಡು ಹೋಗುತ್ತಾರೆ. ಇದೇ ಪರಮ ತಪಸ್ಸು. ಈ ವಿಷಯವನ್ನು ಯಾರು ತಿಳಿದುಕೊಳ್ಳುವನೋ, ಅವನು ಪರಮಲೋಕವನ್ನೇ ಜಯಿಸುತ್ತಾನೆ. ಮರಣಹೊಂದಿದವನ ಶರೀರವನ್ನು ಋತ್ವಿಕ್ಕರು ಅಗ್ನಿಯಲ್ಲಿ ದಹಿಸುತ್ತಾರೆ. ಇದೇ ಪರಮ ತಪಸ್ಸು. ಈ ಪ್ರಕಾರವಾಗಿ ಯಾರು ತಿಳಿದುಕೊಳ್ಳುತ್ತಿದ್ದಾನೋ, ಆತ ಪರಮಲೋಕವನ್ನೇ ಜಯಿಸುತ್ತಿದ್ದಾನೆ. (ಜಯಿಸುವನು.)

# ಸಪ್ತಮಾಧ್ಯಾಯ - ದ್ವಾದಶ ಬ್ರಾಹ್ಮಣಂ

ಮಂ.ಶ್ಲೋ|| ಅನ್ನಂ ಬ್ರಹ್ಮೇತ್ಯೇಕ ಆಹುಸ್ತನ್ನ ತಥಾ ಪೂಯತಿ ವಾ ಅನ್ನಮೃತೇ ಪ್ರಾಣಾತ್ ಪ್ರಾಣೋ ಬ್ರಹ್ಮೇತ್ಯೇಕ ಅಹುಸ್ತನ್ನ ತಥಾ ಶುಷ್ಯತಿ ವೈ ಪ್ರಾಣ ಋತೇಽನ್ನಾದೇತೇ ಹತ್ವೇವ ದೇವತೇ ಏಕಧಾ ಭೂಯಂ ಭೂತ್ವಾ ಪರಮತಾಂ ಗಚ್ಛತ ಸ್ತದ್ಧ ಸ್ಮಾಹ ಪ್ರಾತೃದಃ ಪಿತರಂ ಕಿಗ್ಂ ಸ್ವಿದೇವೈವಂ ವಿದುಷೇ ಸಾಧು ಕುರ್ಯಾಂ ಕಿಮೇವಾಸ್ಮಾ ಅಸಾಧು ಕುರ್ಯಾಮಿತಿ ಸ ಹಾ ಸ್ಮಾಹ ಪಾಣಿನಾ ಮಾ ಪ್ರಾತೃದಕಸ್ತ್ವೇನಯೋರೇಕಧಾ ಭೂಯಂ ಭೂತ್ವಾ ಪರಮತಾಂ ಗಚ್ಛತೀತಿ ತಸ್ಮಾ ಉ ಹೈತದುವಾಚ ವೀತ್ಯನ್ನಂ ವೈ ವಿ ಅನ್ನೇ ಹೀಮಾನಿ ಸರ್ವಾಣಿ ಭೂತಾನಿ ವಿಷ್ಟಾನಿರಮಿತಿ ಪ್ರಾಣೋ ವೈರಂ ಪ್ರಾಣೇಹೀಮಾನಿ ಸರ್ವಾಣಿಭೂತಾನಿ ರಮನ್ತೇ ಸರ್ವಾಣಿ ಹ ವಾ ಅಸ್ಮಿನ್ಭೂತಾನಿ ವಿಶನ್ತಿ ಸರ್ವಾಣಿಭೂತಾನಿ ರಮನ್ತೇ ಯ ಏವಂ ವೇದ (1)

ತಾ : ಕೆಲವರು ಅನ್ನವೇ ಪರಬ್ರಹ್ಮವೆಂದು ತಿಳಿಸಿದರು. ಇದು ಸರಿಯಲ್ಲ. ಅನ್ನವು ಪ್ರಾಣ-ವಿಲ್ಲದಿದ್ದಾಗ ಪೂರ್ತಿ ಭಾವವನ್ನು ಹೊಂದುವುದರಿಂದ ಪರಬ್ರಹ್ಮವಲ್ಲ. ಕೆಲವರು ಪ್ರಾಣವೇ ಬ್ರಹ್ಮಸ್ವರೂಪವೆಂದು ಹೇಳಿದರು. ಆದರೆ ಆ ಪ್ರಾಣವು ಕೂಡಾ ಅನ್ನವಿಲ್ಲದಿದ್ದಲ್ಲಿ ಶೋಷಿತವಾಗುವುದು. ಆದ್ದರಿಂದ ಪ್ರಾಣವು ಕೂಡಾ ಬ್ರಹ್ಮವಲ್ಲ. ಹಾಗೆ ಬೇರೆಬೇರೆಯಾಗಿ ಅನ್ನವಾಗಲೀ ಪ್ರಾಣವಾಗಲೀ ಬ್ರಹ್ಮವಾಗುವುದಿಲ್ಲ. ದೇವತಾ ಸ್ವರೂಪವಾದ ಈ ಅನ್ನಪ್ರಾಣಗಳೆರಡೂ ಏಕಸ್ವರೂಪವಾಗಿರುವ ಬ್ರಹ್ಮತ್ವವನ್ನು ಹೊಂದುತ್ತವೆ. ಈ ರೀತಿಯಾಗಿ ಅನ್ನ ಪ್ರಾಣಗಳನ್ನು ಬ್ರಹ್ಮಸ್ವರೂಪವಾದುದೆಂದು ತಿಳಿದುಕೊಂಡವನು ದುಷ್ಟತ್ವವನ್ನು ಮಾಡಿದರೂ ಖಂಡಿಸಲ್ಪಡುವುದಿಲ್ಲ. (ಶಿಕ್ಷೆಗೊಳಗಾಗುವುದಿಲ್ಲ.) ಪುಣ್ಯವನ್ನು ಮಾಡಿದರೂ ಪೂಜಿಸಲ್ಪಡುವುದಿಲ್ಲ. ಈ ರೀತಿಯಾಗಿ ನನ್ನಿಂದ ತಿಳಿಯಲಾದ ಈ ಪರಬ್ರಹ್ಮವನ್ನು ಹೊಂದಲಾಗುವುದು. ಆದ್ದರಿಂದ ಈ ರೀತಿಯಾಗಿ ಅನ್ನ ಪ್ರಾಣಗಳನ್ನು ಬ್ರಹ್ಮಸ್ವರೂಪವಾಗಿ ತಿಳಿದುಕೊಂಡವನು ಈ ಪರಬ್ರಹ್ಮಕ್ಕಾಗಿ ನಾನು ಏನು ಒಳ್ಳೆಯದನ್ನು ಮಾಡಬಲ್ಲೆ? ಏನು ಕೆಟ್ಟದ್ದನ್ನು ಮಾಡಬಲ್ಲೆ? ಎಂದು ಪ್ರಾತೃನೆನ್ನುವ ಪುತ್ರನು ತನ್ನ ತಂದೆಯನ್ನು ಕುರಿತು ಪ್ರಶ್ನಿಸಿದನು. ಹೀಗೆ ಕೇಳಿದ ಆ ಪುತ್ರನನ್ನು ಕುರಿತು ತಂದೆಯು ಕೈಯಿಂದ ಸನ್ನೆ ಮಾಡಿ ಹೀಗೆ ಹೇಳಬೇಡವೆಂದು ಸೂಚಿಸಿದ. (ತಡೆದ) ಓ ಪುತ್ರನೇ! ಈ ಸಮಸ್ತ ಭೂತಗಳು ಅನ್ನವನ್ನಾಶ್ರಯಿಸಿವೆ. ಆದ್ದರಿಂದ ಅನ್ನವು "ವಿ" ಯೆಂದು, ಈ ಭೂತಗಳೆಲ್ಲವೂ ಪ್ರಾಣದಲ್ಲಿ ಕ್ರೀಡಿಸುತ್ತಿವೆ. ಆದ್ದರಿಂದ ಪ್ರಾಣವನ್ನು "ರಂ" ಎಂದು ಹೇಳಬೇಕು. ಹೀಗೆ ಅನ್ನ ಪ್ರಾಣಗಳನ್ನು ಸಮಸ್ತ ಭೂತಗಳಾಶ್ರಯ ಕ್ರೀಡಾಕರಗಳಾಗಿ ತಿಳಿದು ಕೊಂಡವನನ್ನು ಸಮಸ್ತ ಭೂತಗಳು ಆಶ್ರಯಿಸಿರುತ್ತವೆ. ಎಂದರೆ ಅಂತಹ ಪುರುಷನು ಸರ್ವಕ್ಕೂ ಆಶ್ರಯದಾತನಾಗಿ ಬಲಶಾಲಿಯಾಗುತ್ತಾನೆ.

# ಸಪ್ತಮಾಧ್ಯಾಯ - ತ್ರಯೋದಶ ಬ್ರಾಹ್ಮಣಂ

ಮಂ.ಶ್ಲೋ|| ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹಿದಗ್ಂ ಸರ್ವಮುತ್ಥಾಪಯತ್ಯುದ್ಧಾಸ್ಮಾದುಕ್ಥ ವಿದ್ಧೀರಸ್ತಿಷ್ಠತ್ಯುಕ್ತಸ್ಯ ಸಾಯುಜ್ಯಗ್ಂ ಸ ಲೋಕತಾಂ ಜಯತಿ ಯ ಏವಂ ವೇದ (1)

ತಾ : ಶಸ್ತ್ರವೆನ್ನುವ ಋಗ್ವೇದ ಮಂತ್ರವೇ ಉಕ್ಥ, ಉಕ್ಥವೆಂದರೆ ಪ್ರಾಣ. ಪ್ರಾಣವೇ ಈ ಸಮಸ್ತವನ್ನು

ಚಲಿಸುವಂತೆ ಮಾಡುವುದು. ಯಾರು ಈ ಪ್ರಕಾರವಾಗಿ ತಿಳಿದುಕೊಳ್ಳುವನೋ, ಅಂತಹ ಪ್ರಾಣವೇತ್ತನು ವೀರ. ಈ ಪ್ರಾಣವೇದಗಳಿಂದ ಕಾಪಾಡಲ್ಪಡುತ್ತಿದ್ದಾನೆ. ಪ್ರಾಣದ ಸಾಯುಜ್ಯವನ್ನು ಸಮಾನ ಲೋಕತ್ವವನ್ನು ಹೊಂದುತ್ತಿದ್ದಾನೆ. (ಇದು ಉಕ್ಥೋಪಾಸನೆ)

**ಮಂ.ಶ್ಲೋ॥ ಯಜುಃ ಪ್ರಾಣೋ ವೈ ಯಜುಃ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಯುಜ್ಯನ್ತೇ ಯುಜ್ಯನ್ತೇಹಾಸ್ಮೈ ಸರ್ವಾಣಿಭೂತಾನಿ ಶ್ರೈಷ್ಠ್ಯಾಯ ಯಜುಷಸ್ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ (2)**

ತಾ : ಪ್ರಾಣವನ್ನು ಹವಿಸ್ಸನ್ನರ್ಪಿಸುವ ಯಜುರ್ವೇದವಾಗಿ ಧ್ಯಾನ ಮಾಡಬೇಕು. ಏಕೆಂದರೆ ಪ್ರಾಣವೇ ಯಜುಸ್ಸಾಗಿರುವುದು. ಆದ್ದರಿಂದಲೇ ಪ್ರಾಣದಲ್ಲಿಯೇ ಈ ಸಮಸ್ತ ಭೂತಗಳು ಅಡಕವಾಗಿವೆ. ಜೋಡಿಸಲ್ಪಟ್ಟಿವೆ. ಆದ್ದರಿಂದ ಪ್ರಾಣವನ್ನೇ ಯಜುಸ್ಸಾಗಿ ತಿಳಿದುಕೊಂಡವನಿಗೆ ಸಮಸ್ತ ಭೂತಗಳು ಪ್ರತ್ಯಕ್ಷದಲ್ಲಿ ಶ್ರೇಷ್ಠತ್ವವನ್ನು ಒಳಗೊಂಡಿದೆ. ಇಂತಹ ಉಪಾಸಕನು ಪರೋಕ್ಷದಲ್ಲಿ ಪ್ರಾಣದ ಐಕ್ಯವನ್ನು ಸಮಾನಲೋಕವನ್ನು ಅನುಭವಿಸುತ್ತಾನೆ. (ಪಡೆಯುತ್ತಾನೆ)

**ಮಂ.ಶ್ಲೋ॥ ಸಾಮ ಪ್ರಾಣೋ ವೈ ಸಾಮ ಪ್ರಾಣೇ ಹೀಮಾನಿ ಸರ್ವಾಣಿಭೂತಾನಿ ಸಮ್ಯಞ್ಚಿ ಸಮ್ಯಞ್ಚೀ ಹಾಸ್ಮೈ ಸರ್ವಾಣಿಭೂತಾನಿ ಶ್ರೇಷ್ಠ್ಯಾಯ ಕಲ್ಪನ್ತೇ ಸಾಮ್ನಸ್ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ (3)**

ತಾ : ಪ್ರಾಣವನ್ನು ಸಾಮವೇದವಾಗಿ ಉಪಾಸನೆ ಮಾಡಬೇಕು. ಪ್ರಾಣವೇ ಸಾಮವೇದ. ಪ್ರಾಣದಲ್ಲೇ ಈ ಸಮಸ್ತ ಭೂತಗಳು ವಾಸವಾಗಿವೆ. ಯಾರು ಈ ಪ್ರಕಾರವಾಗಿ ತಿಳಿದಿರುವನೋ, ಅವನ ಶ್ರೇಷ್ಠತೆಗಾಗಿ ಸಮಸ್ತ ಭೂತಗಳು, ಪ್ರತ್ಯಕ್ಷವಾಗಿ ಸಮರ್ಥವಾಗುತ್ತಿವೆ. ಈ ಪ್ರಕಾರ ಉಪಾಸಕನು ಅಪರೋಕ್ಷದಲ್ಲಿ ಪ್ರಾಣದ ಐಕ್ಯತೆಯನ್ನು ಸಮಾನ ಲೋಕತ್ವವನ್ನು ಅನುಭವಿಸುತ್ತಿದ್ದಾನೆ.

**ಮಂ.ಶ್ಲೋ॥ ಕ್ಷತ್ರಂ ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ ಹೈನಂ ಪ್ರಾಣಃ ಕ್ಷಣಿತೋಃ ಪ್ರಕ್ಷತ್ರಮತ್ರಮಾಪ್ನೋತಿ ಕ್ಷತ್ರಸ್ಯ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ (4)**

ತಾ : ಪ್ರಾಣವನ್ನು ಹಿಂಸೆಯಿಂದ ಕಾಪಾಡಿದಂತಹ ಕ್ಷತ್ರಸ್ವರೂಪವಾಗಿ ಉಪಾಸಿಸಬೇಕೆಂದು ಹೇಳಿರುವರು. ಏಕೆಂದರೆ ಪ್ರಾಣವೇ ಈ ದೇಹವನ್ನು ಹಿಂಸೆಯಿಂದ ರಕ್ಷಿಸುತ್ತದೆ. ಆದ್ದರಿಂದ ಪ್ರಾಣವು ಕ್ಷತ್ರ ಸ್ವರೂಪವಾಗಿದೆ. ಹೀಗೆ ತಿಳಿದುಕೊಂಡು ಯಾರ ಕೈಯಿಂದಲೂ ರಕ್ಷಿಸಲಾರದ ಸರ್ವವನ್ನು, ಹಿಂಸೆಯಿಂದ ರಕ್ಷಿಸುವಂತಹ ಪ್ರಾಣವನ್ನು ಹೊಂದುತ್ತಿದ್ದಾನೆ. ಪರೋಕ್ಷದಲ್ಲಿ ಪ್ರಾಣದ ಐಕ್ಯತೆಯನ್ನು ಸಮಾನಲೋಕತೆಯನ್ನು ಅನುಭವಿಸುತ್ತಿದ್ದಾನೆ.

## ಸಪ್ತಮಾಧ್ಯಾಯ – ಚತುರ್ದಶ ಬ್ರಾಹ್ಮಣಂ

**ಮಂ.ಶ್ಲೋ॥ ಭೂಮಿರನ್ತರಿಕ್ಷಂ ದ್ಯೌರಿತ್ಯಷ್ಟಾವಕ್ಷರಾಣ್ಯಷ್ಟಾಕ್ಷರಗ್ಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ಸ ಯಾವದೇಷು ತ್ರಿಷುಲೋಕೇಷು ತಾವದ್ಧ ಜಯತಿ-ಯೋಽಸ್ಯಾ ಏತದೇವಂ ಪದಂ ವೇದ (1)**

ತಾ : ಭೂಮಿಯು, ಆಕಾಶವು, ಸ್ವರ್ಗಲೋಕವು ಇವೆಲ್ಲ ಎಂಟು ಅಕ್ಷರಗಳನ್ನೊಳಗೊಂಡಿದೆ. (ಭೂಮಿಃ ಎನ್ನುವ ಪದದಲ್ಲಿನ ಭೂ ಎನ್ನುವ ಅಕ್ಷರವು ಮೊದಲು ಕೊನೆಯಲ್ಲಿದೆ. ದ್ಯೌಃ ಎನ್ನುವ ಪದದಲ್ಲಿನ ದಕಾರಯಕಾರಗಳೆದರಲ್ಲೂ ಸಹ ಎಂಟು ಅಕ್ಷರಗಳಿವೆ. ಗಾಯತ್ರಿಯಲ್ಲಿನ ಎಂಟು ಅಕ್ಷರವನ್ನುಳ್ಳ ಒಂದೇ ಪದ. ಈ ತ್ರಿಲೋಕ ಸ್ವರೂಪವೇ ಈ ಗಾಯತ್ರಿಯ ಎಂಟು ಅಕ್ಷರಗಳುಳ್ಳ ಪದವನ್ನು ಈ ಪ್ರಕಾರ ಯಾರು ಈ ಗಾಯತ್ರಿಯ ಈ ಪಾದವನ್ನು ತಿಳಿದುಕೊಳ್ಳುವರೋ ಅವನು ಈ ಮೂರು ಲೋಕಗಳಲ್ಲಿನ ಸರ್ವವನ್ನೂ ಜಯಿಸುವನು. ಈ ಗಾಯತ್ರಿಯ ಈ ಪಾದವನ್ನು ತಿಳಿದುಕೊಂಡವನು ಈ ಮೂರು ಲೋಕಗಳಿರುವಲ್ಲಿ ಸರ್ವವನ್ನೂ ಜಯಿಸುತ್ತಾನೆ. (ಗಾಯತ್ರಿ ಛಂದಸ್ಸಿನಲ್ಲಿ ಪ್ರತಿ ಪಾದದಲ್ಲೂ ಎಂಟು ಅಕ್ಷರಗಳಿವೆ. ಅಂತಹ ಮೂರು ಪಾದಗಳು ಇವೆ.)

**ಮಂ.ಶ್ಲೋ॥ ಋಚೋ ಯಜೂಗ್ಂಷಿ ಸಾಮಾನೀತ್ಯಷ್ಟಾವಕ್ಷರಾಣ್ಯಷ್ಟಾಕ್ಷರಗ್ಂ ಹಾ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ಸ ಯಾವತೀಯಂ ತ್ರಯೀವಿದ್ಯಾ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ (2)**

ತಾ : ಋಗ್ಯಜುಸಾಮರೂಪವಾದ ವೇದತ್ರಯದ ನಾಮಾಕ್ಷರಗಳು ಎಂಟು. ಗಾಯತ್ರಿಯ ಎಂಟು ಅಕ್ಷರಗಳುಳ್ಳ ಎರಡನೆಯ ಪಾದ., ಈ ಗಾಯತ್ರಿಯ ಎರಡನೆಯ ಪಾದವು, ಋಗ್ಯಜುಸ್ಸಾಮ-ರೂಪವಾದ ತ್ರಯೀ ವಿದ್ಯೆಯನ್ನಾಗಿ ಗ್ರಹಿಸಿ ಉಪಾಸಿಸುವಂತಹವನು ಋಗ್ಯಜುಸ್ಸಾಮಗಳನ್ನು ವೇದತ್ರಯ ಫಲಗಳನ್ನು ಅನುಭವಿಸುತ್ತಿರುವನು.

**ಮಂ.ಶ್ಲೋ॥ ಪ್ರಾಣೋಽಪಾನೋವ್ಯಾನ ಇತ್ಯಷ್ಟಾವಕ್ಷರಾಣ್ಯಷ್ಟಾಕ್ಷರಗ್ಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ಸ ಯಾವದಿದಂ ಪ್ರಾಣಿ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದಾಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ ಯದ್ವೈ ಚತುರ್ಥಂ ತತ್ತುರೀಯಂ ದರ್ಶತಂ ಪದಮಿತಿ ದದೃಶ ಇವ ಹ್ಯೇಷ ಪರೋರಜಾ ಇತಿ ಸರ್ವಮು ಹ್ಯೇವೈಷ ರಜ ಉಪರ್ಯುಪರಿ ತಪತ್ಯೇವಗ್ಂ ಹೈವ ಶ್ರಿಯಾ ಯಶಸಾ ತಪತಿ ಯೋಽಸ್ಯಾ ಏತದೇವಂ ಪದಂ ವೇದ (3)**

ತಾ : ಪ್ರಾಣವನ್ನು, ಅಪಾನವನ್ನು, ವ್ಯಾನವನ್ನು ಈ ಪ್ರಾಣಾಪಾನ ವ್ಯಾನಗಳನ್ನು ಮೂರು ಪದಗಳಲ್ಲಿನ ವರ್ಣಗಳು (ವ್ಯಾನ ಶಬ್ದದಲ್ಲಿ ವಿ, ಅ, ನ ಎನ್ನುವ ಮೂರು ವರ್ಣಗಳೆಂದು ತಿಳಿದುಕೊಳ್ಳಬೇಕು.) ಎಂಟು ಅಕ್ಷರಗಳುಳ್ಳ ಗಾಯತ್ರಿ ಮಂತ್ರದ ಅಷ್ಟಾಕ್ಷರ ಪಾದವು (ಮೂರನೆಯ ಪಾದ) ಈ ಪ್ರಾಣತ್ರಯವೇ ಗಾಯತ್ರಿಯ ಮೂರನೆಯ ಪಾದ. ಯಾರು ಈ ಪ್ರಕಾರವಾಗಿ ಈ ಗಾಯತ್ರಿಯ ಈ ಮೂರನೆಯ ಪಾದವನ್ನು ತಿಳಿದುಕೊಳ್ಳುತ್ತಿರುವನೋ, ಅವನು ಈ ಪ್ರಾಣಿಸಮೂಹವೆಲ್ಲವನ್ನೂ ಜಯಿಸುತ್ತಿರುವಂತವನಾಗುತ್ತಾನೆ. ಆನಂತರ ಈ ಪ್ರತ್ಯಕ್ಷವಾದ ಸೂರ್ಯ ಮಂಡಲವು ಪರೋರಜವೆನ್ನುವಂತಹ ಪದವಾಗಿ ಪ್ರಕಾಶಿಸುತ್ತಿರುವ ಇದೇ ಈ ಗಾಯತ್ರಿಯ ತುರೀಯವೆನ್ನುವ ದರ್ಶಿತ ಪಾದ. (ಇಲ್ಲಿ ಪರೋರಜಾ, ತುರೀಯ, ದರ್ಶತ ಪದ ಎನ್ನುವ ಈ ಮೂರಕ್ಕೆ ಶ್ರುತಿಯೇ ಅರ್ಥವನ್ನು ಹೇಳಿದೆ. ಕಾಣಿಸುತ್ತಿರುವ ಈ ಮಂಡಲಾಂತರ್ಗತ ಪುರುಷನೇ. ಸಮಸ್ತವಾದ ರಜಸ್ಸನ್ನು (ಸಮಸ್ತಲೋಕದಲ್ಲಿ) ಮೇಲುಮೇಲಕ್ಕೆ ಪ್ರಕಾಶಿಸುತ್ತಿದ್ದಾನೆ. ಯಾರು ಈ ಪ್ರಕಾರವಾಗಿ ಈ ಗಾಯತ್ರಿ

ಮಂತ್ರದ ನಾಲ್ಕನೆಯದೆ ತುರೀಯವೆಂಬುದು. ದರ್ಶತಂ ಪದಂ ಎಂಬುದು ಕಾಣಿಸುತ್ತಿರುವ ಈ ಮಂಡಲಾಂತರ್ಗತ ಪುರುಷನು ಸಮಸ್ತ ಲೋಕವನ್ನೂ ಪ್ರಕಾಶಿಸುತ್ತಿರುವನು. ಯಾರು ಈ ನಾಲ್ಕನೆಯ ಪಾದವನ್ನು ತಿಳಿದುಕೊಳ್ಳುತ್ತಿದ್ದಾನೋ ಅವನು ಈ ಪೂರ್ವೋಕ್ತವಾದ ಈ ಗಾಯತ್ರಿಯ ಈ ನಾಲ್ಕನೆಯ ಪಾದವನ್ನು ತಿಳಿದುಕೊಳ್ಳುವನೋ ಅವನು ಈ ಪೂರ್ವೋಕ್ತವಾದ (ಈಹಿಂದೆ ಹೇಳಿದ) ಸೂರ್ಯನಂತೆಯೆ, ಸರ್ವಾಧಿಪತ್ಯ ಲಕ್ಷಣವಾದ ಸಂಪತ್ತಿನೊಂದಿಗೂ, ಖ್ಯಾತಿಯೊಂದಿಗೂ ಪ್ರಕಾಶಿಸುತ್ತಾನೆ. (ವನು)

**ಮಂ.ಶ್ಲೋ॥ ಸೈಷಾ ಗಾಯತ್ರ್ಯ್ಯೆ ತಸ್ಮಿಗ್‌ಂ ಸ್ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ ತದ್ವೈ ತತ್ಸತ್ಯೇ ಪ್ರತಿಷ್ಠಿತಂ ಚಕ್ಷುರ್ವೈ ಸತ್ಯಂ ಚಕ್ಷುರ್ಹಿವೈ ಸತ್ಯಂ ಚಕ್ಷುರ್ಹಿವೈ ಸತ್ಯಂ ತಸ್ಮಾದ್ಯದಿದಾನೀಂ ದ್ವೌ ವಿಪದಮಾನಾವೇಯಾತಾ ಮಹಾದರ್ಶಮಹಮಶ್ರೌಷಮಿತಿ ಯ ಏವಂ ಬ್ರೂಯಾದಹಮದರ್ಶಮಿತಿ ತಸ್ಮಾ ಏವ ಶ್ರದ್ಧಧ್ಯಾಮ ತದ್ವೈತತ್ಸತ್ಯಂ ಬಲೇ ಪ್ರತಿಷ್ಠಿತಂ ಪ್ರಾಣೋ ವೈ ಬಲಂ ತತ್ ಪ್ರಾಣೇ ಪ್ರತಿಷ್ಠಿತಂ ತಸ್ಮಾದಾಹುರ್ಬಲಗ್‌ಂ ಸತ್ಯಾ ದೋ ಗೀಯ ಇತ್ಯೇವಮೇಷಾ ಗಾಯತ್ರ್ಯಧ್ಯಾತ್ಮಂ ಪ್ರಾಣೇ ಪ್ರತಿಷ್ಠಿತಾ ಸಾ ಹೈಷಾ ಗಯಾಗ್‌ಂ ಸ್ತತ್ರೇ ಪ್ರಾಣಾ ವೈ ಗಯಾ ಸ್ತತ್ ಪ್ರಾಣಾಗ್‌ಂ ಸ್ತತ್ರೇತದ್ಯದ್ಗಯಾಗ್‌ಂ ಸ್ತತ್ರೇ ತಸ್ಮಾದ್ಗಾಯತ್ರೀ ನಾಮ ಸ ಯಾ ಮೇವಾ ಮೂಗ್‌ಂ ಸಾವಿತ್ರೀ ಮನ್ವಹೈಷ್ಯೈವ ಸ ಯಸ್ಮಾ ಅನ್ವಾಹ ತಸ್ಯ ಪ್ರಾಣಾಗ್‌ಂಸ್ತ್ರಾಯತೇ (4)**

ತಾ : ಈ ಹಿಂದೆ ಹೇಳಿದ ಈ ಮೂರು ಪಾದಗಳುಳ್ಳ ಗಾಯತ್ರಿ ಪರೋ ರಜನೀಯೆನ್ನುವ ದರ್ಶಕಪದದಲ್ಲಿ ಸೂರ್ಯಮಂಡಲಾಂತರ್ಗತ ಪುರುಷನೇ ಸ್ಥಾನವಾಗಿರುವ ತುರೀಯದಲ್ಲಿ ಪ್ರತಿಷ್ಠಿತವಾಗಿ ಇದೆ. ಆ ಪ್ರಸಿದ್ಧವಾದ ನಾಲ್ಕನೆಯ ಪಾದವು ಸತ್ಯದಲ್ಲಿ ಪ್ರತಿಷ್ಠಿತವಾಗಿದೆ. (ಆ ಸತ್ಯವೇನೆಂದರೆ) ನೇತ್ರವೇ ಸತ್ಯವಾದುದು. ನೇತ್ರವು ಪ್ರಸಿದ್ಧವಾದ ಸತ್ಯವಾಗಿದೆ. (ಪ್ರಸಿದ್ಧ ಹೇಗೆಂದರೆ) ಈಗ ನಾನು ನೋಡಿದೆನು. ನಾನು ಕೇಳಿದೆ ಎಂದು ಕಲಹ ಮಾಡುತ್ತಾ ಇಬ್ಬರು ಮನುಷ್ಯರು ಬಂದಾಗ ಯಾರು ನಾನು ನೋಡಿದೆನೆಂದು ಹೇಳುವನೋ ಅವನನ್ನೇ ನಾವು ವಿಶ್ವಸಿಸುತ್ತೇವೆ. ಆ (ಅಂತಹ) ಈ ಸುಪ್ರಸಿದ್ಧವಾದ ಸತ್ಯವು(ತುರೀಯ ಪದವಾದ ಸೂರ್ಯನಿಗೆ ಆಶ್ರಯವಾದ ನೇತ್ರ) ಬಲದಲ್ಲಿ ಪ್ರತಿಷ್ಠಿತವಾಗಿದೆ. ಪ್ರಾಣವೇ ಆ ಬಲ. ಆ ಸತ್ಯಾತ್ಮಕವಾದ ನೇತ್ರಕ್ಕೆ (ನೇತ್ರವು) ಬಲರೂಪವಾದ ಪ್ರಾಣದಲ್ಲಿಡಲಾಗಿದೆ. ಪ್ರಾಣವು ನೇತ್ರೇಂದ್ರಿಯಕ್ಕಿಂತ ಬಲಿಷ್ಠವಾದುದು. ಈ ಪ್ರಕಾರ-ವಾಗಿಯೇ ಮೂರು ಪಾದಗಳುಳ್ಳ ಈ ಗಾಯತ್ರಿಯು ಪರಮಾತ್ಮ ಸ್ವರೂಪವಾದ ಈ ಪ್ರಾಣದಲ್ಲಿ ಪ್ರತಿಷ್ಠಿತವಾಗಿದೆ. ಈ ರೀತಿಯಾಗಿ ಪ್ರಾಣರೂಪವಾದ ಗಾಯತ್ರಿ, ವಾಗಾದೀಂದ್ರಿಯಗಳನ್ನು ಕಾಪಾಡು-ತ್ತಿದೆ. ಈ ಪ್ರಕಾರವಾಗಿ ವಾಗಾದೀಂದ್ರಿಯಗಳನ್ನು ಕಾಪಾಡುವುದರಿಂದಲೇ ಗಾಯತ್ರಿಯೆನ್ನುವ ಹೆಸರು ಬಂದಿದೆ. ಲೋಕದಲ್ಲಿ ಆಚಾರ್ಯನು ಎಂಟು ವರ್ಷಗಳ ವಯಸ್ಸುಳ್ಳ ಬಾಲಕನಿಗೆ ಉಪನಯನ ಸಂಸ್ಕಾರಗಳನ್ನು ಮಾಡಿ ಸವಿತೃದೇವತಾತ್ಮಕವಾದ ಗಾಯತ್ರಿಯನ್ನು ಉಪದೇಶಿಸುತ್ತಿದ್ದಾನೆ. ಆ ಸಾವಿತ್ರಿಯನ್ನು ಉಪದೇಶವಾಗಿ ಪಡೆದ ಬಾಲಕನ ಪ್ರಾಣಗಳನ್ನು ರಕ್ಷಿಸುವುದರಿಂದ ಗಾಯತ್ರಿಯೆಂದು ಪ್ರಸಿದ್ಧಿ ಹೊಂದಿತು.

ಮಂ.ಶ್ಲೋ॥ ತಾಗ್ಂ ಹೈ ತಾಮೇಕೇ ಸಾವಿತ್ರೀ ಮನುಷ್ಟುಭಮನ್ವಾಹುರ್ವಾಗನುಷ್ಟುಭೇತದ್ವಾಚಮನು ಬ್ರೂಮ ಇತಿ ನ ತಥಾ ಕುರ್ಯಾದ್ಗಾಯತ್ರೀಮೇವ ಸಾವಿತ್ರೀಮನುಬ್ರೂಯಾದ್ಯದಿಹ ವಾ ಅಪ್ಯೇವಂ ವಿದ್ಬಹ್ವಿವ ಪ್ರತಿಗೃಹ್ಣಾತಿ ನ ಹೈವ ತದ್ಗಾಯತ್ರ್ಯಾ ಏಕಞ್ಚ ನ ಪದಂಪ್ರತಿ (5)

ತಾ : ಕೆಲವರು ಆ ಪ್ರಸಿದ್ಧವಾದ ಸಾವಿತ್ರಿಯನ್ನು ಅನುಷ್ಟುಪ್‌ಛಂದಸ್ಸಿನಲ್ಲಿ ಅನುಸರಿಸಿ ಹೇಳಿದರು. ಏಕೆಂದರೆ ಅನುಷ್ಟುಪ್ ಛಂದಸ್ಸನ್ನು ಈ ವಾಕ್ಕನ್ನು ನೋಡಿ ಹೇಳಲಾಗುತ್ತಿದೆ ಎಂದು ತಿಳಿಸಿದರು. ಆ ರೀತಿ ಮಾಡಬಾರದು, ಹಾಗೆ ತಿಳಿದರೆಂದರೆ ಗಾಯತ್ರಿಯನ್ನೇ ಸಾವಿತ್ರಿ ಮಂತ್ರವಾಗಿ ಅನುಸರಿಸಿ ತಿಳಿಯಬಹುದು. ಪೂರ್ವೋಕ್ತ ಪ್ರಕಾರವಾಗಿ ಗಾಯತ್ರಿಯನ್ನು ಅರ್ಥಮಾಡಿಕೊಂಡವನು ಅನೇಕ ರೀತಿಯಲ್ಲಿ ಅದರಂತೆಯೇ ಪ್ರತಿಗ್ರಹಿಸುತ್ತಾನೆ. ಅಪ್ರತಿಗ್ರಹ ಸಮೂಹದಿಂದ ಒಂದಾಗುವ ಗಾಯತ್ರಿ ಪಾದವು ವಿಜ್ಞಾನಫಲವನ್ನು ಅಪಹರಿಸದು. ಪ್ರತಿಗ್ರಹಿತನಿಗೆ ಪಾಪವು ಬಾರದು.

ಮಂ.ಶ್ಲೋ॥ ಸ ಯ ಇಮಾಗ್ಂಸ್ತ್ರೀನ್ಲೋಕಾನ್ಪೂರ್ಣಾನ್ ಪ್ರತಿಗೃಹ್ಣೀಯಾತ್ಸೋಽಸ್ಯಾ ಏತತ್ ಪ್ರಥಮಂ ಪದಮಾಪ್ನುಯಾದಥ ಯಾವತೀಯಂ ತ್ರಯೀ ವಿದ್ಯಾ ಯಸ್ತಾವತ್ ಪ್ರತಿಗೃಹ್ಣೀ-ಯಾತ್ಸೋಽಸ್ಯಾ ಏತದ್ದ್ವಿತೀಯಂ ಪದಮಾಪ್ನುಯಾದಥ ಯಾವದಿದಂ ಪ್ರಾಣಿ ಯಸ್ತಾವತ್ ಪ್ರತಿಗೃಹ್ಣೀಯಾತ್ಸೋಽಸ್ಯಾ ಏತತ್ ತೃತೀಯಂ ಪದಮಾಪ್ನುಯಾದಥಾಽಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ ನೈವ ಕೇನಚ ನಾಪ್ಯಂ ಕುತ ಉ ಏತಾವತ್ ಪ್ರತಿಗೃಹೀಯಾತ್ (6)

ತಾ : ಈ ಮೂರು ಲೋಕಗಳನ್ನು ದಾನವನ್ನು ಪಡೆಯುವನೊಂದಿಗೆ ಗಾಯತ್ರಿಯ ಪ್ರಥಪಾದ ವಿಜ್ಞಾನ ಫಲವು ಸರಿಹೋಗುತ್ತದೆ. ಋಗ್ಯಜುಸ್ಸಾಮವೇದಗಳನ್ನು ತಿಳಿದುಕೊಂಡವನಿಗೆ ದೊರೆಯುವ ಫಲವು, ಗಾಯತ್ರಿಯ ದ್ವಿತೀಯ ಪಾದ ವಿಜ್ಞಾನ ಫಲವು ಸರಿಯಾಗುತ್ತದೆ. ಈ ಸಮಸ್ತ ಪ್ರಾಣಿಜಾತವನ್ನು ಹೊಂದುವವನಿಂದ ಗಾಯತ್ರೀ ತೃತೀಯ ಪಾದ ವಿಜ್ಞಾನ ಫಲವನ್ನು ಅನುಭವಿಸಿದಂತಾಗುತ್ತದೆ. ಹೀಗೆ ಗಾಯತ್ರಿಯ ಮೂರು ಪಾದಗಳ ವಿಜ್ಞಾನ ಫಲವನ್ನು ಹೊಂದಿದ ನಂತರ ಈ ಪ್ರಕಾಶಿಸುವಂತಹ ಸೂರ್ಯಮಂಡಲಾಂತರ್ಗತ ಪುರುಷ ಸ್ವರೂಪವಾದ ಗಾಯತ್ರಿಯ ಪರೋರಜಸಿ ಎಂಬ ತುರೀಯ ಪಾದವು ಯಾರಿಂದಲೂ ಹೊಂದಲು ಶಕ್ಯವಾಗದು. ಈ ರೀತಿಯಾಗಿ ಕಲ್ಪಿಸಿ ಹೇಳುವುದೇ ಅಲ್ಲದೆ ಯಥಾರ್ಥವಾಗಿ ಈ ತ್ರಿಲೋಕಗಳಿಗೂ ಸಮಾನವಾಗಿರುವ ಗಾಯತ್ರೀಫಲವನ್ನು ಹೊಂದಲು ಯಾರಿಂದಲೂ ಶಕ್ಯವಾದದಲ್ಲ. ಹೀಗೆ ತಿಳಿದುಕೊಂಡು ಗಾಯತ್ರಿಯನ್ನು ಉಪಾಸಿಸುವನು ಸಮಸ್ತ ದೋಷಗಳನ್ನು ಹೊರದೂಡುತ್ತಾನೆ.

ಮಂ.ಶ್ಲೋ॥ ತಸ್ಯಾ ಉಪಸ್ಥಾನಂ ಗಾಯತ್ರ್ಯಸ್ಯೇಕಪದೀ ದ್ವಿಪದೀ ತ್ರಿಪದೀ ಚತುಷ್ಪದ್ಯಪದಸಿ ನಹಿ ಪದ್ಯಸೇ ನಮಸ್ತೇ ತುರೀಯಾಯ ದರ್ಶತಾಯ ಪದಾಯ ಪರೋರಜಸೇಽಸಾಪದೋ ಮಾ ಪ್ರಾಪದಿತಿ ಯಂ ದ್ವಿಷ್ಯಾದಸಾವಸ್ಮೈ ಕಾಮೋ ಮಾ ಸಮೃದ್ಧೀತಿ ವಾ ನ ಹೈವಾಸ್ಮೈ ನ ಕಾಮ ಋದ್ಯತೇ ಯಸ್ಮಾ ಏವಮುಪತಿಷ್ಠತೇಹ ಮದಃ ಪ್ರಾಪಮಿತಿ ವಾ (7)

ತಾ : ಆ ಗಾಯತ್ರಿಯ ನಮಸ್ಕಾರ ಮಂತ್ರವನ್ನು ಹೇಳಲಾಗುತ್ತಿದೆ. ಓ ಗಾಯತ್ರೀ ನೀನು

ತ್ರಿಲೋಕಾತ್ಮಕವಾದ ಒಂದು ಪಾದವನ್ನುಳ್ಳವಳಾಗಿಯೂ, ತ್ರಯೀ ವಿದ್ಯಾ ಸ್ವರೂಪದಲ್ಲಿ ಎರಡನೆಯ ಪಾದವುಳ್ಳವಳಾಗಿಯೂ, ಪ್ರಣವಾದಿ ರೂಪವುಳ್ಳ ಮೂರನೆಯ ಪಾದವನ್ನು ಹೊಂದಿದವಳಾಗಿಯೂ ಆಗಿರುವೆ. ಮತ್ತು ನಾಲ್ಕನೆಯ ಪಾದವನ್ನು ಹೊಂದಿವಳಾಗಿದ್ದೀಯೆ. ನಿರುಪಾಧಿಕಳಾಗಿಯೂ ಕೂಡ ಆಗಿದ್ದೀಯೆ. ನೀನು ಯಾರಿಗೂ ತಿಳಿಯುವಂತಹಳಲ್ಲ. ತುರೀಯವಾದ ವರೋರಜಯೆನ್ನುವ ದರ್ಶತ ಪಾದವನ್ನುಳ್ಳ ನಿನಗೆ (ನಿನಗಾಗಿ) ನಮಸ್ಕಾರ. ನಿನ್ನ ಪದ ಪ್ರಾಪ್ತಿಗಾಗಿ ವಿಘ್ನವನ್ನುಂಟು ಮಾಡುವ ಶತ್ರುವು, ವಿಘ್ನಗಳನ್ನು ಹೊಂದಲಿ. ಗಾಯತ್ರೀ ಸ್ವರೂಪವನ್ನು ತಿಳಿದ ಜ್ಞಾನಿಯು ಸ್ವಯಂ ಯಾರನ್ನು ದ್ವೇಷಿಸುವನೋ, ಅಂತಹ ಶತ್ರುವಿಗೆ ಇಷ್ಟ ಸಂಪತ್ತು ಉಂಟಾಗದಿರಲಿ ಎಂದು ಗಾಯತ್ರಿಯನ್ನು ಕುರಿತು ಈ ರೀತಿಯಾಗಿ ಅಭಿಚಾರಕ ಪ್ರಾರ್ಥನೆಯನ್ನು ಮಾಡಿದಲ್ಲಿ ಆ ಶತ್ರುವಿಗೆ ಇಷ್ಟಪ್ರಾಪ್ತಿ ಉಂಟಾಗುವುದಿಲ್ಲ. ನಾನು ಅಪೇಕ್ಷಿಸಿದಂತಹ (ಇಷ್ಟವಾದ) ಶ್ರೇಯಸ್ಸನ್ನು ಹೊಂದು-ವಂತಾಗಲಿ ಎಂದು ಗಾಯತ್ರಿಯನ್ನು ಕುರಿತು ಅಭ್ಯುದಯ ಹೊಂದುವಂತಾಗಲಿ ಎಂದು ಗಾಯತ್ರಿಯನ್ನು ಕುರಿತು ಅಭ್ಯುದಯದ ಪ್ರಾರ್ಥನೆಯನ್ನು ಮಾಡುತ್ತಾ ಆತನು ಇಷ್ಟಫಲಸಿದ್ಧಿಯನ್ನು ಅನುಭವಿಸುತ್ತಾನೆ.

ಮಂ.ಶ್ಲೋ|| **ಏತದ್ಧ ವೈ ತಜ್ಜನಕೋ ವೈದೇಹೋ ಬುಡಿಲಮಾಶ್ವತರಾಶ್ವಿಮುವಾಚ ಯನ್ನು ಹೋ ಯದ್ಗಾಯತ್ರೀ ವಿದಬ್ರೂಥಾ ಅಥ ಕಥಗ್‌ಂ ಹಸ್ತೀಭೂತೋ ವಹಸೀತಿ ಮುಖಗ್‌ಂ ಹ್ಯಸ್ಯಾಸ್ಸಮ್ರಾಣ್ಣ ವಿದಾಞ್ಚಕಾರೇತಿ ಹೋವಾಚ ತಸ್ಯಾ ಅಗ್ನಿರೇವ ಮುಖಂ ಯದಿಹ ವಾ ಅಪಿ ಬಹ್ವಿವಾಗ್ನಾವಭ್ಯಾ ದಧತಿ ಸರ್ವಮೇವ ತತ್ಸನ್ದಹತ್ಯೇವಗ್‌ಂ ಹೈವೈವಂ ವಿದ್ಯದ್ಯಪಿ ಬಹ್ವಿವ ಪಾಪಂ ಕುರುತೇ ಸರ್ವಮೇವ ತತ್ಸಂಪ್ಸಾಯ ಶುದ್ಧಃ ಪೂತೋಽಜರೋಽಮೃತಸ್ಸಮ್ಭವತಿ (8)**

ತಾ : ವಿದೇಹ ಪ್ರಭುವಾದ ಜನಕ ಮಹಾರಾಜನು ಅಶ್ವತರಾಶ್ವನ ಕುಮಾರನಾದ ಬುಡಿಲನೆನ್ನುವ ಮುನಿಯನ್ನು ಕುರಿತು ಓ ಬುಡಿಲನೇ! ನೀನು ಗಾಯತ್ರಿಯನ್ನು ತಿಳಿದುಕೊಂಡೆ-ಯೆಂದು ಹೇಳಿದೆಯಲ್ಲವೇ? ಹಾಗೆ ತಿಳಿದುಕೊಂಡಂತಹನಾದ ಹಸ್ತಗಳನ್ನುಳ್ಳವನಾಗಿ ಹೇಗೆ ಪ್ರತಿಗ್ರಹಾ (ದಾನವನ್ನು ಸ್ವೀಕರಿಸುವುದು) ದೋಷವನ್ನು ವಹಿಸುತ್ತಿರುವೆಯೆಂದು ಪ್ರಶ್ನಿಸಿದ. ಹೀಗೆ ಕೇಳಲು, ಬುಡಿಲನೆನ್ನುವ ಮುನಿ "ಓ ಜನಕಾ, ನಾನು ಈ ಗಾಯತ್ರಿಯ ಮುಖವನ್ನು ತಿಳಿದುಕೊಳ್ಳಲಿಲ್ಲ. ಆದ್ದರಿಂದಲೇ ಈ ಪಾಪವನ್ನು ವಹಿಸುತ್ತಿದ್ದೇನೆ ಎಂದು ಹೇಳಿದ. ಆದ್ದರಿಂದ ಅಗ್ನಿಯಲ್ಲಿ ಜನರು ಅನೇಕವಾದ ಕಟ್ಟಿಗೆಗಳು ದಹಿಸುತ್ತಿರಲು ಹಸಿ ಕಟ್ಟಿಗೆಯ ತುಂಡುಗಳನ್ನು ಹಾಕಲಾಗಿ ಅದನ್ನು ಕೂಡಾ ಆ ಅಗ್ನಿ ಉರಿಸಿಬಿಡುತ್ತದೆ. ಆ (ಅಗ್ನಿಯೇ) ಅಗ್ನಿಯನ್ನೇ ಮುಖವಾಗುಳ್ಳ ಗಾಯತ್ರಿಯನ್ನು ತಿಳಿದುಕೊಂಡವನು. ತಾನು ಮಾಡುವಂತಹ ಪ್ರತಿಗ್ರಹರೂಪವಾದ ಸರ್ವಪಾಪವನ್ನು ದಹಿಸುವಂತೆ ಮಾಡಿ, ಗಾಯತ್ರಿ ಸ್ವರೂಪನಾಗಿ ಪರಿಶುದ್ಧನಾಗಿಯೂ, ಪವಿತ್ರನು, ಜರಾ ಮರಣಗಳು ಇಲ್ಲದವ-ನಾಗಿಯೂ ಆಗುವನು. ಅಮೃತಪದವಿಯನ್ನು ಹೊಂದುವನು.

## ಸಪ್ತಮಾಧ್ಯಾಯ – ಪಞ್ಚದಶ ಬ್ರಾಹ್ಮಣಂ

ಮಂ.ಶ್ಲೋ|| **ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ| ತತ್ತ್ವಂ ಪೂಷನ್ನಪಾವೃಣು ಸತ್ಯ ಧರ್ಮಾಯ ದೃಷ್ಟಯೇ| ಪೂಷನ್ನೇಕರ್ಷೇ ಯಮಸೂರ್ಯಪ್ರಾಜಾಪತ್ಯ ವ್ಯೂಹರಶ್ಮೀನ್ ಸಮೂಹ|**

**ತೇಜೋಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ। ಯೋಽಸಾವಸೋ ಪುರುಷಃ ಸೋಽಹಮಸ್ಮಿ। ವಾಯುರನಿಲಮಮೃತಮಥೇದಂ ಭಸ್ಮಾನ್ತಗ್ಂ ಶರೀರಂ ಓಂ3 ಕ್ರತೋಸ್ಮರ ಕೃತಗ್ಂಸ್ಮರ ಕ್ರತೋಸ್ಮರ ಕೃತಗ್ಂಸ್ಮರ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವವಯುನಾನಿ ವಿದ್ವಾನ್ । ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ (1)**

ತಾ : ಸೂರ್ಯದೇವಾ! ನಿನ್ನ ತೇಜೋಮಂಡಲದಲ್ಲಿ ಹಿರಣ್ಮಯ ಪಾತ್ರದಿಂದ ಸತ್ಯವೆನ್ನುವ ಹೆಸರುಳ್ಳ ಬ್ರಹ್ಮದ ನಿನ್ನ ಮುಖವನ್ನು ಮುಚ್ಚಲಾಗಿದೆ. ಓ ಸೂರ್ಯದೇವಾ! ನೀನು ಸತ್ಯಧರ್ಮಗಳುಳ್ಳ ನನ್ನ (ನನಗಾಗಿ) ಆ ಪಾತ್ರವನ್ನು (ಪಾತ್ರೆಯನ್ನು) (ಅಸತ್ಯವೆನ್ನುವ ಬ್ರಹ್ಮಕ್ಕೆ ಮರೆಯಾಗಿರುವ ತೇಜೋರೂಪಪಾತ್ರೆಯನ್ನು) ತೆಗೆದುಹಾಕಿ ಜಗತ್ಪೋಷಕನು, ಏಕ ಋಷಿಯಾದವನು ಸಮಸ್ತ ಜಗತ್ತನ್ನು ನಿಯಮಿಸುವವನು, ಜಗತ್ತಿನ ಪ್ರಾಣಗಳನ್ನು ಪ್ರೇರೇಪಣೆ ಮಾಡುವವನು, ಹಿರಣ್ಯ ಗರ್ಭ ಪುತ್ರನಾದಂತಹ ಓ ಸೂರ್ಯದೇವಾ! ನಿನ್ನ ಕಿರಣಗಳನ್ನು, ತೇಜಸ್ಸನ್ನು ಉಪಸಂಹರಿಸಯ್ಯ, ನಿನ್ನ ಕಲ್ಯಾಣ ತಮವಾದ ಸ್ವರೂಪವನ್ನು ನೋಡುತ್ತಿದ್ದೇನೆ. ಈ ಪುರುಷನು (ಭೂಃಭುವಃಸುವಃ ಎನ್ನುವ ವ್ಯಾಹೃತಿ ರೂಪವಾದ ಈ ಪುರುಷನು ನಾನು. ಅಮೃತ ಸ್ವರೂಪವುಳ್ಳವರು. ನನ್ನ ಶರೀರ ಪತನಾನಂತರ, ಶರೀರದಲ್ಲಿರುವ ಪ್ರಾಣವಾಯುವು ಬಾಹ್ಯವಾಯುವಿನಲ್ಲಿ ಲೀನವಾಗುವುದು. ಅನಂತರ ಈ ದೇಹವು ಭಸ್ಮವಾಗಿ ಭೂಮಿಯಲ್ಲಿ ಸೇರಿಹೋಗುವುದು. ಓ ಅಗ್ನಿದೇವಾ! ನನ್ನ ಕೈಯಿಂದ ಮಾಡುವಂತಹ ಪುಣ್ಯವನ್ನು ನೆನೆದು (ಸ್ಮರಿಸಿ) ನಮ್ಮನ್ನು ಶುಭ್ರವಾದ ಉತ್ತರಾಯಣ ಮಾರ್ಗದಿಂದ ಕರ್ಮಫಲಪ್ರಾಪ್ತಿಗಾಗಿ ತೆಗೆದುಕೊಂಡು ಹೋಗು. ಸ್ವಯಂಪ್ರಕಾಶವಾದ ಓ ಸ್ವಾಮೀ! ನೀನು ಪ್ರಾಣಿಗಳ ಎಲ್ಲ ಪ್ರಜ್ಞೆಗಳನ್ನು ತಿಳಿದವನು. ಆದ್ದರಿಂದ ಕುಟಿಲವಾದ ಪಾಪವನ್ನು ನಮ್ಮಿಂದ ಹೋಗುವಂತೆ ಮಾಡು. ನಿನಗಾಗಿ ಹೆಚ್ಚಿನ ಅಧಿಕವಾದ ನಮಸ್ಕಾರಗಳಿಂದ ಪ್ರಾರ್ಥಿಸುತ್ತಿದ್ದೇನೆ. (ಈ ಅಧ್ಯಾಯದಲ್ಲಿ 15 ಬ್ರಾಹ್ಮಣಗಳು 30 ಮಂತ್ರಗಳು ಇವೆ.)

# ಅಷ್ಟಮಾಧ್ಯಾಯ – ಪ್ರಥಮ ಬ್ರಾಹ್ಮಣಂ

**ಮಂ.ಶ್ಲೋ॥ ಓಂ ಯೋಹವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ (1)**

ತಾ : ಯಾರು ಪ್ರಾಣದ ಜೇಷ್ಠತ್ವವನ್ನು, ಶ್ರೇಷ್ಠತ್ವವನ್ನು ತಿಳಿದು ತಿಳಿದುಕೊಳ್ಳುತ್ತಿದ್ದಾನೋ, ಅವನು ಜ್ಞಾತರಲ್ಲಿ ಶ್ರೇಷ್ಠನು, ಶ್ರೇಷ್ಠನೂ ಆಗುತ್ತಿದ್ದಾನೆ. ಪ್ರಾಣವೇ ಸಮಸ್ತ ಇಂದ್ರಿಯಗಳಲ್ಲಿ ಜೇಷ್ಠವಾದದ್ದು, ಶ್ರೇಷ್ಠವಾದದ್ದು ಆಗಿದೆ. ಯಾರು ಈ ರೀತಿ ತಿಳಿದುಕೊಳ್ಳುತ್ತಾನೋ ಅವನು ಜ್ಞಾತರಲ್ಲಿ ಶ್ರೇಷ್ಠನು, ಜೇಷ್ಠನು ಆಗುತ್ತಾನೆ. ಮತ್ತೆ, ಯಾರು ಜೇಷ್ಠತ್ವ, ಶ್ರೇಷ್ಠತ್ವವನ್ನು ತನ್ನಲ್ಲಿ ಆಗಲು ಆಶಿಸುತ್ತಾನೆಯೋ ಅವನು ಜೇಷ್ಠನು, ಶ್ರೇಷ್ಠನು ಆಗುತ್ತಾನೆ.

**ಮಂ.ಶ್ಲೋ|| ಯೋ ಹಾ ವೈ ವಸಿಷ್ಠಾಂ ವೇದ ವಸಿಷ್ಠಾಸ್ಸ್ವಾನಾಂ ಭವತಿ ವಾಗ್ವೈ ವಸಿಷ್ಠಾ ವಸಿಷ್ಠಸ್ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ (2)**

ತಾ : ವಸಿಷ್ಠತೆಯನ್ನು ತಿಳಿದುಕೊಂಡು ಉಪಾಸಿಸುವ ಜ್ಞಾತರೆಲ್ಲರಲ್ಲೂ ವಸಿಷ್ಠ ಋಷಿ-ಯಂತೆಯೇ, ದೊಡ್ಡ ಪ್ರವಕ್ತವಾಗುತ್ತಿದ್ದಾನೆ. ವಾಗೀಂದ್ರಿಯವೇ ವಾಚಾಲಕವಾಗಿದೆಯಾದ್ದರಿಂದ ಅಂತಹ ವಾಗೀಂದ್ರಿಯವು, ವಸಿಷ್ಠ ರೂಪವೆಂದು ಭಾವಿಸಿ ಉಪಾಸಿಸುವವನು ಜ್ಞಾತರಲ್ಲಿಯೂ, ಇನ್ನೂ ತಾನು ಇಚ್ಛಿಸುವ ಎಲ್ಲರಲ್ಲೂ ನಿರ್ಭಯವಾಗಿ ಮಾತನಾಡುವಂತಹ ಪ್ರಕ್ತನಾಗುವನು. (ತ್ತಾನೆ.)

**ಮಂ.ಶ್ಲೋ|| ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ ಚಕ್ಷುರ್ವೈ ಪ್ರತಿಷ್ಠಾ ಚಕ್ಷುಷಾ ಹಿ ನಮೇ ಚ ದುರ್ಗೇ ಚ ಪ್ರತಿತಿಷ್ಠತಿ ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ ಯ ಏವಂ ವೇದ (3)**

ತಾ : ಯಾರು ಪ್ರತಿಷ್ಠೆಯನ್ನು ಕುರಿತು ತಿಳಿದುಕೊಳ್ಳುವನೋ, ಅವನು ಸಮದೇಶದಲ್ಲಿ ಪ್ರತಿಷ್ಠೆಯನ್ನು ಹೊಂದುತ್ತಿದ್ದಾನೆ. ದುರ್ಭಿಕ್ಷ ಕಾಲದಲ್ಲೂ ಸಹ ಪ್ರತಿಷ್ಠೆಯೊಂದಿಗೇ ಜೀವಿಸುತ್ತಾನೆ. ನೇತ್ರವೇ ಪ್ರತಿಷ್ಠೆಯುಳ್ಳದ್ದು. ನೇತ್ರದಿಂದಲೇ ಸಮದೇಶ ಸಮಕಾಲಗಳಲ್ಲಿಯೂ ವಿಷಮ ದೇಶ ದುರ್ಭಿಕ್ಷ ಕಾಲದಲ್ಲಿಯೂ ಪ್ರತಿಷ್ಠೆ ಹೊಂದಿರುವಂತಹವನಾಗಿರುತ್ತಾನೆ. ಯಾರು ಈ ಪ್ರಕಾರ (ಸಮಸ್ತಕ್ಕೂ ನೇತ್ರವೇ ಸ್ಥಿತಿಯಾಗಿದೆಯೆಂದು) ತಿಳಿದುಕೊಳ್ಳುವನೋ ಆತ ಸಮದೇಶದಲ್ಲಿ ಸಮಸ್ತಕಾಲದಲ್ಲಿ ಪ್ರತಿಷ್ಠೆಯಲ್ಲಿರುವನು.

**ಮಂ.ಶ್ಲೋ|| ಯೋ ಹ ವೈ ಸಂಪದಂ ವೇದ ಸಗ್ಂ ಹಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಶ್ರೋತ್ರಂ ವೈ ಸಮ್ಪತ್ ಶ್ರೋತ್ರೇ ಹೀಮೇ ಸರ್ವೇ ವೇದಾ ಅಭಿಸಮ್ಪನ್ನಾಃ ಸಗ್ಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಯ ಏವಂ ವೇದ (4)**

ತಾ : ಶ್ರೋತ್ರೇಂದ್ರಿಯದಿಂದಲೇ ಈ ಸಮಸ್ತವೇದಗಳು ಸಮೃದ್ಧವಾಗುತ್ತವೆ. ಆದ್ದರಿಂದ ಶ್ರೋತ್ರೇಂದ್ರಿಯವೇ ಸಂಪದ್ಗುಣವೆಂದು ತಿಳಿದುಕೊಂಡು ಉಪಾಸಿಸುವವನು ತಾನು ವಾಂಛಿಸಿದ ಫಲಗಳನ್ನು ಹೊಂದಿ ಅನುಭವಿಸುತ್ತಿದ್ದಾನೆ. (ಅನುಭವಿಸುವಂತಹವನಾಗುತ್ತಾನೆ.)

**ಮಂ.ಶ್ಲೋ|| ಯೋ ಹಾ ವಾ ಆಯತನಂ ವೇದಾಯತನಗ್ಂ ಸ್ವಾನಾಂ ಭವತ್ಯಾಯತನಂ ಜನಾನಾಂ ಮನೋ ವಾ ಆಯತನಮಾಯತನಗ್ಂ ಸ್ವಾನಾಂ ಭವತ್ಯಾಯತನಂ ಜನಾನಾಂ ಯ ಏವಂ ವೇದ (5)**

ತಾ : ಆಶ್ರಯವನ್ನು (ಆಯತನವನ್ನು) ತಿಳಿದವನು ಸ್ವಜನರಿಗೆ ತಾನು ಆಶ್ರಯವಾಗುತ್ತಿದ್ದಾನೆ. ಇಂದ್ರಿಯಗಳಿಗೆ, ವಿಷಯಗಳಿಗೆ, ಸ್ಪಂದಿಸುವುದು ಮನಸ್ಸು. ಮನಸ್ಸೇ ಆಶ್ರಯವಾಗಿರುತ್ತದೆಯೆಂದು ತಿಳಿದುಕೊಂಡೂ ಸರ್ವಾಶ್ರಯವಾದ ಮನಸ್ಸಿನ ಉಪಾಸನೆ ಮಾಡುವವನು ಜ್ಞಾತರಿಗೆ ಇತರರಿಗೆ ಆಶ್ರಯವಾಗುತ್ತಿದ್ದಾನೆ.

**ಮಂ.ಶ್ಲೋ|| ಯೋ ಹ ವೈ ಪ್ರಜಾಪತಿಂ ವೇದ ಪ್ರಜಾಯತೇ ಹ ಪ್ರಜಾಯಾ ಪಶುಭೀರೇತೋ ವೈ ಪ್ರಜಾಪತಿಃ ಪ್ರಜಾಯತೇ ಹ ಪ್ರಜಯಾ ಪಶುಭಿರ್ಯ ಏವಂ ವೇದ (6)**

ತಾ : ಉಪಸ್ಥೇಂದ್ರಿಯವೇ ಸೃಷ್ಟಿಕರ್ತನಾದ ಬ್ರಹ್ಮ. ಈ ವಿವರಗಳನ್ನು ತಿಳಿದುಕೊಂಡವನು ಸಂತಾನದೊಂದಿಗೂ, ಪಶುಧನದೊಂದಿಗೂ, ಭಾಗ್ಯವಂತನಾಗುತ್ತಿದ್ದಾನೆ.

**ಮಂ.ಶ್ಲೋ॥ ತೇ ಹೀಮೇ ಪ್ರಾಣಾ ಅಹಗ್‌ಂ ಶ್ರೇಯಸೇ ವಿವದಮಾನ ಬ್ರಹ್ಮ ಜಗ್ಮು**
**ಸ್ತದ್ಧೋಚುಃ ಕೋ ನೋ ವಸಿಷ್ಠ ಇತಿ ತಗ್‌ಂ ಹೋವಾಚ ಯಸ್ಮಿನ್ ವ**
**ಉತ್ಕ್ರಾನ್ತ ಇದಗ್‌ಂ ಶರೀರಂ ಪಾಪೀಯೋ ಮಾನ್ಯತೇ ಸ ವೋ ವಸಿಷ್ಠ ಇತಿ (7)**

ತಾ : ಆ ಪ್ರಸಿದ್ಧವಾದ ವಾಗಾದೀಂದ್ರಿಯಗಳು, ನಾನು ಶ್ರೇಷ್ಠ, ನಾನು ಶ್ರೇಷ್ಠ (ಶ್ರೇಯವನ್ನು ಹೊಂದಿರುವಂತಹವನೆಂದು) ಎಂದು ಕಲಹ ಮಾಡುತ್ತಿದ್ದವು. ಆ ಪ್ರಜಾಪತಿಯನ್ನು ಕೇಳಿದವು. ನಮ್ಮಲ್ಲಿ ವಸಿಷ್ಠ (ವಾಸವಾಗಿರುವವನು) ವಾಸಿಸುವಂತೆ ಮಾಡುವವನು) ಯಾರು? ಎಂದು ಆ ಪ್ರಜಾಪತಿಯು ನಿಮ್ಮಲ್ಲಿ ಯಾರು ಎದ್ದು (ಹೋದರೆ) ಹೋಗುತ್ತಿದ್ದಾಗ ಈ ಶರೀರವು ಹೆಚ್ಚಿನ ಪಾಪದಿಂದ ತುಂಬಿರುತ್ತದೆಯೆಂದು ಲೋಕವು ಭಾವಿಸುತ್ತದೆಯೋ ಅದು ನಿಮ್ಮೊಳಗೆ ವಸಿಷ್ಠ (ವಾಸವಾಗಿರುವುದು, ವಾಸವಾಗುವಂತೆ ಮಾಡುವುದು) ಎಂದು ಹೇಳಿದ.

**ಮಂ.ಶ್ಲೋ॥ ವಾಗ್ಘೋಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯಾऽಗತ್ಯೋವಾಚ ಕಥಮಶಕತಮದೃತೇ**
**ಜೀವಿತುಮಿತಿ ತೇ ಹೋಚುರ್ಯಥಾ ಕಲಾ ಅವದನ್ತೋ ವಾಚಾ ಪ್ರಾಣನ್ತಃ ಪ್ರಾಣೇನ ಪಶ್ಯನ್ತ**
**-ಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಗ್‌ಂ ಸೋ ಮನಸಾ ಪ್ರಜಾಯಮಾನಾ ರೇತಸೈವ-**
**ಮಜೀವಿಷ್ಮೇತಿ ಪ್ರವಿವೇಶ ಹ ವಾಕ್ (8)**

ತಾ : ಮೊದಲು ವಾಕ್ಕು ಈ ದೇಹದಿಂದ ಉತ್ಕ್ರಮಿಸಿದೆ. ಒಂದು ಸಂವತ್ಸರ ಕಳೆದ ಮೇಲೆ ಮತ್ತೆ ಬಂದು ಈ ರೀತಿಯಾಗಿ ಹೇಳಿತು. "ನಾನು ಇಲ್ಲದಿದ್ದಾಗಲೂ ನೀವು ಯಾವ ರೀತಿಯಾಗಿ ಜೀವಿಸಲು ಸಾಧ್ಯವಾಯಿತು?" ಆಗ ಉಳಿದ ಇಂದ್ರಿಯಗಳು ಈ ರೀತಿಯಾಗಿ ಹೇಳಿದವು. "ಲೋಕದಲ್ಲಿ ಮೂಕರು ಮಾತು (ವಾಕ್ಕು) ಆಡದೆಯಿದ್ದರೂ, ಪ್ರಾಣವು ವ್ಯಾಪಾರವನ್ನು ಪ್ರಾಣದ ಮೂಲಕ ನಡೆಸುತ್ತಾ ಕಣ್ಣಿನಿಂದ ನೋಡುತ್ತಾ, ಕಿವಿಯಿಂದ ಕೇಳುತ್ತಾ, ಮನಸ್ಸಿನಿಂದ ಕಾರ್ಯಾಕಾರ್ಯಗಳನ್ನು ತಿಳಿದುಕೊಳ್ಳುತ್ತಾ, ರೇತಸ್ಸಿನಿಂದ ಸಂತಾನವನ್ನು ಪಡೆಯುತ್ತಾ, ಯಾವ ರೀತಿಯಲ್ಲಿರುವನೋ, ಆ ಪ್ರಕಾರವಾಗಿ ನಾವು ಜೀವಿಸುತ್ತಿದ್ದೇವೆ. ಹೀಗೆ ವಾಗೀಂದ್ರಿಯೇತರಗಳಾದ ಚಕ್ಷುರಾದೀಂದ್ರಿಯಗಳಿಂದ ಹೇಳಲಾದ ವಾಕ್ಕು, ಮತ್ತೆ ದೇಹದಲ್ಲಿ ಪ್ರವೇಶಿಸಿತು.

**ಮಂ.ಶ್ಲೋ॥ ಚಕ್ಷುರ್ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯಾऽಗತ್ಯೋವಾಚ ಕಥಮಶಕತಮದೃತೇ**
**ಜೀವಿತುಮಿತಿ ತೇ ಹೋಚುರ್ಯಥಾ ಅನ್ಧಾ ಅಪಶ್ಯನ್ತಶ್ಚಕ್ಷುಷಾ ಪ್ರಾಣನ್ತಃ ಪ್ರಾಣೇನ ವದನ್ತೋ**
**ವಾಚಾ ಶೃಣ್ವನ್ತಃ ಶ್ರೋತ್ರೇಣ ವಿದ್ಯಾಗ್‌ಂಸೋ ಮನಸಾ ಪ್ರಜಾಯಮಾನಾರೇತಸೈವ-**
**ಮಜೀವಿಷ್ಮೇತಿ ಪ್ರವಿವೇಶ ಹ ಚಕ್ಷುಃ (9)**

ತಾ : ಆಮೇಲೆ ಚಕ್ಷುರಿಂದ್ರಿಯವು ದೇಹವನ್ನು ಬಿಟ್ಟು ಹೋಗಿ ಒಂದು ವರ್ಷವಾದ ಮೇಲೆ ತಾನಿದ್ದ ಬೇರೊಂದು ದೇಶದಿಂದ ಹಿಂದಿರುಗಿ ಬಂದು ಈ ರೀತಿಯಾಗಿ ಹೇಳಿತು. "ಎಲೈ ವಾಗಾದೀಂದ್ರಿಯಗಳೇ! ನೀವುಗಳು ನಾನಿಲ್ಲದೆ ಜೀವಿಸಲು ಹೇಗೆ ಸಮರ್ಥರಾದಿರಿ? ಎಂದು.

ಉಳಿದ ಇಂದ್ರಿಯಗಳೆಲ್ಲವೂ 'ಓ ನೇತ್ರೇಂದ್ರಿಯವೇ! ಲೋಕದಲ್ಲಿ ಅಂಧರು ಕಣ್ಣಿನಿಂದ ನೋಡಲಾಗದಿದ್ದರೂ, ಪ್ರಾಣದಿಂದ ಪ್ರಾಣವ್ಯಾಪಾರವನ್ನು ಮಾಡುತ್ತಾ ವಾಕ್ಕಿನಿಂದ ನುಡಿಯುತ್ತಾ, ಕಿವಿಯಿಂದ ಕೇಳುತ್ತಾ, ಮನಸ್ಸಿನಿಂದ ಕಾರ್ಯಾಕಾರ್ಯಗಳನ್ನು ಗ್ರಹಿಸುತ್ತಾ, ರೇತಸ್ಸಿನಿಂದ, ಸಂತಾನವನ್ನು ಪಡೆಯುತ್ತಾ ಹೇಗೆ ಜೀವಿಸುತ್ತಿರುವರೋ ಹಾಗೆಯೇ ನಾವು ಕೂಡಾ ಜೀವಿಸಿದ್ದೇವೆ ಎಂದು ಹೇಳಿದವು. ಹೀಗೆ ವಾಗಾದೀಂದ್ರಿಯಗಳು ತಿಳಿಸಲು, ನೇತ್ರವು ತಾನು ಶರೀರದಲ್ಲಿದ್ದು ಉಳಿದ ಇಂದ್ರಿಯಗಳಿಗಿಂತ ಶಕ್ತಿಯುಳ್ಳಂತಹುದಲ್ಲವೆಂದು ತಿಳಿದುಕೊಂಡಿದ್ದರಿಂದ ನನಗೆ ವಸಿಷ್ಠತ್ವವು ಇಲ್ಲವೆಂದು ತಿಳಿದು ಆ ಶರೀರದಲ್ಲಿ ಪ್ರವೇಶಿಸಿತು.

**ಮಂ.ಶ್ಲೋ॥ ಶ್ರೋತ್ರಗ್ಂ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯಾಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇಹೋಚುರ್ಯಥಾ ಬಧಿರಾ ಅಶೃಣ್ವನ್ತಃ ಶ್ರೋತ್ರೇಣ ಪ್ರಾಣನ್ತಃ ಪ್ರಾಣೇವ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ವಿದ್ವಾಗ್ಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ಶ್ರೋತ್ರಂ (10)**

ತಾ : ಶ್ರೋತ್ರವು ಉತ್ಕ್ರಮಣ ಮಾಡಿತು. ಒಂದು ಸಂವತ್ಸರ ಪ್ರವಾಸ ಮಾಡಿ ಮತ್ತೆ ಹಿಂದಿರುಗಿ ಬಂದು ಈ ರೀತಿಯಾಗಿ ಉಳಿದ ಇಂದ್ರಿಯಗಳನ್ನು ಉದ್ದೇಶಿಸಿ ಹೇಳಿತು "ಓ ವಾಗಾದೀಂದ್ರಿಯಗಳೇ ! ನಾನು ಇಲ್ಲದೆ ಜೀವಿಸಲು ನೀವು ಹೇಗೆ ಸಮರ್ಥರಾದಿರಿ" ಎಂದು. ಆ ವಾಗಾದೀಂದ್ರಿಯಗಳು ಹೀಗೆ ಹೇಳಿದವು. "ಓ ಶ್ರೋತ್ರೇಂದ್ರಿಯವೇ! ಕಿವಿಯಿಂದ ಕೇಳರು ಕಿವುಡರು ಅಸಮರ್ಥರಾದರೂ, ಪ್ರಾಣದಿಂದ ಪ್ರಾಣವ್ಯಾಪಾರವನ್ನು ಮಾಡುವಂತಹವರಾಗಿ, ವಾಕ್ಕಿನಿಂದ ಮಾತನಾಡುವಂತಹವರಾಗಿ ಕಣ್ಣಿನಿಂದ ನೋಡುವಂತಹವರಾಗಿ ಮನಸ್ಸಿನಿಂದ ಒಳ್ಳೆಯದು ಕೆಟ್ಟದ್ದನ್ನು ತಿಳಿದುಕೊಂಡವರಾಗಿ, ರೇತಸ್ಸಿನಿಂದ ಸಂತಾನವನ್ನು ಪಡೆಯುವಂತಹವರಾಗಿ, ಯಾವ ಪ್ರಕಾರವಾಗಿ ಜೀವಿಸಿರುವರೋ ನಾವೂ ಆ ಪ್ರಕಾರವಾಗಿಯೇ ಜೀವಿಸಿದ್ದೇವೆ" ಎನ್ನಲು ಶ್ರೋತ್ರೇಂದ್ರಿಯವು ಮತ್ತೆ ಶರೀರವನ್ನು ಪ್ರವೇಶಿಸಿತು.

**ಮಂ.ಶ್ಲೋ॥ ಮನೋ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯಾಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾ ಮುಗ್ಧಾ ಅವಿದ್ವಾಗ್ಂಸೋ ಮನಸಾ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ಪ್ರಜಾಯಮನಾ ರೇತಸೈವಮಜಿವಿಷ್ಮೇತಿ ಪ್ರವಿವೇಶ ಹ ಮನಃ (11)**

ತಾ : ಆ ನಂತರ ಅಂತರಿಂದ್ರಿಯವಾದ ಮನಸ್ಸು ಶರೀರವನ್ನು ಬಿಟ್ಟುಹೋಗಿ ಒಂದು ಸಂವತ್ಸರ ಕಾಲ ಪ್ರವಾಸದಲ್ಲಿದ್ದು ಮತ್ತೆ ಬಂದು ಹೀಗೆ ಹೇಳಿತು. "ಓ ವಾಗೀಂದ್ರಿಯಗಳೇ! ನೀವು ನಾನಿಲ್ಲದೆ ಜೀವಿಸಲು ಹೇಗೆ ಸಾಧ್ಯವಾಯಿತು? ಎನ್ನಲು ಆ ಇಂದ್ರಿಯಗಳು "ಎಲೈ ಮನಸ್ಸೇ! ಮೂಢರು ಮನಸ್ಸಿನಿಂದ ಕಾರ್ಯಾಕಾರ್ಯಗಳನ್ನು ತಿಳಿದುಕೊಳ್ಳಲಾರದವರಾದರೂ ಪ್ರಾಣದಿಂದ ಪ್ರಾಣ ವ್ಯಾಪಾರವನ್ನು ಮಾಡುತ್ತಾ, ವಾಕ್ಕಿನಿಂದ ಮಾತನಾಡುತ್ತಾ, ನೇತ್ರದಿಂದ ನೋಡುವಂತಹವರಾಗಿ, ರೇತಸ್ಸಿನಿಂದ ಸಂತಾನವನ್ನು ಪಡೆಯುತ್ತಾ, ಜೀವಿಸುತ್ತಿರುವಂತೆ ನಾವು ಕೂಡಾ ಜೀವಿಸುತ್ತಿ-

ದ್ದೇವೆ. ಎನ್ನಲು ಮನಸ್ಸು ತಾನು ಶರೀರದಲ್ಲಿದ್ದು ಉಳಿದವುಗಳನ್ನು ನಿಲ್ಲಿಸುವಂತಹ ಶಕ್ತಿ ಇಲ್ಲವೆಂದು ತಿಳಿದು ಮತ್ತೆ ಆ ಶರೀರದೊಳಕ್ಕೆ ಪ್ರವೇಶಿಸಿತು.

**ಮಂ.ಶ್ಲೋ॥ ರೇತೋ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯಾಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾ ಕ್ಲೀಬಾ ಅಪ್ರಜಾಯಮಾನಾ ರೇತಸೋ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಗ್ಂಸೋ ಮನಸೈವಮಜೀವಿಷ್ಮೇತಿ ಪ್ರವಿವೇಶ ಹ ರೇತಃ (12)**

ತಾ : ಆನಂತರ ರೇತಸ್ಸು ಶರೀರದಿಂದ ಹೊರಕ್ಕೆ ಹೋಯಿತು. ಒಂದು ವರ್ಷಕಾಲ ಪ್ರವಾಸ-ದಲ್ಲಿದ್ದು ಹಿಂದಿರುಗಿ ಬಂದು ಮಿಕ್ಕ ಇಂದ್ರಿಯಗಳನ್ನು ಕುರಿತು ಈ ವಿಧವಾಗಿ ಪ್ರಶ್ನಿಸಿತು. "ನಾನು ಇಲ್ಲದೇ ನೀವೆಲ್ಲರೂ ಹೇಗೆ ಇರಲು ಸಾಧ್ಯವಾಯಿತು?" ಎಂದು. ಆಗ ಉಳಿದ ಇಂದ್ರಿಯಗಳು ಹೀಗೆ ಹೇಳಿದವು. "ನಪುಂಸಕನು ಜನನೇಂದ್ರಿಯದೊಂದಿಗೆ ಸಂತಾನವನ್ನು ಹೊಂದಲು ಅಸಮರ್ಥನಾದರೂ ಪ್ರಾಣದಿಂದ ಪ್ರಾಣಪ್ರಕ್ರಿಯೆಯನ್ನು ನಡೆಸುತ್ತಾ. ಬಾಯಿಂದ ಮಾತನಾಡುತ್ತಾ, ಕಣ್ಣಿನಿಂದ ನೋಡುತ್ತಾ, ಕಿವಿಗಳಿಂದ ಆಲಿಸುತ್ತಾ, ಮನಸ್ಸಿನಿಂದ ಆಲೋಚಿಸುತ್ತಾ ಇದ್ದಂತೆಯೇ ನಾವು ಇದ್ದೇವೆ" ಎಂದವು. ಆ ಮಾತುಗಳನ್ನು ಕೇಳಿ ರೇತಸ್ಸು ತನಗೆ ವಸಿಷ್ಠತ್ವವು ಇಲ್ಲವೆಂಬುದನ್ನು ಗ್ರಹಿಸಿ, ಪುನಃ ಶರೀಗದಲ್ಲಿ ಪ್ರವೇಶಿಸಿತು.

**ಮಂ.ಶ್ಲೋ॥ ಅಥ ಹ ಪ್ರಾಣ ಉತ್ಕ್ರಮಿಷ್ಯನ್ಯಥಾ ಮಹಾಸು ಹಯಃ ಸೈನ್ಧವಃ ಪಡ್ವೀಶಶಂಕೂಸ್ಸಂಬೃಹೇ ದೇವಗ್ಂ ಹೈವೇಮಾನ್ ಪ್ರಾಣಾಸ್ಸಂಬಬರ್ಹ ತೇ ಹೋಚುರ್ಮಾ ಭಗವ ಉತ್ಕ್ರಮೀರ್ನ ವೈ ಶಕ್ಷ್ಯಾಮಸ್ತ್ವದೃತೇ ಜೀವಿತುಮಿತಿ ತಸ್ಯೋ ಮೇ ಬಲಿಂ ಕುರುತೇತಿ ತಥೇತಿ (13)**

ತಾ : ಆಮೇಲೆ ಮುಖ್ಯಪ್ರಾಣವು ಎದ್ದುಹೋಗಲು ಸಿದ್ಧವಾಯಿತು. ಆಗ ಶುಭಲಕ್ಷಣಗಳುಳ್ಳ ಸಿಂಧು ದೇಶದ ಕುದುರೆ ಮರಮುಟ್ಟುಗಳನ್ನು ಎಬ್ಬಿಸುವಂತೆ, ಆ ವಾಗಾದೀಂದ್ರಿಯಗಳು, ಆಯಾ ಸ್ಥಾನಗಳಿಂದ ಭ್ರಷ್ಟವಾದವು. ಆ ವಾಗಾದೀಂದ್ರಿಯಗಳು ಹೀಗೆ ನುಡಿದವು. "ಓ ಮುಖ್ಯ ಪ್ರಾಣವೇ! ನೀನು ಎದ್ದು ಹೋಗಬೇಡ. ನೀನಿಲ್ಲದೆ ನಾವು ಜೀವಿಸಲು ಅಸಮರ್ಥರು. ಆಗ ಮುಖ್ಯಪ್ರಾಣವು ಆ ಇಂದ್ರಿಯಗಳನ್ನು ಕುರಿತು ಓ ಇಂದ್ರಿಯಗಳೇ! ನೀವೂ ನನಗೆ ಪೂಜೆಯನ್ನು ಮಾಡುತ್ತಿರಬೇಕು ಎಂದಿತು. ಆನಂತರ ಆ ವಾಗಾದೀಂದ್ರಿಯಗಳು ಅಂಗೀಕರಿಸಿ ಪ್ರತಿಜ್ಞೆಯನ್ನು ಮಾಡಿದವು.

**ಮಂ.ಶ್ಲೋ॥ ಸಾ ಹ ವಾಗುವಾಚ ಯದ್ವಾ ಅಹಂ ವಸಿಷ್ಠಾಸ್ಮಿ ತ್ವಂ ತದ್ವಸಿಷ್ಠೋಽಸೀತಿ ಯದ್ವಾ ಅಹಂ ಪ್ರತಿಷ್ಠಾಸ್ಮಿ ತ್ವಂ ತತ್ ಪ್ರತಿಷ್ಠೋಽಸೀತಿ ಚಕ್ಷುರ್ಯದ್ವಾ ಅಹಗ್ಂ ಸಮ್ಪದಸ್ಮಿ ತ್ವಂ ತತ್ಸಮ್ಪದಸೀತಿ ಶ್ರೋತ್ರಂ ಯದ್ವಾ ಅಹಮಾಯತನಮಸ್ಮಿ ತ್ವಂ ತದಾಯತನಮಸೀತಿ ಮನೋ ಯದ್ವಾ ಅಹಂ ಪ್ರಜಾತಿರಸ್ಮಿತ್ವಂ ತತ್ ಪ್ರಜಾತಿರಸೀತಿ ರೇತಸ್ತಸ್ಯೋ ಮೇ ಕಿಮನ್ನಂ ಕಿಂ ಮೇ ವಾಸ ಇತಿ ಯದಿದಂ ಕಿಂಚಾಶ್ವಭ್ಯ ಅಕ್ರಿಮಿಭ್ಯ ಅಕೀಟಪತಂಗೇಭ್ಯ ಸ್ತತ್ತೇನ್ನಮಾಪೋ ವಾಸ ಇತಿ ನ ಹ ವಾ ಅಸ್ಯಾನ್ನನ್ನಂ ಜಗ್ಧಂ ಭವತಿ ನಾನನ್ನಂ ಪ್ರತಿಗೃಹೀತಂ ಯ**

**ಏವಮೇತದನಸ್ಯಾನ್ನಂ ವೇದ ತದ್ವಿದ್ವಾಗ್ಂಸಃ ಶ್ರೋತ್ರಿಯೋ ಅಶಿಷ್ಯನ್ತ ಆಚಾಮನ್ತ್ಯ ಶಿತ್ವಾಚಾಮನ್ತ್ಯೇತಮೇವ ತದನಮನಗ್ನಂ ಕುರ್ವನ್ತೋ ಮನ್ಯನ್ತೇ (14)**

ತಾ : ಆ ರೀತಿಯಾಗಿ ವಾಗಾದೀಂದ್ರಿಯಗಳೆಲ್ಲವೂ ಮುಖ್ಯಪ್ರಾಣವನ್ನು ಕುರಿತು ತಮಗಿರುವ ವಸಿಷ್ಠಾತ್ವಾದಿ ಗುಣಗಳೆಲ್ಲವೂ, ಓ ಮುಖ್ಯ ಪ್ರಾಣವೇ! ನಿನಗೆ ಕೂಡಾ ಇವೆ ಎಂದು ನುಡಿದವು. ಆಗ ಆ ಮುಖ್ಯಪ್ರಾಣವು ಓ ವಾಗಾದೀಂದ್ರಿಯಗಳೇ! ನಿಮ್ಮ ವಸಿಷ್ಠತ್ವಾದಿ ಗುಣಗಳುಳ್ಳ ನನಗೆ ಅನ್ನವೆಲ್ಲಿ? ವಸ್ತ್ರವೆಲ್ಲಿ? ಎಂದು ಪ್ರಶ್ನಿಸಿತು. ಓ ಮುಖ್ಯಪ್ರಾಣವೇ! ಈ ಭೂಲೋಕದಲ್ಲಿರುವ ಸಮಸ್ತ ಪ್ರಾಣಿಗಳ ಅನ್ನವೇ ನಿನಗೆ ಅನ್ನ. ಉದಕವೇ ನಿನಗೆ ವಸ್ತ್ರ ಎಂದು ಎಲ್ಲ ಇಂದ್ರಿಯಗಳು ನುಡಿದವು. ಹೀಗೆ ಪ್ರಾಣದ ಅನ್ನವನ್ನು ಕುರಿತು ತಿಳಿದುಕೊಂಡವನಿಗೆ ಅಭಕ್ಷ್ಯವಾದ ಅನ್ನವು ಇಲ್ಲ. ಗ್ರಹಿಸಬಾರದ ಅನ್ನವು ಕೂಡಾ ಇಲ್ಲ. ಈ ಪ್ರಾಣಕ್ಕೆ ಉದಕವೇ ವಸ್ತ್ರವಾದುದರಿಂದ ಪಂಡಿತರಾದ ವೇದಾಧ್ಯಯನ-ವನ್ನು ಮಾಡಿದವರು ಭೋಜನ ಮಾಡುವುದಕ್ಕೆ ಮುಂಚೆಯೂ, ಭೋಜನ ಮಾಡಿದನಂತರವೂ, ಆಚಮನ ಮಾಡುತ್ತಾ, ಆ ಆಚಮನವನ್ನು (ಪ್ರಾಣಕ್ಕೆ) ವಸ್ತ್ರವೆಂದು ಭಾವಿಸುತ್ತಾರೆ.

## ಅಷ್ಟಮಾಧ್ಯಾಯ - ದ್ವಿತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಶ್ವೇತಕೇತುರ್ಹ ವಾ ಆರುಣೇಯಃ ಪಂಚಾಲಾನಾಂ ಪರಿಷದಮಾಜಗಾಮ ಸ ಆಜಗಾಮ ಜೈವಲಿಂ ಪ್ರವಾಹಣಂ ಪರಿಚಾರಯಮಾಣಂ ತಮುದೀಕ್ಷ್ಯಾಭ್ಯುವಾದ ಕುಮಾರಾ೩ ಇತಿ ಸ ಭೋ೩ ಇತಿ ಪ್ರತಿಶುಶ್ರಾವಾನುಶಿಷ್ಟೋಽನ್ವಸಿ ಪಿತ್ರೇತ್ಯೋಮಿತಿ ಹೋವಾಚ (1)**

ತಾ : ಆರುಣಿ ಮಗ ಶ್ವೇತಕೇತುವು ಕೀರ್ತಿಕಾಮಮನೆಯಿಂದ ತಂದೆಯಾದ ಆರುಣಿಯಿಂದ ಆಜ್ಞಾಪಿಸಲ್ಪಟ್ಟವನಾಗಿ ಪಾಂಚಾಲದೇಶದಲ್ಲಿನ ಪಂಡಿತ ಸಭೆಗೆ ಬಂದನು. ರಾಜನು ನಿರ್ವಹಿಸುತ್ತಿರುವ ಸಭೆಯನ್ನು ಜಯಿಸಿಬಿಡುವೆನೆಂಬ ಅಹಂಕಾರದಿಂದ ಜೀಲನೆನ್ನುವ ಅವನ ಕುಮಾರನು ಸೇವಕನಿಂದ ಸೇವೆ ಮಾಡಿಸಿಕೊಳ್ಳುತ್ತಿದ್ದವನನ್ನು ರಾಜ ಸಮೀಪಿಸಿದ. ಆ ರಾಜನು ಬಂದಿರುವ ಆ ಶ್ವೇತಕೇತು-ವನ್ನು ನೋಡಿ, ಕುಮಾರ! ಎಂದು ಮೂರು ಸಾರಿ ಕರೆದ. ಆ ಶ್ವೇತಕೇತುವು ಮೂರು ಬಾರಿ ಓ ರಾಜಾ! ಎಂದು ನುಡಿದ. ಆ ರಾಜನು ನೀನು ನಿನ್ನ ತಂದೆಯ ಆಜ್ಞೆಯನ್ನು ಪಡೆದು ಬಂದಿರುವೆಯಾ? ಎಂದು ಕೇಳಿದ. ಆ ಶ್ವೇತಕೇತುವು ಹೌದೆಂದು ಉತ್ತರವನ್ನಿತ್ತ.

**ಮಂ.ಶ್ಲೋ॥ ವೇತ್ಥ ಯಥೇಮಾಃ ಪ್ರಜಾಃ ಪ್ರಯತ್ಯೋ ವಿಪ್ರತಿಪದ್ಯನ್ತಾ೩ ಇತಿ, ನೇತಿ ಹೋವಾಚ ವೇತ್ಥೋ ಯಥೇಮಂ ಲೋಕಂ ಪುನರಾಪದ್ಯನ್ತಾ೩ ಇತಿ, ನೇತಿ ಹೋವಾಚ ವೇತ್ಥೋ ಯಥಾಽಸೌ ಲೋಕ ಏವಂ ಬಹುಭಿಃ ಪುನಃಪುನಃ ಪ್ರಯದ್ಭಿರ್ನಸಮ್ಪೂರ್ಯತಾ೩ ಇತಿ ನೇತಿ ಹೋವಾಚ ವೇತ್ಥೋ ಯತಿಥ್ಯಾಮಾಹುತ್ಯಾಗ್ಂ ಹುತಾಯಾಮಾಪಃ ಪುರುಷವಾಚೋ ಭೂತ್ವಾ ಸಮುತ್ಥಾಯ ವದನ್ತೀ೩ ಇತಿ, ನೇತಿ ಹೈವೋವಾಚ ವೇತ್ಥೋ ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ ಯತ್ಕೃತ್ವಾ ದೇವಯಾನಂ ವಾ ಪನ್ಥಾನಂ ಪ್ರತಿಪದ್ಯನ್ತೇ ಪಿತೃಯಾಣಂ ವಾಪಿ ಹಿ ನ ಋಷೇರ್ವಚಃ ಶ್ರುತಂ। ದ್ವೇ ಸೃತೀ ಅಶೃಣವಂ ಪಿತೄಣಾಮಹಂ**

**ದೇವಾನಾಮುತ ಮರ್ತ್ಯಾನಾಂ। ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದನ್ತರಾ ಪಿತರಂ ಮಾತರಂ ಚೇತಿ। ನಾಹಮತ ಏಕಂ ಚ ನ ವೇದೇತಿ ಹೋವಾಚ (2)**

ತಾ : ಪ್ರವಾಹಣರಾಜನು ಶ್ವೇತಕೇತುವನ್ನು ಐದು ಪ್ರಶ್ನೆಗಳನ್ನು ಕೇಳಿದ. ಪ್ರವಹಣ ರಾಜ: ಈ ಜನರೆಲ್ಲರೂ ಮರಣವನ್ನು ಹೊಂದಿದ ಮೇಲೆ ಯಾವ ಮಾರ್ಗದಲ್ಲಿ ಹೋಗುತ್ತಿದ್ದಾರೆ? ಶ್ವೇತಕೇತು – ನನಗೆ ತಿಳಿಯದು. ಪ್ರವಹಣ ಜನರು ಈ ಲೋಕವನ್ನು ಮತ್ತೆ ಯಾವ ಪ್ರಕಾರವಾಗಿ (ತಿರುಗಿ) ಸೇರುತ್ತಿದ್ದಾರೋ, ನಿನಗೆ ಗೊತ್ತಿದೆಯೆ? ಶ್ವೇತಕೇತು: ನನಗೆ ಗೊತ್ತಿಲ್ಲ. ಪ್ರವಹಣ: ಈ ಪ್ರಕಾರವಾಗಿ ಮತ್ತೆ ಮತ್ತೆ ಮರಣವನ್ನು ಹೊಂದುತ್ತಿರುವ ಅನೇಕ ಜನರಿಂದ (ಜನಸಂಖ್ಯೆಯಿಂದ) ಸ್ವರ್ಗಲೋಕವು ಯಾಕೆ ತುಂಬಿಹೋಗುತ್ತಿಲ್ಲ? ನಾನು ತಿಳಿದುಕೊಂಡಿಲ್ಲ. ಪ್ರವಹಣ: ಎಷ್ಟು ಆಹುತಿಗಳನ್ನು ಹೋಮದಲ್ಲಿ ಮಾಡುವಂತಾದರೆ ಉದಕಗಳು ಪುರುಷವಾಕ್ಕುಗಳಾಗಿ ಮಾರ್ಪಟ್ಟು ಹುಟ್ಟಿ ಧ್ವನಿ ಮಾಡುತ್ತದೆಯೋ ನಿನಗೆ ಗೊತ್ತೆ? ಶ್ವೇತಕೇತು : ನಾನು ತಿಳಿದುಕೊಂಡಿಲ್ಲ. ಪ್ರವಹಣ: ಮನುಷ್ಯರನ್ನು ಪಿತೃಲೋಕ, ದೇವಲೋಕಗಳಿಗೆ ಹೊಂದಿಸುವಂತಹುದಕ್ಕೆ ಇರುವ ಪ್ರತಿಪತ್ತ ಕರ್ಮವು ಯಾವುದು? ಶ್ವೇತಕೇತು: ಓ ರಾಜನೇ! ನಾನು ಇದನ್ನು ತಿಳಿದುಕೊಂಡಿಲ್ಲ. ಪ್ರವಹಣ: ಓ ಶ್ವೇತಕೇತೂ, ಮಂತ್ರದಲ್ಲಿ ಎರಡು ಮಾರ್ಗಗಳಿವೆಯಾದರೂ ಅದರಲ್ಲಿ ಒಂದಾದ ದಕ್ಷಿಣಾಯನ ಮಾರ್ಗವು ಪಿತೃಲೋಕವನ್ನು ಪಡೆಯುವುದಕ್ಕಾಗಿಯೂ, ಎರಡನೆಯದಾದ ಉತ್ತರಾಯಣ ಮಾರ್ಗವು ದೇವಲೋಕವನ್ನು ಪಡೆಯುವುದಕ್ಕಾಗಿಯೂ, ಮನುಷ್ಯರು ಆ ಎರಡು ಮಾರ್ಗಗಳಿಂದಲೇ ಎಲ್ಲ ಲೋಕಗಳನ್ನು ಪಡೆಯುವರೆಂದೂ, ಆ ಎರಡು ಮಾರ್ಗಗಳು ಮಂತ್ರದಲ್ಲಿ ತಂದೆತಾಯಿ(ಗಳನ್ನು) ಗಳೆಂದು ಹೇಳುವ ಭೂಮಿ, ಅಂತರಿಕ್ಷ (ಭೂಮ್ಯಾಂತರಿಕ್ಷ) ಗಳ ಮಧ್ಯೆ ಇರುವುದೆಂದು, ನಾನು ಕೇಳಿದ್ದೇನೆ. ನೀನು ಅವುಗಳನ್ನು ತಿಳಿದುಕೊಂಡಿದ್ದೀಯಾ? ಶ್ವೇತಕೇತು. ಓ ರಾಜಾ, ನೀನು ಕೇಳಿದ ಈ ಪ್ರಶ್ನೆಗಳ ಸರಮಾಲೆಯ(ಸಮೂಹದ) ಒಂದು ಪ್ರಶ್ನೆಗೂ ಕೂಡಾ ನಾನು ಉತ್ತರವನ್ನು ಕೊಡಲಾರೆ. ಇವು ಯಾವುವೂ ನನಗೆ ಗೊತ್ತಿಲ್ಲ.

**ಮಂ.ಶ್ಲೋ॥ ಅಥೈನಂ ವಸತ್ಯೋಪಮನ್ತ್ರಯಾಞ್ಚಕ್ರೇನಾದೃತ್ಯ ವಸತಿಂ ಕುಮಾರಃ ಪ್ರದುದ್ರಾವ ಸ ಆಜಗಾಮ ಪಿತರಂ ತಗ್ಂ ಹೋವಾಚೇತಿ ವಾವ ಕಿಲ ನೋ ಭವಾನ್ ಪುರಾನುಶಿಷ್ಟಾ ಸಹೋಚದಿತಿ ಕಥಗ್ಂ ಸುಮೇಧ ಇತಿ ಪಞ್ಚಮಾ ಪ್ರಶ್ನಾನ್ರಾಜನ್ಯಬನ್ಧುರಪ್ರಾಕ್ಷೀತ್ತತೋ ನೈಕಞ್ಚನ ವೇದೇತಿ ಕತಮೇತ ಇತಿ ಮ ಇತಿ ಹ ಪ್ರತೀಕಾನ್ಯುದಾಜಹಾರ (3)**

ತಾ : ಆಮೇಲೆ ಆ ಪ್ರವಹಣ ಮಹಾರಾಜನು ವಿನಯ ವಿಧೇಯತೆಗಳಿಂದ ಶ್ವೇತಕೇತುವನ್ನು ಆಸನ ಅರ್ಘಪಾದಾದಿಗಳನ್ನು ಸ್ವೀಕರಿಸಲು ಆಹ್ವಾನಿಸಿದ. ಆಗ ಆ ಶ್ವೇತಕೇತುವು ಆ ಆಸನಾದಿಗಳನ್ನು ತಿರಸ್ಕರಿಸಿ ಅಲ್ಲಿಂದ ಹೋಗಿ ತಂದೆಯ ಬಳಿಗೆ ಬಂದು "ಓ ತಂದೆಯೇ! ಸಮಸ್ತ ವಿದ್ಯೆಗಳಿಂದಲೂ ಶಿಕ್ಷಿತರಾದೆವೆಂದು ನಮ್ಮನ್ನು ಕುರಿತು ನೀವು ಹೇಳಿದಿರಲ್ಲವೆ? ಆ ರಾಜನಾದವನು ನನ್ನನ್ನು ಐದು ಪ್ರಶ್ನೆಗಳನ್ನು ಕೇಳಿದ. ಅದರಲ್ಲಿ ಒಂದು ಪ್ರಶ್ನೆಗೂ ನಾನು ಉತ್ತರ ಕೊಡಲಾರದೆ ಹೋದೆ." ಎಂದಾಗ ತಂದೆಯು "ಒಳ್ಳೆಯ ಬುದ್ಧಿಯುಳ್ಳ ಓ ಶ್ವೇತಕೇತೂ! ನಿನಗೆ ಯಾಕಿಷ್ಟು ದುಃಖವುಂಟಾಯಿತು? ಆ ರಾಜನು ಕೇಳಿದ ಪ್ರಶ್ನೆಗಳು ಯಾವುವು ಎಂದು ನನಗೆ ಹೇಳು." ಎಂದಾಗ ಶ್ವೇತಕೇತುವು ಆಗ ಆ

ಪ್ರಶ್ನೆಗಳು ಹೀಗಿವೆ ಎಂದು ಸಂಕ್ಷಿಪ್ತವಾಗಿ ತಂದೆ(ಯನ್ನು)ಗೆ ವಿವರಿಸಿದ. ರಾಜನ್ಯ ಬಂಧು ಎಂದು ಹೇಳುವುದರಿಂದ ಅನಾದರಭಾವ, ಸೂಚನೆ.)

**ಮಂ.ಶ್ಲೋ॥ ಸ ಹೋವಾಚ ತಥಾ ನ ಸ್ತ್ವಂ ತಾತ ಜಾನೀಥಾಃ ಯಥಾ ಯದಹಂ ಕಿಂಚನ ವೇದ ಸರ್ವಮಹಂ ತತ್ತುಭ್ಯ ಮವೋಚಂ ಪ್ರೈಹಿ ತು ತತ್ರ ಪ್ರತೀತ್ಯ ಬ್ರಹ್ಮಚರ್ಯಂ ವತ್ಸ್ಯಾವ ಇತಿ ಭವಾನೇವ ಗಚ್ಛತ್ವಿತಿ ಸ ಆಜಗಾಮ ಗೌತಮೋ ಯತ್ರ ಪ್ರವಾಹಣಸ್ಯ ಜೈಬಲೇರಾಸ ತಸ್ಮಾ ಆಸನಮಾಹೃತ್ಯೋದಕ ಮಾಹಾರಯಾಞ್ಚಕಾರಾಥ ಹಾಸ್ಮಾ ಅರ್ಘ್ಯಂ ಚಕಾರ ತಗ್ಂ ಹೋವಾಚ ವರಂ ಭಗವತೇ ಗೌತಮಾಯ ದದ್ಮ ಇತಿ (4)**

ತಾ : ಆಮೇಲೆ ಆರುಣಿಯು, ಓ ಶ್ವೇತಕೇತೂ! ನಿನಗಿಂತ ಪ್ರಿಯತಮನಾದವನು ನನಗೆ ಇನ್ನ್ಯಾರೂ ಇಲ್ಲವಾದುದರಿಂದ ನನಗೆ ತಿಳಿದಿರುವ ವಿಜ್ಞಾನವನ್ನೆಲ್ಲವನ್ನೂ ನಿನಗೆ ಬೋಧಿಸಿದೆ. ಎಲೈ ಮಗನೇ! ಆ ರಾಜನು ಕೇಳಿದ ಪ್ರಶ್ನೆಗಳು ನನಗೆ ಕೂಡಾ ಗೊತ್ತಿಲ್ಲ. ನಾವಿಬ್ಬರೂ ಆ ರಾಜನ ಸನ್ನಿಧಿಗೆ ಹೋಗಿ ವಿದ್ಯಾ ನಿಮಿತ್ತವಾಗಿ ಬ್ರಹ್ಮಚರ್ಯವನ್ನು ಪರಿಪಾಲಿಸೋಣ ಬಾ ಎಂದು ತಂದೆ ಹೇಳಿದ. ಆಗ ಆ ಶ್ವೇತಕೇತುವು 'ನನಗೆ ಆ ರಾಜನ ಮುಖವನ್ನು ದರ್ಶಿಸಲು ಸಮ್ಮತಿಯಿಲ್ಲ. ನೀನೇ ಹೋಗು' ಎಂದು ನುಡಿದ. ಆಗ ಆ ಆರುಣಿ ಮುನಿ ಆ ಪ್ರವಾಹಣ ಮಹಾರಾಜನಿರುವ ರಾಜ್ಯಕ್ಕೆ ತೆರಳಿದ. ಆ ರಾಜನು ಅಲ್ಲಿಗೆ ದಯಮಾಡಿದ ಆ ಆರುಣಿ ಮುನಿಗಾಗಿ ಆಸನೋದಕಗಳನ್ನು ಭೃಕ್ಷರಿಂದ ತರಿಸಿಕೊಂಡು ಭಕ್ತಿಯಿಂದ ಪೂಜೆಮಾಡಿ "ಓ ಆರುಣಿ! ಪೂಜ್ಯನಾದ ನಿನಗಾಗಿ ಗವಾಶ್ವಾದಿಕಗಳನ್ನು ದಾನವಾಗಿ ಕೊಡುವೆನೆಂದು" ಹೇಳಿದ.

**ಮಂ.ಶ್ಲೋ॥ ಸ ಹೋವಾಚ ಪ್ರತಿಜ್ಞಾತೋ ಮ ಏಷ ವರೋ ಯಾಂತು ಕುಮಾರಸ್ಯಾನ್ತೇವಾಚಮಭಾಷಥಾಸ್ತಾಮೇವ ಬ್ರೂಹೀತಿ (5)**

ತಾ : ಓ ಪ್ರವಾಹಣ ಮಹಾರಾಜಾ! ನೀನು ನನಗೆ ವರವನ್ನೀಯುತ್ತೆಂದು ಪ್ರತಿಜ್ಞೆ ಮಾಡಿದೆ. ಆ ಪ್ರತಿಜ್ಞೆಯೊಂದಿಗೆ ದೃಢ ಮನಸ್ಸುಳ್ಳವನಾಗಿ ಶ್ವೇತಕೇತುವಿನ ಬಳಿ ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ನನಗೆ ತಿಳಿಸುವಂತಹವನಾಗು! (ಇದೇ ವರವೆಂದು ಆರುಣಿಯು (ಗೌತಮನು) ವಿನಂತಿಸಿಕೊಂಡ.

**ಮಂ.ಶ್ಲೋ॥ ಸ ಹೋವಾಚ ದೈವೇಮ ವೈ ಗೌತಮೋ ತದ್ವರೇಷು ಮಾನುಷಾಣಾಂ ಬ್ರೂಹೀತಿ (6)**

ತಾ : ಪ್ರವಾಹಣ: ಓ ಗೌತಮಾ! ನೀನು ಕೋರಿದ ವರವು ದೈವಪದದೊಳಗಿನದು. ಆದ್ದರಿಂದ ಮನುಷ್ಯರಿಗೆ ಸಂಬಂಧಿಸಿದ ವರವನ್ನು ಕೋರಿಕೋ. (ಕೇಳು.)

**ಮಂ.ಶ್ಲೋ॥ ಸ ಹೋವಾಚ ವಿಜ್ಞಾಯತೇಹಾಸ್ತಿ ಹಿರಣ್ಯಸ್ಯಾಪಾತ್ತಂ ಗೋ ಅಶ್ವಾನಾಂ ದಾಸೀನಾಂ ಪ್ರವಾರಾಣಾಂ ಪರಿಧಾನಸ್ಯ ಮಾ ನೋ ಭವಾನ್ ಬಹೋರನನ್ತಸ್ಯಾ ಪರ್ಯನ್ತಸ್ಯಾ-ಭ್ಯವದಾನ್ಯೋಽಭೂದಿತಿ ಸ ವೈ ಗೌತಮ ತೀರ್ಥೇನೇಚ್ಛಾ ಸಾ ಇತ್ಯುಪೈಮ್ಯಹಂ ಭವನ್ತ-ಮಿತಿ ವಾಚಾ ಹ ಸ್ಮ ವೈ ಪೂರ್ವ ಉಪಯನ್ತಿ ಸಹೋಪಾಯನ ಕೀರ್ತ್ಯೋವಾಸ (7)**

ತಾ : ಗೌತಮ: ನನಗೆ ಬಂಗಾರ, ಗೋವುಗಳು, ಅಶ್ವಗಳು, ದಾಸದಾಸಿಯರು, ಪರಿಚಾರಿಕೆ-

ಯರು, ಪಟ್ಟೆ ಪೀತಾಂಬರಗಳು, ಇವೆಲ್ಲದಕ್ಕೆ ಕೊರತೆಯಿಲ್ಲ. ಸಾಕಷ್ಟಿದೆ. ಅನಂತ (ಪುಣ್ಯಪ್ರಾಪ್ತಿ) ಫಲವುಳ್ಳ ಭೋಗಭಾಗ್ಯಗಳನ್ನು ಎಲ್ಲರಿಗೂ ದಾನ ಮಾಡುತ್ತಿದ್ದೀರಿ. ನನ್ನ ವಿಷಯದಲ್ಲಿ ಕೂಡಾ ನೀವು ದಾತರಾಗಬೇಕು. ನಾನು ಕೋರಿದ ವಿದ್ಯೆಗಳನ್ನು ಬೋಧಿಸುವಂತಹವನಾಗು ಎಂದ. ಪ್ರವಾಹಣನು "ಓ ಗೌತಮಾ, ನೀನು ಶಾಸ್ತ್ರವಿಧಿಗಳಿಂದ ನನ್ನಿಂದ ವಿದ್ಯೆಯನ್ನು ಕಲಿಯ-ಬಯಸುತ್ತಿದ್ದೀಯಾ? ಎಂದು ಕೇಳಿದ. ಗೌತಮನು "ನಿನ್ನ ಶಿಷ್ಯನಾಗಿ ಪ್ರಾರ್ಥಿಸುತ್ತಿದ್ದೇನೆ. ಪ್ರಾಚೀನ-ರಾದ ಬ್ರಾಹ್ಮಣರ ವಾಕ್ಕಿನಿಂದಲೇ ಅಲ್ಲವೇ ರಾಜರ ಬಳಿ ಶಿಷ್ಯತ್ವವನ್ನು ಹೊಂದಿರುವುದು. (ವಿದ್ಯೆ ಕಲಿಯುವುದಕ್ಕಾಗಿ ಶಿಷ್ಯನಾಗಿರುವೆನೆಂದು ನುಡಿದ. ಆ ರಾಜನ ಹತ್ತಿರ ಬಾಯಿ ಮಾತಿಗೆ (ವಾಜ್ಞಾತ್ರವಾಗಿ) ಶಿಷ್ಯನಾಗಿ ಇರುವನು.

**ಮಂ.ಶ್ಲೋ॥ ಸ ಹೋವಾಚ ತಥಾ ನ ಸ್ತ್ವಂ ಗೌತಮ ಮಾಪರಾಧಾಸ್ತವ ಚ ಪಿತಾಮಹಾ ಯಥೇಯಂ ವಿದ್ಯೇತಃ ಪೂರ್ವಂ ಸ ಕಸ್ಮಿಗ್ಂಶ್ಚನ ಬ್ರಾಹ್ಮಣ ಉವಾಸ ತಾಂ ತ್ವಹಂ ತುಭ್ಯಂ ವಕ್ಷ್ಯಾಮಿ ಕೋ ಹಿತ್ವೈವಂ ಬ್ರುವನ್ತಮರ್ಹತಿ ಪ್ರತ್ಯಾಖ್ಯಾತುಮಿತಿ (8)**

ತಾ : ಆ ಗೌತಮನ ಬಾಧೆಯನ್ನು ಗ್ರಹಿಸಿದ ರಾಜಾ ಪ್ರವಾಹಣನು ಹೀಗೆ ಹೇಳಿದ. ಓ ಗೌತಮಾ, ನಿಮ್ಮ ಪಿತಾಮಹರು ನಮ್ಮ ಪಿತಾಮಹರಲ್ಲಿ ಅಪರಾಧವನ್ನು ಗ್ರಹಿಸಿದಿರುವಂತೆ ನೀನು ಕೂಡಾ ನನ್ನಲ್ಲಿ ಯಾವ ಅಪರಾಧವನ್ನೂ ಗ್ರಹಿಸದಿರು. 'ಪಂಚಾಗ್ನಿ ವಿದ್ಯೆಯನ್ನು ಇದಕ್ಕೆ ಮುಂಚೆ ಯಾವ ಬ್ರಾಹ್ಮಣನಿಗೂ ಬೋಧಿಸಿಲ್ಲ. ಈ ವಿದ್ಯೆ ಕ್ಷತ್ರಿಯ ಪರಂಪರೆಯಾಗಿ ಬಂದಿರುವಂತಹುದು. (ಬಂದಿದೆ.) ಆದರೂ ಶಿಷ್ಯನಾಗಿರುವೆನೆಂದು ನೀನು ಪ್ರತಿಜ್ಞೆ ಮಾಡಿರುವೆ. ಈ ರೀತಿಯಾಗಿ ಪ್ರಾರ್ಥಿಸುವವರನ್ನು ಬಿಟ್ಟುಬಿಡಲು, ತಿರಸ್ಕರಿಸಲು ಮನಸ್ಸು ಒಪ್ಪುತ್ತಿಲ್ಲ. ನಾನು ನಿನಗೆ ಆ ಪಂಚಾಗ್ನಿ ವಿದ್ಯೆಯನ್ನು ಪೂರ್ತಿಯಾಗಿ ಬೋಧಿಸುವೆ' ಎಂದು ಹೇಳಿದ.

**ಮಂ.ಶ್ಲೋ॥ ಅಸೌ ವೈ ಲೋಕೋಽಗ್ನಿರ್ಗೌತಮ ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽ-ಹರರ್ಚಿರ್ದಿಶೋಽಙ್ಗಾರಾ ಅವಾನ್ತರದಿಶೋ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಶ್ರದ್ಧಾಂ ಜುಹ್ವತಿ ತಸ್ಯಾ ಆಹುತ್ಯೈ ಸೋಮೋ ರಾಜಾ ಸಮ್ಭವತಿ (9)**

ತಾ : ಓ ಗೌತಮಾ, ಈ ದ್ಯುಲೋಕವೇ ಅಗ್ನಿ. ಆ ಅಗ್ನಿಗೆ ಆದಿತ್ಯನೇ ಇಂಧನ. (ಸೌದೆ) ಕಿರಣಗಳೇ ಧೂಮ. ಹಗಲೇ ಜ್ವಾಲೆ. ದಿಕ್ಕುಗಳೇ ಕೆಂಡ, ಮೂಲೆಯ ದಿಕ್ಕುಗಳೇ ಮಿಂಚುಹುಳುಗಳು. ಅಂತಹ ದ್ಯುಲೋಕಾಗ್ನಿಯಲ್ಲಿ ದೇವತೆಗಳು ಶ್ರದ್ಧೆಯೆನ್ನುವ ಉದಕವನ್ನು ಹೋಮ ಮಾಡುತ್ತಿದ್ದಾರೆ. ಆ ಆಹುತಿಯಿಂದ ರಾಜನಾದ ಚಂದ್ರನು ಸಂಭವಿಸುತ್ತಿದ್ದಾನೆ.

**ಮಂ.ಶ್ಲೋ॥ ಪರ್ಜನ್ಯೋ ವಾ ಅಗ್ನಿರ್ಗೌತಮ ತಸ್ಯ ಸಂವತ್ಸರ ಏಷ ಸಮಿದಭ್ರಾಣಿ ಧೂಮೋ ವಿದ್ಯುದರ್ಚಿರಶನಿ -ರಙ್ಗಾರಾ ಹ್ರಾದುನಯೋ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಸ್ಸೋಮಗ್ಂ ರಾಜಾನಂ ಜುಹ್ವತಿ ತಸ್ಯಾ ಆಹುತ್ಯೈ ವೃಷ್ಟಿಸ್ಸಮ್ಭವತಿ (10)**

ತಾ : ಗೌತಮಾ! ಪರ್ಜನ್ಯನೇ ಅಗ್ನಿ. ಸಂವತ್ಸರವೇ ಆ ಅಗ್ನಿಗೆ ಇಂಧನ. ಮೇಘಗಳೇ ಹೊಗೆ, ಮಿಂಚೇ ಜ್ವಾಲೆ, ಸಿಡಿಲು, ಗುಡುಗುಗಳೇ ಕಣಗಳು (ಬೆಂಕಿಯ ಕಿಡಿಗಳು) ಮೇಘಗಳೇ

ಮಿಣುಕು ಹುಳುಗಳು, ಹೀಗೆ ಅಗ್ನಿ, ಇಂಧನ ಜ್ವಾಲೆ, ಧೂಮ, ಅಂಗಾರಗಳು ಮಿಂಚಿನ ಹುಳುಗಳೆನ್ನುವ ಪದಾರ್ಥ ಷಟ್ಕವುಳ್ಳ ಈ ಪರ್ಜನ್ಯಾಗ್ನಿಯಲ್ಲಿ ದೇವತೆಗಳು ಪಿತೃದೇವತೆಗಳಿಗೆ, ಬ್ರಾಹ್ಮಣರಿಗೆ, ರಾಜನಾದ ಚಂದ್ರನ ಹೋಮವನ್ನು ಮಾಡುತ್ತಿರುವರು. ಅಂತಹ ಆಹುತಿಯಿಂದಲೇ ಮಳೆ ಬರುತ್ತದೆ. ಈ ರೀತಿಯಾಗಿ ಪರ್ಜನ್ಯಾಗ್ನಿ, ದರ್ಶನವನ್ನು ಮಾಡಬೇಕೆಂದು ಪ್ರವಾಹಣ ರಾಜನು ಹೇಳಿದ.

**ಮಂ.ಶ್ಲೋ॥ ಅಯಂ ವೈ ಲೋಕೋಽಗ್ನಿರ್ಗೌತಮ ತಸ್ಯ ಪೃಥಿವ್ಯೇವ ಸಮಿದಗ್ನಿರ್ಧೂಮೋ ರಾತ್ರಿರರ್ಚಿಶ್ಚನ್ದ್ರಮಾ ಅಂಗಾರಾ ನಕ್ಷತ್ರಾಣಿ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವೃಷ್ಟಿಂ ಜುಹ್ವತಿ ತಸ್ಯಾ ಆಹುತ್ಯಾ ಅನ್ನಗ್ಂ ಸಮ್ಭವತಿ (11)**

ತಾ: ಗೌತಮಾ! ಸಮುದ್ರ ಪರ್ವತಾದಿಗಳೊಂದಿಗೆ ತುಂಬಿದ ಈ ಲೋಕವೇ ಅಗ್ನಿ. ಭೂಮಿಯೇ ಇಂಧನ. ಅಗ್ನಿಯೇ ಧೂಮ. ರಾತ್ರಿಯೇ ಅರ್ಚಿಸ್ಸು. ಚಂದ್ರನೇ ಬೆಂಕಿ. ನಕ್ಷತ್ರಗಳೇ (ಮಿಣುಕು ಹುಳುಗಳು) ಕಿಡಿಗಳು. ಈ ರೀತಿಯಾಗಿ ಅಗ್ನಿಂಧನ ಜ್ವಾಲೆ ಧೂಮಾಂಗಾದಿ ವಿಸ್ಫುಲಿಂಗ-ಗಳೆನ್ನುವ ಪದಾರ್ಥ ಷಟ್ಕವಿರುವ ಈ ಲೋಕಾಗ್ನಿಯಲ್ಲಿ ದೇವತೆಗಳು ಮಳೆಯನ್ನು ಹೋಮ ಮಾಡುತ್ತಿದ್ದಾರೆ. ಆ ಆಹುತಿಯಿಂದ ಅನ್ನವು ಹುಟ್ಟುತ್ತದೆ. ಹೀಗೆ ಲೋಕಾಗ್ನಿ ದರ್ಶನವನ್ನು ಮಾಡಬೇಕೆಂದು ಪ್ರವಾಹಣ ರಾಜನು ಬೋಧಿಸಿದ.

**ಮಂ.ಶ್ಲೋ॥ ಪುರುಷೋ ವಾ ಅಗ್ನಿರ್ಗೌತಮ ತಸ್ಯ ವ್ಯಾತ್ತಮೇವ ಸಮಿತ್ಪ್ರಾಣೋ ಧೂಮೋ ವಾಗರ್ಚಿಶ್ಚಕ್ಷುರಂಗಾರಾಶ್ರೋತ್ರಂ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತ್ರೈರೇತಸ್ಸಮ್ಭವತಿ (12)**

ತಾ : ಗೌತಮಾ! ಪುರುಷನೇ ಅಗ್ನಿ. ಆ ಅಗ್ನಿಗೆ ತೆರೆಬಿದ್ದ ಮುಖವೇ ಇಂಧನ, (ಸೌದೆ) ಪ್ರಾಣವೇ ಧೂಮ, ವಾಕ್ಕೇ ಜ್ವಾಲೆ, ನೇತ್ರವೇ ಅಂಗಾರಗಳು. ಶ್ರೋತ್ರವೇ ಮಿಣುಕು ಹುಳುಗಳು (ಕಿಡಿಗಳು) ಅಂತಹ ಈ ಅಗ್ನಿಯಲ್ಲಿ ದೇವತೆಗಳು ಅನ್ನವನ್ನು ಹೋಮ ಮಾಡುತ್ತಿರುವರು. ಆ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ ಎಂದು ಪ್ರವಾಹಣ ರಾಜನು ಬೋಧಿಸಿದ.

**ಮಂ.ಶ್ಲೋ॥ ಯೋಸಾವಾ ಅಗ್ನಿರ್ಗೌತಮ ತಸ್ಯಾ ಉಪಸ್ಥ ಏವ ಸಮಿಲ್ಲೋಮಾನಿ ಧೂಮೋ ಯೋನಿರರ್ಚಿರ್ಯದನ್ತಃ ಕರೋತಿ ತೇಽಙ್ಗಾರಾ ಅಭಿನನ್ದಾ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತ್ಯೈ ಪುರುಷಸ್ಸಮ್ಭವತಿ ಸ ಜೀವತಿ ಯಾವಜ್ಜೀವತ್ಯಥ ಯದಾ ಮ್ರಿಯತೇ (13)**

ತಾ : ಗೌತಮಾ! ಸ್ತ್ರೀಯೇ ಅಗ್ನಿ. ಆ ಸ್ತ್ರೀಯ ಉಪಸ್ಥೆಯೇ ಇಂಧನ. ದೇಹದ ಮೇಲಿರುವ ಕೂದಲೇ ಧೂಮ. ಯೋನಿಯೇ ಜ್ವಾಲೆ. ಅಂತಃಕರಣದಲ್ಲಿ ಮಾಡುತ್ತಿರುವ ಮೈಥುನ ವ್ಯಾಪಾರಗಳು ಬೆಂಕಿಯ ಕಿಡಿಗಳು. ಆನಂದಲೇಶಗಳೇ ಮಿಣುಕುಹುಳುಗಳು. ಅಂತಹ ಈ ಅಗ್ನಿಯಲ್ಲಿ ದೇವತೆಗಳು ರೇತಸ್ಸನ್ನು ಹೋಮ ಮಾಡುತ್ತಿದ್ದಾರೆ. ಆ ಆಹುತಿಯಿಂದ ಪುರುಷನು ಹುಟ್ಟುವನು. ಆ ಪುರುಷನು ಈ ಶರೀರದಲ್ಲಿ ಸ್ಥಿತನಾಗಿರುವವರೆಗೂ ಜೀವನ ಕರ್ಮವನ್ನು ಮಾಡುತ್ತಾ ಜೀವಿಸುತ್ತಿರುವನು. ಆನಂತರ ಪ್ರಾರಬ್ಧವು ಮುಗಿದುಹೋದಮೇಲೆ ಜೀವನಕರ್ಮವನ್ನು ಬಿಟ್ಟು ಮರಣವನ್ನು ಹೊಂದುವನು.

**ಮಂ.ಶ್ಲೋ|| ಅಥೈನಮಗ್ನಯೇ ಹರನ್ತಿ ತಸ್ಯಾಗ್ನಿರೇವಾಗ್ನಿರ್ಭವತಿ ಸಮಿತ್ಸಮಿದ್ಧೂಮೋ ಧೂಮೋಽರ್ಚಿರರ್ಚಿ-ರಂಗಾರಾ ಅಂಗಾರಾ ವಿಸ್ಫುಲಿಂಗಾ ವಿಸ್ಫುಲಿಂಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಪುರುಷಂ ಜುಹ್ವತಿ ತಸ್ಯಾ ಆಹುತ್ಯೈ ಪುರುಷೋ ಭಾಸ್ವರವರ್ಣಸ್ಸಮ್ಭವತಿ (14)**

ತಾ : ಆಮೇಲೆ ಋತ್ವಿಕರು ಮರಣವನ್ನು ಹೊಂದಿದ ಆ ಪುರುಷನಿಗೆ ಕೊನೆಯ ಆಹುತಿ (ಅಗ್ನಿ)ಗಾಗಿ ತೆಗೆದುಕೊಂಡು ಹೋಗುತ್ತಿದ್ದಾರೆ. ಆಹುತಿಯಾದ ಆ ಪುರುಷನಿಗೆ ಅಗ್ನಿಯೇ ಆಗುತ್ತದೆ. ಇಂಧನವೇ ಇಂಧನ. ಧೂಮವೇ ಧೂಮ. ಬೆಂಕಿಯೇ ಬೆಂಕಿ. ಮಿಣಕು ಹುಳಗಳೇ ಮಿಣಕು ಹುಳಗಳು (ಬೆಂಕಿಯ ಕಿಡಿಗಳು) ಅಂತಹ ಅಗ್ನಿಯಲ್ಲಿ ಪುರುಷನ ದೇವತೆಗಳು ಹೋಮವನ್ನು ಮಾಡುತ್ತಿದ್ದಾರೆ. ಆ ಆಹುತಿಗಳಿಂದ, ಅವ್ಯಾಹುತಿಯಾದ ಪುರುಷನು ಪ್ರಕಾಶಿಸುತ್ತ ದೀಪ್ತಿಯುಳ್ಳವ-ನಾಗುತ್ತಿದ್ದಾನೆ. (ನಿಷೇಕವೇ ಮೊದಲಾದ ಅಂತ್ಯಾಹುತಿಯೇ ಸರ್ವಕರ್ಮಗಳಿಂದ ಸಂಸ್ಕಾರ ಹೊಂದಿದವನಾದ್ದರಿಂದ ಅಧಿಕ ತೇಜೋವಂತನಾಗುತ್ತಾನೆ.(ವನು).

**ಮಂ.ಶ್ಲೋ|| ತೇ ಯ ಏವಮೇತದ್ವಿದುಃ ಯೇ ಚಾಮೀ ಅರಣ್ಯೇ ಶ್ರದ್ಧಾಗ್ಂ ಸತ್ಯಮುಪಾಸತೇ ತೇಽರ್ಚಿರಭಿಸಮ್ಭವನ್ತಿ ಅರ್ಚಿಷೋಽಹರಹ್ನಾ ಆಪೂರ್ಯಮಾಣಪಕ್ಷಮಾಪೂರ್ಯಮಾಣ ಪಕ್ಷಾದ್ಯಾನ್ ಷಣ್ಮಾಸಾನುದಙ್ಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯ-ಮಾದಿತ್ಯಾದ್ವೈದ್ಯುತಂ ತಾನ್ವೈದ್ಯುತಾತ್ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ಗಮಯತಿ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸನ್ತಿ ತೇಷಾಂ ನ ಪುನರಾವೃತ್ತಿಃ (15)**

ತಾ : ಇದೇ ಪಂಚಾಗ್ನಿ ವಿದ್ಯೆ. (ದ್ಯುಲೋಕಾಗ್ನಿ, ಪರ್ಜನ್ಯಾಗ್ನಿ, ಲೋಕಾಗ್ನಿ ಯೋಷಾಗ್ನಿ ಈ ಪಂಚಾಗ್ನಿ ವಿದ್ಯೆಯನ್ನು ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಸಂನ್ಯಾಸಿಯಾಗಲಿ, ಅಭ್ಯಾಸ ಮಾಡಿ, ಶ್ರದ್ಧೆಯುಳ್ಳವರಾಗಿ ಅರಣ್ಯದಲ್ಲಿ ಹಿರಣ್ಯಗರ್ಭೋಪಾಸನೆ ಮಾಡುವವರು ಜ್ಯೋತಿರಭಿಮಾನ ದೇವತೆಯನ್ನು ಹೊಂದುತ್ತಿದ್ದಾರೆ. ಜ್ಯೋತಿರಭಿಮಾನ ದೇವತೆಯಿಂದ ಆಹಾರಭಿಮಾನ ದೇವತೆ-ಯನ್ನು ಆಹಾರಭಿಮಾನ ದೇವತೆಯಿಂದ ಆ ಪೂರ್ಯಮಾಣ ಪಕ್ಷದೇವತೆಯನ್ನು (ಶುಕ್ಲಪಕ್ಷ) ಹೊಂದುತ್ತಿದ್ದಾರೆ. ಸೂರ್ಯನು ತುಂಬಿದ ಶುಕ್ಲಪಕ್ಷದಿಂದ ಆಯಾ ಮಾಸಗಳ ಕಾಲ ಉತ್ತರ ದಿಕ್ಕನ್ನು ಹೊಂದುತ್ತಿರುವನು. ಮಾಸಗಳಿಂದ ದೇವಲೋಕಾಭಿಮಾನ ದೇವತೆಯನ್ನು ಆ ದೇವಲೋಕಾ-ಭಿಮಾನ ದೇವತೆಯಿಂದ ಸೂರ್ಯನನ್ನು, ಸೂರ್ಯನಿಂದ ವಿದ್ಯಾಭಿಮಾನದೇವತೆಯನ್ನು ಹೊಂದುತ್ತಿರುವನು. ಅಂತಹವರನ್ನು ಮನಸ್ಸಿನಿಂದ ಸೃಷ್ಟಿಸಲಾದ ಒಬ್ಬ ಪುರುಷ ಬಂದು ವಿದ್ಯದಭಿ-ಮಾನ ದೇವತೆಯಿಂದ (ವಿದ್ಯುಲ್ಲೋಕದಿಂದ) ಬ್ರಹ್ಮಲೋಕವನ್ನು ಹೊಂದುವನು. ಅವರು ಆ ಬ್ರಹ್ಮಲೋಕದಲ್ಲಿ ಶ್ರೇಷ್ಠರಾಗಿ ಅನೇಕ ಸಂವತ್ಸರಗಳು ವಾಸವಾಗುತ್ತಾರೆ. ಅಂತಹವರಿಗೆ ಪುನರಾ ವೃತ್ತಿಯಿಲ್ಲ.

**ಮಂ.ಶ್ಲೋ|| ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯನ್ತಿ ತೇ ಧೂಮಮಭಿಸಮ್ಭವನ್ತಿ ಧೂಮಾದ್ರಾತ್ರಿಗ್ಂ ರಾತ್ರೇರಪಕ್ಷೀಯಮಾಣ ಪಕ್ಷಮಪಕ್ಷೀಯಮಾಣ ಪಕ್ಷಾದ್ಯಾನ್ ಷಣ್ಮಾಸಾನ್ ದಕ್ಷಿಣಾಮಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾಚ್ಚನ್ದ್ರಂ**

**ತೇ ಚನ್ದ್ರಂ ಪ್ರಾಪ್ಯಾನ್ನಂ ಭವನ್ತಿ ತಾಗ್ಂಸ್ತತ್ರ ದೇವಾ ಯಥಾ ಸೋಮಗ್ಂ ರಾಜಾನಮಾ-ಪ್ಯಾಯ ಸ್ವಾ ಪಕ್ಷೀಯಸ್ವೇತ್ಯೇವಮೇನಾಗ್ಂ ಸ್ತತ್ರ ಭಕ್ಷಯನ್ತಿ ತೇಷಾಂ ಯದಾತತ್ಪರ್ಯವೈ-ತ್ಯಥೇಮಮೇವಾಕಾಶಮಭಿ ನಿಷ್ಪದ್ಯನ್ತೇ ಆಕಾಶಾದ್ವಾಯುಂ ವಾಯೋರ್ವೃಷ್ಟಿಂ ವೃಷ್ಟೇಃ ಪೃಥಿವೀಂ ತೇ ಪೃಥಿವೀಂ ಪ್ರಾಪ್ಯಾನ್ನಂ ಭವನ್ತಿ ತೇ ಪುನಃ ಪುರುಷಾಗ್ನೌ ಹೂಯನ್ತೇ ತತೋ ಯೋಷಾಽಗ್ನೌ ಜಾಯನ್ತೇ ತೇ ಲೋಕಾನ್ ಪ್ರತ್ಯುತ್ಥಾಯಿನನ್ತ ಏವಮೇವಾನು-ಪರಿವರ್ತನ್ತೇಽಥ ಯ ಏತೌ ಪನ್ಥಾನೌ ನ ವಿದುಸ್ತೇ ಕೀಟಾಃ ಪತಂಗಾ ಯದಿದಂ ದನ್ದಶೂಕಮ್ (16)**

ತಾ : ಮೇಲೆ ತಿಳಿಸಿರುವ ಉಪಾಸನೆಗಳನ್ನು ಮಾಡುವುದೇ ಅಲ್ಲದೆ ಇನ್ನೂ ಅಗ್ನಿಹೋತ್ರಾದಿ ಕರ್ಮದಿಂದಲೂ, ದಾನದಿಂದಲೂ, ತಪಸ್ಸಿನಿಂದಲೂ, ಲೋಕಗಳನ್ನು ಜಯಿಸುತ್ತಾನೆ. ಅಂತಹವನು ಧೂಮವನ್ನು (ಧೂಮದೇವತೆಯನ್ನು) ಹೊಂದುತ್ತಿದ್ದಾನೆ. ಆ ಧೂಮದೇವತೆಯಿಂದ ರಾತ್ರ್ಯಭಿಮಾನ ದೇವತೆಯನ್ನು ರಾತ್ರ್ಯಭಿಮಾನ ದೇವತೆಯನ್ನು ಕೃಷ್ಣಪಕ್ಷ ದೇವತೆಯನ್ನು ಅವರು ಹೊಂದುತ್ತಿದ್ದಾರೆ. ಕೃಷ್ಣ ಪಕ್ಷ ದೇವತೆಯಿಂದ ಆದಿತ್ಯನು ಆರು ತಿಂಗಳ ಕಾಲ ದಕ್ಷಿಣ ದಿಕ್ಕನ್ನು ಹೊಂದುತ್ತಿದ್ದಾನೆ. ಅಂತಹವರು ಆ ಮಾಸ ರೂಪದೇವತೆಗಳಿಂದ ಪಿತೃಲೋಕವನ್ನು, ಪಿತೃಲೋಕದಿಂದ ಚಂದ್ರನನ್ನು ಹೊಂದುತ್ತಿರುವರು. ಅವರು ಚಂದ್ರನನ್ನು ಹೊಂದಿ ಅನ್ನವಾಗುತ್ತಿದ್ದಾರೆ. ಆ ಚಂದ್ರಲೋಕದಲ್ಲಿ ದೇವತೆಗಳು (ಚಂದ್ರಲೋಕವನ್ನು ಹೊಂದಿ ಅನ್ನರೂಪವಾದವರನ್ನು) ಋತ್ವಿಕರು "ಅಪ್ಯಾಯಸ್ವ ಅಪಕ್ಷೀಯಸ್ವ)"ತುಂಬು ಖಾಲಿ ಮಾಡು" ಎಂದು ಹೇಳುತ್ತಾ ಸೋಮರಸವನ್ನು ಸೇವಿಸಿದಂತೆಯೇ, ಆ ಅನ್ನವನ್ನು ಭಕ್ಷಿಸುತ್ತಾರೆ. ಕರ್ಮಕ್ಷಯವಾಗುತ್ತಲೇ, ಆಕಾಶವನ್ನು ಹೊಂದಿ, ಆಕಾಶದಿಂದ ವಾಯು-ವನ್ನು, ವಾಯುವಿನಿಂದ ವರ್ಷವನ್ನು, ಮಳೆಯಿಂದ ಭೂಮಿಯನ್ನು ಸೇರುವರು. ಭೂಮಿಯನ್ನು ಸೇರಿದನಂತರ ಆ ಕರ್ಮಿಷ್ಠರು ಮತ್ತೆ ಅನ್ನವಾಗುವರು. ಆನಂತರ ಮತ್ತೆ ಪುರುಷಾಗ್ನಿ-ಯಲ್ಲಿ ಹವನವನ್ನು ಮಾಡಿ, ಈ ಲೋಕದ ಕಡೆಗೆ ಹೋಗುವಂತಹ ಸ್ಥಿತಿಯನ್ನು ಹೊಂದಿ, ಯೋಷಾಗ್ನಿಯಲ್ಲಿ ಮತ್ತೆ ಜನಿಸುತ್ತಾರೆ. ಈ ವಿಧವಾಗಿ ಪುನಃಪುನಃ ಜನನ ಮರಣ ರೂಪದಲ್ಲಿ ತಿರುಗುತ್ತಿರುತ್ತಾರೆ. ಮೇಲೆ ಹೇಳಿದ ಎರಡು ಮಾರ್ಗಗಳನ್ನು (ಜ್ಞಾನ, ಕರ್ಮ) ಮಾರ್ಗಗಳನ್ನು ತಿಳಿಯದವರು ಕೀಟ(ಕ)ಗಳಾಗಿ, ಹುಳುಗಳಾಗಿ, ಕಡಿಯುವ ಹುಳುಗಳಾಗಿ, ಸೊಳ್ಳೆಗಳಾಗಿ ಹುಟ್ಟುತ್ತಾರೆ. (ಈ ವಿಧವಾಗಿ ಪುನರಾ-ವೃತ್ತಿಯನ್ನು ಕುರಿತಾದ ಎರಡನೆಯ ಪ್ರಶ್ನೆಗೆ ಉತ್ತರವಾಗಿ ಉತ್ತರಾಯಣ ದಕ್ಷಿಣಾಯನ ಮಾರ್ಗ-ಗಳನ್ನು ವಿವರಿಸಲಾಗಿದೆ.)

## ಅಷ್ಟಮಾಧ್ಯಾಯ – ತೃತೀಯ ಬ್ರಾಹ್ಮಣಂ

**ಮಂ.ಶ್ಲೋ॥ ಸ ಯಃ ಕಾಮಯೇತ ಮಹತ್ ಪ್ರಾಪ್ನುಯಾಮಿತ್ಯುದಗಯನ ಆಪೂರ್ಯಮಾಣ ಪಕ್ಷಸ್ಯ ಪುಣ್ಯಾಹೇ ದ್ವಾದಶಾಹಮುಪಸದ್ವ್ರತೀಭೂತ್ವಾ ಔದುಮ್ಬರೇ ಕಗ್ಂಸೇ ಚಮಸೇ ವಾ ಸರ್ವೌಷಧಂ ಫಲಾನೀತಿ ಸಂಭೃತ್ಯ ಪರಿಸಮೂಹ್ಯ ಪರಿಲಿಪ್ಯಾಗ್ನಿಮುಪಸಮಾಧಾಯ ಪರಿಸ್ತೀರ್ಯಾವೃತಾಜ್ಯಗ್ಂ ಸಗ್ಂಸ್ಕೃತ್ಯ ಪುಗ್ಂಸಾ ನಕ್ಷತ್ರೇಣ ಮನ್ಥಗ್ಂ ಸನ್ನೀಯ**

**ಜುಹೋತಿ। ಯಾವನ್ತೋ ದೇವಾಸ್ತ್ವಯಿ ಜಾತವೇದಸ್ತಿರ್ಯಞ್ಚೋ ಘ್ನನ್ತಿ ಪುರುಷಸ್ಯ ಕಾಮಾನ್। ತೇಭ್ಯೋಽಹಂ ಭಾಗಧೇಯಂ ಜುಹೋಮಿ ತೇಮಾ ತೃಪ್ತಾಸ್ಸರ್ವೈಃ ಕಾಮೈ-ಸ್ತರ್ಪಯನ್ತು ಸ್ವಾಹಾ। ಯಾ ತಿರಶ್ಚೀ ನಿಪದ್ಯ ತೇಽಹಂ ವಿಧರಣೀ ಇತಿ। ತಾಂ ತ್ವಾ ಘೃತಸ್ಯ ಧಾರಯಾ ಯಜೇ ಸಗ್ಂರಾಧನೀ ಮಹಗ್ಂ ಸ್ವಾಹಾ (1)**

ತಾ : (ಮಂಥ ಎನ್ನುವ ಕರ್ಮವನ್ನು ಕುರಿತು ಹೇಳುತ್ತಿದ್ದಾರೆ.) ಕರ್ಮಾಧಿಕಾರಿಯಾದ ಗೃಹಸ್ಥನು ಧನವನ್ನು ಗಳಿಸಲು ಇಷ್ಟಪಟ್ಟಲ್ಲಿ ಈ ಕೆಳಗೆ ಹೇಳಿರುವಂತಹ ಪಯೋವ್ರತವನ್ನು ಆಚರಿಸಬೇಕು. ಉತ್ತರಾಯಣದಿಂದ ತುಂಬು ಪಕ್ಷವಾದ ಶುಕ್ಲಪಕ್ಷದ ಪುಣ್ಯ ದಿನದಲ್ಲಿ ಪ್ರಾರಂಭಿಸಿ ಹನ್ನೆರಡು ದಿನಗಳು ಉಪಸದಸ್ಸುಗಳೆಂಬ ನಿಯಮದಿಂದ. (ಪಯೋ ಭಕ್ಷಣ ರೂಪವಾದ ನಿಯಮವನ್ನು ಹೊಂದಿದವನು) ಇರಬೇಕು. ಔದುಂಬರ ಕಟ್ಟಿಗೆಯಿಂದ ನಿರ್ಮಿಸಿದುದಾಗಲೀ, ಕಂಚಿನಿಂದ ನಿರ್ಮಿಸಲಾದಂತಹುದಾಗಲೀ, ಸೋಮಪಾನ ಪಾತ್ರೆಯಲ್ಲಿ ಸಮಸ್ತ ಓಷಧಗಳನ್ನು ಹಾಕಿ, ಮೊಸರು, ಜೇನುತುಪ್ಪ, ಬೆಣ್ಣೆಗಳಲ್ಲಿ ನೆನೆಯಿಸಿ ಒಂದು ಕಡ್ಡಿಯಿಂದ ಚೆನ್ನಾಗಿ ಕಲಸಿ ಒಂದು ಮುದ್ದೆಯಾಗುವಂತೆ ತಯಾರು ಮಾಡಬೇಕು. ಆ ರೀತಿಯಾಗಿ ತಯಾರು ಮಾಡಿದ ಮುದ್ದೆಯನ್ನು ಮಂಥವೆನ್ನುತ್ತಾರೆ. ಓಷಧಗಳೆಂದರೆ ವ್ರೀಹಿ, ಯವೆ, ಗೋಧುಮಾದಿಗಳು ಅವೆಲ್ಲವನ್ನೂ ಸಮೀಪ-ದಲ್ಲಿಟ್ಟುಕೊಂಡು ದರ್ಭೆಯನ್ನು ಹಾಸಿ, ಸ್ಥಾಲೀಪಾಕಾದಿಗಳೊಂದಿಗೆ (ತುಪ್ಪವನ್ನು ಸೇರಿಸಿ) ಪುರುಷ ನಕ್ಷತ್ರದಿಂದ ಕೂಡಿದ ಶುಭದಿನದಂದು, ಸರ್ವಔಷಧಿ ಫಲ ವಿಶಿಷ್ಟವಾದುದಾಗಿ, ಅಗ್ನಿಯು ಸಮೀಪದಲ್ಲಿ ಕುಳಿತು ತುಪ್ಪದಿಂದ ಹೋಮವನ್ನು ಮಾಡುತ್ತಿದ್ದಾನೆ. "ಓ ಅಗ್ನಿದೇವಾ! ದೇವತೆಗಳೆಲ್ಲರೂ, ನಿನ್ನಲ್ಲಿ ಅಧೀನರಾದಂತಹವರಾಗಿ ವಕ್ರವಾದ ಮತಗಳುಳ್ಳವರಾಗಿ ಪುರುಷನ ಕೋರಿಕೆಗಳನ್ನು ಪಕ್ಕಕ್ಕೆ ಸರಿಸುತ್ತಿದ್ದಾರೆ. (ಹೊಡೆದಟ್ಟುತ್ತಾರೆ.) ಆ ದೇವತೆಗಳಿಗಾಗಿ ನಾನು ಆಜ್ಯಭಾಗವನ್ನು ಹೋಮವನ್ನು ಮಾಡುತ್ತಿದ್ದೇನೆ. ಆ ದೇವತೆಗಳು ತೃಪ್ತಿಯನ್ನು ಹೊಂದಿದವರಾಗಿ ನನ್ನನ್ನು ಸಮಸ್ತಕಾಮಗಳಂದ ಸಂತೋಷಗೊಳಿಸುವಂತಾಗಲಿ. ಓ ಅಗ್ನಿದೇವಾ! ಯಾವ ದೇವತೆ, ಕುಟಿಲ ಭಾವನೆಯಿಂದ ನಾವು ಸರ್ವವನ್ನು ಧರಿಸುತ್ತಿರುವೆನೆಂದು ನಿನ್ನನ್ನು ಆಶ್ರಯಿಸುತ್ತಿರು(ತ್ತಿದೆ)ವುದೋ, ಅಂತಹ ಸರ್ವಸಾಧನ-ವಾದ ಪೂಜಿಸಲರ್ಹವಾದ ದೇವತೆಯನ್ನು ಕುರಿತು ನಾನು ಆಜ್ಯಧಾರೆಯಿಂದ ಯಾಗವನ್ನು ಮಾಡುತ್ತಿದ್ದೇನೆ. (ಆರಾಧಿಸುತ್ತಿರುವೆ) (ಸ್ವಾಹಾ ಇದು ಹೋಮಮಂತ್ರವು ತಿಳಿಯಪಡಿಸುತ್ತದೆ.)

ಮಂ.ಶ್ಲೋ॥ **ಜ್ಯೇಷ್ಠಾಯ ಸ್ವಾಹಾ ಶ್ರೇಷ್ಠಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಪ್ರಾಣಾಯ ಸ್ವಾಹಾ ವಸಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ವಾಚೇ ಸ್ವಾಹಾ ಪ್ರತಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಚಕ್ಷುಷೇ ಸ್ವಾಹಾ ಸಮ್ಪದೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಶ್ರೋತ್ರಾಯ ಸ್ವಾಹಾ ಆಯತನಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನ-ಯತಿ ಮನಸೇ ಸ್ವಾಹಾ ಪ್ರಜಾತ್ಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನ-ಯತಿ ರೇತಸೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ (2)**

ತಾ : ಜ್ಯೇಷ್ಠಾಯ ಸ್ವಾಹಾ ಶ್ರೇಷ್ಠಾಯ ಸ್ವಾಹಾ! ಎನ್ನುವ ಮಂತ್ರಗಳೊಂದಿಗೆ ಅವಸಥ್ಯಾಗ್ನಿ-ಯಲ್ಲಿ

ಹೋಮ ಮಾಡಿ, ಸ್ರುವದಲ್ಲಿ ಉಳಿದಿರುವ ಆಜ್ಯವನ್ನು ಪಿಷ್ಟ ಪಿಂಡರೂಪದಲ್ಲಿರುವ ಮಂಥದಲ್ಲಿ ಹಾಸಬೇಕು. ಚೆನ್ನಾಗಿ ಕಲಸಬೇಕು. (ಮಂಥ ಪಾತ್ರೆಯಂತೆಯೇ ಸ್ರುಕ್‌ಸ್ರುಗಳು ಕೂಡಾ ಔದುಂಬರ ಕಾಷ್ಠದಿಂದ ಮಾಡಿಸಬೇಕು.) ಪ್ರಾಣಾಯ ಸ್ವಾಹಾ, ವಸಿಷ್ಠಾಯ ಸ್ವಾಹಾ! ಎನ್ನುವ ಮಂತ್ರಗಳೊಂದಿಗೆ ಹೋಮ ಮಾಡಿ ಸ್ರುವದಲ್ಲಿ ಉಳಿದಿರುವ ಆಜ್ಯವನ್ನು ಮಂಥದೊಳಕ್ಕೆ ಚೆನ್ನಾಗಿ ಸುರಿಯಬೇಕು. ಪ್ರತಿಷ್ಠೆ ಗುಣವುಳ್ಳ ನೇತ್ರಕ್ಕಾಗಿ ಸ್ವಾಹಾ ಎಂದು ಅಗ್ನಿಯಲ್ಲಿ ಹೋಮ ಮಾಡಿ ನೇತ್ರಕ್ಕಾಗಿ ಹೋಮ ಎಂದು ಮಂಥ ಪಾತ್ರೆಯಲ್ಲಿ ಸ್ರುವವನ್ನು ಪಾತ್ರೆಯಲ್ಲಿರುವ ಆಜ್ಯವನ್ನು ಹಾಕುತ್ತಿದ್ದಾನೆ. ಸಂಪದ್ಗುಣ ವಿಶಿಷ್ಟವಾದ ಶ್ರೋತ್ರಕ್ಕಾಗಿ ಹೋಮವೆನ್ನುತ್ತಾ ಶ್ರೋತ್ರಾಯ ಸ್ವಾಹಾ ಎಂದು ಮಥನ ಪಾತ್ರೆಯಲ್ಲಿನ ಸ್ರುವವೆನ್ನುವ ಪಾತ್ರೆಯನ್ನು ಆಶ್ರಯಿಸಿರುವ ಆಜ್ಯವನ್ನು ಸೇರಿಸುತ್ತಿದ್ದಾನೆ. ಆಯತನತ್ವಗುಣವುಳ್ಳ ಮನಸ್ಸಿಗಾಗಿ ಹೋಮವೆನ್ನುತ್ತಾ ಮನಸೇ ಸ್ವಾಹಾ ಎಂದು ಮಂಥ ಪಾತ್ರೆಯಲ್ಲಿ ಸ್ರುವದಲ್ಲಿ ಪಾತ್ರೆಯಲ್ಲಿರುವ ಆಜ್ಯವನ್ನು ಹಾಕುತ್ತಿದ್ದಾನೆ. ಸಂತಾನಾದಿ ಗುಣ ವಿಶಿಷ್ಟವಾದ ರೇತಸ್ಸಿಗಾಗಿ ಹೋಮವೆನ್ನುತ್ತಾ ಮಂಥ ಪಾತ್ರೆಯಲ್ಲಿನ ಸ್ರುವವನ್ನು ಪಾತ್ರೆಯಲ್ಲಿ ಆಜ್ಯವನ್ನು ಹಾಕುತ್ತಿದ್ದಾನೆ. ರೇತಸ್ಸಿಗಾಗಿ ಹೋಮವೆನ್ನುತ್ತಾ (ಮಥನ) ಮಂಥ ಪಾತ್ರೆಯಲ್ಲಿನ ಸ್ರುವದಲ್ಲಿ ಪಾತ್ರೆಯನ್ನು ಆಶ್ರಯಿಸಿರುವ ಆಜ್ಯವನ್ನು ಹಾಕುತ್ತಿದ್ದಾನೆ.

**ಮಂ.ಶ್ಲೋ॥ ಅಗ್ನಯೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಸೋಮಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಭೂಸ್ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಭುವಸ್ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನ -ಯತಿ ಸುವಸ್ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಭೂರ್ಭುವಸ್ಸುವ ಸ್ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮನವಯತಿ ಬ್ರಹ್ಮಣೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಕ್ಷತ್ರಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಭೂತಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಭವಿಷ್ಯತೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ವಿಶ್ವಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಸರ್ವಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ ಪ್ರಜಾಪತಯೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂ ಸ್ರವಮವನಯತಿ (3)**

ತಾ : ಐಶ್ವರ್ಯವನ್ನು ಪ್ರಸಾದಿಸುವ ಪಯಃಪಾನ ವ್ರತವನ್ನು ಮಾಡುವವನು ಈ ಪ್ರಕಾರವಾಗಿ ಅಗ್ನಿಯಿಂದ ಮೊದಲುಗೊಂಡು ಪ್ರಜಾಪತಿಯವರೆಗೂ ಇರುವ ಸಕಲ ದೇವತೆಗಳಿಗಾಗಿ ಆಜ್ಯಾಹುತಿಯನ್ನು ಮಾಡುತ್ತಿರುವರು. ಮೇಲೆ ಹೇಳಿದ ಮಂತ್ರಗಳನ್ನು ವಿಧಿವಿಧಾನಗಳಿಂದ ಉಚ್ಚರಿಸಬೇಕು.

**ಮಂ.ಶ್ಲೋ॥ ಅಥೈನಮಭಿಮೃಶತಿ ಭ್ರಮದಸಿ ಜ್ವಲದಸಿ ಪೂರ್ಣಮಸಿ ಪ್ರಸ್ತಬ್ಧಮಸ್ಯೇಕಸಭಮಸಿ ಹಿಙ್ಕೃತ ಮಸಿ ಹಿಙ್ಕ್ರಿಯಮಾಣಮಸ್ಯುದ್ಗೀಥಮಸಿ ಉದ್ಗೀಯಮಾನಮಸಿ ಶ್ರಾವಿತಮಸಿ ಪ್ರತ್ಯಾಶ್ರಾವಿತ**

**ಮಸ್ಯಾರ್ದ್ರೇ ಸನ್ದೀಪ್ತಮಸಿ ವಿಭೂರಸಿ ಪ್ರಭೂರಸ್ಯನ್ನಮಸಿ ಜ್ಯೋತಿರಸಿ ನಿಧನಮಸಿ ಸಂವರ್ಗೋಽಸೀತಿ (4)**

ತಾ : ಆಮೇಲೆ ಮಥಿಸಿದ ಆಜ್ಯಾಹುತಿ ರೂಪ ದ್ರವ್ಯವನ್ನು ಕುರಿತು ಹೇಳುತ್ತಿದ್ದಾನೆ. (ಮಂಥದ್ರವ್ಯವನ್ನು ಪ್ರಾಣದಲ್ಲಿ ಐಕ್ಯಗೊಳಿಸಿ, "ಭ್ರಮದಸಿ"ಯೆನ್ನುವ ಮಂತ್ರದಿಂದ ವಿಚಾರಿಸುತ್ತಿರುವವನು.) ಓ ಮಂಥದ್ರವ್ಯವೇ! ನೀನು ನಾಮರೂಪದಲ್ಲಿ ಚಲಿಸುತ್ತಿರುವೆ. ಅಗ್ನಿರೂಪದಲ್ಲಿ ಪ್ರಕಾಶಿಸುತ್ತಿರುವೆ. ಬ್ರಹ್ಮ ಸ್ವರೂಪದಲ್ಲಿ ತುಂಬದವನಾಗಿರುವೆ. ಆಕಾಶ ರೂಪದಲ್ಲಿ ಕಂಪವಿಲ್ಲದವನಾಗಿರುವೆ. ಅದ್ವಿತೀಯ ಪರಮಾರ್ಥ ವಸ್ತುವಾಗಿರುವೆ. ಹಿಂಕಾರ ಸ್ವರೂಪವಾಗಿರುವೆ. ಹಿಂಕಾರವನ್ನು ಮಾಡುವ ಸ್ವರೂಪವಾಗಿರುವೆ. ಸಾಮವೇದ ಪ್ರಣವ ಸ್ವರೂಪವಾಗುತ್ತಿರುವೆ. ಸಾಮಗಾನ ಸ್ವರೂಪವಾಗುತ್ತಿದ್ದೀಯೆ. ಶ್ರಾವಿತವು ನೀನೇ. ಪ್ರತ್ಯಾಶ್ರಾವಿತವು ನೀನೇ ಮೇಘದಲ್ಲಿ ಚೆನ್ನಾಗಿ ಪ್ರಕಾಶಿಸುತ್ತಿರುವುದು ನೀನೇ ಆಗಿದ್ದೀಯೆ. ಸಕಲ ರೂಪಗಳನ್ನು ಧರಿಸಿದಂತಹ ಸರ್ವೇಶ್ವರನು ನೀನೆ. ಅಗ್ನಿರೂಪದಲ್ಲಿ ಇರುವ ಜ್ಯೋತಿ ಸ್ವರೂಪವು ನೀನೇ ಆಗಿದ್ದೇಯೆ. ಕಾರಣ ಸ್ಥಾನದಲ್ಲಿ ಲಯರೂಪವಾಗುತ್ತಿದ್ದೀಯೆ. ಸಂವರ್ಗರೂಪವು ಕೂಡಾ ನೀನೇ ಆಗುತ್ತಿದ್ದೀಯೆ.

**ಮಂ.ಶ್ಲೋ॥ ಅಥೈನಮುದ್ಯಚ್ಛ ತ್ಯಾಮಗ್ಂ ಸ್ಯಾಮಗ್ಂ ಹಿ ತೇ ಮಹಿ ಸ ಹಿ ರಾಜೇಶಾನೋಽಧಿಪತಿಃ ಸಮಾಗ್ಂ ರಾಜೇಶಾನೋಽಧಿಪತಿಂ ಕರೋತ್ವಿತಿ (5)**

ತಾ : "ಆಮಂಸಿ ಆಮಂಹಿ" ಎನ್ನುವ ಮಂತ್ರಗಳನ್ನು ಉಚ್ಚರಿಸುತ್ತಾ ಪಾತ್ರೆಯೊಂದಿಗೆ ಸಹ ಮಂಥವನ್ನು ಮೇಲಕ್ಕೆತ್ತಿದರು. ಆ ಮಂತ್ರಾರ್ಥವು ಈ ರೀತಿಯಾಗಿ ಇದೆ. "ಓ ಪ್ರಾಣವೇ! ನೀನು ಎಲ್ಲವನ್ನೂ (ಸರ್ವವನ್ನೂ) ತಿಳಿದುಕೊಂಡಿದ್ದೀಯೆ. ನಾವು ನಿನ್ನ ಮಹಿಮೆಯನ್ನು ಅರಿತವರಾಗಿದ್ದೇವೆ. ರಾಜನಾಗಿ ಸರ್ವವನ್ನು ನಿಯಮಿಸುವ ಸರ್ವಪ್ರಭುವಾದ ಆ ಪ್ರಾಣವೇ ನಾವಾಗುತ್ತಿದ್ದೇವೆ. ರಾಜನಾದ ಆ ಪ್ರಾಣವು ನನ್ನನ್ನು ಸಮಸ್ತಕ್ಕೂ ಅಧಿಪತಿಯನ್ನಾಗಿ ಮಾಡುವಂತಾಗಲಿ!"

**ಮಂ.ಶ್ಲೋ॥ ಅಥೈನಮಾಚಾಮತಿ ತತ್ಸವಿತುರ್ವರೇಣ್ಯಂ। ಮಧುವಾತಾ ಋತಾಯತೇ ಮಧುಕ್ಷರನ್ತಿ ಸಿನ್ಧವಃ। ಮಾಧ್ವೀರ್ನ ಸನ್ತ್ವೋಷಧೀರ್ಭೂಸ್ಸ್ವಾಹಾ ಭರ್ಗೋ ದೇವಸ್ಯ ಧೀಮಹಿ ಮಧುನಕ್ತಮುತೋಷಸೋ ಮಧುಮತ್ಪಾರ್ಥಿವಗ್ಂ ರಜಃ। ಮಧು ದ್ಯೌರಸ್ತುನಃ ಪಿತಾ। ಭುವಸ್ಸ್ವಾಹಾ। ಧಿಯೋ ಯೋ ನಃ ಪ್ರಚೋದಯಾತ್। ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ೩ ಅಸ್ತು ಸೂರ್ಯಃ। ಮಾಧ್ವೀರ್ಗಾವೋ ಭವನ್ತು ನ ಸ್ಸುವಸ್ಸ್ವಾಹೇತಿ ಸರ್ವಾಂ ಚ ಸಾವಿತ್ರೀ ಮನ್ವಾಹ। ಸರ್ವಾಶ್ಚ ಮಧುಮತೀರಹ ಮೇ ವೇದಗ್ಂ ಸರ್ವಂ ಭೂಯಾಸಂ ಭೂರ್ಭುವಸ್ಸುವಸ್ಸ್ವಾಹೇತ್ಯನ್ತತ ಅಚಮ್ಯ ಪಾಣೀ ಪ್ರಕ್ಷಾಳ್ಯ ಜಘನೇನಾಗ್ನಿಂ ಪ್ರಾಕ್ಶಿರಾಸ್ಸಂವಿಶತಿ ಪ್ರಾತರಾದಿತ್ಯಮುಪತಿಷ್ಠತೇ ದಿಶಾಮೇಕ ಪುಣ್ಡರೀಕಮಸ್ಯ ಹಂ ಮನುಷ್ಯಾಣಾಮೇಕಪುಣ್ಡರೀಕಂ ಭೂಯಾಸಮಿತಿ ಯಥೇತಮೇತ್ಯ ಜಘನೇನಾಗ್ನಿಮಾಸೀನೋ ವಗ್ಂಶಂ ಜಪತಿ (6)**

ತಾ : ಆಮೇಲೆ "ತತ್ಸವಿತುರ್ವರೇಣ್ಯಂ" ಇತ್ಯಾದಿ ಮಂತ್ರಗಳೊಂದಿಗೆ ಮಂಥಭಕ್ಷಣವನ್ನು ಮಾಡುವನು. ಗಾಯತ್ರಿ ಮಂತ್ರದ ಪ್ರಥಮ ಪಾದವನ್ನು ಹೇಳುತ್ತಾ ಭೂಃ ಎನ್ನುವ ವ್ಯಾಹೃತಿಯೊಂದಿಗೆ.

ಆ ಹವಿಸ್ಸುನಲ್ಲಿನ ಪ್ರಥಮ ಕಬಳ (ತುತ್ತನ್ನು) ಭಕ್ಷಿಸುತ್ತಿದ್ದಾನೆ. ಅದೇ ರೀತಿಯಾಗಿ ಅಹೋರಾತ್ರಿಗಳು ಭೂರಾಗವು, ದ್ಯುಲೋಕವು ಇವೆಲ್ಲವೂ ನಮ್ಮನ್ನು ಕುರಿತು ಸುಖಕರವಾಗುವಂತಾಗಲಿಯೆಂದು ಗಾಯತ್ರಿಯ ದ್ವಿತೀಯ ಪಾದವನ್ನು ಹೇಳುತ್ತಾ, ಭುವಃ ಎನ್ನುವ ವ್ಯಾಹೃತಿಯೊಂದಿಗೆ ಎರಡನೆಯ ತುತ್ತನ್ನು (ಕಬಳವನ್ನು) ಭಕ್ಷಿಸುತ್ತಾನೆ. ತರುಗುಲ್ಮಲತಾದಿಗಳು, ಆದಿತ್ಯನು, ಕಿರಣಗಳು, ದಿಕ್ಕುಗಳು ನಮ್ಮನ್ನು ಕುರಿತಾಗಿ ಸುಖಕರವಾದವುಗಳಾಗಲಿಯೆಂದು ಗಾಯತ್ರಿಯ ತೃತೀಯ ಪಾದವನ್ನು ಹೇಳುತ್ತಾ ಸುವಃ ಎನ್ನುವ ವ್ಯಾಹೃತಿಯೊಂದಿಗೆ ಮೂರನೆಯ ತುತ್ತನ್ನು (ಕಬಳ)ವನ್ನು ಭಕ್ಷಿಸುತ್ತಾನೆ. ಆನಂತರ ಎಲ್ಲವೂ ಸುಖಕರವಾದವುಗಳಾದವು. ಈ ಸಮಸ್ತವು ನಾನೇ ಆಗಿರುವೆನು ತ್ರಿಪದ ಗಾಯತ್ರಿಯನ್ನು ಪಠಿಸುತ್ತಾ ಭೂಃ ಭುವಃ ಸುವಃ ಎನ್ನುವ ವ್ಯಾಹೃತಿತ್ರಯದೊಂದಿಗೆ ನಾಲ್ಕನೆಯ ತುತ್ತನ್ನು (ಕಬಳವನ್ನು) ಭಕ್ಷಿಸುತ್ತಾನೆ. ಹೀಗೆ ಭುಜಿಸಿದ ಮೇಲೆ ಕೈಗಳನ್ನು ತೊಳೆದುಕೊಂಡು ಆಚಮನ ಮಾಡಿ, ಅಗ್ನಿಗೆ ಹಿಂದುಗಡೆ (ಹಿಮ್ಮುಖವಾಗಿ) ಪೂರ್ವದಿಕ್ಕಿಗೆ ಮುಖ ಮಾಡಿಕೊಂಡು ಮಲಗುತ್ತಾನೆ. ಮತ್ತೆ ಪ್ರಾತಃಕಾಲದಲ್ಲಿ ಎದ್ದು ಸೂರ್ಯನನ್ನು ಕುರಿತು ಓ ಸೂರ್ಯದೇವಾ! ನೀನು ಸಮಸ್ತ ದಿಕ್ಕುಗಳಿಗೆ ಅಧಿಪತಿಯಾಗಿರುವೆ. ನಾನು ಮಾನವರೆಲ್ಲರಿಗೂ ಅಧಿಪತಿಯಾಗುವಂತಾಗಲಿ ಎಂದು ಸ್ತೋತ್ರ ಮಾಡುತ್ತಾ ಯಥಾವಿಧಿಯಾಗಿ ಅಗ್ನಿಯ ಹಿಂದಿನ ಭಾಗಕ್ಕೆ ಬಂದು (ಹಿಂದುಗಡೆಗೆ ಬಂದು) ಕುಳಿತುಕೊಂಡು ವಂಶ ಬ್ರಾಹ್ಮಣವನ್ನು ಧ್ಯಾನಿಸುತ್ತಿದ್ದಾನೆ.

**ಮಂ.ಶ್ಲೋ॥ ತಗ್ಂ ಹೈತಮುದ್ದಾಲಕ ಆರುಣಿರ್ವಾಜಸನೇಯಾಯ ಯಾಜ್ಞವಲ್ಕ್ಯಾಯಾಂತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ (7)**

ತಾ : ಆ ಸುಪ್ರಸಿದ್ಧವಾದ ಮಂಥಕರ್ಮವನ್ನು ಆರುಣಿಪುತ್ರನಾದ ಉದ್ಧಾಲಕನೆಂಬ ಋಷಿ ವಾಜಸನೇಯ ಶಾಖಾಧ್ಯಾಯನವನ್ನು ಮಾಡಿದ ಶಿಷ್ಯ ಯಾಜ್ಞವಲ್ಕ್ಯನಿಗೆ ಬೋಧಿಸಿದ. ಯಾರಾದರೂ ಈ ಆಹುತಿಯನ್ನು ಒಣಗಿದ ಕೊರಡಲ್ಲಿ ಇಟ್ಟರೆ, ಆ ಕೊರಡಿಗೆ ಕೊಂಬೆಗಳು ಹುಟ್ಟುವುದಿಲ್ಲ. ಎಲೆಗಳು ಕೂಡಾ ಚಿಗುರುವುದಿಲ್ಲ. ಈ ಮಂಥನ ಕರ್ಮ ಅಷ್ಟು ಶ್ರೇಷ್ಠವಾದುದು.

**ಮಂ.ಶ್ಲೋ॥ ಏತಮುಹೈವ ವಾಜಸನೇಯೋ ಯಾಜ್ಞವಲ್ಕ್ಯೋ ಮಧುಕಾಯ ಪೈಙ್ಗ್ಯ-ಯಾಂತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇ ಜ್ಜಾಯೇರನ್ ಶಾಖಾಃ ಪ್ರರೋಹೇಯುಃ ಪಲಾಶಾನೀತಿ (8)**

ತಾ: ಈ ಮಂಥ ವಿದ್ಯೆಯನ್ನು ವಾಜಸನೇಯ ಯಾಜ್ಞವಲ್ಕ್ಯ ಋಷಿಯು ಶಿಷ್ಯನಾದ ಮಧುಕ ಋಷಿಗೆ ಬೋಧಿಸಿ ಹೀಗೆ ಹೇಳಿದ. ಓ ಮಧುಕನೇ! ಇದನ್ನು ಕೊರಡಾಗಿರುವ ವೃಕ್ಷದಲ್ಲಿ ಇರಿಸಿದಲ್ಲಿ ಈ ಕೊರಡಿಗೆ ಕೊಂಬೆಗಳು ಹುಟ್ಟಿ ಚಿಗುರುವುದು. ಆ ಆಹುತಿಯ ಪ್ರಭಾವ ಅತಿ ಹೆಚ್ಚಿನದು.

**ಮಂ.ಶ್ಲೋ॥ ಏತಮುಹೈವ ಮಧುಕಃ ಪೈಙ್ಗ್ಯಶ್ಚೂಲಾಯ ಭಾಗವಿತ್ತಯೇಽಂತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ (9)**

ತಾ : ಪಿಂಗಳ ಋಷಿಯ ಪುತ್ರನಾದ ಮಧುಕನೆಂಬ ಮುನಿ, ಭಗವಿತ್ತಿ ಪುತ್ರನೂ ಶಿಷ್ಯನೂ ಆದ ಚೂಲನೆನ್ನುವ ಋಷಿಗಾಗಿ, ಇದನ್ನು ಬೋಧಿಸಿದ. ಯಾರು ಈ ಆಹುತಿಯನ್ನು ಒಣಗಿದ (ಕಾಷ್ಠ) ಕೊರಡಿನಲ್ಲಿ ಇಟ್ಟರೂ ಅದಕ್ಕೆ ಕೊಂಬೆಗಳು ಹುಟ್ಟುತ್ತವೆ. ಎಲೆಗಳು ಚಿಗುರುತ್ತವೆ.

**ಮಂ.ಶ್ಲೋ॥ ಏತಮುಹೈವ ಚೂಲೋ ಭಾಗವಿತ್ತಿರ್ಜಾನಕಯೇ ಆಯಸ್ಥೂಣಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂ ಛ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ (10)**

ತಾ : ಈ ಮಂಥವಿದ್ಯೆಯನ್ನು ಚೂಲನೆನ್ನುವ ಮಹರ್ಷಿ ಶಿಷ್ಯನಾದ ಜನಕಪುತ್ರನಾದ ಆಯಸ್ಥೂಣನೆಂಬುವವನಿಗೆ ಹೇಳಿದ. ಯಾರಾದರೂ ಈ ಮಂಥವನ್ನು ಒಣಗಿದ ಕೊರಡಿನಲ್ಲಿಟ್ಟರೆ ಆ ಕೊರಡು ಕೊಂಬೆಗಳನ್ನು ಚಿಗುರಿಸಿ ಎಲೆಗಳನ್ನು ಹೊಂದಿ ಮತ್ತೆ ಬದುಕುತ್ತದೆ. (ವಂತಾಗುವುದು.)

**ಮಂ.ಶ್ಲೋ॥ ಏತಮುಹೈವ ಜಾನಕಿರಾಯಸ್ಥೂಣಃ ಸತ್ಯಕಾಮಾಯ ಜಾಬಾಲಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ (11)**

ತಾ : ಜನಕಪುತ್ರನಾದ ಆಯಸ್ಥೂಣನೆನ್ನುವ ಋಷಿಯು ತನ್ನ ಶಿಷ್ಯನಾದ ಜಾಬಾಲ ಸತ್ಯ ಕಾಮನಿಗಾಗಿ ಇದನ್ನು ಬೋಧಿಸಿದ. ಈ ವಿದ್ಯೆಯಿಂದ ಒಣಗಿದ ಕೊರಡು ಮತ್ತೆ ಬದುಕುವುದು.

**ಮಂ.ಶ್ಲೋ॥ ಏತಮುಹೈವ ಸತ್ಯಕಾಮೋ ಜಾಬಾಲೋಽನ್ತೇವಾಸಿಭ್ಯ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ತಮೇತಂ ನಾಪುತ್ರಾಯವಾಽನನ್ತೇವಾಸಿನೇ ವಾ ಬ್ರೂಯಾತ್ (12)**

ತಾ : ಜಾಬಾಲ ಸತ್ಯಕಾಮನೆನ್ನುವ ಋಷಿಯು ಶಿಷ್ಯನಿಗಾಗಿ ಈ ಮಂಥ ವಿದ್ಯೆಯನ್ನು ಹೇಳಿದ. ಯಾರೇ ಆಗಲಿ ಇದನ್ನು ಒಣಗಿದ ಕೊರಡು (ಕಟ್ಟಿಗೆ)ಯಲ್ಲಿ ಇಟ್ಟಲ್ಲಿ ಅದು ಚಿಗುರುವುದು. ಕೊಂಬೆಗಳು, ಎಲೆಗಳು ಹುಟ್ಟುವುವು ಎಂದು ಕೂಡಾ ಹೇಳಿದ. ಈ ಪ್ರಸಿದ್ಧ ಮಂಥ ರೂಪವಾದ ಹವಿಸ್ಸನ್ನು ಪುತ್ರನು, ಶಿಷ್ಯನು ಅಲ್ಲದವನಿಗೆ ಹೇಳಬಾರದು. ಶಿಷ್ಯನು, ಪುತ್ರನು ಮಾತ್ರವೇ ತಿಳಿಯಲು ಅರ್ಹತೆಯುಳ್ಳವರು.

**ಮಂ.ಶ್ಲೋ॥ ಚತುರೌದುಮ್ಬರೋ ಭವತ್ಯೌದುಮ್ಬರಃ ಸ್ರುವ ಔದುಮ್ಬರಶ್ಚಮಸ ಔದುಮ್ಬರ ಇಧ್ಮ ಔದುಮ್ಬ-ರ್ಯಾಮುಪಮನ್ಥನ್ಯೌ ದಶಗ್ರಾಮ್ಯಾಣಿ ಧಾನ್ಯಾನಿ ಭವನ್ತಿ ವ್ರೀಹಿಯವಾಸ್ತಿಲಮಾಷಾ ಅಣು ಪ್ರಿಯಙ್ಗವೋ ಗೋಧೂಮಾಶ್ಚ ಮಸೂರಾಶ್ಚ ಖಲ್ವಾಶ್ಚ ಖಲಕುಲಾಶ್ಚ ತಾನ್ ಪಿಷ್ಟಾನ್ ದಧಿನಿ ಮಧುನಿ ಘೃತ ಉಪಸಿಞ್ಚತ್ಯಾಜ್ಯಸ್ಯ ಜುಹೋತಿ (13)**

ತಾ : ಈ ಮಂಥಕರ್ಮದಲ್ಲಿ ಉಪಯೋಗಿಸುವ ನಾಲ್ಕು ಸಾಧನಗಳು ಔದುಂಬರ ಕಾಷ್ಠದಿಂದ ಮಾಡಿರುವಂತಹದಾಗಿರಬೇಕು. ಅವೇ ಸ್ರುವ, ಚಮಸ, ಇಧ್ಮ, ಉಪಮನ್ಥವೆನ್ನುವ ನಾಲ್ಕು ಪಾತ್ರೆಗಳು.

ಆದ್ದರಿಂದಲೇ ಈ ಯಜ್ಞವನ್ನು ಚತುರೌದುಂಬರ ಕರ್ಮವೆಂದು ಹೇಳುವರು. ಈ ಯಜ್ಞವನ್ನು ಮಾಡುವಾಗ ಉಪಯೋಗಿಸುವ ಧಾನ್ಯಗಳು ಹತ್ತು ಬಗೆಯವು. ಅವು ಯಾವುವೆಂದರೆ ಭತ್ತ, ಬಾರ್ಲಿ, ಎಳ್ಳು, ಗೋಧಿ, ಸಣ್ಣ ಕಡಲೆ, ಅವರೆ, ಹುರಳಿ, ಆ ಧಾನ್ಯಗಳ ಹಿಟ್ಟನ್ನು ಮೊಸರಿನೊಂದಿಗೆ, ಜೇನುತುಪ್ಪದೊಂದಿಗೆ, ತುಪ್ಪದೊಂದಿಗೆ ನೆನಸಿ, ಆಜ್ಯದೊಂದಿಗೆ ಹೋಮವನ್ನು ಮಾಡುತ್ತಾರೆ.

## ಅಷ್ಟಮಾಧ್ಯಾಯ - ಚತುರ್ಥ ಬ್ರಾಹ್ಮಣಂ

**ಮಂ.ಶ್ಲೋ॥ ಏಷಾಂ ವೈ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋಽಪಾಮೋಷಧಯ ಓಷಧೀನಾಂ ಪುಷ್ಪಾಣಿ ಪುಷ್ಪಾಣಾಂ ಫಲಾನಿ ಫಲಾನಾಂ ಪುರುಷಃ ಪುರುಷಸ್ಯ ರೇತಃ (1)**

ತಾ : (ಈ ಬ್ರಾಹ್ಮಣದಲ್ಲಿ ಸಂತಾನೋತ್ಪತ್ತಿಗೆ ಸಂಬಂಧಿಸಿದ ವಿಷಯವನ್ನು ಹೇಳಲಾಗಿದೆ.) ಈ ಜಂಗಮಸ್ಥಾವರಾತ್ಮಕವಾದ ಭೂತಗಳಲ್ಲಿ ಶ್ರೇಷ್ಠವಾದುದು (ಸಾರವುಳ್ಳದ್ದು.) ಭೂಮಿಯ ಸಾರವು ಉದಕ (ನೀರು). ಉದಕಗಳ ಸಾರವು ಓಷದಿಗಳು (ತರುಗುಲ್ಮಲತ್ಮಾದಿಗಳು) ಓಷಧಿಗಳ ಸಾರ ಪುಷ್ಪಗಳು, ಪುಷ್ಪಗಳ ಸಾಲ ಫಲಗಳು, ಫಲಗಳ ಸಾರ ಪುರುಷ. ಪುರುಷನ ಸಾರ ರೇತಸ್ಸು.

**ಮಂ.ಶ್ಲೋ॥ ಸಹ ಪ್ರಜಾಪತಿರೀಕ್ಷಾಞ್ಚಕ್ರೇ ಹನ್ತಾಸ್ಮೈ ಪ್ರತಿಷ್ಠಾಂ ಕಲ್ಪಯಾನೀತಿ ಸ ಸ್ತ್ರಿಯಗ್ಂ ಸಸೃಜೇತಾಗ್ಂ ಸೃಷ್ಟ್ವಾಽಥ ಉಪಾಸ್ತ ತಸ್ಮಾತ್ ಸ್ತ್ರಿಯಮಥ ಉಪಾಸೀತ ಸ ಏತಂ ಪ್ರಾಞ್ಚಂ ಗ್ರಾವಾಣಮಾತ್ಮನ ಏವ ಸಮುದಪಾರಯತ್ತೇನೈನಾಮಭ್ಯಸೃಜತ್ (2)**

ತಾ : ಸರ್ವ ಭೂತಗಳ ಸಾರವೇ ರೇತಸ್ಸು ಆದ್ದರಿಂದ ಆ ಪ್ರಜಾಪತಿ ಇದಕ್ಕೆ ತಕ್ಕ ಸ್ಥಿತಿಯನ್ನು ಒದಗಿಸಬೇಕೆಂದು ಭಾವಿಸಿ ಸ್ತ್ರೀಯನ್ನು ಸೃಷ್ಟಿಸಿದನು. ಹೀಗೆ ಸ್ತ್ರೀಯನ್ನು ಸೃಷ್ಟಿಸಿ ಸಂಭೋಗ ಕ್ರಿಯೆಯನ್ನು ಏರ್ಪಡಿಸಿದನು. (ಕರ್ಮವನ್ನು ಏರ್ಪಡಿಸಿದ.) ಆದ್ದರಿಂದಲೇ ಈಗಲೂ ಪ್ರಜೆಗಳು ಸ್ತ್ರೀಯರನ್ನು ಉಪಾಸಿಸುತ್ತಿದ್ದಾರೆ. ಆ ಬ್ರಹ್ಮನು ಅತಿ ವೇಗವುಳ್ಳ) ಚಂದ್ರಕಿರಣವನ್ನು, ಪಾಷಾಣ ಸದೃಶವಾದ ಈ ಜನನೇಂದ್ರಿಯವನ್ನು ತುಂಬಿಸಿದನು. ಅಂತಹ ಜನನೇಂದ್ರಿಯದಿಂದ ಸ್ತ್ರೀ ಸಂಸರ್ಗವನ್ನು ಮಾಡಿದನು.

**ಮಂ.ಶ್ಲೋ॥ ತಸ್ಯಾ ವೇದಿರುಪಸ್ಥೋ ಲೋಮಾನಿ ಬರ್ಹಿಶ್ಚರ್ಮಾಧಿಷವಣೇ ಸಮಿಧೋ ಮಧ್ಯತಸ್ತೌಮುಷ್ಕಾ ಸ ಯಾವಾನ್ ಹ ವೈ ವಾಜಪೇಯೇನ ಯಾಜಮಾನ್ಯಸ್ಯ ಲೋಕೋ ಭವತಿ ತಾವಾನಸ್ಯ ಲೋಕೋ ಭವತಿ ಯ ಏವಂ ವಿದ್ವಾನಧೋಪಹಾಸಂ ಚರತ್ಯಾಸಾಗ್ಂ ಸ ಸ್ತ್ರಿಣಾಗ್ಂ ಸುಕೃತಂ ವೃಙ್ಕ್ತೇಽಥ ಯ ಇದಮವಿದ್ವಾನಧೋಪಹಾಸಂ ಚರತ್ಯಸ್ಯ ಸ್ತ್ರಿಯಃ ಸುಕೃತಂ ವೃಞ್ಜತೇ (3)**

ತಾ : (ವಾಜಪೇಯ ಯಜ್ಞವನ್ನು ಉಪಮಾನವಾಗಿ ಹೇಳುತ್ತಿದ್ದಾರೆ) ಆ ಸ್ತ್ರೀಯ ಯೋನಿಯು ಯಜ್ಞವೇದಿಕೆ, ಕೂದಲುಗಳು ದರ್ಭೆ, ರಹಸ್ಯ ಪ್ರದೇಶದಲ್ಲಿರುವ ಚರ್ಮವು ಸೋಮಫಲಕ, ಅದರಲ್ಲಿನ ವೃಷಣಗಳು (ಯೋನಿ ಪಾರ್ಶ್ವಗಳ ಗಟ್ಟಿಯಾದ (ಕಠಿಣ) ಮಾಂಸಖಂಡಗಳು ಅಗ್ನಿ ಈ ವಿಧವಾಗಿ ಭಾವಿಸಿ ಉಪಾಸಿಸುವವನಿಗೆ, ವಾಜಪೇಯ ಯಜ್ಞ ಮಾಡುವಂತಹವನಿಗೆ, ಯಾವ

ಪ್ರಸಿದ್ಧ ಲೋಕವು ದೊರಕುವುದೋ ಅಂತಹ ಲೋಕವು ಪ್ರಾಪ್ತವಾಗುತ್ತದೆ. ಹೀಗೆ ತಿಳಿದುಕೊಂಡು ಮೈಥುನವನ್ನು ಮಾಡುವವನು ಸ್ತ್ರೀಯರ ಪುಣ್ಯವನ್ನು ಪಡೆಯುತ್ತಾನೆ. ಈ ರೀತಿಯಾಗಿ ತಿಳಿದುಕೊಳ್ಳದೆ ಸಂಭೋಗ ಮಾಡುವವನ ಸುಕೃತವನ್ನು ಸ್ತ್ರೀಯರು ಪಡೆಯುತ್ತಾರೆ.

**ಮಂ.ಶ್ಲೋ॥ ಏತದ್ಧಸ್ಮ ವೈ ತದ್ವಿದ್ವಾನುದ್ದಾಲಕ ಆರುಣಿರಾಹೈತದ್ಧಸ್ಮ ವೈ ತದ್ವಿದ್ವಾನ್ನಾಕೋ ಮೌದ್ಗಲ್ಯ ಆಹೈತದ್ಧಸ್ಮ ವೈ ತದ್ವಿದ್ವಾನ್ ಕುಮಾರ ಹಾರಿತ ಆಹ ಬಹವೋ ಮರ್ಯಾ ಬ್ರಾಹ್ಮಣಾಯನಾ ನಿರಿಂದ್ರಿಯಾ ವಿಸುಕೃತೋಽಸ್ಮಾಲ್ಲೋಕಾತ್ಪ್ರಯನ್ತಿ ಯ ಇದಮವಿದ್ವಾಗ್ಂ ಸೋಽಧೋಪಹಾಸಂ ಚರನ್ತೀತಿ ಬಹು ವಾ ಇದಗ್ಂ ಸುಪ್ತಸ್ಯ ವಾ ಜಾಗ್ರತೋ ವಾ ರೇತಃ ಸ್ಕನ್ದತಿ (4)**

ತಾ : ಈ ವಾಜಪೇಯ ಯಜ್ಞದ ಮಹಿಮೆಯನ್ನು ಅರಿತುಕೊಂಡಿದ್ದ ಅರುಣನಂದನನೆನ್ನುವ ಉದ್ಧಾಲಕ(ನು)ನನ್ನು ಮುದ್ಗಲ ಪುತ್ರನಾದ ನಾಕ ಕುಮಾರ ಹರಿತನು ಈ ಮೂವರು ಈ ರೀತಿಯಾಗಿ ಬೋಧಿಸಿದರು. ಬ್ರಾಹ್ಮಣ ಜಾತಿಯವರು, ವಾಜಪೇಯ ಯಾಗ ಮಹಿಮೆಯನ್ನು ತಿಳಿದು-ಕೊಳ್ಳದೆ ಸಂಭೋಗವನ್ನು (ಮೈಥುನ) ಮಾಡಿದರೂ, ಎಚ್ಚರವಾಗಿದ್ದಾಗ ಆಗಲೀ, ನಿದ್ರಿಸುತ್ತಿರುವಾಗ ಆಗಲೀ, ರೇತಸ್ಖಲನವಾದಾಗ ಆಗಲೀ, ಈ ಕೆಳಗೆ ವಿವರಿಸಿರುವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ-ಬೇಕು.

**ಮಂ.ಶ್ಲೋ॥ ತದಭಿಮೃಶೇದನುವಾಮನ್ತ್ರಯೇತ ಯನ್ಮೇಽದ್ಯ ರೇತಃ ಪೃಥಿವೀಮಸ್ಕಾನ್ತ್ಸೀದ್ಯ ದೋಷ ಧೀರಪ್ಯ ಸರದ್ಯದಪಃ॥ ಇದಮಹಂ ತದ್ರೇತ ಆದದೇ। ಪುನರ್ಮಾಮೈತ್ವಿನ್ದ್ರಿಯಂ ಪುನಸ್ತೇಜಃ ಪುನರ್ಭಗಃ॥ ಪುನರಗ್ನಿ ಧಿಷ್ಣಿಯಾ ಯಥಾಸ್ಥಾನಂ ಕಲ್ಪನ್ತಾಮಿತ್ಯನಾಮಿಕಾಂಗುಷ್ಠಾಭ್ಯಾ-ಮಾಧಾಯಾನ್ತರೇಣ ಸ್ತನೌ ವಾ ಭ್ರುವೌ ವಾ ನಿಮೃಜ್ಯಾತ್ (5)**

ತಾ : ಈ ರೇತಸ್ಸು ಸ್ಪರ್ಶಿಸಿ (ಮುಟ್ಟಿ) ಈ ರೀತಿಯಾಗಿ ಅಭಿಮಂತ್ರಿಸಬೇಕು. ಈ ನನ್ನ ವೀರ್ಯವು ಸ್ಖಲನವಾಗಿ ಭೂಮಿಯ ಮೇಲೆ ಬಿದ್ದಿದೆ. ಇದೇ ಅನ್ನದಲ್ಲಿ ಕೂಡಾ ಬಿದ್ದಿದೆ. ಉದಕದಲ್ಲಿ ಕೂಡಾ ಬಿದ್ದಿದೆ. ಈ ಪಾತವಾದ ರೇತಸ್ಸನ್ನು ಶರೀರದಲ್ಲಿ ಪುನಃ ಅನುಸಂಧಾನಿಸುತ್ತೇನೆ ಎಂದು ಹೇಳಿ ಅನಾಮಿಕಾಂಗುಷ್ಠವನ್ನು ಸೇರಿಸಿ ಸ್ತನ-ಭ್ರೂಮಧ್ಯಭಾಗವನ್ನು ಸ್ಪರ್ಶಿಸಿ, ಈ ಕೆಳಗೆ ಹೇಳಿರುವ ಅರ್ಥ ಬರುವಂತಹ ಮಂತ್ರವನ್ನು ಪಠಿಸಬೇಕು. ಈ ಇಂದ್ರಿಯವು ಮತ್ತೆ ನನ್ನ ಒಳಕ್ಕೆ ಬರ (ಬರುವಂತಾಗ)ಬೇಕು. ಈ ರೀತಿಯಾಗಿ ಹೊರಕ್ಕೆ ಬಂದ ವೀರ್ಯವು ಮತ್ತೆ ನನಗೆ ತೇಜಸ್ಸನ್ನು ಸೌಭಾಗ್ಯವನ್ನು ಪ್ರಾಪ್ತಿಯಾಗುವಂತೆ ಮಾಡಲಿ! ಅಗ್ನಿಯೇ ಸ್ಥಾನವಾಗುಳ್ಳ ದೇವತೆಗಳು, ಈ ರೇತಸ್ಸನ್ನು ನನ್ನ ದೇಹದಲ್ಲಿ ಯಥಾಸ್ಥಾನದಲ್ಲಿ ತುಂಬುವಂತಾಗಲಿ!" ಎಂದು.

**ಮಂ.ಶ್ಲೋ॥ ಅಥ ಯದ್ಯುದಕ ಆತ್ಮಾನಂ ಪರಿಪಶ್ಯೇತ್ತದಭಿಮನ್ತ್ರಯೇತ ಮಯಿ ತೇಜ ಇನ್ದ್ರಿಯಂ ಯಶೋ ದ್ರವಿಣಗ್ಂ ಸುಕೃತಮಿತಿ ಶ್ರೀರ್ಹವಾ ಏಷಾ ಸ್ತ್ರೀಣಾಂ ಯನ್ಮಲೋದ್ವಾಸಾ ಸ್ತಸ್ಮಾ-ನ್ಮಲೋದ್ವಾಸನಂ ಯಶಸ್ವಿನೀಮಭಿಕ್ರಮ್ಯೋಪಮನ್ತ್ರಯೇತ (6)**

ತಾ: ಆನಂತರ ನೀರಿನಲ್ಲಿ ವೀರ್ಯ ಪತನವಾದಲ್ಲಿ, ಜಲದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ-ಕೊಂಡು "ಮಯಿತೇಜ" ಎನ್ನುವ ಮಂತ್ರವನ್ನು ಪಠಿಸುತ್ತಾ ಜಲವನ್ನು ಅಭಿಮಂತ್ರಿಸಬೇಕು. ಸ್ತ್ರೀಯರೆಲ್ಲರೊಳಗೆ ರಜಸ್ವಲೆಯಾದ ನನ್ನ ಭಾರ್ಯೆ ಲಕ್ಷ್ಮೀಸ್ವರೂಪಳಾಗಿರಬೇಕು. ಅಂತಹ ಯಶೋವಂತಳಾದ ಸ್ತ್ರೀಯನ್ನು ಮೂರು ರಾತ್ರಿಗಳು ಕಳೆದ ಮೇಲೆ ಭೋಗಿಸಬೇಕು. (ನಮ್ಮಿಬ್ಬರಿಗೆ ಪುತ್ರನು ಜನಿಸುವಂತಾಗಲಿ ಎಂದು ಭಾವಿಸಬೇಕು.)

**ಮಂ.ಶ್ಲೋ॥ ಸಾ ಚೇದಸ್ಮೈ ನ ದದ್ಯಾತ್ಕಾಮಮೇನಾಮವಕ್ರೀಣೀಯಾತ್ ಸಾ ಚೇದಸ್ಮೈ ನೈವದದ್ಯಾತ್ಕಾಮ -ಮೇನಾಂ ಯಷ್ಟ್ಯಾ ವಾ ಪಾಣಿನಾ ವೋಪಹತ್ಯಾತಿಕ್ರಾಮೇದಿನ್ದ್ರಿಯೇಣ ತೇ ಯಶಸಾ ಯಶ ಆದದ ಇತ್ಯಯಶಾ ಏವಭವತಿ (7)**

ತಾ: ಪತ್ನಿಯನ್ನು ಸಮೀಪಿಸಿದಾಗ, ಆಕೆ ಸಂಭೋಗಕ್ಕೆ ಅಂಗೀಕರಿಸದಿದ್ದ ಪಕ್ಷದಲ್ಲಿ ಪ್ರೇಮವನ್ನು ಪ್ರಕಟಿಸಬೇಕು. ಆಗಲೂ ಕೂಡಾ ಅಂಗೀಕರಿಸದಿದ್ದಲ್ಲಿ ದಂಡ(ಕೋಲು)ದಿಂದಾಗಲೀ, ಕೈಯಿಂದಾಗಲೀ ಹೊಡೆದು ಭೋಗಿಸಬೇಕು. ರಜೋರೂಪವಾದ ಇಂದ್ರಿಯದಲ್ಲಿ ನಿನ್ನ ರಜಸ್ಸನ್ನು ಗ್ರಹಿಸುತ್ತಿದ್ದೇನೆಂದು ಅತಿಕ್ರಮಿಸಿ ಭೋಗಿಸಬೇಕು. (ಅದು ಮೊದಲ್ಗೊಂಡು ಆ ಸ್ತ್ರೀ) ರಜಸ್ಸನ್ನು ಇಲ್ಲದವಳಂತಾಗುತ್ತಾಳೆ.

**ಮಂ.ಶ್ಲೋ॥ ಸಾ ಚೇದಸ್ಮೈ ದದ್ಯಾದಿನ್ದ್ರಿಯೇಣ ತೇ ಯಶಸಾ ಯಶ ಅದಧಾಮೀತಿ ಯಶಸ್ವಿನಾಮೇವ ಭವತಃ (8)**

ತಾ : ಆ ಸ್ತ್ರೀ ಪತಿಗೆ ಸ್ವಾಧೀನವಾದಲ್ಲಿ 'ಇಂದ್ರಿಯೇಣ ತೇ ಯಶಸಾ ಯಶ ಅಧಧಾಮಿ' ಯೆನ್ನುವ ಮಂತ್ರವನ್ನು ಹೇಳುತ್ತಾ ಭೋಗಿಸಬೇಕು. ಹೀಗೆ ಹೊಂದಿಕೊಂಡಿರುವ ಆ ಸ್ತ್ರೀ- ಪುರುಷ-ರಿಬ್ಬರಿಗೂ ಸತ್ಸಂತಾನವುಂಟಾಗುತ್ತದೆ.

**ಮಂ.ಶ್ಲೋ॥ ಸ ಯಾಮಿಚ್ಛೇತ್ಕಾಮಯೇತಮೇತಿ ತಸ್ಯಾಮರ್ಥಂನಿಷ್ಠಾಯ ಮುಖೇನ ಮುಖಗ್ಂ ಸನ್ಧಾಯೋಪಸ್ಥಮಸ್ಯಾ ಅಭಿಮೃಶ್ಯ ಜಪೇತ್ ಅಙ್ಗಾದಙ್ಗಾತ್ಸಂಭವಸಿ ಹೃದಯಾದಧಿ-ಜಾಯಸೇ। ಸತ್ವಮಙ್ಗಕಷಾಯೋಽಸಿ ದಿಗ್ಧವಿದ್ಧಾಮಿವಮಾದಯೇ ಮಾಮಮೂಂ ಮಯೀತಿ (9)**

ತಾ : ತನ್ನ ಪತ್ನಿ ಸಂಭೋಗಕ್ಕೆ ಸುಮುಖಳಾಗಿರುವಳೆಂದು ತಿಳಿದುಕೊಂಡು, ಉಪಸ್ಥಾನದಲ್ಲಿ ಜನನೇಂದ್ರಿಯವನ್ನಿಟ್ಟು ಮುಖಕ್ಕೆ ಮುಖವನ್ನಿಟ್ಟು ಹಸ್ತದಲ್ಲಿ ಯೋನಿಯನ್ನು ಸ್ಪರ್ಶಿಸುತ್ತಾ ಈ ಮಂತ್ರವನ್ನು ಪಠಿಸಬೇಕು. "ಅಂಗಾದಂಗಾತ್ಸಂಭವಸಿ", ಆ ಮಂತ್ರಾರ್ಥವೇನೆಂದರೆ, "ಓ! ರೇತಸ್ಸೇ! ನೀನು ನನ್ನ ಶರೀರದ ಅವಯವಗಳಿಂದ ಹುಟ್ಟುತ್ತಿರುವೆ. ಮುಖ್ಯವಾಗಿ ಅನ್ನರಸದಿಂದ, ಹೃದಯದಿಂದ ಬರುತ್ತಿರುವೆ. ಅಂತಹ ನೀನು ಅವಯವಗಳಲ್ಲಿ ಒಂದು ರಸವಾಗಿರುವೆ. ನಂತರ ನೀನು ವಿಷದ ಬಾಣದಿಂದ ಹೊಡೆಯಲ್ಪಟ್ಟ ಜಿಂಕೆಯಂತೆಯೇ ನನ್ನ ಸಂಬಂಧವಾದ ಈ ಸ್ತ್ರೀಯನ್ನು ನನ್ನ ಸ್ವಾಧೀನ ಮಾಡು!"

**ಮಂ.ಶ್ಲೋ॥ ಅಥಯಾಮಿಚ್ಛೇನ್ನ ಗರ್ಭಂ ದಧೀತೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಗ್ಂ ಸನ್ಧಾಯಾಭಿಪ್ರಾಣ್ಯಾದಪಾನ್ಯಾದಿನ್ದ್ರಿಯೇಣ ತೇ ರೇತಸಾ ರೇತ ಆದದ ಇತ್ಯರೇತಾ ಏವ ಭವತಿ (10)**

ತಾ : ಪುರುಷನು ತನ್ನ ಪತ್ನಿ ಗರ್ಭಧಾರಣೆ ಮಾಡಬಾರದೆಂದು ಕೋರಿದಲ್ಲಿ, ಪೂರ್ವದಲ್ಲಿ ಹೇಳಿದ ಪ್ರಕಾರವಾಗಿಯೇ ಪತ್ನಿಯಲ್ಲಿ ಜನನೇಂದ್ರಿಯವನ್ನಿಟ್ಟು, ಮುಖದಲ್ಲಿ ಮುಖವನ್ನಿಟ್ಟು "ಅಭಿಪ್ರಾಣಾಪಾನ್ಯಾದಿಂದ್ರಿಯೇಣ ತೇ ರೇತಸಾ ರೇತ ಆದದೇ" ಎನ್ನುವ ಮಂತ್ರವನ್ನು ಜಪಿಸಬೇಕು. ಈ ಮಂತ್ರಾಭಿಪ್ರಾಯವೇನೆಂದರೆ ಮೊದಲು ನಿಶ್ವಾಸವನ್ನು ಮಾಡಿ ಅಪಾನದಿಂದ ನನ್ನ ಇಂದ್ರಿಯದಿಂದ ನಿನ್ನ ರೇತಸ್ಸನ್ನು ಗ್ರಹಿಸುತ್ತಿದ್ದೇನೆ. ಈ ರೀತಿಯಾಗಿ ಜಪಿಸಿದಲ್ಲಿ ಆಗಲೇ, ಆ ಸ್ತ್ರೀಯಲ್ಲಿ ರೇತಸ್ಸು ಇಲ್ಲದಂತಾಗಿ ಗರ್ಭವನ್ನು ಧರಿಸುವುದಿಲ್ಲ.

**ಮಂ.ಶ್ಲೋ॥ ಅಥ ಜ ಯಾಮಿಚ್ಛೇದ್ಧಧೀತೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಗ್ಂ ಸನ್ಧಾಯಾ-ಪಾನ್ಯಾಭಿಪ್ರಾಣ್ಯಾದಿನ್ದ್ರಿಯೇಣ ತೇ ರೇತಸಾರೇತ ಆದಧಾಮೀತಿ ಗರ್ಭಿಣ್ಯೇವ ಭವತಿ(11)**

ತಾ : ಆನಂತರ ಆ ಪುರುಷನು ತನ್ನ ಸ್ತ್ರೀಯನ್ನು ಗರ್ಭಧಾರಣೆ ಮಾಡಲು ಕೋರಿದಲ್ಲಿ, ಆ ಸ್ತ್ರೀಯಲ್ಲಿ ಜನನೇಂದ್ರಿಯವನ್ನಿಟ್ಟು ಮುಖದಲ್ಲಿ ಮುಖವನ್ನಿಟ್ಟು, ಅಪಾನವನ್ನು ಬಿಟ್ಟು ನಿಟ್ಟುಸಿರಿನೊಂದಿಗೆ ಇಂದ್ರಿಯದ ಮೂಲಕ, ನಿನ್ನ ರೇತಸ್ಸಿನೊಂದಿಗೆ ರೇತಸ್ಸನ್ನು ಇಡುತ್ತಿದ್ದೇನೆಂದು ಮಂತ್ರವನ್ನು ಜಪಿಸಬೇಕು. ಆ ಸ್ತ್ರೀ ಗರ್ಭವನ್ನು ಧರಿಸುವಂತಹವಳಾಗುತ್ತಾಳೆ.

**ಮಂ.ಶ್ಲೋ॥ ಅಥ ಯಸ್ಯ ಜಾಯಾಯೈ ಜಾರಸ್ಸ್ಯಾತ್ತಂ ಚೇದ್ದ್ವಿಷ್ಯಾ ದಾಮಪಾತ್ರೇಽಗ್ನಿಮುಪಸಮಾ-ಧಾಯ ಪ್ರತಿಲೋಮಗ್ಂ ಶರಬರ್ಹಿಸ್ತೀರ್ತ್ವಾ ತಸ್ಮಿನ್ನೇತಾಶ್ಶರಭೃಷ್ಟೀಃ ಪ್ರತಿಲೋಮಾಸ್ಸರ್ಪಿಷಾಕ್ತಾ ಜುಹುಯಾನ್ಮಮ ಸಮಿದ್ಧೇ ಹೋಷೀಃ ಪ್ರಾಣಾಪಾನೌ ತ ಆದದೇಽಸಾವಿತಿ। ಮಮ ಸಮಿದ್ಧೇಹೋಷಿಃ ಪುತ್ರಪಶೂಗ್ಂ ಸ್ತ ಆದದೇಽಸಾವಿತಿ। ಮಮ ಸಮಿದ್ಧೇಹೋಷೀರಿಷ್ಟಾ ಸುಕೃತೇ ತ ಆದದೇಽಸಾವಿತಿ। ಮಮ ಸಮಿದ್ಧೇಽಹೋಷೀರಾಶಾ ಪರಾಕಾಶೌ ತ ಆದದೇಽಸಾವಿತಿ ಸ ವಾ ಏಷ ನಿರಿನ್ದ್ರಿಯೋ ವಿಸುಕೃತೋಽಸ್ಮಾಲ್ಲೋಕಾತ್ಪ್ರೈತಿ ಯಮೇವಂ ವಿದ್ವಾನ್ ಬ್ರಾಹ್ಮಣಶ್ಶಪತಿ ತಸ್ಮಾದೇವಂ ವಿಚ್ಛ್ರೋತ್ರಿಯಸ್ಯ ದಾರೇಣ ನೋಪಹಾಸ-ಮಿಚ್ಛೇದುತ ಹ್ಯೇವಂ ವಿತ್ಪರೋ ಭವತಿ (12)**

ತಾ : ಆಮೇಲೆ ಆ ಗೃಹಸ್ಥನು ಪುರುಷನ ಪತ್ನಿಗೆ ಜಾರನ್ಯಾರಾದರೂ ಇದ್ದಲ್ಲಿ, ದ್ವೇಷದಿಂದ ಆ ಜಾರ ಪುರುಷನನ್ನು ಶಿಕ್ಷಿಸುವ ಪದ್ಧತಿಯನ್ನು ವಿವರಿಸುತ್ತಿದ್ದಾನೆ. ಪಂಚ ಭೂ ಸಂಸ್ಕಾರಯುತವಾಗಿ ಒಂದು ಮಣ್ಣಿನ ಪಾತ್ರೆಯಲ್ಲಿ ಅಗ್ನಿಯನ್ನು ಸ್ಥಾಪಿಸಿ ವಿಪರೀತ ಪದ್ಧತಿಯಲ್ಲಿ ಅಂದರೆ ದಕ್ಷಿಣಾಗ್ರ-ದಲ್ಲಾಗಲೀ, ಪಶ್ಚಿಮಾಗ್ರದಲ್ಲಾಗಲೀ, ಕಶವೃಂತಾಗಳಿಗೆ, ಬರ್ಹಿಸ್ಸನ್ನು ಹರಡಿ, ಅವುಗಳ ಮೇಲೆ ಬಾಣಾಕಾರವಾಗಿ ಇರುವ ಕುಶಾಗ್ರಗಳನ್ನು ತುಪ್ಪದಿಂದ ನೆನೆಸಿ, ಅವುಗಳ ಅಗ್ರಭಾಗವನ್ನು ವ್ಯತಿರೇಕ ದಿಶೆಯಲ್ಲಿಟ್ಟು, ಅದಕ್ಕೆ ಮೊದಲೇ ಸಿದ್ಧಪಡಿಸಿರುವ ಅಗ್ನಿಯಲ್ಲಿ ಈ ಕೆಳಗೆ ಹೇಳಿರುವ ಅರ್ಥಬರುವ ಮಂತ್ರಗಳನ್ನು ಪಠಿಸುತ್ತಾ ನಾಲ್ಕು ಆಹುತಿಗಳನ್ನು ಕೊಡಬೇಕು. ಈ ನಾಲ್ಕು ಮಂತ್ರಗಳ ಅರ್ಥ-

ವೇನೆಂದರೆ "ನೀನು ನನ್ನ ಸಂಬಂಧವಾದ ಯೋನಾಗ್ನಿಯಲ್ಲಿ ರೇತಸ್ಸನ್ನಿಟ್ಟಿರುವೆ. ಆದ್ದರಿಂದ ನನಗೆ ಶತ್ರುವಾದೆ. ನಿನ್ನ ಪ್ರಾಣಾಪಾನಗಳನ್ನು ಪಶುಪುತ್ರಾದಿಗಳನ್ನು, ಶೌತ್ರಸ್ಮಾರ್ತ ಕರ್ಮಗಳನ್ನು, ಆಶಾಪರಾಕಾಶಗಳನ್ನು ನಾನು ಗ್ರಹಿಸುತ್ತಿದ್ದೇನೆ" ಎಂದು ಹೇಳಿ ನಾಲ್ಕು ಮಂತ್ರಗಳೊಂದಿಗೆ ಕೊನೆಯಲ್ಲಿ ಶತ್ರುನಾಮವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಉಚ್ಚರಿಸುತ್ತಾ ಹೋಮವನ್ನು ಮಾಡಬೇಕು. ಈ ರೀತಿಯಾಗಿ ವಾಜಪೇಯ ಯಾಗ ಸಂಪತ್ತುಳ್ಳ ಪುರುಷನು ತನ್ನ ಪತ್ನಿಯೊಂದಿಗೆ ಸಂಭೋಗ ಮಾಡಿದ ಶತ್ರುವನ್ನು ಶಪಿಸಿದಲ್ಲಿ, ಆ ಶತ್ರುವಿನ ಇಂದ್ರಿಯವು, ಪುಣ್ಯಕರ್ಮವು ನಶಿಸುತ್ತದೆ. ಮರಣವನ್ನು ಕೂಡಾ ಹೊಂದುವನು. ಶ್ರೋತ್ರಿಯನ ಪತ್ನಿಯೊಂದಿಗೆ ಪರಿಹಾಸವಾಗಲೀ, ಸಂಭೋಗವಾಗಲೀ ಮಾಡಬಾರದು. ಹಾಗೆ ಮಾಡಿದಲ್ಲಿ ಶತ್ರುವಾಗಿ ನಾಶ ಹೊಂದುತ್ತಾನೆ. ಹೀಗೆ ಮಾಡಿದಲ್ಲಿ ಶತ್ರುವು ನಾಶವಾಗುತ್ತಾನೆ. (ಜಾರಪುರುಷನಿಗೆ ಅಭಿಚಾರ ಕರ್ಮವನ್ನು ಕುರಿತು ಇಲ್ಲಿ ಹೇಳಲಾಗಿದೆ.)

**ಮಂ.ಶ್ಲೋ॥ ಅಥ ಯಸ್ಯ ಜಾಯಮಾರ್ತವಂ ವಿನ್ದೇತ್ತ್ರ್ಯಹಂ ಕಗ್ಂಸೇನ ಪಿಬೇದಹತವಾಸಾನ್ಯೈನಾಂ ವೃಷಲೋ ಸ ವೃಷಲ್ಯುಪಹನ್ಯಾತ್ರಿರಾತ್ರಾನ್ತ ಆಪ್ಲುತ್ಯ ವ್ರೀಹೀನವಘಾತಯೇತ್ (13)**

ತಾ: ಆಮೇಲೆ ಋತುಕಾಲವನ್ನು ತಿಳಿಯಪಡಿಸುತ್ತಿದ್ದಾನೆ. ಆತನ ಪತ್ನಿ ಋತುಭಾವವನ್ನು ಹೊಂದಿದಾಗ ಮೂರು ದಿನಗಳ ಕಾಲ ಕಂಚುಪಾತ್ರೆಯಲ್ಲಿ ಜಲಪಾನ ಮಾಡಬೇಕು. ರಜೋದೂಷಿತಳಾದ ವಸ್ತ್ರವನ್ನು ಧರಿಸುವುದರಿಂದ ಈ ಸ್ತ್ರೀ ಮಲಿನಳು, ಈ ಸ್ತ್ರೀಯನ್ನು ಮುಟ್ಟಬಾರದು. ಮೂರು ರಾತ್ರಿಗಳು ಕಳೆದ ಮೇಲೆ ಸ್ನಾನ ಮಾಡಿದ ಮೇಲೆ ರಜೋದೂಷಿತವಲ್ಲದ ವಸ್ತ್ರವನ್ನು ಹೊಂದಿದವಳಾಗುತ್ತಾಳೆ. ಆಮೇಲೆ ಸ್ನಾನ ಮಾಡಿದ ಆ ಸ್ತ್ರೀಯನ್ನು ಧಾನ್ಯವನ್ನು ಕುಟ್ಟಲು ಬಳಸಿಕೊಳ್ಳಬೇಕು.

**ಮಂ.ಶ್ಲೋ॥ ಸ ಯ ಇಚ್ಛೇತ್ಪುತ್ರೋ ಮೇ ಶುಕ್ಲೋ ಜಾಯೇತ ವೇದಮನುಬ್ರುವೀತ ಸರ್ವಮಾಯುರಿಯಾದಿತಿ ಕ್ಷೀರೌದನಂ ಪಾಚಯಿತ್ವಾ ಸರ್ಪಿಷ್ಮನ್ತಮಶ್ನೀಯಾತಾಮೀಶ್ವರೌ ಜನಯಿತವೈ (14)**

ತಾ : ಆ ಪುರುಷನು ತನಗೆ ಶುದ್ಧ(ಬೆಳ್ಳಗಿನ) ಮಗನು ಹುಟ್ಟಲಿ! ಎಂದು ವೇದವನ್ನು ಅನುಸರಿಸಿ ಹೇಳುವಂತಾಗಲಿ, ಪೂರ್ಣಾಯುಸ್ಸನ್ನು ಹೊಂದಲಿ-ಎಂದು ಬಯಸಿದ ಪಕ್ಷದಲ್ಲಿ, ಆ ಅಕ್ಕಿಯಲ್ಲಿ ಕ್ಷೀರಾನ್ನವನ್ನು ಬೇಯಿಸಿ ಸ್ತ್ರೀಪುರುಷರಿಬ್ಬರೂ ಭಕ್ಷಿಸಬೇಕು. ಈ ರೀತಿಯಾಗಿ ಭಕ್ಷಿಸಿದವರು, ಅಂತಹ ಪುತ್ರನನ್ನು ಹೊಂದಲು ಸಮರ್ಥರಾಗುವರು.

**ಮಂ.ಶ್ಲೋ॥ ಅಥ ಯ ಇಚ್ಛೇತ್ಪುತ್ರೋ ಮೇ ಕಪಿಲಃ ಪಿಙ್ಗಲೋ ಜಾಯೇತ ದ್ವೌ ವೇದಾವನುಬ್ರುವೀತ ಸರ್ವಮಾಯುರಿಯಾದಿತಿ ದಧ್ಯೋದನಂ ಪಾಚಯಿತ್ವಾ ಸರ್ಪಿಷ್ಮನ್ತಮಶ್ನೀಯಾತಾಮೀಶ್ವರೌ ಜನಯಿತ ವೈ (15)**

ತಾ : ಕಪ್ಪು ಅಥವಾ ಹಳದಿ ಮಗನನ್ನು ಪಡೆಯುವಂತಾಗಲಿ, ಎರಡು ವೇದಗಳನ್ನು ಅನುಸರಿಸಿ ಹೇಳುವಂತಾಗಲಿ, ಪೂರ್ಣಾಯುಸ್ಸನ್ನು ಹೊಂದುವಂತಾಗಲಿ ಎಂದು ಕೋರಿದಲ್ಲಿ, ಆ ದಂಪತಿಗಳು (ಮೊಸರನ್ನ) ದಧ್ಯೋದನವನ್ನು ತುಪ್ಪದೊಂದಿಗೆ ಬೆರೆಸಿ ತಿನ್ನಬೇಕು. ಆ ರೀತಿಯಾಗಿ ಭಕ್ಷಿಸಿದಲ್ಲಿ ಅಂತಹ ಮಗನನ್ನು ಹೊಂದಲು ಸಮರ್ಥರಾಗುವರು.

**ಮಂ.ಶ್ಲೋ॥ ಅಥ ಯ ಇಚ್ಛೇತ್ಪುತ್ರೋ ಮೇ ಶ್ಯಾಮೋ ಲೋಹಿತಾಕ್ಷೋ ಜಾಯೇತ ತ್ರೀನ್ವೇದಾನನು-ಬ್ರುವೀತ ಸರ್ವಮಾಯುರಿಯಾದಿತ್ಯುದೋದನಂ ಪಾಚಯಿತ್ವಾ ಸರ್ಪಿಷ್ಮನ್ತಮಶ್ನೀಯಾತಾ-ಮೀಶ್ವರೌ ಜನಯಿತ ವೈ (16)**

ತಾ : ಕೆಂಪುಗಣ್ಣಿನ ಶ್ಯಾಮವರ್ಣದ ಮಗನು ಜನಿಸಲು, ಮೂರು ವೇದಗಳನ್ನು ಅಧ್ಯಯನ ಮಾಡಿ ಪೂರ್ಣಾಯುವನ್ನು ಪಡೆಯುವಂತಾಗಲಿ ಎಂದು ಕೋರಿದ ದಂಪತಿಗಳು, ನೀರಿನಲ್ಲಿ ಅಕ್ಕಿಯನ್ನು ಬೇಯಿಸಿ, ಆ ಅನ್ನವನ್ನು ತುಪ್ಪದೊಂದಿಗೆ ಭಕ್ಷಿಸಬೇಕು. ಆ ರೀತಿಯಾಗಿ ಮಾಡಿದಲ್ಲಿ ತಾವು ಬಯಸಿದಂತಹ ಮಗ ಹುಟ್ಟುವನು.

**ಮಂ.ಶ್ಲೋ॥ ಅಥ ಯ ಇಚ್ಛೇದ್ದುಹಿತಾ ಮೇ ಪಣ್ಡಿತಾ ಜಾಯೇತ ಸರ್ವಮಾಯುರಿಯಾದಿತಿ ತಿಲೌದನಂ ಪಾಚಯಿತ್ವಾ ಸರ್ಪಿಷ್ಮನ್ತಮಶ್ನೀಯಾತಾಮೀಶ್ವರೌ ಜನಯಿತ ವೈ (17)**

ತಾ : ಪೂರ್ಣಾಯುಸ್ಸುಳ್ಳದ್ದಾಗಿಯೂ, ಪಾಂಡಿತ್ಯವನ್ನೊಳಗೊಂಡಿರುವಂತಹ ಮಗಳು ನನಗೆ ಹುಟ್ಟಬೇಕೆಂದು ಕೋರಿದಂತಹ ದಂಪತಿಗಳು, ಎಳ್ಳಿನ ಹುಗ್ಗಿಯನ್ನು ಮಾಡಿ ತುಪ್ಪದಲ್ಲಿ ಕಲಿಸಿ ಭಕ್ಷಿಸಬೇಕು. ಆ ದಂಪತಿಗಳು ಅಂತಹ ಹೆಣ್ಣು ಮಗುವನ್ನು ಪಡೆಯಲು ಸಮರ್ಥರಾಗುವರು.

**ಮಂ.ಶ್ಲೋ॥ ಅಥ ಯ ಇಚ್ಛೇತ್ಪುತ್ರೋ ಮೇ ಪಣ್ಡಿತೋ ವಿಗೀತಸ್ಸಮಿತಿಂಗಮಃ ಶುಶ್ರೂಷಿತಾಂ ವಾಚಂ ಭಾಷಿತಾ ಜಾಯೇತ ಸರ್ವಾನ್ವೇದಾನನುಬ್ರುವೀತ ಸರ್ವಮಾಯುರಿಯಾದಿತಿ ಮಾಗ್ಂಸಾದನಂ ಪಾಚಯಿತ್ವಾ ಸರ್ಪಿಷ್ಮನ್ತಮಶ್ನೀಯಾತಾಮೀಶ್ವರೌ ಜನಯಿತ ವಾ ಔಕ್ಷೇಣವಾಽಽರ್ಷಭೇಣ ವಾ (18)**

ತಾ : ಪಂಡಿತನಾದಂತಹವನು, ಪ್ರಸಿದ್ಧನಾದವನು, ಸಭೆಯಲ್ಲಿ ಮನೋಹರವಾದ ವಾಕ್ಯಗಳನ್ನು ಆಡುವಂತಹ ಕುಮಾರನು ಜನಿಸಲಿ ಸಮಸ್ತವೇದಗಳನ್ನು ಅನುಸರಿಸಿ ಅಧ್ಯಯನ ಮಾಡು-ವಂತಾಗಲಿ. ಸಂಪೂರ್ಣಾಯುಸ್ಸನ್ನು ಹೊಂದುವಂತಾಗಲಿ ಎಂದು ಆ ದಂಪತಿಗಳು ಕೋರಿದಲ್ಲಿ. ದಷ್ಟಪುಷ್ಟವಾದ ಎತ್ತಿನ ಮಾಂಸದೊಂದಿಗೆ ಮಾಂಸಾನ್ನವನ್ನು ಬೇಯಿಸಿ, ತುಪ್ಪವನ್ನು ಬೆರೆಸಿ ಭಕ್ಷಿಸಬೇಕು. ಆ ಸ್ತ್ರೀ ಪುರುಷರು ಅಂತಹ ಮಗನನ್ನು ಹಡೆಯಲು ಸಮರ್ಥ-ರಾಗುವರು. (ಈ ಮಂತ್ರವು ಮಾಂಸಾಹಾರವನ್ನು ಭುಜಿಸುವವರಿಗೆ ಹೇಳಿರುವಂತಹುದು.)

**ಮಂ.ಶ್ಲೋ॥ ಅಥಾಭಿಪ್ರಾತರೇವ ಸ್ಥಾಲೀಪಾಕಾವೃತಾಜ್ಯಂ ಚೇಷ್ಟಿತ್ವಾ ಸ್ಥಾಲೀಪಾಕಸ್ಯೋಪಘಾತಂ ಜುಹೋ-ತ್ಯಗ್ನಯೇ ಸ್ವಾಹಾ ಅನುಮತಯೇ ಸ್ವಾಹಾ ದೇವಾಯ ಸವಿತ್ರೇ ಸತ್ಯಪ್ರಸವಾಯ ಸ್ವಾಹೇತಿ ಹುತ್ವೋದ್ಧೃತ್ಯ ಪ್ರಾಶ್ನಾತಿ ಪ್ರಾಶ್ಯೇತರಸ್ಯಾಃ ಪ್ರಯಚ್ಛತಿ ಪ್ರಕ್ಷಾಳ್ಯ ಪಾಣೀ ಉದಪಾತ್ರಂ ಪೂರಯಿತ್ವಾ ತೇನೈನಾಂ ತ್ರಿರಭ್ಯುಕ್ಷತಿ ಉತ್ತಿಷ್ಠಾತೋ ವಿಶ್ವಾವಸೋಽನ್ಯಾಮಿಚ್ಛ ಪ್ರಪೂರ್ವ್ಯಾಂ ಸಂಜಾಯಾಂ ಪತ್ಯಾ ಸಹೇತಿ (19)**

ತಾ : ಆನಂತರ ನಾಲ್ಕನೆಯ ದಿನ ನಿತ್ಯಕೃತ್ಯಗಳನ್ನು ಮುಗಿಸಿ, ಉದಯವೇ ಕುಟ್ಟಿ ಇಟ್ಟು ಕೊಂಡಂತಹ ಅಕ್ಕಿಯೊಂದಿಗೆ ಸ್ಥಾಲೀಪಾಕ ವಿಧಾನದೊಂದಿಗೆ ಘೃತ ಸಂಸ್ಕಾರವನ್ನು ಮಾಡಬೇಕು.

ಬಟ್ಟಲಿನಿಂದ ಸ್ವಲ್ಪ ಸ್ವಲ್ಪವಾಗಿ ಅನ್ನವನ್ನು ತೆಗೆದುಕೊಂಡು "ಅಗ್ನಯೇ ಸ್ವಾಹಾ, ಅನುಮತಯೇ ಸ್ವಾಹಾ, ದೇವಾಯ ಸವಿತ್ರೇ ಸತ್ಯಪ್ರಸವಾಯ ಸ್ವಾಹಾ" ಮೊದಲಾದ ಮಂತ್ರಗಳೊಂದಿಗೆ ಮೂರು ಪ್ರಧಾನ ಆಹುತಿಗಳನ್ನು ಕೊಡಬೇಕು. ಆಹುತಿಗಳನ್ನು ಸಮರ್ಪಿಸಿ, ಮಿಕ್ಕಿರುವ ಶೇಷಾನ್ನವನ್ನು (ಚರುವನ್ನು) ಮೊದಲು ಪತಿ ಭುಜಿಸಬೇಕು. ಉಳಿದ ಉಚ್ಛಿಷ್ಠಾನ್ನವನ್ನು ತನ್ನ ಪತ್ನಿಗೆ ಕೊಡುತ್ತಾನೆ. ಕೈಗಳನ್ನು ತೊಳೆದುಕೊಂಡು ಉದಕ ಪಾತ್ರೆಯನ್ನು ತುಂಬಿಸಿ, ಆ ಉದಕದಿಂದ ಭಾರ್ಯೆ (ಪತ್ನಿ)ಯನ್ನು "ಉತ್ತಿಷ್ಠಾತೋವಿಶ್ವಾವಸೋ" ಎನ್ನುವ ಮಂತ್ರವನ್ನು ಹೇಳಿ ಮೂರು ಬಾರಿ ಪ್ರೋಕ್ಷಿಸುವನು. ಆ ಮಂತ್ರಾರ್ಥವೇನೆಂದರೆ, ಓ ವಿಶ್ವವಸು ಎನ್ನುವ ಗಂಧರ್ವನೇ! ನೀನು ಈ ನನ್ನ ಪತ್ನಿಯ ಬಳಿಯಿಂದ ಎದ್ದು ಹೋಗು. ವಯೋವಂತಳಾಗಿ ತನ್ನ ಗಂಡನೊಂದಿಗೆ ಕ್ರೀಡಿಸುವಂತಹ ಹೆಂಡತಿಯನ್ನು (ಪತ್ನಿಯನ್ನು) ಕೋರುತ್ತಿದ್ದೇನೆ? ಎಂದು.

**ಮಂ.ಶ್ಲೋ॥ ಅಥೈನಾಮಭಿಪದ್ಯತೇ ಅಮೋಽಹಮಸ್ಮಿ ಸಾ ತ್ವಗ್ಂ ಸಾ ತ್ವಮಸ್ಯಮೋಽಹಂ ಸಾಮಾಹ-**
**ಮಸ್ಮಿ ಋಕ್ತ್ವಂ ದ್ಯೌರಹಂ ಪೃಥಿವೀ ತ್ವಂ ತಾವೇಹಿ ಸಗ್ಂರಭಾವಹೈ ಸಹ ರೇತೋ**
**ದಧಾವಹೈ ಪುಗ್ಂಸೇ ಪುತ್ರಾಯ ವಿತ್ತಯ ಇತಿ** (20)

ತಾ : ಆನಂತರ ಗಂಡನಾದವನು ತನ್ನ ಅಭಿಮತದ ಪ್ರಕಾರ ಪತ್ನಿಯೊಡನೆ ಕ್ಷೀರಾನ್ನವನ್ನು ಭುಜಿಸಿ ಶಯನಿಸಬೇಕು. ಆ ಸಮಯದಲ್ಲಿ "ಅಮೋಽಹಮಸ್ಮಿ" ಮುಂತಾದ ಮಂತ್ರಗಳನ್ನು ಪಠಿಸುತ್ತಾ ಪತ್ನಿಯನ್ನು ಆಲಂಗಿಸಿಕೊಳ್ಳಬೇಕು. ಆ ಮಂತ್ರಾರ್ಥವು ಹೀಗಿದೆ: "ಓ ದೇವಿ ನಾನು ಪ್ರಾಣ, ನೀನು ವಾಕ್ಕು, ಪ್ರಾಣಕ್ಕೆ ವಾಕ್ಕು ಸ್ವಾಧೀನವಾದಂತೆ ನೀನು ನನಗೆ ಅಧೀನವಾಗಿರುವೆ. ನಾನು ಸಾಮವೇದ, ನೀನು ಋಗ್ವೇದ, ಸಾಮವೇದಕ್ಕೆ ಋಗ್ವೇದವು ಆಧಾರವಾದಂತೆ ನನಗೆ ನೀನು ಆಧಾರವಾಗಿರುವೆ. ನಾನು ಅಂತರಿಕ್ಷ, ನೀನು ಭೂಮಿ. ಭೂಮ್ಯಂತರಿಕ್ಷಗಳು ಲೋಕಕ್ಕೆ ತಂದೆತಾಯಿಗಳಾದಂತೆ ನಾವು ಪುತ್ರರಿಗೆ ತಂದೆತಾಯಿಗಳಾಗಿರೋಣ. ಆದ್ದರಿಂದ ನೀನು ಬಾ. ನಾವಿಬ್ಬರೂ ಕೂಡಿ ಉತ್ತಮ ಪುತ್ರೋತ್ಪತ್ತಿಗಾಗಿ ಪ್ರಯತ್ನ ಮಾಡೋಣ. ರೇತಸ್ಸನ್ನು ಧರಿಸೋಣ" (ಎಂದು ಹೇಳಿ ಆ ಪುರುಷನು ಪತ್ನಿಯನ್ನು ಆಲಂಗಿಸಿಕೊಳ್ಳುತ್ತಾನೆ.)

**ಮಂ.ಶ್ಲೋ॥ ಅಥಾಸ್ಯಾ ಊರೂ ವಿಹಾಪಯತಿ ವಿಜಿಹೀಥಾಂ ದ್ಯಾವಾಪೃಥಿವೀ ಇತಿ ತಸ್ಯಾಮರ್ಥಂ**
**ನಿಷ್ಠಾಯ ಮುಖೇನ ಮುಖಗ್ಂ ಸನ್ಧಾಯ ತ್ರಿರೇನಾಮನುಲೋಮಾಮನುಮಾರ್ಷ್ಟಿ**
**ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಗ್ಂಶತುಃ ಅಸಿಞ್ಚತು ಪ್ರಜಾಪತಿರ್ಧಾತಾ**
**ಗರ್ಭಂ ದಧಾತು ತೇ । ಗರ್ಭಂ ದೇಹಿ ಸಿನೀವಾಲಿ ಗರ್ಭಂ ದೇಹಿ ಪೃಥುಷ್ಟುಕೇ॥ ಗರ್ಭಂ ತೇ**
**ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜೌ (21)**

ತಾ : ಆನಂತರ ಆ ಪುರುಷನು "ಓ ಭೂಮ್ಯಂತರಿಕ್ಷಗಳೇ, ವಿನಿಯೋಗವನ್ನು ಹೊಂದಲೆಂದು, ಈ ಸ್ತ್ರೀಯ ತೊಡೆಗಳನ್ನು ಬೇರ್ಪಡಿಸುತ್ತಿದ್ದಾನೆ. ಆ ಸ್ತ್ರೀಯಲ್ಲಿ ಜನನೇಂದ್ರಿಯವನ್ನಿಟ್ಟು, ತನ್ನ ಮುಖವನ್ನು ಪತ್ನಿಯ ಮುಖದಲ್ಲಿಟ್ಟು ಮೂರು ಬಾರಿ ಹೊರಳಾಡಿ (ಶಿರಸ್ಸು ಮೊದಲ್ಗೊಂಡು) ವಿಷ್ಣುರ್ಯೋನಿ ಎನ್ನುವ ಮಂತ್ರವನ್ನು ಹೇಳುತ್ತಾ ಅನುಸರಿಸಿ ಸ್ಪರ್ಶಿಸುತ್ತಾನೆ. ವಿಷ್ಣು ಭಗವಾನನು ನಿನಗೆ ಸಂತಾನೋತ್ಪಾದನೆಗೆ ಸಮರ್ಥವಾದ ಭಗವನ್ನು ಒದಗಿಸಲಿ – ತ್ವಷ್ಟೃಯೆನ್ನುವ ಸೂರ್ಯನು,

ರೂಪಗಳನ್ನು ಮಾಡುವಂತಾಗಲಿ! ಪ್ರಜಾಪತಿ ಆ ರೂಪದೊಂದಿಗೆ ನಿನ್ನಲ್ಲಿ ರೇತಸ್ಸನ್ನು ಇಡುವಂತಾಗಲಿ! ಸೂತ್ರಾತ್ಮನು ನಿನ್ನ ಗರ್ಭವನ್ನು ಕಾಪಾಡುವಂತಾಗಲಿ. ದರ್ಶನಾರ್ಹವಾದ ಓ ದೇವತೆಯೇ! ಗರ್ಭವನ್ನು ಧರಿಸುವಂತಹಳಾಗು! ಸ್ತೋತ್ರ ರೂಪವಾದ ಓ ದೇವತೆಯೇ! ಗರ್ಭವನ್ನು ಧರಿಸು! ಅಶ್ವಿನೀ ಪುತ್ರರಾದ ಅಶ್ವಿನೀ ದೇವತೆಗಳು ನಿನಗೆ ಗರ್ಭವನ್ನು ಧರಿಸುವಂತೆ ಮಾಡಲಿ.

**ಮಂ.ಶ್ಲೋ॥ ಹಿರಣ್ಮಯೀ ಅರಣೀ ಯಾಭ್ಯಾಂ ನಿರ್ಮನ್ಥತಾಮಶ್ವಿನೌ। ತಂ ತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತಯೇ। ಯಥಾಽಗ್ನಿ ಗರ್ಭಾ ಪೃಥಿವೀ ಯಥಾ ದ್ಯೌರಿನ್ದ್ರೇಣ ಗರ್ಭಿಣೀ ವಾಯುರ್ದಿಶಾಂ ಯಥಾ ಗರ್ಭ ಏವಂ ಗರ್ಭಂ ದಧಾಮಿ ತೇಽಸಾವಿತಿ (22)**

ತಾ : ಅರಣಿಗಳು ತೇಜೋ ರೂಪವಾದವುಗಳು. ಯಾವ ಅರಣಿಗಳ ಮೂಲಕ ಅಶ್ವಿನೀ ದೇವತೆಗಳು ಮಥಿಸಲ್ಪಟ್ಟರೋ, ಅಂತಹ ನಿನ್ನ ಗರ್ಭವನ್ನು ಹತ್ತನೆಯ ತಿಂಗಳಲ್ಲಿ ಪ್ರಸವಿಸಲು ನಿನ್ನಲ್ಲಿ ಹೋಮ ಮಾಡುತ್ತಿದ್ದೇನೆ. ಅಗ್ನಿಯನ್ನು ಭೂಮಿ ಧರಿಸಿದ ರೀತಿಯಾಗಿ ದೇವೇಂದ್ರನ ಸ್ವರ್ಗವನ್ನು ಗರ್ಭದಲ್ಲಿ ಧರಿಸಿದ ಹಾಗೆ ದಿಕ್ಕುಗಳು ವಾಯುವನ್ನು ಗರ್ಭದಲ್ಲಿ ಧರಿಸಿದ ಹಾಗೆ, ನಿನ್ನ ಗರ್ಭದಲ್ಲಿ ಈ ಪುತ್ರನನ್ನು ಆದಾನ ಮಾಡುತ್ತಿದ್ದೇನೆ. (ಸ್ತ್ರೀಯ ಹೆಸರನ್ನುಚ್ಚರಿಸಿ ಆ ಪುರುಷನು ತನ್ನ ರೇತಸ್ಸನ್ನು ಸ್ತ್ರೀಯಲ್ಲಿಡುತ್ತಾನೆ.)

**ಮಂ.ಶ್ಲೋ॥ ಸೋಷ್ಯನ್ತೀಮದ್ಭಿರಭ್ಯುಕ್ಷತಿ। ಯಥಾ ವಾಯುಃ ಪುಷ್ಕರಿಣೀಗ್ಂ ಸಮಿಂಗಯತಿ ಸರ್ವತಃ। ಏವಾ ತೇ ಗರ್ಭ ಏಜತು ಸಹಾವೈತು ಜರಾಯುಣಾ ಇನ್ದ್ರಸ್ಯಾಯಂ ವ್ರಜಃ ಕೃತಃ ಸಾರ್ಗಳಸ್ಸ ಪರಿಶ್ರಯಃ। ತಮಿನ್ದ್ರ ನಿರ್ಜಹಿ ಗರ್ಭೇಣ ಸಾವರಾಗ್ಂ ಸಹೇತಿ (23)**

ತಾ : ಪತಿಯಾದ ಪುರುಷನು ಪ್ರಸವ ಸಮಯದಲ್ಲಿ ಸ್ತ್ರೀಯನ್ನು "ಯಥಾವಾಯುಃ ಪುಷ್ಕರಿಣೀಂ" ಎನ್ನುವ ಮಂತ್ರವನ್ನು ಪಠಿಸುತ್ತಾ ಜಲದಿಂದ ಪ್ರೋಕ್ಷಿಸುತ್ತಾನೆ. ಈ ಮಂತ್ರಕ್ಕೆ ಅರ್ಥ: ವಾಯುವು, ಸ್ವರೂಪಕ್ಕೆ ಹಾನಿ ಮಾಡದೆ ಹೇಗೆ ತಟಾಕ (ಕೊಳ)ವೆಲ್ಲವನ್ನೂ ಚಲಿಸುವಂತೆ ಮಾಡುವನೋ, ಅದೇ ರೀತಿಯಲ್ಲಿ ಗರ್ಭವು ಚಲಿಸಿ, ಮಾಸಿನೊಂದಿಗೆ ಸಹ ಹೊರಕ್ಕೆ ಬರುವಂತಾಗಲಿ! ಪ್ರಾಣಮಾರ್ಗವು ಗರ್ಭಾದಾನ ಕಾಲದಲ್ಲಿ ಮಾಸಿನೊಂದಿಗೆ ಕೂಡಿಕೊಂಡಿರುತ್ತದೆ. ಆ ಮಾರ್ಗದಿಂದ, ಓ ಪ್ರಾಣವೇ! ನೀನು ಗರ್ಭದೊಂದಿಗೆ ಸಹಾ ಹೊರಕ್ಕೆ ಬಂದುಬಿಡು! ಈ ಮಂತ್ರೋಚ್ಚಾರಣೆ ಮಾಡುತ್ತಾ ಪ್ರಸವಾಭಿಮುಖವಾದ ಸ್ತ್ರೀಯನ್ನು ಜಲದಿಂದ ಪ್ರೋಕ್ಷಿಸಬೇಕು.

**ಮಂ.ಶ್ಲೋ॥ ಜಾತೇಽಗ್ನಿಮುಪಸಮಾಧಾಯಾಙ್ಕ ಆಧಾಯ ಕಗ್ಂಸೇ ಪೃಷದಾಜ್ಯಗ್ಂ ಸನ್ನೀಯ ಪೃಷದಾಜ್ಯಸ್ಯೋಪಘಾತಂ ಜುಹೋತಿ। ಅಸ್ಮಿನ್ ಸಹಸ್ರಂ ಪುಷ್ಯಾಸಮೇಧಮಾನಃ ಸ್ವೇ-ಗೃಹೇ। ಅಸ್ಯಾಪಸದ್ಯಾಂ ಮಾಛೇತ್ಸೀತ್ ಪ್ರಜಯಾ ಚ ಪಶುಭಿಶ್ಚ ಸ್ವಾಹಾ। ಮಯಿ ಪ್ರಾಣಾಗ್ಂ ಸ್ತ್ವಯಿ ಮನಸಾ ಜುಹೋಮಿ ಸ್ವಾಹಾ। ಯತ್ಕರ್ಮಣಾತ್ಯರೀರಿಚಂ ಯದ್ವಾ ನ್ಯೂನ ಮಿಹಾಕರಂ। ಅಗ್ನಿಷ್ಟತ್ಸ್ವಿಷ್ಟಕೃದ್ವಿದ್ವಾಂ ತ್ಸ್ವಿಷ್ಟಗ್ಂ ಸುಹುತಂ ಕರೋತು ನಸ್ಸ್ವಾಹೇತಿ (24)**

ತಾ : ಪತಿಯಾದ ಆ ಪುರುಷನು ಜಾತಕರ್ಮದಲ್ಲಿ ಅಗ್ನಿಯನ್ನು ಬೆಳಗಿಸಿ, ಬಟ್ಟಲಲ್ಲಿ

ವೃಷದಾಜ್ಯವನ್ನು ಮೊಸರಿನಲ್ಲಿ ತುಪ್ಪವನ್ನು ಬೆರೆಸಿರುವುದನ್ನು ತೊಡೆಯ ಮೇಲಿಟ್ಟುಕೊಂಡು ವೃಷದವೆನ್ನುವ ಹೆಸರುಳ್ಳ ಆಜ್ಯಕ್ಕೆ ಹೋಮಾರ್ಹವಾದ ಸಂಸ್ಕಾರವನ್ನು ಮಾಡುವನು. ಈ ನನ್ನ ಗೃಹದಲ್ಲಿ ನಾನೇ ಪುತ್ರರೂಪದೊಂದಿಗೆ ವೃದ್ಧಿ ಹೊಂದಿದವನಾಗಿ, ಸಾವಿರಾರು ಮನುಷ್ಯರನ್ನು ಪೋಷಿಸುವಂತಾಗಲಿ! ಈ ನನ್ನ ಪುತ್ರನ ವಂಶ ಪರಂಪರೆಯಲ್ಲಿ, ಸಂತಾನದಿಂದ, ಪಶುಗಳಿಂದ, ಸಂಪತ್ತುಗಳೆಲ್ಲವೂ ನಿರಂತರವಾಗಿರುವಂತಾಗಲಿ! (ಸ್ವಾಹಾ= ಇದು ಹೋಮವನ್ನು ಸೂಚಿಸುತ್ತದೆ.) ನನ್ನಲ್ಲಿನ ಪ್ರಾಣಗಳನ್ನು, ನಿನ್ನಲ್ಲಿ ಮನಸ್ಸಿನೊಂದಿಗೆ ಹೋಮ ಮಾಡುತ್ತಿದ್ದೇನೆ. (ಸ್ವಾಹಾ) ಈ ಕರ್ಮದಲ್ಲಿ ನಾನು ಅತಿಕ್ರಮಿಸಿ ಮಾಡಿದುದನ್ನು, ಸ್ವಲ್ಪವಾಗಿ ಮಾಡಿದುದನ್ನು ವಿದ್ವಾಂಸನಾದ ಅಗ್ನಿಪ್ರಿಯವನ್ನು ಮಾಡುವಂತಹವನಾಗಿ ಆಶೀರ್ವದಿಸುವಂತಾಗಲಿ.

**ಮಂ.ಶ್ಲೋ॥ ಅಥಾಸ್ಯ ದಕ್ಷಿಣಂ ಕರ್ಣಮಭಿನಿಧಾಯ ವಾಗ್ವಾಗಿತಿ ತ್ರಿಃ ಅಥ ದಧಿ ಮಧು ಘೃತಗ್ಂ ಸನ್ನೀಯಾನನ್ತರ್ಹಿತೇನ ಜಾತರೂಪೇಣ ಪ್ರಾಶಯತಿಃ ಭೂಸ್ತೇ ದಧಾಮಿ। ಭುವಸ್ತೇ ದಧಾಮಿ। ಸುವಸ್ತೇ ದಧಾಮಿ। ಭೂರ್ಭುವಸ್ಸುವಸ್ಸರ್ವಂ ತ್ವಯಿ ದಧಾಮೀತಿ (25)**

ತಾ : ಆಮೇಲೆ ಆ ಪುರುಷನು ಈ ಪುತ್ರನ ಬಲಗಿವಿಯ ಬಳಿ ಮುಖವನ್ನಿಟ್ಟು ವಾಕ್, ವಾಕ್ ವಾಕ್ ಎಂದು ಮೂರು ಬಾರಿ ಜಪಿಸಬೇಕು. ಆನಂತರ ಮೊಸರು, ಜೇನುತುಪ್ಪ, ತುಪ್ಪವನ್ನು ಬೆರೆಸಿ ಚಿನ್ನದ ಸೌಟಿನಲ್ಲಿ (ಚಮಚೆ) ಕುಮಾರನಿಗೆ ತಿನ್ನಿಸುವನು. ಭೂಃ ಎನ್ನುವ ವ್ಯಾಹುತಿಯನ್ನು ಹೇಳುತ್ತಾ, ಭುವಃ ಎನ್ನುವ ವ್ಯಾಹೃತಿಯನ್ನು ಉಚ್ಚರಿಸುತ್ತಾ, ಸುವಃ ಎನ್ನುವ ವ್ಯಾಹೃತಿಯನ್ನು ಹೇಳುತ್ತಾ ನಿನ್ನಲ್ಲಿಡುತ್ತಿದ್ದೇನೆ. ಭೂರ್ಭುವಸ್ಸುವಃ ಎನ್ನುವ ವ್ಯಾಹೃತಿಗಳು ಮೂರನ್ನೂ ಹೇಳುತ್ತಾ ಸಮಸ್ತವನ್ನೂ ನಿನ್ನಲ್ಲಿಡುತ್ತಿದ್ದೇನೆ ಎಂದು ಹೇಳಿ, ಪುತ್ರನಿಗೆ ತಿನ್ನಿಸುವನು.

**ಮಂ.ಶ್ಲೋ॥ ಅಥಾಸ್ಯ ನಾಮ ಕರೋತಿ ವೇದೋಽಸೀತಿ ತದಸ್ಯ ತದ್ಗುಹ್ಯಮೇವ ನಾಮ ಭವತಿ (26)**

ತಾ : ಆಮೇಲೆ ಪುರುಷನು ಈ ಪುತ್ರನಿಗೆ ವೇದವೆಂದು ನಾಮಕರಣ ಮಾಡುವನು. ಈ ಪುತ್ರನಿಗೆ ಇಟ್ಟ ಆ ವೇದವೆಂಬ ಹೆಸರು ಅತಿಹೆಚ್ಚು ರಹಸ್ಯವನ್ನೊಳಗೊಂಡಿದೆ. ಆದ್ದರಿಂದ ಆ ಹೆಸರಿನಿಂದ ಲೋಕದಲ್ಲಿ ವ್ಯವಹಾರವಿಲ್ಲವಾಗಿದೆ.

**ಮಂ.ಶ್ಲೋ॥ ಅಥೈನಂ ಮಾತ್ರೇ ಪ್ರದಾಯ ಸ್ತನಂ ಪ್ರಯಚ್ಛತಿ ಯಸ್ತೇ ಸ್ತನಶ್ಶಶಯೋ ಯೋ ಮಯೋ -ಭೂರ್ಯ್ಯೋಽರತ್ನಧಾ ವಸುವಿದ್ಯಸ್ಸುದತ್ರಃ । ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ ಸರಸ್ವತಿ ತಮಿಹ ಧಾತವೇಽಕರಿತಿ (27)**

ತಾ : ಆಮೇಲೆ ಪುತ್ರನನ್ನು ತಾಯಿಯ ಮಡಿಲಲ್ಲಿರಿಸಿ, "ಯಸ್ತೇಸ್ತನಶ್ಶ" ಎನ್ನುವ ಮಂತ್ರಗಳನ್ನು ಪಠಿಸಿ ಮಗುವಿಗೆ ಸ್ತನ್ಯವನ್ನು ಕೊಡಿಸಬೇಕು. ಈ ಮಂತ್ರಾರ್ಥವು ಹೀಗಿದೆ. "ಓ ದೇವಿ ಸರಸ್ವತೀ, ನಿನ್ನ ಸ್ತನಗಳು ಕ್ಷೀರಕ್ಕೆ ಅಕ್ಷಯ ಭಾಂಡಗಳು. ಆ ಕ್ಷೀರವೇ ಜೀವನಾಧಾರವಾಗಿ ದೇವಾದಿ ಸಮಸ್ತ ಭೂತಗಳನ್ನು ಪೋಷಿಸುತ್ತಿದೆ. ನಿನ್ನ ಸ್ತನವನ್ನು ಈ ನನ್ನ ಪುತ್ರನಿಗೆ ಪಾನ ಮಾಡಲು ನನ್ನ ಪತ್ನಿಯ ಸ್ತನದಲ್ಲಿ ಪ್ರವೇಶಿಸುವಂತಹವಳಾಗು" ಎಂದು ಪ್ರಾರ್ಥಿಸುತ್ತಾ ಪುತ್ರನಿಗೆ ಸ್ತನ್ಯವನ್ನು ಕೊಡಿಸಬೇಕು.

ಮಂ.ಶ್ಲೋ॥ ಅಥಾಸ್ಯ ಮಾತರಮಭಿಮಂತ್ರಯತೇ। ಇಲಾಽಸಿ ಮೈತ್ರಾವರುಣೀ ವೀರೇ ವೀರಮಜೀಜನತ್। ಸಾ ತ್ವಂ ವೀರವತೀ ಭವ ಯಾಽಸ್ಮಾನ್ ವೀರವತೋಽಕರದಿತಿ। ತಂ ವಾ ಏತಮಾಹುರತಿಪಿತಾ ಬತಾಭೂರತಿ। ಪಿತಾಮಹೋ ಬತಾ ಭೂಃ ಪರಮಾಂ ಬತ ಕಾಷ್ಠಾಂ ಪ್ರಾಪಚ್ಛ್ರಿಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವಿದೋ ಬ್ರಾಹ್ಮಣಸ್ಯ ಪುತ್ರೋ ಜಾಯತ ಇತಿ (28)

ತಾ : ಆನಂತರ "ಇಲಾಸಿ" ಎನ್ನುವ ಮಂತ್ರಗಳನ್ನು ಪಠಿಸುತ್ತಾ, ಪುತ್ರನನ್ನು, ತಾಯಿಯನ್ನು, ಅಭಿಮಂತ್ರಿಸಬೇಕು. ಓ ಅರುಂಧತೀ ನಾನು ನಿಮಿತ್ತವಾಗಿರಲು ವೀರನಾದ ಪುತ್ರನನ್ನು ಹೆತ್ತಿರುವೆ. ಸ್ತುತಿಸಬೇಕಾದವಳು ನಮ್ಮನ್ನು ವೀರರಾದ ಪುತ್ರರನ್ನುಳ್ಳವರನ್ನಾಗಿ ಮಾಡಿರುವೆ. ಈಗ ವೀರ ಪುತ್ರರನ್ನು ಹೊಂದಿದವಳಾಗು! ಇಂತಹ ವೀರ ಪುತ್ರರನ್ನು ಹೆತ್ತು, ನನ್ನನ್ನು ಕೂಡಾ ವೀರನನ್ನಾಗಿ ಮಾಡಿರುವೆ. ಬ್ರಹ್ಮವೇತ್ತರು ಈ ನನ್ನ ಪುತ್ರರನ್ನು ಕುರಿತು, ಓ ಪುತ್ರಾ! ನೀನು ತಂದೆ ತಾತ ಇವರನ್ನು ಮೀರಿಸಿದವನಾಗಿರುವೆ. ಆಶ್ಚರ್ಯವಾಗಿದೆಯೆಂದು ಸ್ತುತಿಸುತ್ತಿದ್ದಾರೆ. ಬ್ರಾಹ್ಮಣ ಪುತ್ರನು ಸಂಪತ್ತಿನಿಂದಲೂ, ಯಶಸ್ಸಿನಿಂದಲೂ, ಬ್ರಹ್ಮ ತೇಜಸ್ಸಿನಿಂದಲೂ, ಹೆಚ್ಚಿನ ಸ್ಥಾನಮಾನಗಳನ್ನು ಗಳಿಸಿ ಪ್ರಶಂಸಾರ್ಹನಾಗುತ್ತಾನೆ.

## ಅಷ್ಟಮಾಧ್ಯಾಯ - ಪಂಚಮ ಬ್ರಾಹ್ಮಣಂ

ಮಂ.ಶ್ಲೋ॥ ಅಥ ವಗ್ಂಶಃ । ಪೌತಿಮಾಷೀಪುತ್ರಃ ಕಾತ್ಯಾಯನೀಪುತ್ರಾತ್, ಕಾತ್ಯಾಯನೀ ಪುತ್ರೋ ಗೌತಮೀಪುತ್ರಾದ್ಗೌತಮೀಪುತ್ರೋ ಭಾರದ್ವಾಜೀಪುತ್ರಾದ್ಭಾರದ್ವಾಜೀಪುತ್ರಃ ಪಾರಾಶರೀಪುತ್ರಾ-ತ್ಪಾರಾಶರೀಪುತ್ರ ಔಪಸ್ವಸ್ತೀಪುತ್ರಾದೌಪಸ್ವಸ್ತೀಪುತ್ರಃ ಪಾರಾಶರೀಪುತ್ರಾತ್ಪಾರಾಶರೀಪುತ್ರಃ ಕಾತ್ಯಾಯನೀಪುತ್ರಾತ್ಕಾತ್ಯಾಯನೀಪುತ್ರಃ ಕೌಶಿಕೀಪುತ್ರಾತ್ಕೌಶಿಕೀಪುತ್ರ ಆಲಮ್ಬೀಪುತ್ರಾಚ್ಚಾ-ಲಂಬೀಪುತ್ರಃ ವೈಯಾಘ್ರಪದೀಪುತ್ರಾಚ್ಚ ವೈಯಾಘ್ರಪದೀಪುತ್ರಃ ಕಾಣ್ವೀಪುತ್ರಾಚ್ಚ ಕಾಣ್ವೀಪುತ್ರ ಕಾಪೀಪುತ್ರಾಚ್ಚ ಕಾಪೀಪುತ್ರಃ (1)

ಮಂ.ಶ್ಲೋ॥ ಆತ್ರೇಯೀಪುತ್ರಾದಾತ್ರೇಯೀಪುತ್ರೋ ಗೌತಮೀಪುತ್ರಾದ್ಗೌತಮಿಪುತ್ರೋ ಭಾರದ್ವಾಜೀಪುತ್ರಾ-ದ್ಭಾರದ್ವಾಜೀಪುತ್ರಃ ಪಾರಾಶರೀಪುತ್ರಾತ್ಪಾರಾಶರೀಪುತ್ರೋ ವಾತ್ಸೀಪುತ್ರಾದ್ವಾತ್ಸೀಪುತ್ರಃ ಪಾರಾಶರೀಪುತ್ರಾತ್ಪಾರಾಶರೀಪುತ್ರೋ ವಾರ್ಕಾರುಣೀಪುತ್ರಾದ್ವಾರ್ಕಾರುಣೀಪುತ್ರೋ ವಾರ್ಕಾ-ರುಣೀಪುತ್ರಾದ್ವಾರ್ಕಾರುಣೀಪುತ್ರ ಆರ್ತಭಾಗೀಪುತ್ರಾದಾರ್ತಭಾಗೀಪುತ್ರಃ ಶೌಂಗೀಪುತ್ರಾಚ್ಛೌಂಗೀ ಪುತ್ರಃ ಸಾಙ್ಕೃತೀಪುತ್ರಾತ್ಸಾಙ್ಕೃತೀಪುತ್ರ ಆಲಮ್ಬಾಯನೀಪುತ್ರಾದಾಲಮ್ಬಾಯನೀ ಪುತ್ರ ಆಲಮ್ಬೀಪುತ್ರಾದಾಲಮ್ಬೀಪುತ್ರೋ ಜಾಯನ್ತೀಪುತ್ರಾಜ್ಜಾಯನ್ತೀಪುತ್ರೋ ಮಾಣ್ಡೂ-ಕಾಯನೀಪುತ್ರಾನ್ಮಾಂಡೂಕಾಯನೀಪುತ್ರೋ ಮಾಂಡೂಕೀಪುತ್ರಾನ್ಮಾಂಡೂಕೀಪುತ್ರಃ ಶಾಣ್ಡಿಲೀ ಪುತ್ರಾಚ್ಛಾಣ್ಡಿಲೀಪುತ್ರೋ ರಾಥೀತರೀಪುತ್ರಾದ್ರಾಥೀತರೀಪುತ್ರೋ ಭಾಲುಕೀಪುತ್ರಾ-ದ್ಭಾಲುಕೀಪುತ್ರಃ ಕ್ರೌಞ್ಚಿಕೀಪುತ್ರಾಭ್ಯಾಂ ಕ್ರೌಞ್ಚಿಕೀಪುತ್ರೌ ವೈದೃಭತೀಪುತ್ರಾದ್ವೈದೃಭತೀಪುತ್ರಃ

ಕಾರ್ಶಕೇಯಿೀಪುತ್ರಾತ್ಕಾರ್ಶಕೇಯಿೀಪುತ್ರಃ ಪ್ರಾಚೀನಯೋಗೀಪುತ್ರಾತ್ ಪ್ರಾಚೀನಯೋಗೀ ಪುತ್ರಃ ಸಾಞ್ಜೀವೀಪುತ್ರಾತ್ಸಾಞ್ಜೀವೀಪುತ್ರಃ ಪ್ರಾಶ್ನೀಪುತ್ರಾದಾಸುರಿವಾಸಿನಃ ಪ್ರಾಶ್ನೀಪುತ್ರ ಅಸುರಾಯಣಾದಾಸುರಾಯಣ ಅಸುರೇರಾಸುರಿಃ (2)

ಮಂ.ಶ್ಲೋ॥ ಯಾಜ್ಞವಲ್ಕ್ಯಾದ್ಯಾಜ್ಞವಲ್ಕ್ಯ ಉದ್ಧಾಲಕಾ ಉದ್ದಾಲಕೋಽರುಣಾದರುಣ ಉಪವೇಶರುಪವೇಶಿಃ ಕುಶ್ರೇಃ ಕುಶ್ರಿರ್ವಾಜಶ್ರವಸೋ ವಾಜಶ್ರವಾಜಿಹ್ವಾವತೋ ವಾಧ್ಯೋ ಗಾಜ್ಜಿಹ್ವಾವಾನ್ ವಾಧ್ಯೋ -ಗೋಽಸಿತಾದ್ವಾರ್ಷಗಣಾದಸಿತೋ ವಾರ್ಷಗಣೋ ಹರಿತಾತ್ಕಶ್ಯಪಾದ್ಧರಿತಃ ಕಶ್ಯಪಃ ಶಿಲ್ಪಾತ್ಕ -ಶ್ಯಪಾಚ್ಛಿಲ್ಪಃ ಕಶ್ಯಪಃ ಕಶ್ಯಪಾನ್ನೈಧ್ರುವೇಃ ಕಶ್ಯಪಾನ್ನೈಧ್ರುವಿರ್ವಾಚೋ ವಾಗಮ್ಭಿಣ್ಯಾ ಅಮ್ಭಿಣ್ಯಾದಿತ್ಯಾದಾದಿತ್ಯಾತ್ತಾನೀಮಾನಿ ಶುಕ್ಲಾನಿಯಜೂಗ್ಂಷಿ ವಾಜಸನೇಯೇನ ಯಾಜ್ಞವಲ್ಕ್ಯೇನಾಖ್ಯಾಯನ್ತೇ (3)

ಮಂ.ಶ್ಲೋ॥ ಸಮಾಸಮಾಸ್ಸಾಞ್ಜೀವಿ ಪುತ್ರಾತ್ಸಾಞ್ಜೀವೀ ಪುತ್ರೋ ಮಾಣ್ಡೂಕಾಯನೇರ್ಮಾಣ್ಡೂಕಾಯನಿಃ ಮಾಣ್ಡವ್ಯಾನ್ಮಾಣ್ಡವ್ಯಃ ಕೌತ್ಸಾತ್ಕೌತ್ಸೋ ಮಾಹಿತ್ಥೇರ್ಮಾಹಿತ್ಥಿಃ ವಾಮಕಕ್ಷಾಯಣಾದ್ವಾಮ ಕಕ್ಷಾಯಣಃ ಶಾಣ್ಡಿಲ್ಯಾಚ್ಛಾಣ್ಡಿಲ್ಯೋ ವಾತ್ಸ್ಯಾದ್ವಾತ್ಸ್ಯಃ ಕುಶ್ರೇಃ ಕುಶ್ರಿಃ ಯಜ್ಞವಚಸೋ ರಾಜಸ್ತಮ್ಬಾಯನಾದ್ಯಜ್ಞವಚಾ ರಾಜಸ್ತಮ್ಬಾಯನಸ್ತುರಾತ್ಕಾವಷೇಯಾತ್ತುರಃ ಕಾವಷೇಯಃ ಪ್ರಜಾಪತೇಃ ಪ್ರಜಾಪತಿಃ ಬ್ರಹ್ಮಣೋ ಬ್ರಹ್ಮಸ್ವಯಮ್ಭು ಬ್ರಹ್ಮಣೇ ನಮಃ (4)

ಇತಿ ವಾಜಸನೇಯಕ ಬೃಹದಾರಣ್ಯಕೋಪನಿಷತ್ ಅಷ್ಟಮೋಧ್ಯಾಯವು ಸಮಾಪ್ತಿ.

(ಅಷ್ಟಮೋಧ್ಯಾಯದಲ್ಲಿ 5 ಬ್ರಾಹ್ಮಣಗಳು, 75 ಮಂತ್ರಗಳು ಒಳಗೊಂಡಿವೆ.
ಈ ಉಪನಿಷತ್ತಿನಲ್ಲಿ ಒಟ್ಟು ಅಧ್ಯಾಯಗಳು 6; ಒಟ್ಟು ಬ್ರಾಹ್ಮಣಗಳು 47;
ಒಟ್ಟು ಮಂತ್ರಗಳು 435;)

ತಾ : (1-2-3-4) (ಬ್ರಹ್ಮವೇತ್ತರ ವಂಶವನ್ನು ಹೇಳಲಾಗುತ್ತಿದೆ.) ಪಾತಿಮಾಷಿಯೆನ್ನುವನು ಸ್ತ್ರೀಯ ಮಗ ಕಾತ್ಯಾಯನಿಯ ಮಗನಿಂದಲೂ, ಕಾತ್ಯಾಯನಿ ಪುತ್ರನು ಗೌತಮೀ ಪುತ್ರನಿಂದಲೂ, ಗೌತಮೀ ಪುತ್ರ ಭಾರದ್ವಾಜ ಪುತ್ರನಿಂದಲೂ, ಭಾರದ್ವಾಜೀ ಪುತ್ರನು ಪಾರಾಶರೀ ಪುತ್ರನಿಂದಲೂ ಪಾರಶರೀ ಪುತ್ರನು ಔಪಸ್ವಸ್ತಿ ಪುತ್ರನಿಂದಲೂ, ಔಪಸ್ವಸ್ತೀ ಪುತ್ರನು ಪಾರಾಶರಿ ಪುತ್ರನಿಂದಲೂ, ಪಾರಾಶರಿ ಪುತ್ರ ಕಾತ್ಯಾಯನೀ ಪುತ್ರನಿಂದಲೂ, ಕಾತ್ಯಾಯಿನಿ ಪುತ್ರನು ಕೌಶಿಕೀ ಪುತ್ರನಿಂದಲೂ, ಕೌಶಿಕೀ ಪುತ್ರನು ಆಲಂಬೀ ಪುತ್ರನಿಂದಲೂ ವೈಯಾ ಘ್ರಪದಿಯೆನ್ನುವ ಸ್ತ್ರೀಯ ಪುತ್ರನಿಂದಲೂ ಕಾಪೀ ಎನ್ನುವ ಸ್ತ್ರೀಯ ಪುತ್ರನಿಂದಲೂ ಕಾಪಿಯೆನ್ನುವ ಸ್ತ್ರೀಯ ಮಗನಾದ ಆತ್ರೇಯನೆನ್ನುವವ-ನಿಂದಲೂ, ಆತ್ರೇಯ ಎನ್ನುವ ಸ್ತ್ರೀಯ ಪುತ್ರನಿಂದ ಗೌತಮಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ಗೌತಮೀ ಪುತ್ರ ಭಾರದ್ವಾಜೀಯೆನ್ನುವ ಸ್ತ್ರೀಯ ಪುತ್ರನಿಂದಲೂ, ಭಾರದ್ವಾಜೀ ಪುತ್ರ ಪಾರಾಶರೀ-ಯೆನ್ನುವ ಸ್ತ್ರೀಯ ಪುತ್ರನಿಂದಲೂ ಪಾರಾಶರೀ ಪುತ್ರ ವಾರ್ಕಾರುಣಿಯೆನ್ನುವ ಸ್ತ್ರೀಯ ಪುತ್ರನಿಂದಲೂ,

ವಾರ್ಕಾರುಣೀ ಪುತ್ರನು ವಾರ್ಕಾರುಣಿಯೆನ್ನುವ ಇನ್ನೊಬ್ಬ ಸ್ತ್ರೀಯ ಪುತ್ರನಿಂದಲೂ ವಾರ್ಕಾರುಣೀ ಪುತ್ರ ಆರ್ತಬಾಗಿಯೆನ್ನುವ ಸ್ತ್ರೀಯ ಪುತ್ರನಿಂದಲೂ ಆರ್ತ ಭಾಗೀಪುತ್ರ ಶೌಂಜೇಯೆನ್ನುವ ಸ್ತ್ರೀಯ ಪುತ್ರನಿಂದಲೂ ಶೌಂಗೀಪುತ್ರ ಸಾಙ್ಕೃತಿಯೆನ್ನುವ ಸ್ತ್ರೀಯ ಮಗನಿಂದಲೂ ಸಾಙ್ಕೃತಿ ಪುತ್ರ ಆಲಂಬಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ಆಲಂಬಿ ಪುತ್ರನು ಜಾಯಂತಿ ಎನ್ನುವ ಸ್ತ್ರೀಯ ಪುತ್ರನಿಂದಲೂ, ಜಾಯಂತೀ ಪುತ್ರನು ಮಾಂಡುತಾಯನಿ ಯೆನ್ನುವ ಸ್ತ್ರೀಯ ಪುತ್ರನಿಂದಲೂ, ಶಾಂಡಿಲಿ ಮಗ ರಾಥೀತರಿ ಎನ್ನುವ ಸ್ತ್ರೀಯ ಪುತ್ರನಿಂದಲೂ ಭಾಲುಕೀ ಪುತ್ರ ಕೌಂಚಿಕಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ವೈದೃಭತಿ ಪುತ್ರನು ಕಾರ್ಶಶೇಯೀ ಎನ್ನುವ ಸ್ತ್ರೀಯ ಪುತ್ರನಿಂದಲೂ, ಕಾರ್ಶಕೇಯಿ ಪುತ್ರನು ಪ್ರಾಚೀನ ಯೋಗಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ಪ್ರಾಚೀನ ಯೋಗಿಯ ಪುತ್ರಸಾಂಜೀವಿಯೆನ್ನುವ ಪುತ್ರನಿಂದಲೂ, ಸಾಂಜೀವಿಯೆನ್ನುವ ಪುತ್ರನು ಪ್ರಾಶ್ನಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ಅಸುರಿ ವಾಸಿಯೆನ್ನುವವನಿಂದಲೂ ಪ್ರಾಶ್ನಿಯೆನ್ನುವ ಸ್ತ್ರೀಯ ಪುತ್ರನಿಂದ ಆಸುರಾಯಣನೆನ್ನುವವನಿಂದಲೂ (ಇಲ್ಲಿಯವರೆಗೂ ಸ್ತ್ರೀಯ ಪ್ರಾಧಾನ್ಯತೆಯಿರುವ ಪುರುಷರನ್ನು ನಿರ್ದೇಶಿಸಲಾಗಿದೆ.)

ಅಸುರಾಯಣನೆನ್ನುವನು ಆಸುರಿಯೆನ್ನುವವನಿಂದಲೂ ಆಸುರಿಯೆನ್ನುವ ಮುನಿ ಯಾಜ್ಞವಲ್ಕ್ಯ ಋಷಿಯಿಂದಲೂ, ಯಾಜ್ಞವಲ್ಕ್ಯನು ಉದ್ಧಾಲಕನಿಂದಲೂ, ಉದ್ಧಾಲಕನು ಅರುಣನಿಂದಲೂ, ಅರುಣನು ಉಪವೇಶಿ ಮುನಿಯಿಂದಲೂ, ಉಪವೇಶಿಯೆನ್ನುವ ಮುನಿ ಕುಶ್ರಿಯೆನ್ನುವವನಿಂದಲೂ, ಕುಶ್ರಿ ಮುನಿ ವಾಜಶ್ರವಸ್ಸುನಿಂದಲೂ, ವಾಜಶ್ರವಸ್ಸು ಜಿಹ್ವಾವಂತನಿಂದಲೂ, ವಾಧ್ಯೋಗವೆನ್ನುವವನಿಂದಲೂ ಜಿಹ್ವವಂತೆನೆನ್ನುವವನು ವಾದ್ಯೋಗನು, ಅಸಿತನೆನ್ನುವವನಿಂದಲೂ, ವಾರ್ಷಗಣನೆನ್ನುವ ಮುನಿಯಿಂದಲೂ ಅಸಿತನೆನ್ನುವವನು ವಾರ್ಷಗಣನೆಯನೆನ್ನುವವನು ಹರಿತನೆನ್ನುವವನಿಂದಲೂ, ಕಶ್ಯಪನಿಂದಲೂ, ಹಿತನೆನ್ನುವ ಕಶ್ಯಪನು ಶಿಲ್ಪನೆನ್ನುವವನಿಂದಲೂ, ಇನ್ನೊಬ್ಬ ಕಶ್ಯಪನಿಂದಲೂ, ವೈದ್ರುವನೆನ್ನುವವನಿಂದಲೂ, ಕಶ್ಯಪನು ವೈದ್ರುವಿಯೆನ್ನುವ ಮುನಿ ವಾಕ್ಕಿನಿಂದಲೂ, ವಾಕ್ಕು ಅಂಭಿಣಿಯಿಂದಲೂ, ಅಂಭಿಣಿ ಸೂರ್ಯನಿಂದಲೂ, ಆ ಪ್ರಸಿದ್ಧವಾದ ಈ ಶುಕ್ಲಯಜುಸ್ಸುಗಳು ವಾಜಸೇಯನೇಯ ಶಾಖಾಧ್ಯೇತಯಾದ ಯಾಜ್ಞವಲ್ಕ್ಯನಿಂದಲೂ ಸೂರ್ಯನಿಂದಲೂ ಬೋಧಿಸ-ಲ್ಪಡುತ್ತಿವೆ. (ಈ ವಾಜಸನೇಯ ಶಾಖೆಗಳಲ್ಲಿ ಬ್ರಹ್ಮನಿಂದ ಮೊದಲ್ಗೊಂಡು ಸಾಂಜೀವಿ ಪುತ್ರನವರೆಗೂ ಒಂದು ವಂಶ.)

ಸಮಾನಮಾಸನು ಸಾಂಜೀವಿಯೆನ್ನುವ ಸ್ತ್ರೀಯ ಪುತ್ರನಿಂದಲೂ, ಸಾಂಜೀವಿ ಪುತ್ರನು ಮಾಂಡೂಕಾಯನಿಯಿಂದಲೂ, ಮಾಂಡೂಕಾಯನಿಯು ಮಾಂಡವ್ಯನಿಂದಲೂ ಮಾಂಡವ್ಯನು ಕೌತ್ಸನಿಂದಲೂ, ಕೌತ್ಸನು ಮಹಿತ್ಥಿಯೆನ್ನುವ ಮುನಿಯಿಂದಲೂ, ಮಹಿತ್ಥಿಯೆನ್ನುವ ಮುನಿ ವಾಮಕ-ಕ್ಷಾಯಣ ಎನ್ನುವವನಿಂದಲೂ, ವಾಮ ಕಕ್ಷಾಯಣನು ಶಾಂಡಿಲ್ಯನಿಂದಲೂ, ಶಾಂಡಿಲ್ಯನು ವಾತ್ಸ್ಯ-ವಿನಿಂದಲೂ ವಾತ್ಸ್ಯನು ಕುಶ್ರಿಯೆನ್ನುವವನಿಂದಲೂ, ಕುಶ್ರಿಯೆನ್ನುವ ಮುನಿ ಯಜ್ಞ ವಚಸನೆನ್ನು-ವವನಿಂದಲೂ ರಾಜಸ್ತಂಭಾಯಯೆನ್ನುವವನು ತುರಯೆನ್ನುವವನಿಂದಲೂ, ಕಾವಶೇಯನೆನ್ನುವ ಮುನಿಯಿಂದಲೂ, ಕಾವಷೇಯನೆನ್ನುವ ಮುನಿಯಿಂದಲೂ, ತುರನೆನ್ನುವವನು ಹಿರಣ್ಯಗರ್ಭ-ನಿಂದಲೂ, ಪ್ರಜಾಪತಿ ಬ್ರಹ್ಮನಿಂದಲೂ (ವೇದದಿಂದಲೂ) ಬ್ರಹ್ಮ ವಿದ್ಯೆ ವೃದ್ಧಿ ಹೊಂದಿತು. ಬ್ರಹ್ಮ ಸ್ವಕೀಯವಾಗಿ ಹುಟ್ಟಿರುವಂತಹುದು. (ತನ್ನಷ್ಟಕ್ಕೆ ಹುಟ್ಟಿದಂತಹುದು) ನಿತ್ಯ ಬ್ರಹ್ಮಕ್ಕೆ ನಮಸ್ಕಾರ.

(ಈ ಪರಬ್ರಹ್ಮ ವಿದ್ಯೆ ಈ ವಿಧವಾಗಿ ಬ್ರಹ್ಮನಿಂದ ಮೊದಲ್ಗೊಂಡು ಕ್ರಮವಾಗಿ ಅಧಿಕಾರ ತಾರತಮ್ಯಗಳಲ್ಲಿ ಭೂಮಿಯಲ್ಲಿ ಪ್ರವರ್ತಿಸಿದೆ. ಅಂತಹ ಪರಬ್ರಹ್ಮವಿದ್ಯೆಗೆ ನಮಸ್ಕರಿಸುತ್ತಿದ್ದೇನೆ.)

(ಬೃಹದಾರಣ್ಯಕೋಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ॥ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ**




(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

**ಮಂ.ಶ್ಲೋ॥ ಓಂ ಬ್ರಹ್ಮಕೈವಲ್ಯ ಜಾಬಾಲಶ್ವೇತಾಶ್ವೋ ಹಂಸ ಆರುಣಿಃ ಗರ್ಭೋ ನಾರಾಯಣೋ ಹಂಸೋ ಬಿಂದುನಾದಶ್ಶಿರಶ್ಶಿಖಾ, ಏತಾಸ್ತ್ರಯೋದಶ॥ ಓಂ (1)**

ತಾ : ಓಂ= ಪ್ರಣವ. ಈ ತಿಳಿಸಿರುವ ಹದಿಮೂರು (13) ಉಪನಿಷತ್ತಗಳು ಬ್ರಹ್ಮೋಪನಿಷತ್ತಿಗೆ ಸಂಬಂಧಿಸಿದವು; (1) ಬ್ರಹ್ಮ (2) ಕೈವಲ್ಯ, (3) ಜಾಬಾಲ (4) ಶ್ವೇತಾಶ್ವ (5) ಹಂಸ (6) ಆರುಣಿ (7) ಗರ್ಭ (8) ನಾರಾಯಣ (9) ಹಂಸ (10) ಬಿಂದು (11) ನಾದ (12) ಶಿರಃ (13) ಶಿಖಾ.

**ಮಂ.ಶ್ಲೋ॥ ಓಂ ಅಥಾಸ್ಯ ಪುರುಷಸ್ಯ ಚತ್ವಾರಿ ಸ್ಥಾನಾನಿ ಭವಂತಿ, ನಾಭಿರ್ಹೃದಯಂ ಕಂಠಂ ಮೂರ್ಧಾ ಚ, ತತ್ರ ಚತುಷ್ಪಾದಂ ಬ್ರಹ್ಮವಿಭಾತಿ, ಜಾಗರಿತೇ ಬ್ರಹ್ಮಾ ಸ್ವಪ್ನೇ ವಿಷ್ಣುಸ್ಸುಷುಪ್ತೌ ರುದ್ರಸ್ತುರೀಯಮಕ್ಷರಮ್ ॥ (2)**

ತಾ : ನಂತರ ಈ ಪೂರ್ಣ ಪುರುಷನಾದ ಪರಬ್ರಹ್ಮನಿಗೆ ನಾಭಿ ಹೃದಯ, ಕಂಠ, ಶಿರಸ್ಸು ಎನ್ನುವ ನಾಲ್ಕು ಸ್ಥಾನಗಳು ಉಂಟು (ಇವೆ) ಆ ನಾಲ್ಕು ಸ್ಥಾನಗಳಲ್ಲಿಯೂ ಪರಬ್ರಹ್ಮ ನಾಲ್ಕು ಪಾದಗಳಾಗಿ ಪ್ರಕಾಶಿಸುತ್ತದೆ. ಜಾಗ್ರದವಸ್ಥೆಯಲ್ಲಿ ಚತುರ್ಮುಖ ಬ್ರಹ್ಮನಾಗಿಯೂ, ಸ್ವಪ್ನಾವಸ್ಥೆಯಲ್ಲಿ ವಿಷ್ಣುವಾಗಿಯೂ ಸುಷುಪ್ತಿಯಲ್ಲಿ ರುದ್ರನಾಗಿಯೂ, ತುರೀಯದಲ್ಲಿ ಪರಮಾತ್ಮನಾಗಿಯೂ ಪ್ರಕಾಶಿಸುತ್ತಿದೆ.

**ಮಂ.ಶ್ಲೋ॥ ಸ ಆದಿತ್ಯೋ ವಿಷ್ಣುಶ್ಚೇಶ್ವರಶ್ಚ, ಸ್ವಯಮಮನಸ್ಕಮಶ್ರೋತ್ರಮಪಾಣಿಪಾದಂ ಜ್ಯೋತಿರ್ವಿದಿತಮ್, ಯತ್ರ ಲೋಕಾ ನ ಲೋಕಾ ದೇವಾ ನ ದೇವಾ ವೇದಾ ನ ವೇದಾ ಯಜ್ಞಾ**

**ನ ಯಜ್ಞಾ ಮಾತಾ ನ ಮಾತಾ ಪಿತಾ ನ ಪಿತಾ ಸ್ನುಷಾ ನ ಸ್ನುಷಾ ಚಾಂಡಾಲೋ ನ ಚಾಂಡಾಲಃ ಪೌಲ್ಕಸೋ ನ ಪೌಲ್ಕಸಃ, ಶ್ರಮಣೋ ನ ಶ್ರಮಣ ಸ್ತಾಪಸೋ ನ ತಾಪಸ ಏಕಮೇವ ತತ್ಪರಂ ಬ್ರಹ್ಮವಿಭಾತಿ ನಿರ್ವಾಣಮ್ ॥ (3)**

ತಾ : ಸೂರ್ಯ ಭಗವಾನನು, ವಿಷ್ಣುವು, ಈಶ್ವರನು, ಈ ಪರಮಾತ್ಮನೇ ಆ ಆತ್ಮ ಮನಸ್ಸು ಇಲ್ಲದಂತೆ ಶ್ರವಣೇಂದ್ರಿಯವಿಲ್ಲದಂತೆ ಹಸ್ತಪಾದಗಳು ಇಲ್ಲದಿರುವಂತೆ ಜ್ಯೋತಿ ಸ್ವರೂಪವಾಗಿ ಗೋಚರವಾಗುತ್ತದೆ. ಯಾವ ಪರಮಾತ್ಮನಲ್ಲಿ ಲೋಕಗಳು ಲೋಕಗಳಾಗಿಲ್ಲವೋ, ದೇವತೆಗಳು ದೇವತೆಗಳಾಗಿಲ್ಲವೋ, ವೇದಗಳು ವೇದಗಳಲ್ಲವೋ, ಯಜ್ಞಗಳು ಯಜ್ಞಗಳಾಗುವುದಿಲ್ಲವೋ, ತಾಯಿಯು ತಾಯಿಯಾಗುವುದಿಲ್ಲವೋ, ತಂದೆಯು ತಂದೆಯಾಗುವುದಿಲ್ಲವೋ, ಸೊಸೆಯು ಸೊಸೆಯಾಗುವುದಿಲ್ಲವೋ, ಚಂಡಾಲನು ಚಂಡಾಲನಲ್ಲವೋ, ಪಾಲ್ಕನನು ಪಾಲ್ಕನನಾಗುವುದಿಲ್ಲವೋ, ಸನ್ಯಾಸಿ ಸನ್ಯಾಸಿಯಾಗುವುದಿಲ್ಲವೋ, ತಪಸ್ವಿ ತಪಸ್ವಿಯಾಗುವುದಿಲ್ಲವೋ, ಅಂತಹ ಪರಬ್ರಹ್ಮವು ಅಖಂಡವಾಗಿ ನಿರ್ವಾಣ ಸ್ವರೂಪವಾಗಿ ಪ್ರಕಾಶಿಸುತ್ತಿದೆ.

**ಮಂ.ಶ್ಲೋ॥ ನ ತತ್ರ ದೇವಾ ಋಷಯಃ ಪಿತರ ಈಶತೇ ಪ್ರತಿಬುದ್ಧ್ಯಸ್ಸರ್ವವಿದ್ಯೇತಿ, ಹೃದಿಸ್ಥಾ ದೇವತಾಸ್ಸರ್ವಾ ಹೃದಿಪ್ರಾಣಾಃ ಪ್ರತಿಷ್ಠಿತಾಃ ಹೃದಿಪ್ರಾಣಾಶ್ಚ ಜ್ಯೋತಿಶ್ಚ ತ್ರಿವೃತ್ಸೂತ್ರಂ ಚ ತದ್ವಿದುರಿತಿ, ಹೃದಿ ಚೈತನ್ಯೇ ತಿಷ್ಠತಿ (4)**

ತಾ : ಆ ಪರಮಾತ್ಮನು ದೇವತೆಗಳನ್ನು ಮಹರ್ಷಿಗಳನ್ನು ನಿರ್ಣಯಿಸಲಾರನು. ಸರ್ವಜ್ಞನಾದ ಜ್ಞಾನಿಯು ಆ ಪರಬ್ರಹ್ಮವನ್ನು ತಿಳಿದುಕೊಂಡು ಬ್ರಹ್ಮವನ್ನು ಅನುಭವಿಸುತ್ತಿರುತ್ತಾನೆ. ಸಮಸ್ತವಾದ ಇಂದ್ರಿಯಗಳು (ಇಂದ್ರಿಯ ದೇವತೆಗಳು) ಹೃದಯದಲ್ಲಿವೆ. ಪ್ರಾಣಾಪಾನ ವ್ಯಾನೋದಾನ ಸಮಾನಗಳೆನ್ನುವ ಪಂಚಪ್ರಾಣಗಳನ್ನು ಹೃದಯದಲ್ಲ ಪ್ರತಿಷ್ಠಿಸಲಾಗಿದೆ. ಹೃದಯದಲ್ಲಿರುವ ಆ ಪಂಚಪ್ರಾಣಗಳು ಜ್ಯೋತಿ ಸ್ವರೂಪವಾದ ಆತ್ಮವು, ಇಂದ್ರಿಯಪ್ರಾಣ ತೇಜಸ್ಸುಗಳು ಸ್ವರೂಪವಾದ ಸೂತ್ರಾತ್ಮವು (ಯಜ್ಞೋಪವೀತವು) ಆ ಪರಮಾತ್ಮನೇ ಎಂದು ಬ್ರಹ್ಮಜ್ಞಾನಿಗಳು ತಿಳಿದುಕೊಳ್ಳುತ್ತಾರೆ. ಜ್ಯೋತಿ ಸ್ವರೂಪನಾದ ಸೂತ್ರಾತ್ಮ (ಯಜ್ಞೋಪವೀತವು) ಜ್ಞಾನಾತ್ಮವಾದ ಬುದ್ಧಿಗುಹೆಯಲ್ಲಿ ಇದೆ.

**ಮಂ.ಶ್ಲೋ॥ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್,
ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ॥ (5)**

ತಾ : ಸೃಷ್ಟಿಕರ್ತನಾದ ಬ್ರಹ್ಮದೊಂದಿಗೆ ಜನಿಸಿರುವಂತಹುದು, ಶ್ರೇಷ್ಠವಾದುದು, ಪವಿತ್ರವಾದುದು. ಆಯುರ್ದಾಯವನ್ನು ವೃದ್ಧಿಪಡಿಸುವಂತಹುದು. ಎಲ್ಲಕ್ಕಿಂತ ಮೊದಲು ಹುಟ್ಟಿದುದು ಆದ ಸೂತ್ರವನ್ನು (ಯಜ್ಞೋಪವೀತವನ್ನು) ತಿಳಿದುಕೊಳ್ಳುವಂತಾಗಬೇಕು. ಪರಿಶುದ್ಧವು, ದೃಢವು, ಜ್ಯೋತಿ ಸ್ವರೂಪವಾದ ಯಜ್ಞೋಪವೀತವು ಪ್ರಾಪ್ತಿಯಾಗಲಿ.

**ಮಂ.ಶ್ಲೋ॥ ಸಶಿಖಂ ವಪನಂ ಕೃತ್ವಾ ಯಾ ಬಹಿಸ್ಸೂತ್ರಂ ತ್ಯಜೇದ್ಬುಧಃ ಯದಕ್ಷರಂ ಪರಂಬ್ರಹ್ಮ ತತ್ಸೂತ್ರಮಿತಿ ಧಾರಯೇತ್, ಸೂಚನಾತ್ಸೂತ್ರಮಿತ್ಯಾಹುಸ್ಸೂತ್ರಂ ನಾಮ ಪರಂಪದಮ್, ತತ್ಸೂತ್ರಂ ವಿದಿತಂ ಯೇನ ಸ ವಿಪ್ರೋ ವೇದಪಾರಗಃ ॥ (6)**

ತಾ : ಬುಧನು ಕೂದಲಿನೊಂದಿಗೆ ಕೇಶಖಂಡನ ಮಾಡಿಕೊಂಡು ಬಾಹ್ಯಕರ್ಮ ನಿಮಿತ್ತವಾಗಿ ಶರೀರದಲ್ಲಿ ಧರಿಸುವ ಯಜ್ಞೋಪವೀತವನ್ನು ತೆಗೆದುಹಾಕಬೇಕು. ಅಕ್ಷರ ಪರಬ್ರಹ್ಮನನ್ನೇ ಯಜ್ಞೋಪವೀತವಾಗಿ ಭಾವಿಸಿ ಧರಿಸಬೇಕು. ಈ ಯಜ್ಞೋಪವೀತವು ಪರಮಾತ್ಮನನ್ನು ತಿಳಿಯ ಪಡಿಸುವ ಸೂತ್ರವೆಂದು ಬುಧರು ಹೇಳುವರು ಸೂತ್ರಾತ್ಮಕ ರೂಪದಲ್ಲಿರುವ ಈ ಯಜ್ಞೋಪವೀತವೇ ಮೋಕ್ಷ ಸ್ವರೂಪವಾದುದು.

**ಮಂ.ಶ್ಲೋ॥ ಯೇನ ಸರ್ವಮಿದಂ ಪ್ರೋತಗ್ಂ ಸೂತ್ರೇ ಮಣಿಗಣಾ ಇವ। ತತ್ಸೂತ್ರಂ ಧಾರಯೇದ್ಯೋಗೀ ಯೋಗವಿತ್ತತ್ತ್ವದರ್ಶಿವಾನ್, ಬಹಿಸ್ಸೂತ್ರಂ ತ್ಯಜೇದ್ವಿದ್ವಾನ್ ಯೋಗಮುತ್ತಮಮಾಸ್ಥಿತಃ ಬ್ರಹ್ಮಭಾವಮಿದಂ ಸೂತ್ರಂ ಧಾರಯೇದ್ಯ ಸ್ಸಚೇತನಃ॥ (7)**

ತಾ : ಈ ಸರ್ವಪ್ರಪಂಚವು ಸೂತ್ರದಲ್ಲಿರುವ ಮಣಿಗಳಂತೆ ಯಾವ ಸೂತ್ರದಲ್ಲಿ ಗುಚ್ಛದಲ್ಲಿದೆಯೋ ಪೋಣಿಸಲಾಗಿದೆಯೋ ಅಂತಹ ಪರಮಾತ್ಮ ಸೂತ್ರವನ್ನು ಯೋಗವೇತ್ತನೂ, ಬ್ರಹ್ಮವೇತ್ತನೂ ಆದ ಯೋಗಿ ಧರಿಸುವನು. ಉತ್ತಮ ಯೋಗದಲ್ಲಿ ಸ್ಥಿತನಾಗಿರುವ ವಿದ್ವಾಂಸನು ಬಾಹ್ಯರೂಪವನ್ನು ತ್ಯಜಿಸಬೇಕು. ಚೈತನ್ಯವಂತನಾದ ಬ್ರಹ್ಮ ಭಾವನೆಯೇ ಸೂತ್ರ (ಯಜ್ಞೋಪವೀತವಾಗಿ)ವಾಗಿ ಭಾವಿಸಿ ಧರಿಸಬೇಕು.

**ಮಂ.ಶ್ಲೋ॥ ಧಾರಣಾತ್ತಸ್ಯ ಸೂತ್ರಸ್ಯ ನೋಚ್ಛಿಷ್ಟೋ ನಾಶುಚಿರ್ಭವೇತ್, ಸೂತ್ರಮನ್ತರ್ಗತಂ ಯೇಷಾಂ ಜ್ಞಾನಯಜ್ಞೋಪವೀತಿನಾಮ್ ತೇ ವೈ ಸೂತ್ರವಿದೋ ಲೋಕೇ ತೇ ಚ ಯಜ್ಞೋಪವೀತಿನಃ, ಜ್ಞಾನಶಿಖಿನೋ ಜ್ಞಾನನಿಷ್ಠಾಃ ಜ್ಞಾನಯಜ್ಞೋಪವೀತಿನಃ, ಜ್ಞಾನಮೇವ ಪರಂ ತೇಷಾಂ ಪವಿತ್ರಂ ಜ್ಞಾನಮುಚ್ಯತೇ, ಅಗ್ನೇರಿವ ಶಿಖಾ ನಾನ್ಯಾ ಯಸ್ಯ ಜ್ಞಾನಮಯೀಶಿಖಾ ॥(8)**

ತಾ : ಬ್ರಹ್ಮಸ್ವರೂಪವಾದ ಯಜ್ಞೋಪವೀತ (ಸೂತ್ರಾತ್ಮ)ವನ್ನು ಧ್ಯಾನಿಸುವುದ (ಧರಿಸುವುದು) ರಿಂದ ಎಂಜಲು ಸೋಕುವುದಿಲ್ಲ. ಅಪರಿಶುದ್ಧತೆ ಕಾಡುವುದಿಲ್ಲ. ಆತ್ಮ ಜ್ಞಾನವೇ ಯಜ್ಞೋಪವೀತವೆಂದು ಭಾವಿಸಿ ಧ್ಯಾನಿಸುವವರೇ ಯಜ್ಞೋಪವೀತವನ್ನು ಯಥಾರ್ಥದಲ್ಲಿ ತಿಳಿದುಕೊಂಡವರು ಅಂತಹ ಜ್ಞಾನಿಗಳೇ ಯಜ್ಞೋಪವೀತವನ್ನು ಧರಿಸುವವರು ಆತ್ಮಜ್ಞಾನವೆಂಬ ಯಜ್ಞೋಪವೀತವನ್ನು ಪಡೆದುಕೊಂಡು ಪರಬ್ರಹ್ಮವನ್ನು ಧ್ಯಾನಿಸುವವರಿಗೆ ಬ್ರಹ್ಮಜ್ಞಾನವೇ ಉತ್ತಮವಾದದು. ಆದ್ದರಿಂದ ಪರಬ್ರಹ್ಮ ಜ್ಞಾನವೇ ಪವಿತ್ರವಾಗಿ ಹೇಳಲಾಗುತ್ತದೆ. ಯಾರಿಗೆ ಅಗ್ನಿಯಂತೆ ಜ್ಞಾನವೆನ್ನುವ ಶಿಖೆಯಿರುವುದೋ ಆತನೇ ವಿದ್ವಾಂಸ.

**ಮಂ.ಶ್ಲೋ॥ ನ ಶಿಖೀತ್ಯುಚ್ಯತೇ ವಿದ್ವಾನ್ನೇತರೇ ಕೇಶಧಾರಿಣಃ ಕರ್ಮಣ್ಯಧಿಕೃತಾ ಯೇ ತು ವೈದಿಕೇ ಬ್ರಾಹ್ಮಣಾದಯಃ। ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಮ್, ಶಿಖಾ ಜ್ಞಾನಮಯೀ ಯಸ್ಯ ಉಪವೀತಂ ಚ ತನ್ಮಯಮ್ । (9)**

ತಾ : ಜ್ಞಾನಶಿಖೆಯನ್ನು ಧರಿಸಿರುವವನೇ ವಿದ್ವಾಂಸನು. ಇತರರು ಕೇಶಧಾರಿಗಳು ಮಾತ್ರವೇ ವೇದವಿಹಿತವಾದ ಸತ್ಕರ್ಮಗಳಲ್ಲಿ ಅಧಿಕಾರವುಳ್ಳ ಬ್ರಾಹ್ಮಣರು ಈ ಯಜ್ಞೋಪವೀತವನ್ನು ಬಾಹ್ಯವಾಗಿ ಕೂಡಾ ಧರಿಸಬೇಕು ಬಾಹ್ಯವಾಗಿ ಧರಿಸಿದ ಯಜ್ಞೋಪವೀತವು, ಬಾಹ್ಯವಾಗಿ ಮಾಡುವ

ಸತ್ಕರ್ಮಗಳಿಗೆ ಸಾಧನವಾಗಿ ಹೇಳಲಾಗಿದೆ. ಜ್ಞಾನಮಯವಾದ ಶಿಖೆಯು ಯಾರಿಗಿರುವುದೋ ಅವರು ಸಮಸ್ತ ಸತ್ಕರ್ಮಗಳನ್ನು ಮಾಡಿದವರೇ ಆಗುವರು.

**ಮಂ.ಶ್ಲೋ॥ ಬ್ರಾಹ್ಮಣ್ಯಗ್ಂ ಸಕಲಂ ತಸ್ಯ ಇತಿ ಬ್ರಹ್ಮವಿದೋ ವಿದುಃ। ಇದಂ ಯಜ್ಞೋಪವೀತಂ ತು ಪರಮಂ ಯತ್ಪರಾಯಣಮ್। ನ ವಿದ್ವಾನ್ ಯಜ್ಞೋಪವೀತೀ ಸ್ಯಾತ್ಸ ಯಜ್ಞಸ್ತಂ ಯಜ್ಞಾನಂ ವಿದುಃ (10)**

ತಾ : ಅಂತಹ ಜ್ಞಾನಿಗಳಿಗೆ ಸಮಸ್ತವಾದ ಬ್ರಾಹ್ಮಣ್ಯ ಲಭಿಸುವುದೆಂದು ಬ್ರಹ್ಮವೇತ್ತರು ಭಾವಿಸುತ್ತಿರುವರು. ಈ ಯಜ್ಞೋಪವೀತವು (ಸೂತ್ರಾತ್ಮ) ಉತ್ತಮವೂ, ಪರಾಯಣವೂ ಆದುದರಿಂದ ಇದನ್ನು ತಿಳಿದುಕೊಂಡವರು ಯಜ್ಞೋಪವೀತಿಯಾಗುವನು. ಈ ರೀತಿಯಾಗಿ ತಿಳಿದುಕೊಂಡ-ವನೇ ಯಜ್ಞ ಸ್ವರೂಪನು. ಅಂತಹವನನ್ನೇ ಬ್ರಹ್ಮವೇತ್ತರು ಯಜ್ಞವನ್ನು ಮಾಡಿದವನಾಗಿ ಅಂಗೀಕರಿಸುತ್ತಾರೆ.

**ಮಂ.ಶ್ಲೋ॥ ಏಕೋ ದೇವಸ್ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಸ್ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ, ಏಕೋ ವಶೀ ಸರ್ವಭೂತಾಂತರಾ-ತ್ಮೈಕಗ್ಂ ರೂಪಂ ಬಹುಧಾ ಯಃ ಕರೋತಿ। ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ ಸ್ತೇಷಾಗ್ಂ ಸುಖಂ ಶಾಶ್ವತಂ ನೇತರೇಷಾಮ್ ॥ (11)**

ತಾ : ಒಬ್ಬನೇ (ಏಕ) ಆಗಿರುವವನೂ ಸ್ವಯಂ ತೇಜೋರೂಪನೂ ಆದ ಪರಬ್ರಹ್ಮವು ಸರ್ವ ಜೀವಿಗಳಲ್ಲಿಯೂ ನಿಗೂಢವಾಗಿ ವಾಸಿಸಿರುತ್ತಾನೆ. ಸರ್ವವ್ಯಾಪಕನು, ಸಮಸ್ತ ಭೂತಗಳಲ್ಲಿಯೂ ವಾಸವಾಗಿರುವ ಆತ್ಮ ಸ್ವರೂಪನು ಕರ್ಮಾಧ್ಯಕ್ಷನು ಸರ್ವಭೂತಾಧಿವಾಸಿಯು, ಸರ್ವಸಾಕ್ಷಿಯು, ಚೈತನ್ಯ ಸ್ವರೂಪನು, ಗುಣರಹಿತನು ಆಗಿರುತ್ತಾನೆ. ಅಖಂಡವಾಗಿರುವವನು, ಸರ್ವವನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವವನು, ಸರ್ವ ಭೂತಾಂತರಾತ್ಮವಾದ ಯಾವ ಪರಬ್ರಹ್ಮವು ಒಂದೇ ರೂಪವನ್ನು ಅನೇಕ ರೂಪಗಳಾಗಿ ಮಾಡುತ್ತಿರುವನೋ ಆ ಪರಮಾತ್ಮನನ್ನು ಧೀರರು ಹೃದಯಗಳಲ್ಲಿ ದರ್ಶಿಸುತ್ತಾರೆ. ಅಂತಹ ಧೀರರಿಗೆ ಶಾಶ್ವತ ಸುಖವು ಲಭಿಸುವುದು. ಇತರರಿಗೆ ಲಭಿಸುವುದಿಲ್ಲ.

**ಮಂ.ಶ್ಲೋ॥ ಆತ್ಮಾನಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಮ್ ।**
**ಧ್ಯಾನನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ (12)**

ತಾ : ಮನಸ್ಸನ್ನು ಕೆಳಗಿನ ಕಟ್ಟಿಗೆಯನ್ನಾಗಿಯೂ ಪ್ರಮಾಣಪ್ರಣವವನ್ನು ಮೇಲಿನ ಕಟ್ಟಿಗೆ-ಯನ್ನಾಗಿಯೂ ಮಾಡಿಕೊಂಡು ಧ್ಯಾನಾಭ್ಯಾಸವೆನ್ನುವ ಮಥನವನ್ನು ಮಾಡಿ. ನಿಗೂಢವಾಗಿರುವ ಆತ್ಮ ದೇವವನ್ನು ದರ್ಶಿಸಬೇಕು.

**ಮಂ.ಶ್ಲೋ॥ ತಿಲೇಷು ತೈಲಂ ದಧಿನೀವ ಸರ್ಪಿರಾಪಸ್ಸ್ರೋತಸ್ಸ್ವರಣೀಷು ಚಾಗ್ನಿಃ। ಏವಮಾತ್ಮಾತ್ಮನಿ ಜಾಯತೇಽಸೌ ಸತ್ಯೇನ ತಪಸಾ ಯೋಽನುಪಶ್ಯತಿ। ಊರ್ಣನಾಭಿರ್ಯಥಾ ತಂತೂನ್ ಸೃಜತೇ ಸಗ್ಂಹರತ್ಯಪಿ। ಜಾಗ್ರತ್ಸ್ವಪ್ನೇ ತಥಾ ಜೀವೋ ಗಚ್ಛತ್ಯಾಗಚ್ಛತೇ ಪುನಃ ॥ (13)**

ತಾ : ತಿಲ (ಎಳ್ಳು)ದಲ್ಲಿನ ಎಣ್ಣೆಯಂತೆ ಮೊಸರಿನಲ್ಲಿನ ನವನೀತದಂತೆಯೂ, ಪ್ರವಾಹದಲ್ಲಿಯ ಜಲದಂತೆಯೂ, ಕಟ್ಟಿಗೆಯಲ್ಲಿನ ಅಗ್ನಿಯಂತೆಯೂ, ಪರಮಾತ್ಮನು ಅಂತಃಕರಣದಲ್ಲಿ ನಿಗೂಢವಾಗಿದೆ. ಸತ್ಯದಿಂದಲೂ, ತಪಸ್ಸಿನಿಂದಲೂ, ಧ್ಯಾನಾಭ್ಯಾಸದಿಂದಲೂ ಅಂತಹ ಆತ್ಮಸ್ವರೂಪವನ್ನು ಮಾನವನು ಸಾಕ್ಷಾತ್ಕರಿಸಿಕೊಳ್ಳುತ್ತಿದ್ದಾನೆ. ಜೇಡರ ಹುಳು ಹೇಗೆ ಎಳೆಗಳನ್ನು ಸೃಜಿಸಿ ಗೂಡನ್ನು ನಿರ್ಮಿಸಿಕೊಂಡು ಅದರೊಳಕ್ಕೆ ಸೇರಿಕೊಳ್ಳವುದೋ ಅದೇ ರೀತಿ ಜೀವನು ಕೂಡಾ ಜಾಗ್ರತ್ ಸ್ವಪ್ನಗಳನ್ನು ನಿರ್ಮಿಸಿ ಕೊಂಡು ಅವುಗಳಲ್ಲಿ ಸಂಚರಿಸುತ್ತಿರುವನು.

**ಮಂ.ಶ್ಲೋ|| ನೇತ್ರಸ್ಥಂ ಜಾಗರಿತಂ ವಿದ್ಯಾತ್ಕಂಠೇ ಸ್ವಪ್ನಗ್ಂ ಸಮಾವಿಶೇತ್| ಸುಷುಪ್ತಗ್ಂ ಹೃದಯಸ್ಥಂ ತು ತುರೀಯಂ ಮೂರ್ಧ್ನಿ ಸಂಸ್ಥಿತಮ್ | ಯತ್ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹಾ| ಆನಂದಮೇತಜ್ಜೀವಸ್ಯ ಯದ್ಜ್ಞಾತ್ವಾ ಮುಚ್ಯತೇ ಬುಧಃ| ಸರ್ವವ್ಯಾಪಿನಮಾತ್ಮಾನಂ ಕ್ಷೀರೇಸರ್ಪಿರಿವಾರ್ಪಿತಮ್ | ಆತ್ಮವಿದ್ಯಾತಪೋಮೂಲಂ ತದ್ಬ್ರಹ್ಮೋಪನಿಷತ್ಪದಂ| ತದ್ಬ್ರಹ್ಮೋಪನಿಷತ್ಪದಮಿತಿ (14)**

ತಾ : ಈ ಜೀವನು ಜಾಗ್ರದವಸ್ಥೆಯಲ್ಲಿ ನೇತ್ರಗಳಲ್ಲಿರುವನು, ಸ್ವಪ್ನಾವಸ್ಥೆಯಲ್ಲಿ ಕಂಠದಲ್ಲಿರುವನು. ಸುಷುಪ್ತಿ ದೆಶೆಯಲ್ಲಿ ಹೃದಯದಲ್ಲಿರುವನು ತುರೀಯಾವಸ್ಥೆಯಲ್ಲಿ ಸಹಸ್ರಾರದಲ್ಲಿರುವುದು. ವಾಗೀಂದ್ರಿಯ, ಮನಸ್ಸು ಯಾವ ಪರಮಾತ್ಮನನ್ನು ಸೇರಲಾರದೆ ಹಿಂದಕ್ಕೆ ಬಂದುಬಿಡುವದೋ, ಬ್ರಹ್ಮಜ್ಞಾನಿಯು ಆ ಆತ್ಮವನ್ನು ತಿಳಿದುಕೊಂಡು ಜೀವನ್ಮುಕ್ತವಾಗುತ್ತಾನೋ, ಆ ಆತ್ಮವೇ ಜೀವನ ಪರಮಾರ್ಥ ಮತ್ತು ಆನಂದ. ಕ್ಷೀರದಲ್ಲಿರಿಸಲಾದ ತುಪ್ಪದಂತೆ, ಬ್ರಹ್ಮವಿದ್ಯಾ ತಪಸ್ಸನ್ನೇ ಸ್ವರೂಪವಾಗುಳ್ಳ ಆ ಪರಮಾತ್ಮನನ್ನು ಸರ್ವಾಂತರ್ಯಾಮಿಯಾಗಿ ಬ್ರಹ್ಮವೇತ್ತರು ತಿಳಿದುಕೊಂಡಿದ್ದಾರೆ. ಆ ಪರಮಾತ್ಮನನ್ನು ಬ್ರಹ್ಮೋಪನಿಷತ್ತು ತಿಳಿಸುತ್ತಿದೆ. ಆ ಪರಬ್ರಹ್ಮವನ್ನು ಬ್ರಹ್ಮೋಪನಿಷತ್ತು ತಿಳಿಸುತ್ತದೆ. (ಬ್ರಹ್ಮೋಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ|| ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ|| ಓಂ ಶಾಂತಿ ಶಾಂತಿ ಶಾಂತಿಃ||**





# ಕೈವಲ್ಯೋಪನಿಷತ್ - 12

(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

(ಪಂಚರುದ್ರಾಂತರ್ಗತಾ)

**ಮಂ.ಶ್ಲೋ॥ ಕೈವಲ್ಯೋಪನಿಷದ್ವೇದ್ಯಂ ಕೈವಲ್ಯಾನಂದತುಂದಿಲಮ್ ।**
**ಕೈವಲ್ಯಗಿರಿಜಾರಾಮಂ, ಸ್ವಮಾತ್ರಂ ಕಲಯೇಽನ್ವಹಮ್ ॥**

**ಮಂ.ಶ್ಲೋ॥ ಅಥಾಶ್ವಲಾಯನೋ ಭಗವನ್ತಂ, ಪರಮೇಷ್ಠಿನಂ ಪರಿಸಮೇತ್ಯೋವಾಚ ॥ (1)**

ತಾ : ಆನಂತರ (ಸಾಧನ ಚತುಷ್ಟಯ ಸಂಪತ್ತನ್ನು ಹೊಂದಿದ ಮೇಲೆ) ಅಶ್ವಲಾಯನ ಮುನಿಯು ಭಗವಂತನಾದ ಬ್ರಹ್ಮದೇವನ ಸನ್ನಿಧಿಗೆ ಬಂದು ಹೀಗೆ ಕೇಳುತ್ತಿದ್ದಾನೆ.

**ಮಂ.ಶ್ಲೋ॥ ಅಧೀಹಿ ಭಗವನ್ ಬ್ರಹ್ಮವಿದ್ಯಾಂ ವರಿಷ್ಠಾಂ ಸದಾ ಸದ್ಭಿಸ್ಸೇವ್ಯಮಾನಾಂ ನಿಗೂಢಾಮ್।**
**ಯಯಾಽಚಿರಾತ್ಸರ್ವಪಾಪಂ ವ್ಯಪೋಹ್ಯ, ಪರಾತ್ಪರಂ ಪುರುಷಮುಪೈತಿ ವಿದ್ವಾನ್॥ (2)**

ತಾ : ಓ ಭಗವಂತಾ, ಉತ್ತಮವಾದುದು, ನಿಗೂಢವಾದುದು, ಜ್ಞಾನಿಯಾದವನು ಯಾವುದ-ರಿಂದ ಶೀಘ್ರವಾಗಿ ಪಾಪಗಳನ್ನು ಹೋಗಲಾಡಿಸಿಕೊಂಡಂತಹವನಾಗಿ ಶ್ರೇಷ್ಠವಾಗಿರುವ ಪರಮಾತ್ಮ-ನನ್ನು ಹೊಂದುವನೋ ಅಂತಹ ಬ್ರಹ್ಮವಿದ್ಯೆಯನ್ನು ಉಪದೇಶಿಸು ಎಂದು ಪ್ರಾರ್ಥಿಸಿದ.

**ಮಂ.ಶ್ಲೋ॥ ತಸ್ಮೈ ಸಹೋವಾಚ ಪಿತಾಮಹಾಶ್ಚ, ಶ್ರದ್ಧಾ ಭಕ್ತಿ ಧ್ಯಾನ ಯೋಗಾದವೈಹಿ।**
**ನಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ॥ (3)**

ತಾ : (ಅಶ್ವಲಾಯನ ಮುನಿಗೆ ಬ್ರಹ್ಮದೇವ ಹೇಳುತ್ತಿದ್ದಾನೆ) ಓ ಅಶ್ವಲಾಯನಾ! ನೀನು ಶ್ರದ್ಧೆ ಭಕ್ತಿ ಧ್ಯಾನವೆನ್ನುವುದನ್ನು ಧ್ಯಾನದಿಂದ ಯೋಗವೆಂದು ಇದರಿಂದ ತಿಳಿದುಕೋ. ಕರ್ಮದಿಂದಲೂ ಪುತ್ರಾದಿಗಳಿಂದಲೂ ಧನದಿಂದಲೂ ಮೋಕ್ಷವು ಸಿದ್ಧಿಸುವುದಿಲ್ಲ. ಕೇವಲ ತ್ಯಾಗರೂಪ ಸಂನ್ಯಾಸ-ದಿಂದಲೇ ವಿದ್ವಾಂಸರು(ಜ್ಞಾನಿಗಳು) ಅಮೃತತ್ವವನ್ನು (ಮೋಕ್ಷವನ್ನು) ಹೊಂದುವರು.

**ಮಂ.ಶ್ಲೋ॥ ಪರೇಣನಾಕಂ ನಿಹಿತಂ ಗುಹಾಯಾಂ, ವಿಭ್ರಾಜತೇ ಯದ್ಯತಯೋ ವಿಶನ್ತಿ।**
**ವೇದಾನ್ತವಿಜ್ಞಾನ ಸುನಿಶ್ಚಿತಾರ್ಥಾಃ ಸನ್ನ್ಯಾಸಯೋಗಾದ್ಯತಯಶ್ಶುದ್ಧಸತ್ತ್ವಾಃ॥(4)**

ತಾ : ಸ್ವರ್ಗಕ್ಕಿಂತ ಶ್ರೇಷ್ಠವಾದುದಾಗಿ ಹೃದಯ ಗುಹೆಯಲ್ಲಿರುವಂತಹುದಾಗಿ ಯಾವುದು ಪ್ರಕಾಶಿಸುತ್ತಿರುವುದೋ ಆ ಪರಬ್ರಹ್ಮವನ್ನು ವೇದಾಂತ ಜ್ಞಾನದಿಂದ ಚೆನ್ನಾಗಿ ನಿಶ್ಚಯಿಸಿರುವಂತಹ

ಅರ್ಥವನ್ನು ತಿಳಿದುಕೊಂಡವರು ಸಂನ್ಯಾಸಯೋಗದಿಂದ ಪರಿಶುದ್ಧವಾದ ಅಂತಃಕರಣ ಹೊಂದಿ-ದವರಾದ ಯತಿಗಳು ಪ್ರವೇಶಿಸುತ್ತಿದ್ದಾರೆ. ಆ ಪರಬ್ರಹ್ಮವನ್ನು ಹೊಂದುತ್ತಿದ್ದಾರೆ.

**ಮಂ.ಶ್ಲೋ॥ ತೇ ಬ್ರಹ್ಮಲೋಕೇಷು ಪರಾನ್ತಕಾಲೇ, ಪರಾಮೃತಾತ್ಪರಿಮುಚ್ಯನ್ತಿ ಸರ್ವೇ।**
**ವಿವಿಕ್ತದೇಶೇ ಚ ಸುಖಾಸನಸ್ಥಃ ಶುಚಿಸ್ಸಮಗ್ರೀವಶಿರಶ್ಶರೀರಃ॥ (5)**

ತಾ : ಆ ಯತಿಗಳೆಲ್ಲರೂ ಕೊನೆಯ ಜನ್ಮದ ಅಂತ್ಯದಲ್ಲಿ ಬ್ರಹ್ಮಲೋಕದಲ್ಲಿ ಪರಮಾತ್ಮನನ್ನು ಹೊಂದಿ ಪುನರ್ಜನ್ಮ ರಹಿತವಾದ ಮೋಕ್ಷವನ್ನು ಹೊಂದುತ್ತಿದ್ದಾರೆ. ಏಕಾಂತ ಪ್ರದೇಶದಲ್ಲಿ ಸುಖಾಸನಸ್ಥನಾಗಿ ಪರಿಶುದ್ಧ ಮನಸ್ಕನಾಗಿ, ಕಂಠ, ಶಿರ, ದೇಹ, ಮೂರನ್ನೂ ಸಮಾನವಾಗಿಟ್ಟು ಕೊಂಡಂತಹವನಾಗಿ.

**ಮಂ.ಶ್ಲೋ॥ ಅಂತ್ಯಾಶ್ರಮಸ್ಥಸ್ಸಕಲೇನ್ದ್ರಿಯಾಣಿ ನಿರುಧ್ಯ ಭಕ್ತ್ಯಾ ಸ್ವಗುರುಂ ಪ್ರಣಮ್ಯ ।**
**ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿನ್ತ್ಯ ಮಧ್ಯೇ ವಿಶದಂ ವಿಶೋಕಮ್ ॥ (6)**

**ಮಂ.ಶ್ಲೋ॥ ಅಚಿನ್ತ್ಯಮವ್ಯಕ್ತಮನನ್ತರೂಪಂ ಶಿವಂ ಪ್ರಶಾನ್ತಮಮೃತಂ ಬ್ರಹ್ಮ ಯೋನಿಮ್ ।**
**ತದಾದಿ ಮಧ್ಯಾನ್ತ ವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಮ್॥ (7)**

**ಮಂ.ಶ್ಲೋ॥ ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಮ್।**
**ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ। ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥ (8)**

ತಾ : (ತಾತ್ಪರ್ಯ ಶ್ಲೋಃ 6,7,8) ಸಂನ್ಯಾಸ ಭಾವದಲ್ಲಿ ಸರ್ವಧರ್ಮಗಳನ್ನು ತ್ಯಜಿಸಿ ಸಕಲೇಂದ್ರಿಯಗಳನ್ನು ನಿಗ್ರಹಿಸಿದಂತಹವನಾಗಿ, ಭಕ್ತಿಯಿಂದ ಗುರುವಿಗೆ ನಮಸ್ಕರಿಸಿ, ಹೃದಯ ಕಮಲದಲ್ಲಿ ರಜೋಗುಣವಿಲ್ಲದೆ ಶುದ್ಧವಾಗಿದೆಯೆಂದು ಭಾವಿಸಿ, ಆ ಹೃದಯ ಕಮಲದ ಮಧ್ಯದಲ್ಲಿ ಪರಿಶುದ್ಧನಾಗಿ, ದುಃಖರಹಿತವಾಗಿ, ಚಿಂತಿಸದಿರುವಂತಹವನಾಗಿ, ಅಗೋಚರನಾಗಿ, ವ್ಯಕ್ತಪಡಿಸದಿರು-ವಂತಹ ವಿವಿಧ ರೂಪಗಳನ್ನುಳ್ಳುವನಾಗಿ, ಮಂಗಳಾಕಾರನಾಗಿ, ಅತಿ ಶಾಂತಸ್ವರೂಪನಾಗಿ, ಮೋಕ್ಷ ಸ್ವರೂಪನಾಗಿ, ಮಾಯೆಗೆ ಜನ್ಮ ಕಾರಣನಾಗಿ, ಆದಿ ಮಧ್ಯಾಂತ ರಹಿತನಾಗಿ, ಒಬ್ಬನೇ ಆಗಿ, ಸರ್ವವ್ಯಾಪಿಯಾಗಿ, ಜ್ಞಾನಾನಂದ ಸ್ವರೂಪನಾಗಿ, ರೂಪರಹಿತವಾಗಿ, ಆಶ್ಚರ್ಯಕರನಾಗಿ, ಪ್ರಭುವಾಗಿ, ತ್ರೀ ನೇತ್ರನಾಗಿ, ನೀಲಕಂಠನಾಗಿ, ಶಾಂತಸ್ವಭಾವನಾಗಿ, ಉಮಾಸಹಿತನಾಗಿರುವ ಪರಮೇಶ್ವರನನ್ನು ಧ್ಯಾನಿಸಿ ಮುನಿಯಾದವನು(ಮನನ ಶೀಲನು) ಸರ್ವಸಾಕ್ಷಿಯಾಗಿ ಅಜ್ಞಾನಕ್ಕೆ ಅನ್ಯವಾದುದಾಗಿ ಸಕಲ ಭೂತಗಳಿಗೂ ಆದಿಕಾರಣವಾದ ಪರಮಾತ್ಮನನ್ನು ಸೇರುತ್ತಿದ್ದಾನೆ (ವಿರಜಸವೆಂದರೆ ವೈಕುಂಠ ಕೈಲಾಸಗಳೆಂದು ಗೂಢಾರ್ಥ.)

**ಮಂ.ಶ್ಲೋ॥ ಸ ಬ್ರಹ್ಮಾ ಸಶಿವಸ್ಸೇನ್ದ್ರಸ್ಸೋಽಕ್ಷರಃ ಪರಮಸ್ಸ್ವರಾಟ್।**
**ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಸ್ಸ ಚನ್ದ್ರಮಾಃ (9)**

ತಾ : ಆ ಪರಮಾತ್ಮನೇ ಬ್ರಹ್ಮ, ಶಿವ, ಇಂದ್ರ, ನಾಶವಿಲ್ಲದವನು ಶ್ರೇಷ್ಠನು ಸ್ವಯಂಪ್ರಭುವು, ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರ ಇವೆಲ್ಲವೂ ಆಗಿದ್ದಾನೆ. (ಪರಮಾತ್ಮನಿಗಿಂತ ಭಿನ್ನವಾದುದು ಯಾವುದೂ ಇಲ್ಲ.)

ಮಂ.ಶ್ಲೋ॥ ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಗ್ಂ ಸನಾತನಮ್ ।
ಜ್ಞಾತ್ವಾ ತಂ ಮೃತ್ಯುಮತ್ಯೇತಿ, ನಾನ್ಯಃ ಪಂಥಾ ವಿಮುಕ್ತಯೇ ॥ (10)

ತಾ : ಈಗಿರುವಂತಹುದು, ಇನ್ನು ಮುಂದೆ ಜರುಗ(ಉಂಟಾಗಿ)ಆರುವಂತಹ ಸರ್ವವು ಮತ್ತು ಶಾಶ್ವತವಾಗಿರುವಂತಹುದು ಆ ಪರಮಾತ್ಮನೇ, ಆ ಪರಮಾತ್ಮನನ್ನು ತಿಳಿದುಕೊಂಡು (ಜ್ಞಾನಿ) ಮೃತ್ಯುವಿನಿಂದ ಧನ್ಯನಾಗುತ್ತಿದ್ದಾನೆ. ಅಂದರೆ ಮೋಕ್ಷವನ್ನು ಪಡೆಯುತ್ತಿದ್ದಾನೆ ಇದಕ್ಕೆ ಮೀರಿದ ಮೋಕ್ಷ ಪ್ರಾಪ್ತಿಗೆ ಮತ್ತೊಂದು ಮಾರ್ಗವಿಲ್ಲ.

ಮಂ.ಶ್ಲೋ॥ ಸರ್ವಭೂತಸ್ಥಮಾತ್ಮಾನಂ, ಸರ್ವಭೂತಾನಿ ಚಾತ್ಮನಿ ।
ಸಂಪಶ್ಯನ್ ಬ್ರಹ್ಮಪರಮಂ, ಯಾತಿ ನಾನ್ಯೇನ ಹೇತುನಾ ॥ (11)

ತಾ : ಸಮಸ್ತ ಭೂತಗಳಲ್ಲಿ ತನ್ನನ್ನು, ತನ್ನಲ್ಲಿ ಸಮಸ್ತ ಭೂತಗಳನ್ನು ಸರಿಯಾಗಿ ತಿಳಿದುಕೊಳ್ಳ ಬಲ್ಲವನು ಪರಬ್ರಹ್ಮವನ್ನು ಸೇರುತ್ತಾನೆ. ಬೇರೆ ಯಾವ ಕಾರಣಗಳಿಂದಲೂ ಹೊಂದುವುದಕ್ಕೆ ಸಾಧ್ಯವಾಗುವುದಿಲ್ಲ. (ಅಂದರೆ ಮತ್ತೊಂದು ಪದ್ಧತಿಯಲ್ಲಿ ಪರಬ್ರಹ್ಮನಲ್ಲಿ ಐಕ್ಯವಾಗಲು ಸಾಧ್ಯವಿಲ್ಲ.)

ಮಂ.ಶ್ಲೋ॥ ಆತ್ಮಾನಮರಣಿಂ ಕೃತ್ವಾ, ಪ್ರಣವಂ ಚೋತ್ತರಾರಣಿಮ್ ।
ಜ್ಞಾನನಿರ್ಮಥನಾಭ್ಯಾಸಾತ್, ಪಾಶಂ(ಪಾಪಂ) ದಹತಿ ಪಂಡಿತಃ ॥ (12)

ತಾ : ತನ್ನ ದೇಹವೆನ್ನುವ ಅಧರಾರಣಿಗವೆನ್ನುವ (ಯಜ್ಞದಲ್ಲಿ ಕೆಂಡವನ್ನು ಮಾಡಲು ಅಡಿ ಉದ್ದದ ಕೊಳವೆ (ಮರದ ಕೊಳವೆ) ಓಂಕಾರವೆನ್ನುವ ಊರ್ಧ್ವಾರಣೆಯನ್ನಾಗಿ ಜ್ಞಾನವೆನ್ನುವುದನ್ನು ಮಥಿಸುವ ಪರಿಶ್ರಮವಹಿಸಿ, ಅಜ್ಞಾನವೆನ್ನುವ ಪಾಶವನ್ನು ಬ್ರಹ್ಮಜ್ಞಾನಿಯಾದವನು ದಹಿಸುತ್ತಿದ್ದಾನೆ.

ಮಂ.ಶ್ಲೋ॥ ಸ ಏವ ಮಾಯಾ ಪರಿಮೋಹಿತಾತ್ಮಾ ಶರೀರಮಾಸ್ಥಾಯ ಕರೋತಿ ಸರ್ವಮ್ ।
ಸ್ತ್ರ್ಯನ್ನ(ಸ್ತ್ರೀ-ಅನ್ನ)ಪಾನಾದಿ ವಿಚಿತ್ರಭೋಗೈಃ ಸ ಏವ ಜಾಗ್ರತ್ಪರಿತೃಪ್ತಿಮೇತಿ ॥ (13)

ತಾ : ಆ ಪರಮಾತ್ಮನೇ ಮಾಯೆಯಿಂದ ಮೋಹಿತವಾದ ಅಂತಃಕರಣವುಳ್ಳವನಾಗಿ, ಶರೀರ-ವನ್ನು ಹೊಂದಿ ಸಮಸ್ತ ಕಾರ್ಯಗಳನ್ನು ಮಾಡುತ್ತಿದ್ದಾನೆ. ಆತನೇ ಜಾಗ್ರದವಸ್ಥೆಯಲ್ಲಿ ಸ್ತ್ರೀ, ಅನ್ನಪಾನ ಮೊದಲಾದ ವಿಚಿತ್ರ ಭೋಗಗಳಿಂದ ಸಂತುಷ್ಟಿ ಹೊಂದುತ್ತಿದ್ದಾನೆ. (ಪರಮಾತ್ಮನು ಮಾಯಾ-ರಹಿತನೆಂದು, ಮಾಯೆಗೆ ಒಳಗಾಗಿ ಪ್ರಪಂಚವನ್ನು ಉಂಟುಮಾಡಿದವನೆಂದು ತಿಳಿಯಬೇಕು.)

ಮಂ.ಶ್ಲೋ॥ ಸ್ವಪ್ನೇ ತು ಜೀವಸ್ಸುಖದುಃಖಭೋಕ್ತಾ, ಸ್ವಮಾಯಯಾ ಕಲ್ಪಿತ ವಿಶ್ವಲೋಕೇ ।
ಸುಷುಪ್ತಿಕಾಲೇ ಸಕಲೇ ವಿಲೀನೇ, ತಮೋಽಭಿಭೂತಸ್ಸುಖರೂಪಮೇತಿ ॥ (14)

ತಾ : ಜೀವನು ಸ್ವಪ್ನ ರೂಪದಲ್ಲಿ ತನ್ನ ಮಾಯೆಯಿಂದ ಕಲ್ಪಿಸಲ್ಪಟ್ಟು, ಸಕಲ ಲೋಕಗಳಲ್ಲಿ ಸುಖದುಃಖಗಳನ್ನು ಅನುಭವಿಸುತ್ತಿದ್ದಾನೆ. ಸುಷುಪ್ತಿ ಕಾಲದಲ್ಲಿ ಸರ್ವವೂ ಲಯವಾಗಿರುವಾಗ, ಅಜ್ಞಾನದಿಂದ ಆವರಿಸಲ್ಪಟ್ಟವನಾಗಿ ಸುಖಸ್ವರೂಪವನ್ನು ಹೊಂದುತ್ತಿರುತ್ತಾನೆ.

ಮಂ.ಶ್ಲೋ॥ ಪುನಶ್ಚ ಜನ್ಮಾನ್ತರ ಕರ್ಮಯೋಗಾತ್, ಸ ಏವ ಜೀವಃ ಸ್ವಪಿತಿ ಪ್ರಬುದ್ಧಃ ।
ಪುರತ್ರಯೇ ಕ್ರೀಡತಿ ಯಶ್ಚಜೀವಃ, ತತಸ್ತು ಜಾತಗ್ಂ ಸಕಲಂ ವಿಚಿತ್ರಮ್॥ (15)

ತಾ : ಮತ್ತೆ ಪೂರ್ವಜನ್ಮ ಕರ್ಮ ಸಂಬಂಧದಿಂದಾಗಿ, ಜೀವನೇ ದುಃಖ ಅಥವಾ ಅಜ್ಞಾನದಿಂದ ಎಚ್ಚೆತ್ತು ಮತ್ತೆ ಜಾಗೃತಿಯನ್ನು ಹೊಂದುವಂತಹವನಾಗುತ್ತಾನೆ. ಸ್ಥೂಲ ಸೂಕ್ಷ್ಮ ಕಾರಣಗಳೆನ್ನುವ ಮೂರು ದೇಹಗಳಲ್ಲಿಯೂ ಸಂಚರಿಸುವ ಜೀವನು ಯಾರೋ, ಅವನಿಂದ ವಿಚಿತ್ರವಾದ ವಿಶ್ವವು ಉಂಟಾಗುತ್ತದೆ.

**ಮಂ.ಶ್ಲೋ॥ ಆಧಾರಮಾನನ್ದಮಖಣ್ಡಬೋಧಂ ಯಸ್ಮಿನ್ ಲಯಂ ಯಾತಿ ಪುರತ್ರಯಂ ಚ ।**
**ಏತಸ್ಮಾಜ್ಜಾಯತೇ ಪ್ರಾಣೋ, ಮನಸ್ಸರ್ವೇನ್ದ್ರಿಯಾಣಿಚ ।**
**ಖಂ ವಾಯುರ್ಜ್ಯೋತಿರಾಪಶ್ಚ, ಪೃಥಿವೀ ವಿಶ್ವಸ್ಯ ಧಾರಿಣೀ ॥ (16)**

ತಾ : ಸಮಸ್ತಕ್ಕೂ ಆಧಾರವಾಗಿರುವ, ಆನಂದವಾಗಿರುವ, ಅಖಂಡ ಜ್ಞಾನವಾಗಿರುವಂತಹ, ಪರಮಾತ್ಮನಲ್ಲಿ ಮೂರು ಶರೀರಗಳು ಲಯವಾಗುತ್ತದೆ. ಇದರಿಂದ (ಪರಮಾತ್ಮನಿಂದ) ಪ್ರಾಣ ಮನಸ್ಸು, ಸಕಲೇಂದ್ರಿಯಗಳು ಆಕಾಶ, ವಾಯು, ಅಗ್ನಿ, ಜಲ, ಸರ್ವವನ್ನೂ ಧರಿಸಿರುವ ಭೂಮಿ ಇವೆಲ್ಲವೂ ಏರ್ಪಡುತ್ತದೆ.

**ಮಂ.ಶ್ಲೋ॥ ಯತ್ಪರಂಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ ।**
**ಸೂಕ್ಷ್ಮಾತ್ಸೂಕ್ಷ್ಮತರಂ ನಿತ್ಯಂ ತತ್ತ್ವಮೇವ ತ್ವಮೇವತತ್ ॥ (17)**

ತಾ : ಸರ್ವ ಸ್ವರೂಪವಾದ ಈ ಪ್ರಪಂಚಕ್ಕೆ ಮುಖ್ಯಸ್ಥಾನವಾಗಿಯೂ, ಸೂಕ್ಷ್ಮಕ್ಕಿಂತ ಸೂಕ್ಷ್ಮವಾಗಿಯೂ, ಇರುವಂತಹ ಪರಬ್ರಹ್ಮವ್ಯಾವುದೋ, ಅದೇ ನೀನು, ನೀನೇ ಅದು. (ಇಲ್ಲಿ ತತ್ತ್ವಮಸಿ ಎನ್ನುವ ಸಾಮವೇದ ಮಹಾವಾಕ್ಯವನ್ನು ಅನುಸರಿಸಲಾಗಿದೆ.)

**ಮಂ.ಶ್ಲೋ॥ ಜಾಗ್ರತ್ ಸ್ವಪ್ನ ಸುಷುಪ್ತ್ಯಾದಿ, ಪ್ರಪಂಚಂ ಯತ್ ಪ್ರಕಾಶತೇ ।**
**ತದ್ಬ್ರಹ್ಮಾಽಹಮಿತಿ ಜ್ಞಾತ್ವಾ, ಸರ್ವಬನ್ಧೈಃ ಪ್ರಮುಚ್ಯತೇ ॥ (18)**

ತಾ : ಅವಸ್ಥೆಗಳಾದ ಜಾಗೃತ್, ಸ್ವಪ್ನ, ಸುಷುಪ್ತಿ, ಮುಂತಾದುವುಗಳಲ್ಲಿ ಯಾವ ಪ್ರಪಂಚವನ್ನು ತಿಳಿಸಲಾಗಿದೆಯೋ ಅದೇ ಪ್ರಕಾಶಿಸುತ್ತದೆ. (ಗೋಚರವಾಗುತ್ತದೆ.) ಅದು 'ನಾನೇ' ಎಂದು ತಿಳಿದು ಕೊಂಡಲ್ಲಿ ಎಲ್ಲ ಬಂಧಗಳಿಂದಲೂ ವಿಮುಕ್ತಿ ದೊರಕುತ್ತದೆ. ಬಂಧಮುಕ್ತಿಯೇ ಮೋಕ್ಷ ('ಅಯಮಾತ್ಮಾ ಬ್ರಹ್ಮ' ಎನ್ನುವ ಅಥರ್ವಣ ವೇದದ ಮಹಾವಾಕ್ಯವನ್ನು ಹೇಳಲಾಗಿದೆ.)

**ಮಂ.ಶ್ಲೋ॥ ತ್ರಿಷುಧಾಮಸು ಯದ್ಭೋಗ್ಯಂ, ಭೋಕ್ತಾ ಭೋಗಶ್ಚ ಯದ್ಭವೇತ್ ।**
**ತೇಭ್ಯೋ ವಿಲಕ್ಷಣಸ್ಸಾಕ್ಷಿ, ಚಿನ್ಮಾತ್ರೋಽಹಂ ಸದಾಶಿವಃ (19)**

ತಾ : ತ್ರಿವಿಧ ದೇಹಗಳೆನ್ನುವ ಮೂರು ಸ್ಥಾನಗಳಲ್ಲಿಯೂ ಅನುಭವಿಸುವಂತಹದು, ಅನುಭವಿಸುವವನು, ಅನುಭವ, ಎನ್ನುವುದು ಯಾವುದೋ ಅದಕ್ಕಿಂತ ಬೇರೆಯಾದವನು, ಸಾಕ್ಷಿಯು, ಚಿನ್ಮಾತ್ರ ಸ್ವರೂಪನೂ, ಆದ ಸದಾಶಿವನೇ ನಾನು. (ಇಲ್ಲಿ 'ಪ್ರಜ್ಞಾನಂ ಬ್ರಹ್ಮ' ಎಂಬ ಋಗ್ವೇದ ವಾಕ್ಯವನ್ನು ಸ್ಮರಿಸಬೇಕು.)

**ಮಂ.ಶ್ಲೋ॥ ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಮ್ ।**
**ಮಯಿ ಸರ್ವಂ ಲಯಂ ಯಾತಿ, ತದ್ಬ್ರಹ್ಮಾಽದ್ವಯಮಸ್ಮ್ಯಹಮ್ ॥ (20)**

ತಾ : ನನ್ನಲ್ಲಿಂದಲೇ ಸರ್ವವೂ ಉಂಟಾಗುತ್ತದೆ. ನನ್ನಲ್ಲೇ ಸರ್ವವೂ ಇದೆ. ನನ್ನಲ್ಲೇ ಸರ್ವವೂ ಲಯವಾಗುತ್ತಿದೆ. ಅಂತಹ ಅದ್ವಯವಾದ ಬ್ರಹ್ಮವು ನಾನೇ. (ಅಹಂಬ್ರಹ್ಮಾಸ್ಮಿ) ಎನ್ನುವ (ಯಜುರ್ವೇದದ) ಮಹಾವಾಕ್ಯ ಯಜುರ್ವೇದದ್ದು.)

**ಮಂ.ಶ್ಲೋ॥ ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಿದಂ ವಿಚಿತ್ರಮ್।**
**ಪುರಾತನೋಽಹಂ ಪುರುಷೋಽಹಮೀಶೋ, ಹಿರಣ್ಮಯೋಽಹಂ ಶಿವರೂಪಮಸ್ಮಿ॥(21)**

ತಾ : ಅಣುವಿಗಿಂತ ಅಣುವಾಗಿಯೂ, ಮಹತ್ತಿಗಿಂತ ಮಹತ್ತಾಗಿಯೂ ಇರುವವನು, ವಿಚಿತ್ರವಾದ ವಿಶ್ವವು ನಾನೇ. ಆದಿ ಪುರುಷನೂ ನಾನೇ. ಈಶ್ವರನೂ (ಪರಮಾತ್ಮನೂ) ನಾನೇ. ನಾನು ಜ್ಯೋತಿ ಸ್ವರೂಪವಾದವನು, ಮಂಗಳಸ್ವರೂಪನೂ ಆಗಿದ್ದೇನೆ.

**ಮಂ.ಶ್ಲೋ॥ ಅಪಾಣಿಪಾದೋಽಹಮಚಿನ್ತ್ಯಶಕ್ತಿಃ ಪಶ್ಯಾಮ್ಯಚಕ್ಷುಃ ಸ ಶೃಣೋಮ್ಯಕರ್ಣಃ ।**
**ಅಹಂ ವಿಜಾನಾಮಿ ವಿವಿಕ್ತರೂಪೋ, ನ ಚಾಸ್ತಿ ವೇತ್ತಾ ಮಮ ಚಿತ್ಸದಾಽಹಮ್ ॥(22)**

ತಾ : ನಾನು ಕೈಗಳು ಕಾಲುಗಳು ಇಲ್ಲದವನಾಗಿದ್ದರೂ, ಚಿಂತಿಸತಕ್ಕವನೆಂಬ ಶಕ್ತಿಯುಳ್ಳವನು. ಕಣ್ಣುಗಳಿಲ್ಲದಿದ್ದರೂ ನೋಡಬಲ್ಲವನು. ಕಿವಿಗಳಿಲ್ಲದಿದ್ದರೂ ಕೇಳುವವನು. ನಾನು ಸರ್ವವನ್ನೂ ಅರಿಯಬಲ್ಲೆ. ಒಂದೇ ವಿಧವಾದ ರೂಪವುಳ್ಳವನು ನನ್ನನ್ನು ಸರಿಯಾಗಿ ತಿಳಿದುಕೊಳ್ಳುವವನು ಇಲ್ಲ. ನಾನು ಯಾವಾಗಲೂ ಚಿನ್ಮಾತ್ರಸ್ವರೂಪನೇ.

**ಮಂ.ಶ್ಲೋ॥ ವೇದೈರನೇಕೈರಹಮೇವ ವೇದ್ಯೋ, ವೇದಾನ್ತಕೃದ್ವೇದವಿದೇವ ಚಾಽಹಮ್ ।**
**ನ ಪುಣ್ಯಪಾಪೇ ಮಮ ನಾಸ್ತಿ ನಾಶೋ, ನ ಜನ್ಮ ದೇಹೇಂದ್ರಿಯ ಬುದ್ಧಿರಸ್ತಿ ॥ (23)**

ತಾ : ವೇದಗಳಿಂದ ತಿಳಿಯಲಾಗುವವನು ನಾನೇ. ವೇದಾಂತ ಸಂಪ್ರದಾಯ ಪ್ರವರ್ತ ವರ್ತಕನು ನಾನೇ. ವೇದಾಂತಾರ್ಥಗಳನ್ನು ತಿಳಿದುಕೊಂಡವನು ನಾನೇ ನನಗೆ ಪಾಪ ಪುಣ್ಯಗಳಿಲ್ಲ. ನನಗೆ ನಾಶವಿಲ್ಲ. ನನಗೆ ಜನ್ಮವು, ದೇಹ, ಇಂದ್ರಿಯಗಳು, ಬುದ್ಧಿ, ಎನ್ನುವುವೂ ಇಲ್ಲ.

**ಮಂ.ಶ್ಲೋ॥ ನ ಭೂಮಿ ರಾಪೋ ಮಮ ವಹ್ನಿರಸ್ತಿ, ನಚಾಽನಿಲೋ ಮೇಽಸ್ತಿ ನಚಾಮ್ಬರಂ ಚ ।**
**ಏವಂ ವಿದಿತ್ವಾ ಪರಮಾತ್ಮರೂಪಂ, ಗುಹಾಶಯಂ ನಿಷ್ಕಳಮದ್ವಿತೀಯಮ್ ।**
**ಸಮಸ್ತ ಸಾಕ್ಷೀಗ್ಂ ಸದಸದ್ವಿಹೀನಮ್ ಪ್ರಯಾತಿ ಶುದ್ಧಂ ಪರಮಾತ್ಮರೂಪಮ್ ॥(24)**

ತಾ : ನನಗೆ ಭೂಮಿ, ಜಲ, ಅಗ್ನಿ, ವಾಯು, ಆಕಾಶವೆನ್ನುವ ಈ ಪಂಚಭೂತಗಳು ಇಲ್ಲ. ಹೃದಯ ಕುಹರದಲ್ಲಿರುವುದು, ರೂಪರಹಿತವಾದುದು, ಎರಡನೆಯದು ಇಲ್ಲದಿರುವುದು, ಸರ್ವಕ್ಕೂ ಸಾಕ್ಷಿಯಾದುದು, ಸತ್ತು ಅಸತ್ತು ಎನ್ನುವುದು ಇಲ್ಲದಿರುವುದು, ಶುದ್ಧವಾದುದಾಗಿ ಪರಮಾತ್ಮ ಸ್ವರೂಪವನ್ನು ಹೊಂದುತ್ತಿದ್ದೇನೆ. ಅಂದರೆ ಪರಮಾತ್ಮನಲ್ಲಿ ಐಕ್ಯವಾಗುತ್ತಿದ್ದೇನೆ.

**ಮಂ.ಶ್ಲೋ॥ ಯಶ್ಶತರುದ್ರೀಯಮಧಿತೇ ಸೋऽಗ್ನಿ ಪೂತೋ ಭವತಿ । ಸ ವಾಯು ಪೂತೋ ಭವತಿ। ಸ ಸ್ವರ್ಣಸ್ತೇಯಾತ್ಪೂತೋ ಭವತಿ ಸ ಸುರಾಪಾನಾತ್ಪೂತೋ ಭವತಿ । ಸ ಬ್ರಹ್ಮಹತ್ಯಾಯಾಃ ಪೂತೋ ಭವತಿ । ಸ ಕೃತ್ಯಾऽಕೃತ್ಯಾऽತ್ಪೂತೋ ಭವತಿ । ತಸ್ಮಾದ್ವಿಮುಕ್ತಮಾಶ್ರಿತೋ ಭವತಿ ಅತ್ಯಾಶ್ರಮೀ ಸರ್ವದಾ ಸಕೃದ್ವಾ ಜಪೇತ್ (25)**

ತಾ : ಯಾರು ಈ ಶತ ರುದ್ರೀಯವನ್ನು (ಯಜುರ್ವೇದದಲ್ಲಿ ಸೇರಿರುವ ಈ ಉಪನಿಷತ್ತನ್ನು) ಅಧ್ಯಯನ ಮಾಡುವನೋ ಅವನು ಅಗ್ನಿಯಂತೆ, ಗಾಳಿಯ ಹಾಗೆ, ಪರಿಶುದ್ಧನಾಗುವನು ಮತ್ತು ಚಿನ್ನವನ್ನು ಅಪಹರಿಸಿದ ದೋಷವನ್ನು ಹೋಗಲಾಡಿಸಿಕೊಂಡವನಾಗಿಯೂ, ಮದ್ಯವನ್ನು ಸೇವಿಸಿದ ಪಾತಕದಿಂದಲೂ, ಬ್ರಹ್ಮಹತ್ಯೆಯನ್ನು ಮಾಡಿದ ಕಿಲ್ಬಿಷದಿಂದಲೂ, ಮಾಡಬೇಕಾದುದನ್ನು ಮಾಡದೆ ಹೋದ ಪಾಪದಿಂದಲೂ, ಮಾಡಬಾರದ್ದನ್ನು ಮಾಡಿದ ದೋಷದಿಂದಲೂ, ಪರಿಶುದ್ಧನಾಗುತ್ತಿದ್ದಾನೆ. ಆ ಕಾರಣದಿಂದ ಮೇಲೆ ಹೇಳಿದ ದೋಷಗಳಿಂದ ಹೊರಬರಲು ಈ ಉಪನಿಷತ್ತನ್ನು ಆಶ್ರಯಿಸಬೇಕು. (ಅಂದರೆ ಈ ಉಪನಿಷತ್ತಿನಲ್ಲಿ ಹೇಳಿರುವುದನ್ನು ಹೊಂದಲು ಬಯಸುವವನು ಅಧ್ಯಯನವನ್ನು ಮಾಡಬೇಕು ವರ್ಣಾಶ್ರಮಧರ್ಮ, ಸನ್ಯಾಸವನ್ನು ಕೈಗೊಂಡವನು (ಈ ಉಪನಿಷತ್ತನ್ನು) ನಿರಂತರ-ವಾಗಿಯಾಗಲೀ, ಒಮ್ಮೆಯಾಗಲೀ, ಜಪ ಮಾಡಬೇಕು.

**ಮಂ.ಶ್ಲೋ॥ ಅನೇನ ಜ್ಞಾನಮಾಪ್ನೋತಿ, ಸಂಸಾರಾರ್ಣವ ನಾಶನಮ್ । ತಸ್ಮಾದೇವಂ ವಿದಿತ್ವೈನಂ, ಕೈವಲ್ಯಂ ಪದಮಶ್ನುತೇ ॥ ಕೈವಲ್ಯಂ ಪದಮಶ್ನುತ ಇತಿ ॥ (26)**

**(ಕೈವಲ್ಯೋಪನಿಷತ್ತು ಸಮಾಪ್ತಿ)**

ತಾ : ಆದ್ದರಿಂದ ಪರಮಾತ್ಮನನ್ನು ಅರಿತುಕೊಂಡು ಸಂಸಾರ ಸಾಗರವನ್ನು ನಶಿಸಲು ಅವಶ್ಯವಾದ ಜ್ಞಾನವನ್ನು ಹೊಂದುತ್ತಿದ್ದಾನೆ. ಇದರಿಂದ ಕೈವಲ್ಯ ಪದವನ್ನು ಹೊಂದುತ್ತಿದ್ದಾನೆ ಶಾಶ್ವತ ಸುಖವನ್ನು ಪಡೆಯುತ್ತಾನೆ (ಕೈವಲ್ಯೋಪನಿಷತ್ತು ಸಮಾಪ್ತಿ)

**ಶಾಂತಿಮಂತ್ರ ॥ ಓಂ – ಸಹನಾವವತು – ಸಹನೌ ಭುನಕ್ತು – ಸಹವೀರ್ಯಂ ಕರವಾವಹೈತೇಜಸ್ವಿ ನಾವಧೀತಮಸ್ತು – ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**





# ಕೈವಲ್ಯೋಪನಿಷತ್ - 13

(ಶುಕ್ಲ ಯಜುರ್ವೇದಾಂತರ್ಗತ)

ಶಾಂತಿಮಂತ್ರ ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ॥ ಜಾಬಾಲೋಪನಿಷತ್ಖ್ಯಾತಂ ಸನ್ನ್ಯಾಸ ಜ್ಞಾನಗೋಚರಮ್ ।
ವಸ್ತುತಃ ತ್ರೈಪದಂ ಬ್ರಹ್ಮಸ್ವಮಾತ್ರಮವಶಿಷ್ಯತೇ ॥

ಮಂ.ಶ್ಲೋ॥ ಬೃಹಸ್ಪತಿರುವಾಚ, ಯಾಜ್ಞವಲ್ಕ್ಯಮ್, ಯದನು ಕುರುಕ್ಷೇತ್ರಂ ದೇವಾನಾಂ ದೇವಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಮವಿಮುಕ್ತಂ ವೈ ಕುರುಕ್ಷೇತ್ರಂ ದೇವಾನಾಂ ದೇವ -ಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಂ ತಸ್ಮಾದ್ಯತ್ರ ಕ್ವಚನ ಗಚ್ಛತಿ ತದೇವ ಮನ್ಯತೇಽದಂ ವೈ ಕುರುಕ್ಷೇತ್ರಂ ದೇವಾನಾಂ ದೇವಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಮತ್ರ ಹಿ ಜನ್ತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮ ವ್ಯಾಚಷ್ಟೇ ಯೇನಾಽಸಾವಮೃತೀ ಭೂತ್ವಾ ಮೋಕ್ಷೀ ಭವತಿ ತಸ್ಮಾದವಿಮುಕ್ತಮೇವ ನಿಷೇವೇತಾ ವಿಮುಕ್ತಂ ನವಿಮುಂಚೇದೇವಮೇವೈ ತದ್ಯಾಜ್ಞವಲ್ಕ್ಯಃ (1)

ತಾ : ಬೃಹಸ್ಪತಿಯು ಹೀಗೆ ಬೋಧಿಸಿದ ಯಾಜ್ಞವಲ್ಕ್ಯಾ! ಕುರುತ್ಕ್ಷೇತ್ರವು ದೇವತೆಗಳಿಗೆ ದೇವಯಜನವಾಗಿಯೂ ಸರ್ವಭೂತಗಳಿಗೆ ಬ್ರಹ್ಮ ನಿವಾಸವಾಗಿಯೂ ಇದೆ. ಈ ಕುರುಕ್ಷೇತ್ರಕ್ಕೆ ಅವಿಮುಕ್ತವೆಂದು ಹೆಸರು. ಆದ್ದರಿಂದ ಎಲ್ಲಿಗೆ ಹೋದರೂ ಕುರುಕ್ಷೇತ್ರವನ್ನು ಮೇಲೆ ಹೇಳಿದ್ದ ರೀತಿಯಾಗಿ ಭಾವಿಸಬೇಕು. ಪ್ರಾಣವು ಮೇಲಕ್ಕೆ ಹೋದಾಗ ಜೀವಿಗಳಿಗೆ ರುದ್ರನು ತಾರಕ ಮಂತ್ರವನ್ನು ಉಪದೇಶಿಸುತ್ತಾನೆ. ಅದರಿಂದ ಜೀವಿಗಳು ಮೋಕ್ಷವನ್ನು ಹೊಂದುವರು ಆದ್ದರಿಂದ ಈ ಅವಿಮುಕ್ತ ಕ್ಷೇತ್ರವನ್ನು (ಕಾಶೀ) ಮರೆಯದೆ ಎಲ್ಲರೂ ಆರಾಧಿಸಬೇಕು.

ಮಂ.ಶ್ಲೋ॥ ಅಥ ಹೈನಮತ್ರಿಃ ಪಪ್ರಚ್ಛ ಯಾಜ್ಞವಲ್ಕ್ಯಮ್ ಯ ಏಷೋಽನನ್ತೋಽವ್ಯಕ್ತ ಆತ್ಮಾ ತಂ ಕಥಮಹಂ ವಿಜಾನೀಯಾಮಿತಿಃ ಸ ಹೋವಾಚ ಯಾಜ್ಞವಲ್ಕ್ಯ ಸ್ಸೋಽವಿಮುಕ್ತ ಉಪಸ್ಯಾ ಯ ಏಷೋಽನನ್ತೋಽವ್ಯಕ್ತ ಆತ್ಮಾ ಸೋಽವಿಮುಕ್ತೇ ಪ್ರತಿಷ್ಠಿತ ಇತಿ ಸೋಽವಿಮುಕ್ತಃ ಕಸ್ಮಿನ್ ಪ್ರತಿಷ್ಠಿತ ಇತಿ, ವರಣಾಯಾಂ ನಾಶ್ಯಾಂಚ ಮಧ್ಯೆ ಪ್ರತಿಷ್ಠಿತ ಇತಿ ಕಾ ವೈ ವರಣಾ ಕಾಚ ನಾಶೀತಿ, ಸರ್ವಾನಿನ್ದ್ರಿಯ ಕೃತಾನ್ ದೋಷಾನ್ವಾರಯತೀತಿ ತೇನ ವರಣಾ ಭವತಿ, ಸರ್ವಾನಿನ್ದ್ರಿಯ ಕೃತಾನ್ ಪಾಪಾನ್ನಾಶಯತೀತಿ ತೇನ ನಾಶೀ ಭಮತಿ, ಕತಮಚ್ಚಾಽಸ್ಯ ಸ್ಥಾನಂ

**ಭವತೀತಿ; ಭ್ರುವೋಃ ಘ್ರಾಣಸ್ಯ ಚ ಯಸ್ಸನ್ಧಿಸ್ಸ ಏಷ ದ್ಯೋರ್ಲ್ಲೋಕಸ್ಯ ಪರಸ್ಯ ಚ ಸನ್ಧಿರ್ಭವತೀತಿ. ಏತದ್ವೈ ಸಂಧಿಂ ಸಂಧ್ಯಾಂ, ಬ್ರಹ್ಮವಿದ ಉಪಾಸತ ಇತಿ, ಸೋಽವಿಮುಕ್ತ ಉಪಾಸ್ಯ ಇತಿ ಸೋಽವಿಮುಕ್ತಂ ಜ್ಞಾನಮಾಚಷ್ಟೇ, ಯೋ ವೈ ತದೇತದೇವಂ ವೇದೇತಿ (2)**

ತಾ : ಆಮೇಲೆ ಅತ್ರಿ ಮಹರ್ಷಿಯು ಯಾಜ್ಞವಲ್ಕ್ಯ ಮಹರ್ಷಿಯನ್ನು ಆಶ್ರಯಿಸಿ "ಅನಂತ-ವಾಗಿಯೂ ಅವ್ಯಕ್ತವಾಗಿಯೂ ಇರುವ ಆತ್ಮವನ್ನು ನಾನು ಯಾವ ರೀತಿಯಾಗಿ ತಿಳಿದುಕೊಳ್ಳಬೇಕು" ಎಂದು ಕೇಳಿದ. ಅತ್ರಿ ಮಹಾಮುನಿಗೆ ಯಾಜ್ಞವಲ್ಕ್ಯ ಮುನಿ ಬೋಧಿಸುತ್ತಿದ್ದಾನೆ. "ನೀನು ಪ್ರಶ್ನಿಸಿದ ಪರಮಾತ್ಮ ಅವಿಮುಕ್ತದಲ್ಲಿ ಸ್ಥಿರವಾಗಿರುವುದು. ಆದ್ದರಿಂದ ಅವಿಮುಕ್ತದಲ್ಲಿ ಆತ್ಮವನ್ನು ಪ್ರತಿಷ್ಠಿಸಿ ಉಪಾಸಿಸಬೇಕಾಗಿದೆ'' ಎಂದು ಹೇಳಲು ಅತ್ರಿಮುನಿಯು, "ಆ ಆತ್ಮವು ಎಲ್ಲಿ ಪ್ರತಿಷ್ಠಿತವಾಗಿದೆ?" ಎಂದು ಮರು ಪ್ರಶ್ನಿಸಿದ. ಯಾಜ್ಞ: ಆ ಅವಿಮುಕ್ತವು ವರಣಕ್ಕೂ ನಾಶಿಗೂ ಮಧ್ಯೆ ಇದೆ. ಅತ್ರಿ:- ವರಣವೆಂದರೆ ಏನು? ನಾಶಿಯೆಂದರೆ ಏನು? ಯಾಜ್ಞ: ದೇಹೇಂದ್ರಿಯಗಳಿಂದ ಉಂಟಾಗುವ ಸಮಸ್ತ ಪಾಪಗಳನ್ನು ಹೋಗಲಾಡಿಸುವುದರಿಂದ ವರಣ ಎನ್ನುತ್ತಾರೆ. ಇಂದ್ರಿಯ ಸಂಬಂಧವಾದ ಇತರ ಪಾಪಗಳನ್ನು ಕೂಡಾ ಪೂರ್ತಿಯಾಗಿ ಹೋಗಲಾಡಿಸುವುದರಿಂದ ನಾಶಿ ಎನ್ನುತ್ತಾರೆ. ಅತ್ರಿ:- ಇವುಗಳಿಗೆ ಸ್ಥಾನವ್ಯಾವುದು? ಯಾಜ್ಞ:- ಭ್ರುಕುಟಿಗೂ ನಾಸಿಕಕ್ಕೂ ಮಧ್ಯದಲ್ಲಿರುವುದು ಇವುಗಳ ಸ್ಥಾನ. ಈ ಸಂಧಿಯನ್ನೇ ಬ್ರಹ್ಮಜ್ಞಾನಿಗಳು ಸಂಧ್ಯೆಯೆಂದು ಧ್ಯಾನಿಸುವರು. ಆದ್ದರಿಂದ ಇದು ಎಲ್ಲರೂ ಉಪಾಸಿಸುವಂತಹುದು. ಇದರಿಂದ ಮೋಕ್ಷಸ್ಥಾನವಾದ ಬ್ರಹ್ಮಜ್ಞಾನವು ಪ್ರಾಪ್ತಿ-ಯಾಗುವುದು.

**ಮಂ.ಶ್ಲೋ॥ ಅಥ ಹೈನಂ ಬ್ರಹ್ಮಚಾರಿಣ ಊಚುಃ ಕಿಂ ಜಪೇನಾಽಮೃತತ್ವಂ ಬ್ರೂಹೀತಿ, ಸಹೋವಾಚ ಯಾಜ್ಞವಲ್ಕ್ಯಃ ಶತರುದ್ರೀಯೇಣೇತ್ಯೇತಾನಿ ಹ ವಾ ಅಮೃತಸ್ಯ ನಾಮಧೇಯಾನಿ ಭವನ್ತಿ ಏತೈರ್ಹವಾ ಅಮೃತೋ ಭವತೀತಿ, ಏವಮೇವೈ ತದ್ಯಾಜ್ಞವಲ್ಕ್ಯಃ (3)**

ತಾ : ಹಿಂದೊಮ್ಮೆ ಪೂರ್ವ ಕಾಲದಲ್ಲಿ ಕೆಲವು ಬ್ರಹ್ಮಚಾರಿಗಳು ಯಾಜ್ಞವಲ್ಕ್ಯ ಮುನಿಯನ್ನು ಸಮೀಪಿಸಿ ''ಯಾವ ಜಪದಿಂದ ಮೋಕ್ಷವು ಪ್ರಾಪ್ತಿಯಾಗುವುದು?'' ಎಂದು ಪ್ರಶ್ನಿಸಿದರು. ಆ ಪ್ರಶ್ನೆಗೆ ಯಾಜ್ಞವಲ್ಕ್ಯ ಮುನೀಂದ್ರರು ''ಶತರುದ್ರೀಯ ಮಂತ್ರಪಠಣದಿಂದ ಮೋಕ್ಷ ತಪ್ಪದೆ ಸಿಗುವುದೆಂದೂ. ಅದೇ ಮೋಕ್ಷ ಸಾಧನವೆಂದು ಉತ್ತರ ಕೊಟ್ಟರು.

**ಮಂ.ಶ್ಲೋ॥ ಅಥ ಜನಕೋ ಹ ವೈದೇಹೋ ಯಾಜ್ಞವಲ್ಕ್ಯಮುಪನಮೇತ್ಯೋವಾಚ, ಭಗವನ್ ಸನ್ನ್ಯಾಸ -ಮನುಬ್ರೂಹೀತಿ, ಸ ಹೋವಾಚ ಯಾಜ್ಞವಲ್ಕ್ಯಃ, ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್, ಗೃಹೀ ಭೂತ್ವಾ ವನೀ ಭವೇತ್, ವನೀ ಭೂತ್ವಾ ಪ್ರವ್ರಜೇತ್, ಯದಿವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇತ್ ಗೃಹಾದ್ವಾ ವನಾದ್ವಾ ಅಥ ಪುನರವ್ರತೀ ವಾ ವ್ರತೀ ವಾ ಸ್ನಾತಕೋ ವಾಽಸ್ನಾತಕೋ ವೋತ್ಸನ್ನಾಗ್ನಿರನಗ್ನಿಕೋ ವಾ ಯದಹರೇವ ವಿರಜೇತ್ತದಹ -ರೇವ ಪ್ರವ್ರಜೇತ್, ತದ್ಧೈಕೇ ಪ್ರಾಜಾಪತ್ಯಾಮೇವೇಷ್ಟಿಂ ಕುರ್ವನ್ತಿ, ತದು ತಥಾ ನ ಕುರ್ಯಾದಾಗ್ನೇಯಾಮೇವ ಕುರ್ಯಾದಗ್ನಿರ್ಹವೈ ಪ್ರಾಣಃ ಪ್ರಾಣಮೇವೈ ತಯಾ ಕರೋತಿ**

ಪಶ್ಚಾತ್ತ್ರೇಧಾ ತನ್ಮಯ್ಯಾಮೇವ ಕುರ್ಯಾದೇತಯ್ಯೈವ ತ್ರಯೋ ಧಾತವೋಽಯಮತೀ ಸತ್ತ್ವಂ ರಜಸ್ತಮ ಇತಿ, ಅಯಂ ತೇ ಯೋನಿರ್ಋತ್ವಿಜೋ ಯತೋ ಜಾತೋ ಅರೋಚಥಾಃ ತಂ ಜಾನನ್ನಗ್ನ ಆರೋ ಹೋಥಾನ್ ವರ್ಧಯಾ ರಯಿಮಿತಿ, ಅನೇನ ಮನ್ತ್ರೇಣಾಽಗ್ನಿ ಮಾಜಿಘ್ರೇದೇಷ ವಾ ಅಗ್ನೇರ್ಯೋನಿರ್ಯಃ ಪ್ರಾಣಃ ಪ್ರಾಣಂ ಗಚ್ಛಸ್ವಾಹೇತ್ಯೇವಮೇವೈ ತದಾಹ ಗ್ರಾಮಾದಗ್ನಿಮಾಹೃತ್ಯ ಪೂರ್ವವದಗ್ನಿಮಾಘ್ರಾಪಯೇತ್, ಯದಗ್ನಿಂ ನವಿನ್ದೇದಪ್ಸು ಜುಹುಯಾತ್, ಅಪಾವೈ ಸರ್ವಾ ದೇವತಾಸ್ಸರ್ವಾಭ್ಯೋ ದೇವತಾಭ್ಯೋ ಜುಹೋಮಿ ಸ್ವಾಹೇತಿ, ಹುತ್ವೋದ್ಧೃತ್ಯ ಪ್ರಾಶ್ನಿಯಾತ್ಸಾಜ್ಯಂ ಹವಿರನಾಮಯಂ ಮೋಕ್ಷಮನ್ತ್ರಸ್ತ್ರಯ್ಯೇವಂ ವಿನ್ದೇತ್, ತದ್ಬ್ರಹ್ಮ ತದುಪಾಸಿತವ್ಯಮ್, ಏವಮೇವೈತದ್ಭಗವನ್ನಿತಿ ವೈ ಯಾಜ್ಞವಲ್ಕ್ಯಃ (4)

ತಾ : ಪೂರ್ವಕಾಲದಲ್ಲೊಮ್ಮೆ ವಿದೇಹ ಚಕ್ರವರ್ತಿಯಾದ ಜನಕನು ಯಾಜ್ಞವಲ್ಕ್ಯ ಮುನಿಯನ್ನು ಆಶ್ರಯಿಸಿ ಸನ್ಯಾಸವನ್ನು ಕುರಿತು ವಿವರಿಸಬೇಕೆಂದು ಪ್ರಾರ್ಥಿಸಿದ. ಆಗ ಯಾಜ್ಞವಲ್ಕ್ಯ ಮುನೀಂದ್ರ, ಈ ವಿಧವಾಗಿ ಬೋಧಿಸಿದರು. ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥವೆನ್ನುವ ಈ ಮೂರು ಆಶ್ರಮಗಳನ್ನು ಭವ್ಯವಾಗಿ ಕಳೆದಾದ ಮೇಲೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ಅನುಕೂಲವಾದ ಸಮಯವು ಪ್ರಾಪ್ತಿಯಾದಲ್ಲಿ ಮೊದಲ ಎರಡು ಆಶ್ರಮಗಳನ್ನು ನಿರ್ವಹಿಸಿ (ವಾನಪ್ರಸ್ಥವಿಲ್ಲದೆಯೆ) ಸನ್ಯಾಸವನ್ನು ಗ್ರಹಿಸಬಹುದು. ಆಚಾರ ನಿಯಮಗಳೆಲ್ಲವೂ ಇಲ್ಲದಿದ್ದರೂ ಸ್ನಾತಕನಾಗಿದ್ದರೂ ಆಗದಿದ್ದರೂ ಅಗ್ನಿಕಾರ್ಯಗಳನ್ನು ನಿರ್ವಹಿಸುವಂತಹವನಾಗಿದ್ದರೂ, ನಿರ್ವಹಿಸದಿದ್ದರೂ, ಯಾರು ಬೇಕಾದರೂ ಯಾವಾಗ ತೀವ್ರವಾದ ವೈರಾಗ್ಯವು ಉಂಟಾಗುವುದೋ, ಆಗಲೇ ಆ ಮುಹೂರ್ತದಲ್ಲೇ ಸಂನ್ಯಾಸವನ್ನು ಸ್ವೀಕರಿಸಬೇಕು. ಕೆಲವರು ವಿಧಿಸಿರುವಂತೆ ಪ್ರಾಜಾಪತ್ಯ ಯಜ್ಞವನ್ನು ಮಾಡದೆಯೇ ಪ್ರಾಣರೂಪವಾದ, ಅಗ್ನಿ ಸಂಬಂಧವಾದ ಆಗ್ನೇಯೇಷ್ಟಿಯನ್ನು ಮಾಡಬೇಕು. ಆ ಯಜ್ಞದಲ್ಲಿ ಮಂತ್ರ ಪೂರ್ವಕವಾದ ಅಗ್ನಿಯನ್ನು ಬೆಳಗಿಸಿ ನಂತರ ಗ್ರಾಮಾಗ್ನಿಯನ್ನು ಮಾಡಬೇಕು. ಗ್ರಾಮಾಗ್ನಿ ಕೂಡಾ ಲಭಿಸದಿದ್ದಲ್ಲಿ ಉದಕದಲ್ಲಿ ಹೋಮ ಮಾಡಬೇಕು. ಜಲವು ಸಮಸ್ತ ದೇವತಾ ಸ್ವರೂಪ ಜಲದಲ್ಲಿ ಸಕಲದೇವತೆಗಳಿಗೂ ಹೋಮ ಮಾಡುತ್ತಿದ್ದೇನೆ, ಎಂದು ಹೇಳುತ್ತಾ ವೇದೋಕ್ತ ವಿಧಾನದೊಂದಿಗೆ ಉತ್ತಮವಾದ ಹವಿಸ್ಸನ್ನು ತುಪ್ಪದಲ್ಲಿ ಬೆರಸಿ ಭುಜಿಸಬೇಕು ಎಂದು ಯಾಜ್ಞವಲ್ಕ್ಯರು ವಿವರಿಸಿ ಹೇಳಿದರು.

ಮಂ.ಶ್ಲೋ॥ ಅಥ ಹೈನಮತ್ರಿಃ ಪಪ್ರಚ್ಛ ಯಾಜ್ಞವಲ್ಕ್ಯಂ ಪೃಚ್ಛಾಮಿ ತ್ವಾ ಯಾಜ್ಞವಲ್ಕ್ಯ ಅಯಜ್ಞೋಪವೀತೀ ಕಥಂ ಬ್ರಾಹ್ಮಣ ಇತಿ, ಸಹೋವಾಚ ಯಾಜ್ಞವಲ್ಕ್ಯಃ, ಇದಮೇವಾಽಸ್ಯ ತದ್ಯಜ್ಞೋಪವೀತಂ ಯ ಆತ್ಮಾಽಪಃ ಪ್ರಾಶ್ಯಾಽಚಮ್ಯಾಽಯಂ ವಿಧಿಃ ಪರಿವ್ರಾಜಕಾನಾಮ್ ವೀರಾಧ್ವಾನೇವಾಽನಾಶಕೇವಾಽಪಾಂ ಪ್ರವೇಶೇವಾಽಗ್ನಿ ಪ್ರವೇಶೇ ವಾ ಮಹಪ್ರಸ್ಥಾನೇವಾ, ಅಥ ಪರಿವ್ರಾಡ್ವಿವರ್ಣವಾಸಾಮುಣ್ಡೋಽಪರಿಗ್ರಹಶ್ಶುಚಿರದ್ರೋಹೀ ಭೈಕ್ಷಮಾಣೋ ಬ್ರಹ್ಮಾ ಭೂಯಾಯ ಭವತೀತಿ, ಯದ್ಯಾಽತುರಸ್ಸ್ಯಾನ್ಮನಸಾ ವಾಚಾ ವಾ ಸನ್ನ್ಯಸೇತ್, ಏಷ ಪನ್ಥಾ ಬ್ರಹ್ಮಣಾ ಹಾನು ವಿತ್ತಸ್ತೇನೈತಿ ಸನ್ನ್ಯಾಸೀ ಬ್ರಹ್ಮವಿದಿತ್ಯೇವಮ್ಯೈವೇಷ ಭಗವನ್ನಿತಿ ವೈ ಯಾಜ್ಞವಲ್ಕ್ಯಃ (5)

ತಾ : ಆಮೇಲೆ ಅತ್ರಿ ಮುನಿಯು:- ಯಜ್ಞೋಪವೀತವಿಲ್ಲದವನು ಬ್ರಾಹ್ಮಣನು ಹೇಗಾಗುತ್ತಾನೆ? ಯಾಜ್ಞ:- ಇದಕ್ಕೆ ಮೊದಲು ಹೇಳಿದ ರೀತಿಯಲ್ಲಿ ಯಾರು ಹವಿಸ್ಸನ್ನು ಭುಜಿಸಿ ಆಚಮನ ಮಾಡಿ ಪವಿತ್ರನಾಗುವನೋ ಅಂತಹವನ ಪವಿತ್ರತೆಯೇ ಯಜ್ಞೋಪವೀತ. ಇದು ಸಮಸ್ತ ವ್ರತಗಳ ನಿಯಮಗಳಲ್ಲಿಯೂ ಇದೆ. ಕಾಷಾಯವಸ್ತ್ರ, ಮುಂಡನ ಭಾರ್ಯಾವಿಹೀನ ಪರಿಶುದ್ಧತೆ, ದ್ರೋಹ ಮಾಡದಿರುವುದು, ಭಿಕ್ಷಾನ್ನಭೋಜನ ಇವುಗಳನ್ನು ಹೊಂದಿರುವ ಸಂನ್ಯಾಸಿಯು ಬ್ರಹ್ಮವೇ ಆಗುವನು. ವ್ಯಾಧಿ ಪೀಡಿತನು ವಾಕ್ಕಿನಿಂದಲೂ ಮನಸ್ಸಿನಿಂದಲೂ ಸಂನ್ಯಾಸವನ್ನು ಸ್ವೀಕರಿಸಬಹುದು. ಸುಖಗಳನ್ನು ಅನುಭವಿಸುವವನಿಗೆ ಈ ಪದ್ಧತಿ ಉಪಯೋಗಕ್ಕೆ ಬರುವುದಿಲ್ಲ. ನಿಜವಾದ ಸನ್ಯಾಸಿ ಬ್ರಹ್ಮವೇತ್ತನೇ ಆಗಿರುತ್ತಾನೆ.

**ಮಂ.ಶ್ಲೋ॥ ತತ್ರ ಪರಮಹಂಸಾನಾಮ ಸಂವರ್ತಕಾರುಣಿ ಶ್ವೇತಕೇತು ದುರ್ವಾಸ ಋಭು ನಿದಾಘ ಜಡಭರತ ದತ್ತಾಽತ್ರೇಯ ರೈವತಕ ಪ್ರಭೃತಯೋಽವ್ಯಕ್ತಲಿಙ್ಗಾ ಅವ್ಯಕ್ತಾಚಾರಾ ಅನುನ್ಮತ್ತಾ ಉನ್ಮತ್ತವ-ದಾಚರನ್ತಸ್ತ್ರಿದಣ್ಡಂ ಕಮಣ್ಡಲುಂ ಶಿಕ್ಯಂ ಪಾತ್ರಂ ಜಲಪವಿತ್ರಂ ಶಿಖಾಂ ಯಜ್ಞೋಪವೀತಂ ಚೇತ್ಯೇತತ್ಸರ್ವಂ ಭೂಸ್ಸ್ವಾಹೇತ್ಯಪ್ಸುಪರಿತ್ಯಜ್ಯಾಽತ್ಮಾನಮನ್ವಿಚ್ಛೇತ್, ಯಥಾ ಜಾತರೂಪ ಧರೋ ನಿರ್ದ್ವಂದ್ವೋ ನಿಷ್ಪರಿಗ್ರಹಸ್ತತ್ತ್ವ ಬ್ರಹ್ಮಮಾರ್ಗೇ ಸಮ್ಯಕ್ಸಂಪನ್ನಶ್ಶುದ್ಧಮಾನಸಃ ಪ್ರಾಣಸಂಧಾರಣಾರ್ಥಂ ಯಥೋಕ್ತಕಾಲೇ ವಿಮುಕ್ತೋ ಭೈಕ್ಷಮಾಚರನ್ನುದರಪಾತ್ರೇಣ ಲಾಭಾಽಲಾಭೌ ಸಮೌಭೂತ್ವಾ ಶೂನ್ಯಾಽಽಗಾರ ದೇವಗೃಹ ತೃಣಕೂಟ ವಲ್ಮೀಕ ವೃಕ್ಷಮೂಲ ಕುಲಾಲಶಾಲಾಽಗ್ನಿಹೋತ್ರಶಾಲಾ ನದೀ ಪುಲಿನ ಗಿರಿ ಕುಹರ ಕನ್ದರ ಕೋಟರ ನಿರ್ಝರ ಸ್ಥಣ್ಡಿಲೇಷು ತೇಷ್ವನಿಕೇತವಾಸ್ಯಪ್ರಯತ್ನೋ ನಿರ್ಮಮಶ್ಶುಕ್ಲ ಧ್ಯಾನಪರಾ ಯಣೋಽ-ಧ್ಯಾತ್ಮನಿಷ್ಠೋ ಶುಭಕರ್ಮ ನಿರ್ಮೂಲನಪರಸ್ಸನ್ನ್ಯಾಸೇನ ದೇಹತ್ಯಾಗಂ ಕರೋತಿ, ಸ ಪರಮಹಂಸೋ ನಾಮೇತ್ಯುಪನಿಷತ್ (6)**

**(ಜಾಬಾಲೋಪನಿಷತ್ಸಮಾಪ್ತಾ)**

ತಾ : ಮತ್ತು ಸಂವರ್ತಕ, ಆರುಣಿ, ಶ್ವೇತಕೇತು, ದುರ್ವಾಸ, ಋಭು, ನಿದಾಘ, ಜಡಭರತ, ದತ್ತಾತ್ರೇಯ, ರೈವತಕ, ಪ್ರಭೃತಿ ಮುನಿಗಳೆಲ್ಲರೂ ಈ ವಿಧದ ಪರಮಹಂಸರು. ಇವರೆಲ್ಲರೂ ಪರಮ ಪವಿತ್ರವಾದ ನಿಯಮಗಳನ್ನುಳ್ಳವರು. ಇತರರಿಗೆ ಮಾತ್ರವೇ ಉನ್ಮತ್ತರಂತೆ ಕಾಣಿಸುತ್ತಿದ್ದವರು. ಇಂತಹ ಪರಮಹಂಸರು ತ್ರಿದಂಡ, ಕಮಂಡಲ, ಕಾವಡಿ, ಜಲಪಾತ್ರೆ, ಶಿಖೆ ಯಜ್ಞೋಪವೀತ ಎನ್ನುವ ಇವೆಲ್ಲವನ್ನೂ ಮಂತ್ರಪೂರ್ವಕವಾಗಿ ಉದಕಗಳಲ್ಲಿ ಪರಿತ್ಯಜಿಸಿ ಆತ್ಮಧ್ಯಾನವನ್ನು ಮಾಡಬೇಕು. ಬಾಲ್ಯದಲ್ಲಿದ್ದಂತೆಯೇ ಎಂತಹ ಸಂಬಂಧವೂ ಇಲ್ಲದವರಂತೆ ಆತ್ಮಧ್ಯಾನ ಮಾರ್ಗದಲ್ಲಿ ಚೆನ್ನಾಗಿ ಅಭ್ಯಾಸ ಮಾಡಬೇಕು ಪರಿಶುದ್ಧ ಹೃದಯದೊಂದಿಗೆ ಪ್ರಾಣಧಾರಣೆಗಾಗಿ ನಿಯಮಿತ ಕಾಲಗಳಲ್ಲಿ ಭಿಕ್ಷಾನ್ನವನ್ನು ತಿನ್ನಬೇಕು. ಲಾಭನಷ್ಟಗಳನ್ನು ಸಮಾನವಾಗಿ ಕಾಣಬೇಕು. ಶಿಥಿಲ ಗೃಹ, ದೇವಾಲಯ, ಹುತ್ತ, ಪೊದೆ, ವೃಕ್ಷಗಳ ಬುಡ, ಕುಂಬಾರನ ಮನೆ, ಅಗ್ನಿಹೋತ್ರಶಾಲೆ, ನದಿಯ ಬಳಿಯಲ್ಲಿನ ಮರಳರಾಶಿ, ಬೆಟ್ಟ, ಗುಹೆ, ಪೊಟರೆ, ಕಾಲುವೆ, ಮರುಭೂಮಿ ಈ ಸ್ಥಳಗಳಲ್ಲಿ

ವಾಸ ಮಾಡಬೇಕು. ಪ್ರಯತ್ನವಿಲ್ಲದೆಯೇ ಅಹಂಕಾರವಿಲ್ಲದೆಯೇ ತಿರುಗುತ್ತಿರಬೇಕು. ನಾರಾಯಣ ಧ್ಯಾನವನ್ನು, ಆತ್ಮವಿಚಾರವನ್ನು ಮಾಡುತ್ತಿರಬೇಕು. ಪಾಪಪ್ರಕ್ಷಾಳನವನ್ನು ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿರಬೇಕು ಅಂತಹವರೇ ಪರಮಹಂಸರು ಇದೇ ಪರಮಹಂಸ ಹೆಸರುಳ್ಳ ಉಪನಿಷತ್ತು (ಜಾಬಾಲೋಪನಿಷತ್ತು ಸಮಾಪ್ತಿ

**ಶಾಂತಿ ಮಂತ್ರ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ**




(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು-ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂ ಶಾಂತಿಃ॥**

## ಪ್ರಥಮೋಧ್ಯಾಯ

**ಮಂ.ಶ್ಲೋ॥ ಓಂ ಬ್ರಹ್ಮವಾದಿನೋ ವದನ್ತಿ, ಕಿಂ ಕಾರಣಂ ಬ್ರಹ್ಮ? ಕುತಸ್ಸ್ಮಜಾತಾ? ಜೀವಾಮ ಕೇನ? ಕ್ವಚ ಸಂಪ್ರತಿಷ್ಠಿತಾ? ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ? ಬ್ರಹ್ಮವಿದೋ ವ್ಯವಸ್ಥಾಮ್ (1)**

ತಾ : ಬ್ರಹ್ಮವಾದಿಗಳೆಲ್ಲರೂ ಒಂದು ಕಡೆ ಸೇರಿ ಚರ್ಚಿಸುತ್ತಿದ್ದಾರೆ. ಈ ಪ್ರಪಂಚಕ್ಕೆ ಕಾರಣವು ಬ್ರಹ್ಮವೇ ಅಥವಾ ಕಾಲವೇ? ಅಥವಾ ಬ್ರಹ್ಮವು ಈ ಸೃಷ್ಟಿಗೆ ಉಪಾದಾನ ಕಾರಣವೇ? ನಾವು ಯಾವುದರಿಂದ ಜನಿಸಿದೆವು? ಸೃಷ್ಟಿಸಲ್ಪಟ್ಟ ನಾವು ಯಾವುದರಿಂದ ಜೀವಿಸುತ್ತಿದ್ದೇವೆ? ಪ್ರಳಯ ಕಾಲದಲ್ಲಿ ನಾವು ಎಲ್ಲಿ ಇದ್ದೆವು? ನಾವು ಅನುಭವಿಸುತ್ತಿರುವ ಸುಖ ದುಃಖಗಳು ಯಾರ ಅಧಿಕಾರದಿಂದ ಅನುಭವಿಸುತ್ತಿದ್ದೇವೆ.?

**ಮಂ.ಶ್ಲೋ॥ ಕಾಲಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಮ್। ಸಂಯೋಗ ಏಷಾನ್ನತ್ವಾತ್ಮಭಾವಾದಾತ್ಮಾಽಪ್ಯನೀಶಸ್ಸುಖದುಃಖ ಹೇತೋಃ (2)**

ತಾ : ಈ ಜಗತ್ತಿಗೆ ಕಾರಣವು ಕಾಲವೇ ಎಂದು ಕಾಲವೇತ್ತರು ಹೇಳುತ್ತಿದ್ದಾರೆ. ಸ್ವಭಾವವು ಕಾರಣವೆಂದು ಲೋಕಾಯತಿಕರು ಹೇಳುತ್ತಿದ್ದಾರೆ. ಕರ್ಮವು ಕಾರಣವೆಂದು ಮೀಮಾಂಸಕರು

ಭಾವಿಸುತ್ತಿದ್ದಾರೆ. ಯದೃಚ್ಛದಿಂದಲೇ ಪ್ರಪಂಚ ಸೃಷ್ಟಿಯಾಯಿತೆಂದು ನಿರೀಶ್ವರವಾದಿಗಳು ನುಡಿಯುತ್ತಿದ್ದಾರೆ. ಪಂಚಭೂತಗಳೇ ಸೃಷ್ಟಿಗೆ ಕಾರಣವೆಂದು ಜಗನ್ನಿತ್ಯತ್ವವಾದಿಗಳು ಹೇಳುತ್ತಿದ್ದಾರೆ. ಪ್ರಕೃತಿಯೇ ಕಾರಣವೆಂದು ಶಾಕ್ತೇಯರ ಅಭಿಪ್ರಾಯ. ಜೀವನು ಅಥವಾ ಹಿರಣ್ಯಗರ್ಭನು ಕಾರಣವೆಂದು ಯೋಗಿಗಳು ತಲೆಬಾಗುತ್ತಿದ್ದಾರೆ. (ಸ್ಮರಿಸುತ್ತಿದ್ದಾರೆ); ಸಂಯೋಗವು ಕಾರಣವೆಂದು ಕೆಲವರ ಭಾವನೆ. ಆತ್ಮಭಾವವು ಉಂಟಾಗುವುದರಿಂದ ಮೇಲೆ ಹೇಳಿದ ಏಳು ವಸ್ತುಗಳ ಸಮೂಹವು ಕೂಡಾ ಜಗತ್ಕಾರಣವಾಗಲಿಲ್ಲ. ಜೀವನು ಕೂಡಾ ಸುಖದುಃಖ ಭೂತವಾದ ಜಗತ್ತಿಗೆ ಕಾರಣವಾಗುವುದಿಲ್ಲ. (ಕಾಲಸ್ವಭಾವೋ..... ಎನ್ನುವ ಮಂತ್ರದಿಂದ ಹತ್ತು ಮಂತ್ರಗಳು ನಾರದ ಪರಿವ್ರಾಜಪಕೋಪನಿಷತ್ತಿನ ೯ ಉ. ನಲ್ಲಿಯೂ ಇವೆ.)

**ಮಂ.ಶ್ಲೋ|| ತೇ ಧ್ಯಾನಯೋಗಾಽನುಗತಾ ಅಪಶ್ಯನ್ ದೇವಾತ್ಮಶಕ್ತಿಗ್ಂ ಸ್ವಗುಣೈರ್ನಿಗೂಢಾಮ್, ಯಃ ಕಾರಣಾನಿ ನಿಖಿಲಾನಿ ತಾನಿ ಕಾಲಾತ್ಮಯುಕ್ತಾನ್ಯಧಿತಿಷ್ಠತ್ಯೇಕಃ (3)**

ತಾ : ಆ ಬ್ರಹ್ಮವೇತ್ತರು ಧ್ಯಾನ ಯೋಗವನ್ನು ಅನುಸರಿಸಿದವರಾಗಿ ಅದ್ವಿತೀಯನು, ಕಾಲ ರೂಪನು, ಸರ್ವಕಾರಣನು ಆದ ಆ ಪರಮಾತ್ಮನ ಒಂದು ಮಾಯಾಶಕ್ತಿಯನ್ನು ದರ್ಶಿಸಿದರು. ಆ ಮಾಯಾಶಕ್ತಿ ತ್ರಿಗುಣಾತ್ಮಕವಾಗಿ ನಿಗೂಢವಾಗಿದೆ.

**ಮಂ.ಶ್ಲೋ|| ತಮೇಕನೇಮಿಂ ತ್ರಿವೃತಗ್ಂ ಷೋಡಶಾಂತಗ್ಂ ಶತಾರ್ಧಾರಂ ವಿಗ್ಂಶತಿ ಪ್ರತ್ಯರಾಭಿಃ ಅಷ್ಟಕೈಷ್ಷಡ್ಭಿರ್ವಿಶ್ವರೂಪೈಕಪಾಶಂ ತ್ರಿಮಾರ್ಗಭೇದಂ ದ್ವಿನಿಮಿತ್ತೈಕಮೋಹಮ್ (4)**

ತಾಃ ಆ ಪರಮಾತ್ಮನನ್ನು ಕಾರಣಾವಸ್ಥೆಯೆನ್ನುವ ಬಂಡಿಚಕ್ರನೇಮಿಯಾಗಿ ಇರುವವನಂತಹವನಾಗಿಯೂ, ತ್ರಿಗುಣಾತ್ಮಕ ಪ್ರಕೃತಿಯಿಂದ ಆವರಿಸಲ್ಪಟ್ಟವನಾಗಿಯೂ, ಐವತ್ತು ದಳಗಳ (ಎಲೆಗಳು), ಇಪ್ಪತ್ತು ಪ್ರತ್ಯರೆಗಳುಳ್ಳ ಬಂಡಿಚಕ್ರವನ್ನುಳ್ಳವನಾಗಿಯೂ, ಆರು ಎಂಟು ತತ್ತ್ವಗಳನ್ನುಳ್ಳವನಾಗಿಯೂ, ವಿಶ್ವರೂಪೈಕ ಪಾಶವನ್ನುಳ್ಳವನಾಗಿಯೂ, ಧರ್ಮಾಧರ್ಮ ಜ್ಞಾನಗಳೆನ್ನುವ, ಮೂರು ಮಾರ್ಗ (ಸೂತ್ರ)ಗಳನ್ನು ಹೊಂದಿದವನಾಗಿಯೂ ಪುಣ್ಯಾಪುಣ್ಯಗಳೊಂದಿಗೆ ಮೋಹವನ್ನು ಹೊಂದಿರುವಂತಹವನನ್ನು ದರ್ಶನ ಮಾಡಿದರು.

**ಮಂ.ಶ್ಲೋ|| ಪಂಚಸ್ರೋತೋಽಂಬುಂ ಪಂಚಯೋನ್ಯುಗ್ರವಕ್ತ್ರಾಂ ಪಂಚಪ್ರಾಣೋರ್ಮಿಂ ಪಂಚಬುದ್ಧ್ಯಾದಿ ಮೂಲಾಮ್, ಪಂಚಾವರ್ತಾಂ ಪಂಚದುಃಖೌಘವೇಗಾಂ ಪಂಚಾಶದ್ಭೇದಾಂ ಪಂಚಪರ್ವಾಮಧೀಮಃ (೫)**

ತಾಃ (ಪರಮಾತ್ಮನನ್ನು ನದೀರೂಪದಲ್ಲಿ ವರ್ಣಿಸುತ್ತಿದ್ದಾರೆ.) ಆ ಪರಮಾತ್ಮನು ಪಂಚೇಂದ್ರಿಯಗಳೇ ಪ್ರವಾಹವಾಗಿರುವುದಾಗಿಯೂ, ಕಾರಣ ಪಂಚ ಮಹಾಭೂತಗಳಲ್ಲಿ ಕುಟಿಲವಾಗಿ (ರಹಸ್ಯ) ಇರುವಂತಹದಾಗಿಯೂ ಪಂಚಪ್ರಾಣಗಳೇ ಅಲೆಯಲೆಗಳಾಗಿರುವಂತಹುದಾಗಿಯೂ. ಮನಸ್ಸೇ ಕಾರಣವಾಗಿರುವುದಾಗಿಯೂ, ಶಬ್ದಾದಿ ಪಂಚ (ಐದು) ವಿಷಯಗಳೆನ್ನುವ ಸುಳಿಗಳನ್ನುಳ್ಳದ್ದಾಗಿಯೂ ಪಂಚವಿಧ ದುಃಖಗಳೆನ್ನುವ ಪ್ರವಾಹವೇಗಗಳನ್ನುಳ್ಳದ್ದಾಗಿಯೂ ೫೦ ಬಗೆಯ ತಮೋ ಮೋಹ ಭೇದಗಗಳನ್ನುಳ್ಳದ್ದಾಗಿಯೂ ಪಂಚ ವಿಧ ಕ್ಷೇತ್ರಕ್ಲೇಶಗಳನ್ನುಳ್ಳದ್ದಾಗಿಯೂ ನದೀ ರೂಪದಲ್ಲಿ ಧ್ಯಾನಿಸುತ್ತಿದ್ದೇವೆ.

**ಮಂ.ಶ್ಲೋ॥ ಸರ್ವಾಜೀವೇ ಸರ್ವಸಂಸ್ಥೇ ಬೃಹಂತೇ ಅಸ್ಮಿನ್ಹಗ್ಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ, ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ (6)**

ತಾ : ಸರ್ವರಿಗೂ ಜೀವನ ರೂಪವಾದಂತಹುದಾಗಿ, ಎಲ್ಲರಿಗೂ ಪ್ರಳಯಸ್ವರೂಪವಾಗಿ ಎಲ್ಲದಕ್ಕಿಂತ ಹಿರಿ(ವಿಶಿಷ್ಟ)ದಾದದು. ಕಾರ್ಯಕಾರಣಾತ್ಮಕವಾಗಿರುವಂತಹ ಈ ಬ್ರಹ್ಮ ಚಕ್ರದಲ್ಲಿ ವಾಸಿಸುವ ಜೀವನು ಅನಾತ್ಮ ಪದಾರ್ಥಗಳನ್ನು ದೇಹಾದಿ ಸಂಘಾತಗಳನ್ನು ಆತ್ಮವಾಗಿ ಭಾವಿಸುತ್ತಿ-ದ್ದಾನೆ. ದೇವ, ಮಾನವ, ಪಶುವಾದಿ ವಿವಿಧ ಶರೀರಗಳಲ್ಲಿ ಹುಟ್ಟುತ್ತಾ ಸಾಯುತ್ತಾ ತಿರುಗುತ್ತಿದ್ದಾನೆ. ಇದಕ್ಕೆ ಕಾರಣ ಜೀವೇಶ್ವರರಿಗೆ ವಿಭೇದವನ್ನು ಭಾವಿಸುವುದೇ ಆಗಿದೆ. ಆನಂತರ ಮನಸ್ಸಮಾಧನವನ್ನು ಹೊಂದಿದಾಗ ಈಶ್ವರಾನುಸಂಧಾನದಿಂದ ಮೋಕ್ಷವನ್ನು ಹೊಂದುತ್ತಾನೆ.

**ಮಂ.ಶ್ಲೋ॥ ಉದ್ಗೀತಮೇತತ್ಪರಮಂ ತು ಬ್ರಹ್ಮ ತಸ್ಮಿಗ್ಂಸ್ತ್ರಯುಗ್ಂ ಸ್ವಪ್ರತಿಷ್ಠಾಕ್ಷರಂ ಚ, ಅತ್ರಾಂತರಂ ವೇದವಿದೋ ವಿದಿತ್ವಾ ಲೀನಾ ಬ್ರಹ್ಮಣಿ ತತ್ಪರಾ ಯೋನಿಮುಕ್ತಾಃ ॥ (7)**

ತಾ : ಈ ನಿರ್ವಿಶೇಷವಾದ ಬ್ರಹ್ಮವು ಶ್ರೇಷ್ಠವೆಂದು ಹೇಳಲಾಗಿದೆ. ಈ ಪರಬ್ರಹ್ಮದಲ್ಲಿ ಭೋಕ್ತ ಭೋಗ್ಯ ಪ್ರೇರಕ ಎನ್ನುವ ಮೂರು ಚೆನ್ನಾಗಿ ಪ್ರತಿಷ್ಠಿತವಾಗಿವೆ. ಬ್ರಹ್ಮವು ಅಕ್ಷರವಾಗಿ ಕೂಡಾ ಆಗಿದೆ. ಈ ದೇಹದಲ್ಲಿ (ಪ್ರಪಂಚದಲ್ಲಿ) ಬ್ರಹ್ಮವನ್ನು ಬ್ರಹ್ಮವೇತ್ತರು ಅಂತರ್ಯಾಮಿಯಾಗಿ ತಿಳಿದು ಕೊಂಡಿದ್ದಾರೆ. ಪರಬ್ರಹ್ಮದಲ್ಲಿ ಲೀನವಾಗಿ ಆ ಬ್ರಹ್ಮದಲ್ಲೇ ಸಮಾಧಿ ಹೊಂದಿದವರಾಗಿ ಜನನ ಮರಣರೂಪ ಸಂಸಾರದಿಂದ ವಿಮುಕ್ತರಾಗುತ್ತಿದ್ದಾರೆ.

**ಮಂ.ಶ್ಲೋ॥ ಸಂಯುಕ್ತಮೇತತ್ ಕ್ಷರಮಕ್ಷರಂಚ ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ,ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್, ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (8)**

ತಾ : ವ್ಯಕ್ತಾವ್ಯಕ್ತಗಳನ್ನು ಕ್ಷರ, ಅಕ್ಷರಗಳೆಂದು ಹೇಳಿರುವರು. ಈಶ್ವರನು ಪರಸ್ಪರ ಕೂಡಿ-ಕೊಂಡು ಇರುವ ವಿಶ್ವವನ್ನು ಭರಿಸುತ್ತಿದ್ದಾನೆ. ಈಶ್ವರನಿಗಿಂತ ಭಿನ್ನವಾದ ಜೀವನು ಭೋಕ್ತೃ ಭಾವವನ್ನು ಹೊಂದಿ ಅದಕ್ಕೆ ಬದ್ಧನಾಗುತ್ತಿದ್ದಾನೆ ಪರಮೇಶ್ವರನನ್ನು ಅರಿತುಕೊಂಡು ಸರ್ವಪಾಪಗಳಿಂದ ಮುಕ್ತನಾಗುತ್ತಿದ್ದಾನೆ.

**ಮಂ.ಶ್ಲೋ॥ ಜ್ಞಾಜ್ಞೌ ದ್ವಾವಜಾವೀಶಾನೀಶಾವಜಾ ಹ್ಯೇಕಾ ಭೋಕ್ತೃಭೋಗ್ಯಾರ್ಥಯುಕ್ತಾಃ ಅನಂತಶ್ಚಾತ್ಮಾ ವಿಶ್ವರೂಪೋ ಹ್ಯಕರ್ತಾ ತ್ರಯಂ ಯದಾ ವಿಂದತೇ ಬ್ರಹ್ಮಮೇತತ್ ॥ (9)**

ತಾ : ಜ್ಞ ಎಂದರೆ ಸರ್ವವನ್ನು ತಿಳಿದಂತಹ ಈಶ್ವರನು. ಅಜ್ಞ ಎಂದರೆ ಅಲ್ಪಜ್ಞನಾದ ಜೀವನು. ಈ ಜೀವೇಶ್ವರರಿಬ್ಬರೂ ಅಜರು; ಜನ್ಮಾದಿ ವಿಕಾರಗಳು ಇಲ್ಲದವರೇ! ಬ್ರಹ್ಮವೇ ಮಾಯೆಯಿಂದ ಜೀವೇಶ್ವರರ ರೂಪಗಳಲ್ಲಿ ಗೋಚರಿಸುತ್ತಿದೆ.

**ಮಂ.ಶ್ಲೋ॥ ಕ್ಷರಂ ಪ್ರಧಾನಮಮೃತಾಕ್ಷರಗ್ಂ ಹರಃ ಕ್ಷರಾತ್ಮಾ ನಾವೀಶತೇ ದೇವ ಏಕಃ । ತಸ್ಯಾ ಭಿಧ್ಯಾನಾದ್ಯೋಜನಾ ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ ॥ (10)**

ತಾ : ಕ್ಷರವೆಂದರೆ ನಾಶಹೊಂದುವಂತಹುದು. ಪ್ರಧಾನವೇ ಕ್ಷರ, ಮಾಯ. ಹರನೆಂದರೆ

ಪರಮೇಶ್ವರ. ಅವಿದ್ಯೆಯನ್ನು ಹರಿಸುವವನಾದ್ದರಿಂದ ಪರಮೇಶ್ವರನು ಸ್ವಯಂ ಪ್ರಕಾಶನಾದ ಆ ದೇವನು ಪ್ರಧಾನ ಜೀವಗಳನ್ನು ನಿಯಮಿಸುತ್ತಾನೆ. ಅಂತಹ ಪರಮಾತ್ಮನ ಧ್ಯಾನವನ್ನು ಮಾಡುವುದರಿಂದಲೂ ಜೀವಪರಮಾತ್ಮರ ಸಂಯೋಜನೆಯಿಂದಲೂ ನಿರಂತರ ತತ್ತ್ವಚಿಂತನೆಯಿಂದಲೂ ವಿಶ್ವದಮಾಯಾ ನಿವೃತ್ತಿ ಏರ್ಪಡುತ್ತದೆ.

**ಮಂ.ಶ್ಲೋ॥ ಜ್ಞಾತ್ವಾ ದೇವಗ್ಂ ಸರ್ವಪಾಶಾಪಹಾನಿಃ ಕ್ಷೀಣೈಃ ಕ್ಲೇಶೈರ್ಜನ್ಮಮೃತ್ಯುಪ್ರಹಾಣಿಃ । ತಸ್ಯಾಭಿ ಧ್ಯಾನಾತ್ ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ ॥ (11)**

ತಾ : ಪರಮಾತ್ಮನನ್ನು ತಿಳಿದುಕೊಂಡಲ್ಲಿ ಪಾಶರೂಪವಾದ ಅಜ್ಞಾನವೆಲ್ಲವೂ ನಶಿಸುವುದು. ಅಜ್ಞಾನವು ನಶಿಸುವುದರಿಂದ ಜನನ ಮರಣ ರೂಪ ದುಃಖವು ನಶಿಸುವುದು ಆ ಪರಮಾತ್ಮನನ್ನು ಧ್ಯಾನಿಸುವುದರಿಂದ ದೇಹವನ್ನು ಬಿಟ್ಟಾದ ಮೇಲೆ ಮೂರನೆಯದಾದ ವಿಶ್ವೈಕ್ಯವನ್ನು ಹೊಂದಿ ಪರಬ್ರಹ್ಮ ಸ್ವರೂಪನಾಗಿ ಆಪ್ತಕಾಮನಾಗುತ್ತಾನೆ.

**ಮಂ.ಶ್ಲೋ॥ ಏತತ್ ಜ್ಞೇಯಂ ನಿತ್ಯಮೇವಾತ್ಮಸಗ್ಗ್ಸ್ಥಂ ನಾತಃ ಪರಂ ವೇದಿತವ್ಯಗ್ಂ ಹಿ ಕಿಂಚಿತ್। ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್॥ (12)**

ತಾ : ತನ್ನಲ್ಲಿರುವ ಪರಮಾತ್ಮನನ್ನು ಸರ್ವದಾ ತಿಳಿದುಕೊಳ್ಳುತ್ತಿರಬೇಕು ತಿಳಿಯಬೇಕಾದ ವಸ್ತುವು ಇದಕ್ಕಿಂತ ಬೇರೆ ಯಾವುದೂ ಇಲ್ಲ. ಭೋಗ್ಯವಾದ ಜೀವನು, ಭೋಗ್ಯವಾದ ಪ್ರಪಂಚ, ಪ್ರೇರಕನಂತೆ ಅಂತರ್ಯಾಮಿ ಈ ಮೂರು ವಿಧಗಳಾಗಿರುವ ಸರ್ವಸ್ವವೂ ಪರಬ್ರಹ್ಮವೇ ಎಂದು ತಿಳಿಯಬೇಕು. (ಏತತ್ ಜ್ಞೇಯಂ ಎನ್ನುವ ಮಂತ್ರವು ನಾರದ ಪರಿವ್ರಾಜಕೋಪನಿಷತ್ 9-4ರಲ್ಲಿ ಕೂಡಾ ಇದೆ.)

**ಮಂ.ಶ್ಲೋ॥ ವಹ್ನೇರ್ಯಥಾ ಯೋನಿಗತಸ್ಯ ಮೂರ್ತಿರ್ನದೃಶ್ಯತೇ ನೈವಚ ಲಿಂಗನಾಶಃ, ನ ಭೂಯ ಏವೇಂಧನಯೋನಿ ಗೃಹ್ಯಸ್ತದ್ವೋಭಯಂ ವೈ ಪ್ರಣವೇನ ದೇಹೇ (13)**

ತಾ : ಅರಣಿಯನ್ನು ಹೊಂದಿರುವ ಅಗ್ನಿಯ ಸ್ವರೂಪವು ಯಾವ ರೀತಿಯಲ್ಲಿ ಮುಂಚೆಯೇ ಕಾಣಿಸುವುದಿಲ್ಲವೋ, ಲಿಂಗ ನಾಶವಿಲ್ಲವೋ, ಅರಣಿಯನ್ನು ಮಥಿಸಿದಾಗ ಆ ಅಗ್ನಿಯೇ ಹೇಗೆ ಪ್ರಕಟವಾಗುವುದೋ ಅದೇ ರೀತಿಯಾಗಿ ಪ್ರಣವೋಪಾಸನೆಯಿಂದ ಆತ್ಮಸ್ವರೂಪವು ವ್ಯಕ್ತವಾಗುತ್ತದೆ.

**ಮಂ.ಶ್ಲೋ॥ ಸ್ವದೇಹಮರಣಿಂ ಕೃತ್ವಾ ಪ್ರಣವಂಚೋತ್ತರಾರಣಿಮ್, ಧ್ಯಾನ ನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ ॥ (14) ತಿಲೇಷು ತೈಲಂ ದಧಿನೀವ ಸರ್ಪಿರಾಪಃ ಸ್ರೋತಸ್ಸ್ವರಣೀಷು ಚಾಗ್ನಿಃ । ಏವಮಾತ್ಮಾತ್ಮನಿ ಜಾಯತೇ ಸಾ ಸತ್ಯೇನೈನಂ ತಪಸಾ ಯೋऽನುಪಶ್ಯತಿ ॥ (15)**

ತಾ : ತನ್ನ ಶರೀರವನ್ನು ಕೆಳಗಿನ ಮರದ ತುಂಡನ್ನಾಗಿಯೂ, ಪ್ರಣವವನ್ನು ಮೇಲಿನ ತುಂಡನ್ನಾಗಿಯೂ ಮಾಡಿಕೊಂಡು ಧ್ಯಾನಾಭ್ಯಾಸವೆನ್ನುವ ಮಥನವನ್ನು ಮಾಡಿ. ನಿಗೂಢವಾಗಿರುವ

ಪರಮಾತ್ಮ ದೇವನನ್ನು ದರ್ಶಿಸಬೇಕು ಗಾಣದಲ್ಲಿ ಹಾಕಿ ತಿರುಗಿಸುವುದರಿಂದ ಎಳ್ಳಿನಿಂದ ಎಣ್ಣೆಯು ಬರುತ್ತದೆ. ಮೊಸರನ್ನು ಕಡೆಯುವುದರಿಂದ ತುಪ್ಪ (ಬೆಣ್ಣೆ) ಬಹಿರ್ಗತವಾಗುತ್ತದೆ. ಪ್ರವಹಿಸುವ ನದಿಯಿಂದ ಜಲವು ಬರುತ್ತದೆ. ಅರಣಿ ಮಥನದಿಂದ ಅಗ್ನಿ ಹುಟ್ಟುತ್ತದೆ. ಅದೇ ವಿಧವಾಗಿ ಸತ್ಯದಿಂದಲೂ ತಪಸ್ಸಿನಿಂದಲೂ ತನ್ನಲ್ಲಿರುವ ಆತ್ಮವನ್ನು ದರ್ಶಿಸಲಾಗುತ್ತದೆ.

**ಮಂ.ಶ್ಲೋ॥ ಸರ್ವವ್ಯಾಪಿನಮಾತ್ಮಾನಂ ಕ್ಷೀರೇಸರ್ಪಿರಿವಾರ್ಪಿತಮ್। ಆತ್ಮವಿದ್ಯಾ ತಪೋ ಮೂಲಂ ತದ್ಬ್ರಹ್ಮೋಪನಿಷತ್ಪರಂ ತದ್ಬ್ರಹ್ಮೋಪನಿಷತ್ಪರಮಿತಿ (16)**

ತಾ : ಬ್ರಹ್ಮವಿದ್ಯೆಗೂ ತಪಶ್ಚರ್ಯೆಗೂ ಮೂಲಕಾರಣವಾದ ಪರಮಾತ್ಮನು ಹಾಲಿನಲ್ಲಿನ ತುಪ್ಪದಂತೆ ಸಕಲ ಸೃಷ್ಟಿಯಲ್ಲಿಯೂ ವ್ಯಾಪಿಸಿರುವಂತೆ ಗ್ರಹಿಸಿ, ಜೀವನು ಬಂಧ (ವಿ)ಮುಕ್ತನಾಗುತ್ತಾನೆ.

## ದ್ವಿತೀಯೋಽಧ್ಯಾಯಃ

**ಮಂ.ಶ್ಲೋ॥ ಓಂ ಯುಂಜಾನಃ ಪ್ರಥಮಂ ಮನಸ್ತತ್ತ್ವಾಯ ಸವಿತಾ ಧಿಯಃ ।**
**ಅಗ್ನೇ ಜ್ಯೋತಿರ್ನಿಚಾಯ್ಯ ಪೃಥಿವ್ಯಾ ಅಧ್ಯಾಭರತ್ ॥ (1)**

ತಾ : ಧ್ಯಾನದ ಪ್ರಾರಂಭದಲ್ಲಿ ಮನಸ್ಸನ್ನು, ಸರ್ವೇಂದ್ರಿಯಗಳನ್ನು ಪರಮಾತ್ಮನಲ್ಲಿ ಸೇರಿಸಬೇಕು. ತತ್ತ್ವಜ್ಞಾನ ನಿಮಿತ್ತವಾಗಿ ಅಗ್ನಿ ಪ್ರಕಾಶವನ್ನು ನೋಡಿ ಭೂತತತ್ತ್ವವಾದ ಶರೀರವನ್ನು ಶುದ್ಧಿಗೊಳಿಸಿಕೊಳ್ಳಬೇಕು.

**ಮಂ.ಶ್ಲೋ॥ ಯುಕ್ತೇನ ಮನಸಾ ವಯಂ ದೇವಸ್ಯ ಸವಿತುಸ್ಸವೇ, ಸುವರ್ಗೇಯಾಯ ಶಕ್ತ್ಯಾ (2)**

ತಾ : ನಾವು ಪರಮಾತ್ಮನಲ್ಲಿ ಲಗ್ನವಾದ ಮನಸ್ಸಿನಲ್ಲಿ ಸ್ವಯಂ ಪ್ರಕಾಶನಾದ ಸವಿತೃದೇವತಾನುಗ್ರಹದಿಂದ ಸ್ವರ್ಗಪ್ರಾಪ್ತಿಗೆ ಅನುಕೂಲವಾದ ಶಕ್ತಿಯೊಂದಿಗೆ ಪ್ರಯತ್ನಿಸುತ್ತಿದ್ದೇವೆ.

**ಮಂ.ಶ್ಲೋ॥ ಯುಕ್ತ್ವಾಯ ಮನಸಾ ದೇವಾನ್ ಸುವರ್ಯತೋ ಧಿಯಾ ದಿವಮ್, ಬೃಹಜ್ಜ್ಯೋತಿಃ ಕರಿಷ್ಯತಸ್ಸವಿತಾ ಪ್ರಸುವಾತಿ ತಾನ್ (3) ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ । ವಿಹೋತ್ರಾದಧೇ ವಯುನಾವಿದೇಕ ಇನ್ಮಹೀದೇವಸ್ಯ ಸವಿತುಃ ಪರಿಷ್ಟುತಿಃ ॥ (4)**

ತಾ : ಸವಿತೃ ದೇವತೆ ನಮ್ಮ ಮನಸ್ಸನ್ನು ಪರಬ್ರಹ್ಮನಲ್ಲಿ ಲಗ್ನವಾಗುವಂತೆ ಮಾಡಿ ಸರ್ವೇಂದ್ರಿಯಗಳನ್ನು ಬ್ರಹ್ಮವನ್ನು ಹೊಂದುವವನನ್ನಾಗಿ ಮಾಡಲಿ! ಬ್ರಾಹ್ಮಣರು ತಮ್ಮ ಚಿತ್ತವನ್ನು ಪರಬ್ರಹ್ಮದಲ್ಲೇ ಸೇರಿಸುತ್ತಾರೆ ಸವಿತೃ ಶಬ್ದವಾಚ್ಯವು ಸರ್ವ ವ್ಯಾಪಕವು, ಸರ್ವಮಹತ್ತುಳ್ಳದ್ದು ಆದ ಪರಮಾತ್ಮನನ್ನು ಹೆಚ್ಚು ಹೆಚ್ಚಾಗಿ ಕೊಂಡಾಡಬೇಕು.

**ಮಂ.ಶ್ಲೋ॥ ಯುಜೇ ವಾಂ ಬ್ರಹ್ಮಪೂರ್ವ್ಯಂ ನಮೋಭಿರ್ವಿಶ್ಲೋಕಾಯನ್ತಿ ಪಥ್ಯೇವ ಸೂರೇಃ। ಶೃಣ್ವನ್ತು ವಿಶ್ವೇ ಅಮೃತಸ್ಯ ಪುತ್ರಾ ಅಯೇ ಧಾಮಾನಿ ದಿವ್ಯಾನಿ ತಸ್ಥುಃ (5) ಅಗ್ನಿರ್ಯತ್ರಾಭಿಮಥ್ಯತೇ ವಾಯುರ್ಯತ್ರಾಭಿಯುಂಜತೇ, ಸೋಮೋ ಯತ್ರಾತಿರಿಚ್ಯತೇ ತತ್ರ ಸಂಜಾಯತೇ ಮನಃ(6)**

ತಾ : ಓ ದೇವತೆಗಳೇ! ನಿಮಗೆ ಕಾರಣಭೂತವಾದಂತಹುದು, ಅತ್ಯಂತ ಪ್ರಾಚೀನವಾದುದು ಆದ ಪರಬ್ರಹ್ಮಕ್ಕೆ ನಮಸ್ಕರಿಸುತ್ತಿದ್ದೇನೆ. ಚಿತ್ತವನ್ನು ಆ ಬ್ರಹ್ಮದಲ್ಲೇ ಲೀನಗೊಳಿಸುತ್ತಿದ್ದೇನೆ. ಈ ರೀತಿಯಾಗಿ ಬ್ರಹ್ಮದೊಂದಿಗೆ ಸಮಾಧಾನವನ್ನು ಮಾಡುತ್ತಿರುವ ನನ್ನ ಕೀರ್ತಿ ಮುಕ್ತ ಮಾನವರು ಅನುಸರಿಸಿದ ಸನ್ಮಾರ್ಗವನ್ನೇ ಅನುಸರಿಸುವಂತಾಗಲಿ! ಆ ಪರಮೇಶ್ವರನ ಪುತ್ರರಾದ ಹಿರಣ್ಯಗರ್ಭಾಧಿ ದೇವತೆಗಳೆಲ್ಲರೂ ನನ್ನ ಈ ಪ್ರಾರ್ಥನೆಯನ್ನು ಆಲಿಸುವಂತಾಗಲಿ! ಮನೋಬುದ್ಧಿಗಳೇ! ನಿಮ್ಮಿಬ್ಬರನ್ನೂ ಸರ್ವಕಾರಣನಾದ ಚಿರಂತನವಾದ ಬ್ರಹ್ಮದಲ್ಲಿ ನಮಸ್ಕಾರಗಳೊಂದಿಗೆ ಸೇರಿಸುತ್ತಿದ್ದೇನೆ. ಯಾರು ಪರಮೇಶ್ವರನನ್ನು ಆರಾಧಿಸದೆ ಅಗ್ನ್ಯಾರಾಧನಾದಿ ಕ್ರತುಗಳನ್ನು ಮಾಡುತ್ತಿರುವರೋ, ವಾಯುವು ಎಲ್ಲಿ ಸವಿತೃ ಪ್ರೇರಿತವಾಗಿ ಶಬ್ದವನ್ನು ಮಾಡುತ್ತಿದೆಯೋ, ಸೋಮರಸವು ಎಲ್ಲಿ ವೃದ್ಧಿಯಾಗುತ್ತಿದೆಯೋ ಅಂತಹ ಯಜ್ಞದಲ್ಲಿ ಮನಸ್ಸು ಹುಟ್ಟುತ್ತಿದೆ.

**ಮಂ.ಶ್ಲೋ॥ ಸವಿತ್ರಾಪಸವೇನ ಜುಷೇ ತದ್ಬ್ರಹ್ಮಪೂರ್ವ್ಯಮ್ । ತತ್ರ ಯೋನಿಂ ಕೃಣವಸೇ ಸಹಿತೇ ಪೂರ್ವಮಕ್ಷಿವತ್ (7) ತ್ರಿರುನ್ನತಗ್ಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸಂವಿವೇಶ್ಯ। ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ ಸರ್ವಾಣಿ ಭಯಾವಹಾನಿ (8)**

ತಾ : ಸರ್ವಕಾರಣನು, ಸವಿತೃರೂಪನು, ಪುರಾತನನು ಆದ ಪರಬ್ರಹ್ಮನನ್ನು ಸೇವಿಸಬೇಕು. ಆ ಬ್ರಹ್ಮದಲ್ಲಿಯೇ ಸಮಾಧಿ ನಿಷ್ಠೆಯನ್ನು ಹೊಂದಬೇಕು ಹೀಗೆ ಮಾಡದಿದ್ದಲ್ಲಿ ನಿನ್ನ ಪೂರ್ವ (ಜನ್ಮ) ಕರ್ಮವು ದೂರವಾಗಲು ಸಾಧ್ಯವಾಗುವುದಿಲ್ಲ. ಶಿರಸ್ಸು, ಕಂಠ, ಶರೀರ ಎನ್ನುವ ಈ ಮೂರನ್ನು ಸಮಾನವಾಗಿ ನಿಲ್ಲಿಸಿ ಇಂದ್ರಿಯಗಳನ್ನು, ಮನಸ್ಸನ್ನು ಹೃದಯದಲ್ಲಿ ಸ್ಥಾಪಿಸಿ ಬ್ರಹ್ಮವೆನ್ನುವ ಹಡಗನ್ನೇರಿ ಭಯವನ್ನು ಹುಟ್ಟಿಸುವ ಜನನ ಮರಣಾದಿ ಸಂಸಾರವೆನ್ನುವ ಪ್ರವಾಹವನ್ನು ಜೀವನು ದಾಟಬೇಕು.

**ಮಂ.ಶ್ಲೋ॥ ಪ್ರಾಣಾನ್ ಪ್ರಪೀಡ್ಯೇಹಾ ಸಯುಕ್ತಚೇಷ್ಟಃ ಕ್ಷೀಣೇ ಪ್ರಾಣೇ ನಾಸಿಕಯೋಚ್ಛ್ವಸೀತ। ದುಷ್ಟಾಶ್ವ-ಯುಕ್ತಮಿವ ವಾಹಮೇನಂ ವಿದ್ವಾನ್ಮನೋ ಧಾರಯೇತಾ ಪ್ರಮತ್ತಃ (9) ಸಮೇ ಶುಚೌ ಶರ್ಕರಾ ವಹ್ನಿವಾಲುಕಾ ವಿವರ್ಜಿತೇ ಶಬ್ದಜಲಾಶ್ರಯಾದಿಭಿಃ, ಮನೋಽನುಕೂಲೇನ ತು ಚಕ್ಷುಪೀಡನೇ ಗುಹಾ ನಿವಾತಾಶ್ರಯಣೇ ಪ್ರಯೋಜಯೇತ್ (10)**

ತಾ : ಯುಕ್ತಾಹಾರ, ವಿಹಾರಗಳನ್ನು ಹೊಂದಿದವನಾಗಿ ಈ ಶರೀರದಲ್ಲಿ ಮನಸ್ಸನ್ನು ನಿರೋಧಿಸಿ ಪ್ರಾಣಾಯಾಮವನ್ನು ಮಾಡಬೇಕು. ಉಚ್ಛ್ವಾಸ ನಿಶ್ವಾಸಗಳ ಮೂಲಕ ಪ್ರಾಣಾಯಾಮವನ್ನು ಮಾಡಬೇಕು. ಕೆಟ್ಟ ಕುದುರೆಗಳುಳ್ಳ ರಥವನ್ನು ಸಾರಥಿಯು ಬಹು ಜಾಗರೂಕನಾಗಿ ನಡೆಸುವಂತೆ, ಸಾಧಕನು ಅಪ್ರಮತ್ತನಾಗಿ ಮನಸ್ಸನ್ನು ಜಯಿಸಬೇಕು. ಸಮಾನವಾಗಿರುವಂತಹ, ಶುಚಿಯಾಗಿರು-ವಂತಹ ಚಿಕ್ಕ ಹರಳುಗಳು ಅಗ್ನಿ, ಮರಳು ಇಲ್ಲದಿರುವಂತಹ, ಜಲಾಶ್ರಯದ ಧ್ವನಿ ಇಲ್ಲದಿರುವಂತಹ, ಮನಸ್ಸಿಗೆ ಅನುಕೂಲವಾಗಿರುವಂತಹುದು, ನೋಡಲು ರಮ್ಯವಾದಂಥ, ಗಾಳಿ ಬಾಧೆಯಿಲ್ಲದ ಪ್ರದೇಶದಲ್ಲಿ (ಬೆಟ್ಟ, ಗುಹೆಗಳಲ್ಲಿ) ಯೋಗಾಭ್ಯಾಸ ಮಾಡಬೇಕು.

**ಮಂ.ಶ್ಲೋ॥ ನೀಹಾರಧೂಮಾರ್ಕಾನಲಾನಿಲಾನಾಂ ಖದ್ಯೋತವಿದ್ಯುತ್ ಸ್ಫಟಿಕಶಶೀನಾಂ । ಏತಾನಿ ರೂಪಾಣಿ ಪುರಸ್ಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ (11) ಪೃಥ್ವ್ಯಪ್‌ತೇಜೋಽನಿಲ ಖೇನಮುತ್ಥಿತೇ ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ। ನ ತಸ್ಯ ರೋಗೋ, ನ ಜರಾ, ನ ಮೃತ್ಯುಃ, ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಮ್ (12)**

ತಾ : ಯೋಗಾಭ್ಯಾಸವನ್ನು ಮಾಡುವ ಸಮಯದಲ್ಲಿ ಮೊದಲಲ್ಲಿ ಮಂಜಿನಂತೆ ಆತನ ಚಿತ್ತವೃತ್ತಿಗೆ ವಾಯುವಿನಂತೆ ಕಾಣಿಸುವುದು. ಆಮೇಲೆ ಧೂಮದಂತೆಯು ಭಾನುವಿನಂತೆಯು ಆನಂತರ ಅಗ್ನಿಯಂತೆ ನಂತರದಲ್ಲಿ ಸೂರ್ಯನಂತೆಯೂ (ಮಿಣುಕು ಹುಳ) ಕಾಣಿಸುತ್ತಾ, ಆಮೇಲೆ ಮಿಂಚಿನಂತೆ ಪ್ರಕಾಶಿಸುವುದು. ಆಮೇಲೆ ಸ್ಫಟಿಕದಂತೆ ಗೋಚರಿಸುವುದು ನಂತರ ಚಂದ್ರನಂತೆ ಕಾಣಿಸಿದಲ್ಲಿ ಯೋಗವು ಸಿದ್ಧಿಸಿದೆಯೆಂದು ಶೀಘ್ರದಲ್ಲಿ ಬ್ರಹ್ಮಪ್ರಾಪ್ತಿ ಉಂಟಾಗುವುದೆಂದು ಭಾವಿಸಬೇಕು. ಈ ದೇಹವು ಪಂಚಭೂತಗಳಲ್ಲಿ ಮಾಯವಾಗುವುದರಿಂದ ಪಂಚಾತ್ಮಕವೆನ್ನಿಸುವುದು. ಶರೀರ-ವುಳ್ಳವನಿಗೆ ವ್ಯಾಧಿ, ಮುಪ್ಪು ಮರಣಗಳು ಸಂಭವಿಸುತ್ತವೆ. ಈ ಶರೀರವು ಪಾಂಚಭೌತಿಕವಾದ ಯೋಗಾಭ್ಯಾಸವು ಸಿದ್ಧಿಸಿದ ಮೇಲೆ ಯೋಗಾಗ್ನಿಮಯವಾಗುತ್ತದೆ. ಯೋಗಾಗ್ನಿಮಯ ಶರೀರ-ವಿರುವವನಿಗೆ ವ್ಯಾಧಿ ಜರಾಮರಣಗಳು ಸಂಭವಿಸುವುದಿಲ್ಲ.

**ಮಂ.ಶ್ಲೋ॥ ಲಘುತ್ವಮಾರೋಗ್ಯಮಲೋಲುಪತ್ವಂ ವರ್ಣಪ್ರಸಾದಂ ಸ್ವರಸೌಷ್ಠವಂ ಚ । ಗಂಧಶ್ಶುಭೋ ಮೂತ್ರಪುರೀಷಮಲ್ಪಂ ಯೋಗಪ್ರವೃತ್ತಿಂ ಪ್ರಥಮಾಂ ವದಂತಿ (13) ಯಥೈವ ಬಿಂಬಂ ಮೃದಯೋಪಲಿಪ್ತಂ ತೇಜೋಮಯಂ ಭ್ರಾಜತೇ ತತ್ಸುಧಾಂತಮ್। ತದ್ವಾಽಽತ್ಮತತ್ತ್ವಂ ಪ್ರಸಮೀಕ್ಷ್ಯ ದೇಹಿ ಏಕಃ ಕೃತಾರ್ಥೋ ಭವತೇ ವೀತಶೋಕಃ (14)**

ತಾ : ಯೋಗಾಭ್ಯಾಸದಲ್ಲಿ ನಿರತನಾದವನಿಗೆ ಶರೀರವು ಹಗುರವಾಗಿರುವುದು. ಆರೋಗ್ಯ-ವಾಗಿರುತ್ತದೆ. ಆಶೆಗಳು ಇಲ್ಲದೆಯೂ ಶರೀರವು ಪ್ರಕಾಶಮಾನವಾಗಿಯೂ ಇರುವುದು. ಕಂಠಧ್ವನಿ ಸ್ಪಷ್ಟವಾಗಿರುವುದು. ದೇಹವೆಲ್ಲವೂ ಸುಗಂಧವಾಗಿರುವುದು ಮೂತ್ರಪುರೀಷಗಳು ಸ್ವಲ್ಪವಾಗಿರುತ್ತವೆ ಎಂದು ಹಿರಿಯರು ಹೇಳುತ್ತಾರೆ. ಸುವರ್ಣ ವಿಗ್ರಹಗಳು ಮುಂತಾದವುಗಳು ಮೊದಲು ಮಣ್ಣಿನಿಂದ ಹಚ್ಚಲ್ಪಟ್ಟು ನಂತರ ಅಗ್ನಿಯಲ್ಲಿ ಸುಟ್ಟಲ್ಪಟ್ಟು, ತೇಜೋಮಯವಾಗಿ ಪ್ರಕಾಶವಂತವಾಗುತ್ತವೆ. ಆ ರೀತಿಯಲ್ಲೇ ಜಿಜ್ಞಾಸುವಾದವನು ಆತ್ಮತತ್ತ್ವವನ್ನು ದರ್ಶಿಸಿ, ಅದ್ವಿತೀಯನೂ ಧನ್ಯನೂ, ಶೋಕ ವಿಮುಕ್ತನು ಆಗುತ್ತಾನೆ.

**ಮಂ.ಶ್ಲೋ॥ ಯದಾತ್ಮತತ್ತ್ವೇನ ತು ಬ್ರಹ್ಮತತ್ತ್ವಂ ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್, ಅಜಂ ಧ್ರುವಗ್ಂ ಸರ್ವತತ್ತ್ವೈರ್ವಿಶುದ್ಧಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (15) ಏಷಹಿ ದೇವಃ ಪ್ರದಿಶೋಽನುಸರ್ವಾಃ ಪೂರ್ವೋಹಿ ಜಾತಸ್ಸ ಉ ಗರ್ಭೇ ಅಂತಃ । ಸ ಏವಜಾತ ಸ್ಸ ಜನಿಷ್ಯಮಾಣಃ ಪ್ರತ್ಯಙ್ಜನಾಂಸ್ತಿಷ್ಠತಿ ಸರ್ವತೋಮುಖಃ (16) ಯೋ ದೇವೋ ಅಗ್ನೌ ಯೋ ಅಪ್ಸು ಯೋ ವಿಶ್ವಂ ಭುವನಮಾವಿವೇಶ । ಯ ಓಷಧೀಷು ಯೋ ವನಸ್ಪತಿಷು ತಸ್ಮೈ ದೇವಾಯ ನಮೋನಮಃ (17)**

ತಾ : ಯಾವಾಗ ಈ ಪರಬ್ರಹ್ಮದಲ್ಲೇ ಲೀನವಾಗಿ, ದೀಪ ಸಮಾನವಾದ ಆತ್ಮ ತತ್ತ್ವದಲ್ಲಿ ಬ್ರಹ್ಮತತ್ತ್ವವನ್ನು ದರ್ಶಿಸುವನೋ ಅಂತಹ ಜೀವನು ಜನ್ಮರಹಿತವಾಗಿ ನಿಶ್ಚಲವಾದ ಪರಿಶುದ್ಧವಾದ ಆತ್ಮದೇವನನ್ನು ತಿಳಿದುಕೊಂಡು ಸಮಸ್ತಪಾಶಗಳಿಂದ ವಿಮುಕ್ತನಾಗುತ್ತಿದ್ದಾನೆ. ಈ ದೇವನು ನಾಲ್ಕುದಿಕ್ಕುಗಳನ್ನು, ನಾಲ್ಕು ವಿದಿಕ್ಕುಗಳನ್ನು ಊರ್ಧ್ವಾಧೋಭಾಗಗಳನ್ನು ಅನುಸರಿಸಿ ಎಲ್ಲೆಡೆ ತುಂಬಿರುವನು. ಎಲ್ಲರಿಗಿಂತ ಮುಂಚೆ ಹಿರಣ್ಯಗರ್ಭನ ರೂಪದಲ್ಲಿ ಜನಿಸಿದುದು ಆತನೇ. ತಾಯಿಯ ಉದರದಲ್ಲಿ ಗರ್ಭ ರೂಪದಲ್ಲಿರುವುದೂ ಆತನೇ. ಆಮೇಲೆ ಶಿಶುವಾಗಿ ಜನಿಸುವುದೂ ಆತನೇ. ಯಾವ ಆತ್ಮದೇವನು ಅಗ್ನಿಯಲ್ಲಿಯೂ, ಜಲದಲ್ಲಿಯೂ, ಸಮಸ್ತ ಪ್ರಪಂಚದಲ್ಲಿಯೂ, ಓಷಧ-ಗಳಲ್ಲಿಯೂ, ವನಸ್ಪತಿಗಳಲ್ಲಿಯೂ ಪ್ರವೇಶಿಸಿ ತುಂಬಿರುವನೋ ಆ ಪರಮೇಶ್ವರನಿಗೆ ನಮಸ್ಕಾರ.

# ತೃತೀಯೋಽಧ್ಯಾಯ

**ಮಂ.ಶ್ಲೋ॥ ಓಂ ಯ ಏಕೋ ಜಾಲವಾನೀಶತ ಈಶನೀಭಿಸ್ಸರ್ವಾನ್ಲೋಕಾ ನೀಶತ ಈಶನೀಭಿಃ । ಯ ಏವೈಕ ಇಹ ಉದ್ಭವೇ ಸಂಭವೇ ಚ ಯ ಏತದ್ವಿದುರಮೃತಾಸ್ತೇ ಭವಂತಿ (1) ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಂಲ್ಲೋಕಾ ನೀಶತ ಈಶನೀಭಿಃ । ಪ್ರತ್ಯಙ್ ಜನಾಂಸ್ತಿಷ್ಠತಿ ಸಂಚುಕೋ ಚಾಂತಕಾಲೇ ಸಗ್ಂಸೃಜ್ಯ ವಿಶ್ವಾಭುವನಾನಿ ಗೋಪಾಃ(2)**

ತಾ : ಅದ್ವಿತೀಯನಾದ ಆ ಪರಮಾತ್ಮನೇ ಮಾಯಾ ವಿಶಿಷ್ಟನಾಗಿ ತನ್ನ ಶಕ್ತಿಯಿಂದ ಸರ್ವವನ್ನೂ ನಿಯಂತ್ರಿಸುತ್ತಿದ್ದಾನೆ. ಆ ಪರಮಾತ್ಮನೇ ಈ ಸಮಸ್ತ ಪ್ರಪಂಚದಲ್ಲಿ ಮಾಯಾ ಶಕ್ತಿಯಿಂದ ಹುಟ್ಟಿಸುತ್ತಾ ಪೋಷಿಸುತ್ತಾ ಸಂಹರಿಸುತ್ತಿದ್ದಾನೆ. ಈ ವಿಷಯವನ್ನು ಯಾರು ಅರಿತುಕೊಳ್ಳುವರೋ ಅವರು ಮರಣರಹಿತವಾಗಿ ಮುಕ್ತರಾಗುವರು ಜಗತ್ತಿನ ಉತ್ಪತ್ತಿಗೆ ಮೊದಲ ಪರಮಾತ್ಮನೊಬ್ಬನೇ ಆದುದರಿಂದ ಬ್ರಹ್ಮವೇತ್ತರು ಎರಡನೆಯವನು ಇರುವನೆಂದು ಭಾವಿಸಲಿಲ್ಲ. ಒಬ್ಬನೇ ಆದ ಪರಮಾತ್ಮನೇ ತನ್ನ ಮಾಯಾಶಕ್ತಿಯಿಂದ ಈ ಪ್ರಪಂಚವನ್ನು ನಿಯಮಿಸುತ್ತಿದ್ದಾನೆ. ಆತನೇ ಎಲ್ಲರಲ್ಲೂ ಪ್ರತ್ಯಗಾತ್ಮ ರೂಪದಲ್ಲಿದ್ದಾನೆ. ಈತನೇ ಈ ಪ್ರಪಂಚವನ್ನು ಸ್ಥಿತಿಕಾಲದಲ್ಲಿ ಪೋಷಿಸುತ್ತಿದ್ದಾನೆ. ಪ್ರಳಯ ಕಾಲದಲ್ಲಿ ತನ್ನಲ್ಲಿ ಲೀನಮಾಡಿಕೊಳ್ಳುತ್ತಿದ್ದಾನೆ.

**ಮಂ.ಶ್ಲೋ॥ ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್, ಸಂಬಾಹುಭ್ಯಾಂ ಧಮತಿ ಸಂಪತತ್ರೈಃ ದ್ಯಾವಾ ಪೃಥಿವೀ ಜನಯನ್ದೇವ ಏಕಃ (3) ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಜನಯಾಮಾಸ ಪೂರ್ವಗ್ಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು (4)**

ತಾ : ಆತ್ಮದೇವನೆನ್ನುವ ಅದ್ವಿತೀಯನಾದಂತಹ ಪರಮಾತ್ಮನು ಆಕಾಶವನ್ನು, ಭೂಮಿಯನ್ನು, ಹುಟ್ಟಿಸುವವನಾಗಿ ಎಲ್ಲೆಡೆಯೂ ಕಣ್ಣುಳ್ಳವನಾಗಿದ್ದಾನೆ. ಮತ್ತು ಎಲ್ಲೆಡೆಯೂ ಮುಖಗಳನ್ನುಳ್ಳವ-ನಾಗಿದ್ದಾನೆ. ಎಲ್ಲೆಡೆಯೂ ಬಾಹುಗಳನ್ನು ಹೊಂದಿದವನೂ, ಎಲ್ಲೆಡೆಯೂ ಪಾದಗಳುಳ್ಳವನಾಗಿಯೂ ಆಗಿ, ಬಾಹುಗಳೊಂದಿಗೆ ಮನುಷ್ಯರನ್ನು ಸೇರಿಸುತ್ತಿದ್ದಾನೆ. ರೆಕ್ಕೆಗಳೊಂದಿಗೆ ಪಕ್ಷಿಗಳನ್ನು ಸೇರಿಸುತ್ತಿದ್ದಾನೆ ಯಾವ ದೇವನು ಸಕಲ ದೇವತೆಗಳಿಗೂ ಅದಿ ಕಾರಣನೋ, ದೇವತೆಗಳ ಐಶ್ವರ್ಯಗಳಿಗೆ ಕೂಡಾ

ಕಾರಣಭೂತನೋ ಸರ್ವ ಪ್ರಪಂಚಕ್ಕೆ ಪರಿಪಾಲಕನಾಗುತ್ತಿದ್ದಾನೋ, ಮಹರ್ಷಿಯಾಗಿ ಸರ್ವಜ್ಞ-ನಾಗುತ್ತಿದ್ದಾನೋ, ಹಿಂದೆ ಹಿರಣ್ಯಗರ್ಭನನ್ನು ಹುಟ್ಟಿಸಿದನೋ ಅಂತಹ ರುದ್ರನು ನಮಗೆ ಯೋಗ್ಯ ಬುದ್ಧಿಯನ್ನು ಪ್ರಸಾದಿಸುವಂತಾಗಲಿ.

**ಮಂ.ಶ್ಲೋ॥ ಯಾ ತೇ ರುದ್ರ ಶಿವಾರಘೋರಾऽಪಾಪಕಾಶಿನೀ । ತಯಾನನ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ (5) ಯಾಮಿಷುಂ ಗಿರಿಶಂತ ಹಸ್ತೇ ಬಿಭರ್ಷ್ಯಸ್ತವೇ । ಶಿವಾಂ ಗಿರಿತ್ರ ತಾಂ ಕುರು ಮಾ ಹಿಗ್ಂಸೀಃ ಪುರುಷಂ ಜಗತ್ (6)**

ತಾ : ಓ ರುದ್ರದೇವಾ! ಮಂಗಳಕರವಾದ ನಿನ್ನ ಶರೀರವು ಅಘೋರವು. ಸ್ಮರಿಸಿಕೊಂಡ ಮಾತ್ರದಿಂದಲೇ ಪಾಪಗಳನ್ನು ಹೋಗಲಾಡಿಸಿ ಪುಣ್ಯವನ್ನುಂಟು ಮಾಡುವುದು. ಪರ್ವತದಲ್ಲಿ ವಾಸವಾಗಿರುವ ಓ ರುದ್ರದೇವಾ! ಸುಖಕರವಾದ ಶರೀರದೊಂದಿಗೆ ನಮ್ಮೆಲ್ಲರನ್ನೂ ವೀಕ್ಷಿಸುವಂತಾಗು. ಪರ್ವತವಾಸಿಯಾದ ಓ ರುದ್ರದೇವಾ! ನೀನು ಶತ್ರುಗಳ ಮೇಲೆ ಪ್ರಯೋಗಿಸುವ ಬಾಣಗಳನ್ನು ಕೈಯಲ್ಲಿ ಹಿಡಿದಿರುವೆ. ಆ ಬಾಣವನ್ನು ಮಂಗಳಕರವಾಗುವಂತೆ ಮಾರ್ಪಡಿಸು. ನನ್ನ ಸನ್ನಿಹಿತ-ರನ್ನಾಗಲೀ ಪ್ರಪಂಚವನ್ನಾಗಲೀ ಹಿಂಸಿಸಬೇಡ.

**ಮಂ.ಶ್ಲೋ॥ ತತಃ ಪರಂ ಬ್ರಹ್ಮಪರಂ ಬೃಹಾಂತಂ ಯಥಾ ನಿಕಾಯಂ ಸರ್ವಭೂತೇಷು ಗೂಢಮ್ ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ ತಂ ಜ್ಞಾತ್ವಾ ಅಮೃತಾ ಭವಂತಿ (7) ವೇದಾಹಮೇತಂ ಪುರುಷಂ ಮಹಾನ್ತಮಾದಿತ್ವವರ್ಣಂ ತಮಸಃ ಪರಸ್ತಾತ್ । ತಮೇವ ವಿದಿತ್ವಾऽತಿಮೃತ್ಯು -ಮೇತಿ ನಾನ್ಯಃ ಪಂಥಾ ವಿದ್ಯತೇऽಯನಾಯ (8)**

ತಾ : ಜಗದಾತ್ಮನಾದ ವಿರಾಟ್ಟಿಗಿಂತ ಪರನಾದವನು, ಬ್ರಹ್ಮ ಶಬ್ದವಾಚ್ಯನು, ಸರ್ವಪ್ರಾಣಗಳಲ್ಲಿ ಅಂತರ್ಯಾಮಿಯಾಗಿ ವ್ಯಾಪಿಸಿರುವವನು, ಸರ್ವಪ್ರಪಂಚವನ್ನೂ ತನ್ನಲ್ಲಿ ಲೀನಮಾಡಿಕೊಂಡು ಎಲ್ಲೆಡೆಯೂ ವ್ಯಾಪಿಸಿರುವಂತಹವನೂ ಆದ ಪರಮೇಶ್ವರನನ್ನು ತಿಳಿದುಕೊಂಡವರು ಅಮೃತರಾಗು-ತ್ತಿದ್ದಾರೆ. ಆ ಪರಮಪುರುಷನನ್ನು ಮಹಾತ್ಮನೆಂದು ಪ್ರಕಾಶಪುರುಷನೆಂದು, ತಮಸ್ಸಿಗೆ ಆಚೆಗಿರುವವನು ಆದವನೆಂದು, ನಾನು ತಿಳಿದುಕೊಳ್ಳುತ್ತಿದ್ದೇನೆ. ಆತನನ್ನು ಅರಿತುಕೊಂಡ ಜೀವನು ಮೃತ್ಯುವನ್ನು ಜಯಿಸುತ್ತಿದ್ದಾನೆ. ಮೋಕ್ಷವನ್ನು ಹೊಂದಲು ಇದಕ್ಕಿಂತ ಬೇರೊಂದು ಮಾರ್ಗವಿಲ್ಲ.

**ಮಂ.ಶ್ಲೋ॥ ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನ ಜ್ಯಾಯೋऽಸ್ತಿ ಕಶ್ಚಿತ್। ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ ಸರ್ವಮ್ (9) ತತೋ ಯದುತ್ತರತರಂ ತದರೂಪಮನಾಮಯಮ್। ಯ ಏತದ್ವಿದುರಮೃತಾ ಸ್ತೇ ಭವಂತ್ಯಥೇತರೇ ದುಃಖಮೇವಾಪಿಯಂತಿ (10)**

ತಾ : ಯಾವುದು ಬ್ರಹ್ಮಕ್ಕಿಂತ ಶ್ರೇಷ್ಠವಾದುದಾಗಲಿ, ಬೇರೆಯಾದುದಾಗಲಿ, ದೊಡ್ಡದಾಗಲಿ, ಚಿಕ್ಕದಾಗಲಿ ಯಾವುದೂ ಇಲ್ಲವೋ, ಯಾವುದು ವೃಕ್ಷದಂತೆ ಆಕಾಶದಲ್ಲಿ ನಿಂತಿರುವುದೋ, ಅಂತಹ ಬ್ರಹ್ಮದ ಮೂಲಕ ಈ ಪ್ರಪಂಚವೆಲ್ಲವೂ ಪರಿಪೂರ್ಣವಾಗಿ ವ್ಯಾಪ್ತಿಯಾಗಿದೆ. ಈ ಜಗತ್ತಿನ ಕಾರ್ಯ ಕಾರಣಗಳಿಗಿಂತ ಬೇರೆಯಾದುದು, ರೂಪ ರಹಿತವಾದಂತಹುದು, ತಾಪತ್ರಯ ವರ್ಜಿತ-

ವಾದುದು ಆದ ಬ್ರಹ್ಮವನ್ನರಿತವರು ಮರಣರಹಿತರಾಗುತ್ತಿರುವರು. ತದಿತರರು ದುಃಖವನ್ನೇ ಅನುಭವಿಸುತ್ತಿರುವರು.

**ಮಂ.ಶ್ಲೋ॥ ಸರ್ವಾನನ ಶಿರೋ ಗ್ರೀವಸ್ಸರ್ವಭೂತಗುಹಾಶಯಃ । ಸರ್ವವ್ಯಾಪೀ ಸಭಗವಾಂಸ್ತಸ್ಮಾತ್ಸರ್ವ ಗತಶ್ಶಿವಃ (11) ಮಹಾನ್ ಪ್ರಭುರ್ವೈ ಪುರುಷಸ್ಸತ್ತ್ವಸ್ಯೈಷ ಪ್ರವರ್ತಕಃ । ಸುನಿರ್ಮಲಾಮಿಮಾಂ ಪ್ರಾಪ್ತಿಮೀಶಾನೋ ಜ್ಯೋತಿರವ್ಯಯಃ (12)**

ತಾ : ಆ ಭಗವಂತನು ಸಮಸ್ತ ಪ್ರಾಣಿಗಳ ಮುಖಗಳನ್ನು, ಶಿರಸ್ಸುಗಳನ್ನು, ಕಂಠಗಳನ್ನು ಹೊಂದಿದವನಾಗಿರುವನು. ಸರ್ವ ಜೀವಿಗಳ ಹೃದಯ ಗವಿಗುಹೆಗಳಲ್ಲಿ ವಾಸವಾಗಿರುವನು. ಆತ ಸರ್ವವ್ಯಾಪಿಯು, ಮಂಗಳ ಸ್ವರೂಪನು ಆಗಿರುವನು. ಪರಿಪೂರ್ಣನಾದ ಆ ಶಿವನು ಮಹಾಪ್ರಭು-ವಲ್ಲವೇ! ಈತ ವಿರಾಟ್ಪುರುಷನಿಗೆ (ಅಂತಃಕರಣಕ್ಕೆ) ಪ್ರವರ್ತಕನಲ್ಲವೆ! ಪರಿಶುದ್ಧವಾದ ಈ ಪರಮಪದ ಪ್ರಾಪ್ತಿಯನ್ನು ನಿಯಮಿಸುವವನು ಜ್ಯೋತಿ ಸ್ವರೂಪನು, ಅವ್ಯಯನು.

**ಮಂ.ಶ್ಲೋ॥ ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಗ್ಂ ಹೃದಯೇ ಸನ್ನಿವಿಷ್ಟಃ, ಹೃದಾಮನ್ವೀಶೋ ಮನಸಾಽಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವಂತಿ (13)**

ತಾ : ಪರಬ್ರಹ್ಮವು ಅಂಗುಷ್ಠಮಾತ್ರ ಪರಿಮಾಣದಲ್ಲಿದ್ದು ಹೃದಯ ಗುಹೆಯಲ್ಲಿ ವಾಸವಾಗಿದ್ದಾನೆ ಈ ಪರಮಾತ್ಮನು ಪರಿಪೂರ್ಣನು. ಸಕಲ ಜೀವಿಗಳ ಹೃದಯಗಳಲ್ಲಿದ್ದುಕೊಂಡು ಮನಸ್ಸಿನಿಂದ ಮುಚ್ಚಲ್ಪಟ್ಟಿದ್ದಾನೆ. ಆತ ಆತ್ಮ ಜ್ಞಾನದಲ್ಲಿ ಸಾರ್ವಭೌಮ. ಈ ರೀತಿಯಾಗಿ ತಿಳಿದುಕೊಂಡವರು ಮೃತ್ಯುವಿಲ್ಲದವರಾಗುತ್ತಿದ್ದಾರೆ.

**ಮಂ.ಶ್ಲೋ॥ ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷ ಸ್ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠ-ದ್ದಶಾಂಗುಲಮ್ (14)**
**ಪುರುಷ ಏವೇದಗ್ಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನೋ ಯದನ್ನೇನಾ ತಿರೋಹತಿ (15)**

ತಾ : ಆ ಪರಮಾತ್ಮನು ಸಹಸ್ರ ಶೀರ್ಷಗಳನ್ನುಳ್ಳವನು, ಪೂರ್ಣ ಪುರುಷನು, ಸಹಸ್ರ ನೇತ್ರಗಳ್ಳುಳ್ಳವನು, ಸಹಸ್ರಪಾದಗಳಿರುವವನು. ಆ ಪರಮಾತ್ಮ ಈ ಭೂಮಿಯ ಒಳಗೂ ಹೊರಗೂ ವ್ಯಾಪಿಸಿದವನಾಗಿ ಅಪಾರವಾದ ಭಾಗವನ್ನು ಅಧಿಷ್ಠಿಸಿದ್ದಾನೆ. ಯಾವ ಪ್ರಪಂಚವು ಅನ್ನದಿಂದ ಹುಟ್ಟಿ, ನಮ್ಮ ನೇತ್ರಗಳಿಗೆ ಕಾಣಿಸುತ್ತಿದೆಯೋ, ಯಾವ ಪ್ರಪಂಚ ಬರಲಿರುವುದೋ ಆ ಪ್ರಪಂಚವೆಲ್ಲವೂ ಪರಮ ಪುರುಷ ಸ್ವರೂಪವೇ! ತದ್ಭಿನ್ನವಾದುದಲ್ಲ ಅಮೃತಮಯ ಕೈವಲ್ಯಕ್ಕೆ ಆ ಪುರುಷನೇ ಪ್ರಭು.

**ಮಂ.ಶ್ಲೋ॥ ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿಶಿರೋಮುಖಮ್ । ಸರ್ವತಃ ಶ್ರುತಿಮಲ್ಲೋಕೇ ಸರ್ವಮಾ-ವೃತ್ಯ ತಿಷ್ಠತಿ (16) ಸರ್ವೇಂದ್ರಿಯಗುಣಾಭಾಸಗ್ಂ ಸರ್ವೇಂದ್ರಿಯ ವಿವರ್ಜಿತಮ್। ಸರ್ವಸ್ಯ ಪ್ರಭುಮೀಶಾನಗ್ಂ ಸರ್ವಸ್ಯಂ ಶರಣಂ ಸುಹೃತ್ (17) ನವದ್ವಾರೇ ಪುರೇ ದೇಹೀ ಹಂಸೋ ಲೇಲಾಯತೇ ಬಹಿಃ । ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ (18)**

**ಅಪಾಣಿಪಾದೋ ಜವನೋ ಗ್ರಹೀತಾಪಶ್ಯತ್ಯಚಕ್ಷುಸ್ಸಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನಚ ತಸ್ಯಾಽಸ್ತಿ ವೇತ್ತಾ, ತಮಾಹುರಗ್ರ್ಯಂ ಪುರುಷಂ ಮಹಾನ್ತಮ್ (19)**

ತಾ : ಎಲ್ಲೆಡೆಯೂ ಪಾದಗಳು ಹಸ್ತಗಳನ್ನುಳ್ಳದ್ದಾಗಿ, ಎಲ್ಲೆಡೆಯೂ ನೇತ್ರಗಳು, ಶಿರಸ್ಸುಗಳು, ಮುಖಗಳನ್ನುಳ್ಳದ್ದಾಗಿಯು ಎಲ್ಲೆಡೆ ಶ್ರೋತ್ರ(ಕಿವಿ) ಗಳನ್ನುಳ್ಳದ್ದಾಗಿಯೂ ಇರುವ ಪರಬ್ರಹ್ಮ ಸ್ವರೂಪವು ಈ ಪ್ರಪಂಚದಲ್ಲಿರುವ ಸರ್ವ ಜೀವಿಗಳನ್ನು ಆವರಿಸಿತುಂಬಿಕೊಂಡಿದೆ. ಆ ಬ್ರಹ್ಮತತ್ತ್ವವನ್ನು ಸರ್ವೇಂದ್ರಿಯಗುಣಗಳನ್ನು ಭಾವನೆ ಮಾಡತಕ್ಕುದಾಗಿಯೂ, ಸರ್ವೇಂದ್ರಿಯಗಳು ಇಲ್ಲದಾದುದಾಗಿಯೂ, ಸಮಸ್ತಕ್ಕೂ ಪ್ರಭುವಾಗಿಯೂ, ಈಶ್ವರನಾಗಿಯೂ, ಸಕಲಕ್ಕೂ ರಕ್ಷಕವಾದುದಾಗಿಯೂ ತಿಳಿದುಕೊಳ್ಳಬೇಕು. ಆ ಆತ್ಮದೇವನು ನವದ್ವಾರಗಳುಳ್ಳ ಈ ದೇಹವೆನ್ನುವ ಪಟ್ಟಣದಲ್ಲಿ ಆತ್ಮರೂಪದಲ್ಲಿ ಪ್ರಕಾಶಿಸುತ್ತಾ, ಸ್ಥಾವರ ಜಂಗಮಾತ್ಮಕವಾದ ಸಕಲ ಲೋಕವನ್ನು ಸ್ವಾಧೀನ ಮಾಡಿಕೊಂಡು ಹೊರಗಡೆಯೂ ಸಂಚರಿಸುತ್ತಾನೆ (ತ್ತಿರುತ್ತಾನೆ) ಆ ಪರಮಾತ್ಮನು ಹಸ್ತಗಳು ಪಾದಗಳು ಇಲ್ಲದವನಾಗಿದ್ದರೂ, ಶೀಘ್ರವಾಗಿ ನಡೆಯುತ್ತಾನೆ, ಗ್ರಹಿಸುತ್ತಿದ್ದಾನೆ, ನೇತ್ರಗಳು ಇಲ್ಲದವನಾದರೂ ಎಲ್ಲವನ್ನೂ ಕಾಣಬಲ್ಲವನಾಗಿದ್ದಾನೆ. ಶ್ರೋತ್ರಗಳು ಇಲ್ಲದವನಾದರೂ ಸರ್ವವನ್ನು ಕೇಳಬಲ್ಲವನಾಗಿದ್ದಾನೆ. ತಿಳಿದುಕೊಳ್ಳಬೇಕಾಗಿರುವುದನ್ನೆಲ್ಲ ತಿಳಿದುಕೊಳ್ಳುತ್ತಾನೆ. ಅಂತಹ ಪರಮ ಪುರುಷನನ್ನು ಅಗ್ರಗಣ್ಯನಾದ ಮಹಾತ್ಮನೆಂದು ಹೇಳುತ್ತಿದ್ದಾರೆ. (ಅಪಾಣಿಪಾದೋ ಎನ್ನುವ 19ನೆಯ ಮಂತ್ರವು ನಾರದ ಪರಿವ್ರಾಜಕೋಪನಿಷತ್ತಿನಲ್ಲಿ 9-4 ರಲ್ಲಿ ಕೂಡಾ ಇದೆ.)

**ಮಂ.ಶ್ಲೋ॥ ಅಣೋರಣೀಯಾನ್ಮಹತೋಮಹೀಯಾನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ। ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಮ್ (20) ವೇದಾಹಮೇತಮಜರಂ ಪುರಾಣಂ ಸರ್ವಾತ್ಮಾನಗ್ಂ ಸರ್ವಗತಂ ವಿಭುತ್ವಾತ್। ಜನ್ಮನಿರೋಧಂ ಪ್ರವದನ್ತಿ ಯಸ್ಯ ಬ್ರಹ್ಮವಾದಿನೋ ಹಿ ಪ್ರವದನ್ತಿ ನಿತ್ಯಮ್ (21)**

ತಾ : ಅತಿ ಸೂಕ್ಷ್ಮ ಪರಮಾಣುವಿಗಿಂತ ಸೂಕ್ಷ್ಮವಾದುದು, ಪೃಥಿವ್ಯಾಧಿಗಳಿಗಿಂತ ದೊಡ್ಡದಾದ ಆತ್ಮನು, ಸರ್ವ ಪ್ರಾಣಿ ಸಮೂಹದ ಹೃದಯ ಗುಹೆಯನ್ನಾಶ್ರಯಿಸಿದ್ದಾನೆ. ಹೃದಯಗುಹ ನಿವಾಸಿಯು, ಭೋಗ ಸಂಕಲ್ಪರಹಿತನು, ವೃದ್ಧಿಕ್ಷಯ ವಿರಹಿತನೆಂಬುವ ಪರಮೇಶ್ವರನನ್ನು ದರ್ಶಿಸಿದವನು ದುಃಖರಹಿತನಾಗುವನು. ಪರಮೇಶ್ವರಾನುಗ್ರಹದಿಂದ ಬ್ರಹ್ಮ ಜ್ಞಾನನು ಉಂಟಾಗುವುದು. ಬ್ರಹ್ಮವೇತ್ತರು ಯಾವನಾದಂತಹ ಪರಮಾತ್ಮನನ್ನು ಜನ್ಮವಿಲ್ಲದವನೆಂದು ಭಾವಿಸುತ್ತಿರುವರೋ, ಆ ಪರಮಾತ್ಮನು ಪರಿಣಾಮ ವಿವರ್ಜಿತನೆಂದು, ಪುರಾತನನೆಂದು, ಸರ್ವಾತ್ಮಕನೆಂದು, ಸರ್ವ ವ್ಯಾಪಕನೆಂದು, ಸರ್ವಗಳಿಗೆ ಆಧಾರವೆಂದು ಮಂತ್ರದ್ರಷ್ಟರು ಸ್ವಾನುಭವದಿಂದ ಹೇಳುತ್ತಿರುವರು (ಅಣೋರಣೀಯನ್ ಎನ್ನುವ 20 ನೆಯ ಮಂತ್ರವು ನಾರದ ಪರಿವ್ರಾಜಕೋಪನಿಷತ್ತು ೯ಉ. ದಲ್ಲಿಯೂ ಕಠೋಪನಿಷತ್ತು 1-2-20ರಲ್ಲಿ ಕೂಡಾ ಇದೆ.)

## ಚತುರ್ಥೋಧ್ಯಾಯಃ

**ಮಂ.ಶ್ಲೋ॥ ಓಂ ಯ ಏಕೋ ವರ್ಣೋ ಬಹುಧಾ ಶಕ್ತಿಯೋಗಾದ್ವರ್ಣಾನನೇಕಾನ್ ನಿಹಿತಾರ್ಥೋ ದಧಾತಿ। ವಿಚೈತಿ ಚಾಂತೇ ವಿಶ್ವಮಾದೌ ಸದೇವಾಸ್ಸನೋ ಬುದ್ಧ್ಯಾ ಶುಭಯಾ ಸಂಯುನಕ್ತು (1)**

**ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚಂದ್ರಮಾಃ । ತದೇವ ಶುಕ್ರಮಮೃತಂ ತದ್ಬ್ರಹ್ಮಾ ತದಾಪಸ್ಸ ಪ್ರಜಾಪತಿಃ (2)**

ತಾ : ಅದ್ವಿತೀಯನಾದ ಯಾವ ಪರಮಾತ್ಮನು ಜಾತಿವಿರಹಿತನಾಗಿ, ಮಾಯಾಶಕ್ತಿಯಿಂದ ಅಪೇಕ್ಷಾರಹಿತನಾಗಿ ನಾನಾ ಜಾತಿಗಳನ್ನು ನಿರ್ಮಿಸುತ್ತಿದ್ದಾನೋ, ಪ್ರಳಯ ಕಾಲದಲ್ಲಿ ಪ್ರಪಂಚವನ್ನು ಲಯ ಮಾಡುತ್ತಿದ್ದಾನೋ, ಮಧ್ಯಕಾಲದಲ್ಲಿ ಪೋಷಣೆ ಮಾಡುತ್ತಿರುವನೋ, ಆ ಪರಮಾತ್ಮನು ನಿತ್ಯ ಪ್ರಕಾಶ ಸ್ವರೂಪನು. ಆ ಪರಮಾತ್ಮನು ಮಂಗಳಕರ ಬುದ್ಧಿಯನ್ನು ನಮಗೆ ಪ್ರಸಾದಿಸಲಿ! ಆ ಆತ್ಮತತ್ತ್ವವೇ ಅಗ್ನಿ, ಸೂರ್ಯ, ವಾಯು, ಚಂದ್ರ, ಪರಿಶುದ್ಧವಾದುದು, ಬ್ರಹ್ಮ, ಜಲ, ವಿರಾಟ್ ಪುರುಷನು

**ಮಂ.ಶ್ಲೋ॥ ತ್ವಗ್ಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ । ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ ಸರ್ವತೋಮುಖಃ (3) ನೀಲಃ ಪತಂಗೋ ಹರಿತೋ ಲೋಹಿತಾಕ್ಷಸ್ತ ಉದ್ಗರ್ಭ ಋತವಸ್ಸಮುದ್ರಾಃ, ಅನಾದಿಮತ್ತ್ವಂ ವಿಭುತ್ವೇನ ವರ್ತಸೇ ಯತೋ ಜಾತಾನಿ ಭುವನಾನಿ ವಿಶ್ವಾ (4)**

ತಾ : ಪರಮೇಶ್ವರ! ನೀನು ಸ್ತ್ರೀ, ಪುರುಷ, ಪುತ್ರ, ಪುತ್ರಿಕ ಆಗುತ್ತಿದ್ದೀಯೆ ನೀನೇ ವೃದ್ಧನಾಗಿ ಕೈಯಲ್ಲಿ ಕೋಲು ಹಿಡಿದು ತಿರುಗುತ್ತಿರುವೆ. ಆಗತಾನೆ ಹುಟ್ಟಿದ ಮಗುವೂ ಆಗುತ್ತಿರುವೆ. ಇಷ್ಟಾಕೆ ಸರ್ವತೋಮುಖನು ನೀನೇ. ಸ್ವೇಚ್ಛೆಯಾಗಿ ಮಾಯಾಶಕ್ತಿಯಿಂದ ವಿವಿಧ ರೂಪಗಳಲ್ಲಿ ಕಾಣಿಸುತ್ತಿರುವೆ. ದೇವಾ! ನಿನ್ನಿಂದಲೇ ಸಕಲ ಲೋಕಗಳು ಜನಿಸಿದವು ನೀನು ಸರ್ವಾತ್ಮಕನಾಗಿರುವೆ. ಕಪ್ಪು ಬಣ್ಣದ ಭ್ರಮರ, ಹಸಿರು ಬಣ್ಣದ ಒಡಲು, ಕೆಂಪು ಕಣ್ಣುಗಳುಳ್ಳ ಗಿಣಿ, ಮಿಂಚನ್ನೊಳಗೊಂಡ ಮೇಘ, ಸರ್ವ ಋತುಗಳು, ಸಮುದ್ರಗಳು ನೀನೇ ಆಗಿರುವೆ. ಸರ್ವ ವ್ಯಾಪಕನಾದುದರಿಂದ ಆದ್ಯಂತ ಶೂನ್ಯವಾಗಿ ಇರುವೆ.

**ಮಂ.ಶ್ಲೋ॥ ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಗ್ಂ ಸರೂಪಾಮ್। ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ (5) ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಗ್ಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ(6)**

ತಾ: ಹುಟ್ಟಿಲ್ಲದ ಜೀವನು ಲೋಹಿತ ಶುಕ್ಲ ಕೃಷ್ಣಂಗಳು ಸಮಸ್ತ ಜೀವಕೋಟಿಯನ್ನು ಸೃಜಿಸುತ್ತಿರುವಂತಹುದಾಗಿಯೂ ಸ್ವರೂಪವು ಜನ್ಮವಿಲ್ಲದ್ದು. ಒಂದೇ ಆದ ಏಕ ಪ್ರಕಾರದ ಪ್ರಕೃತಿಯನ್ನು ಅನುಸರಿಸುತ್ತಿದ್ದಾನೆ. ಸದ್ಗುರುವಿನ ಸದುಪದೇಶದಿಂದ ಭುಕ್ತ, ಭೋಗವನ್ನು ಈ ಪ್ರಕೃತಿಯನ್ನು ಬಿಡುತ್ತಿದ್ದಾನೆ. (ಈ ಆರನೆಯ (6) ಮಂತ್ರವು ಮುಂಡಕೋಪನಿಷತ್ತು 3-3-1ರಲ್ಲೂ ಋಗ್ವೇದ 1-164-1-164-29ರಲ್ಲೂ ಅಥರ್ವವೇದ 9-5-9ರಲ್ಲೂ ಇದೆ) ಅನ್ಯೋನ್ಯ ಸ್ನೇಹದಿಂದ ಬೆಸೆಯಲ್ಪಟ್ಟು ಬಂಧಿಸಲ್ಪಟ್ಟಿರುವಂತಹ ಎರಡು ಪಕ್ಷಿಗಳು ಒಂದೇ ವೃಕ್ಷದ ಮೇಲೆ ವಾಸವಾಗಿವೆ. ಅದರಲ್ಲಿ ಒಂದು ಪಕ್ಷಿ ಆನಂದವಾಗಿ ಫಲವನ್ನು ಅನುಭವಿಸುತ್ತಿರಲು, ಎರಡನೆಯ ಪಕ್ಷಿ ಏನೂ ತಿನ್ನದೆ ನೋಡುತ್ತಾ ಕುಳಿತಿದೆ.

**ಮಂ.ಶ್ಲೋ॥ ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ (7) ಋಚೋ ಅಕ್ಷರೇ ಪರಮೇವ್ಯೋಮನ್ಯಸ್ಮಿನ್ದೇವಾ ಅಧಿವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದು ಸ್ತ ಇಮೇ ಸಮಾನತೇ (8)**

ತಾ : (ಈ ಏಳನೆಯ (7)ಮಂತ್ರವು ಋಗ್ವೇದ ಅಥರ್ವವೇದಗಳಲ್ಲಿಯು ಮುಂಡಕೋಪನಿಷತ್ತು 3-1-2ರಲ್ಲಿಯು ಇದೆ) ಒಂದೇ ಮರದ ಮೇಲೆ ಕುಳಿತಿರುವ ಜೀವನಾದ ಒಬ್ಬ ಪಕ್ಷಿ ಅಜ್ಞಾನ ಮೋಹಗಳಿಂದ ಮುಳುಗಿದಂತಹುದಾಗಿ ದುಃಖಿಸುತ್ತಿದೆ. ಪೂಜ್ಯನಾದ ಎರಡನೆಯ ಪಕ್ಷಿ ಈಶ್ವರನನ್ನು, ಆತನ ಮಹಿಮೆಯನ್ನು ಯಾವಾಗ ನೋಡುತ್ತಿದೆಯೋ, ಆಗ ಮೊದಲ ಪಕ್ಷಿಯಾದ ಜೀವನು ಕೂಡಾ ದುಃಖದಿಂದ ವಿಮುಕ್ತನಾಗುತ್ತಿದ್ದಾನೆ. ದೇವತೆಗಳೆಲ್ಲರೂ ವೇದ ಸ್ವರೂಪನಾದಂತಹ ಅಕ್ಷರ ಸ್ವರೂಪನಾದಂತಹ ಆಕಾಶ ಕಲ್ಪವಾದಂತಹ ಪರಮಾತ್ಮನನ್ನು ಆಶ್ರಯಿಸಿದ್ದಾರೆ. ಆ ಪರಮಾತ್ಮನನ್ನು ತಿಳಿದುಕೊಳ್ಳಲಾರದವನಿಗೆ ಋಗಾದಿವೇದಗಳಿಂದ ಏನು ಪ್ರಯೋಜನ? ಆ ಪರಮಾತ್ಮನನ್ನು ತಿಳಿದು-ಕೊಂಡವರೇ ಕೃತಾರ್ಥರು. (ಋಚೋಅಕ್ಷರೇ ಪರಮೇ..... ಎನ್ನುವ ಮಂತ್ರವು ಬೃಹಜ್ಜಾಬಾ-ಲೋಪನಿಷತ್ 6-7ರಲ್ಲಿ ಬಹ್ವೃಚೋಪನಿಷತ್ ಇಲ್ಲಿಯೂ ಇದೆ.)

**ಮಂ.ಶ್ಲೋ॥ ಛಂದಾಗ್ಂಸಿ ಯಜ್ಞಾಃ ಕ್ರತವೋ ವ್ರತಾನಿ ಭೂತಂ ಭವ್ಯಂ ಯಚ್ಚ ವೇದಾ ವದಂತಿ । ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್ತಸ್ಮಿಗ್ಂಶ್ಚಾಽನ್ಯೋ ಮಾಯಯಾ ಸನ್ನಿರುದ್ಧಃ (9) ಮಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಮ್, ತಸ್ಯಾವಯವಭೂತೈಸ್ತು ವ್ಯಾಪ್ತಗ್ಂ ಸರ್ವಮಿದಂ ಜಗತ್ (10) ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ಯಸ್ಮಿನ್ನಿದಗ್ಂ ಸಂಚವಿಚೈತಿ ಸರ್ವಮ್, ತಮೀಶಾನಂ ವರದಂ ದೇವಮೀಡ್ಯಂ ನಿಚಾಯ್ಯೇಮಾಗ್ಂ ಶಾಂತಿಮತ್ಯಂತಮೇತಿ (11)**

ತಾ : ಈ ಅಕ್ಷರ ಪರಬ್ರಹ್ಮದಿಂದಲೇ, ನಾಲ್ಕು ವೇದಗಳು, ಯಜ್ಞಗಳು, ಕ್ರತುಗಳು, ಸಮಸ್ತ ವ್ರತಗಳು ಭೂತಭವಿಷ್ಯದ್ವರ್ತಮಾನ ಕಾಲಗಳೆಲ್ಲವೂ ಹುಟ್ಟತ್ತಿವೆ. ಈ ವಿಶ್ವವೆಲ್ಲವೂ ಮಾಯೋ-ಪಾಧಿಯುಳ್ಳವನಾಗಿ ಆ ಅಕ್ಷರನೆ ಮಾಯೆಯೆಂದು ತಿಳಿದುಕೊಳ್ಳಬೇಕು ಮಹದೇಶ್ವರನನ್ನು ಮಾಯಾಧಿಪತಿಯೆಂದು ಗ್ರಹಿಸಬೇಕು. ಆ ಮಹೇಶ್ವರನ ಮಾಯಾಕಲ್ಪಿತವಾದ ಅವಯವಗಳಿಂದಲೇ ಈ ದೃಶ್ಯ ಜಗತ್ತೆಲ್ಲವೂ ತುಂಬಿದೆ. ಅದ್ವಿತೀಯನಾದ ಆ ಪರಮೇಶ್ವರನು ಮೂಲ ಪ್ರಕೃತಿ, ಮಾಯೆ, ಅವಾಂತರ ಪ್ರಕೃತಿಗಳು, ಪಂಚ ಭೂತಗಳು ಮುಂತಾದ ಸಕಲ ಯೋನಿಗಳಲ್ಲಿ ಅಂತರ್ಯಾಮಿ ರೂಪದಲ್ಲಿ ಅಧಿಷ್ಠಿಸಿದ್ದಾನೆ. ಆ ಪರಮೇಶ್ವರನಲ್ಲಿಯೇ ಈ ಸಮಸ್ತವೂ ಪ್ರಳಯ ಸಮಯದಲ್ಲಿ ಲಯವನ್ನು ಹೊಂದುತ್ತದೆ. ಮತ್ತೆ ಸೃಷ್ಟಿ ಕಾಲದಲ್ಲಿ ಸರ್ವವೂ ನಾನಾ ರೂಪಗಳನ್ನು ಧರಿಸುತ್ತಿದೆ. ಮೋಕ್ಷಪ್ರದನು, ಸ್ತುತಿಸತಕ್ಕವನು ಆದ ದೇವದೇವನಾದ ಆ ಈಶ್ವರನನ್ನು ದರ್ಶಿಸಿ "ಬ್ರಹ್ಮಾಸ್ಮಿ" ಎನ್ನುತ್ತಾ ಅನುಭವಿಸಿ ಶಾಂತಿಯನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಪಶ್ಯತಿ ಜಾಯಮಾನಗ್ಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು (12) ಯೋ**

**ದೇವಾನಾಮಧಿಪೋ ಯಸ್ಮಿನಲ್ಲೋಕಾ ಅಧಿಶ್ರಿತಾಃ । ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ ಹವಿಷಾ ವಿಧೇಮ (13)**

ತಾ : ಯಾವ ರುದ್ರನು ಸಕಲದೇವತೆಗಳಿಗೂ ಆದಿಕಾರಣಭೂತನೋ ಯಾರ ಅನುಗ್ರಹದಿಂದ ಆ ಇಂದ್ರಾದಿ ದೇವತೆಗಳಿಗೆ ಸಕಲೈಶ್ವರ್ಯಗಳು ಉಂಟಾಗುತ್ತವೋ, ಯಾವ ದೇವರು ಈ ಲೋಕಕ್ಕೆಲ್ಲಾ ಪರಿಪಾಲಕನೋ, ಯಾರು ಸೃಷ್ಟಿ ಪ್ರಾರಂಭದಲ್ಲಿ ಹಿರಣ್ಯ ಗರ್ಭನನ್ನು ಸೃಷ್ಟಿಸಿದನೋ, ಅಂತಹ ಪರಮೇಶ್ವರನು ನಮಗೆ ಯೋಗ್ಯ ಬುದ್ಧಿಯನ್ನು ಪ್ರಸಾದಿಸಲಿ! ಯಾವ ಪರಮೇಶ್ವರನು ದೇವತೆಗಳಿಗೆಲ್ಲಾ ಅಧಿಪತಿಯೋ ಯಾವ ದೇವರಿಂದ ಪ್ರಪಂಚವೆಲ್ಲವೂ ಅಧಿಷ್ಠಿಸಲ್ಪಟ್ಟಿದೆಯೋ, ಯಾವ ಈಶ್ವರನು ಮನುಷ್ಯಾದಿಗಳಿಗೆ, ಪಶುಗಳಾದಿಗೆ, ನಿಯಾಮಕನೋ ಅಂತಹ ಆನಂದ ಸ್ವರೂಪನು ದೇವಾಧಿದೇವನು ಆದ ಪರಮೇಶ್ವರನಿಗೆ ಚರುಪುರೋಡಾಶಾದಿ ದ್ರವ್ಯಗಳೊಂದಿಗೆ ಪರಿಚರ್ಯೆ ಮಾಡುತ್ತಿದ್ದೇವೆ.

**ಮಂ.ಶ್ಲೋ॥ ಸೂಕ್ಷ್ಮಾತಿಸೂಕ್ಷ್ಮಂ ಕಲಿಲಸ್ಯ ಮಧ್ಯೇ ವಿಶ್ವಸ್ಯ ಸ್ರಷ್ಟಾರಂ ತಮನೇಕರೂಪಮ್, ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ (14) ಸ ಏವ ಕಾಲೋ ಭುವನಸ್ಯ ಗೋಪ್ತಾ ವಿಶ್ವಾಧಿಪಸ್ಸರ್ವಭೂತೇಷು ಗೂಢಃ । ಯಸ್ಮಿನ್ಯುಕ್ತಾ ಬ್ರಹ್ಮರ್ಷಯೋ ದೇವತಾಶ್ಚ ತಮೇವಂ ಜ್ಞಾತ್ವಾ ಮೃತ್ಯುಪಾಶಾಂಶ್ಛಿನತ್ತಿ (15)**

ತಾ : ಈ ಲೋಕದಲ್ಲಿ ಸೂಕ್ಷ್ಮಾತಿಸೂಕ್ಷ್ಮವಾಗಿ ಪ್ರಕಟವಾಗುವವನು, ಜಗತ್ತಿನ ಸೃಷ್ಟಿಕರ್ತನು, ಅನೇಕ ರೂಪಗಳಿರುವವನು, ಅದ್ವಿತೀಯನು, ಪ್ರಪಂಚವೆಲ್ಲವೂ ವ್ಯಾಪಿಸಿರುವವನು, ಮಂಗಳ ಸ್ವರೂಪನು, ಆದ ಪರಮೇಶ್ವರನನ್ನು ತಿಳಿದುಕೊಂಡು ಮನುಷ್ಯನು ಪರಮ ಶಾಂತಿಯನ್ನು ಅನುಭವಿಸುತ್ತಿದ್ದಾನೆ. ಆ ಪರಮಾತ್ಮನೇ ಕಾಲಸ್ವರೂಪನು ಲೋಕವನ್ನು ಸಂರಕ್ಷಿಸುವವನು, ಜಗತ್ಪರಿ-ಪಾಲಕನು, ಸಮಸ್ತ ಪ್ರಾಣಿಗಳಲ್ಲಿಯೂ ನಿಗೂಢವಾಗಿ ಇರುವವನು, ಋಷಿಗಳು ದೇವತೆಗಳು ಧ್ಯಾನಿಸುವಂತಹ ದೇವನಾಗಿರುವನು. ಆತನನ್ನು ತಿಳಿದುಕೊಂಡು ಜನರು ಮೃತ್ಯುಪಾಶವನ್ನು ಭೇದಿಸಬಲ್ಲವರಾಗಿದ್ದಾರೆ.

**ಮಂ.ಶ್ಲೋ॥ ಘೃತಾತ್ಪರಂ ಮಂಡಮಿವಾತಿಸೂಕ್ಷ್ಮಂ ಜ್ಞಾತ್ವಾ ಶಿವಗ್ಂ ಸರ್ವಭೂತೇಷು ಗೂಢಮ್। ವಿಶ್ವಸ್ಯೈಕ್ಯಂ ಪರಿವೇಷ್ಟಿತಾರಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (16) ಏಷ ದೇವೋ ವಿಶ್ವಕರ್ಮಾ ಮಹಾತ್ಮಾ ಸದಾ ಜನಾನಾಗ್ಂ ಹೃದಯೇ ಸನ್ನಿವಿಷ್ಟಃ । ಹೃದಾಮನೀಷಾ ಮನಸಾऽಭಿಕ್ಲೃಪ್ತೋ ಯ ಏತದ್ ವಿದುರಮೃತಾಸ್ತೇ ಭವಂತಿ (17)**

ತಾ : ತುಪ್ಪದಲ್ಲಿ ಅದಕ್ಕಿಂತ ಸೂಕ್ಷ್ಮವಾದ ಕೆನೆಯಿರುವಂತೆ, ಸಮಸ್ತ ಜೀವಿಗಳಲ್ಲಿಯೂ ನಿಗೂಢವಾಗಿ ಪರಮೇಶ್ವರನಿದ್ದಾನೆ. ವಿಧ್ವವ್ಯಾಪಕನು, ಒಬ್ಬನೇ ಆದವನು, ಮಹಾಪ್ರಭುವಾದಂತಹ ಪರಮಾತ್ಮನನ್ನು ತಿಳಿದುಕೊಂಡವನು, ಸಕಲ ಪಾಶಗಳಿಂದಲೂ ವಿಮುಕ್ತಿ ಹೊಂದುತ್ತಾನೆ. ವಿಶ್ವ ಕರ್ಮನು, ಮಹಾತ್ಮನು ಆದ ಪರಮಾತ್ಮನು ಜೀವಿಗಳ ಹೃದಯದಲ್ಲಿ ಸರ್ವದಾ ಪ್ರವೇಶಿಸಿದ್ದಾನೆ. "ನೇತಿ ನೇತಿ" ಎನ್ನುವ ಅನಿತ್ಯ ಪದಾರ್ಥಗಳನ್ನು ವಿಜ್ಞಾನ ಬುದ್ಧಿಯಿಂದ (ಚಿಕಿತ್ಸಿಕ ಬುದ್ಧಿಯಿಂದ),

ವೇದಾಂತ ವಿಚಾರಣೆಯಿಂದ, ತಿರಸ್ಕರಿಸುವುದರಿಂದ ಪ್ರಕಾಶ ಸ್ವರೂಪನಾದ ಪರಮೇಶ್ವರನನ್ನು ತಿಳಿಯುವಂತಾಗುತ್ತದೆ. ಆ ಪರಮಾತ್ಮನನ್ನು ತಿಳಿದುಕೊಂಡವರು ಅಮೃತ ಸ್ವರೂಪರಾಗುತ್ತಿದ್ದಾರೆ.

**ಮಂ.ಶ್ಲೋ|| ಯದಾತಮಸ್ತನ್ನ ದಿವಾ ನ ರಾತ್ರಿರ್ನಸನ್ನಚಾ ಸಂಚ್ಛಿವ ಏವ ಕೇವಲಃ ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ (18) ನೈನ ಮೂರ್ಧ್ವಂ ನ ತಿರ್ಯಂಚಂ ನ ಮಧ್ಯೇ ಪರಿಜಗ್ರಭತ್ । ನ ತಸ್ಯ ಪ್ರತಿಮಾಸ್ತಿ ಯಸ್ಯ ನಾಮ ಮಹದ್ಯಶಃ (19)**

ತಾ : ಯಾವ ಸಮಯದಲ್ಲಿ ಆತ್ಮ ಜ್ಞಾನವು ಉಂಟಾಗುತ್ತದೆಯೋ, ಆ ಸಮಯದಲ್ಲಿ ಹಗಲೂ ಇಲ್ಲ. ರಾತ್ರಿಯೂ ಇಲ್ಲ, ಸತ್ತೂ ಇಲ್ಲ ಅಸತ್ತೂ ಇಲ್ಲ, ಕೇವಲ ಪರಿಶುದ್ಧ ಶಿವನೇ ಇರುವನು. ಆ ಬ್ರಹ್ಮತತ್ತ್ವವು ನಿತ್ಯವಾದುದು. ಸವಿತೃ ದೇವತೆಯನ್ನು ಕೂಡಾ ಹೊಂದುವಂತಹುದು. ಪರಿಶುದ್ಧವಾಗಿ ಇರುವುದರಿಂದ ಅಂತಹ ಪ್ರಜ್ಞೆ ವ್ಯಾಪ್ತವಾಗುತ್ತಿದೆ. ಸರ್ವರಿಗೂ ಪರಂಪರೆಯಾಗಿ ಪ್ರಾಪ್ತಿಯಾಗುತ್ತಿದೆ. ಈ ಪರಮಾತ್ಮನನ್ನು ಊರ್ಧ್ವಾದಿ ದಿಕ್ಕುಗಳಲ್ಲಾಗಲಿ, ತಿರ್ಯಕ್ ದಿಕ್ಕುಗಳಲ್ಲಾಗಲಿ ಗ್ರಹಿಸಲು ಸಾಧ್ಯವಾಗುವುದಿಲ್ಲ. ಅನಂತ ಕೀರ್ತಿಯನ್ನು ಹೊಂದಿರುವ ಆ ಪರಮಾತ್ಮನೊಂದಿಗೆ ಹೋಲಿಸಲು ಯಾರೂ ಇಲ್ಲವೇ ಇಲ್ಲ.

**ಮಂ.ಶ್ಲೋ|| ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ । ಹೃದಾ ಹೃದಿಸ್ಥಂ ಮನಸಾ ಯ ಏನಮೇವಂ ವಿದುರಮೃತಾಸ್ತೇ ಭವಂತಿ (20) ಅಜಾತೋ ಜಾತ ಇತ್ಯೇವಂ ಕಶ್ಚಿದ್ಧೀರುಃ ಪ್ರಪದ್ಯತೇ । ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಮ್ (21) ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ| ವೀರಾನ್ಮಾನೋ ರುದ್ರ ಭಾಮಿತೋऽವಧೀರ್ಹ ವಿಷ್ಮಂತಸ್ಸದಮಿತ್ವಾ ಹವಾಮಹೇ(22)**

ತಾ : ಈ ಪರಮೇಶ್ವರನ ಸ್ವರೂಪವನ್ನು ನೇತ್ರಾದಿಂದ್ರಿಯಗಳಿಂದ ಗ್ರಹಿಸಲು ಸಾಧ್ಯವಿಲ್ಲ. ಇಂದ್ರಿಯಗಳಿಗೆ ಅಗೋಚರನು, ಆತ್ಮವಿಚಾರಣೆಯಿಂದ ಹೃದಯದಲ್ಲಿರುವ ಈ ಪರಮಾತ್ಮನನ್ನು ತಿಳಿದುಕೊಂಡವರು ಅಮೃತ ರೂಪವಾಗುವರು. ಪರಮೇಶ್ವರನು ಜನ್ಮ, ಜರಾ, ಮರಣ, ಅಶನಾಯ, ಪಿಪಾಸಾ, ಶೋಕಮೋಹಾದಿವರ್ಜಿತನು. "ಓ ಪರಮೇಶ್ವರ! ನಿನ್ನನ್ನು ಶರಣು ಬೇಡುತ್ತಿದ್ದೇನೆ. ನಿನ್ನ ದಕ್ಷಿಣಾಮುಖದೊಂದಿಗೆ ನನ್ನನ್ನು ರಕ್ಷಿಸು" ಎಂದು ಭಕ್ತನು ಪ್ರಾರ್ಥಿಸುತ್ತಿದ್ದಾನೆ. ಪರಮೇಶ್ವರಾ ನೀನು ಆಗ್ರಹಗೊಂಡು ನನ್ನ ಪುತ್ರ ಪೌತ್ರಾದಿಗಳನ್ನು ಸಾಯಿಸಬಾರದು. ನನ್ನ ಆಯಸ್ಸನ್ನು ಕಡಿಮೆ ಮಾಡಬೇಡ. ನನ್ನ ಗೋವು ಅಶ್ವಸಂಪತ್ತನ್ನು ನಾಶಮಾಡಬೇಡ. ನಿನ್ನನ್ನು ನಿರಂತರವಾಗಿ ನಾವು ಹವಿಸ್ಸಿನಿಂದ ಅರ್ಚಿಸುತ್ತಾ ನಮ್ಮನ್ನು ಸಂರಕ್ಷಿಸಲೆಂದು ಆಹ್ವಾನಿಸುತ್ತಿದ್ದೇವೆ.

## ಪಂಚಮೋಧ್ಯಾಯಃ

**ಮಂ.ಶ್ಲೋ|| ಓಂ ದ್ವೇ ಅಕ್ಷರೇ ಬ್ರಹ್ಮಪರೇತ್ವನಂತೇ ವಿದ್ಯಾऽವಿದ್ಯೇ ನಿಹಿತೇ ಯತ್ರ ಗೂಢೇ । ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ । ವಿದ್ಯಾऽವಿದ್ಯೇ ಈಶತೇ ಯಸ್ತುಸೋऽನ್ಯಃ (1) ಯೋऽಯೋನಿಂ ಯೋನಿಮಧಿತಿಷ್ಠತ್ಯೇಕೋ ವಿಶ್ವಾನಿ ರೂಪಾಣಿ ಯೋನೀಶ್ಚ ಸರ್ವಾಃ ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ (2)**

ತಾ : ವಿದ್ಯೆ, ಅವಿದ್ಯೆ, ಎನ್ನುವ ಎರಡು ನಾಶ ರಹಿತಗಳು ಅಪರಿಚ್ಛಿನ್ನಗಳು ಪರಬ್ರಹ್ಮದಲ್ಲಿ ನಿಗೂಢವಾಗಿ ಇರುವಂತಹುವುಗಳು. ಅವಿದ್ಯೆ ನಶಿಸುತ್ತದೆ, ವಿದ್ಯೆ ಅಮೃತ. ಯಾರು ವಿದ್ಯಾ ವಿದ್ಯೆಗಳನ್ನು ನಿಯಮಿಸುವನೋ ಆತನು ಅವುಗಳಿಗಿಂತ ಅನ್ಯವಾಗಿರುತ್ತಾನೆ. ಸಾಕ್ಷಿಯಾಗಿರುತ್ತಾನೆ. ಪೃಥಿವ್ಯಾದಿ ಸಕಲ ಯೋನಿಗಳನ್ನು, ಸಕಲ ರೂಪಗಳನ್ನು, ಆಯಾ ಉತ್ಪತ್ತಿ ಸ್ಥಾನದಲ್ಲಿ (ಗಳಲ್ಲಿ)ಯಾರು ಅಧಿಷ್ಠಿಸಿರುವನೋ, ಸರ್ವಜ್ಞನಾದ (ನೆಂಬುವನು) ಕಪಿಲವರ್ಣದವನಾದ ಹಿರಣ್ಯಗರ್ಭನನ್ನು ಆದಿಯಲ್ಲಿ ಯಾರು ಸೃಜಿಸಿದನೋ, ಸೃಷ್ಟಿ ಸಮಯದಲ್ಲಿ ಯಾರು ಧರ್ಮಜ್ಞಾನ ವೈರಾಗ್ಯ ಭಾಗ್ಯಗಳನ್ನು ಭರಿಸಿರುವನೋ ಆತನೇ ಪರಮಾತ್ಮ.

**ಮಂ.ಶ್ಲೋ॥ ಏಕೈಕಂ ಜಾಲಂ ಬಹುದಾ ವಿಕುರ್ವನ್ ಯಸ್ಮಿನ್ ಕ್ಷೇತ್ರೇ ಸಗ್ಂಹರತ್ಯೇಷ ದೇವಃ। ಭೂಯಃ ಸೃಷ್ಟ್ವಾ ಪಥಯಸ್ತ್ವಥೇಶಸ್ಸರ್ವಾಧಿಪತ್ಯಂ ಕುರುತೇ ಮಹಾತ್ಮಾ (3) ಸರ್ವಾ ದಿಶ ಊರ್ಧ್ವಮಧಶ್ಚ ತಿರ್ಯಕ್ ಪ್ರಕಾಶಯನ್ ಭ್ರಾಜತೇ ಯನ್ನನಡ್ವಾನ್ । ಏವಗ್ಂ ಸ ದೇವೋ ಭಗವಾನ್ವರೇಣ್ಯೋ ಯೋನಿ ಸ್ವಭಾವಾನಧಿತಿಷ್ಠತ್ಯೇಕಃ (4)**

ತಾ : ಈ ಆತ್ಮದೇವನು ಸುರನರ ತಿರ್ಯಗಾದಿ 84 ಲಕ್ಷಗಳ ಜೀವ ಕೋಟಿಯನ್ನು ನಾನಾ ವಿಧವಾಗಿ ಸೃಜಿಸಿ ಆ ಜೀವ ಕೋಟಿಯಲ್ಲಿ ತಾನು ಕೂಡಾ ಸೇರಿ ಪ್ರಕಾಶಿಸುತ್ತಿದ್ದಾನೆ. ಅಲ್ಲದೆ ಈ ಪರಮೇಶ್ವರನು ಭೂತ ಸೃಷ್ಟಿಗೆ ಅಧಿಪತಿಗಳಾದ ಮರೀಚ್ಯಾದಿ ಪ್ರಜಾಪತಿಗಳನ್ನು ಸೃಜಿಸಿ, ಅವರಿಗೆ ಸರ್ವಾಧಿಪತಿಯಾಗಿರುವನು ಪ್ರವರ್ತಿಸುವನು. ಸೂರ್ಯನು ಯಾವ ರೀತಿ ಎಲ್ಲ ದಿಕ್ಕುಗಳನ್ನು ಆಗ್ನೇಯಾದಿ ವಿದಿಕ್ಕುಗಳನ್ನು, ಊರ್ಧ್ವಾದೋಲೋಕಗಳನ್ನು ಪ್ರಕಾಶಗೊಳಸುವನೋ ಅದೇ ರೀತಿಯಾಗಿ ದ್ಯೋತಸ್ವಭಾವದವನು, ಅದ್ವಿತೀಯನು, ಷಡ್ಗುಣೈಶ್ವರ್ಯ ಸಂಪನ್ನನಾದ ಆ ಪರಮೇಶ್ವರನು ಸಕಲಗಳಿಗೂ ಕಾರಣವಾದ ಪಂಚಮಹಾಭೂತಗಳನ್ನು ಅಧಿಷ್ಠಿಸಿ ಅವನನ್ನು ನಿಯಮಿಸುತ್ತಿರುವನು.

**ಮಂ.ಶ್ಲೋ॥ ಯಚ್ಚ ಸ್ವಭಾವಂ ಪಚತಿ ವಿಶ್ವಯೋನಿಃ ಪಾಚ್ಯಾಗ್ಂಶ್ಚ ಸರ್ವಾನ್ ಪರಿಣಾಮಯೇದ್ಯಃ । ಸರ್ವಮೇತದ್ವಿಶ್ವಮಧಿತಿಷ್ಠತ್ಯೇಕೋ ಗುಣಾಗ್ಂಶ್ಚ ಸರ್ವಾನ್ವಿನಿಯೋಜಯೇದ್ಯಃ (5) ತದ್ವೇದ ಗುಹ್ಯೋಪನಿಷತ್ಸು ಗೂಢಂ ತದ್ಬ್ರಹ್ಮಾ ವೇದತೇ ಬ್ರಹ್ಮಯೋನಿಮ್, ಯೇಪೂರ್ವಂ ದೇವಾ ಋಷಯಶ್ಚ ತದ್ವಿದುಸ್ತೇ ತನ್ಮಯಾ ಅಮೃತಾ ವೈ ಬಭೂವುಃ (6)**

ತಾ : ಜಗತ್ಕಾರಣನಾದ ಪರಮಾತ್ಮನೇ ತನ್ನ ಸನ್ನಿಧಾನದಲ್ಲಿ, ಆಯಾ ಪದಾರ್ಥ ಸ್ವಭಾವವನ್ನು ವೃದ್ಧಿ ಮಾಡುತ್ತಿದ್ದಾನೆ ಪಾಕಯೋಗ್ಯವಾದ ಪಂಚ ಮಹಾಭೂತಗಳನ್ನು ಪರಿಣಾಮಗೊಳಸುತ್ತಿದ್ದಾನೆ. ಸತ್ತ್ವರಜಸ್ತಮಗಳೆನ್ನುವ ಮೂರೂ ಗುಣಗಳನ್ನು ನಿಯಂತ್ರಿಸುತ್ತಿದ್ದಾನೆ. ಪರಮಾತ್ಮನೊಬ್ಬನೇ ಈ ಪ್ರಪಂಚವನ್ನೆಲ್ಲ ನಿಯಂತ್ರಿಸುತ್ತಿದ್ದಾನೆ. ಆ ಪರಮಾತ್ಮ ಸ್ವರೂಪವು ವೇದಗಳ ರಹಸ್ಯ ಸ್ಥಾನಗಳಾದ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲಾಗಿದೆ. ಹಿರಣ್ಯಗರ್ಭನು ವೇದ ಪ್ರಮಾಣಕವಾದ ಆ ಪರಬ್ರಹ್ಮವನ್ನು ತಿಳದುಕೊಂಡಿದ್ದಾನೆ ಪೂರ್ವದೇವರುಗಳು, ಋಷಿಗಳು, ಆ ಪರಮಾತ್ಮ ಸ್ವರೂಪವನ್ನು ಬಲ್ಲವ-ರಾಗಿರುವರು ಅವರುಗಳು ಆ ಪರಮಾತ್ಮ ಸ್ವರೂಪರಾಗಿ ಅಮೃತರಾಗಿರುವರು.

**ಮಂ.ಶ್ಲೋ॥ ಗುಣಾನ್ವಯೋ ಯಃ ಫಲಕರ್ಮಕರ್ತಾ ಕೃತಸ್ಯ ತಸ್ಯೈವ ಸಚೋಪಭೋಕ್ತಾ । ಸ ವಿಶ್ವರೂಪ ಸ್ತ್ರಿಗುಣಸ್ತ್ರಿವರ್ತ್ಮಾ ವಿಶ್ವಾಧಿಪಸ್ಸಂಚರತಿ ಸ್ವಕರ್ಮಭಿಃ (7) ಅಂಗುಷ್ಠಮಾತ್ರೋ ರವಿತುಲ್ಯರೂಪ-ಸ್ಸಂಕಲ್ಪಾಹಂಕಾರ ಸಮನ್ವಿತೋ ಯಃ । ಬುದ್ಧೇರ್ಗುಣೇನಾತ್ಮಗುಣೇನ ಚೈವ ಆರಾಗ್ರ ಮಾತ್ರೋಹ್ಯಪರೋಽಪಿ ದೃಷ್ಟಃ (8)**

ತಾ : ಜೀವನು ವಾಸನಾಮಯವಾದ ಗುಣಗಳಿಂದ ಕೂಡಿರುವಂತಹುದಾಗಿ ಆಯಾ ಫಲಗಳನ್ನೀಯುವ ಕರ್ಮಗಳನ್ನಾಚರಿಸುತ್ತಾನೆ. ಆಯಾ ಕರ್ಮಗಳನ್ನು ಅನುಭವಿಸುವವನು ಕೂಡಾ ಜೀವನೇ. ತತ್ತತ್ಕರ್ಮದ ಅನುಸಾರವಾಗಿ ದೇವ ಪಿತೃಮನುಷ್ಯ ಯಾನಗಳ ಮೂಲಕ ಇಹಪರ ಲೋಕದಲ್ಲಿ ಸಂಚರಿಸುತ್ತಿರುವನು. ಈ ದೇಹಕ್ಕೆ ಅಧಿಪತಿಯಾಗಿ ಸುಖದುಃಖಗಳನ್ನನುಭವಿಸುತ್ತಿರು-ವನು. ಅಂಗುಷ್ಠಮಾತ್ರ ಪರಿಮಾಣವನ್ನುಳ್ಳವನು. ಸೂರ್ಯ ಸಮಾನ ರೂಪವನ್ನುಳ್ಳವನು. ಸಂಕಲ್ಪಾಹಂಕಾರ ಸಮನ್ವಿತನಾದ ಪರಮಾತ್ಮನು ಬುದ್ಧಿಯಿಂದಾದ ಗುಣಗಳಿಂದಲೂ. ದೇಹ ಸಂಬಂಧ (ಜರಾಮರಣ ಗುಣಗಳಿಂದಲೂ ಕಬ್ಬಿಣದ ಆರೆಯ ಕೊನೆಯಂತಹ ರೂಪದಿಂದ ಬೇರೆಯಾಗಿದ್ದು ಕಂಡುಬರುತ್ತಾನೆ.

**ಮಂ.ಶ್ಲೋ॥ ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಸ್ಸವಿಜ್ಞೇಯಸ್ಸಚಾನಂತ್ಯಾಯ ಕಲ್ಪತೇ (9) ನೈವಸ್ತ್ರೀ ನ ಪುಮಾನೇಷ ನೈವಚಾಯಂ ನಪುಂಸಕಃ । ಯದ್ಯಚ್ಛರೀರ ಮಾದತ್ತೇ ತೇನ ತೇನ ಸಯುಜ್ಯತೇ (10) ಸಂಕಲ್ಪ ನ ಸ್ಪರ್ಶ ನ ದೃಷ್ಟಿ ಮೋಹೈರ್ಗ್ರಾಸಾಂಬು-ವೃಷ್ಟ್ಯಾ ಚಾತ್ಮವಿವೃದ್ಧಜನ್ಮಕರ್ಮಾನುಗಾಸ್ಯನುಕ್ರಮೇಣ ದೇಹೀ ಸ್ಥಾನೇಷು ರೂಪಾಣ್ಯಭಿ-ಸಂಪ್ರಪದ್ಯತೇ (11)**

ತಾ : ಜೀವನು ತಲೆಗೂದಲಿನೊಂದು ಕೊನೆಯ ಭಾಗವನ್ನು ನೂರಾಗಿ ಭಾಗ ಮಾಡಿದಾಗ, ಬಂದ ಭಾಗದಲ್ಲಿ ಮತ್ತೆ ನೂರು ಭಾಗಗಳನ್ನು ಮಾಡಿದಾಗ, ಎಷ್ಟು ಸೂಕ್ಷ್ಮವಾಗಿರುತ್ತದೆಯೋ ಅಷ್ಟು ಸೂಕ್ಷ್ಮವಾದ ಪರಿಮಾಣವುಳ್ಳವನು ಅನಂತ ಸ್ವರೂಪನೆಂದರೆ ಪರಮಾತ್ಮನೇ. ಈ ಜೀವನು ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನಲ್ಲ. ಆದರೂ ಯಾವ ಯಾವ ಶರೀರಗಳನ್ನು ಅಂಗೀಕರಿಸು-ವನೋ ಆಯಾ ಶರೀರಗಳಲ್ಲಿನ ಲಿಂಗಗಳಿಂದ ವ್ಯವಹರಿಸುತ್ತಾನೆ. ಸಂಕಲ್ಪದಿಂದಲು, ಸ್ಪರ್ಶದಿಂದಲು, ನೋಡುವುದರಿಂದಲು. ಮೋಹದಿಂದಲು ಕ್ರಮವಾಗಿ ಈ ಜೀವನು ಅನ್ನ ಪಾನಗಳನ್ನು ಸೇವಿಸುವುದ-ರಿಂದಲು ಶರೀರವನ್ನು ಬೆಳೆಸಿಕೊಳ್ಳುತ್ತಾನೆ. ಆಯಾ ಜನ್ಮಗಳಲ್ಲಿ ಆಯಾ ಪುಣ್ಯ ಪಾಪ ಕರ್ಮಗಳಿಗೆ ಅನುಕೂಲವಾದಂತಹ ರೂಪಗಳನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಸ್ಥೂಲಾನಿ ಸೂಕ್ಷ್ಮಾಣಿ ಬಹುನಿಚೈವರೂಪಾಣಿ ದೇಹಿ ಸ್ವಗುಣೈರ್ವೃಣೋತಿ । ಕ್ರಿಯಾಗುಣೈ-ರಾತ್ಮಗುಣೈಶ್ಚ ತೇಷಾಂ ಸಂಯೋಗಹೇತುರಪರೋಽಪಿ ದೃಷ್ಟಃ (12) ಅನಾದ್ಯನನ್ತಂ ಕಲಿಲಸ್ಯ ಮಧ್ಯೇ ವಿಶ್ವಸ್ಯ ಸ್ರಷ್ಟಾರಂ ತಮನೇಕರೂಪಮ್, ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (13) ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವ ಕರಗ್ಂ ಶಿವಮ್, ಕಲಾಸರ್ಗಕರಂ ದೇವಂ ಯೇ ವಿದುಸ್ತೇ ಜಹುಸ್ತನುಮ್ (14)**

ತಾ : ಜೀವನು ಅನುಭವ ಸಂಸ್ಕಾರಗಳೊಂದಿಗೆ ಸ್ಥೂಲಗಳು ಸೂಕ್ಷ್ಮಗಳು ಆದಂತಹ ಅನೇಕ ರೂಪಗಳನ್ನು ಆವರಿಸುತ್ತಾನೆ. ಸ್ಥೂಲ ಸೂಕ್ಷ್ಮ ರೂಪಗಳ ಕ್ರಿಯಾಗುಣಗಳಿಂದಲು, ಸ್ವರೂಪ ಗುಣಗಳಿಂದಲು ಕಾಣುವುದೇ ಅಲ್ಲದೆ ದೇಹಾಂತರ ಸಂಯೋಗಕ್ಕೆ ಕಾರಣವಾಗಿ ಕೂಡಾ ನೋಡತಕ್ಕವನಾಗಿದ್ದಾನೆ. ಈ ಜೀವನು ಆದ್ಯಂತರಹಿತನು, ಮಾಯಾಮಯ ಸಂಸಾರಸಾಗರಕ್ಕೆ ಸೃಷ್ಟಿಕರ್ತನು ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುವವನು, ಸರ್ವವ್ಯಾಪಿಯಾಗಿದ್ದು, ಆತ್ಮದೇವನು ತಾನೆ ಎಂದರಿತು ಸರ್ವ ಪಾಶಗಳಿಂದಲೂ ವಿಮುಕ್ತನಾಗುತ್ತಿದ್ದಾನೆ. ಭಾವಗ್ರಾಹಿಯು, ಶರೀರವಿಲ್ಲದವನು, ಭಾವಾಭಾವಗಳನ್ನು ಉಂಟುಮಾಡುವವನು ಶಿವನಾಗಿ ಷೋಡಶ ಕಳೆಗಳನ್ನ ಸೃಷ್ಟಿ ಮಾಡುವಂತಹ ಆತ್ಮದೇವವನ್ನು "ಅಹಮಸ್ಮಿ" ಎಂದು ತಿಳಿದುಕೊಂಡವರು ದೇಹಾಭಿಮಾನವನ್ನು ಬಿಟ್ಟು ಮುಕ್ತರಾಗುವರು.

## ಷಷ್ಠೋಽಧ್ಯಾಯ

**ಮಂ.ಶ್ಲೋ|| ಓಂ ಸ್ವಭಾವಮೇಕೇ ಕವಯೋ ವದಂತಿ ಕಾಲಂ ತಥಾಽನ್ಯೇ ಪರಿಮುಹ್ಯಮಾನಾಃ । ದೇವಸ್ಯೈಷ್ಯ ಮಹಿಮಾ ತು ಲೋಕೇ ಯೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಮ್ (1) ಯೇನಾವೃತಂ ನಿತ್ಯಮಿದಗ್ಂಹಿ ಸರ್ವಂ ಜ್ಞಃ ಕಾಲಕಾಲೋ ಗುಣೀ ಸರ್ವವಿದ್ಯಃ । ತೇನೇಶಿತಂ ಕರ್ಮಂ ವಿವರ್ತತೇಹ ಪೃಥ್ವ್ಯಾಪ್ಯತೇಜೋನಿಲಖಾನಿ ಚಿಂತ್ಯಮ್ (2)**

ತಾ : ಈ ಅನಂತ ವಿಶ್ವಸೃಷ್ಟಿಗೆ ಕೆಲವು ಪಂಡಿತರು ಸ್ವಭಾವವು ಕಾರಣವೆಂದು ಹೇಳುವರು. ಅದೇ ರೀತಿಯಾಗಿ ಕೆಲವು ಅಜ್ಞಾನಿಗಳು ಕಾಲವು ಕಾರಣವೆಂದು ಹೇಳುತ್ತಿದ್ದಾರೆ. ಈ ಬ್ರಹ್ಮ ಚಕ್ರವು ಯಾರಿಂದ ಭ್ರಮಣಗೊಳ್ಳುತ್ತಿದ್ದೆಯೋ ಆ ಮಹಿಮೆಯುಳ್ಳವನು ಆತ್ಮದೇವನೊಬ್ಬನೇ. ಯಾವ ಪರಮೇಶ್ವರನಿಂದ ಈ ವಿಶ್ವವೆಲ್ಲವು ನಿಯಮವಾಗಿ ವ್ಯಾಪ್ತವಾಗುತ್ತಿದೆಯೋ ಆ ಪರಮೇಶ್ವರನು ಜ್ಞಾನಸ್ವರೂಪನು. ಕಾಲಗಳಿಗೆ ಕೂಡ ಕರ್ತನು ದೋಷರಹಿತನು, ಮಂಗಳಸ್ವರೂಪನು, ಅಷ್ಟೇ ಅಲ್ಲ ಸರ್ವಜ್ಞನು ಕೂಡಾ. ಆ ಪರಮೇಶ್ವರನಿಂದಲೆ ಶುಭಾಶುಭ ಕರ್ಮಗಳು ಪ್ರೇರಿತವಾಗಿ ಜಗದ್ರೂಪವಾಗಿ ವಿವರ್ತವನ್ನು ಹೊಂದುತ್ತಿವೆ. ಆ ವಿವರ್ತನೇ ಪೃಥಿವಿ, ಜಲ, ಅಗ್ನಿ, ವಾಯ್ವಾಕಾಶಗಳೆಂದು ತಿಳಿಯ-ಬೇಕು.

**ಮಂ.ಶ್ಲೋ|| ತತ್ಕರ್ಮಕೃತ್ವಾ ವಿನಿವೃತ್ಯ ಭೂಯಸ್ತತ್ವಸ್ಯ ತತ್ವೇನ ಸಮೇತ್ಯ ಯೋಗಮ್ । ಏಕೋ ನ ದ್ವಾಭ್ಯಾಂ ತ್ರಿಭಿರಷ್ಟಭಿರ್ವಾ ಕಾಲೇ ಸ ಚೈವಾತ್ಮಾ ಗುಣೈಶ್ಚ ಸೂಕ್ಷ್ಮೈಃ (3) ಆರಭ್ಯ ಕರ್ಮಾಣಿ ಗುಣಾನ್ವಿತಾನಿ ಭಾವಾಗ್ಂಶ್ಚ ಸರ್ವಾನ್ವಿನಿಯೋಜಯೇದ್ಯಃ । ತೇಷಾಮಭಾವೇ ಕೃತಕರ್ಮ ನಾಶಃ ಕರ್ಮಕ್ಷಯೇ ಯಾತಿ ಸ ತತ್ತ್ವತೋಽನ್ಯಃ (4)**

ತಾ : ಪರಮೇಶ್ವರನು ಸೃಷ್ಟಿಯನ್ನು ಮಾಡಿ, ಅದನ್ನು ಚೆನ್ನಾಗಿ ಆಲೋಚಿಸಿ, ಮತ್ತೆ ತತ್ತತ್ ಸ್ವರೂಪದಿಂದ ಸಂಬಂಧವನ್ನು ಹೊಂದಿ 1,2,3,8 ಆಗುವವನೊಂದಿಗೂ, ಕಾಲದೊಂದಿಗೂ, ಸೂಕ್ಷ್ಮವಾದ ಅಂತಃಕರಣಗಳಿಂದಲೂ, ತ್ರಿಗುಣ ಸಹಿತವಾದಂತಹ ಸಕಲ ವಸ್ತುಗಳನ್ನು ಸೃಷಿಸಿದ. ಈ ಸೃಜಿಸಿದ ಸಕಲ ಭಾವಗಳನ್ನು ಯಾರೂ ಪರಮೇಶ್ವರನಿಗೆ ಮತ್ತೆ ಸಮರ್ಪಿಸುವನೋ ಅಂತಹವನು ಕರ್ಮರಹಿತವಾಗುತ್ತಿದ್ದಾನೆ. ಅಂತಹ ಕರ್ಮಕ್ಷಯವನ್ನು ಹೊಂದಿದವನು ಪಂಚ ಭೂತತತ್ತ್ವಗಳಗಿಂತ ಬೇರೆಯಾದ ಪರಮಾತ್ಮನನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಆದಿಸ್ಸ ಸಂಯೋಗನಿಮಿತ್ತ ಹೇತುಃ ಪರಸ್ತ್ರಿಕಾಲಾದಕಲೋಽಪಿ ದೃಷ್ಟಃ । ತಂ ವಿಶ್ವರೂಪಂ ಭವಭೂತಮೀಡ್ಯಂ ದೇವಂ ಸ್ವಚಿತ್ತಸ್ಥಮುಪಾಸ್ಯ ಪೂರ್ವಮ್ (5) ಸ ವೃಕ್ಷಕಾಲಾಕೃತಿಭಿಃ ಪರೋಽನ್ಯೋಽ ಯಸ್ಮಾತ್ ಪ್ರಪಂಚಃ ಪರಿವರ್ತತೇಽಯಮ್ । ಧರ್ಮಾವಹಂ ಪಾಪನುದಂ ಭಗೇಶಂ ಜ್ಞಾತ್ವಾಽಽತ್ಮಸ್ಥಮಮೃತಂ ವಿಶ್ವಧಾಮ (6)**

ತಾ : ಈ ಪರಬ್ರಹ್ಮವೇ ಸಮಸ್ತ ಸೃಷ್ಟಿಗೂ ಕಾರಣೀ ಭೂತನು ಹಾಗೂ ಈ ಪರಮಾತ್ಮನೇ ಅವಿದ್ಯಾದಿಗಳಿಗೆ ಕಾರಣಭೂತನು. ಕಾಲತ್ರಯಕ್ಕಿಂತ ಬೇರೆಯಾದವನಾಗಿಯು, ಷೋಡಶಕಲಾ ರಹಿತನಾಗಿಯು ಕಾಣಬರುತ್ತಾನೆ. ವಿಶ್ವರೂಪನು, ಸಕಲಕ್ಕೂ ಕಾರಣ ಭೂತನು, ತನ್ನ ಹೃದಯ-ದಲ್ಲಿರುವವನು, ಸ್ತುತಿಸುವಂತಹವನು ಆದ ದೇವನನ್ನು ಧ್ಯಾನಿಸಿ ಹೊಂದುತ್ತಿರುವವನು. ಯಾವ ಪರಮಾತ್ಮನಿಂದ ಈ ವಿಶ್ವವೆಲ್ಲವು ಪ್ರವರ್ತಿಸುತ್ತಿರುವುದೋ ಆ ಪರಮಾತ್ಮ ಸಂಸಾರ ವೃಕ್ಷದಲ್ಲಿಯು, ಕಾಲದಲ್ಲಿಯು, ಆಕಾರಕ್ಕಿಂತ ಅತೀತನು, ಭಿನ್ನನು, ಸರ್ವೋತ್ತಮನು ಆಗುತ್ತಿದ್ದಾನೆ. ಆ ಪರಮೇಶ್ವರನು ಧರ್ಮ ರಕ್ಷಕನೆಂದು ಪಾಪವಿನಾಶಕನೆಂದು, ಪ್ರಭುವೆಂದು, ಹೃದಯ ನಿವಾಸಿಯೆಂದು, ಅಮರನೆಂದು ಜಗದಾಧಾರವೆಂದು ತಿಳಿದುಕೊಂಡವನು ಪರಬ್ರಹ್ಮವನ್ನು ಹೊಂದುವನು.

**ಮಂ.ಶ್ಲೋ॥ ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ । ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಮ್ (7) ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ (8)**

ತಾ : ಆ ಪರಮೇಶ್ವರನನ್ನು ವೈವಸ್ವತ ಯಮನಿಗಿಂತ ಶ್ರೇಷ್ಠನೆಂದು, ದೇವೇಂದ್ರಾದಿ ದೇವತೆ-ಗಳಿಗಿಂತ ಶ್ರೇಷ್ಠ (ಘನತೆಯುಳ್ಳವನೆಂದು) ನಾದವನೆಂದು, ಪ್ರಜಾಪತಿಗಳಿಗಿಂತ ಶ್ರೇಷ್ಠ ಪ್ರಜಾಪತಿ-ಯಾಗಿಯೂ ಅಕ್ಷರಸ್ವರೂಪನಿಗಿಂತ ಪರನಾದವನೆಂದು, ಜ್ಯೋತಿಸ್ವರೂಪನೆಂದು, ಲೋಕೇಶ್ವರ-ನೆಂದು, ಸ್ತುತಿಸತಕ್ಕವನೆಂದು ತಿಳಿದುಕೊಂಡಿದ್ದೇವೆ ಎಂದು ವಿದ್ವಾಂಸರು ಸ್ವಾನುಭವದಿಂದ ಹೇಳಿದ್ದಾರೆ. ಆ ಪರಮೇಶ್ವರನಿಗೆ ಶರೀರವು ಇಂದ್ರಿಯಗಳ ಸಮೂಹವು ಇಲ್ಲ. ಆ ದೇವನಿಗೆ ಸಮನಾದವನಾಗಲಿ, ಅಧಿಕನಾದವನಾಗಲಿ ಕಾಣಿಸಲಾರದು. ಆ ಪರಮೇಶ್ವರನ ಪರಾಶಕ್ತಿಯು ನಾನಾ ವಿಧಗಳಾಗಿವೆ-ಯೆಂದು ವೇದಗಳು ಪ್ರತಿಪಾದಿಸುತ್ತಿವೆ. ಆ ದೇವನ ಪರಾಶಕ್ತಿ ಸ್ವಭಾವ ಸಿದ್ಧವಾದುದು, ಜ್ಞಾನ ಕ್ರಿಯಾ ಬಲಗಳ್ಳುಳ್ಳಂತಹುದು.

**ಮಂ.ಶ್ಲೋ॥ ನ ತಸ್ಯ ಕಶ್ಚಿತ್ಪತಿರಸ್ತಿಲೋಕೇ ನಚೇಶಿತಾ ನೈವಚ ತಸ್ಯ ಲಿಂಗಮ್ । ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನಚಾಧಿಪಃ (9) ಯಸ್ತಂತುನಾಭ ಇವ ತಂತುಭಿಃ ಪ್ರಧಾನಜೈಃ ಸ್ವಭಾವತಃ । ದೇವ ಏಕಸ್ಸಮಾವೃಣೋತ್ ಸನೋ ದಧಾತು ಬ್ರಹ್ಮಾವ್ಯಯಮ್ (10)**

ತಾ : ಆ ಪರಮೇಶ್ವರನಿಗೆ ಪ್ರಭುವಾಗಲೀ. ನಿಯಂತನಾಗಲೀ ಇಲ್ಲ. ಈತನೆಂತಹವನೆಂದು ಊಹಿಸಿಕೊಳ್ಳಲು ಲಿಂಗಮಯ ಚಿಹ್ನೆಗಳಾವುವೂ ಇಲ್ಲ. ಈತನೇ ಸರ್ವಕಾರಣನು. ಈತನೇ

ಸೂರ್ಯಾದಿ ದೇವತೆಗಳಿಗೆ ಪ್ರಭು. ಈತನಿಗೆ ಜನಕವಾಗಲೀ, ಅಧಿಕವಾದವನಾಗಲೀ, ಬೇರ್ಯಾರು ಇಲ್ಲ. ಸ್ವಭಾವದಿಂದ ಪ್ರಕಾಶಿಸುವವನು ಅದ್ವಿತೀಯನು ಆದ ಪರಮೇಶ್ವರನು ಜೇಡರಹುಳವು ಸ್ವೋತ್ಪನ್ನಗಳಾದ ದಾರಗಳಿಂದ ನೇಯ್ದ ಬಲೆಯಲ್ಲಿ ಸುತ್ತುವರಿಯಲ್ಪಟ್ಟಂತೆ, ಅವ್ಯಕ್ತದಿಂದ ಹುಟ್ಟಿದ ನಾಮ ರೂಪಕರ್ಮಾದಿ ಪಾಶಗಳಿಂದ ಆವರಿಸಲ್ಪಡುತ್ತಿದ್ದಾನೆ. ಅಂತಹ ಆತ್ಮದೇವನು ನನಗೆ ಬ್ರಹ್ಮೈಕ್ಯ ಭಾವವನ್ನು ಪ್ರಸಾದಿಸುವಂತಾಗಲಿ!

**ಮಂ.ಶ್ಲೋ॥ ಏಕೋ ದೇವಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷ ಸ್ಸರ್ವಭೂತಾಧಿವಾಸಸ್ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ (11) ಏಕೋ ವಶೀ ನಿಷ್ಕ್ರಿಯಾಣಾಂ ಬಹುನಾಮೇಕಗ್‌ಂ ಬೀಜಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಗ್‌ಂ ಸುಖಂ ಶಾಶ್ವತಂ ನೇತರೇಷಾಮ್ (12)**

ತಾ : ಅದ್ವಿತೀಯನು, ಪ್ರಕಾಶ ಸ್ವರೂಪನು ಆದ ಆ ಪರಮೇಶ್ವರನೇ ಸಕಲ ಜೀವಿಗಳಲ್ಲಿ ಅಂತರಾತ್ಮನಾಗಿರುವನು. ಈತನೇ ಆಯಾ ಜೀವಿಯು ಮಾಡುವ ವಿವಿಧ ಕರ್ಮಗಳಿಗೆ ಅಧಿಷ್ಠಾತ. ಈತನೇ ಸರ್ವ ಭೂತಾದಿವಾಸನು, ಸರ್ವಸಾಕ್ಷಿ, ಚೈತನ್ಯ ರೂಪನು, ನಿರುಪಾಧಿಕನು, ನಿರ್ಗುಣನು ಆಗಿರುವನು. ಜೀವಿಗಳ ಸಕಲ ಕರ್ಮಗಳು ಆತ್ಮದಲ್ಲಿ ಇಲ್ಲ. ಸರ್ವ ಕ್ರಿಯೆಗಳು ದೇಹೇಂದ್ರಿಯ-ಗಳಲ್ಲಿಯೇ ಇವೆ. ಆತ್ಮವು ನಿಷ್ಕ್ರಿಯನು ನಿರ್ಗುಣನು ಗುಣರಹಿತನು, ಕೂಟಸ್ಥನು, ಆದಾಗ್ಯೂ ಅನಾತ್ಮ ಧರ್ಮಗಳೆಲ್ಲವನ್ನು ಆತ್ಮದಲ್ಲಿ ಆರೋಪಿಸಿಕೊಂಡು ಜೀವಿಗಳು ಹಿಂಸೆಯನ್ನು ಅನುಭವಿಸು-ತ್ತಾರೆ. ಆ ಈಶ್ವರನ ಬುದ್ಧಿಯಲ್ಲಿರುವವನಾಗಿ ದರ್ಶಿಸುವವರು, ಶಾಶ್ವತ ಸುಖವನ್ನು ಹೊಂದುತ್ತಿದ್ದಾರೆ. ಇತರರಿಗೆ ಸುಖವು ಇಲ್ಲ. (ಏಕೋದೇವಃ ಸರ್ವ ಭೂತೇಷು... ಎನ್ನುವ ಮಂತ್ರವು ಗೋಪಾಲೋತ್ತರ ತಾಪಿನ್ಯುಪನಿಷತ್ತು 13ರಲ್ಲಿ ಕೂಡಾ ಇದೆ.)

**ಮಂ.ಶ್ಲೋ॥ ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್। ತತ್ಕಾರಣಗ್‌ಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (13) ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯ-ಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ (14)**

ತಾ : (ಈ ಎರಡು ಮಂತ್ರಗಳು ಸ್ವಲ್ಪ ವ್ಯತ್ಯಾಸದೊಂದಿಗೆ ಕಠೋಪನಿಷತ್ತಿನಲ್ಲಿದೆ.) ನಿತ್ಯರಾದ ಜೀವಿಗಳ ಒಳಗೆ ನಿತ್ಯನು, ಚೇತನಗಳಲ್ಲಿನ ಚೈತನ್ಯನು ಆಗಿ ಒಬ್ಬನೇ ಆಗಿದ್ದು ಸಮಸ್ತ ಜೀವಿಗಳಿಗೆ ವಾಂಛಿತಾರ್ಥಗಳನ್ನು ಯಾರು ಅನುಗ್ರಹಿಸುತ್ತಿದ್ದಾರೋ, ಯಾವ ದೇವರು ಸರ್ವ ಕಾರಣನೋ ಯಾರು ಜ್ಞಾನಯೋಗದಿಂದ ಹೊಂದತಕ್ಕವನೋ, ಅಂತಹ ದೇವನನ್ನು ತಿಳಿದವನು ಅವಿದ್ಯಾ ಪಾಶ-ಗಳಿಂದ ವಿಮುಕ್ತನಾಗುವನು. ಆ ಪರಬ್ರಹ್ಮದಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರ, ನಕ್ಷತ್ರಗಳು. ಪ್ರಕಾಶಿಸುವುದಿಲ್ಲ ಈ ಮಿಂಚುಗಳು ಕೂಡಾ ಪ್ರಕಾಶಿಸುವುದಿಲ್ಲ ಈ ಅಗ್ನಿಯು ಮಾತ್ರ ಯಾವ ರೀತಿ ಪ್ರಕಾಶಿಸುವುದು? ಸ್ವಯಂಪ್ರಕಾಶನಾದ ಪರಮಾತ್ಮನನ್ನೇ (ಇವೆಲ್ಲವನನುಸರಿಸಿ) ಇವೆಲ್ಲವು ಅನುಸರಿಸಿ ಪ್ರಕಾಶಿಸುವವು ಆ ಪರಮಾತ್ಮನ ಕಾಂತಿಯಿಂದಲೇ ಈ ಸರ್ವಸ್ವವೂ ಪ್ರಕಾಶಿಸುತ್ತಿದೆ.

**ಮಂ.ಶ್ಲೋ॥ ಏಕೋಹಗ್‌ಂ ಸೋ ಭುವನಸ್ಯಾಸ್ಯ ಮಧ್ಯೇ ಸ ಏವಾಗ್ನಿಸ್ಸಲಿಲೇ ಸನ್ನಿವಿಷ್ಟಃ । ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ (15) ಸ ವಿಶ್ವಕೃದ್ವಿಶ್ವ-ವಿದಾತ್ಮಯೋನಿರ್‌ಜ್ಞಃ ಕಾಲಕಾಲೋ ಗುಣೀ ಸರ್ವವಿದ್ಯಃ । ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶ ಸ್ಸಗ್‌ಂ ಸಾರ ಮೋಕ್ಷ ಸ್ಥಿತಿ ಬಂಧಹೇತುಃ (16)**

ತಾ : ಈ ಭುವನದ ಮಧ್ಯಭಾಗದಲ್ಲಿರುವ ಪರಮಾತ್ಮನೊಬ್ಬನೇ ಅವಿದ್ಯಾದಿಕವನ್ನು ಹೋಗಲಾಡಿಸುವಂತಹವನು ಆ ಪರಮಾತ್ಮನೇ ದಹಿಸುವಂತಹ ಅಗ್ನಿ, ಸಲಿಲಗಳಲ್ಲಿ (ದೇವಾತ್ಮ-ನಾಗಿ) ಅಚ್ಚುಕಟ್ಟಾಗಿ ಆತ್ಮಭೂತನಾಗಿ ವಾಸವಾಗಿರುವವನು. ಆ ಪರಮಾತ್ಮನನ್ನು ತಿಳಿದು ಕೊಂಡು ಮರಣರಹಿತನಾದ ಪರಮೇಶ್ವರನನ್ನು ಹೊಂದುವನು. ಮೋಕ್ಷಕ್ಕೆ ಮತ್ತೊಂದು ಮಾರ್ಗವಿಲ್ಲ. ಆ ಪರಮಾತ್ಮನೇ ವಿಶ್ವನಿರ್ಮಾತ, ಆತನೇ ಸರ್ವಜ್ಞ, ಜ್ಞಾನ ಸ್ವರೂಪ ಕಾಲಕ್ಕೆ ಕರ್ತನಾದವನು. ಸರ್ವ ಸುಗುಣಗಳು ಇರುವಂತಹವನು. ಸರ್ವವಿದ್ಯೆಗಳನ್ನು ಹೊಂದಿರುವವನು. ಈತನೇ ಪ್ರಧಾನಕ್ಕೆ ಕ್ಷೇತ್ರಜ್ಞನಿಗೂ ಅಧಿಪತಿ; ಸತ್ವ ರಜಸ್ತಮೋ ಗುಣಗಳಿಗೆ ಪ್ರಭುವೀತ; ಸಂಸಾರ, ಮೋಕ್ಷಸ್ಥಿತಿ ಬಂಧಗಳಿಗೆ ಕಾರಣಭೂತನು.

**ಮಂ.ಶ್ಲೋ॥ ಸ ತನ್ಮಯೋ ಹ್ಯಮೃತ ಈಶ ಸಂಸ್ಥೋ ಜ್ಞಸ್ಸರ್ವಗೋ ಭುವನಸ್ಯಾಸ್ಯ ಗೋಪ್ತಾ, ಯ ಈಶೇ ಅಸ್ಯ ಜಗತ್ ನಿತ್ಯಮೇವ ನಾನ್ಯೋ ಹೇತುರ್ವಿದ್ಯತ ಈಶನಾಯ (17) ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಗ್‌ಂಶ್ಚ ಪ್ರಹಿಣೋತಿ ತಸ್ಮೈ, ತಗ್‌ಂ ಹ ದೇವಮಾತ್ಮಾ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ (18)**

ತಾ : ಯಾವ ಪರಮಾತ್ಮನು ಈ ಜಗತ್ತಿಗೆ ನಿಯಮ ಪಾಲಕನಾಗಿರುವನೋ, ಆ ಪರಮಾತ್ಮನು ಜ್ಯೋತಿ ಸ್ವರೂಪನು, ಅಮೃತನು. ಈಶ್ವರತ್ವದಲ್ಲಿ ಸ್ಥಿತಿಯನ್ನು ಹೊಂದಿರುವವನು, ಜ್ಞಾನ ಸ್ವರೂಪನು, ಸರ್ವಗತನು ಈ ಲೋಕಕ್ಕೆ ಪಾಲಕನು ಆಗಿರುವನು. ಈ ಜಗನ್ನಿಯಾಮಕನಿಗೆ ಮತ್ತೊಬ್ಬ ಕಾರಣ ಭೂತನಿಲ್ಲ. ಯಾವ ಪರಮೇಶ್ವರನು ಸೃಷ್ಟ್ಯಾದಿಗಳಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಜಿಸಿ ಆತನಿಗೆ ವೇದಗಳನ್ನು ಉಪದೇಶಿಸಿದನೋ ಅಂತಹ ಪರಮೇಶ್ವರನ ಆತ್ಮಬುಧ್ಧಿ ಪ್ರಕಾಶಕನನ್ನು ಮೋಕ್ಷೇಚ್ಛೆಯುಳ್ಳ ನಾನು ಶರಣು ಬೇಡುತ್ತಿದ್ದೇನೆ.

**ಮಂ.ಶ್ಲೋ॥ ನಿಷ್ಕಲಂ ನಿಷ್ಕ್ರಿಯಗ್‌ಂ ಶಾಂತಂ ನಿರವದ್ಯಂ ನಿರಂಜನಮ್ । ಅಮೃತಸ್ಯ ಪರಗ್‌ಂ ಸೇತುಂ ದಗ್ಧೇಂಧನಮಿವಾನಲಮ್ (19) ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ (20)**

ತಾ : ಅವಯವರಹಿತನು, ನಿಷ್ಕ್ರಿಯನು, ಸರ್ವವಿಕಾರ ರಹಿತನು, ಅನಿಂದ್ಯನು, ನಿರ್ಲೇಪನು, ಮೋಕ್ಷವನ್ನು ಹೊಂದಲು ಸೇತುವಾದಂತಹವನು, ಸಂಸಾರ ಸಮುದ್ರಪಾರಧಿ (ಸೇತುವೆ) ಅಗ್ನಿ ದೇವನಂತೆ ಪ್ರಕಾಶಗೊಳ್ಳುತ್ತಿರುವ ಪರಮೇಶ್ವರನನ್ನು ಮೋಕ್ಷಾರ್ಥಿಯಾಗಿ ಶರಣು ಬೇಡುತ್ತಿದ್ದೇನೆ. ಆಕಾಶವನ್ನು ಸುತ್ತುವುದಕ್ಕೆ ಚರ್ಮದಂತೆ ಸಾಧ್ಯವಾಗುವುದಿಲ್ಲ. ಹಾಗೆಯೇ ಪರಮಾತ್ಮನನ್ನು ತಿಳಿದುಕೊಳ್ಳಲಾರದೆ, ದುಃಖವನ್ನು ಕೊನೆಗಾಣಿಸಲು ಸಾಧ್ಯವಿಲ್ಲ.

ಮಂ.ಶ್ಲೋ॥ ತಪಃ ಪ್ರಭಾವಾದ್ದೇವ ಪ್ರಸಾದಾಚ್ಚ ಬ್ರಹ್ಮಹಾ ಶ್ವೇತಾಶ್ವತರೋಽಥವಿದ್ವಾನ್ । ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ ಸಮ್ಯಗೃಷಿಸಂಘಜುಷ್ಟಮ್ (21) ವೇದಾಂತೇ ಪರಮಂ ಗುಹ್ಯಂ ಪುರಾಕಲ್ಪ ಪ್ರಚೋದಿತಮ್ । ನಾಪ್ರಶಾನ್ತಾಯ ದಾತವ್ಯಂ ನಾಪುತ್ರಾಯಾ-ಶಿಷ್ಯಾಯ ವೈ ಪುನಃ (22)

ತಾ : ತಪಸ್ಸಿನ ಪ್ರಭಾವದಿಂದಲೂ. ಪರಮೇಶ್ವರನ ಅನುಗ್ರಹದಿಂದಲೂ. ವಿದ್ವಾಂಸನಾದ ಶ್ವೇತಾಶ್ವತರ ಮಹರ್ಷಿಯು ಬ್ರಹ್ಮತತ್ತ್ವವನ್ನು ಹೊಂದಿದನಲ್ಲಾ, ಆನಂತರ ಋಷಿಗಣದಿಂದ ಆರಾಧಿಸುವಂತಹವನಾಗಿ ಪರಮ ಪವಿತ್ರವಾದ ಬ್ರಹ್ಮವಿದ್ಯೆಯನ್ನು, ಆ ಶ್ವೇತಾಶ್ವತರ ಮುನಿಯು. ಯತೀಶ್ವರರಿಗಾಗಿ ಬೋಧಿಸಿದ. ಪರಮ ಪುರುಷಾರ್ಥವನ್ನು ಸಂಪಾದಿಸಲು ಉಪಕರಿಸುವ ಬ್ರಹ್ಮಜ್ಞಾನವನ್ನು ಉಪನಿಷತ್ತಿನಲ್ಲಿ ರಹಸ್ಯವಾಗಿ ಅಡಕಗೊಳಸಿದ್ದಾರೆ ಪೂರ್ವಕಲ್ಪಗಳಲ್ಲಿ ಅಧಿಕಾರವುಳ್ಳ ಮಾನವರಿಗೆ ಮಾತ್ರವೇ ಬೋಧಿಸತಕ್ಕದ್ದು. ಈಗ ರಾಗ ದ್ವೇಷಗಳಿರುವ ಶಿಷ್ಯನಿಗಾಗಲೀ. ಪುತ್ರನಿಗಾಗಲೀ. ಜ್ಞಾನವನ್ನುಪದೇಶಿಸಕೂಡದು.

ಮಂ.ಶ್ಲೋ॥ ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ, ಪ್ರಕಾಶಂತೇ ಮಹಾತ್ಮನ ಇತ್ಯುಪನಿಷತ್ (23) ಬ್ರಹ್ಮಾವಾದಿನೋ ವದನ್ತಿ ಸಪ್ತದಶ, ಯುಂಜಾನಷ್ಷೋಡಶ, ಯ ಏಕೋ ಜಾಲವಾ-ನೇಕವಿಗ್ಂಶತಿಃ । ಯ ಏಕೋ ವರ್ಣೋ ದ್ವಾವಿಗ್ಂಶತಿಃ ದ್ವೇ ಅಕ್ಷರೇ ಚತುರ್ದಶ । ಸ್ವಭಾವಮೇಕೇ ತ್ರಯೋವಿಗ್ಂಶತಿಃ ಆಹತ್ಯಾ ತ್ರಯೋದಶಾಧಿಕಂ ಶತಮ್ (24)

(ಶ್ವೇತಾಶ್ವತರೋಪನಿಷತ್ಸಮಾಪ್ತಾ)

ತಾ : ಯಾರಿಗೆ ಆತ್ಮದೇವನಲ್ಲಿ ಪರಾಭಕ್ತಿಯಿರುವುದೋ, ಅದೇ ರೀತಿಯಾಗಿ ಗುರುವಿನಲ್ಲಿ ಕೂಡಾ ಭಕ್ತಿಯಿರುವದೋ ಅಂತಹ ಮಹಾತ್ಮನಿಗೆ ಉಪದೇಶಿಸಿದ ಬೋಧನೆಗಳೆಲ್ಲವೂ ಚೆನ್ನಾಗಿ ಅನುಭವಕ್ಕೆ ಬರುವುದು, ಪ್ರಕಾಶಿಸುವುದು. ಶ್ವೇತಾಶ್ವತರೋಪನಿಷತ್ತು ಸಮಾಪ್ತಿ

ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥





# ಹಂಸೋಪನಿಷತ್ತು - 15

(ಶುಕ್ಲ ಯಜುರ್ವೇದಾಂತರ್ಗತ)

ಶಾಂತಿ ಮಂತ್ರ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ॥ ಹಂಸಾಖ್ಯೋಪನಿಷತ್ಪ್ರೋಕ್ತನಾದಾವಿರ್ಯತ್ರ ವಿಶ್ರಮೇತ್ ।
ತದಾಧಾರಂ ನಿರಾಧಾರಂ ಬ್ರಹ್ಮಮಾತ್ರ ಮಹಂ ಮಹಃ ॥

ಮಂ.ಶ್ಲೋ॥ (ಗೌತಮ ಉವಾಚ) ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರ ವಿಶಾರದ! ಬ್ರಹ್ಮವಿದ್ಯಾ ಪ್ರಬೋಧೋ ಹಿ ಕೇನೋಪಾಯೇನ ಜಾಯತೇ (1) (ಸನತ್ಕುಮಾರ ಉವಾಚ) ವಿಚಾರ್ಯ ಸರ್ವಧರ್ಮೇಷು ಮತಂ ಜ್ಞಾತ್ವಾ ಪಿನಾಕಿನಃ । ಪಾರ್ವತ್ಯಾ ಕಥಿತಂ ತತ್ತ್ವಂ ಶೃಣು ಗೌತಮ ತನ್ಮಮ (2) ಅನಾಖ್ಯೇಯಮಿದಂ ಗುಹ್ಯಂ ಯೋಗಿನಾಂ ಕೋಶಸನ್ನಿಭಮ್ । ಹಂಸಸ್ಯೋಽಽಕೃತಿ ವಿಸ್ತಾರಂ ಭುಕ್ತಿಮುಕ್ತಿ ಫಲಪ್ರದಮ್ (3)

ತಾ : (ಗೌತಮ ಮುನಿ ಹೇಳಿದ) ಭಗವನ್! ಸರ್ವಧರ್ಮಜ್ಞನು, ಸರ್ವಶಾಸ್ತ್ರ ಪಾರಂಗತನು, ಸಕಲ ಧರ್ಮಗಳನ್ನು ತಿಳಿದವನಾದ್ದರಿಂದ ನಿನ್ನನ್ನೊಂದು ಮಾತನ್ನು ಕೇಳುತ್ತಿದ್ದೇನೆ. ಬ್ರಹ್ಮವಿದ್ಯಾ ಪ್ರಬೋಧವು ಯಾವ ಉಪಾಯದಿಂದ ಸುಲಭವಾಗಿ ಲಭಿಸುವುದೋ ಅಂತಹ ಉಪಾಯವನ್ನು ಬೋಧಿಸುವಂತಹವನಾಗು. (ಸನತ್ಕುಮಾರನು ಹೇಳಿದ. ಪೂರ್ವದಲ್ಲಿ ಪಾರ್ವತೀದೇವಿಯು ಲೋಕಾನುಗ್ರಹ ನಿಮಿತ್ತವಾಗಿ ಪರಮ ಶಿವನನ್ನು ಪ್ರಶ್ನಿಸಿದಳು. ಪರಮಶಿವನು, ಪ್ರಪಂಚಕಲ ರಹಿತವಾದ ಸನ್ಮಾತ್ರವೇ ಬ್ರಹ್ಮವೆಂದು ಪಾರ್ವತೀದೇವಿಗೆ ಬೋಧಿಸಿದ. ಪಾರ್ವತೀದೇವಿಯೂ ಕೂಡ ಈ ಸಿದ್ಧಾಂತವನ್ನು ತಿಳಿದುಕೊಂಡವಳಾಗಿ ಅನುಗ್ರಹ ಬುದ್ಧಿಯಿಂದ ನನಗೆ (ಸನತ್ಕುಮಾರನಿಗೆ) ಉಪದೇಶಿಸಿದಳು. ಸಾವಧಾನವಾಗಿ ಕೇಳುವಂತಹವನಾಗು. ನಾನು ಈಗ ಹೇಳಲಿರುವ ರಹಸ್ಯವನ್ನು ಯೋಗಿಗಳಲ್ಲದವರಿಗೆ ಬೋಧಿಸಬಾರದು. ಯೋಗಿಗಳಿಗೆ ಈ ರಹಸ್ಯವು ಮಹತ್ತಾದ ನಿಧಿಯಂತಹುದು. ಈ ರಹಸ್ಯವೇನೆಂದರೆ ಹಂಸದ ಆಕೃತಿ ವಿಸ್ತರಣೆ. ಭುಕ್ತಿ ಮುಕ್ತಿ ಫಲಪ್ರದವು.

ಮಂ.ಶ್ಲೋ॥ ಅಥ ಹಂಸ ಪರಮಹಂಸ ನಿರ್ಣಯಂ ವ್ಯಾಖ್ಯಾಸ್ಯಾಮೋ ಬ್ರಹ್ಮಚಾರಿಣೇ ಶಾನ್ತಾಯ ದಾನ್ತಾಯ ಗುರುಭಕ್ತಾಯ ಹಂಸಹಂಸೇತಿ ಸದಾ ಧ್ಯಾಯನ್ (4) ಸರ್ವೇಷು ದೇಹೇಷು ವ್ಯಾಪ್ಯ ವರ್ತತೇ, ಯಥಾ ಹ್ಯಗ್ನಿಃ ಕಾಷ್ಠೇಷು ತಿಲೇಷು ತೈಲಮಿವ ತಂ ವಿದಿತ್ವಾ ನ ಮೃತ್ಯುಮೇತಿ (5)

ತಾ : 'ಹಂಸ, ಹಂಸ' ಎಂದು ಧ್ಯಾನಿಸುವ, ಗುರುಭಕ್ತಿವುಳ್ಳವನೂ ಶಾಂತನಾಗಿ, ದಾಂತನಾಗಿ, ಬ್ರಹ್ಮನಿಷ್ಠೆಯುಳ್ಳವನಾದಂತಹ ನಿನಗೆ ಹಂಸ, ಪರಮಹಂಸ ನಿರ್ಣಯವನ್ನು ವ್ಯಾಖ್ಯಾನಿಸುತ್ತಿದ್ದೇನೆ.

ಆ ಹಂಸವು ಸಕಲ ಜೀವಿಗಳ ದೇಹಗಳಲ್ಲಿ, ಕಟ್ಟಿಗೆಯೊಳಗಿನ ಅಗ್ನಿಯಂತೆ, ಎಳ್ಳಿನಲ್ಲಿರುವ ಎಣ್ಣೆಯಂತೆ ಎಲ್ಲೆಡೆಯೂ ವ್ಯಾಪಿಸಿರುವುದು. ಹೀಗೆ ತಿಳಿದುಕೊಂಡಲ್ಲಿ ಮೃತ್ಯುವಿನ ಭಯವಿರುವುದಿಲ್ಲ.

ಮಂ.ಶ್ಲೋ|| **ಗುದಮವಷ್ಟಭ್ಯಾಽಧಾರಾದ್ವಾಯುಮುತ್ಥಾಪ್ಯ ಸ್ವಾಧಿಷ್ಠಾನಂ ತ್ರಿಃ ಪ್ರದಕ್ಷಿಣೀಕೃತ್ಯ ಮಣಿಪೂರಕಂ ಗತ್ವಾ ಅನಾಹತಮತಿಕ್ರಮ್ಯ, ವಿಶುದ್ಧೇ ಪ್ರಾಣಾನ್ನಿರುಧ್ಯಾಽಽಜ್ಞಾಮನು ಯಾಯನ್ ಬ್ರಹ್ಮರನ್ಧ್ರಂ ಧ್ಯಾಯನ್ ತ್ರಿಮಾತ್ರೋಽಹಮಿತ್ಯೇವಂ ಸರ್ವದಾ ಧ್ಯಾಯನ್ ಪಶ್ಯತ್ಯನಾಕಾರಶ್ಚ ಜಪತಿ (ಶಿಶ್ನೋಽಭೌಪಾರ್ಶ್ವೌ ಭವತಃ) (6)**

ತಾ : ಎಡಗಾಲಿನ ಹಿಮ್ಮಡಿಯಿಂದ ಗುದವನ್ನು ಮುಚ್ಚಿದವನಾಗಿ, ನಾಸಿಕದಿಂದ ವಾಯುವನ್ನು ದೀರ್ಘ ಹಾಗೂ ಹ್ರಸ್ವ ಉಸಿರಾಟ ಮಾಡುತ್ತಾ, ಮೂಲಾಧಾರದಿಂದ ವಾಯುವನ್ನು ಚೆನ್ನಾಗಿ ಮೇಲಕ್ಕೆಳೆದುಕೊಂಡು, ಮೂಲಾಧಾರ ತ್ರಿಕೋಣಗತವಾದ ಅಗ್ನಿಯಲ್ಲಿ ಪ್ರಾಣಾಪಾನವನ್ನು ಮಿಳಿತಗೊಳಿಸಿ, ಕುಂಡಲಿನಿಯನ್ನು ಎಚ್ಚರಗೊಳಿಸುವಂತೆ ಮಾಡಿ ಸುಷುಮ್ನಾ ಗ್ರಂಥಿಯನ್ನು ಭೇದಿಸಿ, ವಿರಾಟ್‌ನ್ನು ಧ್ಯಾನಿಸಿ, ನಂತರ ಸ್ವಾದಿಷ್ಠಾನ ಚಕ್ರವನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ನಂತರ ಮಣಿಪೂರ ಚಕ್ರವನ್ನು ಸೇರಿ, ಆಮೇಲೆ, ಅನಾಹತ ಚಕ್ರವನ್ನು ಸೇರಿ, ಅಲ್ಲಿಂದ ವಿಶುದ್ಧಿ ಚಕ್ರವನ್ನು ತಲುಪಿ, ಅಲ್ಲಿ ಪ್ರಾಣವನ್ನು ನಿರೋಧಿಸಿ, ಆಜ್ಞಾ ಚಕ್ರಕ್ಕೆ ಬಂದು, ಅಲ್ಲಿಂದ ಬ್ರಹ್ಮರಂಧ್ರವನ್ನು ಪ್ರವೇಶಿಸಿ, ತುರ್ಯನೆಂಬ ನಾನು ಎಂದು ಭಾವಿಸಿದ ಯೋಗಿಯು ಸಾಕಾರಗೊಂಡ ತುರ್ಯನಾಗಿಯೂ, ನಿರಾಕಾರ-ದೊಂದಿಗೆ ತುರ್ಯ ತುರ್ಯನಾಗಿಯೂ ಆಗುತ್ತಾನೆ.

ಮಂ.ಶ್ಲೋ|| **ಏಷೋಽಸೌ ಪರಮಹಂಸೋ ಭಾನುಕೋಟಿ ಪ್ರತೀಕಾಶೋ ಯೇನೇದಂ ಸರ್ವಂ ವ್ಯಾಪ್ತಮ್ (7) ತಸ್ಯಾಽಷ್ಟಧಾ ವೃತ್ತಿರ್ಭವತಿ ಪೂರ್ವದಳೇ ಪುಣ್ಯೇ ಮತಿರಾಗ್ನೇಯೇ ನಿದ್ರಾಽಽಲಸ್ಯಾ-ದಯೋ ಭವನ್ತಿ, ಯಾಮ್ಯೇ ಕ್ರೌರ್ಯೇ ಮತಿಃ, ನೈರೃತೇ ಪಾಪೇ ಮನೀಷಾ, ವಾರುಣ್ಯಾಂ ಕ್ರೀಡಾ, ವಾಯವ್ಯಾಂ ಗಮನಾದೌ ಬುದ್ಧಿಸ್ಸೌಮ್ಯೇ ರತಿಪ್ರೀತಿರೀಶಾನ್ಯೇ ದ್ರವ್ಯಾದಾನಂ, ಮಧ್ಯೇ ವೈರಾಗ್ಯಂ, ಕೇಸರೇ ಜಾಗ್ರದವಸ್ಥಾ, ಕರ್ಣಿಕಾಯಾಂ ಸ್ವಪ್ನೋ, ಲಿಂಗೇ ಸುಷುಪ್ತಿಃ, ಪದ್ಮತ್ಯಾಗೇ ತುರೀಯಂ ಯದಾ ಹಂಸೋ ನಾದೇ ವಿಲೀನೋ ಭವತಿ, ತತ್ತುರೀಯಾತೀತಂ ಭವತಿ (8) ಅಥೋ ನಾದ ಆಧಾರಾದ್ಬ್ರಹ್ಮರನ್ಧ್ರ ಪರ್ಯಂತಂ ಶುದ್ಧಸ್ಫಟಿಕಸಙ್ಕಾಶಂ ಸ ವೈ ಬ್ರಹ್ಮ ಪರಮಾತ್ಮೇತ್ಯುಚ್ಯತೇ (9)**

ತಾ : ಅಂತಹ ತುರ್ಯತುರ್ಯನೇ ಪರಮಹಂಸ, ಪರಮಾತ್ಮ. ಆ ಪರಮಾತ್ಮ ಕೋಟಿ ಸೂರ್ಯರ ಕಾಂತಿಗೆ ಸಮಾನವಾದ ಕಾಂತಿಯುಳ್ಳವನು. ಆ ಪರಮಾತ್ಮನಿಂದಲೇ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ. ಆ ಪರಮಾತ್ಮನು ಜೀವಭಾವವನ್ನು ಹೊಂದಿದಾಗ ಎಂಟು ವಿಧಗಳ ವೃತ್ತಿಗಳು ಉಂಟಾಗುತ್ತವೆ. ಜೀವನಿರುವ ಹೃದಯ ಕಮಲವು 12 ದಳಗಳನ್ನು ಹೊಂದಿದೆ. ಅದರಲ್ಲಿ ನಾಲ್ಕು ದಳಗಳು ಹಂಸವನ್ನು ಸ್ಪರ್ಶಿಸಲು ಸಾಧ್ಯವಾಗುವುದಿಲ್ಲ. ಮಿಕ್ಕ ಎಂಟು ದಳಗಳು ವ್ಯವಹಾರ ಯೋಗ್ಯವಾದವುಗಳು. ಹಂಸನು (ಜೀವನು) ಪೂರ್ವದಲ್ಲಿರುವ ದಳವನ್ನು ಅಧಿಷ್ಠಿಸಿದಲ್ಲಿ ಪುಣ್ಯದಲ್ಲಿ ಆಸಕ್ತಿಯುಂಟಾಗುವುದು. ಆಗ್ನೇಯ ದಳವನ್ನು ಅಧಿಷ್ಠಿಸಿದ ಪಕ್ಷದಲ್ಲಿ ನಿದ್ರಾಲಸ್ಯಗಳು ಮುಂತಾದುವುಗಳು ಉಂಟಾಗುವುದು.

ದಕ್ಷಿಣ ದಳವನ್ನು ಅಧಿಷ್ಠಿಸಿದಲ್ಲಿ ಕ್ರೂರಬುದ್ಧಿ ಉಂಟಾಗುವುದು. ನೈಋತ್ಯ ದಳವನ್ನು ಅಧಿಷ್ಠಿಸಿದಲ್ಲಿ ಪಾಪ ಕಾರ್ಯ ಬುದ್ಧಿಯುಂಟಾಗುವುದು. ಪಶ್ಚಿಮ ದಳವನ್ನು ಅಧಿಷ್ಠಿಸಿದಲ್ಲಿ ಆಟಪಾಠಗಳಲ್ಲಿ ಪ್ರೀತಿಯುಂಟಾಗುವುದು. ವಾಯುವ್ಯ ದಳವನ್ನು ಅಧಿಷ್ಠಿಸಿದಲ್ಲಿ ನಡೆಯುವುದು, ಓಡುವುದು ಮುಂತಾದುವುಗಳಲ್ಲಿ ಆಸಕ್ತಿ ಏರ್ಪಡುವುದು. ಉತ್ತರ ದಳದಲ್ಲಿ ಅಧಿಷ್ಠಿಸಿದಲ್ಲಿ ಜ್ಞಾನಿಗಳಿಗೆ ಆತ್ಮ ವಿಚಾರಣಾಭಿಲಾಷೆ ಏರ್ಪಡುವುದು, ಅಜ್ಞಾನಿಗಳಿಗೆ ಕಾಮರತಿಯಲ್ಲಿ ಪ್ರೀತಿಯುಂಟಾಗುವುದು. ಈಶಾನ್ಯ ದಳವನ್ನು ಅಧಿಷ್ಠಿಸಿದಲ್ಲಿ ಇಹ ಪರಲೋಕಸುಖಗಳಲ್ಲಿ ಆಸಕ್ತಿ ಬೆಳೆಯುವುದು. ದಳಗಳ ಮಧ್ಯಭಾಗದಲ್ಲಿ ಜೀವನಿದ್ದಲ್ಲಿ ವೈರಾಗ್ಯವುಂಟಾಗುವುದು. ಕೇಸರಗಳಲ್ಲಿ ಜೀವನು ಅಧಿಷ್ಠಿಸಿದಲ್ಲಿ ಜಾಗ್ರದವಸ್ಥೆ ಏರ್ಪಡುವುದು. ಪದ್ಮದ ಕರ್ಣಿಕೆಯಲ್ಲಿ ಜೀವನು ಪ್ರವೇಶಿಸಿದಲ್ಲಿ ಸ್ವಪ್ನವನ್ನು ಕಾಣುವನು. ಪದ್ಮದ ರಂಧ್ರವನ್ನು ಪ್ರವೇಶಿಸಿದಲ್ಲಿ ನಿದ್ರೆ ಬರುವುದು. ಹೃದಯ ಕಮಲವನ್ನು ಬಿಟ್ಟಲ್ಲಿ ತುರೀಯನಾಗುವನು. ಪರಮಾತ್ಮನಲ್ಲಿ ಲೀನವಾದ ಕೂಡಲೇ ತುರೀಯಾತೀತನಾಗುವನು. ಇಂತಹ ಯೋಗಿಯೊಬ್ಬನ ದೇಹದಲ್ಲಿ ತುರ್ಯಾತ್ಮ ಸದಾಕಾಲ ಶೋಭಿಸುವನು. ಇಂತಹ ನಿರ್ವಿಕಲ್ಪ ಸಮಾಧಿ ಸಿದ್ಧಿಸಿದ ನಂತರ ಯೋಗಿಯ ಹೃದಯದಲ್ಲಿ ಆಧಾರದಿಂದ ಬ್ರಹ್ಮರಂಧ್ರದವರೆಗೂ ನಾದವು ಸ್ಫಟಿಕದಂತೆ ನಿರ್ಮಲವಾಗಿ ಇರುವುದು. ಅದೇ ಪರಬ್ರಹ್ಮವು.

**ಮಂ.ಶ್ಲೋ॥ ಅಥ ಹಂಸ ಋಷಿಃ, ಅವ್ಯಕ್ತಗಾಯತ್ರೀ ಛನ್ದಃ, ಪರಮಹಂಸೋ ದೇವತಾ, ಹಂ ಬೀಜಮ್, ಸಂ ಶಕ್ತಿಃ, ಸೋಽಹಂ ಕೀಲಕಂ, (10) ಷಟ್ಸಂಖ್ಯಾಽಹೋರಾತ್ರಯೋರೇಕವಿಂಶತಿ ಸಹಸ್ರಾಣಿ ಷಟ್ಛತಾನ್ಯಧಿಕಾನಿ ಭವಂತಿ, ಸೂರ್ಯಾಯ ಸೋಮಾಯ ನಿರಞ್ಜನಾಯ, ನಿರಾಭಾಸಾಯಾಽ ತನು ಸೂಕ್ಷ್ಮಂ ಪ್ರಚೋದಯಾತ್ (11) ಅಗ್ನೀಷೋಮಾಭ್ಯಾಂ ವೌಷಟ್, ಹೃದಯಾದ್ಯಙ್ಗ-ನ್ಯಾಸ ಕರನ್ಯಾಸಾ ಭವತಃ (12) ಏವಂ ಕೃತ್ವಾ ಹೃದಯೇ ಹಂಸಮಾತ್ಮಾನಂ ಧ್ಯಾಯೇತ್(13)**

ತಾ : ಅಜಪಾಮಂತ್ರಕ್ಕೆ ಹಂಸ (ಪ್ರತ್ಯಗಾತ್ಮ)ನು ಋಷಿ. ಅವ್ಯಕ್ತಗಾಯತ್ರಿ ಛಂದಸ್ಸು ಪರಮ ಹಂಸ ದೇವತೆ, ಹಂ ಬೀಜ, ಸಂ ಶಕ್ತಿ, ಸೋಽ ಹಂ ಕೀಲಕಂ (ಷಡಾಕಾರ ದೇವತೆಗಳಾದ ಗಣೇಶ, ಬ್ರಹ್ಮ, ವಿಷ್ಣು, ರುದ್ರ, ಸದಾಶಿವ, ಸದ್ಗುರುಗಳು, ಜಪಕರ್ತರಾಗುತ್ತಿದ್ದಾರೆ.) ಪ್ರತಿನಿತ್ಯವೂ ರಾತ್ರಿ ಹಾಗೂ ಹಗಲಿನಲ್ಲಿ ಒಟ್ಟು 21600 ಶ್ವಾಸಗಳು. ಇದೇ ಜಪ, ಈ ಅಜಿಪಾಮಂತ್ರ ಜಪವನ್ನು ನಾಲ್ಕು ವಿಧಗಳಾಗಿ ವಿಭಜಿಸಬೇಕು. ಅದರಲ್ಲಿ ಮೊದಲ ಭಾಗ ವಿರಾಡಾತ್ಮ (ಸೂರ್ಯ)ನಿಗೆ ಸಮರ್ಪಿಸಬೇಕು. ಎರಡನೆಯ ಭಾಗವನ್ನು ಸೋಮನಿಗೆ ಸಮರ್ಪಿಸಬೇಕು. ಮೂರನೆಯ ಭಾಗವನ್ನು ಸರ್ವೇಶ್ವರನಾದ ನಿರಂಜನನಿಗೆ ಸಮರ್ಪಿಸಬೇಕು. ನಾಲ್ಕನೆಯ ಭಾಗವನ್ನು ಪ್ರತ್ಯಗಭಿನ್ನನು, ಸೂಕ್ಷ್ಮನು ಆದ ಚಿದಾಭಾಸನಿಗೆ ಸಮರ್ಪಿಸಬೇಕು. ಹೃದಯಾದ್ಯಂಗನ್ಯಾಸಗಳು:- ಹಂಸಾಂ ಹೃದಯಾಯಃ ನಮಃ; ಹಂ ಸೀಂ ಶಿರಸೇ ಸ್ವಾಹಾ; ಹಂ ಸೂಂ ಶಿಖಾಯೈ ವಷಟ್; ಹಂ ಸೈಂ ಕವಚಾಯ ಹುಂ, ಎಂದು ಹೇಳಿ "ಅಗ್ನೀ ಷೋಮಾಭ್ಯಾಂ ನೇತ್ರತ್ರಯಾಯ ವೌಷಟ್" ಎಂದು ಐದನೆಯ ಬಾರಿಗೆ ಹೇಳಬೇಕು. ಕರನ್ಯಾಸಗಳನ್ನು ಹೀಗೆಯೇ ಹೇಳಬೇಕು. ಈ ರೀತಿಯಾಗಿ ಅಂಗನ್ಯಾಸ, ಕರನ್ಯಾಸಗಳನ್ನು ಮಾಡಿ ಹೃದಯದಲ್ಲಿರುವ ಹಂಸವನ್ನು (ಜೀವನನ್ನು) ಬ್ರಹ್ಮಾಸ್ಮಿ ಎಂದು ಧ್ಯಾನಿಸಬೇಕು.

**ಮಂ.ಶ್ಲೋ॥ ಅಗ್ನಿಷೋಮೌ ಪಕ್ಷಾ ವೋಂಕಾರಶ್ಶಿರ ಉಕಾರೋ ಬಿನ್ದುಸ್ತ್ರಿಣೇತ್ರಂ ಮುಖಂ ರುದ್ರೋ ರುದ್ರಾಣೀ ಚರಣೌ ದ್ವಿವಿಧಂ ಕಣ್ಠತಃ ಕುರ್ಯಾದಿತ್ಯುನ್ಮನಾ ಅಜಪೋಪಸಂಹಾರ ಇತ್ಯಭಿಧೀ -ಯತೇ (14) ಏವಂ ಹಂಸವಶಾತ್ತಸ್ಮಾನ್ಮನೋ ವಿಚಾರ್ಯತೇ (15)**

ತಾ : ಯೋಗಭಾವವನ್ನು ಹೊಂದಿದ ಜೀವನಿಗೆ ಅಗ್ನೀಷೋಗಳು (ಸೂರ್ಯಚಂದ್ರರು) ಬಾಹುಗಳು, ಓಂಕಾರ, ಶಿರಸ್ಸು, ಸಬಿಂದುಕಗಳಾದ ಅಕಾರ ಉಕಾರ ಮಕಾರಗಳು ಮೂರು ಕಣ್ಣುಗಳು, ರುದ್ರನು ಮುಖ, ಪಾದಗಳು ರುದ್ರಾಣಿ ಆಗುತ್ತಿವೆ. ಹೀಗೆ ಸಗುಣ, ನಿರ್ಗುಣ ಭೇದಗಳಿಂದ ದ್ವಿವಿಧವಾದ ಹಂಸಧ್ಯಾನವನ್ನು ಮುಮುಕ್ಷುವು ಮಾಡಬೇಕು. ಹೀಗೆ ಧ್ಯಾನಿಸುವುದರಿಂದ ಉನ್ಮನನಾಗುತ್ತಿದ್ದಾನೆ. ಇದೇ ಅಜಪೋಪಸಂಹಾರ. ಈ ರೀತಿಯಾಗಿ ದ್ವಿವಿಧ ಹಂಸಧ್ಯಾನದಲ್ಲಿ ಆಸಕ್ತಿಯುಳ್ಳವನಾಗಿ "ಸೋಹಂ" ಜಪವನ್ನು ಜಪಿಸುವುದರಿಂದ ಹಂಸಕ್ಕಿಂತ ಮತ್ತೊಂದು ಇಲ್ಲವೆಂದು ನಿಶ್ಚಯಿಸಿ ಕೊಳ್ಳುತ್ತಾನೆ.

**ಮಂ.ಶ್ಲೋ॥ ಅಸ್ಯೈವ ಜಪಕೋಟ್ಯಾ ನಾದಮನುಭವತಿ । ಸಚ ದಶವಿಧ ಉಪಜಾಯತೇ, ಚಿಣೀತಿ ಪ್ರಥಮಃ, ಚಿಂಚಿಣೀತಿ ದ್ವಿತೀಯಃ, ಘಂಟಾನಾದಸ್ತೃತೀಯಃ, ಶಂಖನಾದಶ್ಚತುರ್ಥಃ, ಪಞ್ಚಮ-ಸ್ತಂತ್ರೀನಾದಃ, ಷಷ್ಠಸ್ತಾಲನಾದಃ, ಸಪ್ತಮೋ ವೇಣುನಾದಃ, ಅಷ್ಟಮೋ ಭೇರಿನಾದಃ, ನವಮೋ ಮೃದಂಗ ನಾದಃ, ದಶಮೋ ಮೇಘನಾದಃ (16) ನವಮಂ ಪರಿತ್ಯಜ್ಯ ದಶಮಮೇವಾಽಭ್ಯ -ಸೇತ್ (17)**

ತಾ : ಈ ಹಂಸಮಂತ್ರವನ್ನು ಒಂದು ಕೋಟಿ ಸಂಖ್ಯೆಯಷ್ಟು ಜಪಿಸಿದಲ್ಲಿ ಅನಾಹತ ಕಮಲದಲ್ಲಿ ನಾದಬ್ರಹ್ಮವು ಉಂಟಾಗುತ್ತದೆ. ಅನುಭವದಿಂದ ಪ್ರಮಾಣದಿಂದ ಸಾಧಕನು ತಿಳಿದುಕೊಳ್ಳುತ್ತಾನೆ. ಆ ನಾದವು ಬಲಗಿವಿಯಲ್ಲಿ ಹುಟ್ಟುತ್ತದೆ. ಮೊದಲನೆಯದಾದ ಚಿಣಿ, ಎರಡನೆಯ ನಾದ ಚಿಂಚಿಣಿ; ಮೂರನೆಯ ನಾದ ಘಂಟಾನಾದ; ನಾಲ್ಕನೆಯದು ಶಂಖನಾದ; ಐದನೆಯದು ವೀಣಾನಾದ; ಆರನೆಯದು ತಾಳನಾದ; ಏಳನೆಯದು ವೇಣುನಾದ; ಎಂಟನೆಯದು ಭೇರೀನಾದ; ಒಂಬತ್ತನೆಯದು ಮೃದಂಗ ನಾದ; ಹತ್ತನೆಯ ಧ್ವನಿ ಮೇಘನಾದ. ವರಸೆಯಾಗಿ ಒಂಬತ್ತು ನಾದಗಳನ್ನು ಬಿಟ್ಟು ಹತ್ತನೆಯದಾದ ಮೇಘನಾದವನ್ನೇ ಮುಮುಕ್ಷುವಾದವನು ಬ್ರಹ್ಮಭಾವನೆಯಿಂದ ಸರ್ವದಾ ಅಭ್ಯಾಸ ಮಾಡಬೇಕು.

**ಮಂ.ಶ್ಲೋ॥ ಪ್ರಥಮೇ ಚಿಂಚಿಣೀಗಾತ್ರಂ, ದ್ವಿತೀಯೇ ಗಾತ್ರಭಂಜನಮ್, ತೃತೀಯೇ ಭೇದನಂ ಯಾತಿ, ಚತುರ್ಥೇಕಮ್ಪತೇ ಶಿರಃ(18) ಪಞ್ಚಮೇ ಸ್ರವತೀ ತಾಲೂ, ಷಷ್ಠೇಽಮೃತ ನಿಷೇವಣಮ್, ಸಪ್ತಮೇ ಗೂಢವಿಜ್ಞಾನಂ, ಪರಾವಾಚಾ ತಥಾಽಷ್ಟಮೇ (19) ಅದೃಶ್ಯಂ ನವಮೇ ದೇಹಂ, ದಿವ್ಯಂ ಚಕ್ಷುಸ್ತಥಾ ಮಲಮ್, ದಶಮಂ ಚ ಪರಂಬ್ರಹ್ಮ ಭವೇದ್ಬ್ರಹ್ಮಾಽತ್ಮ ಸನ್ನಿಧೌ (20)**

ತಾ : ಪ್ರಥಮನಾದವಾದ 'ಚಿಣಿ' ಎನ್ನುವುದು ಹುಟ್ಟಿದಾಗ ಸಾಧಕನಿಗೆ "ಚಿಂಚಿಣಿ"ಯೆನ್ನುವ ಧ್ವನಿ ಉಂಟಾಗುತ್ತದೆ. ಆಗ ಶರೀರವೆಲ್ಲವೂ ಮುರಿದಂತೆ ಭಾಸವಾಗುವುದು. ಮೂರನೆಯದಾದ ಘಂಟಾನಾದವು ಕೇಳಬಂದಾಗ ಭೇದವುಂಟಾಗುವುದು. ಹೃದಯಕಮಲವು ವಿಕಸಿಸುವುದು.

ನಾಲ್ಕನೆಯದಾದ ಶಂಖ ನಾದವೇರ್ಪಟ್ಟಾಗ ಶಿರಸ್ಸು ಕಂಪಿಸುವುದು. ಐದನೆಯದಾದ ತಂತ್ರೀನಾದವು ಹುಟ್ಟಿದಾಗ ಅಂಗಿಲಿಯು ಸ್ರವಿಸುವುದು. (ನಾಲಗೆ ಸ್ರವಿಸತೊಡಗುವುದು) ಆರನೆಯ ತಾಳವಾದನವು, ಐದನೆಯದಾದ ತಂತ್ರೀನಾದಗಳೆರಡೂ ಪ್ರಾದುರ್ಭವಿಸಿದಾಗ ಚಂದ್ರಸೂರ್ಯ ಮಂಡಲಗಳು ಏಕವಾಗಿ ಸ್ರವಿಸಲು ಪ್ರಾರಂಭಿಸಿದ ಅಮೃತವನ್ನು ಪಾನ ಮಾಡುವನು. ಏಳನೆಯದಾದ ವೇಣುವಾದ ಸಮಯದಲ್ಲಿ ನಿಗೂಢ ಬ್ರಹ್ಮಜ್ಞಾನವು ಉಂಟಾಗುವುದು. ಎಂಟನೆಯದಾದ ಭೇರೀನಾದ ಹುಟ್ಟಿದಾಗ ಪರಾವಾಕ್ಕಿನೊಂದಿಗೆ ಸಂಯೋಗ ಹೊಂದಿದವನಾಗುವನು. ಸರ್ವಜ್ಞನಾಗುವನು. ಒಂಬತ್ತನೆಯದಾದ ಮೃದಂಗ ನಾದವನ್ನು ಕೇಳಿದ ಕೂಡಲೇ ಅದೃಶ್ಯ ದರ್ಶನ. ದಿವ್ಯದರ್ಶನ ಮುಂತಾದವುಗಳಾಗುತ್ತವೆ. ಈಶ್ವರ ಸ್ವರೂಪನೇ ಆಗುತ್ತಾನೆ. ಈ ಒಂಬತ್ತು ನಾದಗಳ ಫಲಿತಾಂಶಗಳ ಬಗ್ಗೆ ಉಪೇಕ್ಷೆಯುಂಟಾದಲ್ಲಿ ಹತ್ತನೆಯದಾದ ಮೇಘನಾದವು ಉಂಟಾಗುವುದು. ಆ ನಾದವನ್ನೇ ಭಾವನೆ ಮಾಡುತ್ತಿದ್ದಲ್ಲಿ, ಪರಬ್ರಹ್ಮ ಸ್ವರೂಪನಾಗುತ್ತಾನೆ.

**ಮಂ.ಶ್ಲೋ|| ತಸ್ಮಾಸ್ಮನೋ ವಿಲೀನೇ ಮನಸಿಗತೇ ಸಂಕಲ್ಪವಿಕಲ್ಪೇ ದಗ್ಧೇ ಪುಣ್ಯಪಾಪೇ ಸದಾಶಿವಃ ಶಕ್ತ್ಯಾಽಽತ್ಮಾ ಸರ್ವತ್ರಾಽವಸ್ಥಿತಃ ಸ್ವಯಂಜ್ಯೋತಿಶ್ಶುದ್ಧೋ ನಿತ್ಯೋ ನಿರಞ್ಜನಶ್ಶಾನ್ತತಮಃ ಪ್ರಕಾಶಯತೀತಿ ವೇದಾನುವಚನಂ ಭವತೀತ್ಯುಪನಿಷತ್ (21)**

**(ಹಂಸೋಪನಿಷತ್ ಸಮಾಪ್ತಾ)**

ತಾ : ಸ್ವಜ್ಞಾನದಿಂದ ಮನಸ್ಸು ನಿರ್ಮೂಲವಾದಾಗ, ಸಂಕಲ್ಪವಿಕಲ್ಪಗಳನ್ನು ಪುಣ್ಯ ಪಾಪಗಳನ್ನು ಸಮ್ಯಕ್ ಜ್ಞಾನಾಗ್ನಿಯು ದಹಿಸಲ್ಪಡುತ್ತದೆ. ಆಗ ಸದಾಶಿವ ಬ್ರಹ್ಮವು ವ್ಯಕ್ತಾ ವ್ಯಕ್ತ ಪ್ರಪಂಚದಲ್ಲಿ ಸಚ್ಚಿದಾನಂದಾತ್ಮಕನಾಗಿ ಪ್ರಕಾಶಿಸುತ್ತಿದ್ದಾನೆ. ಶುದ್ಧನು, ನಿತ್ಯನು, ನಿರಂಜನನು ಶಾಂತತಮನಾಗಿ, ಪ್ರಕಾಶಿಸುತ್ತಿರುವನೆಂದು, ಉಪನಿಷತ್ ಸಿದ್ಧಾಂತ, ವೇದಾನುವಚನ.

**ಶಾಂತಿ ಮಂತ್ರ|| ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ| ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ|| ಓಂ ಶಾಂತಿಃ ಶಾಂತಿಃ ಶಾಂತಿಃ**





# ಆರುಣಿಕೋಪನಿಷತ್ತು-16

(ಸಾಮವೇದಾಂತರ್ಗತ)

ಶಾಂತಿ ಮಂತ್ರ॥ ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್ಪ್ರಾಣಶ್ಚಕ್ಷುಶ್ರೋತ್ರಮಥೋ ಬಲ ಮಿಂದ್ರಿಯಾಣಿಚ ಸರ್ವಾಣಿ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು; ತದಾತ್ಮನಿ: ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು.
ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ॥ ಆರುಣಿಕಾಖ್ಯೋಪನಿಷತ್ ಖ್ಯಾತಂ ಸಭ್ಯಾಸಿನೋಽಮತಾಃ ।
ಯತ್ ಪ್ರಬೋಧಾದ್ಯಾತಿ ಮುಕ್ತಿಂ, ತದ್ರಾಮಬ್ರಹ್ಮಾ ಮೇ ಗತಿಃ ॥

## ಪ್ರಥಮ ಖಂಡ

ಮಂ.ಶ್ಲೋ॥ ಓಂ ಆರುಣಿಃ ಪ್ರಾಜಾಪತ್ಯಃ ಪ್ರಜಾವತೇರ್ಲ್ಲೋಕಂ ಜಗಾಮ, ತಂ ಗತ್ವೋವಾಚ, ಕೇನ ಭಗವನ್ಕರ್ಮಾಣ್ಯಶೇಷತೋ ವಿಸೃಜಾಮೀತಿ (1) ತಂ ಹೋವಾಚ ಪ್ರಜಾಪತಿಃ ತವ ಪುತ್ರಾನ್ ಭ್ರಾತೃನ್ ಬಂಧ್ವಾದೀಂಚ್ಛಿಖಾಂ ಯಜ್ಞೋಪವೀತಂ ಯಾಗಂ ಚ ಸೂತ್ರಂ ಚ ಸ್ವಾಧ್ಯಾಯಂ ಚ ಭೂಲೋಕ ಭುವರ್ಲ್ಲೋಕ ಸುವರ್ಲ್ಲೋಕ ಮಹರ್ಲ್ಲೋಕ ಜನೋಲೋಕ ತಮೋಲೋಕ ಸತ್ಯಲೋಕಂ ಚಾತಲ ವಿತಲ ಸುತಲ ಪಾತಾಳ ರಸಾತಲ ತಲಾತಲ ಮಹಾತಲ ಬ್ರಹ್ಮಾಂಡಂ ಚ ವಿಸೃಜೇತ್ (2) ದಂಡಮಾಚ್ಛಾದನಂ ಕೌಪೀನಂ ಚ ಪರಿಗ್ರಹೇತ್, ಶೇಷಂ ವಿಸೃಜೇಚ್ಛೇಷಂ ವಿಸೃಜೇದಿತಿ (3)

ತಾ : ಪ್ರಜಾಪತಿಯ ಮಗನಾದ ಆರುಣಿಮುನಿ ತನ್ನ ತಂದೆಯಾದ ಪ್ರಜಾಪತಿಯ ಲೋಕಕ್ಕೆ ಹೋದನು ಅಲ್ಲಿ ಪ್ರಜಾಪತಿಯನ್ನು ಸಮೀಪಿಸಿ ಆರುಣಿಮುನಿ ಹೀಗೆ ಪ್ರಶ್ನಿಸಿದನು, ಪೂಜ್ಯನೇ ಯಾವ ಉಪಾಯದಿಂದ ಸಕಲ ಕರ್ಮಗಳನ್ನು ಬಿಡಬಲ್ಲೆನು? ಪ್ರಜಾಪತಿ ಈ ರೀತಿಯಾಗಿ ಹೇಳಿದ; ನಿನ್ನ ಪುತ್ರರು ಮುಂತಾದವರನ್ನು ಶಿಖೆಯನ್ನು, ಯಜ್ಞೋಪವೀತವನ್ನು ಯಾಗವನ್ನು ವೇದಶಾಸ್ತ್ರ-ಗಳನ್ನು ಭೂಲೋಕ ಸತ್ಯಲೋಕಗಳನ್ನು ಅತಲ ವಿತಲ ಸುತಲ ಪಾತಾಳ ರಸಾತಲ ತಲಾ ತಲ ಮಹಾತಲ ಬ್ರಹ್ಮಾಂಡ ಲೋಕಗಳನ್ನು ಬಿಟ್ಟುಬಿಡಬೇಕು. ದಂಡವನ್ನು, ಕೌಪೀನವನ್ನು, ಕಾಷಾಯ ವಸ್ತ್ರವನ್ನು, ಪರಿಗ್ರಹಿಸಬೇಕು. ಮಿಕ್ಕೆಲ್ಲವನ್ನೂ ಪರಿತ್ಯಜಿಸಬೇಕು.

## ದ್ವಿತೀಯ ಖಂಡ

ಮಂ.ಶ್ಲೋ॥ ಗೃಹಸ್ಥೋ ಬ್ರಹ್ಮಚಾರೀ ವಾನಪ್ರಸ್ಥಾವಾ ಲೌಕಿಕಾಗ್ನಿನುದರಾಗ್ನೌ ಸಮಾರೋಪಯೇತ್ (1) ಗಾಯತ್ರೀಂ ಚ ಸ್ವವಾಗಗ್ನೌ ಸಮಾರೋಪಯೇತ್ (2) ಉಪವೀತಂ ಭೂಮಾವಪ್ಸು

**ವಾ ವಿಸೃಜೇತ್ (3) ಕುಟೀಚರೋ ಬ್ರಹ್ಮಚಾರೀ ಕುಟುಂಬಂ ವಿಸೃಜೇತ್ (4) ಪಾತ್ರಂ ವಿಸೃಜೇತ್(5) ಪವಿತ್ರಂ ವಿಸೃಜೇತ್ (6) ದಂಡಾನ್ಲೋಕಾನ್ವಿಸೃಜೇದಿತಿ ಹೋವಾಚ (7) ಅತ ಊರ್ಧ್ವಮಮಂತ್ರವದಾಚರೇತ್ (8) ಊರ್ಧ್ವಗಮನಂ ವಿಸೃಜೇತ್ (9) ಔಷಧವ -ದಶನಮಾಚರೇತ್ (10) ತ್ರಿಸಂಧ್ಯಾದೌ ಸ್ನಾನಮಾಚರೇತ್ (11) ಸಂಧಿಂ ಸಮಾಧಾ-ವಾತ್ಮನ್ಯಾಚರೇತ್(12) ಸರ್ವೇಷು ವೇದೇಷ್ವಾರಣ್ಯಕಮಾವರ್ತಯೇದುಪನಿಷದಮಾವರ್ತಯೇ -ದುಪನಿಷದಮಾವರ್ತಯೇದಿತಿ (13)**

ತಾ: ಗೃಹಸ್ಥನಾಗಲಿ, ಬ್ರಹ್ಮಚಾರಿಯಾಗಲಿ, ವಾನಪ್ರಸ್ಥನಾಗಲಿ, ಲೋಕಫಲಪ್ರದವಾದ ಅಗ್ನಿಗಳನ್ನು ಜಠರಾಗ್ನಿಯಲ್ಲಿ ಸಮಾರೋಪಣ ಮಾಡಬೇಕು, ಯಜ್ಞೋಪವೀತವನ್ನು ಭೂಮಿಯಲ್ಲಾಗಲೀ ಜಲದಲ್ಲಾಗಲೀ ವಿಸರ್ಜಿಸಬೇಕು. ಬಹೂದಕನು, ಬ್ರಹ್ಮಚರ್ಯಾಶ್ರಮ ಕುಟುಂಬವನ್ನು ಪರಿತ್ಯಜಿಸ ಬೇಕು. ಭಿಕ್ಷಾಪಾತ್ರೆಯನ್ನು ಬಿಡಬೇಕು ವಸ್ತ್ರವನ್ನು ಪರಿತ್ಯಜಿಸಬೇಕು. ಮೂರು ದಂಡಗಳನ್ನು ಲೌಕಿಕಾಗ್ನಿಗಳನ್ನು ಪರಿತ್ಯಜಿಸಬೇಕು. ಈ ರೀತಿಯಾಗಿ (ಪ್ರಜಾಪತಿ) ಹೇಳಿರುವನು ಹೀಗೆ ಪರಿತ್ಯಜಿ-ಸಿದ ನಂತರ ಮಂತ್ರಗಳು ಇಲ್ಲದೆಯೇ ಎಲ್ಲ ಕರ್ಮಗಳನ್ನು ಆಚರಿಸಬೇಕು. ಊರ್ಧ್ವಲೋಕ ಪ್ರಾಪ್ತಿಯನ್ನುಂಟುಮಾಡುವ ಕರ್ಮಗಳನ್ನು ಪರಿತ್ಯಜಿಸಬೇಕು. ಅನ್ನವನ್ನು ಔಷಧದಂತೆ ಭುಜಿಸ-ಬೇಕು ಮೂರು ಸಂಧ್ಯೆಗಳಲ್ಲಿ ಸ್ನಾನವನ್ನು ಮಾಡಬೇಕು ಸಂಧ್ಯಾವಂದನೆ ಕರ್ಮವನ್ನು ಸಮಾಧಿ-ರೂಪವಾದ ಆತ್ಮದಲ್ಲಿ ಆಚರಿಸಬೇಕು. ಸಕಲ ವೇದಗಳಲ್ಲಿನ ಅರಣ್ಯಕಗಳನ್ನು ಪಠಿಸಬೇಕು ಉಪನಿಷ-ತ್ತನ್ನು ಪಠಿಸಬೇಕು (ಔಷಧವದಶನಂ ಎಂಬ ಮಂತ್ರ, ಸನ್ಯಾಸೋಪನಿಷತ್ 1-2 ರಲ್ಲಿ ಕೂಡಾ ಇದೆ.)

# ತೃತೀಯ ಖಂಡ

**ಮಂ.ಶ್ಲೋ॥ ಖಲ್ವಹಂ ಬ್ರಹ್ಮ, ಸೂಚನಾತ್ಸೂತ್ರಂ ಬ್ರಹ್ಮಸೂತ್ರಮಹಮೇವ ವಿದ್ವಾನ್, ತ್ರಿವೃತ್ಸೂತ್ರಂ, ತ್ಯಜೇದ್ವಿದ್ವಾನ್ಯ ಏವಂ ವೇದ ಸನ್ನ್ಯಸ್ತಂ ಮಯಾ ಸನ್ನ್ಯಸ್ತಂ ಮಯಾ ಸನ್ನಸ್ತಂ ಮಯೇತಿ ತ್ರಿರುಕ್ತ್ವಾಽಭಯಂ ಸರ್ವಭೂತೇಭ್ಯೋ ಮತ್ತಃ ಸರ್ವಂ ಪ್ರವರ್ತತೇ (1) ಸಖಾಮಾಗೋಪಾ ಯೋಽಜಸ್ಸಖಾ ಯೋಽಸೀಂದ್ರಸ್ಯ ವಜ್ರೋಽಸಿ ವಾರ್ತ್ರಘ್ನಶ್ಶರ್ಮಮೇ ಭವ ಯತ್ಪಾಪಂ ತನ್ನಿವಾರಯೇತಿ (2) ಅನೇನ ಮಂತ್ರೇಣ ಕೃತಂ ವೈಣವಂ ದಂಡಂ ಕೌಪೀನಂ ಪರಿಗ್ರಹೇದೌಷಧವದಶನಮಾಚರೇದೌಷಧವದಶನಂ ಪ್ರಾಶ್ನೀಯಾದ್ಯಥಾಲಾಭಮಶ್ನೀ-ಯಾತ್ (3) ಬ್ರಹ್ಮಚರ್ಯಮಹಿಂಸಾಂ ಚಾಪರಿಗ್ರಹಂಚ ಸತ್ಯಂ ಚ ಯತ್ನೇನ ಹೇ ರಕ್ಷತ ಹೇ ರಕ್ಷತ ಹೇ ರಕ್ಷತ ಇತಿ (4)**

ತಾ : ನಾನೇ ಬ್ರಹ್ಮವಾಗುತ್ತಿದ್ದೇನೆ ನಿಶ್ಚಯವನ್ನು ಸೂಚಿಸುವುದರಿಂದ ಸೂತ್ರ ಭೂತವು ಬ್ರಹ್ಮವು. ಸೂತ್ರ ರೂಪವಾದ ಬ್ರಹ್ಮನು ನಾನೇ. ಹೀಗೆ ಅರಿತುಕೊಂಡ ವಿದ್ವಾಂಸನು ತ್ರಿವೃತ್‌ಸೂತ್ರವನ್ನು ಪರಿತ್ಯಜಿಸಬೇಕು. ಯಾವ ವಿದ್ವಾಂಸನು ಈ ರೀತಿಯಾಗಿ ತಿಳಿಯುತ್ತಾನೋ ಆತನು "ಮಯಾ-ಸನ್ಯಸ್ತಂ" ಎಂದು ಮೂರು ಸಲ ಹೇಳಿ ಸಮಸ್ತ ಭೂತಗಳಿಗೂ ನನ್ನಿಂದ ಅಭಯವುಂಟಾಗಲಿ ಎಂದು ಹೇಳಬೇಕು. ನನ್ನಿಂದಲೇ ಸಮಸ್ತ ಪ್ರಕೃತಿಯೂ ಪ್ರವರ್ತಿಸುತ್ತದೆ. ಎಲೈ ದಂಡವೇ! ನೀನು

ನನಗೆ ಮಿತ್ರನು, ಅಂತಹ ಭಾವನೆಯಿಂದ ನಿನ್ನನ್ನು ಪರಿಗ್ರಹಸುತ್ತಿದ್ದೇನೆ. ನನ್ನನ್ನು ರಕ್ಷಿಸು. ದುಷ್ಟ ಜಂತುಗಳಿಂದ ದುಷ್ಪ್ರವೃತ್ತಿಯುಂಟಾಗದಂತೆ ರಕ್ಷಿಸು. ನೀನು ಓಜಂಬನು ನೀನು ಇಂದ್ರನ ವಜ್ರ (ವಜ್ರಾಯುಧ) ದಂತಹವನು. ವೃತ್ರಾಸುರನನ್ನು ಸಂಹರಿಸಿರುವೆ. ಅಂತಹ ನೀನು ನನಗೆ ಸುಖವ-ನ್ನುಂಟು ಮಾಡು ನನ್ನಲ್ಲಿರುವ ಪಾಪವನ್ನು ಹೋಗಲಾಡಿಸು. ಈ ಮಂತ್ರವನ್ನು ಧಾರಣೆ ಮಾಡಿ ಬಲಗೈಯಲ್ಲಿ ವೇಣುದಂಡವನ್ನು ಧರಿಸಬೇಕು. ಕೌಪೀನವನ್ನು ಧರಿಸಬೇಕು. ಔಷಧದಂತೆ ಅನ್ನವನ್ನು ತಿನ್ನಬೇಕು. ಯಥಾಪ್ರಾಪ್ತಿಯಾದ ಅನ್ನವನ್ನು ತಿನ್ನಬೇಕು ಬ್ರಹ್ಮಚರ್ಯ ನಿರ್ವಹಣಾರ್ಥವಾಗಿ ಅಹಿಂಸಾ ಪರಿಪಾಲಕನಾರ್ಥವಾಗಿ, ಅಪರಿಗ್ರಹಾರ್ಥವಾಗಿ, ಸತ್ಯ ವಚನಾರ್ಥವಾಗಿ ಈ ನಿರ್ಣಯಗಳು, ಜನಗಳೇ! ನೀವು ಇವನ್ನು ಪರಿಪಾಲಿಸಿರಿ!

## ಚತುರ್ಥ ಖಂಡ

**ಮಂ.ಶ್ಲೋ॥ ಅಥಾತಃ ಪರಮಹಂಸ ಪರಿವ್ರಾಜಕಾನಾಮಾಸನಶಯನಾದಿಕಂ ಭೂಮೌ ಬ್ರಹ್ಮಚಾರಿಣಾಂ ಮೃತ್ಪಾತ್ರಮಲಾಬುಪಾತ್ರಂ ದಾರುಪಾತ್ರಂ ವೇಣುಪಾತ್ರಂ ವಾ ಯತೀನಾಂ ಕಾಮಕ್ರೋಧ-ಹರ್ಷರೋಷಲೋಭಮೋಹಮದಮಾತ್ಸರ್ಯದಂಭದರ್ಪೇಚ್ಛಾಸೂಯಾಮಮತ್ವಾ-ಹಂಕಾರಾದೀನಪಿ ಪರಿತ್ಯಜೇತ್ (1) ವರ್ಷಾಸು ಧ್ರುವಶಿಲೋಽಷ್ಟೌ ಮಾಸ್ಯೇಕಾಕೀ ಯತಿಶ್ಚರೇ-ದ್ವಾವೇವಾಚರೇದ್ವಾವೇವಾಚರೇದಿತಿ**

ತಾ : ಇಷ್ಟು ಮಾತ್ರದಿಂದ ಪುರುಷಾರ್ಥವು ಸಿದ್ಧಿಸುವುದಿಲ್ಲ. ಪರಮಹಂಸ ಪರಿಪ್ರಾಜಕರ ದೃಶ್ಯಧರ್ಮವನ್ನು ಹೇಳಲಾಗುತ್ತಿದೆ ಭೂಮಿಯ ಮೇಲೆಯೇ ಆಸನ ಶಯ್ಯಾದಿಗಳನ್ನು ಮಾಡಬೇಕು. ಬ್ರಹ್ಮಚಾರಿಗಳು (ಯತಿಗಳು) ಮಣ್ಣಿನ ಪಾತ್ರೆಯನ್ನಾಗಲೀ, ಸೋರೆಕಾಯಿ ಬುರುಡೆಯನ್ನಾಗಲೀ, ದಾರುಪಾತ್ರೆಯನ್ನಾಗಲೀ ಉಪಯೋಗಿಸಬೇಕು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ದಂಭ, ದರ್ಪ, ಅಸೂಯೆ, ಮಮತ್ವ ಅಹಂಕಾರ ಅಸತ್ಯವಚನ ಮುಂತಾದವುಗಳನ್ನು ಪರಿತ್ಯಜಿಸಬೇಕು. ವರ್ಷಾಕಾಲದಿಂದ ನಾಲ್ಕು ತಿಂಗಳು ಧ್ರುವಶೀಲನಾಗಿರಬೇಕು. ಉಳಿದ 8 ತಿಂಗಳು-ಗಳು ಏಕಾಂಗಿಯಾಗಿ ಜಿತೇಂದ್ರಿಯರಾಗಿ ಪರ್ಯಟನೆ ಮಾಡಬೇಕು. ಇಬ್ಬರು ಸೇರಿಯಾದರೂ ಪರ್ಯಟನೆ ಮಾಡಬೇಕು.

## ಪಂಚಮ ಖಂಡ

**ಮಂ.ಶ್ಲೋ॥ ಸಖಲು ವೇದಾರ್ಥಂ ಯೋ ವಿದ್ವಾನ್ ಸೋಪನಯನಾದೂರ್ಧ್ವಮೇತಾನಿ ಪ್ರಾಗ್ವಾ ತ್ಯಜೇತ್ (1) ಪಿತರಂ ಪುತ್ರಮಗ್ನಿಮುಪವೀತಂ ಕರ್ಮ ಕಳತ್ರಂ ಚಾನ್ಯದಪೀಹ ಯತಯೋ ಹಿ ಭಿಕ್ಷಾರ್ಥಂ ಗ್ರಾಮಂ ಪ್ರವಿಶಂತಿ ಪಾಣಿಪಾತ್ರಮುದರ ಪಾತ್ರಂ ವಾ (2) ಓಂ ಹಿ ಓಂ ಹಿ ಓಂ ಹೀತ್ಯೇತದುಪನಿಷದಂ ವಿನ್ಯಸೇತ್ (3) ಖಲ್ವೇತದುಪನಿಷದಂ ವಿದ್ವಾನ್ ಯ ಏವಂ ವೇದ (4) ಪಾಲಾಶಂ ಬೈಲ್ವಮೌದುಂಬರಮಶ್ವತ್ಥಂ ದಂಡಂ ಮೌಂಜೀಂ ಮೇಖಲಾಂ ಯಜ್ಞೋಪವೀತಂ ಚ ತ್ಯಕ್ತ್ವಾ ಶೂರೋ ಯ ಏವಂವೇದ (5) ತದ್ವಿಷ್ಣೋಃ**

**ಪರಮಂಪದಗ್ಂ ಸದಾ ಪಶ್ಯಂತಿ ಸೂರಯಃ, ದಿವೀವಚಕ್ಷುರಾತತಂ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಗ್ಂಸ ಸ್ಸಮಿಂಧತೇ, ವಿಷ್ಣೋರ್ಯತ್ಪರಮಂಪದಮಿತಿ (6) ಏವಂ ನಿರ್ವಾಣಾನುಶಾಸನಂ ವೇದಾನುಶಾಸನಂ ವೇದಾನುಶಾಸನಮಿತ್ಯುಪನಿಷತ್ (7)**

**(ಆರುಣಿಕೋಪನಿತ್ಸಮಾಪ್ತಾ)**

ತಾ : ಯಾರು ಯಥಾರ್ಥ ವೇದಾರ್ಥವನ್ನು ತಿಳಿದುಕೊಳ್ಳುವನೋ ಅವನು ಉಪನಯನ ಸಂಸ್ಕಾರವಾದ ಮೇಲೆ ಕಾಮ, ಕ್ರೋಧಾದಿ ದುರ್ಗುಣಗಳನ್ನು ಪರಿತ್ಯಜಿಸಬೇಕು ಜನ್ಮಾಂತರ ಸುಕೃತದಿಂದ ಬಾಲ್ಯದಲ್ಲೇ ಆತ್ಮಜ್ಞಾನವು ಉಂಟಾದಲ್ಲಿ, ಉಪನಯನ ಸಂಸ್ಕಾರವು ಆಗುವುದಕ್ಕೆ ಮುಂಚೆಯೇ ಸನ್ಯಾಸ ತೆಗೆದುಕೊಳ್ಳಬೇಕು. ತಂದೆಯನ್ನು, ಪುತ್ರನನ್ನು. ವೈದಿಕ ಲೋಕಾಗ್ನಿಯನ್ನು, ಯಜ್ಞೋಪವೀತವನ್ನು, ಶ್ರೌತಸ್ಮಾರ್ತ ಕರ್ಮಗಳನ್ನು, ಪತ್ನಿಯನ್ನು ಇತರ ಗೃಹಾದಿಕಗಳನ್ನು ಪರಿತ್ಯಜಿಸಬೇಕು. ಯತಿಗಳಾಗಿ ಹಸ್ತವೇ ಪಾತ್ರೆಯಾಗಿಯೂ ಉದರವೇ ಪಾತ್ರೆಯಾಗಿ ಉಳ್ಳವರಾಗಿ ಭಿಕ್ಷಾರ್ಥಿಗಳಾಗಿ ಗ್ರಾಮಗಳನ್ನು ಸುತ್ತುತ್ತಿದ್ದಾರೆ. ಸಮಸ್ತ ವಾಗ್ಜಾತವು ಓಂಕಾರವೇ. ಓಂಕಾರವೇ ಸರ್ವವು. ಓಂಕಾರವೇ ಸರ್ವವೆಂದು ಭಾವಿಸಿ ಉಪನಿಷತ್ತನ್ನು ಆಯಾ ಅಂಗಗಳಲ್ಲಿ ಪ್ರಯೋಗಿಸ-ಬೇಕು. ಯಾರು ಈ ರೀತಿಯಾಗಿ ಪ್ರಣವವನ್ನು ತಿಳಿಸಿಕೊಳ್ಳುವನೋ ಆತನೇ ವಿದ್ವಾಂಸನು, ಇದು ನಿಶ್ಚಯ. ಬ್ರಹ್ಮಚರ್ಯದಲ್ಲೇ ಸನ್ಯಾಸ ಪಡೆದವನು ಮುತ್ತಗದ ಕೋಲಿನಿಂದಾಗಲಿ, ಬಿಲ್ವದಿಂದಾಗಲೀ, ಅರಳೀಗಿಡದ ಕೋಲಿನಿಂದಾಗಲೀ, ಔದುಂಬರ (ಅತ್ತಿ) ಕೋಲಿನಿಂದಾಗಲೀ ಮಾಡಿದ ದಂಡವನ್ನು ಕೃಷ್ಣಾಜಿನವನ್ನು ತಾಳೆಯ ನಾರಿನಿಂದ ಹೊಸೆದ ಹಗ್ಗವನ್ನು ಯಜ್ಞೋಪವೀತ-ವನ್ನು ವಿಸರ್ಜಿಸಿ ಅಕಂಪಿತನಾಗಬೇಕು. ಯಾರು ಈ ವಿಧವಾಗಿ ತಿಳಿದುಕೊಳ್ಳುವನೋ (ಆತ ಈ ಕೆಳಗೆ ತಿಳಿಸಿರುವ ಸ್ಥಿತಿಯನ್ನು ಹೊಂದುತ್ತಾನೆ). ಆ ವಿಷ್ಣು (ಪರಮಾತ್ಮನು) ವಿನ ಪರಮಪದವನ್ನು ಸನ್ಯಾಸಿಗಳು ಸದಾ ದರ್ಶಿಸುತ್ತಿರುತ್ತಾರೆ ಸ್ವಯಂಪ್ರಕಾಶ ಸ್ವರೂಪದಲ್ಲಿ ಆನಂದಿಸುತ್ತಿರುತ್ತಾರೆ. ಆ ವಿಷ್ಣು ಪದವು ಸ್ವಯಂಪ್ರಕಾಶವಾದುದು, ವಿಸ್ತೃತವಾದುದು. ಕಾಮ ಕ್ರೋಧಾದಿ ರಹಿತರೂ ಅಜ್ಞಾನ ನಿದ್ರಾರಹಿತರೂ ಆದ ವೇದವೇತ್ತರು ಸ್ಪಷ್ಟವಾಗಿ ಹೇಳುತ್ತಿದ್ದಾರೆ. ಆ ವಿಷ್ಣುವಿನ ಪರಮಪದವು ಸರ್ವವೇದ ಪುರಾಣಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇದು ಉಪನಿಷದ್ರಹಸ್ಯ ಈ ರೀತಿಯಾಗಿ ನಿರ್ವಾಣಾನುಶಾಸನ, ವೇದಶಾಸನ ಸಮಸ್ತವಾಗಿರುವಂತಹುದಾಗಿದೆ. (ಆರುಣೇಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ॥ ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋಃ ಬಲ ಮಿಂದ್ರಿಯಾಣಿಚ ಸರ್ವಾಣಿಃ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ವನಿರಾಕರಣಂ ಮೇऽಸ್ತು; ತದಾತ್ಮನಿ: ನಿರತೇಃ ಯ ಉಪನಿಷತ್ಸು ಧರ್ಮಾಃ ತೇಃ ಮಯಿ ಸಂತು ತೇಃ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ**



# ಗರ್ಭೋಪನಿಷತ್ತು - 17

(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

**ಮಂ.ಶ್ಲೋ॥ ಯದ್ಗರ್ಭೋಪನಿಷದ್ವೇದ್ಯಂ ಗರ್ಭಸ್ಯ ಸ್ವಾತ್ಮಬೋಧಕಮ್ । ಶರೀರಾಪಹ್ನವಾತ್ಸಿದ್ಧಂ ಸ್ವಮಾತ್ರಂ ಕಲಯೇ ಹರಿಮ್ ॥**

**ಮಂ.ಶ್ಲೋ॥ ಓಂ ಪಂಚಾತ್ಮಕಂ ಪಂಚಸುವರ್ತಮಾಸಂ ಷಡಾಶ್ರಯಂ ಷಡ್ಗುಣಯೋಗಯುಕ್ತಮ್, ತಂ ಸಪ್ತಧಾತುಂ ತ್ರಿಮಲಂ ತ್ರಿಯೋನಿಂ ಚತುರ್ವಿಧಾಹಾರಮಯಂ ಶರೀರಮ್ (1) ಭವತಿ ಪಂಚಾತ್ಮಕಮಿತಿ ಕಸ್ಮಾತ್ (2) ಪೃಥಿವ್ಯಾಪಸ್ತೇಜೋವಾಯುರಾಕಾಶಮಿತ್ಯಸ್ಮಿನ್ ಪಂಚಾತ್ಮಕೇ ಶರೀರೇ (3) ಕಾ ಪೃಥಿವಿ, ಕಾ ಆಪಃ, ಕಿಂ ತೇಜಃ, ಕೋ ವಾಯುಃ, ಕಿಮಕಾಶಮಿತ್ಯಸ್ಮಿನ್ಪಂಚಾತ್ಮಕೇ ಶರೀರೇ (4)**

ತಾ : ಈ ದೇಹವು ಐದು ವಸ್ತುಗಳನ್ನೊಳಗೊಂಡಿದೆ. ಐದು ವಸ್ತುಗಳಲ್ಲಿ ಇದೆ. ಆರನ್ನು ಆಶ್ರಯಿಸಿದೆ. ಆರು ಗುಣಗಳಿಂದ ಕೂಡಿದೆ. ಏಳು ಧಾತುಗಳನ್ನು, ಮೂರು ಮಲಗಳನ್ನು, ಮೂರು ಕಾರಣಗಳನ್ನು ಹೊಂದಿದೆ. ನಾಲ್ಕು ವಿಧವಾದ ಆಹಾರಗಳನ್ನು ಹೊಂದಿದೆ ಯಾವ ರೀತಿಯಲ್ಲಿ ಐದನ್ನು ಮುಖ್ಯವಾಗಿ ಹೊಂದಿದೆ? ಈ ಶರೀರದಲ್ಲಿ ಪೃಥಿವಿ. ಜಲ, ಅಗ್ನಿ, ವಾಯು, ಆಕಾಶವೆನ್ನುವ ಈ ಪಂಚಭೂತಗಳು ಪ್ರಧಾನವಾಗಿವೆ. ಈ ದೇಹದಲ್ಲಿ ಪೃಥಿವಿ ಯಾವುದು? ಜಲವ್ಯಾವುದು? ತೇಜಸ್ಸು ಯಾವುದು? ವಾಯುವು ಯಾವುದು? ಆಕಾಶವ್ಯಾವುದು?

**ಮಂ.ಶ್ಲೋ॥ ಯತ್ಕಠಿನಂ ಸಾ ಪೃಥಿವೀ, ಯದ್ದ್ರವಂ ತದಾಪೋ, ಯದುಷ್ಣಂ ತತ್ತೇಜೋ, ಯಸ್ಸಂಚರತಿ ಸ ವಾಯುರ್ಯತ್ಸುಷಿರಂ ತದಾಕಾಶಮಿತ್ಯುಚ್ಯತೇ (5) ತತ್ರ ಪೃಥಿವೀ ಧಾರಣೇ, ಆಪಃ ಪಿಂಡೀಕರಣೇ ತೇಜೋ ರೂಪದರ್ಶನೇ, ವಾಯುರ್ಗಮನೇ, ಆಕಾಶಮವಕಾಶ ಪ್ರದಾನೇ, ಶ್ರೋತ್ರಂ ಶಬ್ದೇ, ತ್ವಕ್‌ಸ್ಪರ್ಶೇ, ಚಕ್ಷೂ ರೂಪೇ, ಜಿಹ್ವಾ ರಸೇ, ಘ್ರಾಣಂ ಗಂಧೇ, ವಾಗ್ವಚನೇ, ಪಾಣಿರಾದಾನೇ, ಪಾದೋ ಗಮನೇ, ಪಾಯುರ್ವಿಸರ್ಗೇ, ಉಪಸ್ಥ ಆನಂದೇ ವರ್ತತೇ (6)**

ತಾ : ಕಠಿಣವಾಗಿರುವುದು ಪೃಥಿವಿ; ದ್ರವವಾಗಿರುವುದು ಜಲ, ಬಿಸಿಯಾಗಿರುವುದು ಅಗ್ನಿ; ಸಂಚರಿಸುತ್ತಿರುವುದು ವಾಯು; ದ್ವಾರವಾಗಿರುವುದು ಆಕಾಶ ಎಂದು ಹೇಳಲಾಗುತ್ತಿದೆ. ಪಂಚಭೂತ-ಗಳಲ್ಲಿ ಭೂಮಿ ಧರಿಸುವುದರಲ್ಲಯೂ ಜಲವು ಮುದ್ದೆಯಾಗಿ ಮಾಡುವುದರಲ್ಲಿಯೂ, ಅಗ್ನಿಯು ರೂಪಗಳನ್ನು ತೋರುವುದರಲ್ಲಿಯೂ, ವಾಯುವು ಸಂಚರಿಸುವುದರಲ್ಲಿಯೂ, ಆಕಾಶವು ಅವಕಾಶ-

ವನ್ನು ಕೊಡುವುದರಲ್ಲಿಯೂ, ಶ್ರೋತ್ರವು ಶ್ರವಣ ಮಾಡುವುದರಲ್ಲಿಯೂ ತ್ವಕ್ಕು ಸ್ಪರ್ಶಿಸುವುದರಲ್ಲಿಯೂ ನೇತ್ರವು ರೂಪದಲ್ಲಿಯೂ ನಾಲಿಗೆ ರಸವನ್ನು ಗ್ರಹಿಸುವುದರಲ್ಲಿಯೂ, ಮೂಗು ವಾಸನೆ ನೋಡುವುದರಲ್ಲಿಯೂ, ವಾಕ್ಕು ಸಂಭಾಷಿಸುವುದರಲ್ಲಿಯೂ, ಹಸ್ತವು ಎತ್ತುವುದಕ್ಕಾಗಿಯೂ, ಪಾದವು ನಡೆಯುವುದಕ್ಕಾಗಿಯೂ, ಪಾಯುವು ಬಿಡುವುದಕ್ಕಾಗಿಯೂ ಉಪಸ್ಥವು ಆನಂದಿಸುವುದಕ್ಕಾಗಿ ಪ್ರವರ್ತಿಸುತ್ತಿರುತ್ತವೆ.

**ಮಂ.ಶ್ಲೋ॥ ಬುದ್ಧ್ಯಾ ಬುಧ್ಯತಿ ನಿಶ್ಚಿನೋತಿ; ಮನಸಾ ಸಂಕಲ್ಪಯತಿ ವಿಕಲ್ಪಯತಿ ಚ, ಚಿತ್ತೇನ ಸಂಜಾನಾ-ತ್ಯಹಂಕಾರೇಣಾಹಂಕರೋತಿ, ತಾನಿ ತಾನಿ ತತ್ತದ್ವಿಷಯೇಷು ವರ್ತಂತೇ (7) ಕುತಷ್ಷಡಾ-ಶ್ರಯಮಿತಿ, ಷಡ್ವೈ ರಸಾ, ಮಧುರಾಮ್ಲಲವಣಕಟುಕಷಾಯತಿಕ್ತಾಸ್ತಾನಾಶ್ರಯತೇ ತೈರಪ್ಯಾಶ್ರಿತಮ್ (8)**

ತಾ : ಬುದ್ಧಿಯಿಂದ ಗ್ರಹಿಸುತ್ತಿದ್ದಾನೆ, ನಿಶ್ಚಯಿಸುತ್ತಾನೆ. ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡುತ್ತಾನೆ. ಸಂಶಯ ಪಡುತ್ತಾನೆ. ಚಿತ್ತದಲ್ಲಿ ದೃಢವಾಗಿ ತಿಳಿದುಕೊಳ್ಳುತ್ತಾನೆ. ಅಹಂಕಾರದಿಂದ ಗರ್ವವನ್ನು ಹೊಂದಿರುತ್ತಾನೆ. ಅವೆಲ್ಲವೂ ಅವನವನ ವಿಷಯದಲ್ಲಿರು(ವಂತಹ) ವುವು. ದೇಹವು ಆರನ್ನೂ ಆಶ್ರಯಿಸಿ ಇರುವುದು ಹೇಗೆ? ಷಡ್ರಸಗಳು ಅವು ಯಾವುದೆಂದರೆ ಸಿಹಿ, ಹುಳಿ, ಉಪ್ಪು, ಕಾರ, ಒಗರು, ಕಹಿ ಎನ್ನುವ ಇವುಗಳನ್ನು ಆಶ್ರಯಿಸಿ ಇರುತ್ತವೆ.

**ಮಂ.ಶ್ಲೋ॥ ಷಡ್ವೈ ಭಾವವಿಕಾರಾ, ಅಸ್ತಿ ಜಾಯತೇ ವರ್ಧತೇ ಪರಿಣಮತೇ ಅಪಕ್ಷೀಯತೇ ವಿನಶ್ಯ-ತೀತಿ ಭವತಿ ವಿಕ್ರಿಯತೇ ಚ (9) ಷಡ್ವೈ ಚಕ್ರಾಣಿ, ಮೂಲಾಧಾರ ಸ್ವಾಧಿಷ್ಟಾನ ಮಣಿಪೂರ-ಕಾಗ್ನೇಯಾನಾಹತ ವಿಶುದ್ಧಾನಿ, ತತ್ಥಮನ್ಯಾಶ್ರಿತಮ್ (10) ಷಡ್ಭಾವಗುಣಾಃ, ಕಾಮಾದಯ-ಶ್ಶಮಾದಯಶ್ಚ ಗುಣಾಃ, ತದ್ಯೋಗಸ್ತನ್ನಿಷ್ಠಾ ತಯಾ ಚ ಯುಕ್ತಮ್ (11) ಅಥ ಚ ಷಡ್ಜ-ರ್ಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಾಶ್ಚೇತೀಷ್ಟಾನಿಷ್ಟ ಶಬ್ದಸಂಜ್ಞಾಃ ಪ್ರತಿವಿಧಾ ಭವಂತಿ ಸಪ್ತ, ಶುಕ್ಲೋ ರಕ್ತಃ ಕೃಷ್ಣೋ ಧೂಮ್ರಃ ಪೀತಃ ಕಪಿಲಃ ಪಾಂಡರ ಇತಿ ಸಪ್ತಧಾತವಸ್ತದ್ವರ್ಣಾಃ (12)**

ತಾ : ಆ ವಸ್ತುಗಳ ವಿಕಾರಗಳು ಆರು. ಅವು ಇರುವುದು, ಉಂಟಾಗುವುದು, ವೃದ್ಧಿಯಾಗುವುದು, ಪಕ್ವವಾಗುವುದು, ಕೃಶಿಸುವುದು, ನಶಿಸುವುದು, ಎನ್ನುವಂತಹವು. ಈ ರೀತಿಯಾಗಿ ಅವು ವಿಕಾರಗಳನ್ನು ಹೊಂದುತ್ತವೆ ಚಕ್ರಗಳು ಆರು. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞೇಯ. ಈ ಚಕ್ರಗಳು ಅದರದರ ನಾಡಿಗಳನ್ನು ಆಶ್ರಯಿಸಿರುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎನ್ನುವ ಆರೂ ಅವಗುಣಗಳು. ಶಮ, ದಮ, ತಿತಿಕ್ಷ, ಉಪರತಿ, ಶ್ರದ್ಧೆ. ಸಮಾಧಾನವೆನ್ನುವ ಆರು ಗುಣಗಳು ಅವುಗಳ ನಿಷ್ಠೆಯೊಂದಿಗೆ ಸೇರಿಕೊಂಡಿವೆ. ಷಡ್ಜ, ಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಎನ್ನುವ ಏಳೂ, ಇಷ್ಟಶಬ್ದ ಅನಿಷ್ಟ ಶಬ್ದವೆನ್ನುವ ಹೆಸರುಗಳನ್ನು ಹೊಂದಿರುವಂತಹುದು. ಬಿಳುಪು, ಕೆಂಪು, ಕಪ್ಪು, ಧೂಮ್ರವರ್ಣ, ಹಳದಿ, ಕಪಿಲವರ್ಣಾ, ಪಾಂಡರ ವರ್ಣಗಳೆನ್ನುವ ಏಳು ಧಾತುಗಳನ್ನು ಆಯಾ ವರ್ಣಗಳು

ಹೊಂದಿರುತ್ತವೆ. ಆ (ಮಣಿಪೂರವಾದ ಮೇಲೆ) ಆಗ್ನೇಯ ಚಕ್ರವನ್ನು ಹೇಳಿದ್ದಾರೆ ಸುಪ್ರಸಿದ್ಧ ಆಜ್ಞಾ ಚಕ್ರವನ್ನು ಹೇಳಿಲ್ಲ. ಆ ಉಪನಿಷತ್ತಿನ ಸಾಂಪ್ರದಾಯವದೆಂದು ತಿಳಿದುಕೊಳ್ಳಬೇಕು.

**ಮಂ.ಶ್ಲೋ॥ ಕಸ್ಮಾದ್ಯದಾ ಕಸ್ಯಚಿದ್ದ್ರವ್ಯ ವಿಷಯಾ ಜಾಯಂತ ಉಪಚೀಯಂತೇ ಪರಸ್ಪರ ರಸಗುಣತ್ವಾದ್ವಾ ಯೋನಿಸ್ಸಾರಸಃ (13) ಷಡ್ವಿಧೋ ರಸೋ, ರಸಾಚ್ಛೋಣಿತಂ, ಶೋಣಿತಾನ್ಮಾಂಸಂ, ಮಾಂಸಾನ್ಮೇದೋ, ಮೇದಸೋಽಸ್ಥೀನ್ಯಸ್ಥಿಭ್ಯೋ ಮಜ್ಜಾ, ಮಜ್ಜಾಯಾಶ್ಶುಕ್ಲಂ, ಶುಕ್ಲ-ಶೋಣಿತ ಸಂಯೋಗಾದಾವರ್ತತೇ ಗರ್ಭೋ ಹೃದಿವ್ಯವಸ್ಥಾಂ ನಯತಿ (14) ಹೃದಯೇಭ್ಯೋಽಽಂತರಾಗ್ನಿರಗ್ನಿಸ್ಥಾನೇ ಪಿತ್ತಂ, ಪಿತ್ತಸ್ಥಾನೇ ವಾಯುರ್ವಾಯುಸ್ಥಾನೇ ಹೃದಯಂ ಪ್ರಜಾಪತ್ಯರ್ರುತುಕಾಲೇ ಸಂಪ್ರಯೋಗತ ಏಕರಾತ್ರೋಷಿತಂ ಕಲಲಂ ಭವತಿ (15)**

ತಾ : ಯಾವ ಸಮಯದಲ್ಲಿ ಅವನಿಗೆ ದ್ರವ್ಯ ವಿಷಯಗಳು ಉಂಟಾಗಿ ಅಭಿವೃದ್ಧಿ ಹೊಂದು-ತ್ತಿರುವುದೋ, ಆಗ ಒಂದೊಂದೇ ರಸಗುಣವೇರ್ಪಡುವುದಕ್ಕೆ ಯಾವುದು ಕಾರಣವಾಗುತ್ತದೋ ಅದೇ ರಸವೆಂಬುದು ರಸಗಳು ಆರು ವಿಧಗಳು. ರಸದಿಂದ ರಕ್ತವನ್ನು; ರಕ್ತದಿಂದ ಮಾಂಸವನ್ನು, ಮಾಂಸದಿಂದ ಕೊಬ್ಬನ್ನು, ಕೊಬ್ಬಿನಿಂದ ಮೂಳೆಗಳನ್ನು, ಮೂಳೆಗಳಿಂದ ಮಜ್ಜೆಯನ್ನು, ಮಜ್ಜೆಯಿಂದ ಶುಕ್ಲವು ಏರ್ಪಡುವುದು. ಶುಕ್ಲ ಶೋಣಿತ ಸಂಯೋಗದಿಂದ ಗರ್ಭವು ಉಂಟಾಗುತ್ತದೆ. ಆ ಗರ್ಭವು ಹೃದಯಸ್ಥಾನವನ್ನು ಹೊಂದಿರುತ್ತದೆ. ಭುಜಿಸಿದ ಪದಾರ್ಥಗಳಿಂದ ಜಠರಾಗ್ನಿ(ಯು), ಆ ಅಗ್ನಿಸ್ಥಾನ-ದಿಂದ ಪಿತ್ತವನ್ನು, ಪಿತ್ತ ಸ್ಥಾನದಿಂದ ವಾಯುವನ್ನು, ವಾಯುಸ್ಥಾನದಿಂದ ಹೃದಯವನ್ನು ಬ್ರಹ್ಮನಿರ್ಮಿತ ಪ್ರಕಾರವಾಗಿ ಹೋಗಿ ಸೇರುತ್ತದೆ. ಋತು ಸಮಯದಲ್ಲಿ ಸಂಯೋಗಾ ನಂತರ, ಒಂದು ರಾತ್ರಿ ಕಳೆಯುವಷ್ಟರಲ್ಲಿ ಕೆನೆಯಂತೆ ಮುದ್ದೆಯಾಗುತ್ತದೆ.

**ಮಂ.ಶ್ಲೋ॥ ಸಪ್ತರಾತ್ರೋಷಿತಂ ಬುದ್ಬುದಂ ಭವತ್ಯರ್ಧಮಾಸಾಭ್ಯಂತರೇಣ ಪಿಂಡೋ ಭವತಿ (16) ಮಾಸಾಭ್ಯಂತರೇಣ ಕಠಿನೋ ಭವತಿ, ಮಾಸದ್ವಯೇನ ಶಿರಃ ಕುರುತೇ, ಮಾಸತ್ರಯೇಣ ಪಾದಪ್ರದೇಶೋ ಭವತ್ಯಥ ಚತುರ್ಥೇ ಮಾಸೇ ಗುಲ್ಫ ಜಠರ ಕಟಿ ಪ್ರದೇಶೋ ಭವತಿ, ಪಂಚಮೇ ಮಾಸೇ ಪೃಷ್ಠವಂಶೋ ಭವತಿ, ಷಷ್ಠೇ ಮಾಸೇ ಮುಖ ನಾಸಾಕ್ಷಿ ಶ್ರೋತ್ರಾಣಿ ಭವಂತಿ, ಸಪ್ತಮೇ ಮಾಸೇ ಜೀವಸಂಯುಕ್ತೋ ಭವತ್ಯಷ್ಟಮೇ ಮಾಸೇ ಸರ್ವಸಂಪೂರ್ಣೋ ಭವತಿ, ನವಮೇಽಪೀವತೇ (17) ಶುಕ್ಲಂ ಪುಂಭಾಗಶ್ಶೋಣಿತಂ ಸ್ತ್ರೀಭಾಗ ಉಭಯಂ ಕ್ಲೀಬಂ (18)**

ತಾ : ಋತು ಸಮಯದಲ್ಲಿ ಸಂಭೋಗ ನಡೆಸಿದ ನಂತರ ಒಂದು ರಾತ್ರಿ ಕಳೆದಾಗ (ಶುಕ್ಲ ಶೋಣಿತ ಪದಾರ್ಥ) ಅದು ಮುದ್ದೆಯಾಗುತ್ತದೆ. ಏಳು ದಿನ ಕಳೆಯುವಷ್ಟರಲ್ಲಿ ಬುಗ್ಗೆ (ಗುಳ್ಳೆ) ಯಾಗುತ್ತದೆ, 15 ದಿನಗಳಾದ ಮೇಲೆ ಪಿಂಡವಾಗುತ್ತದೆ. ಒಂದು ತಿಂಗಳಿಗೆ ಗಟ್ಟಿಯಾಗುತ್ತದೆ. ಎರಡು ತಿಂಗಳಿಗೆ ಕಾಲುಗಳು ಬರುತ್ತದೆ. ನಾಲ್ಕು ತಿಂಗಳಿಗೆ ಹೊಟ್ಟೆ ಕಟಿ ಪ್ರದೇಶ ಏರ್ಪಡುತ್ತದೆ. ಐದನೆಯ ತಿಂಗಳಲ್ಲಿ ಬೆನ್ನು ಮೂಳೆ ಉಂಟಾಗುತ್ತದೆ. ಆರನೆಯ ತಿಂಗಳಲ್ಲಿ ಮೂಗು, ಕಣ್ಣು, ಕಿವಿಗಳೇರ್ಪಡುತ್ತವೆ. ಏಳನೆಯ ತಿಂಗಳು ಪ್ರಾಣವು ಉಂಟಾಗುತ್ತದೆ ಎಂಟನೆಯ ತಿಂಗಳು ಶರೀರದ

ಅವಯವಗಳೆಲ್ಲಿ ಸಂಪೂರ್ಣವಾಗಿ ಏರ್ಪಟ್ಟು ಒಂಬತ್ತನೆಯ ತಿಂಗಳಿಗೆ ಬೆಳೆದು ಸಂಚರಿಸುತ್ತಿರುತ್ತದೆ. ಶುಕ್ಲವು ಪುರುಷನಲ್ಲಿನ ಭಾಗ. ಶೋಣಿತ ಸ್ತ್ರೀಯಲ್ಲಿನ ಭಾಗ. ಶುಕ್ಲ ಶೋಣಿತಗಳು ಬೇರೆಯಾಗಿದ್ದಾಗ ಕ್ಲೀಬ (ಅಂದರೆ ನಪುಂಸಕ ಶಿಶು ಹುಟ್ಟುವುದು) ಜನಿಸುವುದು.

**ಮಂ.ಶ್ಲೋ॥ ಪಿತೃರೇತೋಽತಿರೇಕಾತ್ಪುರುಷೋ ಭವತಿ, ಮಾತೃರೇತೋಽತಿರೇಕಾತ್ ಸ್ತ್ರೀಯೋ ಭವಂತಿ, ಸ್ತ್ರೀಯೋ ಹಿ ಕಾಮಿನ್ಯಸ್ತಾಸಾಂ ಸುಖಾಧಿಕ್ಯಾತ್ತಾ ಏವ ಬಹುಳಾ ಜಾಯಂತ ಉಭಯೋರ್ಬೀಜತೌಲ್ಯೇ ನಪುಂಸಕೋ ಭವತಿ (19) ವೃತ್ತ್ಯನುಗುಣಾಹಿ ಪ್ರವೃತ್ತಿ ಸ್ತತೋಹಿ ಪಿತ್ರನುಗುಣಾ ಪ್ರಜಾ ವ್ಯಾಕುಲಿತಮನೋಭ್ಯಾಮಂಧಾಃ ಖಂಜಾಃ ಕುಬ್ಜಾ ವಾಮನಾ ವ್ಯಂಗಾ ಜಾಯಂತೇ (20)**

ತಾ : ತಂದೆಯ ಶುಕ್ಲವು ಹೆಚ್ಚಾಗಿದ್ದಾಗ ಪುರುಷನು ಹುಟ್ಟುತ್ತಾನೆ. ತಾಯಿಯ ಶೋಣಿತವು ಅಧಿಕವಾಗಿದ್ದಾಗ ಸ್ತ್ರೀ ಶಿಶು ಜನಿಸುವುದು. ಸಾಧಾರಣವಾಗಿ ಸ್ತ್ರೀಯರು ಅಧಿಕವಾಗಿ ಕಾಮವನ್ನು ಹೊಂದಿರುವರು. ಸ್ತ್ರೀಯರಿಗೆ ಸುಖವು ಅಧಿಕವಾದಾಗ, ಸ್ತ್ರೀ ಸಂತಾನವು ಅಧಿಕವಾಗಿ ಉಂಟಾಗು-ವುದು. ಸ್ತ್ರೀ ಪುರುಷರ ಶುಕ್ಲ ಶೋಣಿತಗಳು ಸಮಪಾಲಿನಲ್ಲಿದ್ದಾಗ ನಪುಂಸಕನು ಹುಟ್ಟುವುದು. ಕಾರಣಕ್ಕೆ ತಕ್ಕ ಹಾಗೆಯೇ ಕಾರ್ಯವು ಉಂಟಾಗುತ್ತದೆ. ಆದ್ದರಿಂದಲೇ ತಾಯಿತಂದೆಗಳ ಮಾನಸ ಪ್ರವೃತ್ತಿಗಳನ್ನುನುಸರಿಸಿ ಶಿಶುಗಳು ಹುಟ್ಟುವುವು. ಸ್ತ್ರೀ-ಪುರುಷ ಸಂಯೋಗ ಸಮಯದಲ್ಲಿ ಚಿತ್ತ ಚಾಂಚಲ್ಯವುಂಟಾದಲ್ಲಿ ಅಂತಹ ದಂಪತಿಗಳಿಗೆ ಕುರುಡು, ಗೂನು, ಕುಳ್ಳ, ಅಂಗವಿಕಲವಿರುವ ಮಕ್ಕಳು ಹುಟ್ಟುತ್ತಾರೆ.

**ಮಂ.ಶ್ಲೋ॥ ಪುಷ್ಪವತೋರುಪರಕ್ತಯೋರಂಗವೈಕಲ್ಯಭಾಜಃ ಕಾಲದೇಶಕ್ರಿಯಾ ದ್ರವ್ಯ ಭೋಗೋಪಾಧಿಭಿ -ರುಪಚಿತಾಪಚಿತಾನುರೂಪಾನನುರೂಪಮೂರ್ತಯೋ ಭವಂತಿ (21) ಸಮ್ಯಗ್ಯೋಗೇ ಸಾರೂಪ್ಯಮವಾಪ್ಯ ಸಮಾನಗುಣಾ ಭವಂತಿ, ಬಿಂಬಮಿವೋಪಾಧೌ ಪ್ರತಿಬಿಂಬಮ್ (22) ಅನ್ಯೋನ್ಯವಾಯು ಪರಿಪೀಡಿತಾನಾಂ ಶುಕ್ಲದ್ವೈವಿಧ್ಯಾ ಯಮಳೌ ಭವತಃ ಪಿತ್ರೋ-ಸ್ತಥಾತ್ವೇನ ರೇತೋವಿಭಾಗೇ ಮಿಶ್ರಪ್ರಜಾಮ್ರೇಡಿತಾ ಭವತಿ (23) ಪಂಚಮಾನುಷೀಪೇಶ್ಯ ಏಕಾ ಸಾಧಾರಣೀ ದ್ವೌ ಕಾಸಾಂಚಿದ್ಧ್ವ್ಯಸ್ಸಹಸ್ರತಮೀಷು ಮುಹುರ್ನ್ನಿಷೇಕೇಽಧಿಕಾಂಗಾಸ್ಸ್ಯ ಸ್ಸಕೃನ್ನಿಷೇಕೇಶುಷ್ಕ ಅಸಕೃದಾಧಾನೇ ಸ್ತ್ರೀಯೋನ್ಯಾಂ ಯುಗ್ಮಾಃ ಪ್ರಜಾಯಂತೇ (24)**

ತಾ : ಋತುಸ್ರಾವಕಾಲದಲ್ಲಿ, ಚಂದ್ರಸೂರ್ಯ ಗ್ರಹಣಗಳೇರ್ಪಟ್ಟ ಕಾಲದಲ್ಲಿ ಉಂಟಾದ ಗರ್ಭದಿಂದ ಅಂಗಶಿಥಿಲತೆ ಉಂಟಾಗುತ್ತದೆ. ಕಾಲ, ದೇಶ, ಕ್ರಿಯೆ, ದ್ರವ್ಯ, ಭೋಗ ಮೊದಲಾದ ಕಾರಣಗಳಿಂದ ಹೆಚ್ಚಾದರೂ, ಕಡಿಮೆಯಾದರೂ, ಸಮಾನ-ಅಸಮಾನಕ್ಕೆ ತಕ್ಕ ರೂಪಗಳನ್ನು ಹೊಂದುತ್ತಾರೆ. ಒಳ್ಳೆಯ ಮುಹೂರ್ತದಲ್ಲಿ ಹುಟ್ಟಿದ ಶಿಶುಗಳು ತಾಯಿ-ತಂದೆಯರ ರೂಪವನ್ನು, ಅವರ ಗುಣಗಳನ್ನು ಹೊಂದುವವರಾಗುವರು. ತಾಯಿ-ತಂದೆಯಂತೆಯೇ ಮಗುವು ಕೂಡಾ ಹೋಲುತ್ತದೆ. ಪರಸ್ಪರ ವಾಯುವಿನಿಂದ ಪೀಡಿತ-ರಾದವರ ಶುಕ್ಲವು ಎರಡು ವಿಧಗಳಾಗುತ್ತವೆ. ಆಗ ಅವಳಿ ಮಕ್ಕಳು ಹುಟ್ಟುತ್ತಾರೆ. ಮಾನವರಿಗೆ ಐದು ಅಂಡಗಳು (ಕರುಳು) ಇರುತ್ತದೆ. ಒಂದು

ಅಂಡ ಸಾಧಾರಣವಾಗಿ ಇರುತ್ತದೆ. ಕೆಲವರಿಗೆ ಎರಡಿರುತ್ತವೆ. ಇದಕ್ಕಿಂತ ಹೆಚ್ಚು ಎಲ್ಲೋ ಸಾವಿರಕ್ಕೆ ಒಬ್ಬರಲ್ಲಿರುತ್ತದೆ. ಅನೇಕ ಬಾರಿ ರೇತಸ್ಸನ್ನು ಹೀರಿ (ಸೇವಿಸಿ) ಕೊಂಡಲ್ಲಿ ಶಿಶುವಿಗೆ ಹೆಚ್ಚಿನ ಅಂಗಗಳು ಉಂಟಾಗುವುವು. ರೇತಸ್ಸು ಕಡಿಮೆಯಾದ ಪಕ್ಷದಲ್ಲಿ ಅಂಗಹೀನರಾಗಿ ಹುಟ್ಟುವರು. ಯಾವಾಗಲೋ ಒಮ್ಮೆ ಚಂದ್ರ, ಸೂರ್ಯ ಗ್ರಹಣ-ವೇರ್ಪಟ್ಟಾಗ ಅಂಗಶೈಥಿಲ್ಯವು ಉಂಟಾಗುವುದು. ಕಾಲ, ದೇಶ, ಕ್ರಿಯೆ, ದ್ರವ್ಯ, ಭೋಗ ಈ ಮುಂತಾದ ಕಾರಣಗಳಂದ ಹೆಚ್ಚಾದ, ಕಡಮೆಯಾದ, ಸಮಾನವಾದ, ಅಸಮಾನವಾದ ರೂಪಗಳನ್ನು ಹೊಂದಿದವರಾಗುತ್ತಾರೆ. ಒಳ್ಳೆಯ ಮುಹೂರ್ತದಲ್ಲಿ ಹುಟ್ಟಿದ ಮಕ್ಕಳು ತಂದೆತಾಯಿಗಳನ್ನು ಹೋಲುವ ರೂಪವನ್ನು ಅವರ ಗುಣಗಳನ್ನುಳ್ಳವರಾಗುತ್ತಾರೆ. ತಂದೆ ತಾಯಿಗಳಂತೆಯೇ ಮಗು ಇರುತ್ತದೆ.

ಮಂ.ಶ್ಲೋ॥ **ಪಂಚಾತ್ಮಕಸ್ಸಮರ್ಥಃ ಪಂಚಾತ್ಮಕ ತೇಜಸಾಧಿಗಂಧ ರಸಶ್ಚ ಸಮ್ಯಕ್ ಜ್ಞಾನಾತ್ ಧ್ಯಾನಾದಕ್ಷರ ಮೋಂಕಾರಂ ಚಿಂತಯತಿ, ತದೇವ ಚೈಕಾಕ್ಷರಂ ಜ್ಞಾತ್ವಾಽಷ್ಟೌ ಪ್ರಕೃತಯಃ ಷೋಡಶ ವಿಕಾರಾಶ್ಶರೀರೇ ತಸ್ಯೈವ ದೇಹಿನೋಽಥ ನವಮೇ ಮಾಸೇ ಸರ್ವಲಕ್ಷಣಸಂಪೂರ್ಣೋ ಭವತಿ, ಪೂರ್ವಜಾತಿಂ ಸ್ಮರತಿ ಕೃತಾಕೃತಂ ಕರ್ಮ ವಿಭಾತಿ, ಶುಭಾಶುಭಂ ಕರ್ಮ ವಿಂದತಿ, (25) ನಾನಾಯೋನಿ ಸಹಸ್ರಾಣಿ ದೃಷ್ಟ್ವಾ ಚೈವ ತತೋಮಯಾ ಆಹಾರಾ ವಿವಿಧಾ ಭುಕ್ತಾಃ ಪೀತಾಶ್ಚ ವಿವಿಧಾಃ ಸ್ತನಾಃ (26)**

ತಾ : ಗರ್ಭದಲ್ಲಿರುವ ಶಿಶು ಪಂಚಭೂತಮಯನಾಗಿ ಸಮರ್ಥನಾಗುತ್ತಿದ್ದಾನೆ. ಪಂಚೇಂದ್ರಿಯಗಳೊಂದಿಗೆ ಕೂಡಿ ಆ ಶಿಶು ಶಬ್ದ ಸ್ಪರ್ಶ ರೂಪ ರಸಗಂಧಗಳನ್ನು ತಿಳಿಯಬಲ್ಲವನಾಗುತ್ತಿದ್ದಾನೆ. ಸಮ್ಯಕ್ ಜ್ಞಾನದಿಂದ, ಧ್ಯಾನದಿಂದ, ಪ್ರಣವವನ್ನು ತಿಳಿದುಕೊಳ್ಳುವನಾಗುತ್ತಿದ್ದಾನೆ ಪರಮಾತ್ಮ ಸ್ವರೂಪವಾದ ಆ ಪ್ರಣವವನ್ನು ತಿಳಿದುಕೊಳ್ಳುತ್ತಿದ್ದಾನೆ. ಈ ದೇಹದಲ್ಲಿ 8 ಪ್ರಕೃತಿಗಳು 16 ವಿಕಾರಗಳು ಇವೆ. ಒಂಬತ್ತನೆಯ ತಿಂಗಳಲ್ಲಿ ಎಲ್ಲ ಲಕ್ಷಣಗಳು ಪೂರ್ಣಗೊಳ್ಳುತ್ತದೆ. ಆಗ ಜೀವನು ತನ್ನ ಪೂರ್ವ ಜಾತಿಯನ್ನು, ಪೂರ್ವಕರ್ಮಗಳನ್ನು, ಭವಿಷ್ಯಕರ್ಮವನ್ನು, ಪಾಪಪುಣ್ಯ ಕರ್ಮಗಳನ್ನು ತಿಳಿದು ಕೊಳ್ಳುತ್ತಿದ್ದಾನೆ. ನಾನು ಲೆಕ್ಕವಿಲ್ಲದಷ್ಟು ಸ್ತ್ರೀಯರ ಯೋನಿಗಳನ್ನು ದರ್ಶಿಸಿದೆ. ಅನೇಕ ವಿಧವಾದ ಆಹಾರಗಳನ್ನು ಭುಜಿಸಿದೆ. ಅನೇಕ ಸ್ತನಗಳನ್ನು ಪಾನಮಾಡಿದೆ.

ಮಂ.ಶ್ಲೋ॥ **ಜನ್ಮಭೂಮಿರ್ಹಿ ಸರ್ವಾ ಭೂಃ, ಶ್ಮಶಾನಮಪಿ ಮೇ ಪುರಾ । ಚತುರಶೀತಿ ಲಕ್ಷೇಷು ಯೋನಿಭೇದೇಷು ಚಾಭವಮ್ (27) ಜಾತಶ್ಚಾಸ್ಮಿ ಮೃತಶ್ಚಾಸ್ಮಿ ಸಂಸಾರ್ಯಸ್ಮಿ ಪುನಃ ಪುನಃ । ಜನ್ಮಮೃತ್ಯೂಪುನರ್ಜನ್ಮ ಪುನರ್ಮೃತ್ಯುಃ ಪುನರ್ಜನಿಃ (28) ಗರ್ಭವಾಸೇ ಮಹಾದ್ದುಃಖಂ ಮೋಹೋ ದುಃಖಂ ಚ ಜನ್ಮಸು। ಬಾಲ್ಯೇ ದುಃಖಂ ತಥಾ ಶೋಕಃ ಪಾರವಶ್ಯಂ ಚ ಮೂಢತಾ (29) ಹಿತಾಕರಣಮಾಲಸ್ಯಮಹಿತಾಚರಣಂ ತಥಾ । ಯೌವನೇ ವಿಷಯಾಸಕ್ತಿಸ್ತಾಪತ್ರಯ ನಿಪೀಡಿತಃ (30)**

ತಾ : ಈ ಸಮಸ್ತ ಪೃಥಿವಿ ನನ್ನ ಜನ್ಮಭೂಮಿ ಸ್ಮಶಾನ ಭೂಮಿಯೇ. ನಾನು 84 ಲಕ್ಷ ವಿಧವಾದ ಯೋನಿಗಳಲ್ಲಿ ಜನ್ಮ ಕಳೆದಿದ್ದೇನೆ. ಎಷ್ಟೋ ಬಾರಿ ಹುಟ್ಟಿದೆ. ಎಷ್ಟೋ ಬಾರಿ ಸತ್ತಿದ್ದೇನೆ.

ಎಷ್ಟೋ ಸಲ ಸಂಸಾರಿಯಾಗಿದ್ದೇನೆ ಹುಟ್ಟುವುದು ಸಾಯುವುದು ಮತ್ತೆ ಹುಟ್ಟುವುದು ಸಾಯುವುದು ಈ ಪ್ರಕಾರವಾಗಿಯೇ ನನ್ನ ಕಾಲವು ಕಳೆದುಹೋಗಿದೆ. ಗರ್ಭವಾಸವು ಮಹಾ ದುಃಖಕರವಾದುದು. ಜನ್ಮವೆತ್ತುವುದರಲ್ಲಿನ ಮೋಹವು ಮಹಾ ದುಃಖಕರವಾದುದು. ಬಾಲ್ಯದಲ್ಲಿ ದುಃಖ ಶೋಕ ಪಾರವಶ್ಯ ಮೂಢತ್ವಗಳು ಉಂಟಾಗುತ್ತದೆ. ಯೌವನ ಕಾಲದಲ್ಲಿ ಹಿತವಾದ ಕಾರ್ಯಗಳನ್ನು ಮಾಡದೆ ಹೋಗುವುದು, ಸೋಮಾರಿತನ ಅಹಿತಕಾರ್ಯಗಳನ್ನಾಚರಿಸುವುದು, ವಿಷಯಾಸಕ್ತಿ, ತಾಪತ್ರಯ-ದಿಂದ ಒದ್ದಾಡುವುದು, ಸಂಭವಿಸುತ್ತಿರುತ್ತದೆ. ಜೀವನು ಹುಟ್ಟುತ್ತಾ ಸಾಯುತ್ತಾ ಸಂಸಾರ ಚಕ್ರದಲ್ಲಿ ತಿರುಗಾಡುತ್ತಿರುತ್ತಾನೆ. ಸಂಸಾರ ದುಃಖಸಾಗರದಲ್ಲಿ ಮುಳುಗುತ್ತಿರುತ್ತಾನೆ ಯಾವುದೋ ಒಂದು ಜನ್ಮದಲ್ಲಿ ಆತ್ಮಜ್ಞಾನವೆಂಬ ಅಗ್ನಿಯನ್ನು ಸಂಪಾದಿಸಿ ತನ್ಮೂಲಕ ಕರ್ಮರಾಶಿಯೆಲ್ಲವನ್ನು ದಗ್ಧ-ಗೊಳಿಸಿದಾಗಲೇ ಜೀವನಿಗೆ ಕರ್ಮ ಬಂಧದಿಂದ ವಿಮುಕ್ತಿ ಲಭಿಸಿ ಕೈವಲ್ಯ ಪ್ರಾಪ್ತಿಯುಂಟಾಗು-ವುದು. ತಾಯಿಯ ಗರ್ಭದಲ್ಲಿರುವಾಗ ಏಳನೆಯ ತಿಂಗಳಲ್ಲಿ ದೈವಕೃಪೆಯಿಂದ ಜೀವನಿಗೆ ಜನ್ಮಾಂತರ ಪರಿಜ್ಞಾನವುಂಟಾಗುತ್ತದೆ. ತಾನು ಇದುವರೆಗೂ ಹೊಂದಿದ ಜನ್ಮಗಳು, ತಾಯಿಯ ಗರ್ಭದಲ್ಲಿದ್ದಾಗ ಪಟ್ಟ ಬಾಧೆಗಳು ಆ ಸಮಯದಲ್ಲಿ ಆತನು ಪ್ರತ್ಯಕ್ಷವಾಗಿ ಕಾಣುವಂತಾಗುತ್ತದೆ.

ಮಂ.ಶ್ಲೋ॥ **ಚಿಂತಾರೋಗಶ್ಚ ವಾರ್ಧಕ್ಯೇ ಮರಣೇತು ಮಹದ್ಭಯಮ್ । ಆಶಯಾ ಚಾಭಿಮಾನೇನ ಕಾಮಕ್ರೋಧಾದಿ ಸಂಕಟೇ । ಅತ್ಯುತ್ಕಟೇ ಮಹದ್ದುಃಖಮಸ್ವತಂತ್ರಶ್ಚ ದುಃಖಿತಃ (31) ದುಃಖಬೀಜಮಿದಂ ಜನ್ಮದುಃಖರೂಪಂ ಚ ದುಸ್ಸಹಮ್ । ನಿವೃತ್ತಿಧರ್ಮೋ ನೋಪಾತ್ತೋ ನ ಯೋಗಜ್ಞಾನ ಸಾಧನಮ್ (32) ಅಹೋ ದುಃಖೋದಧೌ ಮಗ್ನೋ ನ ಪಶ್ಯಾಮಿ ಪ್ರತಿಕ್ರಿಯಾಮ್ । ಧಿಗಜ್ಞಾನಂ ಧಿಗಜ್ಞಾನಂ ಧಿಕ್ಕಾಮಕ್ರೋಧಸಂಕಟಮ್ (33)**

ತಾ : ವಾರ್ಧಕ್ಯದಲ್ಲಿ ಚಿಂತೆ, ವ್ಯಾಧಿ, ಉಂಟಾಗುತ್ತದೆ. ಮರಣದ ಬಗ್ಗೆ ಮಹಾಭಯವು ಉಂಟಾಗುವುದು ಆಶೆಯಿಂದಲೂ, ಅಭಿಮಾನದಿಂದಲೂ, ಅಧಿಕವಾದ ಕಾಮಕ್ರೋಧಾದಿಗಳ ಸಂಕಟದಲ್ಲೇ ಸಿಕ್ಕಿಕೊಂಡು ದಿಕ್ಕು ತೋಚದೆ ಇರುವುದರಿಂದಲೂ, ಅಸ್ವತಂತ್ರತೆಯಿಂದಲೂ ವಿಶೇಷ ದುಃಖವುಂಟಾಗುತ್ತದೆ. ಈ ಜನ್ಮವು ದುಃಖಕ್ಕೆ ಕಾರಣವಾಗಿದೆ. ದುಃಖಮಯವಾದುದಾಗಿದೆ, ಇನ್ನು ಸಹಿಸಲು ಸಾಧ್ಯವೇ ಇಲ್ಲವೆನ್ನುವಷ್ಟು ಮಟ್ಟಕ್ಕೆ ಮುಟ್ಟಿದೆ, ನಾನು ನಿವೃತ್ತಿ ಧರ್ಮವನ್ನು ಕೊಂಚವೂ ಮಾಡಲಿಲ್ಲ, ಯೋಗ ಸಾಧನೆಗಳು ಜ್ಞಾನ ಸಾಧನೆಗಳ ಗೋಚಿಗೇ ಹೋಗಲಿಲ್ಲ. ಆಹಾ! ದುಃಖ ಸಾಗರದಲ್ಲಿ ನಾನು ಮುಳುಗಿ ಹೋಗುತ್ತಿರುವೆನು ಇದಕ್ಕೆ ಪ್ರತಿಕ್ರಿಯೆಯನ್ನು ತೋರಿಸಲು ನಾನು ಅಸಮರ್ಥನಾಗಿರುವೆನು. ಅಜ್ಞಾನಕ್ಕೆ ಮತ್ತೂ ಮತ್ತೂ ಧಿಕ್ಕಾರ! ಕಾಮಕ್ರೋಧಾದಿ ಸಂಕಟಗಳಿಗೆ ಧಿಕ್ಕಾರ.

ಮಂ.ಶ್ಲೋ॥ **ಸಂಸಾರ ಶೃಂಖಲಂ ಧಿಗ್ಧಿಗಾಚಾರ್ಯಾತ್ ಜ್ಞಾನಮಾಪ್ನುಯಾಮ್, ಯದಿ ಯೋನ್ಯಾಂ ಪ್ರಮುಂಚಾಮಿ ಸಾಂಖ್ಯಂ ಯೋಗಂ ಸಮಾಶ್ರಯೇ (34) ಅಶುಭಕ್ಷಯ ಕರ್ತಾರಂ ಫಲಮುಕ್ತಿ ಪ್ರದಾಯಕಮ್ । ಯೋನ್ಯಾ ಯದಿ ಪ್ರಮುಂಚಾಮಿ ತಂ ಪ್ರಪದ್ಯೇ ಮಹೇಶ್ವರಮ್ (35) ಅಶುಭಕ್ಷಯ ಕರ್ತಾರಂ ಪುರುಷಾರ್ಥ ಪ್ರದಾಯಿನಮ್ ಯದಿ ಯೋನ್ಯಾ ಪ್ರಮುಂಚಾಮಿ ಪ್ರಪದ್ಯೇ ಜಗದೀಶ್ವರಮ್ (36)**

ತಾ : ಸಂಸಾರ ಶೃಂಖಲೆಗೆ ಧಿಕ್ಕಾರ! ಈ ಮಾತೃಗರ್ಭದಿಂದ ಹೊರಕ್ಕೆ ಬಂದ ಮೇಲೆ

ಸದ್ಗುರುವನ್ನು ಸಮಾಶ್ರಯಿಸಿ ಬ್ರಹ್ಮಜ್ಞಾನವನ್ನು ಹೊಂದುತ್ತೇನೆ ಈ ಯೋನಿದ್ವಾರದಿಂದ ಹೊರಕ್ಕೆ ಬಿದ್ದ ಕೂಡಲೇ ನಾನು ಸಾಂಖ್ಯಯೋಗ ಶಾಸ್ತ್ರವನ್ನು ಸಮಾಶ್ರಯಿಸುತ್ತೇನೆ. ಈ ಯೋನಿದ್ವಾರದಿಂದ ಹೊರಕ್ಕೆ ಬಂದ ಕೂಡಲೆ ಅಶುಭವನ್ನು ಹೋಗಲಾಡಿಸುವವನಾಗಿ ನಾಶ ಮಾಡುವವನಾಗಿ, ಮೋಕ್ಷವನ್ನು ಪ್ರಸಾದಿಸುವಂತಹ ಮಹೇಶ್ವರನನ್ನು ಶರಣು ಬೇಡುತ್ತೇನೆ. ಈ ಯೋನಿದ್ವಾರದಿಂದ ಹೊರಬರುತ್ತಲೆ, ಅಮಂಗಳವನ್ನು ತೊಲಗಿಸುತ್ತೇನೆ. ಪುರುಷಾರ್ಥಗಳನ್ನು ಸಾಧಿಸುವವನಾದ ಜಗದೀಶ್ವರನಿಗೆ ಶರಣಾಗುವೆನು.

**ಮಂ.ಶ್ಲೋ॥ ಸರ್ವಶಕ್ತಿಂ ಚಿದಾತ್ಮಾನಂ ಸರ್ವಕಾರಣ ಕಾರಣಮ್ । ಯದಿ ಯೋನ್ಯಾಃ ಪ್ರಮುಚ್ಯೇಯಂ ಪ್ರಪದ್ಯೇ ಪರಮೇಶ್ವರಮ್ । ಭರ್ಗಂ ಪಶುಪತಿಂ ರುದ್ರಂ ಮಹಾದೇವಂ ಜಗದ್ಗುರುಮ್ (37) ಯೋನಿಬಂಧಾತ್ ಪ್ರಮುಚ್ಯೇಯಂ ಯದಿ ತಪ್ಸ್ಯೇಮಹತ್ತಪಃ ಗರ್ಭವಾಸಾತ್ ಪ್ರಮುಚ್ಯೇಯಂ ಯದಿ ವಿಷ್ಣುಂ ಭಜೇ ಹೃದಿ । ಅಮೃತಪ್ರದಮಾನಂದಂ ನಾರಾಯಣ-ಮನಾಮಯಮ್ (38) ಮಾತೃಕುಕ್ಷೌ ನಿಬದ್ಧೋಽಸ್ಮಿ ಮುಚ್ಯೇ ಯದ್ಯದ್ಯ ಬಂಧನೈಃ । ವಾಸುದೇವಂ ಪ್ರತೋಷ್ಯಾಮಿ ಭಗವಂತಮನನ್ಯಧೀಃ (39)**

ತಾ : ಈ ಯೋನಿಯಿಂದ ನಾನು ಹೊರ ಬಂದಲ್ಲಿ, ಸರ್ವಶಕ್ತಿವಂತನೂ ಎಲ್ಲ ಕಾರಣಗಳಿಗೂ ಕಾರಣ ಭೂತನಾದವನೂ, ಭರ್ಗನೂ, ಪಶುಪತಿಯೂ, ರುದ್ರನೂ, ಮಹಾದೇವನೂ, ಜಗದ್ಗುರುವೂ ಆದ ಪರಮೇಶ್ವರನಿಗೆ ಶರಣಾಗುವೆನು ಈ ಯೋನಿ ಬಂಧದಿಂದ ಹೊರಕ್ಕೆ ಬಂದ ಮೇಲೆ ದೀರ್ಘ ತಪಸ್ಸು ಮಾಡುವೆನು. ಈ ಗರ್ಭ ವಾಸದಿಂದ ಹೊರಕ್ಕೆ ಬಂದಲ್ಲಿ ಅಮೃತತತ್ವನು ಉಂಟು ಮಾಡುವವನ್ನೂ, ಆನಂದ ಸ್ವರೂಪನೂ, ಅನಾಮಯನೂ, ನಾರಾಯಣನೂ, ಆದ ವಿಷ್ಣುವನ್ನು ಹೃದಯದಲ್ಲಿ ಧ್ಯಾನಿಸುವೆನು ನಾನೀಗ ಮಾತೃಗರ್ಭದಲ್ಲಿ ಬಂಧಿಸಲ್ಪಟ್ಟಿದ್ದೇನೆ. ಈ ಬಂಧನದಿಂದ ಮುಕ್ತನಾದಲ್ಲಿ ವಾಸುದೇವ ಭಗವಂತನಲ್ಲಿ ಅನನ್ಯ ಚಿತ್ತದಿಂದ ಭಜಿಸಿ ಆ ಸ್ವಾಮಿಯನ್ನು ಸಂತೋಷಪಡಿಸುವೆನು.

**ಮಂ.ಶ್ಲೋ॥ ಪುರಾ ಪರಜನಸ್ಯಾರ್ಥೇ ಕೃತಂ ಕರ್ಮ ಶುಭಾಶುಭಮ್। ಏಕಾಕೀ ತೇನ ದಹ್ಯಾಮಿ ಗತಾಸ್ತೇ ಫಲಭಾಗಿನಃ (40) ನಾಸ್ತಿಕ್ಯೇನ ಭಯಂ ತ್ಯಕ್ತ್ವಾ ಪಾಪಾನ್ಯಕರವಂ ಪುರಾ । ಭುಂಜಾಮಿ ತತ್ಫಲಂ ಹ್ಯದ್ಯ ಭವಿಷ್ಯಾಮ್ಯಾಸ್ತಿಕಸ್ತ್ವಿತಃ (41) ಏವಂ ನಾನಾವಿಧಾನರ್ಥಾನ್ಪರಿಚಿಂತ್ಯ ಮುಹುರ್ಮುಹುಃ । ಶಶ್ವತ್ಸಾಂಸಾರಿಕಂ ದುಃಖಂ ಸ್ಮೃತ್ವಾ ನಿರ್ವೇದಮಾಪ್ಯಚ । ಅವಿದ್ಯಾ ಕಾಮ ಕರ್ಮಾದ್ಯೈರ್ಮುಹ್ಯತೇ ಜಂತುರಾಂತರಃ (42)**

ತಾ : ಹಿಂದೆ ನಾನು ಬೇರೆಯವರಿಗಾಗಿ ಕರ್ಮಗಳನ್ನು ಮಾಡುತ್ತಿದ್ದೆ. ಈಗ ಒಬ್ಬನೇ ಆಗಿ ಬಾಧೆಯಿಂದ ದಹಿಸಲ್ಪಡುತ್ತಿದ್ದೇನೆ. ಫಲವನ್ನು ಅನುಭವಿಸಿದವರೆಲ್ಲರೂ ಗತಿಸಿಹೋದರು. ಪೂರ್ವದಲ್ಲಿ ನಾನು ನಾಸ್ತಿಕನಾಗಿ ನಿರ್ಭಯವಾಗಿ ಅನೇಕ ಪಾಪಗಳನ್ನು ಮಾಡಿರುವೆ. ಈ ಪಾಪ ಫಲಗಳೆಲ್ಲವನ್ನೂ ಈಗ ಅನುಭವಿಸುತ್ತಿದ್ದೇನೆ. ನಂತರ ಆಸ್ತಿಕನಾಗಿ ಕಾಲವನ್ನು ಕಳೆದೆನು. ಈ ರೀತಿಯಾಗಿ ಪೂರ್ವದಲ್ಲಿ ಜರುಗಿದಂತಹ ಅನೇಕ ಅನರ್ಥಗಳನ್ನು ಕುರಿತು ಮತ್ತೆ ಮತ್ತೆ ಆಲೋಚನೆ ಮಾಡಿ, ಸಂಸಾರ

ದುಃಖವನ್ನು ಹಲವು ಬಾರಿ ಸ್ಮರಿಸಿ ಗರ್ಭದಲ್ಲಿರುವ ಜೀವನು ವೈರಾಗ್ಯವನ್ನು ಅವಲಂಬಿಸಿ, ಅಜ್ಞಾನ, ಕಾಮಕರ್ಮಾದಿಗಳಲ್ಲಿ ಮೋಹವನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಸ ವೈ ಜಂತುಃ ಸ್ತ್ರೀಯೋನಿಶತಂ ಗತ್ವಾ ಯೋನಿದ್ವಾರಮುಪೇತ್ಯ ಮುಮುಕ್ಷುರ್ಯತತೇ। ತತ್ರಾಽ-ಶಕ್ತೋ ಯಂತ್ರೇಣ ಪೀಡ್ಯತೇ । ಮಹತಾ ದುಃಖೇನ ಕ್ಲಿಶ್ಯತಿ, ಪಿಷ್ಯತೇಚ ಪ್ರಸೂತಿವಾತೇನ, ಜಾತಮಾತ್ರಸ್ತು ವೈಷ್ಣವೇನವಾಯುನಾ ಸಂಸ್ಪೃಶ್ಯತೇ, ತದಾ ನ ಸ್ಮರತಿ, ನೈವ ಕಿಂಚನ ಪಾರತ್ರಿಕಂ ನಾಪರೋಕ್ಷದೃಗ್ಭವತಿ(43) ಭೂಮಿಸಂಸ್ಪರ್ಶನಾಜ್ಜಂತುರುಗ್ರದೃಕ್ಪಾಮರೋ ಭವೇತ್ । ಜಲಸಂಸ್ಪರ್ಶನಾದೂರ್ಧ್ವಂ ದೃಗ್ದೋಷಸ್ತಸ್ಯ ನಶ್ಯತಿ (44)**

ತಾ : ಆ ಜೀವನು ನೂರಾರು ಸ್ತ್ರೀಯರ ಯೋನಿದ್ವಾರಗಳನ್ನು ಹೊಂದಿದ್ದಾನೆ. ಈಗ ಆ ಯೋನಿದ್ವಾರದಿಂದ ಬಿಡುಗಡೆ ಹೊಂದಲು ಪ್ರಯತ್ನಿಸುತ್ತಿದ್ದಾನೆ ಹೀಗೆ ಬಿಡುಗಡೆ ಹೊಂದಲು ಶಕ್ತಿಯಿಲ್ಲದವನಾಗಿ ಯಂತ್ರದಲ್ಲಿ ಸಿಕ್ಕಿಹಾಕಿಕೊಂಡಂತೆ ಪೀಡಿತನಾಗುತ್ತಿದ್ದಾನೆ. ದುಃಖಾತಿಶಯದಿಂದ ಕಷ್ಟ ಪಡುತ್ತಿದ್ದಾನೆ. ಪ್ರಸವ ವಾಯುವಿನಿಂದ ಪೀಡಿತನಾಗುತ್ತಿದ್ದಾನೆ. ಜನನವಾದ ಕೂಡಲೇ ಆತ ವೈಷ್ಣವ ವಾಯುವಿನಿಂದ ವ್ಯಾಪಿಸುವಂತಹವನಾಗುತ್ತಾನೆ. ಆಗ ಆತ ಪರಲೋಕ ಸಾಧನೆಗೆ ಏನನ್ನೂ ಸ್ಮರಿಸುವುದಿಲ್ಲ. ಆಗ ಅಪರೋಕ್ಷ ಜ್ಞಾನವಿಲ್ಲದೆ ಬಾಧೆಪಡುವನು ಪೃಥಿವೀ ಸ್ಪರ್ಶವು ಆದ ಕೂಡಲೇ ಜೀವನು ಕ್ರೂರದೃಷ್ಟಿಯುಳ್ಳವನೂ, ಪಾಮರನೂ ಆಗುವನು. ನೀರಿನಿಂದ ನೆನೆದಾದ ಮೇಲೆ ಆತನಿಗೆ ಈ ದೃಷ್ಟಿದೋಷವು ನಶಿಸುತ್ತದೆ.

**ಮಂ.ಶ್ಲೋ॥ ಸಹ ವೈ ಜಾತಸ್ಯ ಜನ್ಮಮರಣಕರ್ಮ ಶುಭಾಶುಭ ಸಾಧನಸ್ಫೂರ್ತಿರ್ವಾಸನಾಶ್ಚ ನಿಗೂಹಿತಾ ಭವಂತಿ, ಕಥಮಥೋ ಜಾನಾತಿ, ವಾತಃ ಪಿತ್ತಂ ಶ್ಲೇಷ್ಮಾಚ ತ್ರಯೋ ಧಾತವಸ್ಸಮಾನಾ ಆರೋಗ್ಯದಾ ಭವಂತಿ (45) ವಿಷಮಾಸ್ತೇ ರೋಗದಾ, ನೈವರೋಗೀ ವಿಂದತೇ ವೇದ್ಯಂಚ ತೇನ ತರ್ಹಿ ಪಿತ್ತೇನಾನುರೂಪೇಣ ಜಾನಾತಿ ನ್ಯೂನೇನಾಲ್ಪಮಧಿಕೇನಾಧಿಕಂ ವಿಕೃತೇನ ವಿಕೃತೋಽನ್ಮತ್ತಾಯತೇ ತದ್ವೈ ಪಿತ್ತಮಗ್ನಿಃ ಕರ್ಮಾಶಯಗತೋ ಧರ್ಮಾಧರ್ಮಮೂಲೇನ ವಾಯುನಾ ಪ್ರಜ್ವಾಲ್ಯತೇ ಯದ್ಯದಿಂಧನಂ ಭೋಗ್ಯಮಾಂತರಂ ಬಾಹ್ಯಂಚ (46)**

ತಾ : ಜೀವನು ಹುಟ್ಟಿದ ಮೇಲೆ ಜನ್ಮ, ಮೃತ್ಯು, ಕರ್ಮ, ಶುಭಾಶುಭ ಸಾಧನೆಗಳೆನ್ನುವ ಈ ವಿಧವಾದ ವಿಷಯಗಳಾವುವೂ ಸ್ಫುರಿಸುವುದಿಲ್ಲ. ಆತನಿಗೆ ವಾಸನೆಗಳೆಲ್ಲವೂ ಬೀಜರೂಪವಾಗಿ ಗೂಢವಾಗಿ ಇರುತ್ತದೆ. ಆಮೇಲೆ ಈ ಜೀವಿ ಹೇಗೆ ತಿಳಿದುಕೊಳ್ಳುತ್ತದೆ? ವಾತ, ಪಿತ್ತ, ಶ್ಲೇಷ್ಮ (ಕಫ) ಎನ್ನುವ ಮೂರು ಧಾತುಗಳನ್ನು ಸಕ್ರಮವಾಗಿ ಇರುವಾಗ ಉತ್ತಮ ಆರೋಗ್ಯವು ಉಂಟಾಗುವುದು. ವಾತ, ಪಿತ್ತ, ಶ್ಲೇಷ, (ಕಫ) ಸರಿಯಾಗಿ ಇಲ್ಲದಿದ್ದ ಪಕ್ಷದಲ್ಲಿ ವ್ಯಾಧಿಗ್ರಸ್ತನಾಗುವನು, ವಿಷಯಗಳನ್ನು ಅರ್ಥಮಾಡಿಕೊಳ್ಳಲಾರ. ಆದ್ದರಿಂದ ಪಿತ್ತವು ಅನುಕೂಲಕರವಾದ ಸ್ಥಿತಿಯಲ್ಲಿರುವಾಗ ಚೆನ್ನಾಗಿ ಅರ್ಥ-ಮಾಡಿಕೊಳ್ಳುತ್ತಾನೆ ಕಡಿಮೆಯಾದಾಗ ಕಡಿಮೆ ಪ್ರಮಾಣದಲ್ಲಿ ಗ್ರಹಿಸುತ್ತಾನೆ ಅಧಿಕವಾಗಿರುವಾಗ ಹೆಚ್ಚಾಗಿ ತಿಳಿದುಕೊಳ್ಳುವಂತಹವನಾಗುತ್ತಾನೆ (ಗ್ರಹಿಸಬಲ್ಲವನಾಗುತ್ತಾನೆ) ಪಿತ್ತವು ವಿಕಾರವಾದಾಗ ಹುಚ್ಚನಾಗುತ್ತಾನೆ. ಪಿತ್ತಾಗ್ನಿ ಕರ್ಮಾವಯವಗಳಲ್ಲಿ ಸೇರಿ ಧರ್ಮಾಧರ್ಮಗಳ ಕಾರಣ ವಾಯುವಿನಿಂದ

ಪ್ರಜ್ವಲಿಸುತ್ತಿದೆ. ಆಗ ಅದಕ್ಕೆ ಒಳಗಿನ ಅನುಭವಗಳು ಹೊರಗಿನ ಅನುಭವಗಳು ಕಟ್ಟಿಗೆಯಂತೆ ಕಾಣುತ್ತವೆ.

**ಮಂ.ಶ್ಲೋ॥ ಸಹ್ಯಾಗ್ನಿಃ ಕತಿ ವಿಧೋ ಭವತಿ ತ್ರೀಣಿ ವೈ ಶರೀರಾಣಿ ತೀಣಿವಾವ ರೇತಾಗ್ಂಸಿ ತ್ರೈಪುರ –ಸ್ತ್ರಿಧಾತುಸ್ತ್ರಯೀಮಯಸ್ತ್ರಿವಿಧೋಽಗ್ನಿಸ್ತ್ರೇತಾನಾಮಶಾರೀರಕೋ ವೈಶ್ವಾನರಃ (47) ಸ ಏವ ಜ್ಞಾನಾಗ್ನಿರ್ದರ್ಶನಾಗ್ನಿಃ ಕೋಷ್ಠಾಗ್ನಿರಿತಿಚ ಭವತಿ, ತತ್ರಜ್ಞಾನಾಗ್ನಿರ್ಮಾನಸೋ ದರ್ಶನಾಗ್ನಿ–ರೈಂದ್ರಿಯಕಃ ಕೋಷ್ಠಾಗ್ನಿರ್ದಾಹರಸ್ತತು ನಿತ್ಯಮಶಿತಪೀತ ಲೇಹ್ಯಚೋಷ್ಯಾದಿಕಂ ಪಾಚಯತಿ ಸಮಂ ಪ್ರಾಣಾಪಾನಾಭ್ಯಾಮ್ (48)**

ತಾ : ಆ ಅಗ್ನಿ ಎಷ್ಟು ವಿಧಗಳಲ್ಲಿವೆ? ಮೂರು ಬಗೆಯ ಅಗ್ನಿಗಳಿವೆ ಈ ದೇಹದಲ್ಲಿ ಮೂರು ಅಗ್ನಿಗಳು ಇವೆ ರೇತಸ್ಸು ಕೂಡಾ ಅಗ್ನಿಸಂಬಂಧವಾದುದೇ. ಅಗ್ನಿಯಂತೆಯೇ ಧಾತುಗಳು ಮೂರು ಇವೆ. ಪುರಗಳೂ ಮೂರು. ಜ್ಞಾನಾಗ್ನಿ, ದರ್ಶನಾಗ್ನಿ, ಕೋಷ್ಠಾಗ್ನಿ, ಎಂದು ಮೂರು ವಿಧಗಳಾಗಿವೆ. ಅದರಲ್ಲಿ ಜ್ಞಾನಾಗ್ನಿಯು ಮನಸ್ಸಿನಲ್ಲಿರುತ್ತದೆ. ದರ್ಶನಾಗ್ನಿಯು ಇಂದ್ರಿಯಗಳಲ್ಲಿವೆ. ಕೋಷ್ಠಾಗ್ನಿ ದಹರದಲ್ಲಿರುವುದು ಆ ಅಗ್ನಿಯು ಪ್ರಾಣ, ಅಪಾನ, ಎನ್ನುವ ವಾಯುವಿನೊಂದಿಗೆ ಸೇರಿ ಪ್ರತಿದಿನವೂ ಭುಜಿಸಲಾದ ಷಡ್ರಸೋಪೇತವಾದ ಅನ್ನಪಾನಗಳನ್ನು ಜೀರ್ಣ ಮಾಡುತ್ತದೆ.

**ಮಂ.ಶ್ಲೋ॥ ದೃಗೇವದರ್ಶನಾಗ್ನಿರ್ವಿಜ್ಞಾನವಿಕೃತಿಃ ದೃಶ್ಯದರ್ಶನಂ ಕರೋತಿ, ತಸ್ಯ ತ್ರೀಣಿಸ್ಥಾನಾನಿ ಭವಂತೀಂದ್ರಿಯಗೋಳಕಾನ್ಯುಪಸ್ಥಾನಾನಿ ಚಕ್ಷುರೇವಾವಸಥಃ (49) ಹೃದಯೇ ದಕ್ಷಿಣಾಗ್ನಿ –ರುದರೇ ಗಾರ್ಹಪತ್ಯಂ, ಮುಖೇಚಾಹವನೀಯಂ, ಯಜತೇ ಪುರುಷೋ ಯಜಮಾನಃ, ಬುದ್ಧಿಂ ಪತ್ನೀಂ ಪರಿಗೃಹ್ಯ ದೀಕ್ಷಾಂ ಸಂತೋಷಂ ಧೀಂದ್ರಿಯಾಣಿ ಯಜ್ಞಪಾತ್ರಾಣಿ ಕರ್ಮೇಂ–ದ್ರಿಯಾಣ್ಯುಪಕರಾಣಾನಿ ಸತ್ರೇ ಶಾರೀರಕೇ ತತ್ತದ್ದೇವತಾ ಏವರ್ತ್ವಿಜಸ್ತಟಸ್ಥಾ ಏವ ಯಥಾ ದೇಶಂ ಯಜಮಾನಮನುಯಜಂತೇ ತತ್ರ ಶಾಲಾ, ಶರೀರಂ ಕುಂಡಂತು, ಶಿರಃ ಕಪಾಲಂ ಕೇಶಾದರ್ಥಾಮುಖಮಂತರ್ವೇದಿಃ ಕಾಮಮಾಜ್ಯಂ ಜೀವಿತಕಾಲಸ್ಸತ್ರಕಾಲೋ ದಾಹರೋ ನಾದಸ್ಸಾಮ ವೈಖರೀ ಯಜುಃ ಪರಾಪಶ್ಯಂತಿ ಮಧ್ಯಮಾ ಚರ್ಚಃ ಪರುಷಾಣ್ಯಥರ್ವಖಿಲಾನಿ ಸೂನೃತಾನಿ ವ್ಯಾಹೃತಯ ಅಯುರ್ಬಲಂ ಪಿತ್ತಂ ಪಶವೋ ಮರಣಮವಭೃಥಃ (50)**

ತಾ : ನೇತ್ರವೇ ದರ್ಶನಾಗ್ನಿ. ಆ ನೇತ್ರವು ವಿಜ್ಞಾನ ವಿಕಾರವಾಗಿದ್ದು ಪದಾರ್ಥಗಳನ್ನು ಗೋಚರವಾಗುವಂತೆ ಮಾಡುತ್ತದೆ. ಅದಕ್ಕೆ ಸ್ಥಾನಗಳು ಮೂರು ಇವೆ. ಇಂದ್ರಿಯಗೋಳಗಳು, ಉಪಸ್ಥಾನ, ನೇತ್ರಗಳು, ಮಾನವನ ಹೃದಯದಲ್ಲಿರುವ ದಕ್ಷಿಣಾಗ್ನಿಯು ಉದರದಲ್ಲಿರುವ ಗಾರ್ಹ–ಪತ್ಯಾಗ್ನಿಯು, ಮುಖದಲ್ಲಿರುವ ಆಹವನೀಯಾಗ್ನಿಯು ಈ ಮೂರು ಅನುಭವ ವೇದ್ಯವಾದುದು. ಆದ್ದರಿಂದ ಪುರುಷನು ಯಜಮಾನನಾಗಿದ್ದುಕೊಂಡು, ಬುದ್ಧಿಯನ್ನು ಪತ್ನಿಯಾಗಿಯೂ, ಸಂತೋಷ–ವನ್ನು ದೀಕ್ಷೆಯಾಗಿಯೂ, ಜ್ಞಾನೇಂದ್ರಿಯಗಳಿಗೆ ಯಜ್ಞಪಾತ್ರೆಗಳಾಗಿಯೂ, ಕರ್ಮೇಂದ್ರಿಯಗಳನ್ನು ಕಾರ್ಯ ಸಾಧನಗಳನ್ನಾಗಿ ಮಾಡಿಕೊಂಡು, ಯಜ್ಞವನ್ನು ಮಾಡುತ್ತಿದ್ದಾನೆ. ಶಾರೀರಿಕ ಯಜ್ಞದಲ್ಲಿ ಆಯಾ ದೇವತೆಗಳೇ ತಟಸ್ಥರಾದ ಋತ್ವಿಕ್ಕರಾಗಿ ಆಯಾ ಸ್ಥಾನಗಳಲ್ಲಿ ಯಜಮಾನನೊಂದಿಗೆ ಕೂಡಾ

ಯಜ್ಞವನ್ನು ಮಾಡುತ್ತಾರೆ. ಆ ಯಜ್ಞದಲ್ಲಿ ದೇಹವೇ ಯಜ್ಞಶಾಲೆ. ಶಿರಃಕಪಾಲವೇ ಯಜ್ಞಕುಂಡ, ಕೇಶಗಳೇ ದರ್ಭೆಗಳು, ಕಾಮವೇ ಆಜ್ಯ, ಜೀವಿತ ಕಾಲವೇ ಯಜ್ಞಕಾಲದ ಅವಧಿ. ದಹರ ಶಬ್ದವೇ ಸಾಮಗಾನ, ವೈಖರೀ ಶಬ್ದವೇ ಯಜುರ್ವೇದ. ಮುಖವೇ ಅಂತರ್ವೇದಿ. ಪರಾ, ಪಶ್ಯಂತಿ, ಮಧ್ಯಮಗಳು ಋಗ್ವೇದ. ಕ್ರೂರವಾಕ್ಯಗಳು, ಅಥರ್ವ ವೇದದ ಖಿಲಭಾಗಗಳು ಸತ್ಯವಾಕ್ಯಗಳು ವ್ಯಾಹೃತಿಗಳು, ಆಯುಸ್ಸು, ಬಲ, ಪಿತ್ತವೆನ್ನುವವು ಪಶುಗಳು. ಮರಣವೇ ಅವಭೃಥ ಸ್ನಾನ.

**ಮಂ.ಶ್ಲೋ॥ ತಸ್ಮಿನ್ಯಜ್ಞೇ ಪ್ರಜ್ವಲಂತ್ಯಗ್ನಯಸ್ತತ್ರ ದೇವಾಸ್ಸಾಂಸಾರಿಕಮನುರೂಪಮುಪಯಚ್ಛಂತಿ ಯೇ ಕೇಚಿಚ್ಛೇತಯೇಯುಸ್ಸರ್ವೇ ಯಜ್ಞಕೃತೋ ನಾಯಜ್ಞಕೃಜ್ಜೀವತಿ ಯಜ್ಞಾಯೇದಂ ಶರೀರಂ ಯಜ್ಞಾದ್ಭವತಿ ಯಜ್ಞಾನುರೂಪಂ ವಿವರ್ತತೇ ಪರಿಣಾಮಿನೀ ಶರೀರಧಾರಾ ದುಃಖಾಬ್ಧಿಂ ಗಚ್ಛತಿ (51)**

ತಾ : ಈ ಯಜ್ಞದಲ್ಲಿ ಅಗ್ನಿಗಳು ಪ್ರಜ್ವಲಿಸುತ್ತಿವೆ. ಇದರಲ್ಲಿ ದೇವತೆಗಳು ಸರಿಯಾದ-ಚೆನ್ನಾದ-ಸಂಸಾರ ಸೌಖ್ಯವನ್ನು ಅನುಭವಿಸುತ್ತಿದ್ದಾರೆ. ಈ ವಿವರವನ್ನು ಸರಿಯಾಗಿ ತಿಳಿದು ಕೊಂಡವರೆಲ್ಲರೂ ಯಜ್ಞವನ್ನು ಮಾಡಿದವರೇ ಇಂತಹ ಯಜ್ಞವನ್ನು ಮಾಡಲಾಗದವನು ಬದುಕಿರುವಂತಹವನಲ್ಲ (ಬದುಕಿದವನಲ್ಲ). ಈ ದೇಹವು ಯಜ್ಞ ನಿಮಿತ್ತವಾಗಿಯೇ ಇದೆ. ಯಜ್ಞದಿಂದಲೇ ಕೂಡಿದೆ. ಯಜ್ಞಕ್ಕೆ ತಕ್ಕಂತೆ ವಿಕಾರವನ್ನು ಹೊಂದುತ್ತದೆ, ಪರಿಣಾಮವನ್ನು ಹೊಂದುತ್ತದೆ. ದುಃಖಸಾಗರದಲ್ಲಿ ಸೇರುತ್ತದೆ.

**ಮಂ.ಶ್ಲೋ॥ ತಸ್ಯೈತಚ್ಛರೀರಸ್ಯ ಷೋಡಶಪಾತ್ರ ದಂತಪಟಲಾನಿ ದಶಪಂಚಸುಷಯಷ್ಷಣ್ಣವತ್ಯಂ-ಗುಲೋನ್ಮಾನಂ ಚತುರ್ದಶನಾಡೀಸ್ಥಾನಾನ್ಯಷ್ಟೋತ್ತರಂ ಮರ್ಮಾಣಿ, ತತ್ರ ದ್ವಿಸಪ್ತತಿಧಮನ್ಯ-ಸ್ತಾಸಾಂ ಮಧ್ಯೇ ದ್ವಿಸಪ್ತತಿಸ್ತಾಸು ಮುಖ್ಯಾಸ್ತಿಸ್ರ ಇಡಾ ಪಿಂಗಳಾ ಸುಷುಮ್ನಾ ಚೇತಿ ತುರೀಯಾ ಪುರೀತತಿಃ ಪಂಚಮೀ ಜೀವಿತಂ ಜೀವಿತಾದಧಿಪಿತ್ತಂ ಪಿತ್ತಾದರ್ವಾಕ್ಪುರೀತತಿ-ರ್ನಾಭೇರೂರ್ಧ್ವಂ ದ್ವ್ಯಂಗುಳೇ ವಾಮಭಾಗೇ ಪಿತ್ತಮೂಲಂ ಪ್ರತಿಷ್ಠಿತಮನ್ನಮಶಿತಂ ತ್ರೇಧಾ ವಿಧೀಯತೇ, ಮೂತ್ರಂ ಪುರೀಷಂ ಸಾರ ಇತಿ, ಮೂತ್ರಂ ದ್ವಿಧಾ ಭೂತ್ವಾ ನಾಭೇರದೋ ವಾಮೇ ಪ್ರಸ್ರವತಿ, ಪುರೀಷಂ ಸಪ್ತಧಾ, ತತ್ರದಕ್ಷಿಣೇ ವರ್ತತೇ, ಸಾರಃ ಪಂಚವಿಧಶ್ಶರೀರಂ ವ್ಯಾಪ್ನೋತಿ, ತೇನ ವೈ ರೇತಶ್ಶೋಣಿತಂ ಚಾನ್ನ ಪಾನಾಭ್ಯಾಮ್ (52)**

ತಾ : ಅಂತಹ ಈ ದೇಹದಲ್ಲಿ ಹಲ್ಲುಗಳು ಮೂವತ್ತೆರಡು ಇವೆ. ಸುಷಿರಗಳು (ರಂಧ್ರಗಳು) 15. ಈ ದೇಹದ ಉದ್ದ ತೊಂಬತ್ತಾರು (96) ಅಂಗುಲಗಳು. ನಾಡೀ ಸ್ಥಾನಗಳು ಹದಿನಾಲ್ಕು. (14) ಮರ್ಮಗಳು (108) ನೂರೆಂಟು ಮುಖ್ಯವಾದ ನಾಡಿಗಳು ಎಪ್ಪತ್ತೆರಡು (72). ಇವುಗಳಲ್ಲಿ ಇಡಾ ಪಿಂಗಳ ಸುಷುಮ್ನಗಳೆಂಬುದು ಪ್ರಧಾನವಾದ ನಾಡಿಗಳು. ನಾಲ್ಕನೆಯದು ಪುರೀತತಿ. ಐದನೆಯ ನಾಡಿಯೇ ಜೀವನು. ಅದಕ್ಕೆ ಹಿಂದೆ ಪಿತ್ತವಿದೆ. ಪಿತ್ತಕ್ಕೆ ಮೊದಲು ಪುರೀತತಿಯಿದೆ. ನಾಭೀತಲಕ್ಕೆ ಎಡಭಾಗದಲ್ಲಿ ಎರಡಂಗುಲ ದೂರದಲ್ಲಿ ಪಿತ್ತಮೂಲವಿದೆ. ಭುಜಿಸಿದ ಆಹಾರವು ಮಲ, ಮೂತ್ರ, ಸಾರಗಳೆನ್ನುವ ಮೂರು ವಿಧವಾಗಿ ಮಾರ್ಪಡುತ್ತವೆ. ಮೂತ್ರವು ಎರಡು ಭಾಗಗಳಾಗಿ ಕೆಳಕ್ಕೆ ಎಡಭಾಗದಲ್ಲಿ ಪ್ರವಹಿಸುತ್ತದೆ. ಮಲವು ಏಳು ವಿಧಗಳಾಗಿ ದೇಹದ ಬಲಭಾಗದಲ್ಲಿದೆ. ಸಾರವು ಐದು ವಿಧಗಳಾಗಿ ದೇಹದಲ್ಲಿ ವ್ಯಾಪಿಸಿದೆ. ಆದ್ದರಿಂದ ಅನ್ನ ಪಾನಗಳಿಂದ ರೇತಸ್ಸು, ರಕ್ತ ಇವು ಏರ್ಪಡುತ್ತವೆ.

ಮಂ.ಶ್ಲೋ॥ ತತ್ರ ದೇಹೇ ಚಾಲಕೋ ವಾಯು ಸ್ಸಪ್ರಾಣಸ್ಸೂತ್ರಾತ್ಮಾ ತೇನೋಚ್ಛ್ವಸತಿ, ನಿಶ್ವಸತಿ ಚೇಷ್ಟತೇ ಚ, ಸಹ್ಯಂಗಂ ಶಾರೀರಕಂ ತೇನ ವಿನಾ ನ ಜೀವತಿ, ವಾಯುನಾ ವೈ ರುಧಿರ ಸ್ರೋತಾಂ ಸ್ಯುರಶ್ಚಕ್ರಾನ್ನಾಡೀಷು ಚಾಲ್ಯಂತೇ ತತಸ್ತ್ವಾಚಂ ಸರ್ವದರ್ಶನಮ್ (53) ರಸಃ ಪಕ್ವಸ್ಸವಿತ್ರೀ ಕುಕ್ಷೌ ಸ್ರಂಸಿನ್ಯಾ ಜರಾಯುಂ ಗತ್ವಾ ಶಿಶು ಶಿರಃ ಕಪಾಲಂ ಪ್ರವಿಶ್ಯ ಸುಷುಮ್ನಾ ದ್ವಾರಾ ಗರ್ಭಶಾಬಕ ಪ್ರಾಣಂ ತರ್ಪಯತಿ (54) ಸುಷುಮ್ನಾ ಬ್ರಹ್ಮನಾಡೀ ಭವತಿ ತತ್ರ ವ್ಯಜ್ಯತೇ ಪ್ರಾಣಾದಿರ್ಗರ್ಭಸ್ಯ ಜನ್ಮಾಭಿಮುಖೇಽಧೋಧಃ ಪ್ರಸ್ಕಂದತೇ ಜಾತಸ್ಯತು ಹೃದಯೇ ಪ್ರತಿಷ್ಠಿತಃ, ತಂತುಯೋಗೇನಾಯಮ್ಯ ಭ್ರೂಮಧ್ಯಾತ್ಸುಷುಮ್ನಾಂತಂ ಪ್ರಾಪಯೇದ್ಯಥಾ ಗರ್ಭಗಸ್ತಥಾ-ಪರೋಕ್ಷದರ್ಶೀ ಭವತಿ (55)

ತಾ : ಆ ಶರೀರದಲ್ಲಿ ಸಂಚರಿಸುವಂತೆ ಮಾಡುವ ವಾಯುವನ್ನು ಪ್ರಾಣವೆಂದು ಹೇಳಲಾಗುವುದು. ಆ ಪ್ರಾಣವು ನೂಲಿನ ಎಳೆಯಂತೆ ಇದೆ. ಅದರಿಂದಲೇ ಶ್ವಾಸವನ್ನು ಬಿಡುವುದು, ಎಳೆದುಕೊಳ್ಳುವುದು, ಸಂಚರಿಸುವುದು ಮುಂತಾದ ಕಾರ್ಯಗಳು ಜರುಗುತ್ತವೆ. ಈ ಪ್ರಾಣವಿಲ್ಲದೆ ಹೋದಲ್ಲಿ ದೇಹದಲ್ಲಿನ ಯಾವ ಅಂಗವೂ ಕೂಡಾ ಬದುಕಿರುವುದಿಲ್ಲ. ವಾಯುವಿನಿಂದಲೇ ರಕ್ತ ಪ್ರವಾಹಗಳು ಹೃದಯ ಚಕ್ರದಿಂದ ಸರ್ವನಾಡಿಗಳಲ್ಲೂ ಪ್ರವಹಿಸುತ್ತಿರುತ್ತವೆ. ಅಲ್ಲಿಂದ ಸರ್ವೇಂದ್ರಿಯ-ಗಳಿಗೆ ಹೋಗುವಂತೆ ಮಾಡುತ್ತವೆ ಪಾಕ ಮಾಡಲಾದ ರಸವು, ಮಾತೃಗರ್ಭದಿಂದ ನಾಡೀದ್ವಾರದ ಮೂಲಕ ಗರ್ಭಾಶಯವನ್ನು ಸೇರಿ ಶಿಶುವಿನ ಕಪಾಲದ ಮೂಲಕ ಪ್ರವೇಶಿಸಿ, ಸುಷುಮ್ನಾ ನಾಡಿಯ ಮಾರ್ಗವಾಗಿ ಗರ್ಭಕೋಶದಲ್ಲಿರುವ ಜೀವಿಯ ಪ್ರಾಣವನ್ನು ಸಂತೃಪ್ತಿಗೊಳಿಸುತ್ತದೆ. ಆ ಸುಷುಮ್ನಾ ನಾಡಿಯೇ ಬ್ರಹ್ಮನಾಡಿ ಗರ್ಭದ ಪ್ರಾಣ ಮುಂತಾದವುಗಳು ಅಲ್ಲಿ ಕಾಣಿಸುತ್ತವೆ. ಜನಿಸುವಾಗ ಕೆಳಗಡೆ ಜಾರುತ್ತದೆ. ಹುಟ್ಟಿದ ಮೇಲೆ ಹೃದಯದಲ್ಲಿ ಏರ್ಪಡುತ್ತದೆ. ಅದನ್ನು ಗರ್ಭದಲ್ಲಿರುವ ಜೀವಿಯು ಯೋಗದಿಂದ ನಿರೋಧಿಸಿ ಭ್ರೂಮಧ್ಯದಲ್ಲಿರುವ ಸುಷುಮ್ನಾ ನಾಡಿಯವರೆಗು ತೆಗೆದು-ಕೊಂಡು ಹೋದಲ್ಲಿ, ಆಗ ಪರಮಾತ್ಮನನ್ನು ಕಾಣಬಹುದು.

ಮಂ.ಶ್ಲೋ॥ ತಾದೃಗ್ವಿಧೇ ದೇಹೇಽಂತರ್ಯಾಮ್ಯಾತ್ಮಾಮೃತಸ್ಸಾಕ್ಷೀ ಪುರುಷಸ್ಸಹ್ಯಾವೃತೋ ಜೀವ-ತ್ಯಭಿಮಾನ್ಯವಿದ್ಯಯಾ ಚೇತತೇ ಪ್ರಾಣೇ, ತಸ್ಯಾವರಕಮಜ್ಞಾನಂ ಬೀಜಂ ತದಂಕುರ-ಮಂತಃಕರಣಂ ತದ್ವೃಕ್ಷಶ್ಶರೀರಂ (56) ತಸ್ಮಿನ್ ಲೋಮ್ನಾಮಷ್ಟೌ ಕೋಟಯಸ್ತ್ವಶೀತಿ ಸಂಧಿಶತಂ ನವಸ್ನಾಯುಶತಾನಿ ಹೃದಯಪಲಾನ್ಯಷ್ಟೌ ದ್ವಾದಶಪಲಾ ಜಿಹ್ವಾ ಪಿತ್ತಂ ಪ್ರಸ್ಥಂ ಕಫಶ್ಚಾಢಕಂ ಶುಕ್ಲಂ ಕುಡುಪಂ ಮೇದಃ ಪ್ರಸ್ಥೌ ದ್ವೌ ಸರ್ವಂ ನಶ್ವರಂ ವಿಜ್ಞಾಯ ಯಥಾ ಗರ್ಭಗಸ್ಸುಷುಮ್ನಾ ಪ್ರತಿಷ್ಠಿತೋ ಭೂಯಾಚ್ಚಂತುರ್ವಿವೇಕೀ ಮುಚ್ಯತೇ ನ ಪುನಶ್ಶರೀರಂ ಪ್ರಾಪ್ನೋತಿ (57)

ತಾ : ಇಂತಹ ದೇಹದಲ್ಲಿ ಅಂತರ್ಯಾಮಿಯಾಗಿಯೂ, ಅಮೃತವಾಗಿಯೂ, ಆತ್ಮಸಾಕ್ಷಿ-ಯಾಗಿಯೂ ಇರುವವನು ಪುರುಷನು. ಆ ಪುರುಷನು ಅವಿದ್ಯೆಯಿಂದ ಆಚ್ಛಾದಿಸಿದಂತಹವನಾಗಿ, ಅಭಿಮಾನಿಯಾಗಿ ಜೀವನಾಗುತ್ತಿದ್ದಾನೆ. ಜೀವನು ಅವಿದ್ಯೆಯಿಂದ ವ್ಯಾಪಿಸಿದವನಾಗಿರುವನು. ಆತನಿಗೆ

ಮರೆಯಾಗಿರುವ ಅಜ್ಞಾನವು ಬೀಜ. ಆ ಬೀಜದ ಮೊಳಕೆ ಅಂತಃಕರಣ. ಅದರ ವೃಕ್ಷ ಶರೀರ. ಈ ದೇಹದಲ್ಲಿ ಎಂಟು ಕೋಟಿ ರೋಮಗಳು, ಎಂಭತ್ತು ನೂರು ಸಂಧಿಗಳು, ಒಂಬತ್ತನೂರು ನರಗಳಿವೆ. ಹೃದಯದ ಎಂಟು ಪಲಗಳು, ನಾಲಗೆ 12 ಪಲಗಳು, ಪಿತ್ತವು ಒಂದು ಪಡಿ, ಕಫವು ಒಂದು ಬಳ್ಳ, ಕೊಬ್ಬು ಎರಡು ಪಡಿಗಳು, ಇವೆಲ್ಲವೂ ನಶಿಸುವುದೆಂದು ತಿಳದುಕೊಂಡು ಗರ್ಭದಲ್ಲಿರುವ ಜಂತುವಿನಂತೆ ಸುಷುಮ್ನಾ ನಾಡಿಯಲ್ಲಿ ಸ್ಥಿರವಾಗಿದ್ದು ವಿಜ್ಞಾನಿಯಾಗಬೇಕು ಈ ರೀತಿಯಾಗಿ ಮೋಕ್ಷವನ್ನು ಹೊಂದಬೇಕು. ಅಂತಹ ಜ್ಞಾನಿಗೆ ಪುನರ್ಜನ್ಮವಿಲ್ಲ.

**ಮಂ.ಶ್ಲೋ॥ ಅನ್ಯಥಾತ್ವಜ್ಞಸ್ಯ ಸಂಸಾರಿಣ ಅಹರಹಃ ಕ್ರಿಮಿವತ್ತನ್ಮೂತ್ರ ಪುರೀಷಯೋಃ ಪಾನಂ ಯಥಾ ನರಕೇ ತದ್ವದಿಹೈವ ಶರೀರೇ, ತದೇತತ್ಪರಿಮಾಣಂ ಪರಿಜ್ಞಾಯ ನಿರ್ವಿದ್ಯಾದಿತಿ ಪೈಪ್ಪಲಾದಂ ಮೋಕ್ಷಶಾಸ್ತ್ರಂ ಪರಿಸಮಾಪ್ತಂ, ಪೈಪ್ಪಲಾದಂ ಮೋಕ್ಷಶಾಸ್ತ್ರಂ ಪರಿಸಮಾಪ್ತಮಿತ್ಯುಪನಿಷತ್ (58)**

ತಾ : ಆ ವಿಧವಾಗಿ ತಿಳದುಕೊಳ್ಳದೆ ಅಜ್ಞಾನದೊಂದಿಗೆ ಸಂಸಾರ ಮಾಡುವವನಿಗೆ ಕೀಟದಂತೆ ನರಕ ಸಮಾನವಾದ ಈ ಶರೀರದಲ್ಲಿ ಮೂತ್ರಪುರೀಷ ಪಾನ ಮಾಡುವ ದುಸ್ಥಿತಿಯುಂಟಾಗುವುದು. ಈ ಜ್ಞಾನವನ್ನು ತಿಳದು ಕೊಂಡ ಜೀವನು ವೈರಾಗ್ಯ ಭಾವವನ್ನು ಹೊಂದುವನು ಎಂದು ಪಿಪ್ಪಲಾದ ಮಹಾಮುನಿಯು ಬೋಧಿಸಿದ. (ಗರ್ಭೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**



## ನಾರಾಯಣೋಪನಿಷತ್ತು - 18

(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

ಮಂ.ಶ್ಲೋ॥ ಮಾಯಾ ತತ್ಕಾರ್ಯಮಖಿಲಂ, ಯದ್ಬೋಧಾದ್ಯಾತ್ಯಪಹ್ನವಮ್ ।
ತ್ರಿಪಾನ್ನಾರಾಯಣಾಖ್ಯಂ ತತ್ ಕಲಯೇ ಸ್ವಾತ್ಮಮಾತ್ರತಃ ॥

ಮಂ.ಶ್ಲೋ॥ ಓಂ ಅಥ ಪುರುಷೋ ಹ ವೈ ನಾರಾಯಣೋಽಕಾಮಯತ, ಪ್ರಜಾಃ ಸೃಜೇಯೇತಿ, ನಾರಾಯಣಾತ್ ಪ್ರಾಣೋ ಜಾಯತೇ, ಮನಸ್ಸರ್ವೇಂದ್ರಿಯಾಣಿ ಚ, ಖಂ ವಾಯುರ್ಜ್ಯೋತಿ-ರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ, ನಾರಾಯಣಾದ್ಬ್ರಹ್ಮಾ ಜಾಯತೇ, ನಾರಾಯಣಾ-

**ದ್ರುದ್ರೋ ಜಾಯತೇ, ನಾರಾಯಣಾದಿಂದ್ರೋ ಜಾಯತೇ, ನಾರಾಯಣಾತ್ಪ್ರಜಾಪತಿಃ ಪ್ರಜಾಯತೇ, ನಾರಾಯಣಾತ್ ದ್ವಾದಶಾದಿತ್ಯಾ ರುದ್ರಾ ವಸವಸ್ಸರ್ವಾಣಿ ಛಂದಾಂಸಿ, ನಾರಾಯಣಾದೇವ ಸಮುತ್ಪದ್ಯಂತೇ, ನಾರಾಯಣಾತ್ ಪ್ರವರ್ತಂತೇ, ನಾರಾಯಣೇ ಪ್ರಲೀಯಂತೇ, ಏತದೃಗ್ವೇದಶಿರೋಽಧೀತೇ (1)**

ತಾ : ಈ ಸೃಷ್ಟಿ ಪ್ರಾರಂಭದಲ್ಲಿ ಪರಮಪುರುಷನಾದ ನಾರಾಯಣನು ಪ್ರಾಣಗಳನ್ನು ಸೃಜಿಸಿದ. ಆಗ ಸಮಷ್ಟಿ ಸೂಕ್ಷ್ಮ ಶರೀರ ರೂಪಿಯಾದ ಹಿರಣ್ಯಗರ್ಭನು ಹುಟ್ಟಿದ. ನಂತರ ಆಕಾಶ, ವಾಯು, ಅಗ್ನಿ, ಜಲ, ಈ ಪೃಥ್ವಿ ಹುಟ್ಟಿದವು. ಹೀಗೆ ನಾರಾಯಣನಿಂದಲೇ ಬ್ರಹ್ಮದೇವ, ರುದ್ರ, ಇಂದ್ರ, ಮರೀಚಿ, ಕಶ್ಯಪ ಮುಂತಾದ ಪ್ರಜಾಪತಿಗಳು ಉದ್ಭವಿಸಿದರು. ನಾರಾಯಣನಿಂದಲೇ ದ್ವಾದಶಾ-ದಿತ್ಯರು, ಏಕಾದಶಿ ರುದ್ರರು, ಅಷ್ಟವಸುಗಳು, ಸಕಲ ವೇದಗಳು ಆವಿರ್ಭವಿಸಿದವು. ಹೀಗೆ ಸಕಲ ಚರಾಚರಗಳು ನಾರಾಯಣನಿಂದಲೇ ಉತ್ಪನ್ನವಾಗುತ್ತಿವೆ. ನಾರಾಯಣನಲ್ಲೇ ಇವೆಲ್ಲವೂ ಇವೆ. ಕೊನೆಗೆ ನಾರಾಯಣ-ನಲ್ಲಿಯೇ ಸರ್ವಸ್ವವೂ ಲಯವಾಗುತ್ತದೆ. ಈ ತತ್ತ್ವವು ಋಗ್ವೇದ ಶಿರಸ್ಸಿನಲ್ಲಿ ಬೋಧಿಸಲ್ಪಟ್ಟಿದೆ.

ಮಂ.ಶ್ಲೋ॥ **ಅಥ ನಿತ್ಯೋ ನಾರಾಯಣಃ, ಬ್ರಹ್ಮಾ ನಾರಾಯಣಃ, ಶಿವಶ್ಚ ನಾರಾಯಣಃ, ಶಕ್ರಶ್ಚ ನಾರಾಯಣಃ, ದ್ಯಾವಾಪೃಥಿವ್ಯೌ ಚ ನಾರಾಯಣಃ, ಕಾಲಶ್ಚ ನಾರಾಯಣಃ, ದಿಶಶ್ಚ ನಾರಾಯಣಃ, ಊರ್ಧ್ವಂಚ ನಾರಾಯಣಃ, ಅಧಶ್ಚ ನಾರಾಯಣಃ, ಅಂತರ್ಬಹಿಶ್ಚ ನಾರಾಯಣಃ, ನಾರಾಯಣ ಏವೇದಗ್ಂ ಸರ್ವಂ, ಯದ್ಭೂತಂ ಯಚ್ಚಭವ್ಯಂ, ನಿಷ್ಕಳಂಕೋ ನಿರಂಜನೋ ನಿರ್ವಿಕಲ್ಪೋ ನಿರಾಖ್ಯಾತಶ್ಶುದ್ಧೋ ದೇವ ಏಕೋ ನಾರಾಯಣಃ, ನ ದ್ವಿತೀಯೋಸ್ತಿ ಕಶ್ಚಿತ್, ಯ ಏವಂ ವೇದ ಸ ವಿಷ್ಣುರೇವ ಭವತಿ, ಸ ವಿಷ್ಣುರೇವ ಭವತಿ, ಏತದ್ಯಜುರ್ವೇದ ಶಿರೋಽಧೀತೇ (2)**

ತಾ : ನಾರಾಯಣನು ನಿತ್ಯನೂ, ಬ್ರಹ್ಮದೇವನೂ ನಾರಾಯಣನೇ. ಶಿವನೂ ನಾರಾಯಣನೇ, ಇಂದ್ರನೂ ನಾರಾಯಣನೇ, ಭೂಮಿ, ಆಕಾಶಗಳೂ ನಾರಾಯಣನೇ. ಕಾಲತತ್ತ್ವವೂ ನಾರಾಯಣನೇ. ದಶದಿಕ್ಕುಗಳೂ ನಾರಾಯಣನೇ. ಊರ್ಧ್ವಭಾಗದಲ್ಲಿರುವುದೆಲ್ಲವೂ ನಾರಾಯಣನೇ ಅಧೋಭಾಗ-ದಲ್ಲಿರುವುದೆಲ್ಲವೂ ನಾರಾಯಣನೇ. ಮಧ್ಯಭಾಗದಲ್ಲಿರುವುದೆಲ್ಲವೂ ನಾರಾಯಣನೇ. ಒಳ ಹೊರಗಿರುವುದೆಲ್ಲವೂ (ಬಾಹ್ಯಾಂತರದಲ್ಲಿರುವುದೆಲ್ಲವೂ) ನಾರಾಯಣನೇ. ಈ ಸಮಸ್ತವೂ ನಾರಾಯಣನೇ. ಭೂತ ಭವಿಷ್ಯದ್ವರ್ತಮಾನಗಳೆಲ್ಲವೂ ನಾರಾಯಣನೇ. ನಾರಾಯಣನು ನಿಷ್ಕಳಂಕನು, ನಿರಂಜನನು, ನಿರ್ವಿಕಲ್ಪನು. ಮಾತಿನಲ್ಲಿ ಹೀಗೆಂದು ಹೇಳಲು ಸಾಧ್ಯವಿಲ್ಲದವನು. ಶುದ್ಧನು, ದೇವನೂ, (ಏಕೋನಾರಾಯಣಃ ನದ್ವಿತೀಯೋಸ್ತಿ) ಅದ್ವಿತೀಯನು ಆ ನಾರಾಯಣನಲ್ಲದೆ ಮತ್ಯಾರೂ ಇಲ್ಲವೇ ಇಲ್ಲ. ಈ ವಿಧವಾಗಿ ಗ್ರಹಿಸಿದವನು ನಾರಾಯಣನೇ ಆಗುವನು ಈ ವಿವರವು ಯಜುರ್ವೇದ ಶಿರಸ್ಸಿನಲ್ಲಿ ಬೋಧಿಸಲಾಗಿದೆ.

ಮಂ.ಶ್ಲೋ॥ **ಓಮಿತ್ಯಗ್ರೇ ವ್ಯಾಹರೇತ್, ನಮ ಇತಿ ಪಶ್ಚಾತ್, ನಾರಾಯಣಾಯೇತ್ಯುಪರಿಷ್ಟಾತ್, ಓಮಿತ್ಯೇಕಾಕ್ಷರಮ್, ನಮ ಇತಿ ದ್ವೇ ಅಕ್ಷರೇ, ನಾರಾಯಣಾಯೇತಿ ಪಂಚಾಕ್ಷರಾಣಿ,**

**ಏತದ್ವೈ ನಾರಾಯಣಸ್ಯಾಷ್ಟಾಕ್ಷರಂ ಪದಮ್, ಯೋಹ ವೈ ನಾರಾಯಣಸ್ಯಾಷ್ಟಾಕ್ಷರಂ ಪದಮಧ್ಯೇತಿ, ಅನಪಬ್ರುವಸ್ಸರ್ವಮಾಯುರೇತಿ, ವಿಂದತೇ ಪ್ರಾಜಾಪತ್ಯಮ್, ರಾಯಸ್ಪೋಷಂ ಗೌಪತ್ಯಮ್, ತತೋಽಮೃತತ್ವಮಶ್ನುತೇ ತತೋಽಮೃತತ್ವಮಶ್ನುತ ಇತಿ, ಏತತ್ಸಾಮವೇದ ಶಿರೋಽಧಿತೇ (3)**

ತಾ : ಮೊದಲು "ಓಂ" ಎಂದು ನುಡಿಯಬೇಕು. ಆಮೇಲೆ 'ನಮೋ" ಎಂದು ಉಚ್ಚರಿಸಬೇಕು. ತದನಂತರ "ನಾರಾಯಣಾಯ" ಎಂದು ಹೇಳಬೇಕು ಓಮ್ ಅಕ್ಷರವು ಒಂದು ನಮೋ ಎನ್ನುವ ಅಕ್ಷರಗಳು ಎರಡು. "ನಾರ್ರಾಯಣಾಯ" ಎನ್ನುವ ಅಕ್ಷರಗಳು ಐದು. ಈಗ ಇದು "ಓಮ್ ನಮೋ ನಾರಾಯಣಾಯ" ಅಷ್ಟಾಕ್ಷರ ಮಂತ್ರ. 8 ಅಕ್ಷರಗಳುಳ್ಳ ಈ ಮಹಾಮಂತ್ರವನ್ನು ಯಾರು ಶ್ರದ್ಧಾ ಭಕ್ತಿಗಳೊಂದಿಗೆ, ಪ್ರೀತಿಯಿಂದ, ವಿಶ್ವಾಸದಿಂದ ಜಪಿಸುವರೋ ಆತನು ಪೂರ್ಣಾಯುರ್ದಾಯ-ವನ್ನುಳ್ಳವನಾಗುವನು. ಆತನು ಪ್ರಜಾಪತಿ ಪದವನ್ನು, ಸ್ವರ್ಗಾಧಿಪತ್ಯವನ್ನು ಹೊಂದುವನು. ಧನಧಾನ್ಯಗಳನ್ನು, ಸಕಲಸಂಪತ್ತನ್ನು ಹೊಂದುವನು. ಯಾರು ಇದನ್ನು ತಿಳಿದುಕೊಳ್ಳುವರೋ ಅಂತಹವರು ಅಮೃತತ್ವವನ್ನು ಹೊಂದುವರು. ಈ ತತ್ತ್ವವನ್ನು ಸಾಮವೇದೋಪನಿಷತ್ತಿನಲ್ಲಿ ಬೋಧಿಸಲಾಗಿದೆ.

**ಮಂ.ಶ್ಲೋ॥ ಪ್ರತ್ಯಗಾನಂದಂ ಬ್ರಹ್ಮಪುರುಷಂ ಪ್ರಣವಸ್ವರೂಪಮ್, ಅಕಾರ ಉಕಾರೋ ಮಕಾರ ಇತಿ, ತಾನೇಕಧಾ ಸಮಭವತ್ತದೇತದೋಮಿತಿ ಯ ಮುಕ್ತ್ವಾ ಮುಚ್ಯತೇ ಯೋಗೀ ಜನ್ಮಸಂಸಾರಬಂಧನಾತ್, ಓಂನಮೋನಾರಾಯಣಾಯೇತಿ ಮಂತ್ರೋಪಾಸಕಃ, ವೈಕುಂಠ ಭವನಂ ಗಮಿಷ್ಯತಿ, ತದಿದಂ ಪರಂ ಪುಂಡರೀಕಂ ವಿಜ್ಞಾನಘನಂ ತಸ್ಮಾತ್ತಟಿದಾಭ-ಮಾತ್ರಮ್, ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂಧನಃ, ಬ್ರಹ್ಮಣ್ಯಃ ಪುಂಡರೀಕಾಕ್ಷೋ ಬ್ರಹ್ಮಣ್ಯೋ ವಿಷ್ಣುರಚ್ಯುತಃ ಇತಿ, ಸರ್ವಭೂತಸ್ಥಮೇಕಂ ವೈ ನಾರಾಯಣಂ ಕಾರಣಪುರುಷಮಕಾರಣಂ ಪರಂಬ್ರಹ್ಮೋಮ್, ಏತದಥರ್ವಶಿರೋಽಧೀತೇ (4)**

ತಾ : 'ಅ' ಕಾರ 'ಉ' ಕಾರ 'ಮ' ಕಾರಗಳಾದ ಈ ಮೂರು ಅಕ್ಷರಗಳು ಸೇರಿ 'ಓಂ' ಎನ್ನುವ ಪ್ರಣವವಾಗುತ್ತಿದೆ. ಈ ಪ್ರಣವಕ್ಕೆ ಅರ್ಥವು ಪ್ರತ್ಯಗಾನಂದ ಸ್ವರೂಪನಾದ ಪರಬ್ರಹ್ಮವು. ಈ ಓಂಕಾರವನ್ನು ಅರ್ಥಯುಕ್ತವಾಗಿ ಸ್ಮರಣೆ ಮಾಡುವಂತಹ ಯೋಗಿಯು ಜನನ ಮರಣ ರೂಪ ಸಂಸಾರಬಂಧನದಿಂದ ವಿಮುಕ್ತಿ ಹೊಂದುತ್ತಾನೆ. "ಓಮ್ ನಮೋ ನಾರಾಯಣಾಯ" ಎನ್ನುವ ಅಷ್ಟಾಕ್ಷರ ಮಂತ್ರವನ್ನು ಉಪಾಸಿಸುವವನು ವೈಕುಂಠ ಲೋಕವನ್ನು ಸೇರುವನು. ಸರ್ವವ್ಯಾಪಕವಾದ ಆ ಪರಬ್ರಹ್ಮವು ಹೃದಯಪುಂಡರೀಕದಲ್ಲಿ ವಿಜ್ಞಾನ ಘನವಾದ ಅಂತರ್ಯಾಮಿಯಾಗಿ, ಅಂತರ್ಯಾತ್ಮವಾಗಿ ಪ್ರಕಾಶಿಸುತ್ತಿದೆ. ಅದು ಮಿಂಚಿನಂತೆ ಪ್ರಕಾಶಮಾನವಾದುದು. ಪರಬ್ರಹ್ಮ ಸ್ವರೂಪನಾದ ನಾರಾಯಣನು ಬ್ರಹ್ಮಣನು, ದೇವಕೀಪುತ್ರನಾದ, ಮಧುಸೂಧನನು, ಪುಂಡರೀಕಾಕ್ಷನು, ಅಚ್ಯುತನು ಸಮಸ್ತ ಪ್ರಾಣಿಗಳೆಲ್ಲದರಲ್ಲಿ ಒಬ್ಬನೇ ನಾರಾಯಣನು ಅಂತರ್ಯಾಮಿಯಾಗಿ ಪ್ರಕಾಶಿಸುತ್ತಿರುವನು. ಆತನು ಸರ್ವವ್ಯಾಪಿಯಾಗಿ ಈ ಸಮಸ್ತ ಪ್ರಪಂಚಕ್ಕೆ ಕಾರಣಭೂತನಾಗಿ ತನಗೆ ಬೇರೊಂದು ಕಾರಣವೇ ಇಲ್ಲದವನಾಗಿ ಪ್ರಕಾಶಿಸುತ್ತಿದ್ದಾನೆ. ಈ ತತ್ತ್ವವನ್ನು ಅಥರ್ವ

ವೇದದ ಶಿರಸ್ಸಿನಲ್ಲಿ ಬೋಧಿಸಲಾಗಿದೆ (ಪ್ರತ್ಯಗಾನಂದಂ ಬ್ರಹ್ಮಪುರುಷಂ - ಎನ್ನುವ ಮಂತ್ರ ಆತ್ಮಬೋಧೋಪನಿಷತ್ತಿನಲ್ಲಿಯೂ ಇದೆ.)

ಮಂ.ಶ್ಲೋ॥ ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ, ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ, ತತ್ಸಾಯಂಪ್ರಾತರಧೀಯಾನಃ ಅಪಾಪೋ ಭವತಿ, ಮಾಧ್ಯಂದಿನಮಾದಿತ್ಯಾಭಿಮುಖೋಽಧೀಯಾನಃ ಪಂಚಮಹಾಪಾತಕೋಪಪಾತಕಾತ್ ಪ್ರಮುಚ್ಯತೇ, ಸರ್ವವೇದ ಪಾರಾಯಣ ಪುಣ್ಯಂ ಲಭತೇ, ನಾರಾಯಣಸಾಯುಜ್ಯ-ಮವಾಪ್ನೋತಿ, ಶ್ರೀಮನ್ನಾರಾಯಣ ಸಾಯುಜ್ಯಮವಾಪ್ನೋತಿ, ಯ ಏವಂ ವೇದ, ಇತ್ಯುಪನಿಷತ್ (೮) (ನಾರಾಯಣೋಪನಿಷತ್ಸಮಾಪ್ತಾ)

ತಾ : ಸರ್ವೋಪನಿಷತ್ಸಾರವಾದ ಈ ಉಪನಿಷತ್ತನ್ನು ಯಾರು ಪ್ರಾತಃ ಕಾಲದಲ್ಲಿ ಪಾರಾಯಣ ಮಾಡುವರೋ ಆತನು ರಾತ್ರಿಯಲ್ಲಿ ಮಾಡಿರುವಂತಹ ಪಾಪವನ್ನು ನಾಶಗೊಳಿಸಿಕೊಳ್ಳುತ್ತಾನೆ. ಯಾರು ಸಾಯಂಕಾಲದಲ್ಲಿ ಇದನ್ನು ಪಾರಾಯಣ ಮಾಡುತ್ತಾರೋ ಆತನು ಹಗಲಿನಲ್ಲಿ ಮಾಡಿದ ಪಾಪವನ್ನು ನಶಿಸುವಂತೆ ಅಥವಾ ನಾಶಪಡಿಸಿಕೊಳ್ಳುತ್ತಾನೆ. ಮಧ್ಯಾಹ್ನ ಕಾಲದಲ್ಲಿ ಸೂರ್ಯನಿಗೆ ಅಭಿಮುಖವಾಗಿದ್ದು, ಯಾರು ಇದನ್ನು ಪಾರಾಯಣ ಮಾಡುವರೋ ಆತನು ಪಂಚಮಹಾಪಾತಕ-ಗಳನ್ನು ಉಪಪಾತಕಗಳನ್ನು ಹೋಗಲಾಡಿಸಿಕೊಳ್ಳುವನು. ಈ ನಾರಾಯಣ ಉಪನಿಷತ್ತನ್ನು ಪಾರಾಯಣ ಮಾಡುವವನು ನಾಲ್ಕು ವೇದಗಳನ್ನು ಪಾರಾಯಣ ಮಾಡಿದ ಪುಣ್ಯವನ್ನು ಸಂಪಾದಿಸಿಕೊಳ್ಳುವನು. ಮತ್ತು ಈ ಉಪನಿಷತ್ತಿನ ಪಾರಾಯಣಪರನು ಅಂತಿಮ ದೆಶೆಯಲ್ಲಿ ನಾರಾಯಣ ಸಾಯುಜ್ಯವನ್ನು ಹೊಂದುವನು. ಯಾರು ಇದನ್ನು ತಿಳಿದುಕೊಂಡು ಹಾಗೆ ನಡೆದುಕೊಳ್ಳುವನೋ, ಆತನು ನಾರಾಯಣ ಸಾಯುಜ್ಯವನ್ನು ಹೊಂದುವನು. ಹೀಗೆಂದು ಉಪನಿಷತ್ತು ಹೇಳಿದೆ. (ನಾರಾಯಣೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**





# ಪರಮ ಹಂಸೋಪನಿಷತ್ತು - 19

(ಶುಕ್ಲ ಯಜುರ್ವೇದಾಂತರ್ಗತ)

ಶಾಂತಿ ಮಂತ್ರ॥ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ॥ ಪರಮಹಂಸೋಪನಿಷದ್ವೇದ್ಯಾಪಾರ ಸುಖಾಕೃತೀ ।
ತ್ರೈಪಾದ ಶ್ರೀರಾಮತತ್ತ್ವಂ ಸ್ವಮಾತ್ರಮಿತಿ ಚಿನ್ತಯೇ ॥

ಮಂ.ಶ್ಲೋ॥ ಓಂ ಅಥ ಯೋಗಿನಾಂ ಪರಮಹಂಸಾನಾಂ ಕೋಮಾರ್ಗಸ್ತೇಷಾಂ
ಕಾ ಸ್ಥಿತಿರಿತಿ ನಾರದೋ ಭಗವಂತಮುಪಸಮೇತ್ಯೋವಾಚ (1)

ತಾ : ಮತ್ತೆ ನಾರದ ಮುನೀಂದ್ರನು ಪರಮೇಶ್ವರನನ್ನು ಸಮೀಪಿಸಿ (ಹಿರಣ್ಯಾಗರ್ಭನನ್ನು ಸಮೀಪಿಸಿ) ಯೋಗಿಗಳಿಗೆ ಪರಮಹಂಸರ ಮಾರ್ಗವು ಹೇಗೆ ಇರುವುದು? ಅವರ ಸ್ಥಿತಿ ಸಂಪ್ರದಾಯಗಳು ಹೇಗಿರುವುವು? ಎಂದು ಪ್ರಶ್ನಿಸಿದ.

ತಾ : ಪರಮಹಂಸ ದಂಡಕಮಲಗಳನ್ನು ಪರಿಗ್ರಹಿಸುವುದಿಲ್ಲ ಶಿಖೆಯನ್ನು ಧರಿಸುವುದಿಲ್ಲ (ಧಾರಣೆ ಮಾಡುವುದಿಲ್ಲ.)

ಮಂ.ಶ್ಲೋ॥ ತಂ ಭಗವಾನಾಹಂ ಯೋಽಯಂ ಪರಮಹಂಸಮಾರ್ಗೋ ಲೋಕೇ ದುರ್ಲಭತರೋ ನ ತು ಬಾಹುಳ್ಯಃ ಯದ್ಯೇಕೋ ಭವತಿ ಸ ಏವ ನಿತ್ಯಕೂಟಸ್ಥಸ್ಸಏವ ವೇದಪುರುಷ ಇತಿ ವಿದುಷೋ ಮನ್ಯಂತೇ ಮಹಾಪುರುಷೋ ಯಚ್ಚಿತ್ತಂ ತತ್ಸದಾ ಮಯ್ಯೇವ ತಿಷ್ಠತೇ ತಸ್ಮಾದಹಂ ಚ ತಸ್ಮಿನ್ನೇವಾವಸ್ಥಿಯತೇಽಸೌ ಸ್ವಪುತ್ರ ಮಿತ್ರ ಕಳತ್ರ ಬಂಧ್ವಾದೀಂಚ್ಛಿಖಾಂ ಯಜ್ಞೋಪವೀತಗ್ಂ ಸ್ವಾಧ್ಯಾಯಂ ಚ ಸರ್ವಕರ್ಮಾಣಿ ಸನ್ನ್ಯಸ್ಯಾಯಂ ಬ್ರಹ್ಮಾಂಡಂ ಚ ಹಿತ್ವಾ ಕೌಪೀನಂ ದಂಡಮಾಚ್ಛಾದನಂ ಚ ಸ್ವಶರೀರೋಪಭೋಗಾರ್ಥಾಯ ಲೋಕಸ್ಯೈವೋಪಕಾರಾರ್ಥಾಯ ಚ ಪರಿಗ್ರಹೇತ್ತಚ್ಚ ನ ಮುಖ್ಯೋಽಸ್ತಿ ಕೋಽಯಂ ಮುಖ್ಯ ಇತಿ ಚ ಯದಯಂ ಮುಖ್ಯಃ (2)

ತಾ : ಹಿರಣ್ಯಾಗರ್ಭ ಪರಮಾತ್ಮನು ಹೀಗೆ ಹೇಳಿದ. ಪರಮಹಂಸ ಮಾರ್ಗವು ಅತ್ಯಂತ ದುರ್ಲಭತರವಾಗಿರುವುದು. ವಿಸ್ತಾರವಾದ ಈ ಪರಮಹಂಸ ಮಾರ್ಗದಲ್ಲಿ ಸಂಚರಿಸುವವರು ಬಹಳ ಕಡಿಮೆ ಸಂಖ್ಯೆಯಲ್ಲಿರುವರು. ಬ್ರಹ್ಮಚಾರಿ ಗೃಹಸ್ಥಾಶ್ರಮಗಳಲ್ಲಿರುವಂತೆ ಅಧಿಕ ಸಂಖ್ಯೆಯಲ್ಲಿರುವುದಿಲ್ಲ. ಪುಣ್ಯ ತೀರ್ಥಕ್ಷೇತ್ರಗಳಲ್ಲಿ ಎಲ್ಲೋ ಒಬ್ಬೊಬ್ಬರು ಕಾಣಸಿಗುವರು. ಅಂತಹವನೇ ಪರಮಪವಿತ್ರನು ಶಿಖೆ ಯಜ್ಞೋಪವೀತಗಳಿಲ್ಲದಿದ್ದರೂ ಆತನು ನಿತ್ಯ ಪವಿತ್ರನಾದವನು. ಆತನೇ

ವೇದಪುರುಷನು. ಪುತ್ರ, ಮಿತ್ರ, ಪತ್ನಿ, ಬಂಧುಗಳಾದಿಯನ್ನು ಶಿಖಾಯ ಯಜ್ಞೋಪವೀತಗಳನ್ನು ಸ್ವಾಧ್ಯಾಯವನ್ನು ಸರ್ವ ಕರ್ಮಗಳನ್ನು ಶಾಸ್ತ್ರಾನುಸಾರವಾಗಿ ತ್ಯಜಿಸಿ, ಲೋಕೋಪಕಾರ ನಿಮಿತ್ತ ಬ್ರಹ್ಮಾಂಡವನ್ನು ಕೂಡಾ ಬಿಟ್ಟು, ಕೌಪೀನ, ದಂಡವನ್ನು, ಕಾಷಾಯ ವಸ್ತ್ರವನ್ನು ಸ್ವಶರೀರ ಭೋಗಕ್ಕಾಗಿ ಧರಿಸಿ ಲೋಕೋಪಕಾರದ ನಿಮಿತ್ತವಾಗಿ ಪರಿಗ್ರಹಿಸಬೇಕು ಈ ಕೌಪೀನಾದಿ ಪರಿಗ್ರಹಣ ಮುಖ್ಯವಲ್ಲ. ಮುಂದೆ ಹೇಳುವಂತಹ ವಿಷಯವು ಮುಖ್ಯವಾದುದು.

**ಮಂ.ಶ್ಲೋ॥ ನ ದಂಡಂ ನ ಕಮಂಡಲುಂ ನ ಶಿಖಾನ್ನಯಜ್ಞೋಪವೀತಂ ನಚಾಚ್ಛಾದನಂ ಚರತಿ ಪರಮಹಗ್ಂಸೋ ನ ಶೀತಂ ನಚೋಷ್ಣಂ ನ ಸುಖಂ ನ ದುಃಖಂ ನ ಮಾನಾಪಮಾನೇ ಇತಿ ಷಡೂರ್ಮಿವರ್ಜಿತೋ ನ ಶಬ್ದಂ ನ ಸ್ಪರ್ಶಂ ನ ರೂಪಂ ನ ರಸಂ ನ ಗಂಧಂ ನಚ ಮನೋಽಪ್ಯೇವಂ ನಿಂದಾ ಗರ್ವ ಮತ್ಸರ ದಂಭ ದರ್ಪೇಚ್ಛಾ ದ್ವೇಷ ಸುಖದುಃಖ ಕಾಮ ಕ್ರೋಧ ಲೋಭ ಮೋಹ ಹರ್ಷಾಸೂಯಾಹಂಕಾರಾದೀಂಶ್ಚ ಹಿತ್ವಾ ಸ್ವವಪುಃ ಕುಣಪಮಿವ ದೃಶ್ಯತೇ ಯತಸ್ತದ್ವಪುರಪಧ್ವಸ್ತಂ ಸಗ್ಂಶಯ ಮಿಥ್ಯಾಜ್ಞಾನಾನಾಂ ಯೋ ಹೇತುಸ್ತೇನ ನಿತ್ಯನಿವೃತ್ತಸ್ತನ್ನಿತ್ಯಬೋಧಸ್ತತ್ ಸ್ವಯಮೇವಾಪಸ್ಥಿತಿಸ್ತಗ್ಂ ಶಾಂತಮಚಲ-ಮದ್ವಯಾನಂದಚಿದ್ಘನ ಏವಾಸ್ಮಿ ತದೇವ ಮಮ ಪರಮಂಧಾಮ ತದೇವ ಶಿಖಾ ತದೇವೋಪವೀತಂ ಚ ಪರಮಾತ್ಮಾತ್ಮನೋರೇಕತ್ವಜ್ಞಾನೇನ, ತಯೋರ್ಭೇದ ಏವ ವಿಭಗ್ನ ಸ್ಸಾಸಂಧ್ಯಾ (3)**

ತಾ : ಪರಮಹಂಸನು ದಂಡ ಮಂಡಲಗಳನ್ನು ಪರಿಗ್ರಹಿಸುವುದಿಲ್ಲ. ಶಿಖೆಯನ್ನು ಧರಿಸುವುದಿಲ್ಲ ಸ್ವಾಧ್ಯಾಯವನ್ನು ಮಾಡುವುದಿಲ್ಲ. ಯಜ್ಞೋಪವೀತವನ್ನು ಆಚ್ಛಾದನ ವಸ್ತ್ರವನ್ನು ಧರಿಸುವುದಿಲ್ಲ. ಈ ರೀತಿಯಾಗಿ ಸಂಚರಿಸುವವನಿಗೆ ಶೀತೋಷ್ಣಗಳು ಇಲ್ಲ; ಸುಖದುಃಖಗಳು ಇಲ್ಲ, ಮಾನಾಪ-ಮಾನಗಳು ಇಲ್ಲ, ಮತ್ತು ಈ ರೀತಿಯಾಗಿ ಷಡೂರ್ಮಿಗಳನ್ನು, ಶಬ್ದಸ್ಪರ್ಶಗಳನ್ನು, ರೂಪವನ್ನು ರಸವನ್ನು, ಗಂಧವನ್ನು, ಮನಸ್ಸನ್ನು, ಹೊಂದಿಲ್ಲದವನಾಗಿ ನಡೆದುಕೊಳ್ಳುವನು. ನಿಂದೆ, ಗರ್ವ, ಮತ್ಸರ, ಜಂಭ, ದರ್ಪ, ಇತ್ಯಾದಿ ದ್ವೇಷಗಳು ಸುಖದುಃಖಗಳು, ಅರಿಷಡ್ವರ್ಗಗಳು ಇವೆಲ್ಲವನ್ನೂ ಪರಿತ್ಯಜಿಸುತ್ತಿದ್ದಾನೆ. ತನ್ನ ದೇಹವನ್ನು ಶವದಂತೆ ನೋಡುತ್ತಿದ್ದಾನೆ. ಏಕೆಂದರೆ ಈ ದೇಹವು ನಶಿಸುತ್ತದೆ. ಸಂಶಯ ವಿಪರೀತ ಮಿಥ್ಯಾಜ್ಞಾನಗಳಿಗೆ ಕಾರಣವಾದ ಅಜ್ಞಾನವೃತ್ತಿಯನ್ನು ತ್ಯಜಿಸಿ ಬಿಟ್ಟಿದ್ದಾನೆ. ಆ ಸತ್ಯಬೋಧೆಯು ನಾನೇ, ಶಾಂತಸ್ವರೂಪನೂ ನಾನೇ, ಅಚಲನೂ ನಾನೇ, ಅದ್ವಯಾನಂದ ವಿಜ್ಞಾನಘನನು ನಾನೇ ಎಂದು ದೃಢವಿಶ್ವಾಸದಿಂದ ಇದ್ದಾನೆ. ಆ ಪರಮ ಸ್ಥಾನವೇ ನನ್ನ ನಿವಾಸ. ಅದೇ ಶಿಖಾ ಯಜ್ಞೋಪವೀತಗಳಾಗಿ ಇವೆ. ತತ್ತ್ವಗಳ ಪದಾರ್ಥಗಳು ಒಂದೇ ಎಂದು ಗ್ರಹಿಸುವುದರಿಂದ ಅವುಗಳ ಭೇದಗಳು ಭಂಗವಾಗಿವೆ. ಆದೇ ಸಂಧ್ಯಾವಂದನೆ.

**ಮಂ.ಶ್ಲೋ॥ ಸರ್ವಾನ್ಕಾಮಾನ್ಪರಿತ್ಯಜ್ಯ ಅದ್ವೈತೇ ಪರಮೇ ಸ್ಥಿತಿಃ ಜ್ಞಾನದಂಡೋ ಧೃತೋ ಯೇನ ಏಕದಂಡೀ ಸ ಉಚ್ಯತೇ, ಕಾಷ್ಠದಂಡೋ ಧೃತೋ ಯೇನ ಸರ್ವಾಶೀ ಜ್ಞಾನವರ್ಜಿತಃ ತಿತಿಕ್ಷಾ ಜ್ಞಾನ ವೈರಾಗ್ಯ ಶಮಾದಿ ಗುಣವರ್ಜಿತಃ ಭಿಕ್ಷಾಮಾತ್ರೇಣ ಯೋಜೀವೇತ್ಸಪಾಪೀ**

**ಯತಿ ವೃತ್ತಿಹಾ, ಸ ಯಾತಿ ನರಕಾನ್ಘೋರಾನ್ಮಹಾರೌರವ ಸಂಜ್ಞಿಕಾನ್, ಇದಮಂತರಂ ಜ್ಞಾತ್ವಾ ಸ ಪರಮಹಗ್ಂಸಃ (4)**

ತಾ : ಸರ್ವಕಾಮನೆಗಳನ್ನು ಪರಿತ್ಯಜಿಸಿ ಅದ್ವೈತ ಸಿದ್ಧಿಯಲ್ಲಿರುವವನು ಜ್ಞಾನದಂಡವನ್ನು ಧರಿಸುವನು. ಆತನನ್ನೇ 'ಏಕದಂಡಿ'ಯೆಂದು ಹೇಳುತ್ತಿರುವನು. ಯಾರು ಕೇವಲ ಕಾಷ್ಠದಂಡವನ್ನು ಮಾತ್ರ ಧರಿಸಿ, ಪರಮಹಂಸನಿಗೆ ಕೆಲಸಕ್ಕೆ ಬಾರದ (ಯತ್ಯಾಶ್ರಮಿಗೆ ನಿಷಿದ್ಧವಾದ) ವಿಷಯಭೋಗ-ಗಳನ್ನು ಅನುಭವಿಸುತ್ತಾ, ಮಧುರ ಪದಾರ್ಥಗಳನ್ನು ಭುಜಿಸುತ್ತ ಜ್ಞಾನಹೀನವಾಗಿ ಇರುವವನು ಅತಿ ಭಯಂಕರವಾದ ಮಹಾರೌರವಾದಿ ನರಕಗಳಿಗೆ ಹೋಗುವನು. ಅಲ್ಲಿ ದಾರುಣ ದುಃಖಗಳನ್ನು ಹೊಂದುವನು. ಯಾರು ತಿತಿಕ್ಷೆ, ಜ್ಞಾನ, ವೈರಾಗ್ಯ, ಶಮಾದಿ ಗುಣಗಳನ್ನು ಹೊಂದದೆ ಕೇವಲ ಭಿಕ್ಷಾನ್ನ ಭಕ್ಷಣದಿಂದ ಯತ್ಯಾಶ್ರಮ ಧರ್ಮವನ್ನಾಚರಿಸಿದೆನೆಂದು ಭಾವಿಸಿದಲ್ಲಿ ಅಂತಹವನು ಪಾಪಿ, ಯತಿ ವೃತ್ತಿಗೆ ಅಪಖ್ಯಾತಿಯನ್ನು ತರುವಂತಹವನು.

**ಮಂ.ಶ್ಲೋ॥ ಆಕಾಶಾಂಬರೋ ನ ನಮಸ್ಕಾರೋ ನ ಸ್ವಾಹಾಕಾರೋ, ನ ಸ್ವಧಾಕಾರೋ ನ ನಿಂದಾಸ್ತುತಿ-ರ್ಯಾದೃಚ್ಛಿಕೋ ಭವೇತ್ ಸ ಭಿಕ್ಷುಃ, ನಾವಾಹನಂ ನ ವಿಸರ್ಜನಂ ನ ಮಂತ್ರಂ ನ ಧ್ಯಾನಂ ನೋಪಾಸನಂ ಚ ನ ಲಕ್ಷ್ಯಂ ನಾಲಕ್ಷ್ಯಂ ನ ಪೃಥಙ್ನಪೃಥಗಹಂ ನ ಸತ್ತ್ವಂ ನ ಸರ್ವಂ ಚಾನಿಕೇತಃ ಸ್ಥಿರಮತಿರೇವಂ ನ ಭಿಕ್ಷುಃ ಸಾವರ್ಣಾದೀನಾಂ ನೈವ ಪರಿಗ್ರಹೇನ್ನಲೋಕನಂ ನಾವಲೋಕನಂ ಚ ನ ಬಾಧಕೋ ನಚಾಬಾಧಕಃ ಕ ಇತಿ ಚೇದ್ಬಾಧಕೋಽಸ್ತ್ಯೇವ ಯಸ್ಮಾದ್ಭಿಕ್ಷುರ್ಹಿರಣ್ಯಗ್ಂರಸೇನ ದೃಷ್ಟಂ ಚೇತ್ಸ ಬ್ರಹ್ಮಹಾ ಭವೇದ್ಯಸ್ಮಾದ್ಭಿಕ್ಷುರ್ಹಿರಣ್ಯಂ ರಸೇನ ಸ್ಪೃಷ್ಟಂ ಚೇತ್ಸಪೌಲ್ಕಸೋ ಭವೇತ್ (5)**

ತಾ : ಆ ಪರಮಹಂಸನು ದಿಗಂಬರನು. ನಮಸ್ಕಾರವಿಲ್ಲ. ಸ್ವಾಹಾಕಾರವೂ ಇಲ್ಲ, ಸ್ವಧಾಕಾರವು ಇಲ್ಲ, ನಿಂದಾಸ್ತುತಿಗಳು ಇಲ್ಲ. ಯಾದೃಚ್ಛಿಕನಾಗಿ ಇರುವವನು ಆತನು. ಆತನಿಗೆ ದೇವತಾ ವಾಹನವೂ ಇಲ್ಲ. ದೇವತಾ ವಿಸರ್ಜನೆಯೂ ಇಲ್ಲ, ಮಂತ್ರವೂ ಇಲ್ಲ, ಧ್ಯಾನವೂ ಇಲ್ಲ, ಉಪಾಸನೆಯೂ ಇಲ್ಲ. ಲಕ್ಷ್ಯವೂ ಇಲ್ಲ, ಅಲಕ್ಷ್ಯವೂ ಇಲ್ಲ, ಭೇದವೂ ಇಲ್ಲ, ಅಭೇದವೂ ಇಲ್ಲ, ಅಹಂಭಾವವೂ ಇಲ್ಲ, ತ್ವಂಭಾವವೂ ಇಲ್ಲ, ಸಮಸ್ತವಾದುದ್ಯಾವುದೂ ಇಲ್ಲ. ಗೃಹದಲ್ಲಿ ವಾಸಿಸದೆ ಭಿಕ್ಷುವಾಗಿ ತಿರುಗುತ್ತಿರುವನು. ಸುವರ್ಣ ಮುಂತಾದ ಬೆಲೆಯುಳ್ಳ ವಸ್ತುಗಳನ್ನು ಪರಿಗ್ರಹಿಸುವುದಿಲ್ಲ. ಆಭರಣಗಳನ್ನು ಧರಿಸುವುದಿಲ್ಲ. ವಾಹನಗಳನ್ನು ಹೊಂದಿರಬಾರದು. ಆಸ್ತಿಯೇ ತರುವಂತಹುದು. ಭಿಕ್ಷುವು ಬಂಗಾರವನ್ನು ಅಭಿಲಾಷೆ-ಯಿಂದ ನೋಡಿದಲ್ಲಿ, ಬ್ರಹ್ಮಹತ್ಯಾ ದೋಷವುಂಟಾಗುತ್ತದೆ. ಬಂಗಾರವನ್ನು ಮುಟ್ಟಿದರೆ ಪಾಲ್ಕನ-ನಾಗುವನು.

**ಮಂ.ಶ್ಲೋ॥ ಯಸ್ಮಾದ್ಭಿಕ್ಷುರ್ಹಿರಣ್ಯಗ್ಂ ರಸೇನ ಗ್ರಾಹ್ಯಂಚೇತ್ಸ ಆತ್ಮಹಾ ಭವೇತ್ತಸ್ಮಾದ್ಭಿಕ್ಷುರ್ಹರಣ್ಯಗ್ಂ ರಸೇನ ನ ದೃಷ್ಟಂ ಚನಸ್ಪೃಷ್ಟಂ ಚ ನಗ್ರಾಹ್ಯಂ ಚ ಸರ್ವೇ ಕಾಮಾ ಮನೋಗತಾ ವ್ಯಾವರ್ತಂತೇ ದುಃಖೇಚ ನೋದ್ವಿಗ್ನಸ್ಸುಖೇ ನಿಸ್ಪೃಹಸ್ತ್ಯಾಗೇ ರಾಗೇ ಸರ್ವತ್ರ ಶುಭಾಶುಭಯೋರನಭಿಸ್ನೇಹೋ ನದ್ವೇಷ್ಟಿ ನಮೋದತೇ ಚ ಸರ್ವೇಷಾಮಿಂದ್ರಿಯಾಣಾಂ ಗತಿರುಪರಮೋ ಯ ಆತ್ಮನ್ಯೇ-**

**ವಾವಸ್ಥೀಯತೇ ತತ್ಪೂರ್ಣಾನಂದ್ಯೈಕಬೋಧಸ್ತದ್ಬ್ರಹ್ಮೈವಾಹಮಸ್ಮೀತಿ ಕೃತಕೃತ್ಯೋ ಭವತಿ ಕೃತಕೃತ್ಯೋ ಭವತೀತ್ಯುಪನಿಷತ್ (6) (ಪರಮಹಂಸೋಪನಿಷತ್ಸಮಾಪ್ತಾ)**

ತಾ : ಭಿಕ್ಷುವು ಬಂಗಾರವನ್ನು ಗ್ರಹಿಸಿದಲ್ಲಿ ಆತ್ಮಹಂತಕನಾಗುವನು. ಆದ್ದರಿಂದ ಭಿಕ್ಷುವು ಹಿರಣ್ಯವನ್ನು ಪ್ರೀತಿಯಿಂದ ಕಾಣಬಾರದು, ಸ್ಪರ್ಶಿಸಬಾರದು, ಗ್ರಹಿಸಬಾರದು. ಸರ್ವಕಾಮಗಳನ್ನು ಮನೋಗತಗಳಾದ ಅಭಿಲಾಷೆಯಿಂದ ಮರಳಿಸಬೇಕು. ದುಃಖವುಂಟಾದಾಗ ಸಂತಾಪವನ್ನು ಹೊಂದಬಾರದು, ಸುಖವುಂಟಾದಾಗ ಆಸಕ್ತಿಯನ್ನು ಬೆಳಸಿಕೊಳ್ಳಬಾರದು. ತ್ಯಾಗದಲ್ಲಿ ಆಸಕ್ತಿವಹಿಸಬೇಕು. ಯಾವಾಗಲೂ ಶುಭಾಶುಭಕೃತ್ಯಗಳಲ್ಲಿ ಸ್ನೇಹವಿರಕೂಡದು, ದ್ವೇಷಿಸಬಾರದು, ಮೋಹವನ್ನು ಹೊಂದಬಾರದು, ಸಮಸ್ತೇಂದ್ರಿಯಗಳ ಗಮನವನ್ನು ಉಪರಮಿಸಗೊಳಿಸಿ, ಅವುಗಳನ್ನು ಆತ್ಮದಲ್ಲೇ ಸೇರಿಸಬೇಕು. ಪೂರ್ಣಾನಂದ ಬೋಧವಾದ ಬ್ರಹ್ಮವು ನಾನೇ ಎಂದು ಭಾವಿಸಬೇಕು ಈ ರೀತಿಯಾಗಿ ಪರಮಹಂಸನು ಕೃತಕೃತ್ಯನಾಗುವನು. ಪರಮ ಹಂಸೋಪನಿಷತ್‌ಸಮಾಪ್ತಿ.

**ಶಾಂತಿ ಮಂತ್ರ ॥ ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ॥ ಓಂ ಶಾಂತಿಃ ಶಾಂತಿಃ ಶಾಂತಿಃ**



# ಅಮೃತನಾದೋಪನಿಷತ್ತು - 20

(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

**ಮಂ.ಶ್ಲೋ॥ ಅಮೃತಬಿಂದೂಪನಿಷದ್ವೇದ್ಯಂ ಯತ್ ಪರಮಾಕ್ಷರಂ ।**
**ತದೇವಹಿ ತ್ರಿಪಾದ್ರಾಮಚಂದ್ರಾಖ್ಯಂ ನಃ ಪರಾ ಗತಿಃ ॥**

**ಮಂ.ಶ್ಲೋ॥ ಓಂ ಮನೋ ಹಿ ದ್ವಿವಿಧಂ ಪ್ರೋಕ್ತಂ, ಶುದ್ಧಂಚಾಽಶುದ್ಧಮೇವ ಚ ।**
**ಅಶುದ್ಧಂ ಕಾಮಸಂಕಲ್ಪಂ, ಶುದ್ಧಂ ಕಾಮವಿವರ್ಜಿತಮ್ ॥ (1)**

ತಾ : ಮನಸ್ಸು ಶುದ್ಧವಾದುದೆಂದು, ಅಶುದ್ಧವಾದುದೆಂದು ಎರಡು ವಿಧಗಳಾಗಿ ಹೇಳಲಾಗುತ್ತದೆ. ಕಾಮ ಸಂಕಲ್ಪವುಳ್ಳ ಮನಸ್ಸು ಅಶುದ್ಧ, ಕಾಮ ಸಂಕಲ್ಪವಿಲ್ಲದ ಮನಸ್ಸು ಶುದ್ಧ.

**ಮಂ.ಶ್ಲೋ॥ ಮನ ಏವ ಮನುಷ್ಯಾಣಾಂ, ಕಾರಣಂ ಬನ್ಧಮೋಕ್ಷಯೋಃ ।**
**ಬನ್ಧಾಯ ವಿಷಯಾಸಕ್ತಂ, ಮುಕ್ತ್ಯೈ ನಿರ್ವಿಷಯಗ್‌ಂ ಸ್ಮೃತಮ್ ॥ (2)**

ತಾ : ಮನುಷ್ಯರ ಬಂಧ ಮೋಕ್ಷಗಳಿಗೆ ಕಾರಣ ಮನಸ್ಸೇ ಆಗುತ್ತದೆ. ವಿಷಯಗಳಲ್ಲಿ ಆಸಕ್ತಿಯುಳ್ಳ

ಮನಸ್ಸು ಬಂಧಕ್ಕಾಗಿಯೂ ವಿಷಯಗಳಲ್ಲಿ ಆಸಕ್ತಿಯಿಲ್ಲದ ಮನಸ್ಸು ಮೋಕ್ಷಕ್ಕಾಗಿಯೂ ಹಾತೊರೆಯುತ್ತದೆ. (ಮನ ಏವವನ ಮನುಷ್ಯಾಣಾಂ..... ಎನ್ನುವ ಮಂತ್ರವು ಮೈತ್ರಾಯಣ್ಯುಪನಿಷತ್ 4-೧ರಲ್ಲಿಯು ಶಾಟ್ಯಾಯನೀಯೋಪನಿಷತ್ ನಲ್ಲಿಯೂ ಇದೆ.

**ಮಂ.ಶ್ಲೋ॥ ಯತೋ ನಿರ್ವಿಷಯಸ್ಯಾಸ್ಯ, ಮನಸೋ ಮುಕ್ತಿರಿಷ್ಯತೇ ।**
**ಅತೋ ನಿರ್ವಿಷಯಂ ನಿತ್ಯಂ, ಮನಃ ಕಾರ್ಯಂ ಮುಮುಕ್ಷುಣಾ ॥ (3)**

ತಾ: ಯಾವ ಕಾರಣದಿಂದ ವಿಷಯಾಸಕ್ತಿ ಹೊಂದದ ಮನಸ್ಸಿಗೆ ಮೋಕ್ಷವನ್ನು ಹೇಳಲಾಗಿದೆಯೋ ಆ ಕಾರಣದಿಂದ ಮುಮುಕ್ಷುವಿನಿಂದ ಸದಾ ಮನಸ್ಸನ್ನು ವಿಷಯರಹಿತವಾಗಿ ಮಾಡತಕ್ಕದ್ದು.

**ಮಂ.ಶ್ಲೋ॥ ನಿರಸ್ತ ವಿಷಯಾಸಂಗಂ ಸಂನಿರುದ್ಧಂ ಮನೋಹೃದಿ ।**
**ಯದಾ ಯಾತ್ಯಾತ್ಮನೋಭಾವಂ, ತದಾ ತತ್ಪರಮಂ ಪದಮ್ ॥ (4)**

ತಾ : ಯಾವಾಗ ವಿಷಯಗಳಲ್ಲಿನ ಆಸಕ್ತಿಯನ್ನು ವಿಸರ್ಜಿಸಿದ ಕೂಡಲೇ ಹೃದಯದಲ್ಲಿ ಚೆನ್ನಾಗಿ ನಿರೋಧಿಸಲ್ಪಟ್ಟ ಮನಸ್ಸು ಸದಾ ಆತ್ಮರೂಪವನ್ನು ಹೊಂದಿರುವಂತಗುದಾಗುತ್ತಿದೆಯೋ ಆಗ ಅದು ಉತ್ತಮವಾದ ಸ್ಥಾನವಾಗುತ್ತದೆ.

**ಮಂ.ಶ್ಲೋ॥ ತಾವದೇವ ನಿರೋದ್ಧವ್ಯಂ, ಯಾವದ್ಧೃದಿ ಗತಂ ಕ್ಷಯಮ್ ।**
**ಏತದ್ ಜ್ಞಾನಂ ಚ ಧ್ಯಾನಂ ಚ, ಶೇಷೋ ನ್ಯಾಯಶ್ಚ ವಿಸ್ತರಃ ॥ (5)**

ತಾ : ಹೃದಯದಲ್ಲಿರುವ ಸಂಕಲ್ಪವು ಕ್ಷಯವಾಗುವವರೆಗೂ (ಮನಸ್ಸನ್ನು) ನಿರೋಧಿಸಬೇಕು. ಇದೇ ಜ್ಞಾನ, ಇದೇ ಧ್ಯಾನ, ಉಳಿದದ್ಯಾವುಗಳೆಲ್ಲವೂ (ವಾಕ್ಯಗಳೆಲ್ಲವೂ) ವಿಸ್ತರಣವೇ. ಅಂದರೆ (ಅನವಸರವೆಂದು ಶ್ಲೋಕದಲ್ಲಿದೆ) ಗಮನಿಸಿ ಭಾವನೆ.

**ಮಂ.ಶ್ಲೋ॥ ನೈವ ಚಿನ್ತ್ಯಂ ನಚಾಽಚಿನ್ತ್ಯಂ ನಚಿನ್ತ್ಯಂ ಚಿನ್ತ್ಯಂಮೇವ ತತ್ ।**
**ಪಕ್ಷಪಾತವಿನಿರ್ಮುಕ್ತಂ, ಬ್ರಹ್ಮಸಂಪದ್ಯತೇ ತಥಾ ॥ (6)**

ತಾ : ಅದು (ಆ ಬ್ರಹ್ಮವು) ಚಿಂತಿಸತಕ್ಕದ್ದಲ್ಲ, ಚಿಂತಿಸುವಂತಹುದೂ ಅಲ್ಲ. ಚಿಂತಿಸತಕ್ಕದ್ದೇ ಆಗ (ಇಂತಹ ಜ್ಞಾನವನ್ನು ಹೊಂದಿದವನಾದಾಗ) ಪಕ್ಷಘಾತವಿಲ್ಲದಂತಹ ಬ್ರಹ್ಮನಾಗುವನು.

**ಮಂ.ಶ್ಲೋ॥ ಸ್ವರೇಣ ಸಂಧಯೇದ್ಯೋಗಮಸ್ವರಂ ಭಾವಯೇತ್ಪರಮ್ ।**
**ಅಸ್ವರೇಣಾನುಭಾವೇನ, ನಭಾವೋ ಭಾವ ಇಷ್ಯತೇ ॥ (7)**

ತಾ : ಯೋಗವನ್ನು ಸ್ವರದೊಂದಿಗೆ (ನಾದದೊಂದಿಗೆ) ಸೇರಿಸಬೇಕು. ಬ್ರಹ್ಮವನ್ನು ನಾದರಹಿತ-ವಾಗಿ ಭಾವಿಸಬೇಕು. ಸ್ವರ ರಹಿತವಾಗಿ ಭಾವನೆ ಮಾಡುವುದರಿಂದ ಇರುವುದು (ಆ ಬ್ರಹ್ಮವು) ಇಲ್ಲವಾಗುವುದಿಲ್ಲ.

**ಮಂ.ಶ್ಲೋ॥ ತದೇವಂ ನಿಷ್ಕಳಂಬ್ರಹ್ಮ, ನಿರ್ವಿಕಲ್ಪಂ ನಿರಂಜನಮ್ ।**
**ತದ್ಬ್ರಹ್ಮಾಽಹಮಿತಿ ಜ್ಞಾತ್ವಾ, ಬ್ರಹ್ಮ ಸಂಪದ್ಯತೇ ಧ್ರುವಮ್ ॥ (8)**

ತಾ : ಅಂತಹ ಆ ಬ್ರಹ್ಮವು ನಿಷ್ಕಳವಾಗಿಯೂ ನಿರ್ವಿಕಲ್ಪವಾಗಿಯೂ ನಿರಂಜನವಾಗಿಯೂ (ಶಾಂತವಾದುದು ಮನಸ್ಸಿನಲ್ಲಿ ಕಾರ್ಯವಿಲ್ಲದ್ದು) ಆಗಿರುವುದು. ಆ ಬ್ರಹ್ಮವೇ ನಾನು, ಎಂದು ತಿಳಿದುಕೊಂಡರೆ ಸತ್ಯವಾಗಿಯೂ ಬ್ರಹ್ಮವೇ ಆಗುವನು.

**ಮಂ.ಶ್ಲೋ॥ ನಿರ್ವಿಕಲ್ಪ ಮನಂತಂಚ, ಹೇತು ದೃಷ್ಟಾಂತ ವರ್ಜಿತಮ್ ।**
**ಅಪ್ರಮೇಯಮನಾದಿಂಚ, ಯತ್‌ಜ್ಞಾತ್ವಾ ಮುಚ್ಯತೇ ಬುಧಃ ॥ (9)**

ತಾ : ಯಾವ ಬ್ರಹ್ಮವು ನಿರ್ವಿಕಲ್ಪವಾದುದೋ, ಕಾರಣವಿಲ್ಲದ್ದೋ, ಪ್ರಯಾಣವಿಲ್ಲದ್ದೋ, ಊಹಿಸತಕ್ಕದ್ದೂ ಅಲ್ಲವೋ, ಅನಾದಿಯಾದುದೋ, ಅದನ್ನು ಜ್ಞಾನಿಯಾದವನು ತಿಳಿದುಕೊಂಡು (ಬಂಧನದಿಂದ) ದೂರವಾಗುತ್ತಾನೆ.

**ಮಂ.ಶ್ಲೋ॥ ನ ನಿರೋಧೋ ನಚೋತ್ಪತ್ತಿರ್ನಬದ್ಧೋ ನಚ ಸಾಧಕಃ ।**
**ನ ಮುಮುಕ್ಷುರ್ನವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥ (10)**

ತಾ : ನಾಶವೂ ಇಲ್ಲ, ಉತ್ಪತ್ತಿಯೂ ಇಲ್ಲ, ಬದ್ಧನೂ ಅಲ್ಲ. ಉಪಾಸಕನೂ ಅಲ್ಲ. ಮುಮುಕ್ಷುವೂ ಅಲ್ಲ. ಮುಕ್ತನೂ ಅಲ್ಲ? ಇದೇ (ಮುಮುಕ್ಷುನೆಂಬುದಿಲ್ಲ ಮುಕ್ತನೆಂಬುದಿಲ್ಲ) ನಿಶ್ಚಯವಾದ ಪರಮಾತ್ಮ ತತ್ವ.

**ಮಂ.ಶ್ಲೋ॥ ಏಕ ಏವಾತ್ಮಾ ಮನ್ತವ್ಯೋ, ಜಾಗ್ರತ್ ಸ್ವಪ್ನ ಸುಷುಪ್ತಿಷು ।**
**ಸ್ಥಾನತ್ರಯ ವ್ಯತೀತಸ್ಯ ಪುನರ್ಜನ್ಮ ನ ವಿದ್ಯತೇ ॥ (11)**

ತಾ : ಜಾಗ್ರತ್ಸ್ವಪ್ನ ಸುಷುಪ್ತಿಯಲ್ಲಿ ಮನನ ಮಾಡುವಂತಹ ಆತ್ಮ ಒಂದೇ. ತ್ರಿವಿಧ (ಜಾಗ್ರತ್ ಸ್ವಪ್ನ ಸುಷುಪ್ತಿ) ಸ್ಥಾನಗಳನ್ನು ಅವಸ್ಥೆಗಳನ್ನು ಅತಿಕ್ರಮಿಸಿದವರಿಗೆ ಪುನರ್ಜನ್ಮವಿಲ್ಲ.

**ಮಂ.ಶ್ಲೋ॥ ಏಕ ಏವಹಿ ಭೂತಾತ್ಮಾ, ಭೂತೇ ಭೂತೇ, ವ್ಯವಸ್ಥಿತಃ ।**
**ಏಕಧಾ ಬಹುಧಾ ಚೈವ, ದೃಶ್ಯತೇ ಜಲಚನ್ದ್ರವತ್ ॥ (12)**

ತಾ : ಭೂತಗಳಿಗೆ ಆತ್ಮನಾದವನೊಬ್ಬನೇ ಪ್ರತಿ ಭೂತದಲ್ಲಿಯೂ ಇರುತ್ತಾನೆ. ಜಲದಲ್ಲಿನ ಚಂದ್ರನಂತೆ ಒಬ್ಬನೇ ಆಗಿಯೂ ಅನೇಕವಾಗಿಯೂ ಕಾಣಿಸುತ್ತಾನೆ.

**ಮಂ.ಶ್ಲೋ॥ ಘಟ ಸಂವೃತಮಾಕಾಶಂ, ನೀಯಮಾನೇ ಘಟೇ ಯಥಾ ।**
**ಘಟೋ ನೀಯೇತ ನಾಕಾಶಸ್ತದ್ವಜ್ಜೀವೋ ನಭೋಪಮಃ॥ (13)**

ತಾ : ಘಟವನ್ನು (ಶರೀರ) ತೆಗೆದುಕೊಂಡು ಹೋಗುವಾಗ ಅಲ್ಲಿರುವ ಆಕಾಶವನ್ನು ಕೊಂಡೊಯ್ಯುವುದಿಲ್ಲ. ಘಟವನ್ನು ಮಾತ್ರವೇ ತೆಗೆದುಕೊಂಡು ಹೋಗುವಂತೆ ಸಜೀವನಾದವನು ಆ ಆಕಾಶಕ್ಕೆ ಸಮಾನವಾಗಿದ್ದಾನೆ.

**ಮಂ.ಶ್ಲೋ॥ ಘಟವದ್ವಿವಿಧಾಕಾರಂ, ಭಿದ್ಯಮಾನಂ ಪುನಃ ಪುನಃ ।**
**ತದ್ಭೇದೇ ಚ ನ ಜಾನಾತಿ, ಸ ಜಾನಾತಿ ಚ ನಿತ್ಯಶಃ ॥ (14)**

ತಾ : ಘಟದಂತೆಯೆ (ಶರೀರವು) ವಿವಿಧ ಆಕೃತಿಯುಳ್ಳದ್ದು. ಮತ್ತೆ ಮತ್ತೆ ನಾಶವನ್ನು ಹೊಂದುವಂತಹ ಶರೀರವು ತನ್ನ ನಾಶವನ್ನು ತಿಳಿಯುವುದಿಲ್ಲ. ಅವನು (ಆತ್ಮ) ಮಾತ್ರ ಅದನ್ನು ಸದಾ ತಿಳಿದುಕೊಂಡಿರುವವನು.

**ಮಂ.ಶ್ಲೋ॥ ಶಬ್ದ ಮಾಯಾವೃತೋನ್ಯೈವ, ತಮಸೋ ಯಾತಿ ಪುಷ್ಕರೇ ।**
**ಭಿನ್ನೇ ತಮಸಿ ಚೈಕತ್ವಮೇಕ ಏವಾನು ಪಶ್ಯತಿ ॥ (15)**

ತಾ : ಶಬ್ದಾದಿ ಪ್ರಪಂಚವಾದಂತಹ ಮಾಯೆಯಿಂದ ಆವರಿಸಿರುವಂತಹವನು (ಆ ಮಾಯೆ-ಯೆನ್ನುವ) ಅಂಧಕಾರದಿಂದ ಪ್ರಕಾಶಕ್ಕೆ ಬರುವುದೇ (ಪ್ರಕಾಶವಾದ ಬ್ರಹ್ಮವನ್ನು ತಿಳಿದುಕೊಳ್ಳುವುದೇ) ಇಲ್ಲ. ಆ ಅಂಧಕಾರವು ತೊಲಗಿದರೆ ಏಕವಾದ ಸ್ಥಿತಿಯನ್ನು ಒಬ್ಬನಾಗಿಯೇ ಕಾಣುವನು.

**ಮಂ.ಶ್ಲೋ॥ ಶಬ್ದಾಕ್ಷರಂ ಪರಂಬ್ರಹ್ಮಾ, ತಸ್ಮಿನ್ ಕ್ಷೀಣೇ ಯದಕ್ಷರಮ್ ।**
**ತದ್ವಿದ್ವಾನಕ್ಷರಂ ಧ್ಯಾಯೇದ್ಯದಿಚ್ಛೇಚ್ಛಾನ್ತಿಮಾತ್ಮನಃ ॥ (16)**

ತಾ : ಪರಬ್ರಹ್ಮವು (ಶಬ್ದವೆನ್ನುವ ವೇದ-ಅಕ್ಷರ) ಶಬ್ದಾಕ್ಷರವಾಗಿರುವುದು. ಆ ಶಬ್ದವು (ವೇದವು) ಸಮಾಪ್ತಿಯಾದ ನಂತರ ಯಾವುದು ಉಳಿದಿರುತ್ತದೆಯೋ, ಆ ಅಕ್ಷರವನ್ನು (ನಾಶವಿಲ್ಲದ ಬ್ರಹ್ಮವನ್ನು) ಆತ್ಮಶಾಂತಿಯನ್ನು ಕೋರುವ ವಿದ್ವಾಂಸನು ಧ್ಯಾನಿಸಬೇಕು.

**ಮಂ.ಶ್ಲೋ॥ ದ್ವೇ ವಿದ್ಯೇ ವೇದಿತವ್ಯೇ ತು ಶಬ್ದಬ್ರಹ್ಮ ಪರಂಚ ಯತ್ ।**
**ಶಬ್ದ ಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥ (17)**

ತಾ : ಎರಡು ವಿದ್ಯೆಗಳು ತಿಳಿದುಕೊಳ್ಳುವಂತಹುದು. ಅದೆಂದರೆ ಶಬ್ದ ಬ್ರಹ್ಮವನ್ನು ಪರಬ್ರಹ್ಮವನ್ನು ಚೆನ್ನಾಗಿ ತಿಳಿದುಕೊಂಡವನು ಪರಬ್ರಹ್ಮವನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಗ್ರಂಥಮಭ್ಯಸ್ಯ ಮೇಧಾವೀ, ಜ್ಞಾನ ವಿಜ್ಞಾನ ತತ್ಪರಃ ।**
**ಪಲಾಲಮಿವ ಧಾನ್ಯಾರ್ಥೀ, ತ್ಯಜೇದ್ಗ್ರಂಥಮಶೇಷತಃ ॥ (18)**

ತಾ : ಬುದ್ಧಿ(ಶಾಲಿ)ಯಾದವನು, ವೇದಶಾಸ್ತ್ರಗಳನ್ನು ಅಭ್ಯಾಸ ಮಾಡಿ ಜ್ಞಾನ ವಿಜ್ಞಾನ (ಜ್ಞಾನ= ಬುದ್ಧಿವಂತಿಕೆ, ವಿಜ್ಞಾನ= ಅನುಭವ ಜ್ಞಾನ) ಗಳಲ್ಲಿ ತತ್ಪರನಾಗಿ (ಧೃಡ ಪ್ರಯತ್ನ ಮಾಡುವವನಾಗಿ) ಇರಬೇಕು. ಧಾನ್ಯವನ್ನು ಬಯಸುವವನು, ಸಿಪ್ಪೆ (ಹೊಟ್ಟು)ಯನ್ನು ಬಿಟ್ಟು, ಅಕ್ಕಿಯನ್ನು ಸ್ವೀಕರಿಸುವಂತೆ ವೇದ ಶಾಸ್ತ್ರಗಳೆಲ್ಲವನ್ನೂ ವಿಸರ್ಜಿಸಬೇಕು. (ಗ್ರಂಥಮಭ್ಯಸ್ವ ಮೇಧಾವೀ ಎನ್ನುವ ಮಂತ್ರವು, ತ್ರಿಪುರ ತಾಪಿನ್ಯೋಪನಿಷತ್5-3ರಲ್ಲಿದೆ.)

**ಮಂ.ಶ್ಲೋ॥ ಗವಾಮನೇಕ ವರ್ಣಾನಾಂ ಕ್ಷೀsರಸ್ಯಾಪ್ಯೇಕ ವರ್ಣತಾ ।**
**ಕ್ಷೀರವತ್ಪಶ್ಯತೇ ಜ್ಞಾನಂ, ಲಿಙ್ಗಿನಸ್ತು ಗವಾಂ ಯಥಾ ॥ (19)**

ತಾ : ಗೋವುಗಳು ಅನೇಕ ಬಣ್ಣಗಳಲ್ಲಿದ್ದರೂ ಅವುಗಳ ಹಾಲು ಒಂದೇ ವರ್ಣವನ್ನು ಹೊಂದಿರುತ್ತದೆ. ಜ್ಞಾನವು ಹಾಲಿನಂತೆಯೇ ಕಂಡುಬರುತ್ತದೆ. ಲಿಂಗಗಳು (ಪ್ರಪಂಚದಲ್ಲಿನ ಹಲವು ವಿಧವಾದ ರೂಪಗಳು) ಹಸುಗಳಂತೆಯೇ ಕಂಡುಬರುತ್ತವೆ.

**ಮಂ.ಶ್ಲೋ॥ ಘೃತಮಿವ ಪಯಸಿ ನಿಗೂಢಂ, ಭೂತೇ ಭೂತೇ ಚ ವಸತಿ ವಿಜ್ಞಾನಮ್ ।**
**ಸತತಂ ಮನಸಿ ಮಂಥಯಿತವ್ಯಂ, ಮನೋ ಮಂಥಾನುಭೂತೇನ ॥ (20)**

ತಾ : ಹಾಲಿನಲ್ಲಿ ತುಪ್ಪವು ಅಡಗಿರುವಂತೆ, ಪ್ರತಿ ಭೂತದಲ್ಲಿಯೂ ವಿಜ್ಞಾನವು ಅಡಕವಾಗಿದೆ. ಮನಸ್ಸನ್ನು ಮಥಿಸಿ (ಕಟ್ಟಿಗೆಯಿಂದ ಕಟ್ಟಿಗೆಯನ್ನುಜ್ಜಿ ಬೆಂಕಿ ಮಾಡುವಂತೆ) ನಿಷ್ಕಲವಾಗಿಯೂ, ನಿಶ್ಚಲನಾಗಿಯೂ, ಶಾಂತವಾಗಿಯೂ ಇರುವ ಆ ಬ್ರಹ್ಮವೇ ನಾನೆಂದು ತಿಳದು ಪರಬ್ರಹ್ಮವನ್ನು ಹೊರತರಬೇಕು. (ಪ್ರಕಾಶಿಸುವಂತೆ ಮಾಡಬೇಕು.)

**ಮಂ.ಶ್ಲೋ॥ ಜ್ಞಾನನೇತ್ರಂ ಸಮಾಧಾಯ, ಚೋದ್ಧರೇದ್ವಹ್ನಿವತ್ಪರಮ್ ।**
**ನಿಷ್ಕಲಂ ನಿಶ್ಚಲಂ ಶಾನ್ತಂ ತದ್ಬ್ರಹ್ಮಾಽಹಮಿತಿ ಸ್ಮೃತಮ್ ॥ (21)**

ತಾ : ಜ್ಞಾನ ದೃಷ್ಟಿಯುಳ್ಳ ಸ್ಥಿರಚಿತ್ತನು ಮನಸ್ಸನ್ನು (ಕಟ್ಟಿಗೆಗಳನ್ನುಜ್ಜಿ ಬೆಂಕಿ ಮಾಡಿದಂತೆ) ನಿಷ್ಕಲವಾಗಿರುವ ಆ ಬ್ರಹ್ಮವೇ ನಾನೆಂದು ತಿಳದು ಪರಬ್ರಹ್ಮವನ್ನು ಹೊರತರುವಂತಾಗಬೇಕು. (ಈ ಪ್ರಕಟಪಡಿಸುವಂತಾಗಬೇಕು.)

**ಮಂ.ಶ್ಲೋ॥ ಸರ್ವಭೂತಾಧಿವಾಸಂ ಚ, ಯದ್ಭೂತೇಷು ವಸತ್ಯಪಿ ।**
**ಸರ್ವಾನುಗ್ರಾಹಕತ್ವೇನ, ತದಸ್ಮ್ಯಹಂ ವಾಸುದೇವಃ**
**ತದಸ್ಮ್ಯಹಂ ವಾಸುದೇವ ಇತ್ಯುಪನಿಷತ್ ॥ (22)**

ತಾ : ಸಕಲ ಭೂತಗಳಿಗಾಧಾರವಾಗಿದ್ದು ಸಕಲ ಭೂತಗಳಲ್ಲಿ ವಾಸಿಸುವಂತಹ ಸಕಲ ಪ್ರಾಣಿಗಳನ್ನು ಸಂರಕ್ಷಿಸುವಂತಹ ವಾಸುದೇವನ್ಯಾರೋ ಆ ವಾಸುದೇವನೇ ನಾನು ಎನ್ನುತ್ತದೆ ಈ ಉಪನಿಷತ್ತು.

ಅಮೃತ ಬಿಂದೋಪನಿಷತ್ ಸಮಾಪ್ತಿ

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**





# ಅಮೃತನಾದೋಪನಿಷತ್ತು - 21

(ಕೃಷ್ಣ ಯಜುರ್ವೇದಾಂತರ್ಗತ)

**ಶಾಂತಿ ಮಂತ್ರ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**

**ಮಂ.ಶ್ಲೋ॥ ಅಮೃತನಾದೋಪನಿಷತ್ ಪ್ರತಿಪಾದ್ಯಂ ಪರಾಕ್ಷರಂ ।**
**ತ್ರೈಪದಾನಂದ ಸಾಮ್ರಾಜ್ಯಂ ಹೃದಿ ಮೇ ಭಾತು ಸರ್ವದಾ ॥**

**ಮಂ.ಶ್ಲೋ॥ ಓಂ ಶಾಸ್ತ್ರಾಣ್ಯಧೀತ್ಯ ಮೇಧಾವೀ ಅಭ್ಯಸ್ಯ ಚ ಪುನಃ ಪುನಃ, ಪರಮಂ ಬ್ರಹ್ಮ ವಿಜ್ಞಾಯ ಉಲ್ಕಾವತ್ತಾನ್ಯಥೋತ್ಸೃಜೇತ್ (1) ಓಂಕಾರ ರಥಮಾರುಹ್ಯ ವಿಷ್ಣುಂ ಕೃತ್ವಾಥ ಸಾರಥೀಮ್, ಬ್ರಹ್ಮಲೋಕ ಪದಾನ್ವೇಷಿ ರುದ್ರಾರಾಧನ ತತ್ಪರಃ (2) ತಾವದ್ರಥೇನ ಗಂತವ್ಯಂ ಯಾವ-ದ್ರಥ ಪಥಿ ಸ್ಥಿತಃ, ಸ್ಥಾತಾ ರಥ ಪತಿಸ್ಥಾನಂ ರಥಮುತ್ಸ್ಯೃಜ್ಯ ಗಚ್ಛತಿ (3) ಮಾತ್ರಾಲಿಂಗ ಪದಂ ತ್ಯಕ್ತ್ವಾ ಶಬ್ದವ್ಯಂಜನ ವರ್ಜಿತಮ್, ಅಸ್ವರೇಣಮಕಾರೇಣ ಪದಗ್ಂ ಸೂಕ್ಷ್ಮಂ ಹಿ ಗಚ್ಛತಿ, ಶಬ್ದಾದಿ ವಿಷಯಾನ್ಪಂಚ ಮನಶ್ಚೈವಾತಿಚಂಚಲಮ್ (4)**

ತಾ : ಮೇಧಾವಂತನು ಶಾಸ್ತ್ರಗಳೆಲ್ಲವನ್ನು ಚೆನ್ನಾಗಿ ಅಧ್ಯಯನ ಮಾಡಿ, ಆ ಶಾಸ್ತ್ರಗಳನ್ನು ಮತ್ತೆ ಮತ್ತೆ ಪಠಿಸಿ, ಪಠಿಸಿ ಅರ್ಥಮಾಡಿಕೊಂಡು, ಪರಬ್ರಹ್ಮವನ್ನು ತಿಳಿದುಕೊಂಡವನಾಗಿ, ಅನಂತರ ಉರಿದ ಕಟ್ಟಿಗೆ (ಅರ್ಧ ಉರಿದ ಕಟ್ಟಿಗೆ) ಯನ್ನು ಎಸೆಯುವಂತೆ ಶಾಸ್ತ್ರಗಳನ್ನು ತ್ಯಜಿಸಿಬಿಡಬೇಕು. ಪ್ರಣವವೆನ್ನುವ ರಥವನ್ನಾರೋಹಿಸಿ, ಶ್ರೀ ಮಹಾವಿಷ್ಣುವನ್ನು ಸಾರಥಿಯನ್ನಾಗಿ ಮಾಡಿಕೊಂಡು, ಪರಬ್ರಹ್ಮಲೋಕ ಪದವನ್ನು ಅನ್ವೇಷಿಸುತ್ತಾ ರುದ್ರಾರಾಧನ ತತ್ಪರನಾಗಿ ಇರಬೇಕು. ಬ್ರಹ್ಮಲೋಕ ಯಾತ್ರಾಪರನಾದ ಸಾಧಕನು ರಥ ಮಾರ್ಗವಿರುವವರೆಗೂ ರಥದಲ್ಲಿ ಹೋಗಿ, ಅನಂತರ ರಥವನ್ನು ಕೂಡಾ ಬಿಟ್ಟು ಬ್ರಹ್ಮಲೋಕಕ್ಕೆ ಹೋಗಬೇಕು. ಮಾತ್ರಾ ಲಿಂಗ ಪದಗಳನ್ನು ಬಿಟ್ಟು, ಶಬ್ದವ್ಯಂಜನ ವರ್ಜಿತವಾದ ಸ್ವರ ರಹಿತವಾದ ಸೂಕ್ಷ್ಮ ಮಾರ್ಗದಲ್ಲಿ ಹೋಗಬೇಕು ಶಬ್ದ, ಸ್ಪರ್ಶ, ರೂಪ ಸುಗಂಧಗಳನ್ನು, ಚಂಚಲ ಮನಸ್ಸು ಎನ್ನುವ ಹಗ್ಗಗಳನ್ನು ವಶದಲ್ಲಿ ಇಟ್ಟು ಕೊಳ್ಳಬೇಕು.

**ಮಂ.ಶ್ಲೋ॥ ಚಿಂತಯೇದಾತ್ಮನೋ ರಶ್ಮೀನ್ ಪ್ರತ್ಯಾಹಾರಸ್ಸ ಉಚ್ಯತೇ (5) ಪ್ರತ್ಯಾಹಾರಸ್ತಥಾ ಧ್ಯಾನಂ ಪ್ರಾಣಾಯಾಮೋಽಥ ಧಾರಣಾ । ತರ್ಕಶ್ಚೈವ ಸಮಾಧಿಶ್ಚ ಷಡಂಗ್ ಯೋಗ ಉಚ್ಯತೇ (6) ಯಥಾ ಪರ್ವತಧಾತೂನಾಂ ದಹ್ಯಂತೇ ಧಮನಾನ್ಮಲಾಃ । ತಥೇಂದ್ರಿಯಕೃತಾ ದೋಷಾ ದಹ್ಯಂತೇ ಪ್ರಾಣಧಾರಣಾತ್ (7) ಪ್ರಾಣಾಯಾಮೈರ್ದಹೇದ್ದೋಷಾನ್ಧಾರಣಾಭಿಶ್ಚ ಕಿಲ್ಬಿಷಮ್ । ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ಗುಣಾನ್ (8)**

ತಾ : ಸರ್ವೇಂದ್ರಿಯಗಳನ್ನು ವಶಪಡಿಸಿಕೊಂಡು ಸಂಯಮಶೀಲನಾಗಿರುವುದೇ ಪ್ರತ್ಯಾಹಾರವೆಂದು ಹೇಳುವುದು. ಪ್ರತ್ಯಾಹಾರ, ಧ್ಯಾನ, ಪ್ರಾಣಾಯಾಮ, ಧಾರಣೆ, ಸತ್ಯಾವಿಚಾರಣೆ, ಸಮಾಧಿ ಎನ್ನುವ ಆರು ಅಂಗಗಳನ್ನು ಯೋಗವೆಂದು ಹೇಳುತ್ತಾರೆ. ಪರ್ವತಧಾತುಗಳನ್ನು ಕುಲುಮೆಯಲ್ಲಿಟ್ಟು ಊದುವುದರಿಂದ ಆ ಧಾತುಗಳಲ್ಲಿನ ಮಾಲಿನ್ಯವು ಪೂರ್ತಿಯಾಗಿ ಹೋಗುವಂತೆ ಇಂದ್ರಿಯಗಳಿಗೆ ಸಂಬಂಧಿಸಿದ ದೋಷಗಳು ಪ್ರಾಣಾಯಮ ಸಾಧನೆಯಿಂದ ಹೋಗಲಾಡಿಸಿಕೊಳ್ಳಬೇಕು. ಪ್ರಾಣಾಯಾಮ ಸಾಧನೆಯಿಂದ ಮನಸ್ಸಿನೊಳಗಿರುವ ಮಾಲಿನ್ಯಗಳನ್ನು ನಾಶಮಾಡಬೇಕು. ಧಾರಣೆಗಳಿಂದ ಪಾಪಗಳು ಕಳೆದುಕೊಳ್ಳಬೇಕು. ಪ್ರತ್ಯಾಹಾರದಿಂದ ಸಂಸರ್ಕ ಪಾಪಗಳನ್ನು ಹೋಗಲಾಡಿಸಿಕೊಳ್ಳಬೇಕು. ಧ್ಯಾನ ಸಾಧನೆಯಲ್ಲಿ ಅನೀಶ್ವರ ಗುಣಗಳನ್ನು ನಶಿಸುವಂತೆ ಮಾಡಬೇಕು

ಮಂ.ಶ್ಲೋ॥ **ಕಿಲ್ಬಿಷಂ ಹಿ ಕ್ಷಯಂ ನೀತ್ವಾ ರುಚಿರಂ ಚೈವ ಚಿಂತಯೇತ್ (9) ರುಚಿರಗ್ಂ ರೇಚಕಂ ಚೈವ ವಾಯೋರಾಕರ್ಷಣಂ ತಥಾ । ಪ್ರಾಣಾಯಾಮಾಸ್ತ್ರಯಃ ಪ್ರೋಕ್ತಾ ರೇಚಪೂರಕ ಕುಂಭಕಾಃ (10) ಸವ್ಯಾಹೃತಿಂ ಸ ಪ್ರಣವಾಂ ಗಾಯತ್ರೀಂ ಶಿರಸಾ ಸಹ, ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಸ್ಸ ಉಚ್ಯತೇ (11) ಉತ್ಷಿಕ್ಕ್ಪ್ಯ ವಾಯುಮಾಕಾಶಂ ಶೂನ್ಯಂ ಕೃತ್ವಾ ನಿರಾತ್ಮಕಮ್ । ಶೂನ್ಯಭಾವೇ ನಿಯುಂಜೀಯಾದ್ರೇಚಕಸ್ಯೇತಿ ಲಕ್ಷಣಮ್ (12) ವಕ್ತ್ರೇಣೋತ್ಪಲನಾಳೇನ ತೋಯಮಾಕರ್ಷಯೇನ್ನರಃ । ಏವಂ ವಾಯುಃ ಗ್ರಹೀತವ್ಯಃ ಪೂರಕಸ್ಯೇತಿ ಲಕ್ಷಣಮ್ (13)**

ತಾ : ಪಾಪವನ್ನು ಕಳೆದುಕೊಂಡು ಪರಮಾತ್ಮ ಚಿಂತನೆಯನ್ನು ಮಾಡಬೇಕು. ಪವಿತ್ರವಾದ ರೇಚಕದಲ್ಲಿ ಶ್ವಾಸವನ್ನು ಬಿಡಬೇಕು. ರೇಚಕ ಪೂರಕ ಕುಂಭಕಗಳೆಂಬ ಮೂರು ವಿಧಗಳಿಂದ ಪ್ರಾಣಯಾಮವನ್ನು ಹೇಳಲಾಗಿದೆ. ವ್ಯಾಹೃತಿಯೊಂದಿಗೆ ಕೂಡಿರುವಂತಹ, ಪ್ರಣವರಹಿತವಾದುದಾಗಿರುವಂತಹ ಗಾಯಿತ್ರಿ ಮಹಾಮಂತ್ರವನ್ನು ಶಿರಸ್ಸನೊಂದಿಗೆ ಸಹ, ಪ್ರಾಣಾಯಾಮ ಪರನಾಗಿ ಸಾಧಕನು ಮೂರು ಪರ್ಯಾಯಗಳು ಪಠಿಸಬೇಕು. ಅದನ್ನು ಪ್ರಾಣಾಯಾಮವೆಂದು ಹೇಳುವರು. ಶ್ವಾಸವಾಯುವನ್ನು ಚೆನ್ನಾಗಿ ಹೊರಕ್ಕೆ ಬಿಟ್ಟು, ನಿರಾತ್ಮಕವಾದ ಶೂನ್ಯಾಕಾಶದಲ್ಲಿ ಲಯಗೊಳಿಸಿ ಯೋಗ ಮಾಡುವುವನ್ನು ರೇಚಕವೆನ್ನುವರು. ತಾವರೆಯ ದಂಟಿನಿಂದ ಜಲವನ್ನು ಹೀರುವ ರೀತಿಯಲ್ಲಿ ಶ್ವಾಸವಾಯುವನ್ನು ಒಳಕ್ಕೆ ಹೀರಿಕೊಂಡು ಯೋಗವನ್ನು ಮಾಡುವುದನ್ನು ಪೂರಕ ಲಕ್ಷಣವೆಂದು ಹೇಳುವರು.

ಮಂ.ಶ್ಲೋ॥ **ನೋಚ್ಛ್ವಸೇನ್ನ ಚ ನಿಶ್ವಾಸ್ಯೈರ್ನೈವಗಾತ್ರಾಣಿ ಚಾಲಯೇತ್, ಏವಂ ಭಾವೇ ನಿಯುಂಜೀಯಾತ್ಕುಂಭಕಸ್ಯೇತಿ ಲಕ್ಷಣಮ್ (14) ಅಂಧವತ್ಪಶ್ಯ ರೂಪಾಣಿ ಶಬ್ದಂ ಬಧಿರವಚ್ಛೃಣು ಕಾಷ್ಠವತ್ಪಶ್ಯ ವೈ ದೇಹಂ ಪ್ರಶಾಂತಸ್ಯೇತಿ ಲಕ್ಷಣಮ್ (15) ಮನಸ್ಸಂಕಲ್ಪಕಂ ಧ್ಯಾತ್ವಾ ಸಂಕ್ಷಿಪ್ಯಾತ್ಮನಿ ಬುದ್ಧಿಮಾನ್, ಧಾರಯಿತ್ವಾ ತಥಾऽऽತ್ಮಾನಂ ಧಾರಣಾ ಪರಿಕೀರ್ತಿತಾ (16) ಆಗಮಸ್ಯಾವಿರೋಧೇನ ಊಹನಂ ತರ್ಕ ಉಚ್ಯತೇ, ಸಮಂ ಮನ್ಯೇತ ಯಲ್ಲಭ್ದ್ವಾ ಸ ಸಮಾಧಿಃ ಪ್ರಕೀರ್ತಿತಃ (17)**

ತಾ : ಉಚ್ಛ್ವಾಸ ನಿಶ್ವಾಸಗಳನ್ನು ನಿಲ್ಲಿಸಿ ದೇಹವನ್ನು ಅಲುಗಾಡಿಸದೆ, ಉಸಿರನ್ನು ಬಿಗಿಯಾಗಿ ಹಿಡಿದಿಟ್ಟುಕೊಳ್ಳುವುದೇ ಕುಂಭಕ ಪ್ರಾಣಾಯಾಮ ಲಕ್ಷಣ. ಕುರುಡನಂತೆ ರೂಪಗಳನ್ನು ಕಾಣುವುದು, ಕಿವುಡನಂತೆ ಶಬ್ದಗಳನ್ನು ಆಲಿಸುವುದು, ಶರೀರವನ್ನು ಕೊರಡಿನಂತೆ ಭಾವಿಸುವುದು. ಈ ರೀತಿಯಾಗಿ ಇರುವುದೇ ಪ್ರಾಶಾಂತ ಮನಸ್ಕನ ಲಕ್ಷಣ. ಸಂಕಲ್ಪರೂಪವಾದ ಮನಸ್ಸನ್ನು, ಆಲೋಚನೆ ಮಾಡಿ ಚೆನ್ನಾಗಿ ತಿಳಿದುಕೊಂಡು ಬುದ್ಧಿವಂತನು ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸಿ ಧ್ಯಾನ ಪರಾಯಣನಾಗಿ ಇರುವುದನ್ನು ಧಾರಣೆಯೆಂದು ಹೇಳಲಾಗುತ್ತದೆ. ವೇದಗಳಿಗೆ ಅನುಗುಣವಾಗಿ ಊಹಿಸುವುದನ್ನು ತರ್ಕವೆಂದು ಹೇಳುತ್ತಾರೆ. ಯಾವುದನ್ನು ಹೊಂದಿ ಸರ್ವತ್ರ ಸದೃಶವಾದ ಪರಬ್ರಹ್ಮನಲ್ಲಿ ಕೇಂದ್ರೀಕರಿಸ-ಲಾಗಿದೆಯೋ ಅದನ್ನು ಸಮಾಧಿ (ಸ್ಥಿತಿ) ಯೆಂದು ಹೇಳಲಾಗಿದೆ.

**ಮಂ.ಶ್ಲೋ॥ ಭೂಮೌ ದರ್ಭಾಸನೇ ರಮ್ಯೇ ಸರ್ವದೋಷ ವಿವರ್ಜಿತೇ, ಕೃತ್ವಾ ಮನೋಮಯೀಂ ರಕ್ಷಾಂ ಜಪ್ತ್ವಾ ವೈ ರಥಮಂಡಲೇ (18) ಪದ್ಮಕಂ ಸ್ವಸ್ತಿಕಂ ವಾಪಿ ಭದ್ರಾಸನಮಥಾಪಿವಾ, ಬಧ್ವಾ ಸುಖಾಸನಂ ಸಮ್ಯಗುತ್ತರಾಭಿಮುಖಃ ಸ್ಥಿತಃ (19) ನಾಸಿಕಾಪುಟಮಂಗುಳ್ಯಾ ಪಿಧಾ-ಯ್ಯೆಕೇನ ಮಾರುತಮ್, ಆಕೃಷ್ಯಧಾರಯೇದಗ್ನಿಂ ಶಬ್ದಮೇವ ವಿಚಿಂತಯೇತ್ (20)**

ತಾ : ಪರಿಶುದ್ಧವಾಗಿ ದೋಷರಹಿತವಾಗಿರುವಂತಹ ಭೂಮಿಯ ಮೇಲೆ ದರ್ಭಾಸನವನ್ನು ಹಾಕಿ, ಕುಳಿತುಕೊಂಡು ಮಂತ್ರಮೂರ್ತಿಯನ್ನು ಮನಸ್ಸಿನಲ್ಲಿ ಭಾವಿಸುತ್ತ, ರಥಮಂಡಲದಲ್ಲಿನ ಪ್ರಣವವನ್ನು ಜಪಿಸಬೇಕು. ಜಿಜ್ಞಾಸುವು ಧ್ಯಾನಕ್ಕೆ ಅನುಕೂಲವಾದ ಪದ್ಮಕ, ಸ್ವಸ್ತಿಕ, ಭದ್ರ ಮುಂತಾದ ಯೋಗಾಸನಗಳಲ್ಲಿ ಯಾವುದಾದರೂ ಒಂದನ್ನು ಹಾಕಿಕೊಂಡು, ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಂಡು ಧ್ಯಾನ ಮಾಡಬೇಕು ಒಂದು ನಾಸಿಕಾ ಪುಟವನ್ನು ಹೆಬ್ಬೆರಳಿನಿಂದ ಒತ್ತಿಹಿಡಿದು ಕೊಂಡು, ಎರಡನೆಯ ನಾಸಿಕಾ ಪುಟದಲ್ಲಿ ಗಾಳಿಯನ್ನು ಸೇವಿಸಿ ಅಗ್ನಿ ಶಬ್ದವನ್ನೇ ಚಿಂತಿಸುತ್ತಾ ಧಾರಣೆ ಮಾಡಬೇಕು.

**ಮಂ.ಶ್ಲೋ॥ ಓಮಿತ್ಯೇಕಾಕ್ಷರಂ ಬ್ರಹ್ಮ ಓಮಿತ್ಯೇತೇನ ರೇಚಯೇತ್, ದಿವ್ಯಮಂತ್ರೇಣ ಬಹುಧಾ ಕುರ್ಯಾ-ದಾಮಲ ಮುಕ್ತಯೇ (21) ಪಶ್ಚಾದ್ಧ್ಯಾಯೀತ ಪೂರ್ವೋಕ್ತಕ್ರಮಶೋ ಮಂತ್ರವಿದ್ಬುಧಃ ಸ್ಥೂಲಾದಿ ಸ್ಥೂಲ ಸೂಕ್ಷ್ಮಂಚ ನಾಭೇರೂರ್ಧ್ವಮುಪಕ್ರಮಃ (22) ತಿರ್ಯಗೂರ್ಧ್ವಮಥೋ ದೃಷ್ಟಿಂ ವಿಹಾಯಚ ಮಹಾಮತಿಃ, ಸ್ಥಿರಸ್ಥಾಯೀ ವಿನಿಷ್ಕಂಪಃ ಸದಾ ಯೋಗಂ ಸಮಭ್ಯಸೇತ್ (23) ನಾಳಮಾತ್ರವಿನಿಷ್ಕಂಪೋ ಧಾರಣಾ ಯೋಜನಂ ತಥಾ, ದ್ವಾದಶಮಾತ್ರೋ ಯೋಗಸ್ತು ಕಾಲತೋ ನಿಯಮಸ್ಮೃತಃ (24)**

ತಾ : ಏಕಾಕ್ಷರವು, ಬ್ರಹ್ಮಸ್ವರೂಪವು ಆದಂತಹ ಓಂಕಾರದೊಂದಿಗೆ ಬ್ರಹ್ಮಧ್ಯಾನ ಪೂರ್ವಕವಾಗಿ ರೇಚಕವನ್ನು ಮಾಡಬೇಕು. ಈ ರೀತಿ ದಿವ್ಯ ಮಂತ್ರದೊಂದಿಗೆ ಹಲವು ಬಾರಿ ರೇಚಕ ಪೂರಕಗಳನ್ನು ಮಾಡುತ್ತ ಮನಸ್ಸೊಳಗಿನ ಮಾಲಿನ್ಯಗಳೆಲ್ಲವೂ ನಶಿಸಿಹೋಗುವವರೆಗೂ ಪ್ರಾಣಾಯಾಮಾದಿಗಳನ್ನು ಮಾಡುತ್ತಿರಬೇಕು. ಮಂತ್ರವಿದರಾದ ಬುಧರು ಪೂರ್ವೋಕ್ತ ರೀತಿಯಾಗಿ ಸ್ಥೂಲಾದಿ ಸೂಕ್ಷ್ಮಗಳಾದ ಸಾಧನೆಗಳನ್ನು ನಾಭಿಸ್ಥಾನದಿಂದ ಮೇಲ್ಭಾಗದಲ್ಲಿ ಮಾಡಬೇಕು. ಅಡ್ಡವಾಗಿಯೂ ಉದ್ದವಾಗಿಯೂ ಕೆಳಭಾಗದಲ್ಲಿಯೂ ಪ್ರಸರಣ ಮಾಡುವಂತಹ ದೃಷ್ಟಿಯನ್ನು ಬಿಟ್ಟು, ಧ್ಯಾನ ಪರಾಯಣನು

ಧೈರ್ಯವನ್ನು ಹೊಂದಿದವನಾಗಿ ಚಲಿಸದ ದೇಹವುಳ್ಳವನಾಗಿ ಪ್ರತಿನಿತ್ಯವೂ ಯೋಗಾಭ್ಯಾಸವನ್ನು ಮಾಡುತ್ತಿರಬೇಕು. ಚಲಿಸದ ಚಿತ್ತದೊಂದಿಗೆ ನಾಳ ಮಾತ್ರವನ್ನು ಧಾರಣೆ ಮಾಡಬೇಕು. ಯೋಗ-ಕಾಲವನ್ನು ಹನ್ನೆರಡು ಮಾತ್ರಗಳಿಗೆ ಬೆಳೆಸಬೇಕೆಂದು ನಿಯಮವಿದೆ.

ಮಂ.ಶ್ಲೋ॥ **ಅಘೋಷಮವ್ಯಂಜನಮಸ್ವರಂಚ ಯತ್ತಾಲು ದಂತೋಷ್ಠಮನಾಸಿಕಂ ಚ ಯತ್ । ಅರೇಫ -ಜಾತಮುಭಯೋಷ್ಮ ವರ್ಜಿತಂ ಯದಕ್ಷರಂ ನ ಕ್ಷರತೇ ಕಥಂಚಿತ್ (25) ಯೇನಾಽಸೌ ಗಚ್ಛತೇ ಮಾರ್ಗಂ ಪ್ರಾಣಸ್ತೇನಾಭಿಗಚ್ಛತಿ, ಅತಸ್ತಮಭ್ಯಸೇನ್ನಿತ್ಯಂ ಯನ್ಮಾರ್ಗಗಮನಾಯ ವೈ (26) ಹೃದ್ವಾರಂ ವಾಯುದ್ವಾರಂ ಚ ಮೂರ್ಧ್ನಿದ್ವಾರಮಥಾಪರಮ್, ಮೋಕ್ಷದ್ವಾರಂ ಬಿಲಂ ಚೈವ ಸುಷಿರಂ ಮಂಡಲಂ ವಿದುಃ (27)**

ತಾ : ಆ ಅಕ್ಷರವು ಘೋಷವಿಲ್ಲದ್ದು, ವ್ಯಂಜನವಲ್ಲದ್ದು, ಸ್ವರವಿಲ್ಲದ್ದು ತಾಲು, ದಂತಗಳು ನಾಸಿಕ ಇವುಗಳೊಂದಿಗೆ ಸಂಬಂಧವಿಲ್ಲದ್ದು ರೇಫವಿಲ್ಲದ್ದು, ಉಭಯತಾಪಿಗಳು ಇಲ್ಲದ್ದು. ಆ ಅಕ್ಷರವು ಸ್ವಲ್ಪವೂ ನಶಿಸುವುದಿಲ್ಲ. ಪ್ರಾಣವು ಯಾವ ಮಾರ್ಗದಿಂದ ಹೋಗುವುದೋ ಅದೇ ಮಾರ್ಗದಲ್ಲಿ ಆ ಅಕ್ಷರವು ಕೂಡಾ ಹೋಗುವುದು. ಅಂತಹ ಪ್ರಾಣಾಯಾಮ ಮಾರ್ಗವನ್ನು ನಿತ್ಯವೂ ಅಭ್ಯಸಿಸಬೇಕು. ಹೃದಯ ದ್ವಾರ, ವಾಯುದ್ವಾರ ಬ್ರಹ್ಮ ರಂಧ್ರದ್ವಾರ, ಇವೆಲ್ಲವೂ ಮೋಕ್ಷದ್ವಾರಗಳಾಗಿ ಸುಷಿರ ಮಂಡಲಗಳೆಂದು ತಿಳಿದುಕೊಳ್ಳಬೇಕು.

ಮಂ.ಶ್ಲೋ॥ **ಭಯಂ ಕ್ರೋಧಮಥಾಲಸ್ಯ ಮತಿಸ್ವಪ್ನಾತಿ ಜಾಗರಮ್ । ಅತ್ಯಾಹಾರಮನಾಹಾರಂ ನಿತ್ಯಂ ಯೋಗಿ ವಿವರ್ಜಯೇತ್ (28) ಅನೇನ ವಿಧಿನಾ ಸಮ್ಯಙ್ನಿತ್ಯಮಭ್ಯಸ್ಯತೇ ಕ್ರಮಾತ್। ಸ್ವಯಮುತ್ಪದ್ಯತೇ ಜ್ಞಾನಂ ತ್ರಿಭಿರ್ಮಾಸೈರ್ನ ಸಂಶಯಃ (29) ಚತುರ್ಭಿಃ ಪಶ್ಯತೇ ದೇವಾನ್ ಪಂಚಭಿರ್ವಿತತ ಕ್ರಮಾನ್ । ಇಚ್ಛಯಾಪ್ನೋತಿ ಕೈವಲ್ಯಂ ಷಷ್ಠೇಮಾಸಿ ನ ಸಂಶಯಃ (30) ಪಾರ್ಥಿವಃ ಪಂಚಮಾತ್ರಸ್ತು ಚತುರ್ಮಾತ್ರಸ್ತು ವಾರುಣಃ, ಅಗ್ನೇಯಸ್ತು ತ್ರಿಮಾತ್ರೋ ಸಾ ವಾಯವ್ಯಸ್ತು ದ್ವಿಮಾತ್ರಕಃ (31)**

ತಾ : ಧ್ಯಾನಯೋಗಿ ಭಯವನ್ನು, ಕ್ರೋಧವನ್ನು, ಸೋಮಾರಿತನವನ್ನು, ಅಧಿಕ ನಿದ್ರೆಯನ್ನು, ಅತಿ ಜಾಗರಣೆಯನ್ನು, ಅಧಿಕವಾಗಿ ತಿನ್ನುವುದನ್ನು, ಉಪವಾಸವನ್ನು ಸರ್ವದಾ ವರ್ಜಿಸಬೇಕು. ಈ ವಿಧವಾಗಿ ಕ್ರಮ ಬದ್ಧವಾಗಿ ಸರ್ವದಾ ಧ್ಯಾನಾಭ್ಯಾಸ ಮಾಡಿದಲ್ಲಿ, ಮೂರು ತಿಂಗಳಲ್ಲಿ ಸ್ವಯಂಬ್ರಹ್ಮಜ್ಞಾನವು ಪ್ರಾಪ್ತವಾಗುತ್ತದೆ. ನಾಲ್ಕು ತಿಂಗಳಲ್ಲಿ ದೇವತಾ ದರ್ಶನವು ಲಭಿಸುವುದು. ಐದು ತಿಂಗಳಲ್ಲಿ ಸರ್ವ ಸಾಧನಗಳು ಸಿದ್ಧಿಸುವುವು. ಆರು ತಿಂಗಳಲ್ಲಿ ಕೈವಲ್ಯ ಪ್ರಾಪ್ತಿ ಲಭಿಸುವುದು. ಇದರಲ್ಲಿ ಸಂಶಯವೇ ಇಲ್ಲ ಪಂಚಮಾತ್ರಗಳು, ಪಾರ್ಥಿವ ತತ್ವ ನಾಲ್ಕು ಮಾತ್ರೆಗಳು ವರುಣ ತತ್ತ್ವವಾಗಿದೆ. ಮೂರು ಮಾತ್ರೆಗಳು ಅಗ್ನಿತತ್ವ ಮತ್ತು ಎರಡು ಮಾತ್ರೆಗಳು ವಾಯು ತತ್ವವಾಗಿವೆ.

ಮಂ.ಶ್ಲೋ॥ **ಏಕಮಾತ್ರಸ್ತಥಾಽಽಕಾಶೋ ಹ್ಯಮಾತ್ರಂ ತು ವಿಚಿಂತಯೇತ್, ಸಂಧಿಂ ಕೃತ್ವಾತು ಮನಸಾ ಚಿಂತಯೇದಾತ್ಮನಾಽಽತ್ಮನಿ (32) ತ್ರಿಂಶತ್ಪರ್ವಾಂಗುಳಃ ಪ್ರಾಣೋ ಯತ್ರಪ್ರಾಣೈಃ ಪ್ರತಿಷ್ಠಿತಃ**

**ಏಷ ಪ್ರಾಣ ಇತಿ ಖ್ಯಾತೋ ಬಾಹ್ಯಪ್ರಾಣಸ್ಯ ಗೋಚರಃ (33) ಆಶೀತಿಶ್ಚ ಷಟ್‌ಶತಂ ಚೈವ ಸಹಸ್ರಾಣಿ ತ್ರಯೋದಶ । ಲಕ್ಷಶ್ಚೈಕೋ ವಿನಿಶ್ವಾಸೋ ಅಹೋರಾತ್ರ ಪ್ರಮಾಣತಃ (34)**

ತಾ : ಏಕಮಾತ್ರೆ ಆಕಾಶತತ್ವವು ಮನಸ್ಸಿನೊಂದಿಗೆ ಸಂಧಿಮಾಡಿಕೊಂಡು ಜೀವಾತ್ಮನನ್ನು ಆ ಮಾತ್ರಾಗಣದಲ್ಲಿ (ಮಾತ್ರೆಯಲ್ಲಿ) ನಿಲ್ಲಿಸಿ ಧ್ಯಾನಮಾಡಬೇಕು. ಬಾಹ್ಯವಾಗಿ 30 ಅಂಗುಲಗಳು (ಮೂವತ್ತರಲ್ಲಿ ಅರ್ಧ) ಉದ್ದಕ್ಕೂ ಪ್ರಾಣವಾಯುವು ಚಲಿಸುತ್ತಿರುತ್ತದೆ. ಇದನ್ನು ಪ್ರಾಣವೆಂದು ಹೇಳುತ್ತಾರೆ. ಒಂದು ಲಕ್ಷ ಹದಿಮೂರು ಸಾವಿರ ಆರುನೂರು ಎಂಬತ್ತು (1.13.680) ಶ್ವಾಸಗಳು ಅಹೋರಾತ್ರಿ ಪ್ರಮಾಣವೆಂದು ಹೇಳಲಾಗಿದೆ. ಹೀಗೆ ಬೆಳೆಸಿದ ಶ್ವಾಸಗಳು ಕೆಲವು ದಿನಗಳು ಮಾತ್ರವೇ ಮಂತ್ರಸಿದ್ಧಿಗಾಗಿ ಮಾಡುವುದು. ಸಹಜ ಶ್ವಾಸಕ್ರಿಯೆಯು ದಿನಕ್ಕೆ ಇಪ್ಪತ್ತೊಂದು ಸಾವಿರ ಆರು ನೂರಾಗಿರುವುದು (21.600).

ಮಂ.ಶ್ಲೋ॥ **ಪ್ರಾಣ ಆಧ್ಯೋ ಹೃದಿ ಸ್ಥಾನೇ ಅಪಾನಸ್ತು ಪುನರ್ಗುದೇ । ಸಮಾನೋ ನಾಭಿದೇಶೇತು ಉದಾನಃ ಕಂಠಮಾಶ್ರಿತಃ (35) ವ್ಯಾನಸ್ಸರ್ವೇಷು ಚಾಂಗೇಷು ವ್ಯಾಪ್ಯ ತಿಷ್ಠತಿ ಸರ್ವದಾ, ಅಥವರ್ಣಾಸ್ತು ಪಂಚಾನಾಂ ಪ್ರಾಣಾದೀನಾಮನುಕ್ರಮಾತ್ (36) ರಕ್ತವರ್ಣೋ ಮಣಿಪ್ರಖ್ಯಃ ಪ್ರಾಣವಾಯುಃ ಪ್ರಕೀರ್ತಿತಃ, ಅಪಾನಸ್ತನಮಧ್ಯೇತು ಇಂದ್ರಗೋಪಸಮ ಪ್ರಭಃ (37)**

ತಾ : ಹೃದಯ ಸ್ಥಾನದಲ್ಲಿರುವುದು ಪ್ರಾಣವು. ಗುದ ಪ್ರದೇಶದಲ್ಲಿರುವುದು ಅಪಾನವು. ನಾಭಿ ಪ್ರದೇಶದಲ್ಲಿರುವುದು ಸಮಾನವು. ಕಂಠವನ್ನು ಆಶ್ರಯಿಸಿರುವುದು ಉದಾನ. ವ್ಯಾನಗಳು ಸರ್ವಾವಯವಗಳಲ್ಲಿ ವ್ಯಾಪಿಸಿರುವುದು. ಆಮೇಲೆ ಪಂಚಪ್ರಾಣಗಳ ವರ್ಣಗಳನ್ನು ಕೂಡಾ ತಿಳಿದುಕೊಳ್ಳಬೇಕು ಪ್ರಾಣ ವಾಯುವು ರಕ್ತವರ್ಣದಲ್ಲಿರುವ ಮಣಿಯಂತೆ ಪ್ರಕಾಶಿಸುತ್ತಿರುವುದು. ಅಪಾನವಾಯುವು ಇಂದ್ರಗೋಪ ಮಣಿಕಾಂತಿಯಂತೆ ಬೆಳಗುತ್ತದೆ.

ಮಂ.ಶ್ಲೋ॥ **ಸಮಾನಸ್ತು ದ್ವಯೋರ್ಮಧ್ಯೇ ಗೋಕ್ಷೀರಧವಳ ಪ್ರಭಃ, ಆಪಾಂಡರ ಉದಾನಶ್ಚ ವ್ಯಾನೋ ಹ್ಯರ್ಚಿಸ್ಸಮಪ್ರಭಃ (38) ಯಸ್ಯೇದಂ ಮಂಡಲಂ ಭಿತ್ವಾ ಮಾರುತೋ ಯಾತಿ ಮೂರ್ಧನಿ. ಯತ್ರ ಯತ್ರ ಮ್ರಿಯೇದ್ವಾಪಿ ನ ಸ ಭೂಯೋಽಭಿಜಾಯತೇ, ನ ಸ ಭೂಯೋಽಭಿಜಾಯತ ಇತ್ಯುಪನಿಷತ್ (39) (ಅಮೃತನಾದೋಪನಿಷತ್ ಸಮಾಪ್ತ)**

ತಾ : ಸಮಾನವಾಯುವು ಆ ಎರಡರ ಮಧ್ಯೆ ಗೋಕ್ಷೀರದಂತೆ ಬೆಳ್ಳಗಿನ ಕಾಂತಿಯಲ್ಲಿರುವುದು. ಉದಾನವಾಯುವು ಕಪ್ಪು ಬಣ್ಣದಲ್ಲಿರುತ್ರದೆ. ವ್ಯಾನವಾಯುವು ಅಗ್ನಿಜ್ವಾಲೆಯಂತಹ ಕಾಂತಿಯನ್ನೊಳಗೊಂಡಿರುತ್ತದೆ. ಯಾರ ಬ್ರಹ್ಮರಂಧ್ರದಲ್ಲಿ (ಸಹಸ್ರಾರದಲ್ಲಿ) ಈ ವಾಯು ಮಂಡಲಗಳನ್ನು ಭೇದಿಸಿಕೊಂಡು, ಪ್ರಾಣವಾಯುವು ಸೇರುವುದೋ, ಅಂತಹ ಧ್ಯಾನಯೋಗಿಪರಾಯಣನು ಎಲ್ಲೆಲ್ಲಿ ಮರಣ ಹೊಂದಿದರೂ ಅವನಿಗೆ ಪುನರ್ಜನ್ಮವಿಲ್ಲ (ಬ್ರಹ್ಮನಲ್ಲಿ ಲೀನವಾಗುವನು). ಇದು ಈ ಉಪನಿಷತ್ತಿನ ಆತ್ಮ ಬೋಧೆ. (ಅಮೃತನಾದೋಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ ॥ಓಂ - ಸಹನಾವವತು - ಸಹನೌ ಭುನಕ್ತು - ಸಹವೀರ್ಯಂ ಕರವಾವಹೈ ತೇಜಸ್ವಿ ನಾವಧೀತಮಸ್ತು - ಮಾ ವಿದ್ವಿಷಾವಹೈ॥ ಓಂ ಶಾಂತಿ ಶಾಂತಿ ಶಾಂತಿಃ॥**



# ಅಥರ್ವ ಶಿರೋಪನಿಷತ್ - 22

(ಅಥರ್ವ ವೇದಾಂತರ್ಗತ)

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್‌ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ

ಶ್ಲೋ॥ ಅಥರ್ವ ಶಿರಸಾಮರ್ಥಮನರ್ಥವ್ರಾತ ಸೂಚಕಮ್ ।
ಸರ್ವಾಧಾರಮನಾಧಾರಂ ಸ್ವಮಾತ್ರಂ ತ್ರೈಪದಾಕ್ಷರಂ ॥

## ಪ್ರಥಮ ಖಂಡ

ಮಂ.ಶ್ಲೋ॥ ಓಂ ದೇವಾ ಹ ವೈ ಸ್ವರ್ಗಂಲೋಕಮಗಮಂ ಸ್ತೇ ರುದ್ರಮಪೃಚ್ಛನ್ ಕೋ ಭವಾನಿತಿ ಸೋಽಬ್ರವೀದಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತ ಇತಿ ॥ (1)

ತಾ : ಶ್ರೀ ಮಹಾರುದ್ರನು ವಾಸ ಮಾಡಿರುವಂತಹ ಸ್ವರ್ಗಕ್ಕೆ ದೇವತೆಗಳು ಹೊರಟರು. ಅಲ್ಲಿ ಮಹಾರುದ್ರನನ್ನು ಕುರಿತು ದೇವತೆಗಳು, "ದೇವಾ! ನೀನು ಯಾರು?" ಎಂದು ಪ್ರಶ್ನಿಸಿದರು. ಆ ರುದ್ರನು, ನಾನು ಒಬ್ಬನೆ, ಮೊಟ್ಟ ಮೊದಲಿನಲ್ಲಿದ್ದೇನೆ, (ಆರಂಭದಲ್ಲಿದ್ದೇನೆ) ವರ್ತಮಾನದಲ್ಲಿದ್ದೇನೆ. ಭವಿಷ್ಯದಲ್ಲೂ ಇರುವೆನು. ನನಗಿಂತ ಭಿನ್ನನಾದ ಬೇರೆ ಯಾರೊಬ್ಬನೂ ಭೂರವರ್ತಮಾನ ಭವಿಷ್ಯತ್ತು ಕಾಲಗಳಲ್ಲೂ ಇಲ್ಲ ಎಂದು ಹೇಳಿದನು.

ಮಂ.ಶ್ಲೋ॥ ಸೋಽಂತರಾದಂತರಂ ಪ್ರಾವಿಶದ್ದಿಶ್ಚಾಂತರಂ, ಪ್ರಾವಿಶತ್ಸೋಽಹಂ ನಿತ್ಯಾನಿತ್ಯೋಽಹಂ ಬ್ರಹ್ಮಾಹಂ ಪ್ರಾಂಚಃ ಪ್ರತ್ಯಂಚೋಽಹಂ ದಕ್ಷಿಣಾಂ ಚೋದಂ ಚೋಹಮಧಶ್ಚೋರ್ಧ್ವಂಚ ದಿಶಶ್ಚ ವಿದಿಶಶ್ಚಾಹಂ ಪುಮಾನಮಮಾಂ ಸ್ತ್ರೀಯಶ್ಚಾಹಂ ಗಾಯತ್ರ್ಯಹಂ ಸಾವಿತ್ರ್ಯಹಂ ಸರಸ್ವತ್ಯಹಂ ತ್ರಿಷ್ಟುಜ್ಜಗತ್ಯನುಷ್ಟುಪ್ಚಾಹಂ ಛಂದೋಽಹಂ ಗಾರ್ಹಪತ್ಯೋಽಹಂ ದಕ್ಷಿಣಾಗ್ನಿ ರಾಹವನೀಯೋಽಹಂ ಸತ್ಯೋಽಹಂ ಗೌರಹಂ ಗೌರ್ಯಹಂ ಜ್ಯೇಷ್ಠೋಽಹಂ ಶ್ರೇಷ್ಠೋಽಹಂ ವರಿಷ್ಠೋಽಹಮಾಪೋಽಹಂ ತೇಜೋಽಹಮೃಗ್ಯಜುಸ್ಸಾಮಾಥರ್ವಾಂಗೀರಸೋಽಹಮಕ್ಷರ-ಮಹಂ ಕ್ಷರಮಹಂ ಗೋಪ್ಯೋಽಹಾಂ ಗುಹ್ಯೋಽಹಮರಣ್ಯೋಽಹಂ ಪುಷ್ಕರಮಹಂ ಪವಿತ್ರಮಹಮಗ್ರಂಚ ಮಧ್ಯಂಚ ಬಹಿಶ್ಚ ಪುರಸ್ತಾದ್ದಶಸುದಿಕ್ಷ್ವವಸ್ಥಿತಮನವಸ್ಥಿತಂಚ

ಜ್ಯೋತಿರಿತ್ಯಹಮೇಕಸ್ಸರ್ವೇಚ ಮಾವೇವ ಮಾಂ ಯೋ ವೇದ ಸರ್ವಾನ್ ದೇವಾನ್ವೇದ ಗಾಂ ಗೋಭಿಃ ಬ್ರಾಹ್ಮಣಾನ್ ಬ್ರಾಹ್ಮಣೇನ ಹವೀಗ್ಂಷಿ ಹವಿಷಾಯುರಾಯುಷಾ ಸತ್ಯಗ್ಂ ಸತ್ಯೇನ ಧರ್ಮಂ ಧರ್ಮೇಣ ತರ್ಪಯಾಮಿ ಸ್ವೇನ ತೇಜಸಾ ತತೋ ದೇವಾ ರುದ್ರಂ ನಾಪಶ್ಯಂ ಸ್ತೇ ದೇವಾ ರುದ್ರಂ ಧ್ಯಾಯಂತಿ ತತೋ ದೇವಾ ಊರ್ಧ್ವಬಾಹವಃ ಸ್ತುನ್ವಂತಿ (2)

ತಾ : ಆ ಮಹಾರುದ್ರನು ಅದೃಶ್ಯನಾಗಿ ಅಂತರಿಕ್ಷಕ್ಕೆ ಹೋದನು. ದೇವತೆಗಳನ್ನು ಸಂತೋಷ ಪಡಿಸಲು ದಿಕ್ಕುಗಳ ಮಧ್ಯದಿಂದ ಹೀಗೆ ನುಡಿದನು. ತ್ರಿಕಾಲಾತೀತ ನಾನು ನಿತ್ಯಾನಿತ್ಯನು. ಬ್ರಹ್ಮವೂ ನಾನೇ. ಚಕ್ಷುರಾದೀಂದ್ರಿಯಗಳು ನಾನೇ. ವಾಗಿಂದ್ರಿಯಗಳು ನಾನೆ. ಮನಸ್ಸು ಮುಂತಾದವುಗಳು ನಾನೇ. ಅದೋ ದಿಕ್ಕು, ಊರ್ಧ್ವ ದಿಸೆ, ದಿಕ್ಕುಗಳು, ವಿದಿಕ್ಕುಗಳು ನಾನೇ. ಪುರುಷನು, ನಪುಂಸಕನು, ಸ್ತ್ರೀಯರೂ ನಾನೆ. ಸಾವಿತ್ರಿ ಹಾಗೂ ಗಾಯತ್ರಿಯು ನಾನೇ. ತ್ರಿಷ್ಟುಪ್, ಜಗತೀ ಅನುಷ್ಟುಪ್ ಛಂದಸ್ಸು ನಾನೇ. ಗಾರ್ಹ ಪತ್ಯಾಗ್ನಿ, ದಕ್ಷಿಣಾಗಿಯು ನಾನೇ, ಅಹವನಾಗಿಯೂ ನಾನೇ, ಗೋವಿನಿಂದ ಹಿಡಿದು ಗೌರೀದೇವಿಯವರೆಗೂ ನಾನೇ. ಜೇಷ್ಠ, ಶ್ರೇಷ್ಠ ನಾನೇ. ಅಧಿಕನು, ತೇಜಸ್ಸು ನಾನೇ, ಋಗ್ ಯಜು ಸಾಮ ಅಥರ್ವವೇದಗಳು ನಾನೇ. ಪ್ರಣವಾಕ್ಷರವು ನಾನೇ. ಕ್ಷರ, ಗುಹ್ಯವೂ ನಾನೇ. ಅರಣ್ಯಸ್ವರೂಪವು, ಪುಷ್ಕರವೂ ನಾನೇ. ಪವಿತ್ರವೂ ನಾನೇ. ಅಗ್ರ, ಮಧ್ಯ, ಬಾಹ್ಯ, ಮುಂಭಾಗವು, ದಶದಿಕ್ಕುಗಳಲ್ಲಿರುವ ಭಾಗಗಳು, ಇಲ್ಲದ ಭಾಗಗಳು, ಜ್ಯೋತಿ ರೂಪವು – ಈ ರೀತಿಯಾಗಿ ನಾನು ಒಬ್ಬನೇ ಆಗಿದ್ದೇನೆ. ಎಲ್ಲರೂ ನನ್ನನ್ನು ಸೇವಿಸುತ್ತಿದ್ದಾರೆ. ಯಾರು ನನ್ನನ್ನು ತಿಳಿದುಕೊಳ್ಳುವವನೋ ಅಂತಹವನು ದೇವತೆಗಳನ್ನೆಲ್ಲಾ ತಿಳಿದುಕೊಳ್ಳುತ್ತಾನೆ. ಮತ್ತೆ ನಾನು ಭೂಮಿಯನ್ನು ಸೂರ್ಯಕಿರಣಗಳಿಂದಲೂ, ಬ್ರಾಹ್ಮಣರನ್ನು ವೇದಾಧ್ಯಯನಾದಿಗಳಿಂದ, ಹವಿಸ್ಸನ್ನು ಆಜ್ಯದಿಂದಲೂ, ಪ್ರಾಣವನ್ನು ಪ್ರಾಣಾವಸ್ಥಾನದ ಕೈಯಿಂದಲೂ, ಭೂತಪಂಚಕವನ್ನು ಬ್ರಹ್ಮದಿಂದ, ಧರ್ಮವನ್ನು ಸತ್ಕರ್ಮದಿಂದ ಅಭಿವೃದ್ಧಿ ಮಾಡುತ್ತಿದ್ದೇನೆ. ಆನಂತರ ದೇವತೆಗಳು ರುದ್ರನನ್ನು ನೋಡಲಾರದೇ ಹೋದರು. ಆ ದೇವತೆಗಳು ಊರ್ಧ್ವಬಾಹುಗಳಾಗಿ ಸ್ತೋತ್ರಗಳನ್ನು ಮಾಡುತ್ತಿದ್ದಾರೆ.

## ದ್ವಿತೀಯಃ ಖಂಡಃ

ಮಂ.ಶ್ಲೋ॥ ಓಂ ಯೋಹ ವೈ ರುದ್ರಸ್ಸ ಭಗವಾನ್ ಯಶ್ಚ ಬ್ರಹ್ಮಾ ಭೂರ್ಭುವಸ್ಸುವಸ್ತಸ್ಮೈ ವೈ ನಮೋ ನಮಃ ಶೀರ್ಷಂ ಜನಪದೋಽಂ ವಿಶ್ವರೂಪೋಽಸಿ (1) (ಯಥಾ ಪ್ರಥಮ ಮಂತ್ರೋಕ್ತಾ ವಾದ್ಯಂ ತೌ ತಥಾ ಸರ್ವಮಂತ್ರೇಷು ದ್ರಷ್ಟವ್ಯಾ) ಯಶ್ಚ ವಿಷ್ಣುಃ (2) ಯಶ್ಚ ಮಹೇಶ್ವರಃ (3) ಯಾಚೋಮಾ (4) ಯಶ್ಚ ವಿನಾಯಕಃ (5) ಯಶ್ಚ ಸ್ಕಂದಃ (6) ಯಶ್ಚೇಂದ್ರಃ (7) ಯಶ್ಚಾಗ್ನಿಃ (8) ಯಾಚ ಭೂಃ (9) ಯಶ್ಚ ಭುವಃ (10) ಯಶ್ಚ ಸುವಃ (11) ಯಶ್ಚಮಹಃ (12) ಯಶ್ಚ ಜನಃ (13) ಯಚ್ಚ ತಪಃ (14) ಯಚ್ಚ ಸತ್ಯಂ (15) ಯಾಚ ಪೃಥಿವೀ (16) ಯಶ್ಚಾಪಃ (17) ಯಚ್ಚ ತೇಜಃ (18) ಯಶ್ಚ ವಾಯುಃ (19) ಯಚ್ಚಾಕಾಶಂ (20) ಯಶ್ಚಸೂರ್ಯಃ (21) ಯಶ್ಚ ಸೋಮಃ (22) ಯಾನಿಚ ನಕ್ಷತ್ರಾಣಿ (23) ಯೇಚಾಷ್ಟಾ ಗ್ರಹಾಃ (24) ಯಶ್ಚ ಪ್ರಾಣಃ (25) ಯಶ್ಚ ಕಾಲಃ (26) ಯಶ್ಚ ಯಮಃ (27) ಯಶ್ಚ

**ಮೃತ್ಯುಃ (28) ಯಚ್ಚಾಮೃತಂ (29) ಯಚ್ಚ ಭೂತಂ ಭವ್ಯಂ ಭವಿಷ್ಯತ್ (30) ಯಚ್ಚ ವಿಶ್ವಂ (31) ಯಚ್ಚ ಕೃತ್ಸ್ನಂ (32) ಯಚ್ಚ ಸರ್ವಂ**

ತಾ : ಸರ್ವ ಶಾಸ್ತ್ರಗಳಲ್ಲಿಯೂ ಪ್ರಸಿದ್ಧಿಯಾಗಿ ಯಾರು ರುದ್ರನನ್ನು ಪದದಲ್ಲಿ ವ್ಯವಹರಿಸುತ್ತಿರುವರೋ ಅಂತಹ ಭಗವಂತನಾದ ರುದ್ರನು, ಚತುರ್ಮುಖ ಬ್ರಹ್ಮನು ಈ ಉಭಯ ರೂಪಗಳುಳ್ಳ ಮಹಾ ರುದ್ರನಿಗೆ ನಮಸ್ಕಾರಗಳು. ಇದೀಗ ನಿಶ್ಚಿತ. ಪರಾಪರವೆಂಬ ಉಭಯ ರೂಪನಾದ ಆ ರುದ್ರನೇ ಮಹಾವಿಷ್ಣುವು, ಮಹೇಶ್ವರನು, ಉಮಾದೇವಿ, ವಿನಾಯಕ, ಸ್ಕಂದ, ಇಂದ್ರ, ಅಗ್ನಿ, ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯ, ಪಂಚ ಮಹಾಭೂತಗಳು, ಸೂರ್ಯ, ಚಂದ್ರ, ನಕ್ಷತ್ರಗಳು, ಅಷ್ಟಗ್ರಹಗಳು ಪ್ರಾಣ, ಕಾಲ, ಯಮ, ಮೃತ್ಯು, ಅಮೃತ, ಭೂತಭವಿಷ್ಯದ್ವರ್ತಮಾನಕಾಲಗಳು, ವಿಶ್ವ, ಸಮಸ್ತಪ್ರಪಂಚ, ಈ ಸರ್ವವೂ ಸತ್ಯ ಈ ಎಲ್ಲ ರೂಪಗಳಲ್ಲಿರುವ ನಿನಗೆ ನಮಸ್ಕರಿಸುತ್ತಿದ್ದೇವೆ.

# ತೃತೀಯ ಖಂಡ

ಮಂ.ಶ್ಲೋ॥ **ಓಮಾದೌ ಮಧ್ಯೇ ಭೂರ್ಭುವಸ್ಸುವರಂತೇ ಶೀರ್ಷಂ ಜನದೋಂ (1) ವಿಶ್ವರೂಪೋಽಸಿ, ಬ್ರಹ್ಮೈಕತ್ವಂ ದ್ವಿಧಾ ತ್ರಿವಿಧೋರ್ಧ್ವಮಧಶ್ಚ ತ್ವಂ ಶಾಂತಿಶ್ಚ ತ್ವಂ ಪುಷ್ಟಿಶ್ಚ ತ್ವಂ ತುಷ್ಟಿಶ್ಚ ತ್ವಂ ಹುತಮಹುತಂ ವಿಶ್ವಮವಿಶ್ವಂ ದತ್ತಮದತ್ತಂ ಕೃತಮಕೃತಂ ಪರಮಪರಂ ಪರಾಯಣಂ ಚೇತಿ (2) ಅಪಾಮಸೋಮಮಮೃತಾ ಅಭೂಮಾಗನ್ಮ ಜ್ಯೋತಿರವಿದಾಮದೇವಾನ್, ಕಿಂ ನೂನಮಸ್ಮಾನ್ ಕೃಣವದರಾತಿಃ ಕಿಮು ಧೂರ್ತಿರಮೃತಮರ್ತ್ಯಸ್ಯ, ಸರ್ವಂ ಜಗದ್ಧಿತಂ ವಾ ಏತದಕ್ಷರಂ ಪ್ರಾಜಾಪತ್ಯಂ ಸೂಕ್ಷ್ಮಂ ಸಾಮ್ಯಂ ಪುರುಷಮಗ್ರಾಹ್ಯಮಗ್ರಾಹ್ಯೇಣ ವಾಯುಂ ವಾಯುವ್ಯೇನ ಸೋಮಂ ಸೋಮ್ಯೇನ ಗ್ರಸತಿ, ಸ್ವೇನ ತೇಜಸಾ ತಸ್ಮಾದುಪಸಂಹಾರ್ತ್ರೇ ಮಹಾಗ್ರಾಸಾಯ ವೈ ನಮೋನಮಃ (3)**

ತಾ : ಆದಿಯಲ್ಲಿ ಓಂಕಾರ, ಮಧ್ಯದಲ್ಲಿ ಭೂರ್ಭುವಸ್ಸುವಃ ಎನ್ನುವ ವ್ಯಾಹೃತಿಗಳು ಇದಕ್ಕೆ ಮೊದಲ "ಸ್ವಾಹಾಜ ದೌಮ್" ಎನ್ನುವ ಪದಗಳು (ಮಂತ್ರವು ಈ ರೀತಿಯಾಗಿರುವುದು. "ಓಂ ಭೂರ್ಭುವಸ್ಸುವ ಸ್ವಾಹಾ ಜನದೌಮ್")- ಓ ಪ್ರಣವವೇ! ನೀನು ವಿಶ್ವರೂಪವುಳ್ಳವಳು. ನೀನು ಅದ್ವಿತೀಯವಾದ ಪರಬ್ರಹ್ಮವು. ನೀನು ಎರಡು ಮೂರಾಗಿರುವೆ. ಮಂತ್ರದ ಊರ್ಧ್ವಭಾಗದಲ್ಲೂ, ಕೆಳಗಿನ ಭಾಗದಲ್ಲೂ ನೀನೇ ಆಗಿರುವೆ. ಶಾಂತಿಯು ನೀನೆ, ಪುಷ್ಟಿಯು ನೀನೇ, ತುಷ್ಟಿಯು ನೀನೇ, ಹುತುವು ನೀನೇ, ಆಹುತವು ನೀನೇ, ವಿಶ್ವವು ನೀನೇ, ಅವಿಶ್ವವು ನೀನೇ, ಪರ ಅಪರಗಳು ನೀನೇ, ದತ್ತ ಅದತ್ತಗಳು ನೀನೇ, ಪರಾಯಣವು ನೀನೇ, ಈ ವಿಧವಾಗಿ ನೀನು ವಿಶ್ವರೂಪವಾಗಿದ್ದೀಯೆ. ಬ್ರಹ್ಮ ವಿದ್ಯಾ ಸ್ವರೂಪಿಣಿಯಾದ ಉಮಾ ದೇವಿಯೊಡನೆ ಕೂಡಿರುವ ಮಹಾದೇವನನ್ನು ನಾವು ಹೊಂದಿದೆವು. ಆದ್ದರಿಂದ ನಾವು ಮರಣರಹಿತರು. ಆನಂದ ಜ್ಯೋತಿಯನ್ನು ಹೊಂದಿದೆವು ಇಂದ್ರಿಯಗಳನ್ನು ತಿಳಿದುಕೊಂಡೆವು ಅನರ್ಥಗಳನ್ನು ಉಂಟುಮಾಡುವ, ಧೂರ್ತವಾದಂತಹ ಇಂದ್ರಿಯಗಣವು ನಮ್ಮನ್ನು ಏನು ಮಾಡಬಲ್ಲದು? (ಇಂದ್ರಿಯಗಣವು ನಮಗೆ ಅಪಕಾರ ಮಾಡಲಿಲ್ಲ)

ಈ ಪ್ರಣವವು ಸಕಲ ಜಗತ್ತುಗಳಿಗೆ ಹಿತವನ್ನುಂಟು ಮಾಡುವುದಿಲ್ಲವೇ? ನಶಿಸಲಾರದ್ದು, ಹಿರಣ್ಯಗರ್ಭನಿಂದ ತಿಳಿದುಕೊಳ್ಳಲಾದಂತಹುದು. ಸೂಕ್ಷ್ಮವಾದುದು, ಸೌಮ್ಯವಾದುದು, ಪರಿಪೂರ್ಣ-ವಾದುದು, ಗ್ರಹಿಸಲು ಸಾಧ್ಯವಾಗದು. ಗ್ರಹಿಸಲಸಾಧ್ಯವಾಗದ ಸ್ವೀಯ ತೇಜಸ್ಸಿನಿಂದ ವಾಯುವನ್ನು, ವಾಯುಸಂಬಂಧವಾದ ಸ್ವತೇಜಸ್ಸಿನಿಂದ ಸೋಮನನ್ನು, ಸೋಮ ಸಂಬಂಧವಾದ ಸ್ವಶಕ್ತಿಯಿಂದ ಭಕ್ಷಿಸುತ್ತಿದೆ. ಅಂತಹ ಉಪಸಂಹಾರ ಕರ್ತನು ಮಹಾಗ್ರಾಸವನ್ನುಳ್ಳವನು ಆದ ಮಹಾರುದ್ರನಿಗೆ, ಪ್ರಣವ ಸ್ವರೂಪನಿಗೆ ನಮಸ್ಕಾರಗಳು.

## ಚತುರ್ಥ ಖಂಡ

**ಮಂ.ಶ್ಲೋ॥ ಹೃದಿಸ್ಥಾ ದೇವತಾಸ್ಸರ್ವಾ ಹೃದಿ ಪ್ರಾಣಾಃ ಪ್ರತಿಷ್ಠಿತಾಃ । ಹೃದಿತ್ವಮಸಿ ಯೋ ನಿತ್ಯಂ ತಿಸ್ರೋ ಮಾತ್ರಾಃ ಪರಸ್ತು ಸಃ (1) ತಸ್ಯೋತ್ತರತಃ, ಶಿರೋ ದಕ್ಷಿಣತಃ, ಪಾದೌ ಯ ಉತ್ತರತಃ, ಸ ಓಂಕಾರೋ ಯ ಓಂಕಾರಸ್ಸಪ್ರಣವೋ ಯಃ ಪ್ರಣವಸ್ಸ ಸರ್ವವ್ಯಾಪಿ ಯಸ್ಸರ್ವವ್ಯಾಪಿ ಸೋಽನಂತೋ ಯೋಽನಂತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಂ ಬ್ರಹ್ಮೇತಿ, ಸ ಏಕಸ್ಸ ಏಕೋರುದ್ರಸ್ಸ ಈಶಾನಸ್ಸ ಭಗವಾನ್ ಸ ಮಹೇಶ್ವರಃ ಸ ಮಹಾದೇವಃ (2)**

ತಾ : ದೇವತೆಗಳೆಲ್ಲರೂ ಹೃದಯದಲ್ಲಿದ್ದಾರೆ. ಹೃದಯಕಮಲದಲ್ಲಿರುವ ಸೂತ್ರಾತ್ಮದಲ್ಲಿ ದೇವತೆಗಳೆಲ್ಲರೂ ಇರುವರು. ಅದ್ವಿತೀಯನಾದ ನೀನು ಹೃದಯದಲ್ಲಿದ್ದೇಯೆ. ಮೂರು ಮಾತ್ರೆಗಳಿಗಿಂತ ಪರಮವಾದ ಓಂಕಾರವೇ ನೀನು. ಓ ರುದ್ರದೇವಾ! ನಿನಗೆ ನಿವೃತ್ತಿ ಮಾರ್ಗವು ಶಿರಸ್ಸು, ಪ್ರವೃತ್ತಿ ಮಾರ್ಗವಾದ ಸಂಸಾರ ಚಕ್ರವು ಪಾದಗಳು, ಯಾವುದು ಮೋಕ್ಷಮಾರ್ಗವೋ ಅದೇ ಓಂಕಾರವೆಂಬ ಅಕ್ಷರ. ಆ ಓಂಕಾರವೇ ಪ್ರಣವವೆಂದು, ಸರ್ವ ವ್ಯಾಪಿಯೆಂದು, ಅನಂತವೆಂದು, ಕಾರಣವೆಂದು, ಸೂಕ್ಷ್ಮವೆಂದು, ಶುಕ್ಲವೆಂದು, ವೈದುತ್ಯವೆಂದು, ಪರಬ್ರಹ್ಮವೆಂದು ಕರೆಯಲಾಗುತ್ತಿದೆ. ಆ ಒಬ್ಬನೇ ರುದ್ರನು, ಈಶಾನನು, ಭಗವಂತ, ಮಹೇಶ್ವರ, ಮಹಾದೇವ.

## ಪಂಚಮ ಖಂಡ

**ಮಂ.ಶ್ಲೋ॥ ಅಥ ಕಸ್ಮಾದುಚ್ಯತ ಓಂಕಾರೋ ಯಸ್ಮಾದುಚ್ಚಾರ್ಯಮಾಣ ಏವ ಸರ್ವಗ್ಂ ಶರೀರಮೂ-ರ್ಧ್ವಮುನ್ನಮಯತಿ ತಸ್ಮಾದುಚ್ಯತ ಓಂಕಾರಃ (1) ಅಥ ಕಸ್ಮಾದುಚ್ಯತೇ ಪ್ರಣವೋ ಯಸ್ಮಾದುಚ್ಚಾರ್ಯಮಾಣ ಏವ ಋಚೋ ಯಜೂಗ್ಂಷಿ ಸಾಮಾನ್ಯಥರ್ವಾಂಗಿರಸಶ್ಚ ಯಜ್ಞೇ ಬ್ರಹ್ಮಚ ಬ್ರಾಹ್ಮಣೇಭ್ಯಃ ಪ್ರಣಾಮಯತಿ ತಸ್ಮಾದುಚ್ಯತೇ ಪ್ರಣವಃ (2) ಅಥ ಕಸ್ಮಾದುಚ್ಯತೇ ಸರ್ವವ್ಯಾಪಿ ಯಸ್ಮಾದುಚ್ಚಾರ್ಯಮಾಣ ಏವ ಸರ್ವಾನ್ಲೋಕಾನ್ ವ್ಯಾಪ್ನೋತಿ ಸ್ನೇಹೋ ಯಥಾ ಪಲಲಪಿಂಡಂ ಶಾಂತಮೂಲಮೋತಂಪ್ರೋತಮನುಪ್ರಾಪ್ಯ ಸರ್ವಂ ವ್ಯತಿಶಿಷ್ಟಸ್ತ ಸ್ಯೈವಾನುವಿದ್ಧಂ ವ್ಯತಿಶಿಷ್ಟಸ್ತಸ್ಮಾದುಚ್ಯತೇ ಸರ್ವವ್ಯಾಪಿ (3) ಅಥ ಕಸ್ಮಾದುಚ್ಯತೇಽನಂತೋ**

ಯಸ್ಮಾದುಚ್ಚಾರ್ಯಮಾಣ ಏವಾದ್ಯಂತಂ ನೋಪಲಭ್ಯತೇ, ತಿರ್ಯಗೂರ್ಧ್ವಮದಸ್ತಾತ್ತಸ್ಮಾ-ದುಚ್ಯತೇಽನಂತಃ (4)

ತಾ : ಉಚ್ಚರಿಸಿದ ಕೂಡಲೇ ಶರೀರವೆಲ್ಲವೂ ಮೇಲಕ್ಕೇಳುತ್ತದೆ. ಆದ್ದರಿಂದ ಓಂಕಾರವೆಂದು ಹೇಳಲಾಗುತ್ತದೆ. ಉಚ್ಚರಿಸುತ್ತಲೇ, ಉಚ್ಚರಿಸುವ ಬ್ರಹ್ಮನಿಷ್ಠರಿಗೆ ಋಗ್ಯಯಜುಸ್ಸಾಮಾಥರ್ವಣ ವೇದಗಳನ್ನು ಷಡಂಗ ಮುಂತಾದುವುಗಳನ್ನು ಜಪಯಜ್ಞದಲ್ಲಿ ಬ್ರಹ್ಮವನ್ನು ಹೊಂದಿಸುವುದು ಆದ್ದರಿಂದ ಪ್ರಣವವೆಂದು ಹೇಳಲಾಗುತ್ತದೆ. ಈ ಓಂಕಾರಕ್ಕೆ "ಸರ್ವವ್ಯಾಪಿ"ಯೆನ್ನುವ ನಾಮಧೇಯ ಹೇಗೆ ಉಂಟಾಯಿತು? ಉಚ್ಚರಿಸುತ್ತಿದ್ದಾಗಲೇ ಸಕಲ ಲೋಕಗಳನ್ನು ಎಳ್ಳಿನ ಪಿಷ್ಟದಲ್ಲಿರುವ ಎಣ್ಣೆಯಂತೆ ಎಲ್ಲೆಡೆಯೂ ವ್ಯಾಪಿಸಿರುವಂತಹುದಾಗಿ ಶಾಂತಮೂಲವನ್ನು ಓತಪ್ರೋತವಾದ ಜಗತ್ತನ್ನು ಹೊಂದಿ. ಯಾವಾಗಲೂ ಜನನ ಮರಣಗಳನ್ನು ಹೊಂದಿದವನಾಗಿರುತ್ತ ಆ ಜಗತ್ತಿಗೆ ಸಂಬಂಧಿಸಿದ ಜನನ ಮರಣಾದಿ ಶೂನ್ಯವಾಗಿ ಪ್ರಕಾಶಿಸುತ್ತದೆ. ಆದ್ದರಿಂದ "ಸರ್ವವ್ಯಾಪಿ" ಎಂದು ಹೇಳಲಾಗಿದೆ. ಅನಂತ-ವೆಂದು ಏಕೆ ಹೇಳಲ್ಪಡುತ್ತದೆ? "ಓಂಕಾರ"ವನ್ನು ಉಚ್ಚರಿಸುತ್ತಿರುವಾಗಲೇ ಆದ್ಯಂತ್ಯಗಳು ತಿಳಿಯುವುದಿಲ್ಲ. ದಶದಿಶೆಗಳಲ್ಲಿನ ಆದ್ಯಂತ್ಯಗಳು ಕಾಣುವುದಿಲ್ಲ ಆದ್ದರಿಂದ "ಅನಂತ"ವೆಂದು ಹೇಳಲಾಗುತ್ತದೆ.

ಮಂ.ಶ್ಲೋ॥ ಅಥ ಕಸ್ಮಾದುಚ್ಯತೇ ತಾರಂ ಯಸ್ಮಾದುಚ್ಚಾರ್ಯಮಾಣ ಏವ ಗರ್ಭ ಜನ್ಮ ವ್ಯಾಧಿ ಜರಾ ಮರಣ ಸಂಸಾರ ಮಹದ್ಭಯಾತ್ಸಂತಾರಯತಿ ತಸ್ಮಾದುಚ್ಯತೇ ತಾರಮ್ (5) ಅಥ ಕಸ್ಮಾದುಚ್ಯತೇ ಸೂಕ್ಷ್ಮಂ ಯಸ್ಮಾದುಚ್ಚಾರ್ಯಮಾಣ ಏವ ಸೂಕ್ಷ್ಮೋ ಭೂತ್ವಾ ಪರಶರೀರಾ-ಣ್ಯೇವಾಧಿತಿಷ್ಠತಿ ತಸ್ಮಾದುಚ್ಯತೇ ಸೂಕ್ಷ್ಮಮ್ (6) ಅಥ ಕಸ್ಮಾದುಚ್ಯತೇ ಶುಕ್ಲಂ ಯಸ್ಮಾದುಚ್ಚಾರ್ಯಮಾಣ ಏವ ಕ್ಲಂದತೇ ಕ್ಲಾಮಯತೇ ತಸ್ಮಾದುಚ್ಯತೇ ಶುಕ್ಲಮ್ (7)

ತಾ : ತಾರವೆಂದು ಏಕೆ ಹೇಳಲಾಗುತ್ತದೆ? ಉಚ್ಚರಿಸಿದಾಗಲೇ ಗರ್ಭ, ಜನ್ಮ, ಜರಾ, ಮರಣರೂಪ ಸಂಸಾರದ ಮಹಾಭಯದಿಂದ ದೂರಮಾಡಿ, ಕೃತಾರ್ಥನನ್ನಾಗಿ ಮಾಡುತ್ತದೆ. ಆದ್ದರಿಂದ ಓಂಕಾರವು ತಾರವೆಂದು ಹೇಳುವುದು (ರಕ್ಷೆ) ಸೂಕ್ಷ್ಮವೆನ್ನುವ ನಾಮ ಏಕೆ ಬಂತು? ಪ್ರಣವವನ್ನು ಹೇಳು-ತ್ತಿದ್ದಂತೆಯೇ ಅತಿ ಸೂಕ್ಷ್ಮವು, ಅತಿದೊಡ್ಡದಾದುದಾಗಿ ಸ್ಥಾವರ ಜಂಗಮಾತ್ಮಕವಾದ ಭೂತಗಳಲ್ಲಿನ ದೇಹಗಳನ್ನು ಅಧೀನ ಮಾಡಿಕೊಳ್ಳುತ್ತಿದೆ. ಆದ್ದರಿಂದ ಸೂಕ್ಷ್ಮವೆಂದು ಹೇಳಲಾಗುತ್ತದೆ. ಶುಕ್ಲವೆಂದು ಏಕೆ ಹೇಳುತ್ತಾರೆ? ಓಂಕಾರವನ್ನು ಹೇಳತ್ತಿದ್ದಂತೆಯೇ ಒಳಗಡೆ ಧ್ವನಿಬರುವುದು. ಅಜ್ಞಾನವನ್ನು ತತ್ಕಾರ್ಯವಾದ ದ್ವೈತ ಭಾವವನ್ನು ನಶಿಸುವಂತೆ ಮಾಡುವುದರಿಂದ ಶುಕ್ಲವೆಂದು ಹೇಳಲಾಗುತ್ತದೆ.

ಮಂ.ಶ್ಲೋ॥ ಅಥ ಕಸ್ಮಾದುಚ್ಯತೇ ವೈದ್ಯುತಂ ಯಸ್ಮಾದುಚ್ಚಾರ್ಯಮಾಣ ಏವ ಮಹತಿ ತಮಸಿ ಸರ್ವಂ ಶರೀರಂ ವಿದ್ಯೋತಯತಿ ತಸ್ಮಾದುಚ್ಯತೇ ವೈದ್ಯುತಮ್ (8) ಅಥ ಕಸ್ಮಾದುಚ್ಯತೇ ಪರಂಬ್ರಹ್ಮ ಯಸ್ಮಾದುಚ್ಚಾರ್ಯಮಾಣ ಏವ ಬೃಹತಿ ಬೃಂಹಯತಿ ತಸ್ಮಾದುಚ್ಯತೇ ಪರಂ ಬ್ರಹ್ಮ (9) ಅಥ ಕಸ್ಮಾದುಚ್ಯತ ಏಕೋ ಯಸ್ಸರ್ವಾನ್ಲೋಕಾನ್ ಉದ್ಗೃಹ್ಣಾತ್ಯಜಸ್ರಂ ಸೃಜತಿ ವಿಸೃಜತಿ ವಾಸಯತಿ ತಸ್ಮಾದುಚ್ಯತ ಏಕಃ (10)

ತಾ : ಪ್ರಣವವು ವೈದ್ಯುತವೆಂದು ಏಕೆ ಹೇಳಲಾಗುತ್ತದೆ? ಈ ಓಂಕಾರವನ್ನು ಉಚ್ಚರಿಸಿದ ಕೂಡಲೇ ಅತ್ಯಂತ ಗಾಢವಾದ ಅಜ್ಞಾನವನ್ನು ಹೋಗಲಾಡಿಸಿ ದೇಹವೆಲ್ಲವೂ ಜ್ಞಾನ ಪ್ರಕಾಶದಲ್ಲಿ ತುಂಬಿಬಿಡುತ್ತದೆ. ಆದ್ದರಿಂದ ವೈದುತ್ಯವೆಂದು ಹೇಳಲಾಗುತ್ತದೆ. ಪರಬ್ರಹ್ಮವೆಂದು ಏಕೆ ಹೇಳುವುದು? ಉಚ್ಚರಿಸಿದ ಕೂಡಲೇ ವೃಧ್ಧಿಯನ್ನು ಹೊಂದುವುದರಿಂದ ಇತರ ವಾದವುಗಳನ್ನು (ಜ್ಞಾನಾದಿಗಳನ್ನು) ವೃಧ್ಧಿಯಾಗುವಂತೆ ಮಾಡುವುದರಿಂದ ಓಂಕಾರವು ''ಪರಬ್ರಹ್ಮ''ವೆಂದು ಹೇಳಲಾಗುತ್ತದೆ. ''ಏಕಃ'' ಎಂದು ಏಕೆ ಹೇಳುತ್ತಿದ್ದಾರೆ? ಯಾವಾಗ ಲೋಕಗಳೆಲ್ಲವನ್ನೂ ಮೋಕ್ಷಕಾಲದಲ್ಲಿ ತನ್ನಲ್ಲಿ ಐಕ್ಯ ಮಾಡಿಕೊಳ್ಳುತ್ತಾ ಸಕಲ ಲೋಕಗಳನ್ನೂ ಸೃಷ್ಟಿ ಸ್ಥಿತಿ ಸಂಹಾರಗಳನ್ನೂ ಗೈಯುತ್ತಿರುವನೋ ಆತನು ಒಬ್ಬನೇ ಆದ್ದರಿಂದ ಏಕಃ ಎಂದು ಹೇಳಲಾಗಿದೆ.

**ಮಂ.ಶ್ಲೋ॥ ಅಥ ಕಸ್ಮಾದುಚ್ಯತ ಏಕೋ ರುದ್ರಃ ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ ಯ ಇಮಾಂ ಲೋಕಾನೀಶತ ಈಶನೀಯುರ್ಜನನೀಯುಃ, ಪ್ರತ್ಯಂಜನಾಸ್ತಿಷ್ಠತ ಸಂಚುಕೋ ಚಾಂತಕಾಲೇ ಸಂಸೃಜ್ಯ ವಿಶ್ವಾಭುವನಾನಿ ಗೋಪ್ತಾ, ತಸ್ಮಾದುಚ್ಯತಿ ಏಕೋ ರುದ್ರಃ (11) ಅಥ ಕಸ್ಮಾದುಚ್ಯತ ಈಶಾನೋ ಯಸ್ಸರ್ವಾನ್ಲೋಕಾನೀಶತ ಈಶನೀಭಿರ್ಜನನೀಭಿಃ ಪರಮಶಕ್ತಿಭಿಃ ಅಭಿತ್ವಾ ಶೂರನೋನುಮೋಽದುಗ್ಧಾ ಇವ ಧೇನವಃ, ಈಶಾನಮಸ್ಯ ಜಗತಸ್ಸುವರ್ದೃಶಮೀಶಾನಮಿಂದ್ರ ತಸ್ಥುಷಃ ತಸ್ಮಾದುಚ್ಯತ ಈಶಾನಃ (12)**

ತಾ : ಇನ್ನು ರುದ್ರನೊಬ್ಬನೇ ಎಂದು ಏಕೆ ಹೇಳಲಾಗುತ್ತದೆ? ರುದ್ರನು ಒಬ್ಬನೇ, ಎರಡನೆಯವನು ಇಲ್ಲ. ಈ ಲೋಕವನ್ನು ಪರಿಪಾಲಿಸುತ್ತಿರುವನು ನಿಯಮನ ಶಕ್ತಿಯುಳ್ಳವನು, ಉತ್ಪಾದನ ಶಕ್ತಿಯುಳ್ಳವನು. ಓ ಜನರೇ! ಸರ್ವಾಂತರನಾಗಿರುವನು, ಯುಗದ ಅಂತ್ಯಕಾಲದಲ್ಲಿ ಲೋಕಗಳೆಲ್ಲವನ್ನೂ ತನ್ನಲ್ಲಿ ಉಪಸಂಹಾರ ಮಾಡಿಕೊಂಡು ರಕ್ಷಿಸಿಕೊಳ್ಳುತ್ತಾನೆ. ಆದ್ದರಿಂದ ಒಬ್ಬನೇ ರುದ್ರನೆಂದು ಹೇಳಲ್ಪಡುತ್ತಿರುವುದು. ಈಶಾನನೆಂದು ಯಾಕೆ ಹೇಳಿದ್ದಾರೆ? ಸಕಲ ಲೋಕಗಳನ್ನು ಅಚಿಂತ್ಯವೈಭವ ಹೊಂದಿರುವಂತಹ ಅವಿದ್ಯಾ ವಿಲಾಪ ಭೂತವಾದ ನಿಯಮನ ಶಕ್ತಿಗಳಿಂದ ಪರಿಪಾಲಿಸುತ್ತಿದ್ದಾನೆ. ಸ್ಥಾವರ ಜಗತ್ತಿಗೆ ಈಶಾನನು ಸ್ವಯಂ ಪ್ರಕಾಶಾನಂದಾತ್ಮ ಸ್ವರೂಪನಾದ ನಿನ್ನನ್ನು ಎಲ್ಲೆಡೆ ಸ್ತೋತ್ರಗೈಯುವೆವು. ಹಾಲು ಹಿಂಡಿಕೊಳ್ಳದೆಯೆ ಪೂಜಿಸುತ್ತಿರುವ ಗೋವು-ಗಳಂತಹುವು ಆ ಸ್ತೋತ್ರಗಳು. ಆದ್ದರಿಂದ ಈಶಾನನೆಂದು ಕರೆಯಲಾಗುತ್ತದೆ.

**ಮಂ.ಶ್ಲೋ॥ ಅಥ ಕಸ್ಮಾದುಚ್ಯತೇ ಭಗವಾನ್ ಯಸ್ಸರ್ವಾನ್ಸ್ಥಾವಾನ್ನಿರೀಕ್ಷತ್ಯಾತ್ಮಜ್ಞಾನಂ ನಿರೀಕ್ಷಯತಿ ಯೋಗಂ ಗಮಯತಿ ಸ ಏವ ತಸ್ಮಾದುಚ್ಯತೇ ಭಗವಾನ್ (13) ಅಥ ಕಸ್ಮಾದುಚ್ಯತೇ ಮಹೇಶ್ವರೋ ಯಸ್ಸರ್ವಾನ್ಲೋಕಾಸ್ಸಂಭಕ್ಷಸ್ಸಂಭಕ್ಷಯತ್ಯಜಸ್ರಂ ಸೃಜತಿ ವಿಸೃಜತಿ ವಾಸ-ಯತಿ ತಸ್ಮಾದುಚ್ಯತೇ ಮಹೇಶ್ವರಃ (14)**

ತಾ : ''ಭಗವಾನ್'' ಎಂದು ಏಕೆ ಹೇಳುವುದು? ಸಕಲ ಪದಾರ್ಥಗಳನ್ನು ದರ್ಶಿಸುತ್ತಿರುವುದ-ರಿಂದ, ಬ್ರಹ್ಮಜ್ಞಾನವನ್ನು ಉಂಟುಮಾಡುವುದರಿಂದ, ಜೀವ ಬ್ರಹ್ಮೈಕ್ಯವನ್ನು ಹೊಂದಿರುವುದರಿಂದಲೂ ಪರಮಾತ್ಮನನ್ನು ''ಭಗವಾನ್'' ಎಂದು ಕರೆಯಲಾಗುತ್ತಿದೆ. ಮಹೇಶ್ವರನೆಂಬ ಹೆಸರು ಹೇಗೆ

ಬಂತು? ಯಾರು ಸಮಸ್ತಲೋಕಗಳನ್ನು ತನ್ನ ಉದರದಲ್ಲಿ ಸೇರಿಸಿಕೊಂಡು (ಕೊಳ್ಳುತ್ತ) ನಿರಂತರವೂ ಲೋಕಗಳೆಲ್ಲವನ್ನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಿರುವನೋ ಆ ದೇವರು ತಾನೆ ಆದ್ದರಿಂದ ಹೀಗೆ ಮಹೇಶ್ವರನೆನಿಸಿದ್ದಾನೆ.

**ಮಂ.ಶ್ಲೋ॥ ಅಥ ಕಸ್ಮಾದುಚ್ಯತೇ ಮಹಾದೇವೋ ಯಸ್ಸರ್ವಾನ್ಭಾವಾನ್ಪರಿತ್ಯಜ್ಯಾತ್ಮಜ್ಞಾನ ಯೋಗೈಶ್ವರ್ಯೇ ಮಹತಿ ಮಹೀಯತೇ ತಸ್ಮಾದುಚ್ಯತೇ ಮಹಾದೇವಃ (15) ತದೇತದ್ರುದ್ರಚರಿತಂ, ಏಷಹಿ ದೇವಃ, ಪ್ರದಿಶೋ ನು ಸರ್ವಾಃ ಪೂರ್ವೋಹಿ ಜಾತಸ್ಸ ಉಗರ್ಭೇ ಅಂತಃ, ಸ ಏವ ಜಾತ ಸ್ಸಜನಿಷ್ಯಮಾಣಃ, ಪ್ರತ್ಯಜೋ ಜನಾಸ್ತಿಷ್ಠತಿ ವಿಶ್ವತೋಮುಖಃ, ವಿಶ್ವತಶ್ಚಕ್ಷುರುತ ವಿಶ್ವತೋ-ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್, ಸಂಬಾಹುಭ್ಯಾಂ ಧಮತಿ ಸಂಪತತ್ರೈ ರ್ದ್ಯಾವಾಭೂಮಿ ಜನಯನ್ದೇವಏಕಃ (16)**

ತಾ : ಮಹಾದೇವನೆಂದು ಏಕೆ ಕರೆಯತ್ತಾರೆ? ಸಮಸ್ತ ಪದಾರ್ಥಗಳನ್ನು ಎಲ್ಲವನ್ನು ಬಿಟ್ಟು (ದೂರಮಾಡಿ) ಬ್ರಹ್ಮಜ್ಞಾನವೆನ್ನುವ ಪ್ರೌಢವಾದ ಐಶ್ವರ್ಯಗಳಲ್ಲಿ ಸಕಲ ಯೋಗಿಗಳ ಕೈಯಲ್ಲಿ ಸ್ತುತಿಸಲ್ಪಡುತ್ತಿದ್ದಾನೆ. ಆದ್ದರಿಂದ ಮಹಾದೇವನೆಂದು ಕರೆಯಲಾಗುತ್ತದೆ. ಆ ಪ್ರಸಿದ್ಧವಾದ ಪ್ರಣವ ನಾಮವು ರುದ್ರ ಚರಿತ್ರೆ. ಓ ಪ್ರಜೆಗಳೇ! ಈ ದೇವನು ಸಮಸ್ತ ದಿಕ್ಕುಗಳನ್ನು ಅವಾಂತರ ದಿಶೆಗಳನ್ನು ವ್ಯಾಪಿಸಿರುವವನು. ಆಶ್ಚರ್ಯ. ಆತನೇ ಪೂರ್ವನಾಗಿ ಹುಟ್ಟುವನು. ಮತ್ತು ಬ್ರಹ್ಮಾಂಡ ಗರ್ಭಕ್ಕೆ ಒಳಗೂ ಅವನೇ. ಆತನೇ ಹುಟ್ಟುವವನು, ಪ್ರತ್ಯಕ್ ಸ್ವರೂಪನು ವಿಶ್ವತೋಮುಖನಾಗಿ ಇದ್ದಾನೆ. ಸರ್ವತ್ರ ನೇತ್ರಗಳನ್ನು ಹೊಂದಿರುವವನು. ಹಾಗೂ ವಿಶ್ವತೋಮುಖನಾಗಿ, ಎಲ್ಲೆಡೆಯು ಬಾಹುಗಳನ್ನು ಹೊಂದಿದವನು (ಚಾಚಿದಂತಹವನು) ಮತ್ತು ಎಲ್ಲೆಡೆಯೂ ಪಾದಗಳನ್ನು ಉಳ್ಳವನು. ಬಾಹುಗಳಿಂದ ವಿವಿಧ ಶಬ್ದಗಳನ್ನು ಸೃಷ್ಟಿಸುವವನು ಪಂಚೀಕೃತ ಮಹಾಭೂತಗಳೊಂದಿಗೆ ಸಂಬಂಧವುಳ್ಳವನು. ಅಂತರಿಕ್ಷ ಲೋಕವನ್ನು, ಭೂಲೋಕವನ್ನು ಸೃಷ್ಟಿಸುತ್ತಾ (ಸ್ಥಿತಿ ಲಯಗಳನ್ನು ಕೂಡಾ ಮಾಡುತ್ತಾ) ಮಹಾದೇವ ಅದ್ವಿತೀಯನಾಗಿ ಪ್ರಕಾಶಿಸುತ್ತಿದ್ದಾನೆ.

**ಮಂ.ಶ್ಲೋ॥ ತದೇತದುಪಾಸಿತವ್ಯಂ, ಯದ್ವಾಚೋ ವದನ್ತಿ ತದೇವ ಗ್ರಾಹ್ಯಂ, ಅಯಂ ಪಂಥಾ ವಿತತ ಉತ್ತರೇಣ ಯೇನ ದೇವಾ ಯೇನ ಋಷಯೋ ಯೇನ ಪಿತರಃ ಪ್ರಾಪ್ನುವಂತಿ ಪರಮಪರಂ ಪರಾಯಣಂ ಚೇತಿ (17) ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವಂ ದೇವಂ ಜಾತ ವೇದಂ ವರೇಣ್ಯಮ್ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಶ್ಶಾಶ್ವತೀ-ನೇತರೇಷಾಮ್ (18)**

ತಾ : ಆ ಆತ್ಮ ಸ್ವರೂಪವು, ಶ್ರವಣ ಮನನ ನಿದಿಧ್ಯಾಸಗಳಿಂದ ಉಪಾಸಿಸುವಂತಹುದು ಆ ಆತ್ಮ ಸ್ವರೂಪವು ಸ್ವಸತ್ತದಿಂದ ವೇದರಾಶಿಯನ್ನು ರಕ್ಷಿಸುತ್ತಿದೆ. ಅದು ಸಚ್ಚಿದಾನಂದ ಸ್ವಭಾವ ರೂಪವಾಗಿದೆ. ಸರ್ವಜನರಿಗೆ ಸಮೀಪದಲ್ಲಿದೆ. ಓಂಕಾರದಲ್ಲಿ ಆದ್ಯಂತ ರೂಪವಾದ ಅಕಾರ ಮಕಾರಾತ್ಮವೇ ವಾಸ್ತವ. ಮಧ್ಯ ರೂಪವು ವಾಸ್ತವವಲ್ಲ. ಈ ಮೋಕ್ಷ ಮಾರ್ಗವು ವಿಸ್ತೀರ್ಣ-ವಾಗಿರುವುದು ಆ ಉತ್ತಮ ಮಾರ್ಗದಲ್ಲಿ ಅಗ್ನ್ಯಾದಿ ದೇವತೆಗಳು, ಮಹರ್ಷಿಗಳು, ಪಿತೃದೇವತೆಗಳು,

ಪರಾಪರ ಸ್ವರೂಪನಾದ ಬ್ರಹ್ಮವನ್ನು ಹೊಂದುತ್ತಿದ್ದಾನೆ. ಕೇಶಾಗ್ರಭಾಗ ಸೂಕ್ಷ್ಮ ಪರಿಮಾಣವನ್ನು ಹೊಂದಿದವನು. ಹೃದಯದಲ್ಲಿ ವಾಸವಾಗಿರುವವನು, ವಿಶ್ವರೂಪನು, ಸ್ವಯಂಪ್ರಕಾಶನು, ವೇದಕ್ಕೆ ಜನ್ಮ ಸ್ಥಾನವಾದಂತಹವನು, ಶ್ರೇಷ್ಠನು, ಅಂತಃಕರಣದಲ್ಲಿರುವವನು ಆದ ಪರಮಾತ್ಮನನ್ನು ಯಾವ ಧೀರರು ಕಾಣುತ್ತಿರುವರೋ ಅಂತಹವರಿಗೆ ಶಾಶ್ವತವಾದ ಶಾಂತಿ ದೊರೆಯುತ್ತದೆಯೇ ವಿನಹ ಅನ್ಯರಿಗಲ್ಲ.

**ಮಂ.ಶ್ಲೋ|| ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ಯೇನೇದಂ ಪೂರ್ಣಂ ಪಂಚವಿಧಂ ಚ ಸರ್ವಮ್ । ತಮೀಶಾನಂ ಪುರುಷಂ ದೇವಮೀಡ್ಯಂ ನಿಚಾಯ್ಯೇಮಾಂ ಶಾಂತಿಮತ್ಯಂತ-ಮೇತಿ (19) ಪ್ರಾಣ್ಯೇಷ್ವಂತರ್ಮನಸೋಽಲಿಂಗಮಾಹುರ್ಯಸ್ಮಿನ್ ಕ್ರೋಧೋ ಯಾಚ ತೃಷ್ಣಾ ಕ್ಷಮಾಚ। ತೃಷ್ಣಾಂ ಛಿತ್ವಾ ಹೇತುಜಾಲಸ್ಯ ಮೂಲಂ ಬುದ್ಧ್ಯಾ ಸಂಚಿಂತ್ಯ ಸ್ಥಾಪಯಿತ್ವಾತು ರುದ್ರೇ (20)**

ತಾ : ಅದ್ವಿತೀಯನಾದಂತಹ ಯಾವ ಪರಮಾತ್ಮನು ಪ್ರತಿ ಶರೀರದಲ್ಲಿಯೂ ನೆಲಸಿರುವನೋ, ಯಾರಿಂದ ಈ ಪಂಚ ವಿಧವಾದ ಸಕಲ ಪ್ರಪಂಚವು ಸ್ಥಿತಿಯನ್ನು ಹೊಂದಿರುವುದೋ, ಸರ್ವ ನಿಯಂತ್ರನು, ಪರಿಪೂರ್ಣನು, ಸ್ವಯಂಪ್ರಕಾಶಕನೆಂದು ಸ್ತುತಿಸಲ್ಪಡುವವನು. ಆದ ಅಂತಹ ಪರಮಾತ್ಮನನ್ನು ಧ್ಯಾನಿಸಬೇಕು. ಅಂತಹ ಧ್ಯಾನದಿಂದ ಸಂಸಾರ ತಾರಕವಾದ ಮಹತ್ತರ ಶಾಂತಿಯನ್ನು ಮಾನವನು ಪೂರ್ಣವಾಗಿ ಹೊಂದುವನು. ಆ ಇಂದ್ರಿಯಗಳ (ಪ್ರಾಣಗಳ) ಮಧ್ಯ ಭಾಗದಲ್ಲಿ ಲಿಂಗ ಶರೀರವಿದೆ. ಆ ಲಿಂಗ ಶರೀರದಲ್ಲಿ ಕ್ರೋಧ, ತೃಷ್ಣೆ, ಕ್ಷಮೆ ಇವೆ. ದುಃಖಸಮೂಹಕ್ಕೆ ಮೂಲಭೂತವಾದ ತೃಷ್ಣೆಯನ್ನು ನಾಶಗೊಳಿಸಿ ಬುದ್ಧಿಯಿಂದ (ಜ್ಞಾನ) ತನ್ನಲ್ಲಿ ತೃಷ್ಣೆಯಿಲ್ಲವೆಂದು ಗ್ರಹಿಸಿ (ಮಹಾರುದ್ರನ) ಆತ್ಮಚಿಂತನೆ ನಡೆಸಬೇಕು.

**ಮಂ.ಶ್ಲೋ|| ರುದ್ರ ಏಕತ್ವಮಾಹುಃ, ರುದ್ರಂ ಶಾಶ್ವತಂ ವೈ ಪುರಾಣಮಿಷಮೂರ್ಜಂ ತಪಸಾ ನಿಯಚ್ಛತ, ವ್ರತಮೇತತ್ಪಾಶುಪತಮ್ (21) ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ, ವ್ಯೋಮೇತಿ ಭಸ್ಮ, ಸರ್ವಗ್ಂ ಹವಾ ಇದಂ ಭಸ್ಮ. ಮನ ಇತ್ಯೇತಾನಿ ಚಕ್ಷೂಂಷಿ ಭಸ್ಮಾನಿ, ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ನಿಮೃಜ್ಯಾಂಗಾನಿ ಸಂಸ್ಪೃಶೇತ್ ತಸ್ಮಾದ್ವ್ರತಮೇತತ್ಪಾಶುಪತಮ್, ಪಶುಪಾಶವಿಮೋಕ್ಷಾಯ (22)**

ತಾ : ರುದ್ರನಲ್ಲಿ ಸಕಲ ಭಾವಗಳು ಐಕ್ಯವಾಗಿರುವುದನ್ನು ಹೇಳುತ್ತಿದ್ದಾರೆ. ಶಾಶ್ವತನು, ಪುರಾಣನು, ಅನ್ನರೂಪನು, ಅಮೃತರೂಪನು ಆದಂತಹ ರುದ್ರನನ್ನು ತಪಸ್ಸಿನಿಂದ ಹೊಂದಲಾಗು-ವುದು. ಈ ವ್ರತದ ಹೆಸರು "ಪಾಶುಪತ" ಅಗ್ನಿಯೇ ಭಸ್ಮ, ವಾಯುವೇ ಭಸ್ಮ, ಜಲವೇ ಭಸ್ಮ, ಸ್ಥಳವೇ ಭಸ್ಮ, ಆಕಾಶವೇ ಭಸ್ಮ, ಈ ಸಮಸ್ತವೂ ಭಸ್ಮವೇ ಈ ನೇತ್ರಾದಿ ಇಂದ್ರಿಯಗಳೆಲ್ಲವೂ ಭಸ್ಮವೇ "ಅಗ್ನಿರಿತಿಭಸ್ಮೀ" ಮೊದಲಾದ ಏಳುಮಂತ್ರಗಳಿಂದ ಭಸ್ಮವನ್ನು ಗ್ರಹಿಸಿ, ದೇಹಕ್ಕೆ ಚೆನ್ನಾಗಿ ಬಳಿದು ಕೊಂಡು, ಶಿರಸ್ಸು ಮುಂತಾದ ಅವಯವಗಳನ್ನು ಸ್ಪರ್ಶಿಸಬೇಕು. ಆದ್ದರಿಂದ ಈ ವ್ರತವನ್ನು ಪಾಶುಪತವೆಂದು ಹೇಳಲಾಗುತ್ತದೆ. ಈ ವ್ರತವನ್ನು ಅಜ್ಞಾನ ಜೀವಿಗಳ ಅಜ್ಞಾನವನ್ನು ತತ್ಕಾರ್ಯಗಳನ್ನು ಹೋಗಲಾಡಿಸುವುದಕ್ಕಾಗಿ ಆಚರಿಸಬೇಕು.

ಮಂ.ಶ್ಲೋ॥ ಯೋಽಥರ್ವಶಿರಸಂ ಬ್ರಾಹ್ಮಣೋ ನಿತ್ಯಮಧೀತೇ ಸೋಽಗ್ನಿಪೂತೋ ಭವತಿ, ಸ ವಾಯು-ಪೂತೋ ಭವತಿ, ಸ ಆದಿತ್ಯಪೂತೋ ಭವತಿ, ಸ ಸೋಮಪೂತೋ ಭವತಿ, ಸ ಸತ್ಯ-ಪೂತೋ ಭವತಿ, ಸ ಸರ್ವಪೂತೋ ಭವತಿ, ಸ ಸರ್ವೇಷುತೀರ್ಥೇಷು ಸ್ನಾತೋ ಭವತಿ, ಸ ಸರ್ವೇಷು ವೇದೇಷ್ವಧೀತೋ ಭವತಿ, ಸ ಸರ್ವವೇದಚರ್ಯಾನು ಚರಿತೋ ಭವತಿ, ಸರ್ವೈ-ರೇವೈಃಜ್ಞಾತೋ ಭವತಿ, ಸ ಸರ್ವಯಜ್ಞ ಕ್ರತುಭಿರಿಷ್ಟವಾನ್ಭವತಿ, ತೇ ನೇತಿಹಾಸಪುರಾಣಾನಾಂ ರುದ್ರಾಣಾಂ ಶತಸಹಸ್ರಾಣಿ ಜಪ್ತಾನಿ ಭವಂತಿ, ಗಾಯತ್ರ್ಯಾಶ್ಶತಸಹಸ್ರಂ ಜಪ್ತಂ ಭವತಿ, ಪ್ರಣವಾನಾಮಯುತಂ ಜಪ್ತಂ ಭವತಿ, ರೂಪೇ ರೂಪೇ ದಶಪೂರ್ವಾನ್ಪುನಾತಿ, ದಶೋತ್ತರಾ ನಾಚಕ್ಷುಷಃ ಪಂಕ್ತಿಂ ಪುನಾತಿ, ಇತ್ಯಾಹ ಭಗವಾನಥರ್ವಶಿರೋಽಥರ್ವಶಿರಃ (23)

ತಾ : ಯಾವ ಬ್ರಾಹ್ಮಣನು ಅಥರ್ವಶಿರೋಪನಿಷತ್ತನ್ನು ಅಧ್ಯಯನ ಮಾಡುವನೋ ಆ ಬ್ರಾಹ್ಮಣನು ಅಗ್ನಿಯಂತೆ ಪವಿತ್ರನಾಗುತ್ತಾನೆ. ಆತನು ವಾಯುವಿನಂತೆಯೂ, ಸೂರ್ಯನಂತೆಯೂ, ಚಂದ್ರನಂತೆಯೂ ಪವಿತ್ರನಾಗುತ್ತಾನೆ. ಆತನು ನಿತ್ಯಪೂತನು ಸರ್ವಪೂತನು ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದವನಾಗುತ್ತಾನೆ. ಸಕಲ ವೇದವ್ರತ ನಿಯಮಾಚರಣೆಗಳನ್ನು ಆಚರಿಸಿದವನಾಗುತ್ತಾನೆ. ಆತನು ಸರ್ವ ದೇವತೆಗಳಿಂದಲೂ ತಿಳಿಯಲ್ಪಟ್ಟವನಾಗುತ್ತಾನೆ. ಸಮಸ್ತ ಯಜ್ಞಕ್ರತುಗಳನ್ನು ಮಾಡಿ-ದವನಾಗುತ್ತಾನೆ. ಇತಿಹಾಸ, ಪುರಾಣಗಳನ್ನು ಪಠಿಸಿದವನಾಗುತ್ತಾನೆ. ಶತ ಸಹಸ್ರ ರುದ್ರಮಂತ್ರಗಳನ್ನು ಜಪಿಸಿದವನಾಗುತ್ತಾನೆ. ಶತಸಹಸ್ರ ಗಾಯತ್ರೀ ಮಂತ್ರಗಳನ್ನು ಜಪಿಸಿದಂತಹವನಾಗುತ್ತಾನೆ. ಹತ್ತು ಸಾವಿರ ಪ್ರಣವಮಂತ್ರಗಳನ್ನು ಜಪಿಸಿದವನಾಗುತ್ತಾನೆ. ಒಂದೊಂದು ಸಲ ಪಠಿಸಿದಾಗಲೂ ತನಗಿಂತ ಪೂರ್ವಿಕರಾದ 10 ತಲೆಮಾರಿನವರನ್ನೂ ತನ್ನ ನಂತರದ ಹತ್ತು ಪೀಳಿಗೆಯುವರನ್ನೂ ಪವಿತ್ರಗೊಳಿಸುತ್ತಿದ್ದಾನೆ. ಈ ರೀತಿಯಾಗಿ ಭಗವಂತನಾದ ಅಥರ್ವವೇದ ಪುರುಷನು ನುಡಿದನು.

ಮಂ.ಶ್ಲೋ॥ ಸಕೃಜ್ಜಪ್ತ್ವಾ ಶುಚಿಃ ಪೂತಃ ಕರ್ಮಣ್ಯೋ ಭವತಿ, ದ್ವಿತೀಯಂ ಜಪ್ತ್ವಾ ಗಾಣಾಪತ್ಯ-ಮವಾಪ್ನೋತಿ, ತೃತೀಯಂ ಜಪ್ತ್ವಾ ದೇವಮೇವಾನುಪ್ರವಿಶತೀತ್ಯೋಗ್ಂ ಸತ್ಯಮ್ (24) ಯೋ ರುದ್ರೋ ಅಗ್ನೌ ಯೋ ಅಪ್ಸ್ವಂತರ್ಯ ಓಷಧೀರ್ವೀರುಧ ಆವಿವೇಶ, ಯ ಇಮಾ ವಿಶ್ವಾ ಭುವನಾನಿ ಚಾಕ್ಲಪೇ ತಸ್ಮೈ ರುದ್ರಾಯ ನಮೋ ಅಸ್ತು (25)

ತಾ : ಈ ಅಥರ್ವ ಶಿರೋಪನಿಷತ್ತನ್ನು ಒಂದು ಪರ್ಯಾಯ ಜಪಿಸಿದವನು ಶುಚಿಯಾಗಿ, ಪವಿತ್ರನಾಗಿ, ಕರ್ಮಣ್ಯನಾಗುತ್ತಾನೆ. ಎರಡನೆಯ ಪರ್ಯಾಯದಲ್ಲಿ ಜಪಿಸಿ ಗಾಣಾಪತ್ಯವನ್ನು ಹೊಂದುವನು. ಮೂರನೆಯ ಪರ್ಯಾಯದಲ್ಲಿ ಜಪಿಸಿ ದೇವರಲ್ಲಿ ಆನಂದ ಸ್ವರೂಪವಾಗಿಯೇ ಪ್ರವೇಶಿಸುವನು. ಈ ಮಾತು ಸತ್ಯ. ಯಾವ ರುದ್ರನು ಅಗ್ನಿಯಲ್ಲಿ ಅಭಿಮಾನಿಯಾಗಿರುವನೋ, ಜಲಗಳಲ್ಲಿರುವನೋ, ಮಧ್ಯಭಾಗದಲ್ಲಿರುವನೋ, ಓಷಧಗಳನ್ನು, ಲತೆಗಳನ್ನು ವ್ಯಾಪಿಸಿರುವನೋ ಈ ಸಮಸ್ತ ಭುವನಗಳನ್ನು ನಿರ್ಮಿಸಿರುವನೋ ಅಂತಹ ಮಹಾರುದ್ರನಿಗೆ ನಮಸ್ಕರಿಸುತ್ತಿದ್ದೇನೆ.

ಮಂ.ಶ್ಲೋ॥ ಅದ್ಯ ಮೂರ್ಧಾನಮಸ್ಯ ಸಗ್ಂಶಿರ್ಯೋಽಥರ್ವಾ ಹೃದಯಂ ಚ ಮಸ್ತಿಷ್ಕಾದೂರ್ಧ್ವಂ ಪ್ರೇರಯನ್ಪವಮಾನೋಽಥರ್ವಶಿರ್ಷಸ್ತದ್ವಾಥರ್ವಶಿರೋ ದೇವಕೋಶಸ್ಸಮುಜ್ಝಿತಸ್ತತ್ಪ್ರಾಣೋಽ-

**ಭಿರಕ್ಷತು, ಶ್ರಿಯಮನ್ನಮಥೋ ಮನಃ ಶ್ರಿಯಮನ್ನಮಥೋ ಮನಃ, ವಿದ್ಯಾಮನ್ನಮಥೋ ಮನೋ ವಿದ್ಯಾಮನ್ನಮಥೋ ಮನಃ, ಮೋಕ್ಷಮನ್ನಮಥೋ ಮನೋ ಮೋಕ್ಷಮನ್ನ -ಮಥೋ ಮನ ಇತ್ಯೋಗ್ಂ ಸತ್ಯಮಿತ್ಯುಪನಿಷತ್ (26)**

**(ಅಥರ್ವಶಿರೋಪನಿಷತ್ಸಮಾಪ್ತಾ)**

ತಾ : (ಈಗ "ಅಥರ್ವಶಿರಃ" ಎನ್ನುವ ಹೆಸರು ಬರಲು ಕಾರಣವನ್ನು ಒಂದು ಆಖ್ಯಾಯಿಕವಾಗಿ ಹೇಳುತ್ತಿದ್ದಾರೆ) ಪೂರ್ವದಲ್ಲಿ, ಒಮ್ಮೆ ಒಬ್ಬ ಋಷಿಯು ಅಥರ್ವ ಮುನಿಗೆ ಶಾಪವನ್ನು ಕೊಟ್ಟ. ಆ ಶಾಪವೇನೆಂದರೆ: "ಈ ಕ್ಷಣದಲ್ಲೇ ನನ್ನ ವಿರೋಧಿಯಾದ ಅಥರ್ವನ ಶಿರಸ್ಸು ಕೆಳಕ್ಕೆ ಬಿದ್ದು ಹೋಗಲಿ ಮತ್ತು ಆತನ ಹೃದಯವು ಕೂಡಾ ಕೆಳಕ್ಕೆ ಬೀಳುವಂತಾಗಲಿ" ಎಂದು. ಅಥರ್ವಮುನಿ ಈ ಶಾಪ ಸಮಯವನ್ನು ತಿಳಿದುಕೊಂಡು ಯೋಗ ಮಹಿಮೆಯಿಂದ ದೇಹದಿಂದ ಮೊದಲು ಹೊರಕ್ಕೆ ಬಂದ. ಅಥರ್ವಮುನಿಯ ಶಿರಸ್ಸು ಕೆಳಕ್ಕೆ ಬಿತ್ತು. ಕೆಳಗೆ ಬಿದ್ದಿರುವ ತನ್ನ ಶಿರಸ್ಸನ್ನು, ಕೆಳಗೆ ಬಿದ್ದಿರುವ ಹೃದಯದೊಂದಿಗೆ ಸಂಧಾನ ಮಾಡಿ ಸೂಕ್ಷ್ಮ ಶರೀರದೊಂದಿಗೆ ಅದರೊಳಗೆ ಪ್ರವೇಶಿಸಿ ಶರೀರವನ್ನು ಮೊದಲ ಸ್ಥಿತಿಗೆ ಬದಲಾಯಿಸಿದ. ಈ ಅಥರ್ವನೇ ಪವಮಾನನೆಂದು ಕರೆಯುತ್ತಾರೆ. ಈತ ಪ್ರಾಣೋಪಾಸನೆ ಮಾಡಿದುದರಿಂದ ಪವಮಾನನೆಂಬ ಹೆಸರು ಬಂದಿದೆ. ಪ್ರಾಣೋಪಾಸನಾ ಬಲದಿಂದಲೇ ಬಹಿರ್ಗತವಾಗಿ ಬಿದ್ದಿದ್ದ ಶಿರಸ್ಸನ್ನು, ಹೃದಯವನ್ನು ಮತ್ತೆ ಶರೀರದೊಳಕ್ಕೆ ಸೇರಿಸಿದನು. ಆದ್ದರಿಂದಲೇ ಆತನಿಗೆ "ಅಥರ್ವಶಿರ" ಎಂದು ಹೆಸರು ಬಂದಿತು. ಅಂತಹ ಮಹರ್ಷಿಯಿಂದ ದೃಷ್ಟವಾದ ಮಂತ್ರರಾಶಿ "ಅಥರ್ವಶಿರ"ವೆಂದು ಹೇಳಲಾಯಿತು. ಪ್ರಾಣಪ್ರದನಾದ ಆ ಅಥರ್ವನು ಎಲ್ಲವಿಧಗಳಲ್ಲೂ ನನ್ನನ್ನು ಸಂರಕ್ಷಿಸುವಂತಾಗಲಿ! (ಬ್ರಹ್ಮವಿದ್ಯೆಯನ್ನು, ಅನ್ನವನ್ನು, ಮೋಕ್ಷವನ್ನು ಪ್ರಸಾದಿಸಿ ನನ್ನನ್ನು ಸಂರಕ್ಷಿಸುವಂತಾಗಲೀ! (ಅಥರ್ವಶಿರೋಪನಿಷತ್ ಸಮಾಪ್ತಿ)

**ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ**





# ಅಥರ್ವ ಶಿಖೋಪನಿಷತ್ತು - 23

(ಅಥರ್ವ ವೇದಾಂತರ್ಗತ)

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಸ್ಥಿರೈರಂಗೈಸ್ತುಷ್ಟುವಾಗ್‌ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ

ಮಂ.ಶ್ಲೋ॥ ಓಂಕಾರಾರ್ಥತಯಾ ಭಾತಂ ತುರ್ಯೋಂಕಾರಾಗ್ರಭಾಸುರಮ್ ।
ತುರ್ಯತುರ್ಯ ತ್ರಿಪಾದ್ರಾಮಂ ಸ್ವಮಾತ್ರಂ ಕಲಯೇಽಸ್ವಹಮ್ ॥

ಮಂ.ಶ್ಲೋ॥ ಓಂ ಅಥ ಹೈನಂ ಪೈಪ್ಪಲಾದೋಽಂಗಿರಾಃ ಸನತ್ಕುಮಾರಶ್ಚಾಥರ್ವಣಮುವಾಚ (1) ಭಗವನ್ಕಿಮಾದೌ ಪ್ರಯುಕ್ತಂ ಧ್ಯಾನಂ ಧ್ಯಾಯಿತವ್ಯಂ ಕಿಂ ತತ್ ಧ್ಯಾನಂ ಕೋ ವಾ ಧ್ಯಾತಾ ಕಶ್ಚ ಧ್ಯೇಯಃ (2) ಸ ಏಭ್ಯೋಽಥರ್ವಾ ಪ್ರತ್ಯುವಾಚ, ಓಮಿತ್ಯೇತದಕ್ಷರಮಾದೌ ಪ್ರಯುಕ್ತಂ ಧ್ಯಾನಂ ಧ್ಯಾಯಿತವ್ಯಮಿತಿ (3)

ತಾ : ಅನಂತರ ಪೈಪ್ಪಲಾದನು, ಅಂಗೀರಸನು, ಸನತ್ಕುಮಾರನು ಅಥರ್ವಮುನಿಯನ್ನು ಸಮೀಪಿಸಿ ಹೀಗೆ ಪ್ರಶ್ನಿಸಿದರು: "ಓ ಭಗವಂತಾ! ಸೃಷ್ಟಿಸಮಯದಲ್ಲಿ ಬ್ರಹ್ಮಾದಿ ದೇವತೆಗಳು ಏನನ್ನು ಉಪಯೋಗಿಸಿದರು? ಧ್ಯಾನವೆಂದರೆ ಏನು? ಧ್ಯಾನಿಸತಕ್ಕದ್ದು ಯಾವುದು? ಧ್ಯಾನಕ್ಕೆ ಸಾಧನವೇನು? ಶ್ರೇಷ್ಠವಾದ ಧ್ಯಾತ ಯಾವುದು? ಧ್ಯೇಯವು ಏನು? (ಯಾವುದು) ಆ ಪೈಪ್ಪಲಾದಿಗಳಿಗೆ ಅಥರ್ವ ಮಹರ್ಷಿಯು ಈ ರೀತಿಯಾಗಿ ಬೋಧಿಸಿದ ಪ್ರಣವಾಕ್ಷರವೇ ಆದಿಯಲ್ಲಿ ಉಪದೇಶಿಸಲ್ಪಟ್ಟದ್ದು. ಅದೇ ಧ್ಯಾನ. ಅಂತಹ ಪ್ರಣವ ಧ್ಯಾನವನ್ನೇ ಧ್ಯಾನಿಸಬೇಕು.

ಮಂ.ಶ್ಲೋ॥ ಏತದಕ್ಷರಂ ಪರಂಬ್ರಹ್ಮಾಸ್ಯ ಪಾದಾಶ್ಚತ್ವಾರೋ ವೇದಾಶ್ಚತುಷ್ಪಾದಿದಮಕ್ಷರಂ ಪರಂಬ್ರಹ್ಮ (4) ಪೂರ್ವಾಸ್ಯಮಾತ್ರಾ ಪೃಥಿವ್ಯಕಾರಸ್ಸ ಋಗ್ಭಿರ್ಋಗ್ವೇದೋ ಬ್ರಹ್ಮಾ, ವಸವೋ ಗಾಯತ್ರೀ, ಗಾರ್ಹಪತ್ಯಃ (5) ದ್ವಿತೀಯಾಂತರಿಕ್ಷಗ್‌ಂ ಸ ಉಕಾರಸ್ಸ ಯಜುರ್ಭಿರ್ಯಜುರ್ವೇದೋ ವಿಷ್ಣು ರುದ್ರಾಸ್ತ್ರಿಷ್ಟುಬ್ದಕ್ಷಿಣಾಗ್ನಿ (6) ತೃತೀಯಾದ್ಯೌಸ್ಸ ಮಕಾರಸ್ಸಸಾಮಭಿಸ್ಸಾಮವೇದೋ ರುದ್ರಾ ಆದಿತ್ಯಾ ಜಗತ್ಯಾಹವನೀಯಃ (7)

ತಾ : ಈ ಪ್ರಣವಾಕ್ಷರವು ಪರಬ್ರಹ್ಮ ಸ್ವರೂಪ. ಪ್ರಣವದ ನಾಲ್ಕು ಪಾದಗಳು ನಾಲ್ಕು ವೇದಗಳು. ನಾಲ್ಕು ಪಾದಗಳೊಂದಿಗೆ ಕೂಡಿದ ಈ ಓಂಕಾರವು ಪರಮಾತ್ಮ ಸ್ವರೂಪ. ಪ್ರಣವದ ಮೊದಲ ಮಾತ್ರೆ ಅಕಾರ. ಇದಕ್ಕೆ ಭೂತವು ಪೃಥಿವಿ. ಇದು ಋತುಗಳೊಂದಿಗೆ ಕೂಡಿದೆ. ಇದಕ್ಕೆ ಅಧಿದೇವತೆ

ಬ್ರಹ್ಮ. ಪಿತೃದೇವತೆಗಳು ಅಷ್ಟವಸುಗಳು; ಗಾಯತ್ರೀ ಛಂದಸ್ಸು; ಗಾರ್ಹಪತ್ಯಾಗ್ನಿ ಪ್ರಣವದ ಎರಡನೆಯ ಮಾತ್ರೆ ಉಕಾರ. ಇದಕ್ಕೆ ಭೂತ ಆಕಾಶ: ಯಜುಸ್ಸಿನೊಂದಿಗೆ ಕೂಡಿದೆ. ಯಜುರ್ವೇದಕ್ಕೆ ವಿಷ್ಣುವು ಅಧಿದೇವತೆ: ಏಕಾದಶ ರುದ್ರರು ಪಿತೃದೇವತೆಗಳು: ತ್ರಿಷ್ಟುಪ್ ಛಂದಸ್ಸು: ದಕ್ಷಿಣಾಗ್ನಿ ಪ್ರಣವದ ಮೂರನೆಯ ಮಾತ್ರೆ ಮಕಾರ. ಇದಕ್ಕೆ ಲೋಕವು ಸ್ವರ್ಗ: ಸಾಮಗಾನದೊಂದಿಗೆ ಕೂಡಿದೆ. ರುದ್ರನು ಅಧಿದೇವತೆ ದ್ವಾದಶಾದಿತ್ಯರು ಪಿತೃದೇವತೆಗಳು. ಜಗತೀಛಂದಸ್ಸು ಆಹವನೀಯಾಗ್ನಿ

**ಮಂ.ಶ್ಲೋ॥ ಯಾಽವಸಾನೇಽಸ್ಯ ಚತುರ್ಥ್ಯರ್ಧಮಾತ್ರಾ ಸ ಸೋಮಲೋಕ ಓಂಕಾರಸ್ಸಾಥರ್ವಣ ಮಂತ್ರೈ-ರಥರ್ವವೇದಸ್ಸಂವರ್ತಕೋಽಗ್ನಿರ್ಮರುತೋ ವಿರಾಡೇಕರ್ಷಿರ್ಭಾಸ್ವತೀಃ ಸ್ಮೃತಾಃ (8) ಪ್ರಥಮಾ ರಕ್ತಪೀತಾ ಮಹದ್ಬ್ರಹ್ಮಾ ದೈವತ್ಯಾ, ದ್ವಿತೀಯಾ ವಿದ್ಯುಮತೀ ಕೃಷ್ಣಾ ವಿಷ್ಣುದೈವತ್ಯಾ, ತೃತೀಯಾ ಶುಭಾಶುಭಾ ಶುಕ್ಲಾ ರುದ್ರ ದೈವತ್ಯಾ, ಯಾವಸಾನೇಽಸ್ಯ ಚತುರ್ಥ್ಯರ್ಧಮಾತ್ರಾ ಸಾ ವಿದ್ಯುಮತೀ ಸರ್ವವರ್ಣಾ ಪುರುಷ ದೈವತ್ಯಾ (9) ಸ ಏಷ ಹ್ಯೋಂಕಾರಃ ಚತುರಕ್ಷರ-ಶ್ಚತುಷ್ಪಾದಶ್ಚತುಶ್ಶಿರಶ್ಚತುರರ್ಧಮಾತ್ರ ಸ್ಥೂಲಮೇತದ್ರಸ್ವದೀರ್ಘಪ್ಲುತ ಇತಿ, ಓಂ 1 ಓಂ 2 ಓಂ3 ಇತಿ (10).**

ತಾ : ಪ್ರಣವದ ಕೊನೆಯದೂ ನಾಲ್ಕನೆಯದು ಅರ್ಧ ಮಾತ್ರೆ ಸೋಮಲೋಕ, ಓಂಕಾರವಾದ ಅಥರ್ವ ಮಂತ್ರಗಳೊಂದಿಗೆ ಕೂಡಿದ ಅಥರ್ವಣವೇದ. ಸಂವರ್ತಕಾಗ್ನಿ, ಮಹತ್ತಗಳು ವಿರಾಟ್. ಏಕಋಷಿ ಭಾಸ್ವತಿ ಎಂಬುವವನು ಅಕಾರ, ಉಕಾರ, ಮಕಾರಗಳಿಗೆ ಕೊನೆಯದ್ದು ಅತಿಸೂಕ್ಷ್ಮವಾಗಿದ್ದು ಅರ್ಧಮಾತ್ರವೇ ನಾದ ಸ್ವರೂಪ. ಅದರ ಸ್ವರೂಪ ಪ್ರಥಮ ಮಾತ್ರೆ ಕೆಂಪು ಬಣ್ಣದಲ್ಲಿದೆ. ಅದರ ಶಕ್ತಿ ಸ್ವರ್ಣಕಾಂತಿಯನ್ನುಳ್ಳದ್ದು ಇದಕ್ಕೆ ಅಧಿದೇವತೆ ಮಹಾತ್ಮನಾದ ಬ್ರಹ್ಮ. ಎರಡನೆಯ ಮಾತ್ರೆ ಕಪ್ಪಗಿರುವುದು ಅದರ ಶಕ್ತಿ ವಿದ್ಯುತ್ ಕಾಂತಿಯನ್ನುಳ್ಳದ್ದು; ಅಧಿದೇವತೆ ವಿಷ್ಣು ಮೂರ್ತಿ. ಮೂರನೆಯ ಮಾತ್ರೆ ಬೆಳ್ಳಗಿರುವುದು. ಅದರ ಶಕ್ತಿ ಶುಕ್ಲವರ್ಣ. ಇದರ ಅಧಿದೇವತೆ ರುದ್ರಮೂರ್ತಿ ನಾಲ್ಕನೆಯ (ಅರ್ಧ) ಮಾತ್ರೆ ಲಕ್ಷ್ಮೀ ದೇವಿಯಂತಹ ಬಣ್ಣವುಳ್ಳದ್ದು ಅದರ ಶಕ್ತಿಯು ಸಮಸ್ತವರ್ಣಗಳಲ್ಲಿಯೂ ಇರುವುದು. ಇದಕ್ಕೆ ಅಧಿದೇವತೆ, ಪರಮಾತ್ಮ ಇದೀಗ ಇದೇ ಓಂಕಾರ. ಇದು 4 ಅಕ್ಷರಗಳನ್ನು ಹೊಂದಿರುವುದು, ನಾಲ್ಕು ಪಾದಗಳ್ಳದ್ದು ನಾಲ್ಕು ಶಿರಗಳನ್ನು ಹೊಂದಿದೆ. ನಾಲ್ಕನೆಯದು ಅರ್ಧಮಾತ್ರೆಯುಳ್ಳುದ್ದು. ಇದು ಸ್ಥೂಲವಾದಾಗ ಹ್ರಸ್ವವು, ದೀರ್ಘವು, ಪ್ಲುತವೆಂದು ಹೇಳಲಾಗುತ್ತದೆ. ಪ್ಲುತವೆಂದು ಹೇಳಲಾಗುತ್ತದೆ.

**ಮಂ.ಶ್ಲೋ॥ ತ್ರಿರುಕ್ತ್ವಾ ಚತುರ್ಥಶ್ಶಾಂತ ಆತ್ಮಾ ಪ್ಲುತ ಪ್ರಣವ ಪ್ರಯೋಗೇನ ಸಮಸ್ತಮೋಮಿತಿ ಪ್ರಯುಕ್ತ ಆತ್ಮಜ್ಯೋತಿಸ್ಸಕೃದಾವರ್ತತೇ (11) ಸಕೃದುಚ್ಚಾರಿತಮಾತ್ರ ಸ ಏಷ ಊರ್ಧ್ವಮುನ್ನಾಮಯ -ತೀತ್ಯೋಂಕಾರಃ (12) ಪ್ರಾಣಾಂತ್ಸರ್ವಾನ್ ಪ್ರಲೀಯತ ಇತಿ ಪ್ರಳಯಃ ಪ್ರಾಣಾಂತ್ಸರ್ವಾನ್ಪ-ರಮಾತ್ಮನಿ ಪ್ರಣಾಮಯತೀತ್ಯೇತಸ್ಮಾತ್ ಪ್ರಣವಃ ಚತುರ್ಧಾವಸ್ಥಿತ ಇತಿ ಸರ್ವದೇವ ವೇದ ಯೋನಿಸ್ಸರ್ವವಾಚ್ಯ ವಸ್ತು ಪ್ರಣವಾತ್ಮಕಮ್ (13)**

ತಾ : 3,4 (ಮೂರು ನಾಲ್ಕು) ಮಾತ್ರೆಗಳುಳ್ಳ ಪ್ರಣವವನ್ನು ಕ್ರಮವಾಗಿ ಮೂರು ಸಲ

ಉಚ್ಚರಿಸಿ, ನಾಲ್ಕನೆಯ ಬಾರಿ ಐದು ಮಾತ್ರೆಗಳುಳ್ಳ ಪ್ರಣವವನ್ನು ಪ್ಲುತವಾಗಿ ಉಚ್ಚರಿಸಬೇಕು. ಈ ರೀತಿಯಾಗಿ ಉಪಾಸಿಸಿದಾಗ ಶಾಂತವಾದುದು, ಆತ್ಮವಾಗಿರುವುದು, ಸಮಸ್ತವು ಪ್ರಣವವಾಗಿ ಉಪಾಸಿಸಿದ ಆತ್ಮಜ್ಯೋತಿ ಒಂದೇ ಸಲಕ್ಕೆ ಪ್ರಕಾಶಿಸುವುದು. ಒಂದು ಸಾರಿ ಪ್ರಣವವನ್ನು ಉಚ್ಛರಿಸಿದರು ಪರಮ ಪದವನು ಉತ್ತಮ ಸ್ಥಾನವನ್ನು ಪಡೆಯುವುದಕ್ಕಾಗಿರುವುದರಿಂದ ಓಂಕಾರವೆನ್ನುವುದು ಪ್ರಾಣಗಳೆಲ್ಲವು ಲಯವಾಗುವ ಸ್ಥಾನಗಳಾದುದರಿಂದ ಪ್ರಳಯವೆನ್ನುವುದು ಸಕಲ ಪ್ರಾಣಗಳನ್ನು ಪರಮಾತ್ಮನಲ್ಲಿ ಸೇರಿಸುವುದರಿಂದಲೇ ಪ್ರಣವವೆನಿಸುವುದು. ನಾಲ್ಕು ಪಾದಗಳೊಂದಿಗೆ ಕೂಡಿರವುದರಿಂದಲೇ ಸಕಲ ದೇವತೆಗಳಿಗೆ ಸಮಸ್ತವೇದಗಳಿಗೆ ಯೋನಿ ಸ್ಥಾನವಾಗಿದೆ. ಸಕಲ ವಾಚ್ಯ ವಸ್ತುಗಳೂ ಪ್ರಣವಾತ್ಮಕವಾಗುವುದು.

**ಮಂ.ಶ್ಲೋ॥ ದೇವಾಶ್ಚೇತಿ ಸಂಧತ್ತಾಂ ಸರ್ವೇಭ್ಯೋ ದುಃಖಭಯೇಭ್ಯಸ್ಸಂತಾರಯತೀತಿ ತಾರಣಾತ್ತಾರಃ (14) ಸರ್ವೇದೇವಾಃ ಸಂವಿಶಂತೀತಿ ವಿಷ್ಣುಃ, ಸರ್ವಾಣಿ ಬೃಂಹಯತೀತಿ ಬ್ರಹ್ಮ, ಸರ್ವಸ್ಯಾಂತಃ ಸ್ಥಾನೇಭ್ಯೋ ಧ್ಯೇಯೇಭ್ಯೋ ಪ್ರದೀಪವತ್ಪ್ರಕಾಶಯತೀತಿ ಪ್ರಕಾಶಃ (15) ಪ್ರಕಾಶೇಭ್ಯ-ಸ್ಸದೋಮಿತ್ಯಂತಃಶರೀರೇ ವಿದ್ಯುದ್ವದ್ದ್ಯೋತಯತಿ ಮುಹುರ್ಮುಹುರಿತಿ ವಿದ್ಯುದ್ವತ್ ಪ್ರತೀಯಾದ್ದಿಶಂ ದಿಶಂ ಭಿತ್ವಾ ಸರ್ವಾನ್ಲೋಕಾನ್ ವ್ಯಾಪ್ನೋತಿ ವ್ಯಾಪಯತೀತಿ ವ್ಯಾಪನಾ -ದ್ವ್ಯಾಪೀ ಮಹಾದೇವಃ (16)**

ತಾ : ಸಮಸ್ತ ದೇವತೆಗಳು ಪ್ರಣವ ಸ್ವರೂಪವೇ. ಸಕಲ ದುಃಖಗಳಿಂದಲೂ, ಭಯಗಳಿಂದಲೂ, ದೂರ ಮಾಡಿ ಧನ್ಯನಾಗಿ ಮಾಡುತ್ತದೆ. ಆದ್ದರಿಂದ ತಾರಣವೆಂದು ಹೇಳಲಾಗುತ್ತದೆ. ತಾರಣವನ್ನು ಮಾಡುತ್ತಿರುವುದರಿಂದ ತಾರಕವೆಂದು ಹೇಳಲಾಗುತ್ತದೆ. ಸಮಸ್ತ ದೇವತೆಗಳು ಎಲ್ಲಿ ವಿಶ್ರಮಿಸಿಸುತ್ತಿರುತ್ತಾರೋ ಆ ಸ್ಥಳವನ್ನು ವಿಷ್ಣುವೆನ್ನುತ್ತಾರೆ. ಸಕಲ ಪ್ರಾಣಗಳನ್ನು ಮತ್ತೆ ಸೃಷ್ಟಿಸುವುದರಿಂದ ಬ್ರಹ್ಮವೆನ್ನುತ್ತಾರೆ. ಸಕಲ ಪ್ರಾಣಗಳ ಹೃದಯ ಸ್ಥಾನದಲ್ಲಿ ಧ್ಯಾನ ಯೋಗ್ಯವಾದ ಪರಮಾತ್ಮನನ್ನು ದೀಪದಂತೆಯೇ ಪ್ರಕಾಶಿಸುವಂತೆ ಮಾಡುತ್ತದೆ, ಪ್ರಕಾಶವೆನ್ನುತ್ತಾರೆ. ಸಮಸ್ತ ಪ್ರಕಾಶಗಳಿಗೂ ಪರಮಪ್ರಕಾಶವಾಗಿ ಮಾತುಮಾತಿಗೂ ದೇಹದೊಳಗೆ ಓಂ ಎಂದು ಮಿಂಚಿನಂತೆ ಪ್ರಕಾಶಿಸುವುದರಿಂದ ವಿದ್ಯುತ್ ಎಂದು ಹೇಳಲಾಗುವುದು. ಸಮಸ್ತ ದಿಕ್ಕುಗಳಲ್ಲಿಯೂ ಅಂತರ್ಯಾಮಿಯಾಗಿ ಪ್ರವೇಶಿಸಿ ಸಮಸ್ತ ಲೋಕಗಳನ್ನು ವ್ಯಾಪಿಸಿರುವುದರಿಂದಲೂ ವ್ಯಾಪಿಸಿಸುವಂತೆ ಮಾಡುವುದರಿಂದಲೂ, ವ್ಯಾಪಿಯೆಂದು, ಮಹಾದೇವನೆಂದು ಕರೆಯುತ್ತಾರೆ.

**ಮಂ.ಶ್ಲೋ॥ ಪೂರ್ವಾಸ್ಯಮಾತ್ರಾ ಜಾಗರ್ತಿ ಜಾಗರಿತಂ ದ್ವಿತೀಯಾ ಸ್ವಪ್ನಂ ತೃತೀಯಾ ಸುಷುಪ್ತಿಶ್ಚತುರ್ಥೀ ತುರೀಯಂ ಮಾತ್ರಾ ಮಾತ್ರಾಃ ಪ್ರತಿಮಾತ್ರಾ ಗತಾಸ್ಸಮ್ಯಕ್ಸಮಸ್ತಾನಪಿ ಪಾದಾಞ್ಜಯತೀತಿ ಸ್ವಯಂ ಪ್ರಕಾಶಃ ಸ್ವಯಂ ಬ್ರಹ್ಮಾ ಭವತೀತ್ಯೇಷ ಸಿದ್ಧಿಕರ ಏತಸ್ಮಾದ್ಧ್ಯಾನಾದೌ ಪ್ರಯುಜ್ಯತೇ (17) ಸರ್ವಕರಣೋಪಸಂಹಾರತ್ವಾದ್ಧಾರ್ಯ ಧಾರಣಾದ್ಬ್ರಹ್ಮ ತುರೀಯಮ್, ಸರ್ವಕರಣಾನಿ ಮನಸಿ ಸಂಪ್ರತಿಷ್ಠಾಪ್ಯ ಧ್ಯಾನಂ ವಿಷ್ಣುಃ (18)**

ತಾ : ಪ್ರಣವದ ಮೊದಲ ಮಾತ್ರೆ ಜಾಗ್ರತ್. ಎರಡನೆಯ ಮಾತ್ರೆ ಸ್ವಪ್ನ. ಮೂರನೆಯ ಮಾತ್ರೆ

ಸುಷುಪ್ತಿ. ನಾಲ್ಕನೆಯ ಮಾತ್ರೆ ತುರೀಯ. ಒಂದೊಂದು ಮಾತ್ರ ಭಿನ್ನ ಭಿನ್ನ ಮಾತ್ರೆಗಳಲ್ಲಿ ಲಯವಾಗುತ್ತದೆ. ಇದು ಸ್ವಯಂ ಪ್ರಕಾಶವಾದುದು. ಇದನ್ನು ಪ್ರಕಾಶಿಸುವಂತೆ ಮಾಡುವುದು ಬೇರೊಂದಿಲ್ಲ. ಇದನ್ನು ಶ್ರದ್ಧೆಯಿಂದ ಧ್ಯಾನ ಮಾಡಿದಲ್ಲಿ ಪೂರ್ವಪದಗಳನ್ನು ಉಂಟುಮಾಡುತ್ತದೆ. ಇದೀಗ ಸ್ವಯಂ ಬ್ರಹ್ಮವಾಗಿರುವುದರಿಂದ ಮೋಕ್ಷಸಿದ್ಧಿಯನ್ನು ಉಂಟುಮಾಡುತ್ತದೆ. ಆದ್ದರಿಂದ ಈ ಓಂಕಾರವನ್ನು ಧ್ಯಾನ, ಧಾರಣ, ಸಮಾಧಿಗಳಲ್ಲಿ ವಿನಿಯೋಗಿಸಲಾಗುತ್ತದೆ. ಸಕಲ ಕರಣಗಳನ್ನು ಉಪಸಂಹರಿಸುವುದರಿಂದ ಧರಿಸತಕ್ಕದ್ದನ್ನು ಧರಿಸುವಂತೆ ಮಾಡುವುದರಿಂದ, ಬ್ರಹ್ಮವನ್ನು ತುರೀಯವೆನ್ನುತ್ತಾರೆ. ಸ್ಥೂಲ ಶರೀರದಲ್ಲಿನ ದಶೇಂದ್ರಿಯಗಳನ್ನು ಮನಸ್ಸಿನಲ್ಲಿ ಚೆನ್ನಾಗಿ ಸ್ಥಾಪಿಸಿ ಧ್ಯಾನಿಸುವುದೇ ವಿಷ್ಣು.

**ಮಂ.ಶ್ಲೋ॥ ಪ್ರಾಣಂ ಮನಸಿ ಸಹಕರಣೈಸ್ಸಂಪ್ರತಿಷ್ಠಾಪ್ಯ ಧ್ಯಾತಾ ರುದ್ರಃ, ಪ್ರಾಣಂ ಮನಸಿ ಸಹಕರಣೈ-ರ್ನಾದಾಂತೇ ಪರಮಾತ್ಮನಿ ಸಂಪ್ರತಿಷ್ಠಾಪ್ಯ ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಗ್ಂ (19) ಸರ್ವಮಿದಂ ಬ್ರಹ್ಮ ವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ ಸಹಭೂತೈರ್ನ ಕಾರಣಂ ಕಾರಣಾನಾಂ ಧಾತಾಧ್ಯಾತಾ ಕಾರಣಂ ತು ಧ್ಯೇಯಸ್ಸರ್ವೈಶ್ವರ್ಯ ಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ (20) ಧ್ರುವಂಸ್ತಬ್ಧ್ವಾಧಿಕಂ ಕ್ಷಣಮೇಕಂ ಕ್ರತು-ಶತಸ್ಯಾಪಿ ಚತುಸ್ಸಪ್ತತ್ಯಾ ಯತ್ಫಲಂ ತದವಾಪ್ನೋತಿ (21)**

ತಾ : ಸೂಕ್ಷ್ಮ ದೇಹದಲ್ಲಿನ ತತ್ತ್ವಗಳನ್ನು, ಇಂದ್ರಿಯಗಳನ್ನು, ಮನಸ್ಸಿನಲ್ಲಿ ಧೃಢವಾಗಿ ನಿಲ್ಲಿಸಿ ಧ್ಯಾನಿಸುವವನು ರುದ್ರನು. ಪ್ರಾಣವನ್ನು, ಇಂದ್ರಿಯಗಳನ್ನು ಮನಸ್ಸಿನಲ್ಲಿ ಸೇರಿಸಿ ನಾದಾಂತವಾದ ಪರಮಾತ್ಮನಲ್ಲಿ ದೃಢವಾಗಿ ನೆಲೆಗೊಳಿಸಿ, ಈಶಾನನನ್ನು ಧ್ಯಾನಿಸಬೇಕು. ವಿಶೇಷವಾಗಿ ಆ ಈಶಾನ ಪರಮಾತ್ಮನನ್ನು ಧ್ಯಾನ ಮಾಡಬೇಕು. ಸರ್ವವೂ ಬ್ರಹ್ಮ, ವಿಷ್ಣು, ರುದ್ರ, ಇಂದ್ರಾದಿಗಳು ಎಲ್ಲರೂ ಹುಟ್ಟಿದರು. ಇವೆಲ್ಲದಕ್ಕೂ ಕಾರಣವಾದ ವಸ್ತುವು ಮಾತ್ರ ಹುಟ್ಟುವುದಿಲ್ಲ, ಅದು ನಾಶ ರಹಿತವಾದುದು. ಈ ರೀತಿಯಾಗಿ ಸಮಸ್ತ ಕಾರಣಗಳಿಗೆ ಕಾರಣವಾದವನು, ಸಕಲ ಸಂಪತ್ತುಗಳನ್ನುಳ್ಳವನು, ಸರ್ವೇಶ್ವರನೂ ಶಂಭುವು, ಗಗನ ಮಧ್ಯಭಾಗದಲ್ಲಿ ನಿವಸಿಸುವವನು, ಆದಂತಹ ಪರಮಾತ್ಮನನ್ನು ಧ್ಯಾನಿಸಬೇಕು. ಆ ಪರಮಾತ್ಮನೇ ಧ್ಯಾನಿಸಲು ತಕ್ಕ ಧ್ಯೇಯವಸ್ತುವು. ಈ ರೀತಿಯಾಗಿ ಒಮ್ಮೆ ಧ್ಯಾನಮಾಡಿದವರು ಶತಾಧಿಕ ಯಜ್ಞಗಳನ್ನು (74 ಸಲ) ಪರ್ಯಾಯಗಳು ಮಾಡಿದವರಿಗೆ ಯಾವ ಫಲ ದೊರೆಯುವುದೋ ಅಂತಹ ಫಲವನ್ನು ಹೊಂದುತ್ತಿದ್ದಾನೆ.

**ಮಂ.ಶ್ಲೋ॥ ಕೃತ್ಸ್ನಮೋಂಕಾರಗತಿಂ ಚ ಸರ್ವಧ್ಯಾನಯೋಗಜ್ಞಾನಾನಾಂ ಯತ್ಫಲಮೋಂಕಾರೋ ವೇದ ಪರ ಈಶೋವಾ (22) ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ಸಮಸ್ತಾ -ಥರ್ವಶಿಖೈ ತಾಮಧೀತ್ಯ ದ್ವಿಜೋ ಗರ್ಭವಾಸಾದ್ವಿಮುಕ್ತೋ ವಿಮುಚ್ಯತ ಏತಾಮಧೀತ್ಯ ದ್ವಿಜೋ ಗರ್ಭವಾಸಾದ್ವಿಮುಕ್ತೋ ವಿಮುಚ್ಯತ ಇತ್ಯೋಗ್ಂ ಸತ್ಯಮಿತ್ಯುಪನಿಷತ್ (23)**

**(ಅಥರ್ವಶಿಖೋಪನಿಷತ್ಸಮಾಪ್ತಾ)**

ತಾ : ಸಮಸ್ತ ಪ್ರಣವ ಸ್ವರೂಪವು, ಸಕಲ ವಿಧಗಳಾದ ಧ್ಯಾನಗಳು, ಸಕಲ ಯೋಗಗಳು, ಸಕಲ ಜ್ಞಾನಿಗಳು, ಅದರ ಪ್ರಯೋಜನಗಳು, ಇದೆಲ್ಲವನ್ನು ಓಂಕಾರ ಧ್ಯಾನವನ್ನು ಮಾಡುವವನು ತಿಳದುಕೊಂಡಿರುವನು. ಅದನ್ನು ಪರಮೇಶ್ವರನೇ ತಿಳಿಸಿರುವನು. ಸರ್ವವನ್ನು ಪರಿತ್ಯಜಿಸಿ ಶಿವನನ್ನೇ ಧ್ಯೇಯವಾಗಿ ಭಾವಿಸಿ ಧ್ಯಾನಿಸಬೇಕು. ಹೀಗೆ ಅಥರ್ವಶಿಖೋಪನಿಷತ್ತು ಸಮಾಪ್ತಿಯಾಗಿದೆ. ಈ ಅಥರ್ವ ಶಿಖೋಪನಿಷತ್ತನ್ನು ಅಧ್ಯಯನ ಮಾಡುವಂತಹ ದ್ವಿಜನು ಜನನ ಮರಣ ದುಃಖಗಳಿಂದ ವಿಮುಕ್ತನಾಗುವನು ಈ ಉಪನಿಷತ್ತನ್ನು ಪಾರಾಯಣ ಮಾಡುವ ದ್ವಿಜನು ಜನನ ದುಃಖವನ್ನು ಹೊಂದದೆ ಕೈವಲ್ಯವನ್ನು ಸೇರುವನು ಓಂ ಸತ್ಯ ಎಂದ ಉಪನಿಷತ್ತು.

ಅಥರ್ವಶಿಖೋಪನಿಷತ್ತು ಸಮಾಪ್ತಿ

ಶಾಂತಿ ಮಂತ್ರ॥ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ. ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ.
ಸ್ಥಿರೈರಂಗೈಸ್ತುಷ್ಟುವಾಗ್ಂಸ ಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ॥ ಸ್ವಸ್ತಿನ
ಇಂದ್ರೋ ವೃದ್ಧಶ್ರವಾಃ । ಸ್ವಸ್ತಿನಃ ಪೂಷಾ ವಿಶ್ವವೇದಾಃ । ಸ್ವಸ್ತಿನ ಸ್ತಾರ್ಕ್ಷ್ಯೋ
ಅರಿಷ್ಟನೇಮಿಃ, ಸ್ವಸ್ತಿನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ



# ಮೈತ್ರಾಯಣ್ಯುಪನಿಷತ್ತು - 24

(ಸಾಮ ವೇದಾಂತರ್ಗತ)

ಶಾಂತಿ ಮಂತ್ರ॥ ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋ ಬಲ ಮಿಂದ್ರಿಯಾಣಿಚ
ಸರ್ವಾಣಿಃ: ಸರ್ವಂ ಬ್ರಹ್ಮೌಪನಿಷದಂ: ಮಾಹಂ ಬ್ರಹ್ಮ ನಿರಾಕುರ್ಯಾಂ: ಮಾಮಾ
ಬ್ರಹ್ಮಾ ನಿರಾಕರೋತ್: ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು; ತದಾತ್ಮನಿ:
ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು.
ಓಂ ಶಾಂತಿಃ ಶಾಂತಿಃ ಶಾಂತಿಃ

ಶ್ಲೋ॥ ವೈರಾಗ್ಯೋತ್ಥ ಭಕ್ತಿಯುಕ್ತ ಬ್ರಹ್ಮಮಾತ್ರ ಪ್ರಬೋಧತಃ ।
ಯತ್ಪದಂ ಮುನಯೋ ಯಾನ್ತಿ ತತ್ರೈಪದಮಹಂ ಮಹಃ ॥

ಶ್ಲೋ ॥ ಮೈತ್ರಾಯಣಿ ಕೌಷೀತಕೀ ಬೃಹಜ್ಜಾಬಾಲ ತಾಪನೀ ।
ಕಾಲಾಗ್ನಿರುದ್ರ ಮೈತ್ರೇಯೀ ಸುಬಾಲಕ್ಷುರಿಮನ್ತ್ರಿಕಾ ॥

## ಪ್ರಥಮ ಪ್ರಪಾಠಕ

ಮಂ.ಶ್ಲೋ॥ ಓಂ ಬೃಹದ್ರಥೋಹ ವೈ ನಾಮ ರಾಜಾ ರಾಜ್ಯೇ ಜ್ಯೇಷ್ಠಂ ಪುತ್ರಂ ನಿಧಾಪಯಿತ್ವೇದ-
ಮಶಾಶ್ವತಂ ಮನ್ಯಮಾನಶ್ಶರೀರಂ ವೈರಾಗ್ಯಮುಪೇತೋಽರಣ್ಯಂ ನಿರ್ಜಗಾಮ, ಸ ತತ್ರ

**ಪರಮಂ ತಪ ಆಸ್ಥಾಯಾದಿತ್ಯಮೀಕ್ಷಮಾಣ ಊರ್ಧ್ವಬಾಹುಸ್ತಿಷ್ಠತ್ಯಂತೇ ಸಹಸ್ರಸ್ಯಮುನೇ-ರಂತಿಕಮಾಜಗಾಮಾಗ್ನಿರಿವಾಧೂಮಕಸ್ತೇಜಸಾ ನಿರ್ದಹನ್ನಿವಾತ್ಮವಿದ್ಭಗವಾಂಛ್ಹಾಕಾಯನ್ಯ ಉತ್ತಿಷ್ಠೋತ್ತಿಷ್ಠ ವರಂ ವೃಣೀಷ್ವೇತಿ ರಾಜಾನಮಬ್ರವೀತ್ಸ ತಸ್ಮೈ ನಮಸ್ಕೃತ್ಯೋವಾಚ, ಭಗವನ್ನಾಹಮಾತ್ಮವಿತ್ತ್ವಂ ತತ್ತ್ವವಿತ್ ಶೃಣುಮೋ ವಯಂ ಸತ್ಯನ್ನೋ ಬ್ರೂಹೀತ್ಯೇತ-ದ್ವೃತ್ತಂ ಪುರಸ್ತಾದಶಕ್ಯಂ ಮಾಪೃಚ್ಛ ಪ್ರಶ್ನಮೈಕ್ಷ್ವಾಕಾನ್ಯಾನ್ಕಾಮಾನ್ ವೃಣೀಷ್ವೇತಿ ಶಾಕಾಯನ್ಯಸ್ಯ ಚರಣಾವಭಿಮೃಶ್ಯಮಾನೋ ರಾಜೇಮಾಂ ಗಾಥಾಂ ಜಗಾದ (1)**

ತಾ : ಬೃಹದ್ರಥನೆನ್ನುವ ಮಹಾರಾಜನು ರಾಜ್ಯವನ್ನು ಜ್ಯೇಷ್ಠಪುತ್ರನಿಗಿತ್ತು. ಈ ದೇಹವು ಅಶಾಶ್ವತವೆಂದು ಭಾವಿಸಿ ವೈರಾಗ್ಯವನ್ನು ಹೊಂದಿ ಕಾಡಿಗೆ ಹೋದ. ಆ ಅರಣ್ಯದಲ್ಲಿ ಘೋರ ತಪಸ್ಸಾಚರಿಸಿ ಸೂರ್ಯನನ್ನು ನೋಡುತ್ತಾ, ಊರ್ಧ್ವಬಾಹುವಾಗಿ, ಸಾವಿರ ವರ್ಷಗಳು ತಪಸ್ಸು ಮಾಡಿದ. ಧೂಮರಹಿತಾಗ್ನಿಯಂತೆ ಆತ್ಮ ತೇಜಸ್ಸಿನಿಂದ ಪ್ರಕಾಶಿಸುವವನಾಗಿ ಭಗವಂತನಂತೆ ಆತ್ಮವೇತ್ತನಾದ. ಶಾಕಾಯನ್ಯ ಮುನಿಯು ರಾಜನನ್ನು ಉದ್ದೇಶಿಸಿ "ಏಳು ಏಳು ಮಹಾರಾಜ! ವರವನ್ನು ಕೋರಿಕೋ" ಎಂದ. ಆಗ ಮಹಾರಾಜನು ಶಾಕ್ಯಾಯನನಿಗೆ ನಮಸ್ಕರಿಸಿ, ಭಗವಾನ್! ನಾನು ಆತ್ಮವೇತ್ತನಲ್ಲ, ನೀನು ತತ್ತ್ವವೇತ್ತನಾದ್ದರಿಂದ ಆ ತತ್ವವನ್ನು ನನಗೆ ಬೋಧಿಸು" ಎಂದು ಪ್ರಾರ್ಥಿಸಿದ. ಆ ರಾಜನನ್ನು ನೋಡಿ ಮುನಿಯು, "ಓ ಇಕ್ಷ್ವಾಕು ವಂಶೋದ್ಭವ! ಮತ್ತೊಂದು ವರವನ್ನು ಕೇಳು ಆ ಆತ್ಮ ತತ್ತ್ವವು ಅಸಾಧ್ಯವಾದುದು. ಅದನ್ನು ಕುರಿತು ಪ್ರಶ್ನಿಸಬೇಡ, ಎಂದ. ಆ ಮಹಾರಾಜನು ಶಾಕಾಯನ್ಯ ಮುನಿಯ ಚರಣಗಳನ್ನು ಹಿಡಿದುಕೊಂಡು ಈ ರೀತಿ ಪ್ರಾರ್ಥಿಸಿದ.

**ಮಂ.ಶ್ಲೋ॥ ಭಗವನ್ನಸ್ಥಿ ಚರ್ಮ ಸ್ನಾಯು ಮಜ್ಜಾ ಮಾಂಸ ಶುಕ್ರ ಶೋಣಿತ ಶ್ಲೇಷ್ಮಾಶ್ರುದೂಷಿತೇ ವಿಣ್ಮೂತ್ರ ವಾತಪಿತ್ತ ಕಫಸಂಘಾತೇ ದುರ್ಗಂಧೇ ನಿಸ್ಸಾರೇಽಸ್ಮಿಂಛ್ಛರೀರೇ ಕಿಂ ಕಾಮೋಪ-ಭೋಗೈಃ?(2)**

ತಾ : ಹೇ ಭಗವಾನ್! ಮೂಳೆ, ಚರ್ಮ, ನರಗಳು, ಮಜ್ಜೆ, ಮಾಂಸ, ಶುಕ್ರ, ಶೋಣಿತ, ಶ್ಲೇಷ್ಮ, ಕಣ್ಣೀರು ಇವುಗಳಿಂದ ದೂಷಿತವಾಗಿರುವುದೂ, ಮಲಮೂತ್ರಗಳಿಂದ, ವಾತಪಿತ್ಥಕಫಗಳಿಂದ ದುರ್ಗಂಧವಾದುದೂ, ಸಾರಹೀನವಾದುದೂ ಆದ ಈ ದೇಹದಲ್ಲಿ ಕಾಮೋಪಭೋಗಗಳಿಂದ ಮಾನವನಿಗೆ ಆಗುವ ಪ್ರಯೋಜನವಾದರೂ ಏನು?

**ಮಂ.ಶ್ಲೋ॥ ಕಾಮ ಕ್ರೋಧ ಲೋಭ ಮೋಹ ಭಯ ವಿಷಾದೇರ್ಶ್ಯೇಷ್ಟವಿಯೋಗಾನಿಷ್ಟನಂ ಪ್ರಯೋಗ ಕ್ಷುತ್ಪಿಪಾಸಾ ಜರಾ ಮೃತ್ಯು ರೋಗ ಶೋಕಾದ್ಯೈರಭಿಹತೇಸ್ಮಿಂಛ್ಛರೀರೇ ಕಿಂ ಕಾಮೋಪ-ಭೋಗೈಃ? (3)**

ತಾ: ಮಹಾತ್ಮಾ! ಕಾಮ, ಕ್ರೋಧ, ಲೋಭ, ಮೋಹ, ಭಯ ವಿಷಾದ ಈರ್ಷೆ. ಇಷ್ಟಜನವಿಯೋಗ, ಅನಿಷ್ಟಪ್ರಾಪ್ತಿ, ಹಸಿವು, ಬಾಯಾರಿಕೆ, ವೃದ್ಧಾಪ್ಯ, ಮರಣ, ರೋಗ, ಶೋಕ ಮುಂತಾದ ಬಾಧೆಗಳಿಂದ ಪೀಡಿಸಲ್ಪಡುವ ಈ ಶರೀರದಲ್ಲಿ ಕಾಮೋಪಭೋಗಗಳಿಂದ ಮಾನವರಿಗೆ ಉಂಟಾಗುವ ಪ್ರಯೋಜನವೇನು?

**ಮಂ.ಶ್ಲೋ॥ ಸರ್ವಂಚೇದಂ ಕ್ಷರಿಯಿಷ್ಣು ಪಶ್ಯಾಮೋ ಯಥೇಮೇ ದಂಶ ಮಶಕಾದಯಃ ತೃಣವನ್ನಶ್ಯತಯೋದ್ಭೂತ ಪ್ರಧ್ವಂಸಿನಃ(4)**

ತಾ : ಈ ಜಗತ್ತೆಲ್ಲವೂ ನಶಿಸುವ ಸ್ವಭಾವವುಳ್ಳದ್ದಾಗಿ ಕಾಣುತ್ತಿದ್ದೇವೆ. ಉದಾಃ ನೊಣಗಳು, ಸೊಳ್ಳೆಗಳು ಮೊದಲಾದವುಗಳು ಹುಲ್ಲಿನಂತೆ ಹುಟ್ಟುತ್ತಾ ಸಾಯುತ್ತಿರುತ್ತವೆ.

**ಮಂ.ಶ್ಲೋ॥ ಅಥ ಕಿಮೇತೈರ್ವಾ ಪರೇಽನ್ಯೇ ಮಹಾಧನುರ್ಧರಾಶ್ಚಕ್ರವರ್ತಿನಃ ಕೇಚಿತ್ಸುದ್ಯುಮ್ನೇಂದ್ರದ್ಯುಮ್ನ ಕುವಲಯಾಶ್ವ ಯೌವನಾಶ್ವ ವಧ್ರಿಯಾಶ್ವಾಽಶ್ವಪತಿಶ್ಶಶಿಬಿಂದುರ್ಹ ರಿಶ್ಚಂದ್ರೋಽಂಬರೀಷೋ ನನುಕ್ತಃ ಸ್ವಯಾತಿರ್ಯಯಾತಿ ರಸರಣ್ಯೋಕ್ಷಸೇನಾದಯೋಥ ಮರುದ್ಧರತ ಪ್ರಭೃತಯೋ ರಾಜಾನೋ ಮಿಷತೋ ಬಂಧುವರ್ಗಸ್ಯ ಮಾಹತೀಂ ಶ್ರಿಯಂ ತ್ಯಕ್ತ್ವಾಸ್ಮಾಲ್ಲೋಕಾದಮುಂ ಲೋಕಂ ಪ್ರಯಾಂತಿ (5)**

ತಾ : ಮಹಾಧನುರ್ಧರರಾದ ಚಕ್ರವರ್ತಿಗಳು ಕೆಲವರು ಸುದ್ಯುಮ್ನ, ಇಂದ್ರದ್ಯುಮ್ನ, ಕುವಲಯಾಶ್ವ, ಯೌವನಾಶ್ವ ವಧ್ರಿಯಾಶ್ವ, ಅಶ್ವಪತಿ, ಹರಿಶ್ಚಂದ್ರ, ಅಂಬರೀಷ, ಅನನುಕ್ತ, ಶಶಿಬಿಂದು ಸ್ವಯಾತಿ, ಯಯಾತಿ ಅನರಣ್ಯ, ಅಕ್ಷಸೇನ ಮುಂತಾದ ಚಕ್ರವರ್ತಿಗಳು, ಬಂಧುವರ್ಗವು ನೋಡುತ್ತಿದ್ದಂತೆ ಅನಂತ ಭೋಗಗಳನ್ನು ಬಿಟ್ಟು ಇಹಲೋಕದಿಂದ ಪರಲೋಕಕ್ಕೆ ಹೋದರು.

**ಮಂ.ಶ್ಲೋ॥ ಅಥ ಕಿಮೇತೈರ್ವಾಪರೇಽನ್ಯೇ ಗಂಧರ್ವಾಸುರ ಯಕ್ಷರಾಕ್ಷಸ ಭೂತಗಣ ಪಿಶಾಚೋರಗ ಗ್ರಹಾದೀನಾಂ ನಿರೋಧನಂ ಪಶ್ಯಾಮಃ (6)**

ತಾ : ಇನ್ನು ಗಂಧರ್ವರು, ಅಸುರರು, ಯಕ್ಷರು, ರಾಕ್ಷಸರು, ಭೂತಗಣಗಳು, ಪಿಶಾಚಿಗಳು, ಉರಗಗಳು ಗ್ರಹಗಳು ಮುಂತಾದವುಗಳಿಂದ ತಡೆಯೊಡ್ಡುವುದನ್ನು ನೋಡುತ್ತಿದ್ದೇವೆ. ಇದರ ಮಾತೇನು?

**ಮಂ.ಶ್ಲೋ॥ ಅಥ ಕಿಮೇತ್ಯೈ ತ್ವಾನ್ಯಾನಾಂ ಶೋಷಣಂ ಮಹಾರ್ಣವಾನಾಂ ಶಿಖರಿಣಾಂ ಪ್ರಪತನಂ ಧ್ರುವಸ್ಯ ಪ್ರಚಲನಮಸ್ಥಾನಂವಾ ತರೂಣಾಂ ನಿಮಜ್ಜನಂ ಪೃಥಿವ್ಯಾಃ ಸ್ಥಾನಾದಪಸರಣಂ ಸುರಾಣಾಂ ಸೋಽಹಮಿತ್ಯೇತಸ್ಮಿಂತ್ಸಂಸಾರೇ ಕಿಂ ಕಾಮೋಪಭೋಗ್ಯೈರ್ಯೈರೇವಾಶ್ರಿತಸ್ಯಾ ಸಕೃದಿಹಾವರ್ತನಂ ದೃಶ್ಯತ ಇತ್ಯುದ್ಧರ್ತುಮರ್ಹಸೀತ್ಯಂಧೂದಪಾನಸ್ಥೋ ಭೇಕ ಇವಾಹ-ಮಸ್ಮಿಂತ್ಸಂಸಾರೇ ಭಗವಂಸ್ತ್ವನ್ನೋಗತಿ ಸ್ತ್ವನ್ನೋಗತಿರಿತಿ (7)**

ತಾ: ಮಹಾಸಮುದ್ರಗಳು ಒಣಗಿಹೋಗುತ್ತಿವೆ. ಪರ್ವತಗಳು ಉರುಳಿ ಬೀಳುತ್ತಿವೆ. ಧ್ರುವ ನಕ್ಷತ್ರ ಚಲಿಸುತ್ತಿದೆ. ವೃಕ್ಷಗಳು ನಿಲ್ಲಲಾರದೆ ಬಿದ್ದು ಬಿಡುತ್ತಿವೆ. ಭೂಮಂಡಲವು ಮುಳುಗುತ್ತಿದೆ. ದೇವತೆಗಳು ಪದಭ್ರಷ್ಟರಾಗುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಅಹಂಕಾರದಿಂದ ಸಂಸಾರದಲ್ಲಿ ಕಾಮೋಪ-ಭೋಗದಿಂದ ಉಂಟಾಗುವ ಲಾಭವಾದರೂ ಏನು? ಕಾಮೋಪ ಭೋಗಗಳನ್ನು ನಂಬಿಕೊಂಡ ಜೀವನು ಪ್ರಪಂಚದಲ್ಲಿ ಅನೇಕ ಜನ್ಮಗಳನ್ನು ಹೊಂದುತ್ತಿರುವುದನ್ನು ಕಾಣುತ್ತೇವೆ. ಓ ಭಗವಂತನೇ! ಈ ಸಂಸಾರದಲ್ಲಿ ಕೂಪಸ್ಥಮಂಡೂಕದಂತೆ ಇರುವ ನನಗೆ ನೀನೇ ಗತಿ ನೀನೇ ಶರಣ್ಯನು! ಎಂದ.

# ದ್ವಿತೀಯ ಪ್ರಪಾಠಕ

**ಮಂ.ಶ್ಲೋ॥ ಅಥ ಭಗವಾಂಚ್ಛಾಕಾಯನ್ಯಸ್ಸುಪ್ರೀತೋಽಬ್ರವೀದ್ರಾಜಾನಂ ಮಹಾರಾಜ ಬೃಹದ್ರಥೇಕ್ಷ್ವಾಕು ವಂಶಧ್ವಜಶೀರ್ಷಾತ್ಮಜ್ಞಃ ಕೃತಕೃತ್ಯಸ್ತ್ವಂ ಮರುನ್ನಾಮ್ನಾ ವಿಶ್ರುತೋಽಸೀತ್ಯಯಂ ವಾವ ಖಲ್ವಾತ್ಮಾ ತೇ ಕತಮೋ ಭಗವಾಸ್ವರ್ಣ್ಯ ಇತಿ ತಗ್‌ಂ ಹೋವಾಚೇತಿ (1)**

ತಾ : ಆಗ ಭಗವಂತನಾದ ಶಾಕಾಯನ್ಯ ಮುನಿಯು ಸಂತೋಷಗೊಂಡು ರಾಜನೊಂದಿಗೆ, 'ಮಹಾರಾಜಾ! ಬೃಹದ್ರಥಾ! ಇಕ್ಷ್ವಾಕುವಂಶ ಮುಖ್ಯಾ! ನೀನು ಆತ್ಮಜ್ಞನು, ಕೃತಕೃತ್ಯನು, ಮರುತ್ತನೆಂಬ ಹೆಸರಿನಲ್ಲಿ ಪ್ರಸಿದ್ಧನಾಗಿರುವೆ, ಎನ್ನಲು ಆ ರಾಜನು 'ಅಯ್ಯಾ! ಆತ್ಮನ್ಯಾರು? ವರ್ಣಿಸಿ ಹೇಳು' ಎಂದು ಕೇಳಿದ. ಮಹರ್ಷಿ ಹೇಳತೊಡಗಿದ.

**ಮಂ.ಶ್ಲೋ॥ ಯ ಏಷೋ ಬಾಹ್ಯವಷ್ಟಂಭನೇನೋರ್ಧ್ವಮುತ್ಕ್ರಾಂತೋ ವ್ಯಥಮಾನೋಽವ್ಯಥಮಾನ-ಸ್ತಮಃ ಪ್ರಣುದತ್ಯೇಷ ಆತ್ಮೇತ್ಯಾಹ ಭಗವಾನಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾ-ತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ. (2)**

ತಾ : ಬಾಹ್ಯೇಂದ್ರಿಯ ಸ್ತಂಭನವುಂಟಾದಾಗ ಊರ್ಧ್ವವು ಮೇಲಕ್ಕೆದ್ದು ಬಾಧೆ ಪಡುತ್ತಾ, ಪಡದೆ ತಮಸ್ಸನ್ನು ಹೋಗಲಾಡಿಸುವ ಆತನೇ ಆತ್ಮ. ಮತ್ತು ಯಾವ ಈತನು ನಿರ್ಮಲನಾಗಿ ಈ ಶರೀರದಿಂದೆದ್ದು ಪರಮ ಜ್ಯೋತಿ ರೂಪವನ್ನು ಹೊಂದಿ ನಿಜರೂಪವನ್ನು ಹೊಂದುವನೋ ಆತನೇ ಆತ್ಮ. ಈ ಬ್ರಹ್ಮವು ಅಮೃತ ಅಭಯ.

**ಮಂ.ಶ್ಲೋ॥ ಅಥ ಖಲ್ವಿಯಂ ಬ್ರಹ್ಮವಿದ್ಯಾ ಸರ್ವೋಪನಿಷದ್ವಿದ್ಯಾವಾ ರಾಜನ್ನಸ್ಮಾಕಂ ಭಗವತಾ ಮೈತ್ರೇಯೇಣ ವ್ಯಾಖ್ಯಾತಾಹಂ ತೇ ಕಥಯಿಷ್ಯಾಮೀತ್ಯಥಾಪಹತಪಾಪ್ಮಾನಸ್ತಿಗ್ಮ ತೇಜಸ ಊರ್ಧ್ವರೇತಸೋ ವಾಲಖಿಲ್ಯಾ ಇತಿ ಶ್ರೂಯಂತೇಽಥೈತೇ ಪ್ರಜಾ ಪ್ರಜಾಪತಿಮಬ್ರುವನ್ಭ -ಗವಂಚ್ಛಕಟಮಿವಾಚೇತನಮಿದಂ ಶರೀರಂ ಕಸ್ಯೈಷ ಖಲ್ವೀದೃಶೋ ಮಹಿಮಾತೀಂದ್ರಿಯ ಭೂತಸ್ಯ ಯೇನೈತದ್ವಿಧಮಿದಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾಸ್ಯ ಕೋ ಭಗವನ್ನೇತದಸ್ಮಾಕಂ ಬ್ರೂಹೀತಿ ತಾನ್ ಹೋವಾಚ (3)**

ತಾ : 'ಈ ಬ್ರಹ್ಮವಿದ್ಯೆ ಸರ್ವೋಪನಿಷದ್ವಿದ್ಯೆ, ರಾಜಾ! ಭಗವಂತನಾದ ಮೈತ್ರೇಯನಿಂದ ನಮಗೆ ಹೇಳಲಾಗಿದೆ. ಅದನ್ನು ನಿನಗೆ ಹೇಳುತ್ತಿದ್ದೇನೆ. ವಾಲಖಿಲ್ಯರು, ಪಾಪ ರಹಿತವಾಗಿ ತೀಕ್ಷ್ಣ ತೇಜಸ್ಸನ್ನುಳ್ಳವರಾಗಿ ಊರ್ಧ್ವರೇತಸ್ಕರಾದರೆಂದು ಕೇಳಿದ್ದೇವೆ. ಅವರು ಪ್ರಜಾಪತಿಯನ್ನು ಕೇಳಿದರು. ಭಗವನ್! ಶಕಟದಂತೆ ಅಚೇತನವಾದ ಈ ಶರೀರವು ಯಾರಿಂದ ಅಲುಗಾಡುವಂತಾಗಿ ಚೇತನವನ್ನು ಹೊಂದಿ ಚಲಿಸುತ್ತಿದೆಯೋ ಅದು ಅತೀಂದ್ರಿಯನಾದ ಯಾರ ಮಹಿಮೆ? ಇದಕ್ಕೆ ಪ್ರೇರಕನ್ಯಾರು? ಅಯ್ಯಾ ಇದನ್ನು ನಮಗೆ ತಿಳಿಸಿ' ಎಂದು ಕೇಳಿದರು.

**ಮಂ.ಶ್ಲೋ॥ ಯೋಹ ಖಲು ವಾಚೋಪರಿ ಸಃ ಶ್ರೂಯತೇ ಸ ವಾ ಏಷ ಶುದ್ಧಃ ಪೂತಶ್ಶೂನ್ಯ-ಶ್ಶಾಂತೋಽಪ್ರಾಣೋಽನೀಶಾತ್ಮಾನಂತೋಽಕ್ಷಯ್ಯಸ್ಥಿರಃ ಶಾಶ್ವತೋಽಜಃ ಸ್ವತಂತ್ರಃ ಸ್ವೇ ಮಹಿಮ್ನಿ ತಿಷ್ಠತ್ಯನೇನೇದಂ ಶರೀರಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾ ಚೈಷೋಽಸ್ಯೇತಿ ತೇ ಹೋಚುರ್ಭಗವನ್ಕಥಮನೇನೇದೃಶೇನಾನಿಚ್ಛೇನೈತದ್ವಿಧಮಿದಂ ಚೇತನ ವತ್ ಪ್ರತಿಷ್ಠಾಪಿತಂ ಪ್ರಚೋದಯಿತಾ ಚೈಷೋಽಸ್ಯೇತಿ ಕಥಮಿತಿ ತಾನ್ಹೋವಾಚ (4)**

ತಾ : ಯಾವ ಮಹಾತ್ಮನು ಶುದ್ಧನು, ಪವಿತ್ರನು, ಶೂನ್ಯನು, ಶಾಂತನು, ಪ್ರಾಣವಲ್ಲದವನು, ಅನಂತನು, ಅಕ್ಷಯನು, ಸ್ಥಿರನು, ಶಾಶ್ವತನು, ಅಜನು ಸ್ವತಂತ್ರವಾಗಿ ತನ್ನ ಮಹಿಮೆಯಲ್ಲಿರುವವನೆಂದು ನಾವು ಕೇಳಿದ್ದೇವೋ ಆತನಿಂದಲೇ ಈ ಶರೀರವು ಚೇತನವನ್ನು ಹೊಂದಿದೆ. ಇದಕ್ಕೆ ಪ್ರೇರಕನು (ನಡಿಸುವವನು) ಈತನೇ ಎಂದಾಗ ಅವರು ಮತ್ತೆ ಪ್ರಶ್ನಿಸಿದರು ಅಯ್ಯಾ! ಇಚ್ಛೆಯಿಲ್ಲದ ಈತನಿಂದ ಇಂತಹ ಈ ಶರೀರವು ಹೇಗೆ ನಿಂತಿದೆ? ಇದಕ್ಕೆ ಪ್ರೇರಕನು ಹೇಗಾದ? ಎಂದರು.

**ಮಂ.ಶ್ಲೋ॥ ಸವಾ ಏಷ ಸೂಕ್ಷ್ಮೋ ಗ್ರಾಹ್ಯೋದೃಶ್ಯಃ ಪುರುಷ ಸಂಜ್ಞೋ ಬುದ್ಧಿಪೂರ್ವಮಿಹೈವಾವ-ರ್ತತೇಽಂಶೇನ ಸುಷುಪ್ತ್ಯಸ್ಯೈವ ಬುದ್ಧಿಪೂರ್ವಂ ನಿಬೋಧಯತ್ಯಥ ಯೋಹ ಖಲುವಾ ವೈತಸ್ಯಾಂಶೋಯಂ ಯಶ್ಚೇತನ ಮಾತ್ರಃ ಪ್ರತಿಪೂರುಷಂ ಕ್ಷೇತ್ರಜ್ಞಃ ಸಂಕಲ್ಪಾದ್ಯವಸಾ-ಯಾಭಿಮಾನಲಿಂಗಃ ಪ್ರಜಾಪತಿರ್ವಿಶ್ವಾಕ್ಷಸ್ತೇನ ಚೇತನೇನೇದಂ ಶರೀರಂ ಚೇತನವತ್ ಪ್ರತಿಷ್ಠಾಪಿತಂ, ಪ್ರಚೋದಯಿತಾಚೈಷೋಽಸ್ಯೇತಿ ತೇಹೋಚುರ್ಭಗವನ್ನೀದೃಶಸ್ಯ ಕಥ ಮಂಶೇನ ವರ್ತನಮಿತಿ ತಾನ್ಹೋವಾಚ (5)**

ತಾ : ಆತನೇ ಸೂಕ್ಷ್ಮವಾದವನು. ಅಗ್ರಾಹ್ಯನು, ಅದೃಶ್ಯನು, ಪುರುಷಸಂಜ್ಞೆಯುಳ್ಳವನು. ಬುದ್ಧಿ ಪೂರ್ವಕವಾಗಿ ಇಲ್ಲಿ ಈ (ದೇಹದಲ್ಲಿ ಅಂಶದಲ್ಲಿ ಇರುವವನು. ನಿದ್ರಿಸುವವನನ್ನು ಬುದ್ಧಿಪೂರ್ಕವಾಗಿ ಎಚ್ಚರಿಸುತ್ತಾನೆ. ಆತನ ಅಂಶವೇ ಚೇತನವಾಗಿ ಪ್ರತಿ ಪುರುಷನಲ್ಲಿ ಕ್ಷೇತ್ರಜ್ಞನಾಗಿ ಸಂಕಲ್ಪವನ್ನು, ಅಧ್ಯವಸಾಯ, ಅಭಿಮಾನ ಲಿಂಗವನ್ನು (ಇರುವಂತೆ ತಿಳಿಸುವುದು) ಹೊಂದಿರುವನಾಗಿ ಪ್ರಜಾಪತಿ ವಿಶ್ವಾಕ್ಷನಾಗಿರುವನು. ಚೇತನನಾದ ಆತನ ಚೈತನ್ಯದಿಂದಲೇ ಶರೀರವು ಚೇತನವನ್ನು ಹೊಂದಿರುವಂತಹದಾಗಿರುತ್ತದೆ. ಆತನೇ ಇದಕ್ಕೆ ಪ್ರೇರಕನು. ಅವರು ಮತ್ತೆ ಪ್ರಶ್ನಿಸಿದರು. ಭಗವನ್! ಅಂತಹವನಲ್ಲಿ ಅಂಶದಿಂದ ಇರುವುದಾದರೂ ಹೇಗೆ? ಎಂದರು

**ಮಂ.ಶ್ಲೋ॥ ಪ್ರಜಾಪತಿರ್ವಾ ಏಷೋಽಗ್ರೇತಿಷ್ಠತ್ಸನಾರಮತ್ಯೆಕಸ್ಸ ಆತ್ಮಾನಮಭಿಧ್ಯಾಯನ್ಬಹ್ವೀಃ ಪ್ರಜಾ ಅಸೃಜತ್ತಾ ಅಸ್ಮೈವಾ ಅಪ್ರಬುದ್ಧಾ ಸ್ಥಾಣುರಿವ ತಿಷ್ಠಮಾನಾ ಅವಶ್ಯತ್ಸನಾರಮತ ಸೋಽ-ಮನ್ಯ ತೈ ತಾಸಾಂ ಪ್ರತಿಬೋಧನಾಯಾಭ್ಯಂತರಂ ಪ್ರವಿಶಾನೀತ್ಯಥ ಸ ವಾಯುಮಿ-ವಾತ್ಮಾನಂ ಕೃತ್ವಾಭ್ಯಂತರಂ ಪ್ರಾವಿಶತ್ಸ ಏಕೋ ನಾವಿಶತ್ಸಪಂಚಧಾತ್ಮಾನಂ ಪ್ರವಿಭ-ಜ್ಯೋಚ್ಯತೇ ಯಃ ಪ್ರಾಣೋಽಪಾನಸ್ಸಮಾನ ಉದಾನೋ ವ್ಯಾನ ಇತಿ (6)**

ತಾ : ಆತನೇ ಪ್ರಜಾಪತಿ. ಸೃಷ್ಟಿಗೆ ಮೊದಲು ಏಕಾಕಿಯಾಗಿದ್ದು ಸುಖಪಡಲಾರದೆ ಹೋದವನು.

ಆತ್ಮನನ್ನು ಧ್ಯಾನಿಸುತ್ತ ಬಹಳಷ್ಟು ಪ್ರಜೆಗಳನ್ನು ಸೃಷ್ಟಿಸಿದ. ನೋಡುತ್ತಿದ್ದಂತೆ ಅವರೆಲ್ಲರೂ ಪ್ರಬೋಧ(ನ) ವಿಲ್ಲದೆ ಸ್ಥಾಣುವಿನಂತೆ ಮರದ ಕೊರಡಿನಂತೆ ಇದ್ದರು. ಆತನಿಗೆ ಆನಂದವಾಗಲಿಲ್ಲ. ಅವರಿಗೆ ಜ್ಞಾನವುಂಟಾಗಲು ಒಳಕ್ಕೆ ಪ್ರವೇಶಿಸಿದ. ಆತನು ತನ್ನನ್ನು ವಾಯುವನ್ನಾಗಿ ಮಾಡಿ ಒಳಕ್ಕೆ ಪ್ರವೇಶಿಸಿದ. ಒಬ್ಬನೇ ಬರಲಿಲ್ಲ ತನ್ನನ್ನು ಐದು ಆಗಿ ವಿಭಜಿಸಿದ ಅದೇ ಪ್ರಾಣಾಪಾನೆ ಸಮಾನೋದಾನವ್ಯಾನಗಳು.

**ಮಂ.ಶ್ಲೋ॥ ಅಥ ಯೋಽಯಮೂರ್ಧ್ವಮುತ್ಕ್ರಾಮತೀತ್ಯೇಷವಾವ ಸ ಪ್ರಾಣೋಽಥಯೋಽಯಮವಾಙ್ಗಂ ಸಂಕ್ರಾಮತ್ಯೇಷವಾವ ಸೋಽಪಾನೋಥ ಯೋಯಂ ಸ್ಥವಿಷ್ಠಮನ್ನಧಾತುಮಪಾನೇ ಸ್ಥಾಪಯತ್ಯಣಿಷ್ಠಂ ಚಾಂಗೇಽಂಗೇ ಸಮುನ್ನಯತ್ಯೇಷವಾವ ಸಮಾನೋಽಥ ಯೋಽಯಂ ಪೀತಾಶಿತಮುದ್ಗಿರತಿ ನಿಗಿರತೀತಿ ಚೈಷವಾನ ಸ ಉದಾನೋಽಥ ಯೇನೈತಾಸ್ಸಿರಾ ಅನುವ್ಯಾಪ್ತಾ ಏಷವಾವ ಸ ವ್ಯಾನಃ (7)**

ತಾ : (ಮೇಲೆ) ಮೇಲಕ್ಕೆ ಉತ್ಕ್ರಮಿಸುವುದು ಪ್ರಾಣ. ಕೆಳಕ್ಕೆ ಪ್ರಸರಿಸುವುದು ಅಪಾನ. ಇದು ದೊಡ್ಡದಾದ ಅನ್ನ ಧಾತುವನ್ನು ಅಪಾನದಲ್ಲಿ ಸ್ಥಾಪಿಸುವುದು. ಅಣುವಾದ ಅನ್ನಧಾತುವನ್ನು ಪ್ರತಿ ಅವಯವಕ್ಕೂ ಸೇರಿಸುವುದು ಸಮಾನ, ಕುಡಿದಿದ್ದನ್ನು ತಿಂದಿದ್ದನ್ನು ಕೆಳಕ್ಕೆ ಮೇಲಕ್ಕೆ ಕಳುಹಿಸುವುದು ಉದಾನ. ಸಿರಗಳನ್ನು ವ್ಯಾಪಿಸಿರುವುದು ವ್ಯಾನ.

**ಮಂ.ಶ್ಲೋ॥ ಅಥೋಪಾಂಶುರಂತರ್ಯಾಮ್ಯಭಿಭವತ್ಯಂತರ್ಯಾಮಮುಪಾಂಶು ಮೇತಯೋರಂತರಾಳೇ ಚೌಷ್ಣ್ಯಂ ಪ್ರಾಸ್ರಪದ್ಯದೌಷ್ಣ್ಯಂ ಸ ಪುರುಷೋಥ ಯಃ ಪುರುಷಸ್ಸೋಗ್ನಿರ್ವೈಶ್ವಾನರೋಽಪ್ಯನ್ಯ ತ್ರಾಪ್ಯುಕ್ತಮಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ, ತಸ್ಯೈಷ ಘೋಷೋ ಭವತಿ ಯದೇತತ್ಕರ್ಣಾವಪಿಧಾಯ ಶೃಣೋತಿ ಸ ಯದೋತ್ಕ್ರಮಿಷ್ಯನ್ ಭವತಿ ನೈನಂ ಘೋಷಂ ಶೃಣೋತಿ (8)**

ತಾ : ಶರೀರವೆಲ್ಲ ಓಡಾಡುವವನು ಅಂತರ್ಯಾಮಿ, ಉಪಾಂಶುರಾದ ಬ್ರಹ್ಮ ಈ ಇಬ್ಬರ ಮಧ್ಯೆ ಶಾಖವು (ಬಿಸಿ) ಪ್ರಸರಿಸುತ್ತಿರುತ್ತದೆ. ಆತನೇ ಪುರುಷ, ಅತನೇ ಅಗ್ನಿ, ವೈಶ್ವಾನರ. ಮತ್ತೊಂದು ಕಡೆ ಕೂಡಾ ಇದನ್ನೇ ಹೇಳಲಾಗಿದೆ. ಯಾರಿಂದ ಅನ್ನವು ಪಚನವಾಗುತ್ತಿದೆಯೋ, ಯಾರಿಂದ ಅನ್ನವನ್ನು ತಿನ್ನಲಾಗುತ್ತಿದೆಯೋ, ಆತನೇ ಅಗ್ನಿ ವೈಶ್ವಾನರ ಎಂದು ಕಿವಿಗಳನ್ನು ಮುಚ್ಚಿಕೊಂಡಾಗ ಕೇಳಬರುವ ಶಬ್ದವು ಆತನದೇ. ಉತ್ಕ್ರಮಿಸುವಾಗ (ಮರಣೋನ್ಮುಖನಾದಾಗ ಆ ಶಬ್ದವು ಕೇಳ ಬರುವುದಿಲ್ಲ.)

**ಮಂ.ಶ್ಲೋ॥ ಸವಾ ಏಷಪಂಚಧಾಽಽತ್ಮಾನಂ ಪ್ರವಿಭಜ್ಯ ನಿಹಿತೋ ಗುಹಾಯಾಂ ಮನೋಮಯಃ, ಪ್ರಾಣ ಶರೀರೋ ಭಾರೂಪಸ್ಸತ್ಯಸಂಕಲ್ಪ ಆತ್ಮೇತಿ ಸವಾ ಏಷೋಽಸ್ಯಹೃದಂತರೇ ತಿಷ್ಠನ್ನ-ಕೃತಾರ್ಥೋಽಮನ್ಯತಾರ್ಥಾನಶ್ನಾಮಿತ್ಯತಃ ಸ್ವಾನೀಮಾನಿ ಭಿತ್ತ್ವೋದಿತಃ ಪಂಚಭಿ ರಶ್ಮಿಭಿ-ರ್ವಿಷಯಾನತ್ತೀತಿ ಬುದ್ಧೀಂದ್ರಿಯಾಣಿ ಯಾನೀಮಾನ್ಯೇತಾನ್ಯಸ್ಯ ರಶ್ಮಯಃ ಕರ್ಮೇಂದ್ರಿಯಾ-ಣ್ಯಸ್ಯ ಹಯಾ ರಥಶ್ಶರೀರಂ ಮನೋ ನಿಯಂತಾ ಪ್ರಕೃತಮಯೋಸ್ಯ ಪ್ರತೋದನೇನ**

ಖಲ್ವೀರಿತಂ ಪರಿಭ್ರಮತೀದಂ ಚಕ್ರಮಿವ ಮೃತೇಚ ನೇದಂ ಶರೀರಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾ ಚೈಷೋಽಸ್ಯೇತಿ (9)

ತಾ : ಅಂತಹ ಈತನು ಐದು ವಿಧಗಳಾಗಿ ವಿಭಜಿಸಿ ಹೃದಯದಲ್ಲಿ ಇರುವನು ಮನೋ-ಮಯನು, ಪ್ರಾಣಮಯನು, ಪ್ರಭಾರೂಪನು, ಸತ್ಯಸಂಕಲ್ಪನು, ಆತ್ಮ ಎಂದು ಆತನು ಹೃದಯದಲ್ಲಿ ಇದ್ದು ಕೃತಾರ್ಥನಾಗುವುದಿಲ್ಲವೆಂದು ಕೊಂಡಿದ್ದಾನೆ. ವಿಷಯಗಳನ್ನು ಅನುಭವಿಸಬೇಕೆಂದುಕೊಂಡ. ಈ ಪಂಚರೂಪಗಳನ್ನು ಭೇದಿಸಿಕೊಂಡು ಬಂದ ಪಂಚಕಿರಣಗಳೊಂದಿಗೆ ವಿಷಯಗಳನ್ನು ಅನುಭವಿಸಬೇಕೆಂದುಕೊಂಡ. ಬುದ್ಧೀಂದ್ರಿಯಗಳು (ಈತನ) ಜ್ಞಾನೇಂದ್ರಿಯಗಳು. ಈತನ ಕಿರಣ (ಹಗ್ಗ)ಗಳು. ಕರ್ಮೇಂದ್ರಿಯಗಳು ಈತನ ಕುದುರೆಗಳು, ಶರೀರ ರಥ. ಮನಸ್ಸೇನಿಯಂತನಾದ ಸಾರಥಿ. ಈತನ ಚರ್ಮದ ಚಾಟಿಯಿಂದ ಪ್ರೇರೇಪಿಸಲ್ಪಟ್ಟ ಈ ಶರೀರವು ಚಕ್ರದಂತೆ ಪರಿಭ್ರಮಿಸುತ್ತಿದೆ. ಮರಣವು ಬರುತ್ತಲೇ, ಈ ಶರೀರವು ಅಚೇತನವಾಗುತ್ತದೆ. ಆದ್ದರಿಂದ ಇದಕ್ಕೆ ಆತನೇ ಪ್ರೇರಕ.

ಮಂ.ಶ್ಲೋ॥ ಸವಾ ಏಷ ಆತ್ಮೇತ್ಯದೋವಶಂ ನೀತ ಇವ ಸಿತಾಸಿತೈಃ ಕರ್ಮಫಲೈರಭಿಭೂಯಮಾನ ಇವ ಪ್ರತಿಶರೀರಂ ಚರತ್ಯವ್ಯಕ್ತತ್ವಾತ್ಸೂಕ್ಷ್ಮತ್ವಾದದೃಶ್ಯತ್ವಾದಗ್ರಾಹ್ಯತ್ವಾನ್ನಿರ್ಮಮತ್ವಾಚ್ಚಾ-ನವಸ್ಥೋಽಕರ್ತಾ ಕರ್ತೇವಾವಸ್ಥಿತಃ (10)

ತಾ : ಈ ಆತ್ಮ ಇದರ ವಶವಾದಂತೆ ಶುಭಾಶುಭ ಕರ್ಮ ಫಲಗಳಲ್ಲಿ ಪೀಡಿಸಲ್ಪಟ್ಟಂತೆ ಪ್ರತಿ ಶರೀರದಲ್ಲಿಯೂ ಅವ್ಯಕ್ತನು, ಸೂಕ್ಷ್ಮನು, ಅದೃಶ್ಯನು, ಅಗ್ರಾಹ್ಯನು, ನಿರ್ಮಲನು, ಆದುದರಿಂದ ಅಂತ್ಯ (ಅವಧಿ) ಇಲ್ಲದವನಾಗಿ, ಕರ್ತನಾಗದಿದ್ದರೂ ಕರ್ತನಂತೆ ಇರುವನು.

ಮಂ.ಶ್ಲೋ॥ ಸವಾ ಏಷ ಶುದ್ಧಃ ಸ್ಥಿರೋಽಚಲಶ್ಚಾಽಲೇಪೋಽವ್ಯಗ್ರೋ ನಿಸ್ಪೃಹಃ ಪ್ರೇಕ್ಷಕವದವಸ್ಥಿತಃ ಸ್ವಸ್ವಚರಿತ ಭುಗ್ಗುಣಮಯೇನ ಪಟೇನಾತ್ಮಾನಮಂತರ್ಧಾಯಾವಸ್ಥಿತ ಇತ್ಯವಸ್ಥಿತ ಇತಿ (11)

ತಾ : ಈ ಪರಮಾತ್ಮ ಪರಿಶುದ್ಧವಾದುದು, ಸ್ಥಿರವಾದುದು, ನಿಶ್ಚಲವಾದುದು, ಅನಂಗವಾದುದು (ಯಾವುದೂ ಅಂಟದಿರುವುದು) ಅವ್ಯಗ್ರವಾದುದು, ನಿಸ್ಪೃಹವಾದುದು ನಾಟಕವನ್ನು ವೀಕ್ಷಿಸುವ ಪ್ರೇಕ್ಷಕನಂತೆ ಇರುವುದು. ತಮ್ಮ ತಮ್ಮ ಕರ್ಮಫಲಗಳನ್ನು ಅನುಭಸಿಸುವಂತಹುದಾಗಿ ಗುಣಮಯವಾದ ವಸ್ತ್ರದಿಂದ ನಿಜಸ್ವರೂಪವನ್ನು ಆಚ್ಛಾದಿಸಿಕೊಂಡು ಇರುವಂತಹುದಾಗಿದೆ.

## ತೃತೀಯ ಪ್ರಪಾಠಕ

ಮಂ.ಶ್ಲೋ॥ ತೇ ಹೋಚುರ್ಭಗವನ್ನದ್ಯೈವಮಪ್ಯಾತ್ಮನೋ ಮಹಿಮಾನಂ ಸೂಚಯತ್ಯನ್ಯೋವಾಪರಃ ಕೋಽಯಮಾತ್ಮಾ ಯೋಽಯಂ ಸಿತಾಸಿತೈಃ ಕರ್ಮಫಲೈರಭಿಭೂಯಮಾನಸ್ಸದಸದ್ಯೋನಿ-ಮಾಪದ್ಯತ ಇತ್ಯವಾಚೀಂ ವೋರ್ಧ್ವಾಂ ವಾ ಗತಿಂ ದ್ವಂದ್ವೈರಭಿಭೂಯಮಾನಃ ಪರಿಭ್ರಮ-ತೀತಿ ಕತಮ ಏಷ ಇತಿ ತಾನ್ ಹೋವಾಚ (1)

ತಾ : ಅವರು ಕೇಳಿದರು: "ಭಗವನ್! ಇಂತಹ ಆತ್ಮದ ಮಹಿಮೆಯನ್ನು ಸೂಚಿಸುತ್ತಲೇ ಇದೆ. ಮತ್ತೆ ಶುಭಾಶುಭ ಕರ್ಮಫಲಗಳಿಂದ (ಪೀಡಿಸಲ್ಪಡುತ್ತಾ) ಪೀಡಿಸುವಂತಹನಾಗಿ ಸದಸ-

ದ್ಯೋಗಗಳನ್ನು ಹೊಂದುವುದೆಂದು ಅಧೋಶಕ್ತಿಯನ್ನು, ಊರ್ಧ್ವಗತಿಯನ್ನು ಹೊಂದುತ್ತಾ ದ್ವಂದ್ವ-ಗಳಿಂದ ಪೀಡಿತನಾಗಿ ಪರಿಭ್ರಮಿಸುತ್ತಿದ್ದಾನಲ್ಲ ಆ ಮತ್ತೊಂದು ಆತ್ಮ ಯಾರು? ಎನ್ನಲು ಮೇಲೆ ಹೇಳಿದ್ದರಲ್ಲಿ ಎರಡು ಆತ್ಮಗಳ ವಿಷಯ ಬಂದಿದೆ. ಒಂದೇ ಆತ್ಮ ಆದ ಪಕ್ಷದಲ್ಲಿ ಪರಮಾತ್ಮ ಎಂದು ಬ್ರಹ್ಮವೆಂದು ಹೇಳಬಹುದು "ಹಾಗಾದರೆ ಈ ಎರಡು ಆತ್ಮ ಕರ್ಮಗಳ ಫಲಭೋಕ್ತನ್ಯಾರು" ಎಂಬ ಅವರ ಪ್ರಶ್ನೆಗೆ ಹೀಗೆ ನುಡಿದ.

**ಮಂ.ಶ್ಲೋ॥ ಅಸ್ತಿ ಖಲ್ವನ್ಯೋಽಪರೋ ಭೂತಾತ್ಮಾ ಯೋಽಯಂ ಸಿತಾಸಿತೈಃ ಕರ್ಮಫಲೈರಭಿಭೂಯಮಾನ-ಸ್ಸದಸದ್ಯೋನಿಮಾಪದ್ಯತ ಇತ್ಯವಾಚೀಂ ವೋರ್ಧ್ವಾಂ ಗತಿಂ ದ್ವಂದ್ವೈರಭಿಭೂಯಮಾನಃ ಪರಿಭ್ರಮತೀತ್ಯಸ್ಯೋಪವ್ಯಾಖ್ಯಾನಂ ಪಂಚತನ್ಮಾತ್ರಾಣಿ ಭೂತಶಬ್ದೇನೋಚ್ಯಂತೇ, ಪಂಚ-ಮಹಾಭೂತಾನಿ ಭೂತಶಬ್ದೇನೋಚ್ಯಂತೇಽಥತೇಷಾಂ ಯಸ್ಸಮವಾಯಶ್ಶರೀರಮುಕ್ತಮಥ ಯೋಹ ಖಲುವಾವ ಶರೀರಮಿತ್ಯುಕ್ತಂ ಸ ಭೂತಾತ್ಮೇತ್ಯುಕ್ತಮಥಾಸ್ತಿತಸ್ಯಾತ್ಮಾ ಬಿಂದುರಿವ ಪುಷ್ಕರ ಇತಿ ಸವಾ ಏಷೋಽಭಿಭೂತಃ ಪ್ರಾಕೃತೈರ್ಗ್ಗುಣೈರಿತ್ಯತೋಽಭಿಭೂತತ್ವಾ-ತ್ಸಂಮೂಢತ್ವಂ ಪ್ರಯಾತ್ಯಸಮ್ಮೂಢತ್ವಾದಾತ್ಮಸ್ಥಂ ಪ್ರಭುಂ ಭಗವಂತಂ ಕಾರಯಿತಾರಂ ನಾಪಶ್ಯದ್ಗುಣೌಘೈಸ್ತವ್ಯಮಾನಃ ಕಲುಷೀಕೃತಶ್ಚಾಸ್ಥಿರಶ್ಚಂಚಲೋ ಲೋಲುಪ್ಯಮಾನ-ಸ್ಸಸ್ಪೃಹೋ ವ್ಯಗ್ರಶ್ಚಾಭಿಮಾನಿತ್ವಂ ಪ್ರಯಾತ ಇತ್ಯಹಂ ಸ ಮಮೇದಮಿತ್ಯೇವಂ ಮನ್ಯಮಾನೋ ನಿಬಧ್ನಾತ್ಯಾತ್ಮನಾತ್ಮಾನಂ ಜಾಲೇನೇವ ಖಚರಃ ಕೃತಸ್ಯಾನುಫಲೈ-ರಭಿಭೂಯಮಾನಃ ಪರಿಭ್ರಮತೀತಿ (2)**

ತಾ : ಮತ್ತೊಂದು ಭೂತಾತ್ಮನಿರುವನು ಯಾರು ಶುಭಾಶುಭ ಕರ್ಮಫಲದಿಂದ ಪೀಡಿತ-ರಾಗಿದ್ದು ಪದಸದ್ಯೋನುಗಳನ್ನು ಹೊಂದುತ್ತಾ, ಅಧೋಗತಿಯನ್ನು ಊರ್ಧ್ವಗತಿಯನ್ನು ಹೊಂದುತ್ತಾ. ದ್ವಂದ್ವಗಳಿಂದ ಪೀಡಿತನಾಗಿ ಪರಿಭ್ರಮಿಸುತ್ತಿರುವನೋ ಆತನ ವಿವರಗಳನ್ನು ಹೇಳುತ್ತಿದ್ದೇನೆ. ಭೂತ ಶಬ್ದಕ್ಕೆ ಪಂಚ ತನ್ಮಾತ್ರೆಗಳು ಪಂಚ ಮಹಾಭೂತಗಳು ಎಂದು ಅರ್ಥ. ಅವುಗಳ ಸಮುದಾಯವೇ (ಅವುಗಳನ್ನೊಳಗೊಂಡ ರೂಪವೇ) ಶರೀರವೆನ್ನುವುದು. ಶರೀರವೇ ಭೂತಾತ್ಮ. ತಾವರೆ ಎಲೆಯ ಮೇಲಿನ ನೀರಿನ ಬಿಂದುವಿನಂತೆ ಅದರಲ್ಲಿ ಆತ್ಮವಿದೆ. ಅದು ಪ್ರಕೃತಿ ಸಂಬಂಧವಾಗಿರುವ (ಪ್ರಾಕೃತ) ಗುಣಗಳಿಂದ ಪೀಡಿತನಾಗಿರುವುದರಿಂದ ಮೂಢನಾಗುತ್ತಿದ್ದಾನೆ. ಅದರಿಂದ ಆತ್ಮಸ್ಥನಾದ, ಪ್ರಭುವಾದ. ಭಗವಂತನಾದ ಕಾರಯಿತ(ಮಾಡಿಸುವವನು)ನಾದ ಆತ್ಮನನ್ನು ನೋಡಲಾರ. ಗುಣಗಳಿಂದ ತಪಿಸುತ್ತಾ ಕಲುಷಿತನಾಗಿ, ಅಸ್ಥಿರನಾಗಿ, ಚಂಚಲನಾಗಿ, ಆಶೆಯುಳ್ಳವನಾಗಿ, ಕೋರಿಕೆಗಳು ಇರುವಂತಹವನಾಗಿ, ವ್ಯಗ್ರನಾಗಿ, ಅಭಿಮಾನತ್ವವನ್ನು ಹೊಂದುತ್ತಿದ್ದಾನೆ. ನಾನು, ಇದು ನನ್ನದು. ಎಂದು ಭಾವಿಸಿ ಆತ್ಮದಿಂದ ಆತ್ಮವನ್ನು (ತನ್ನನ್ನು) ಕಟ್ಟುತ್ತಿದ್ದಾನೆ. ಬಲೆಯಲ್ಲಿ(ರುವ) ಪಕ್ಷಿಯಂತೆ ಸ್ವಯಂಕೃತವಾದ ಕರ್ಮಫಲಕ್ಕೆ ಕಟ್ಟಿಬಿದ್ದು ಪರಿಭ್ರಮಿಸುತ್ತಿದ್ದಾನೆ.

**ಮಂ.ಶ್ಲೋ॥ ಅಥಾನ್ಯತ್ರಾಪ್ಯುಕ್ತಂ ಯಃ ಕರ್ತಾ ಸೋಽಯಂ ವೈ ಭೂತಾತ್ಮಾ ಕರಣೈಃ ಕಾರಯಿತಾಂತಃ ಪುರುಷೋಽಥ ಯಥಾಽಗ್ನಿನಾಯಃಪಿಂಡೋವಾಽಭಿಭೂತಃ ಕರ್ತೃಭಿರ್ಹನ್ಯಮಾನೋ ನಾನಾತ್ವ**

-ಮುಪೈತ್ಯೇವಂ ವಾವ ಖಲ್ವಸೌ ಭೂತಾತ್ಮಾಂತಃಪುರುಷೇಣಾಭಿಭೂತೋ ಗುಣೈರ್ಹನ್ಯ-ಮಾನೋ ನಾನಾತ್ವಮುಪೈತ್ಯಥ ಯತ್ ತ್ರಿಗುಣಂ ಚತುರಶೀತಿಲಕ್ಷಯೋನಿ ಪರಿಣತಂ ಭೂತಗುಣಮೇತದ್ವೈ ನಾನಾತ್ವಸ್ವರೂಪಂ ತಾನಿ ಹವಾ ಇಮಾನಿ ಗುಣಾನಿ ಪುರುಷೇಣೇರಿ-ತಾನಿ ಚಕ್ರಮಿವ ಚಕ್ರಿಣೇತ್ಯಥ ಯಥಾಯಃ ಪಿಂಡೇ ಹನ್ಯಮಾನೇನಾಗ್ನಿರಭಿಭೂಯ-ತ್ಯೇವಂ ನಾಭಿಭೂಯತ್ಯಸೌ ಪುರುಷೋಽಭಿಭೂಯತ್ಯಯಂ ಭೂತಾತ್ಮೇವ ಸಂಶ್ಲಿಷ್ಟತ್ವಾ-ದಿತಿ (3)

ತಾ : ಮತ್ತೊಂದು ಕಡೆ ಕೂಡಾ ಈ ವಿಷಯವನ್ನು ಹೇಳಲಾಗಿದೆ. ಕರ್ತನೇ ಭೂತಾತ್ಮ. ಒಳಗಿನ ಪುರುಷನು ಕರಣಗಳಿಂದ, ಇಂದ್ರಿಯಗಳಿಂದ ಮಾಡಿಸುವವನು ಬೆಂಕಿಯಿಂದ ತುಂಬಿದ ಕಬ್ಬಿಣದ ಗೋಳವು ಹೊಡೆಯಲ್ಪಟ್ಟು ಚೂರುಚೂರಾಗಿರುವುದು ಅಂತಹ ಈ ಭೂತಾತ್ಮ ಅಂತಃ ಪುರುಷನಿಂದ ತುಂಬಿರುವಂತಹುದಾಗಿ, ಗುಣಗಳಿಂದ ಹೊಡೆಸಿಕೊಳ್ಳುವಂತಹುದಾಗಿ, ನಾನಾ ಪ್ರಕಾರವಾಗುವುದು ತ್ರಿಗುಣಗಳನ್ನುಳ್ಳದ್ದು, ಎಂಬತ್ತು ನಾಲ್ಕು ಲಕ್ಷಗಳ ಜಾತಿಗಳಾಗಿರುವ ಭೂತ (ಪ್ರಾಣಿ) ಗಣವು ನಾನಾತ್ವ ರೂಪಗಳು. ಆ ಗುಣಗಳು ಪುರುಷನಿಂದ ಪ್ರೇರೇಪಿಸಿದಂತಹುದಾಗಿ ಕುಂಬಾರನು ತಿರುಗಿಸುವ ಚಕ್ರದಂತೆ ತಿರುಗುತ್ತಿರುತ್ತದೆ. ಕಬ್ಬಿಣವನ್ನು ಹೊಡೆದಾಗ ಅಗ್ನಿಗೆ ಬಾಧೆ (ನೋವು) ಇಲ್ಲದಿರುವಂತೆ ಈ ಗುಣಾಧಿಗಳಿಂದ ಈ ಪುರುಷನು ಬಾಧೆಗೀಡಾಗುವುದಿಲ್ಲ ಜೊತೆಗಿರುವುದರಿಂದ ಭೂತಾತ್ಮನಿಗೇ ಆ ಬಾಧೆ ಸಂಕ್ರಮಿಸುವುದು.

ಮಂ.ಶ್ಲೋ॥ ಅಥಾನ್ಯತ್ರಾಪ್ಯುಕ್ತಂ ಶರೀರಮಿದಂ ಮೈಥುನಾದೇವೋದ್ಭೂತಂ ಸಂವಿದ್ವ್ಯಪೇತಂ ನಿರಯ ಏವ ಮೂತ್ರದ್ವಾರೇಣ ನಿಷ್ಕ್ರಾಂತಮಸ್ಥಿಭಿಶ್ಚಿತಂ ಮಾಂಸೇನಾನುಲಿಪ್ತಂ ಚರ್ಮಣಾವಬದ್ಧಂ ವಿಣ್ಮೂತ್ರ ಪಿತ್ತ ಕಫ ಮಜ್ಜಾ ಮೇದೋ ವಸಾಭಿರನ್ಯೈಶ್ಚಮಲೈರ್ಬಹುಭಿಃ ಪರಿಪೂರ್ಣಃ ಕೋಶ ಇವ ಧನೇನೇತಿ (4)

ತಾ : ಈ ದೇಹವು ಮೈಥುನದಿಂದ ಹುಟ್ಟಿದುದು. ಜ್ಞಾನರಹಿತವಾದುದು. ನರಕ ಸಮಾನವಾದ ಯೋನಿಯಿಂದ ಹೊರಬಂದಿರುವಂತಹುದು. ಮೂಳೆಗಳಿಂದ ಕೂಡಿರುವಂತಹುದು. ಚರ್ಮದಿಂದ ಹೊದಿಸಿಲ್ಪರುವಂತಹುದು. ಮಾಂಸಮಯವಾದುದು. ಮಲಮೂತ್ರಗಳು, ಪಿತ್ತ, ಕಫ, ಮಜ್ಜೆ, ಮೇದಸ್ಸು, ಕೊಬ್ಬು. ತದಿತರವಾದ ವಿವಿಧ ಮಾಲಿನ್ಯಗಳೊಂದಿಗೆ ತುಂಬಿ ಇರುವುದು. ಸಂಪತ್ತಿನೊಂದಿಗೆ ತುಂಬಿ ಧನ ಕೋಶಾಗಾರದಂತೆ ಇದೆ.

ಮಂ.ಶ್ಲೋ॥ ಅಥಾನ್ಯತ್ರಾಪ್ಯುಕ್ತಂ ಸಂಮೋಹೋ ಭಯಂ ವಿಷಾದೋ ನಿದ್ರಾ ತಂದ್ರೀ ವ್ರಣೋ ಜರಾ ಶೋಕಃ ಕ್ಷುತ್ಪಿಪಾಸಾ ಕಾರ್ಪಣ್ಯಂ ಕ್ರೋಧೋ ನಾಸ್ತಿಕ್ಯಮಜ್ಞಾನಂ ಮಾತ್ಸರ್ಯಂ ನೈಷ್ಕಾರುಣ್ಯಂ ಮೂಢತ್ವಂ ನಿರ್ವ್ರೀಡತ್ವಂ ನಿಕೃತತ್ವಮುದ್ಧತತ್ವಮಿತಿ ತಾಮಸಾನ್ವಿತಃ ತೃಷ್ಣಾ ಸ್ನೇಹೋ ರಾಗೋ ಲೋಭೋ ಹಿಂಸಾ ರತಿಃ ದೃಷ್ಟಿಃ ವ್ಯಾಪೃತತ್ವಮೀರ್ಷ್ಯಾಕಾಮಮಸ್ಥಿರತ್ವಂ ಚಂಚಲತ್ವಂ ಜಿಗೀಷಾರ್ಥೋಪಾರ್ಜನಂ ಮಿತ್ರಾನುಗ್ರಹಣಂ ಪರಿಗ್ರಹಾವಲಂಬೋಽನಿಷ್ಟೇಷ್ವಿಂದ್ರಿಯಾರ್ಥೇಷು

**ದ್ವಿಷ್ಟಿರಿಷ್ಟೇಷ್ವಭಿಷ್ವಂಗ ಇತಿ ರಾಜಸಾನ್ವಿತ್ಯೈಃ ಪರಿಪೂರ್ಣ ಏತ್ಯೈರಭಿಭೂತ ಇತ್ಯಯಂ ಭೂತಾತ್ಮಾ ತಸ್ಮಾನ್ನಾನಾರೂಪಾಣ್ಯಾಪ್ನೋತೀತ್ಯಾಪ್ನೋತೀತಿ (5)**

ತಾ : ಸಂಮೋಹ, ಭಯ, ವಿಷಾದ, ನಿದ್ರೆ, ಆಲಸ್ಯ, ವ್ರಣ, ಮುದಿತನ, ಶೋಕ, ಹಸಿವು, ದಾಹ, ಲೋಭ, ಕ್ರೋಧ, ನಾಸ್ತಿತ್ವ, ಅಜ್ಞಾನ, ಮಾತ್ಸರ್ಯ, ನಿಷ್ಕಾರಣ, ಮೂಢತ್ವ, ನಿರ್ಲಜ್ಜೆ, ವಿಕೃತ, ಗರ್ವ, ಅಸಮಾನತೆ ಎನ್ನುವ ತಾಮಸ ಗುಣಗಳಿಂದ ಕೂಡಿದವನಾಗಿ, ಸ್ಥಿರತೆ ಇಲ್ಲದವನಾಗಿ ಚಂಚಲತ್ವ ಜಯಿಸುವ ಕೋರಿಕೆ, ಧನಾರ್ಜನೆ, ಮಿತ್ರರನ್ನು ಅನುಗ್ರಹಿಸುವುದು, ಬಳಬಂದವರಿಗೆ ಆಧಾರವಾಗಿರುವುದು ಇಷ್ಟವಾಗದ ಇಂದ್ರಿಯಾರ್ಥಗಳಲ್ಲಿ ದ್ವೇಷ, ಇಷ್ಟವಾದುದರಲ್ಲಿ ಆಸಕ್ತಿ ಎನ್ನುವ ರಾಜಗುಣಗಳೊಂದಿಗೆ ಕೂಡಿದವನಾಗಿ ಇವುಗಳಿಂದ ಪರಿಪೂರ್ಣನಾಗಿ ಆ ಗುಣಗಳಿಂದ ಮುಚ್ಚಲಾಗಿ ಈ ಭೂತಾತ್ಮನಿರುವನು. ಆದರೆ ನಾನಾ ರೂಪಗಳನ್ನು ಹೊಂದುತ್ತಲೇ ಇರುವನು. ಸತ್ಯವಿದು.

# ಚತುರ್ಥ ಪ್ರಪಾಠಕ

ಮಂ.ಶ್ಲೋ॥ **ತೇಹ ಖಲ್ವಥೋರ್ಧ್ವರೇತಸೋಽತಿವಿಸ್ಮಿತಾ ಅಭಿಸಮೇತ್ಯೋಚುರ್ಭಗವನ್ನಮಸ್ತೇ ತ್ವನ್ನಶ್ಯಾಧಿತ್ವ-ಮಸ್ಮಾಕಂ ಗತಿರನ್ಯಾ ನ ವಿದ್ಯತ ಇತ್ಯಸ್ಯ ಕೋ ವಿಧಿರ್ಭೂತಾತ್ಮನೋ ಯೇನೇದಂ ಹಿತ್ವಾತ್ಮನ್ಯೇವ ಸಾಯುಜ್ಯಮುಪೈತಿ ತಾನ್ ಹೋವಾಚ (1)**

ತಾ : ಎಲ್ಲೆಡೆ ನನ್ನ ಊರ್ಧ್ವ ರೇತಸ್ಸರಾದ ಮುನಿಗಳು ಅತಿ ವಿಸ್ಮಿತರಾಗಿ ಏಕಕಂಠದಿಂದ ಕೇಳಿದರು. ಭಗವನ್ ನಮಸ್ತೆ! ನೀನು ನನ್ನನ್ನು ಶಾಸಿಸುವಂತಹವನಾಗು, ನೀನೇ ನಮಗೆ ಗತಿ ಮತ್ತೊಂದು ಗತಿಯಿಲ್ಲ. ಈ ಭೂತಾತ್ಮಕ್ಕೆ ಗತಿ ಏನಿದೆ? ಯಾವುದರಿಂದ ಈ ಬಾಧೆಯನ್ನು ದೂರ ಮಾಡಿಕೊಂಡು ಆತ್ಮನೊಂದಿಗೆ ಸಾಯುಜ್ಯವನ್ನು ಪಡೆಯಲಾಗುವುದು? ಎಂದು ಪ್ರಶ್ನಿಸಿದ. ಅವರನ್ನು ಕುರಿತು ಹೀಗೆಂದನು.

ಮಂ.ಶ್ಲೋ॥ **ಅಥಾನ್ಯತ್ರಾಪ್ಯುಕ್ತಂ ಮಹಾನದೀಷೂರ್ಮಯ ಇವ ನಿವರ್ತಕಮಸ್ಯ ಯತ್ಪುರಾಕೃತಂ ಸಮುದ್ರ ವೇಲೇವ ದುರ್ನಿವಾರ್ಯಮನ್ಯಮೃತ್ಯೋರಾಗಮನಂ ಸದಸತ್ಫಲಮಯ್ಯೈರ್ಹಿ ಪಾಶೈಃ ಪಶುರಿವ ಬದ್ಧಂ ಬಂಧನಸ್ಥಸ್ಯೈವಾಸ್ವಾತಂತ್ರ್ಯಂ ಯಮವಿಷಯಸ್ಥ ಇವ ಬಹುಭಯಾವಸ್ಥಂ ಮದಿ-ರೋನ್ಮತ್ತ ಇವಮೋಹಮದಿರೋನ್ಮತ್ತಂ ಪಾಪ್ಮನಾ ಗೃಹೀತ ಇವ ಭ್ರಾಮ್ಯಮಾಣಂ ಮಹೋರಗದಷ್ಟ ಇವ ವಿಷಯದಷ್ಟಂ ಮಹಾಂಧಕಾರ ಇವ ರಾಗಾಂಧಮಿಂದ್ರಜಾಲಮಿವ ಮಾಯಾಮಯಂ ಸ್ವಪ್ನ ಇವ ಮಿಥ್ಯಾದರ್ಶನಂ ಕದಳೀಗರ್ಭ ಇವಾಸಾರಂ ನಟ ಇವ ಕ್ಷಣವೇಷಂ ಚಿತ್ರಭಿತ್ತಿರಿವ ಮಿಥ್ಯಾ ಮನೋರಮಮಿತ್ಯಥೋಕ್ತಮ್, ಶಬ್ದ ಸ್ಪರ್ಶಾದಯೋ ಯೇಽರ್ಥಾ ಅನರ್ಥಾ ಇವ ತೇ ಸ್ಥಿತಾಃ, ಯೇಷಾಂ ಸಕ್ತಸ್ತು ಭೂತಾತ್ಮಾ ನ ಸ್ಮರೇಚ್ಚ ಪರಂಪದಮ್ (2)**

ತಾ : ಪುರಾಕೃತಮೇ ಮಹಾನದಿಗಳಲ್ಲಿ ಅಲೆಗಳಾಗಿರುವಂತೆ ಈತನಿಗೆ ನಿವಾರಣೆಯನ್ನುಂಟು

ಮಾಡುತ್ತದೆ: ಸಮುದ್ರದ ತೀರದಂತೆ ದುರ್ನಿವಾಯುವಾಗುತ್ತದೆ. ಈತನಿಗೆ ಮೃತ್ಯುವಿನ ಆಗಮನ ಸದಸತ್ಫಲಗಳನ್ನು ಪಾಶಗಳಿಂದ ಪಶುವು ಬಿಗಿಸಿಕೊಂಡಂತೆ ಸ್ವಾತಂತ್ರ್ಯವಿಲ್ಲದಂತೆ ಯಮನ ದೃಷ್ಟಿಯಲ್ಲಿ ಬಿದ್ದವನಂತೆ, ಹೆಚ್ಚಿನ ಭಯದಿಂದ ಕೂಡಿದ ಸಾರಾಯಿ (ಕಳ್ಳು)ಕುಡಿದು ಉನ್ಮತ್ತ-ನಾದವನಂತೆ ಮತ್ತನಾಗಿ ಪಾಪದಿಂದ ಗ್ರಹಿಸಲ್ಪಟ್ಟವನಂತೆ, ಭ್ರಮೆಗೊಳಗಾದವನಂತೆ ತಿರುಗಾಡುತ್ತಿರು-ವಾಗ ಸರ್ಪದ್ರಷ್ಟನಂತೆ ವಿಷಯದ್ರಷ್ಟನಾಗಿ ಆಪತ್ತುಗಳಿಂದ ಕೂಡಿದ ಘೋರ ಅಂಧಕಾರದಂತೆ ರಾಗದಿಂದ ಅಂಧನಾದ ಇಂದ್ರಜಾಲದಂತೆ, ಮಾಯಾಮಯವಾದ ಸ್ವಪ್ನದಂತೆ ಮಿಥ್ಯಾದರ್ಶನವಾದ (ದರ್ಶನವು ನಿಜವಾದುದಲ್ಲ) ಬಾಳೆಯ ಸ್ತಂಭದಂತೆ ಸಾರವಿಲ್ಲದೆ ನಟನಂತೆ ಕ್ಷಣಕ್ಕೊಂದು ವೇಷವನ್ನು ಹೊಂದಿದ ಚಿತ್ರವಾದ ಗೋಡೆಯಂತೆ, ದೃಷ್ಟಿಚಾಂಚಲ್ಯವನ್ನುಳ್ಳವನು. ಶಬ್ದಸ್ಪರ್ಶಾದಿ ವಿಷಯಗಳೇ ಈತನಿಗೆ ಅನರ್ಥಗಳು. ಅವುಗಳಲ್ಲಿ ಆಸಕ್ತಿಯುಂಟಾಗಿ ಭೂತಾತ್ಮ ಪರಮಪದವನ್ನು ಸ್ಮರಿಸುವಂತಾಗುವುದು.

**ಮಂ.ಶ್ಲೋ|| ಅಯಂ ವಾವ ಖಲ್ವಸ್ಯಪ್ರತಿನಿಧಿರ್ಭೂತಾತ್ಮನೋ ಯದೇವ ವಿದ್ಯಾಧಿಗಮಃ ಸ್ವಧರ್ಮಸ್ಯಾನು-ಸರಣಂ ಸ್ವಾಶ್ರಮೇಷ್ವೇವಾನುಕ್ರಮಣಂ ಸ್ವಧರ್ಮ ಏವ ಸರ್ವಂ ಧತ್ತೇ ಸ್ತಂಭಶಾಖೇ ಚೇತರಾಣ್ಯ-ನೇನೋರ್ಧ್ವ ಭಾಗ್ಭವತ್ಯಸ್ಯಥಾಧಃ ಪತತ್ಯೇಷ ಸ್ವಧರ್ಮಾಭಿಭೂತೋ ಯೋ ವೇದೇಷು ನ ಸ್ವಧರ್ಮಾತಿಕ್ರಮೇಣಾಶ್ರಮೀ ಭವತ್ಯಾಶ್ರಮೇಷ್ವೇವಾವಸ್ಥಿತ ಸ್ತಪಸ್ವೀ ಚೇತ್ಯುಚ್ಯತ ಏತದ-ಪ್ಯುಕ್ತಂ ನಾತಪಸ್ಕಸ್ಯಾತ್ಮಜ್ಞಾನಾಧಿಗಮಃ ಕರ್ಮಶುದ್ಧಿರ್ವೇತ್ಯೇವಂ ಹ್ಯಾಹ, "ತಪಸಾ ಪ್ರಾಪ್ಯತೇ ಸತ್ತ್ವಂ, ಸತ್ತ್ವಾತ್ಸಂಪ್ರಾಪ್ಯತೇ ಮನಃ, ಮನಸಾ ಪ್ರಾಪ್ಯತೇತ್ವಾತ್ಮಾ ಹ್ಯಾತ್ಮಾಪ್ತ್ಯಾ ನ ನಿವರ್ತತ" ಇತಿ (೩)**

ತಾ : ಈ ಭೂತಾತ್ಮಕ್ಕೆ ಇದೇ ಪ್ರತಿಕ್ರಿಯೆ. ವಿದ್ಯಾಭ್ಯಾಸ ಸ್ವಧರ್ಮಾನುಸರಣೆ, ಸ್ವಾಶ್ರಮಾನು ಕ್ರಮಣಗಳು ಸ್ವಧರ್ಮವೇ ಸರ್ವವನ್ನೂ ಧರಿಸುವುದು. ಇದರಿಂದ ಊರ್ಧ್ವ ಲೋಕಗಳನ್ನು ಹೊಂದುವನು. ಮತ್ತೊಂದು ವಿಧವಾಗಿ ಇದ್ದಲ್ಲಿ ಅಧಃ ಪತನವಾಗುವುದು. ವೇದಗಳಲ್ಲಿ ವಿಹಿತ-ವಾಗಿರುವುದೇ ಸ್ವಧರ್ಮ. ಸ್ವಧರ್ಮಾತಿ ಕ್ರಮಣದಿಂದ ಆಶ್ರಮವಂತನಾಗುವುದಿಲ್ಲ. ಆಶ್ರಮ-ದಲ್ಲಿರುವವನೇ ತಪಸ್ವಿ ಎಂದೆನಿಸಿಕೊಳ್ಳುವನು ಇದನ್ನೇ ಹೇಳುತ್ತಿರುವುದು, ತಪಸ್ಸು ಇಲ್ಲದವನಿಗೆ ಆತ್ಮಜ್ಞಾನ ಪ್ರಾಪ್ತಿಯಿಲ್ಲ. ಕರ್ಮ ಶುದ್ಧಿಯಿಲ್ಲ. ತಪಸ್ಸಿನಿಂದ ಸತ್ವದಿಂದ ಮನಸ್ಸು, ಮನಸ್ಸಿನಿಂದ ಆತ್ಮವನ್ನು ಹೊಂದಲಾಗುವುದು. ಆತ್ಮ ಪ್ರಾಪ್ತಿಯಿಂದ ಇನ್ನು ವಿಮುಖನಾಗುವುದಿಲ್ಲ.

**ಮಂ.ಶ್ಲೋ|| (ಅತ್ರೈತೇ ಶ್ಲೋಕಾ ಭವಂತಿ) ಯಥಾ ನಿರಂಧನೋ ವಹ್ನಿಃ ಸ್ವಯೋನಾವುಪಶಾಮ್ಯತಿ। ತಥಾ ವೃತ್ತಿಕ್ಷಯಾಚ್ಚಿತ್ತಂ ಸ್ವಯೋನಾವುಪಶಾಮ್ಯತಿ ॥ ಸ್ವಯೋನಾವುಪಶಾಂತಸ್ಯ ಮನಸ-ಸ್ಸತ್ಯಗಾಮಿನಃ । ಇಂದ್ರಿಯಾರ್ಥಾ ವಿಮೂಢಸ್ಯಾನೃತಾಃ ಕರ್ಮವಶಾನುಗಾಃ ॥ ಚಿತ್ತಮೇವ ಹಿ ಸಂಸಾರಸ್ತತ್ ಪ್ರಯತ್ನೇನ ಶೋಧಯೇತ್ । ಯಚ್ಚಿತ್ತಸ್ತನ್ಮಯೋಭವತಿ ಗುಹ್ಯಮೇತ-ತ್ಸನಾತನಮ್ ॥ ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಶುಭಮ್ । ಪ್ರಸನ್ನಾತ್ಮಾಽಽತ್ಮನಿ ಸ್ಥಿತ್ವಾ ಸುಖಮವ್ಯಯಮಶ್ನುತೇ ॥ ಸಮಾಸಕ್ತಂ ಯಥಾಚಿತ್ತಂ ಜಂತೋರ್ವಿಷಯಗೋಚರೇ।**

ಯದ್ಯೇವಂ ಬ್ರಹ್ಮಣಸ್ಯಾತ್ತತ್ಕೋ ನ ಮುಚ್ಯೇತ ಬಂಧನಾತ್ ॥ ಮನೋ ಹಿ ದ್ವಿವಿಧಂ ಪ್ರೋಕ್ತಂ ಶುದ್ಧಂ ಚಾಶುದ್ಧ ಮೇವಚ। ಅಶುದ್ಧಂ ಕಾಮಸಂಕಲ್ಪಂ ಶುದ್ಧಂ ಕಾಮವಿವರ್ಜಿತಮ್॥ ಲಯವಿಕ್ಷೇಪ ರಹಿತಂ ಮನಃಕೃತ್ವಾ ಸುನಿಶ್ಚಲಮ್ । ಯದಾ ಯಾತ್ಯಮನೀಭಾವಂ ತದಾ ತತ್ಪರಮಂಪದಮ್॥ ತಾವದೇವ ನಿರೋದ್ಧವ್ಯಂ ಹೃದಿ ಯಾವತ್ಕ್ಷಣಯಂಗತಮ್। ಏತತ್ಜ್ಞಾನಂಚ ಮೋಕ್ಷಂ ಚ ಶೇಷಾಸ್ತು ಗ್ರಂಥವಿಸ್ತರಾಃ । ಸಮಾಧಿನಿರ್ಧೂತಮಲಸ್ಯ ಚೇತಸೋ ನಿವೇಶಿತಸ್ಯಾತ್ಮನಿ ಯತ್ಸುಖಂ ಭವೇತ್ । ನ ಶಕ್ಯತೇ ವರ್ಣಯಿತುಂ ಗಿರಾ ತದಾ ಸ್ವಯಂ ತದಂತಃಕರಣೇನ ಗೃಹ್ಯತೇ । ಆಪ ಅಪ್ಸ್ವಗ್ನಿರಗ್ನೌ ವಾ ವ್ಯೋಮ್ನಿ ವ್ಯೋಮ ನ ಲಕ್ಷಯೇತ್ । ಏವಮಂತರ್ಗತಂ ಚಿತ್ತಂ ಪುರುಷಃ ಪ್ರತಿಮುಚ್ಯತೇ ॥ ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ। ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಮಿತಿ ॥ ಅಥ ಯಥೇಯಂ ಕೌತ್ಸಾಯನೀ ಸ್ತುತಿಃ, ತ್ವಂ ಬ್ರಹ್ಮಾ ತ್ವಂಚ ವೈ ವಿಷ್ಣುಸ್ತ್ವಂ ರುದ್ರಸ್ತ್ವಂ ಪ್ರಜಾಪತಿಃ, ತ್ವಮಗ್ನಿರ್ವರುಣೋ ವಾಯುಸ್ತ್ವಮಿನ್ದ್ರಸ್ತ್ವಂ ನಿಶಾಕರಃ, ತ್ವಂ ಮನುಸ್ತ್ವಂ ಯಮಶ್ಚ ತ್ವಂ ಪೃಥಿವೀ ತ್ವಮಥಾಚ್ಯುತಃ, ಸ್ವಾರ್ಥೇ ಸ್ವಾಭಾವಿಕೇಽರ್ಥೇಚ ಬಹುಧಾ ತಿಷ್ಠಸೇ ದಿವಿ । ವಿಶ್ವೇಶ್ವರ ನಮಸ್ತುಭ್ಯಂ ವಿಶ್ವಾತ್ಮಾ ವಿಶ್ವಕರ್ಮಕೃತ್ ॥ ವಿಶ್ವಭುಗ್ ವಿಶ್ವಮಾಯಸ್ತ್ವಂ ವಿಶ್ವಕ್ರೀಡಾರತಿ ಪ್ರಭುಃ । ನಮಶ್ಶಾಂತಾತ್ಮನೇ ತುಭ್ಯಂ ನಮೋ ಗುಹ್ಯ-ತಮಾಯ ಚ ॥ ಅಚಿಂತ್ಯಾಯಾಪ್ರಮೇಯಾಯ ಅನಾದಿನಿಧನಾಯ ಚೇತಿ (4)

ತಾ : (ಮನೋಹಿದ್ವಿವಿಧಂಪ್ರೋಕ್ತಂ..... ಎನ್ನುವ ಮಂತ್ರ ಅಮೃತಬಿಂದೋಪನಿಷತ್‌ನಲ್ಲಿಯೂ ತ್ರಿಪುರತಾಪಿನ್ಯುಪನಿಷತ್‌ನಲ್ಲಿಯೂ ಕೂಡಾ ಇದೆ.) ಇಲ್ಲೇ ಶ್ಲೋಕಗಳಿವೆ. ಸೌದೆ ಇಲ್ಲದ ಅಗ್ನಿ ತನ್ನ ಕಾರಣದಲ್ಲಿಯೇ ಉಪಶಮಿಸುವುದು ಅಂತೆಯೇ ಚಿತ್ತ ವೃತ್ತಿಯ ಕ್ಷಯದಿಂದ ಚಿತ್ತವು ಉಪಶಮಿಸುವುದು. ಉಪಶಾಂತವಾದ ಮನಸ್ಸಿಗೆ ಇಂದ್ರಿಯಾರ್ಥಗಳು ಸತ್ಯಕಾಮಗಳಾಗುವುವು. ಮೂಢನಿಗೆ ಇಂದ್ರಿಯಾರ್ಥಗಳು ಕರ್ಮವಶನಾಗುವುದು. ಚಿತ್ತವೇ ಸಂಸಾರ, ಆದರೆ ಅದನ್ನು ಪ್ರಯತ್ನಿಸಿ ಶೋಧಿಸಬೇಕು. ಯಾವುದರಲ್ಲಿ ಚಿತ್ತವಿರುವುದೋ ಅದರಲ್ಲಿ ತನ್ಮಯನಾಗುವುದು ಪುರಾತನ ಸತ್ಯ. ಚಿತ್ತವು ನಿರ್ಮಲವಾದರೆ ಶುಭಾಶುಭ ಕರ್ಮವನ್ನು ಹೋಗಲಾಡಿಸುವುದು ನಿರ್ಮಲಾತ್ಮನಾದವನು ಆತ್ಮದಲ್ಲಿದ್ದು ಅವ್ಯಯವಾದ ಸುಖವನ್ನು ಪಡೆಯುವನು. ಚಿತ್ತವು ವಿಷಯಗಳಲ್ಲಿ ಆಸಕ್ತವಾದಂತೆ ಬ್ರಹ್ಮದಲ್ಲಿ ಆಸಕ್ತವಾದಲ್ಲಿ ಬಂಧ ಮುಕ್ತನಾಗದಿರುವವನು ಯಾರು? ಮನಸ್ಸು ಎರಡು ವಿಧಗಳಾಗಿವೆ(ಗಳು) ಕಾಮಸಂಕಲ್ಪ ಅಶುದ್ಧ, ಕಾಮವಿವರ್ಜವು ಶುದ್ಧ. ಮನಸ್ಸನ್ನು ಲಯವಿಕ್ಷೇಪ ರಹಿತವಾಗಿಯೂ, ನಿಶ್ಚಲವಾಗಿಯೂ ಇರುವಂತೆ ಮಾಡಿ(ಕೊಂಡು) ಅಮನೀ ಭಾವವನ್ನು ಯಾವಾಗ ಹೊಂದುವನೋ, ಆಗಲೇ ಪರಮ ಪದವನ್ನು ಹೊಂದುವನು. ಇದೇ ಜ್ಞಾನ, ಇದೇ ಮೋಕ್ಷ. ಉಳಿದುದೆಲ್ಲವೂ ಗ್ರಂಥವಿಸ್ತಾರ ಮಾತ್ರವೇ, ಸಮಾಧಿಯಿಂದ ಮಲವನ್ನು ಹೋಗಲಾಡಿಸಿಕೊಂಡು ಆತ್ಮದಲ್ಲಿಡಲಾದ ಚಿತ್ತದಿಂದ ಉಂಟಾಗುವ ಸುಖವನ್ನು ವಾಕ್ಕಿನಿಂದ ಹೇಳಲಾಗದಿರುವಂತಹುದು. ಅದು ಸ್ವಯಂ ಅಂತಃಕರಣದಿಂದ ಮಾತ್ರವೇ ನೀರು ನೀರಿನಲ್ಲಿಯೂ,

ಅಗ್ನಿ ಅಗ್ನಿಯಲ್ಲಿಯೂ, ಆಕಾಶವು ಆಕಾಶದಲ್ಲೂ ಬೇರೆಯಾಗಿ ಗುರ್ತಿಸಲಾಗದು. ಅದೇ ರೀತಿ ಗ್ರಹಿಸುವಂತಹುದು. ಮನಸ್ಸಿನಲ್ಲಿನ ವಿಷಯಗಳು ಕ್ಷಯವಾಗುವವರೆಗೂ ಬೇರೆಯಾಗಿ ಗುರ್ತಿಸಲಾಗದು (ಗುರುತಿಸಲಾಗದು) ಅಂತಹ ಅಂತರ್ಗತ ಉಂಟಾಗಲು ಮನಸ್ಸೇ ಕಾರಣ. ವಿಷಯಾಸಕ್ತವಾದ ಮನಸ್ಸಿಗೆ ಬಂಧವನ್ನು ಉಂಟುಮಾಡಿದಾಗ ನಿರ್ವಿಷಯವಾದ ಮನಸ್ಸು ಮುಕ್ತಿಯನ್ನು ಉಂಟುಮಾಡುವುದು ಕೌತ್ಸಾಯಿನಿ ಸ್ತುತಿಯಿದು. ನೀನೇ ಬ್ರಹ್ಮ, ನೀನೇ ವಿಷ್ಣು, ನೀನೇ ರುದ್ರ, ಪ್ರಜಾಪತಿ ಅಗ್ನಿ, ವರುಣ, ವಾಯು, ಇಂದ್ರ, ಚಂದ್ರ, ಮನು, ಯಮ, ಭೂಮಿ, ಅಚ್ಯುತ, ಸ್ವಾರ್ಥ, ಸ್ವಾಭಾವಿಕಗಳಾದ ಅರ್ಥದಲ್ಲಿರುವೆ. ವಿಶ್ವೇಶ್ವರನು ವಿಶ್ವಾತ್ಮನು ವಿಶ್ವಕರ್ಮಕರನು ವಿಶ್ವಭುಕ್ಕು ವಿಶ್ವವಾಯು, ವಿಶ್ವಕ್ರೀಡಾರತಿಯು ನೀನೇ. ಪ್ರಭುವಾದ ನಿನಗೆ ನಮಸ್ಕಾರ. ಶಾಂತಾತ್ಮನು, ಗುಹ್ಯತಮನು, ಅಚಿಂತ್ಯನು ಅಪ್ರಮೇಯನು, ಅನಾದಿನಿಧನನೂ ಆದ ನಿನಗೆ ನಮಸ್ಕಾರ.

**ಮಂ.ಶ್ಲೋ॥ ತಮೋ ವಾ ಇದಮೇಕಮಾಸ, ತತ್ಪಶ್ಚಾತ್ತತ್ಪರೇಣೇರಿತಂ ವಿಷಯತ್ವಂ ಪ್ರಯಾತ್ಯೇತದ್ವೈ ರಜಸೋ ರೂಪಂ । ತದ್ರಜಃ ಖಲ್ವೀರಿತಂ ವಿಷಯತ್ವಂ ಪ್ರಯಾತ್ಯೇತದ್ವೈ ತಮಸೋ ರೂಪಂ । ತತ್ತಮಃ ಖಲ್ವೀರಿತಂ ತಮಸಸ್ಸಂಪ್ರಾಸ್ರವತ್ಯೇತದ್ವೈ ಸತ್ತ್ವಸ್ಯರೂಪಂ। ತತ್ಸತ್ತ್ವ-ಮೇವೇರಿತಂ ತತೋ ರಸಃ ಸಂಪ್ರಾಸ್ರವತ್ಸೋಂऽಶೋऽಯಂ ಯಶ್ಚೇತನ ಮಾತ್ರಃ । ಪ್ರತಿಪೂರುಷಂ ಕ್ಷೇತ್ರಜ್ಞಸಙ್ಕಲ್ಪಾಧ್ಯವಸಾಯಾಭಿಮಾನಲಿಂಗಃ ಪ್ರಜಾಪತಿಸ್ತಸ್ಯ ಪ್ರೋಕ್ತಾ ಅಗ್ರ್ಯಾಸ್ತನವೋ ಬ್ರಹ್ಮಾರುದ್ರೋ ವಿಷ್ಣುರಿತ್ಯಥ ಯೋಹ ಖಲುವಾವಾಸ್ಯ ರಾಜಸೋಂऽಶೋऽಸೌ ಸ ಯೋऽಯಂ ಬ್ರಹ್ಮಾಥ ಯೋ ಹ ಖಲು ವಾವಾಸ್ಯ ತಾಮಸಾಂಶೋऽಸೌ ಸ ಯೋऽಯಂ ರುದ್ರೋऽಥ ಯೋಹ ಖಲು ವಾವಾಸ್ಯ ಸಾತ್ತ್ವಿಕಾಂಶೋऽಸೌ ಸಯೋऽಯಂ ವಿಷ್ಣುಸ್ಸವಾ ಏಷ ಏಕಧಾ ತ್ರಿಧಾ ಭೂತೋऽಷ್ಟಧೈಕಾದಶಧಾ ದ್ವಾದಶಧಾ ಪರಿಮಿತಧಾ ಚೋದ್ಭೂತ ಉದ್ಭೂತತ್ವಾದ್ಭೂತೇಷು ಚರತಿ ಪ್ರತಿಷ್ಠಾ ಸರ್ವಭೂತಾನಾಮಧಿಪತಿ-ರ್ಬಭೂವೇತ್ಯಸಾವಾತ್ಮಾಂತರ್ಬಹಿಶ್ಚಾಂತರ್ಬಹಿಶ್ಚ (5)**

ತಾ : ತಮಸ್ಸೊಂದೇ ಇದ್ದಿತು. (ಇತ್ತು) ಅದು ಮತ್ತೊಂದರಿಂದ ಪ್ರೇರೇಪಿಸಲ್ಪಟ್ಟ ವಿಷಯತ್ವವನ್ನು ಹೊಂದಿತು ಅದೇ ರಜಸ್ಸು. ಅದು ಪ್ರೇರೇಪಿತವಾಗಿ ತಮೋಗುಣವಾಯಿತು. ಆ ತಮಸ್ಸು ಪ್ರೇರೇಪಿತವಾಗಿ ಸತ್ತ್ವರೂಪವಾಯಿತು. ಆ ಸತ್ತ್ವವು ಪ್ರೇರೇಪಿತವಾಗಿ ರಸವಾಯಿತು ಅದೇ ಅಂಶ. ಅದೇ ಚೇತನವನ್ನು ಹೊಂದಿ ಪ್ರತಿ ಪುರುಷನಲ್ಲಿಯೂ ಸಂಕಲ್ಪ, ಅಧ್ಯವಸಾಯ, ಅಭಿಮಾನಗಳನ್ನು ಚಿಹ್ನೆಗಳಾಗಿ ಹೊಂದಿ ಕ್ಷೇತ್ರಜ್ಞವಾಯಿತು. ಪ್ರಥಮನು ಪ್ರಜಾಪತಿ. ಆತನ ಶ್ರೇಷ್ಠವಾದ ತನುಗಳೇ ಬ್ರಹ್ಮ, ವಿಷ್ಣು, ರುದ್ರರು. ಆತನ ರಾಜಸಾಂಶವೇ ಬ್ರಹ್ಮ ತಾಮಸಾಂಶವೇ ರುದ್ರ ಸಾತ್ವಾಕಾಂಶವೇ ವಿಷ್ಣು. ಆತನೇ ಒಂದೇ ವಿಧವಾಗಿ, ಮೂರು ವಿಧಗಳಾಗಿ, ಎಂಟು ವಿಧಗಳಾಗಿ, ಹನ್ನೊಂದು ವಿಧಗಳಾಗಿ, ಹನ್ನೆರೆಡು ವಿಧಗಳಾಗಿ, ಅಪರಿಮಿತ ವಿಧಗಳಾಗಿರುವ, ಉದ್ಭೂತನಾದುದರಿಂದ ಭೂತಗಳಲ್ಲಿ ಚರಿಸುತ್ತಿದ್ದಾನೆ ಸರ್ವ ಭೂತಗಳಿಗೂ ಅಧಿಪತಿಯಾದವನು. ಹೀಗೆ ಆತ್ಮವಾಗಿ ಒಳಗೆ ಹೊರಗೆ ಎಲ್ಲೆಡೆ ಇದ್ದಾನೆ.

# ಪಂಚಮ ಪ್ರಪಾಠಕ

ಮಂ.ಶ್ಲೋ॥ ದ್ವಿಧಾ ವಾ ಏಷ ಆತ್ಮಾನಂ ಬಿಭರ್ತ್ಯಯಂ ಯಃ ಪ್ರಾಣೋ ಯಶ್ಚಾಸಾವಾದಿತ್ಯೋಽಥ ದ್ವೌ ವಾ ಏತಾವಾಸ್ತಾಂ ಪಂಚಧಾ ನಾಮಾಂತರ್ಬಹಿಶ್ಚಾಹೋರಾತ್ರೇ ತೌ ವ್ಯಾವರ್ತತೇ ಅಸೌ ವಾ ಆದಿತ್ಯೋ ಬಹಿರಾತ್ಮಾಂತರಾತ್ಮಾ ಪ್ರಾಣೋ ಬಹಿರಾತ್ಮಾಗತ್ಯಾಂತರಾತ್ಮಾನಾನುಮೀ-ಯತೇ, ಗತಿರಿತ್ಯೇವಂ ಹ್ಯಾಹ ಯಃ ಕಶ್ಚಿದ್ವಿದ್ವಾನಪಹತಪಾಪ್ಮಾಽಧ್ಯಕ್ಷೋಽವದಾತ ಮನಾ-ಸ್ತನ್ನಿಷ್ಠ ಆವೃತ್ತಚಕ್ಷುಸ್ಸೋಽಂತರಾತ್ಮಾಽಗತ್ಯ ಬಹಿರಾತ್ಮನೋಽನುಮೀಯತೇ ಗತಿರಿತ್ಯೇವಂ ಹ್ಯಾಹೋಽಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ಯಃ ಪಶ್ಯತಿ ಮಾಂ ಹಿರಣ್ಯವತ್ಸ ಏಷೋಽಂತರೇ ಹೃತ್ಪುಷ್ಕರ ಏವಾಶ್ರಿತೋಽನ್ನಮತ್ತಿ (1)

ತಾ : ಈತನು ತನ್ನನ್ನು ಎರಡು ವಿಧಗಳಾಗಿ ಭರಿಸುತ್ತಿರುವನು, ಪ್ರಾಣ, ಆದಿತ್ಯ ಎಂದು. ಈ ಎರಡೂ ಐದು ವಿಧಗಳಾದಂತಹುವುಗಳು. ಅಹಸ್ಸು, ರಾತ್ರಿ, ಸೂರ್ಯನ ಬಹಿರಾತ್ಮ, ಅಂತರಾತ್ಮಗಳು. ಪ್ರಾಣವು ಬಹಿರಾತ್ಮ ಗತಿಯಿಂದ ಅಂತರಾತ್ಮವೆಂದು ಊಹಿಸಲಾಗುತ್ತಿದೆ. ಒಬ್ಬಾನೊಬ್ಬ ವಿದ್ವಾಂಸನು ಪಾಪವಿಲ್ಲದವನು, ಅಧ್ಯಕ್ಷನು, ಸ್ವಚ್ಛವಾದ ಮನಸ್ಸುಳ್ಳವನು, ಅದನ್ನೇ ನಿಷ್ಠೆಯಾಗುಳ್ಳವನು, ಆವೃತ್ತಚಕ್ಷು-ವಾಗಿ ಅಂತರಾತ್ಮನಾಗಿ ಬಹಿರಾತ್ಮದ ಗತಿಯನ್ನು ಊಹಿಸುವನು ಆದಿತ್ಯನಲ್ಲಿ ಹಿರಣ್ಮಯ ಪುರುಷನು ನನ್ನನ್ನು ಹಿರಣ್ಮಯದಂತೆ ನೋಡುವವನು, ಆತನೇ ಹೃತ್ಪುಷ್ಕ (ಕಮಲ) ವನ್ನಾಶ್ರಯಿಸಿ ಅನ್ನವನ್ನು ಭುಜಿಸುತ್ತಿರುವನು.

ಮಂ.ಶ್ಲೋ॥ ಅಥ ಯ ಏಷೋಽಂತರೇ ಹೃತ್ಪುಷ್ಕರ ಏವಾಶ್ರಿತೋಽನ್ನಮತ್ತಿ ಸ ಏಷೋಽಗ್ನಿರ್ದಿವಿಶ್ರಿತ ಸ್ಸೌರಃ ಕಾಲಾಖ್ಯೋಽದೃಶ್ಯಸ್ಸರ್ವಭೂತಾನ್ನಮತ್ತಿ ಕಃ ಪುಷ್ಕರಃ ಕಿಮಯಂ ವೇದಂ ವಾವ ತತ್ಪುಷ್ಕರಂ ಯೋಽಯಮಾಕಾಶೋಽಸ್ಯೇಮಾಶ್ಚತಸ್ರೋ ದಿಶಶ್ಚತಸ್ರ ಉಪದಿಶಸ್ಸಂಸ್ಥಾ ಅಯಮರ್ವಾಗಗ್ನಿಃ ಪರತ ಏತೌ ಪ್ರಾಣಾದಿತ್ಯಾವೇತಾವುಪಾಸಿತೋಮಿತ್ಯಕ್ಷರೇಣ ವ್ಯಾಹೃತೀಭಿಸ್ಸಾವಿತ್ರ್ಯಾ ಚೇತಿ (2)

ತಾ : ಯಾರು ಒಳಗಡೆ ಹೃತ್ಕಮಲವನ್ನಾಶ್ರಯಿಸಿ ಅನ್ನಭೋಕ್ತನಾಗಿರುವನೋ ಆತನೇ ಅಗ್ನಿ. ಆಕಾಶವನ್ನಾಶ್ರಯಿಸಿ ಸೂರ್ಯನು ಕಾಲವೆನ್ನುವ ಹೆಸರನ್ನು ಹೊಂದಿ, ಅದೃಶ್ಯನಾಗಿ ಸರ್ವಭೂತಾನ್ನವನ್ನು ಭುಜಿಸುತ್ತಿದ್ದಾನೆ. ಆ ಪುಷ್ಕರವ್ಯಾವುದು? ಆಕಾಶವೇ ಪುಷ್ಕರ, ಈ ದಿಕ್ಕುಗಳು ನಾಲ್ಕು. ದಿಕ್ಕುಗಳೊಂದು ಸಂಸ್ಥೆ ಕೆಳಗಿನದು ಅಗ್ನಿ, ಪರತ್ರವಿರುವುದು ಪ್ರಾಣ ಮತ್ತು ಆದಿತ್ಯರು. ಇವನ್ನು ಉಪಾಸಿಸಬೇಕು. ಓಂ ಎನ್ನುವ ಅಕ್ಷರದೊಂದಿಗೆ ವ್ಯಾಹೃತಗಳು ಭೂಃ ಭುವಃ ಸುವಃ ಎನ್ನುವುದರಿಂದಲೂ ಸಾವಿತ್ರಿಯೊಂದಿಗೆ ಗಾಯತ್ರಿಯೊಂದಿಗೆ ಉಪಾಸಿಸಬಹುದು.

ಮಂ.ಶ್ಲೋ॥ ದ್ವೇವಾವ ಬ್ರಹ್ಮಣೋ ರೂಪೇ ಮೂರ್ತಂಚಾಮೂರ್ತಂ ಚಾಥ ಯನ್ಮೂರ್ತಂ ತದಸತ್ಯಂ ಯದಮೂರ್ತಂ ತತ್ಸತ್ಯಂ ತದ್ಬ್ರಹ್ಮ ಯದ್ಬ್ರಹ್ಮ ತಜ್ಜ್ಯೋತಿರ್ಯಜ್ಜ್ಯೋತಿಸ್ಸ ಆದಿತ್ಯಸ್ಸವಾ ಏಷ ಓಮಿತ್ಯೇತದಾತ್ಮಾ ತ್ರೇಧಾತ್ಮಾನಂ ವ್ಯಕುರುತ ಓಮಿತಿ ತಿಸ್ರೋ ಮಾತ್ರಾ ಏತಾಭಿಸ್ಸರ್ವ

-ಮಿದಮೋತಂ ಪ್ರೋತಂ ಚೈವಾಸ್ಮಿನ್ನಿತ್ಯೇವಂ ಹ್ಯಾಹೈ ತದ್ವಾ ಆದಿತ್ಯ ಓಮಿತ್ಯೇವಂ ಧ್ಯಾಯಮಂಸ್ತಥಾಽಽತ್ಮಾನಂ ಯುಂಜೀಽತೇತಿ (3)

ತಾ : ಬ್ರಹ್ಮನಿಗೆ ಮೂರ್ತ, ಅಮೂರ್ತವೆನ್ನುವ ಎರಡು ರೂಪಗಳಿವೆ. ಮೂರ್ತವಾದುದು ಮೂರ್ತಿಯುಳ್ಳದ್ದು ಅಸತ್ಯವಾದುದು. ಅಮೂರ್ತವಾದುದು ಸತ್ಯವಾದುದು. ಅದೇ ಬ್ರಹ್ಮ, ಅದೇ ಜ್ಯೋತಿ, ಅದೇ ಆದಿತ್ಯ, ಆತನೇ ಓಂ ಎಂದು ಆತ್ಮವುಳ್ಳವನು. ತನ್ನನ್ನು ಮೂರಾಗಿ ವಿಭಜಿಸಿದ ಓಂ ಎನ್ನುವುದು ಮೂರು ಮಾತ್ರೆಗಳು. ಇವುಗಳೊಂದಿಗೇ ಜಗತ್ತೆಲ್ಲವೂ ಓತಪ್ರೋತವಾಗಿರುವುದು. ಆದರೆ ಆದಿತ್ಯನನ್ನು ಓಂ ಎಂದು ಧ್ಯಾನಿಸುತ್ತಾ ಆತ್ಮನನ್ನು ಸೇರಬೇಕು.

ಮಂ.ಶ್ಲೋ|| ಅಥಾನ್ಯತ್ರಾಪ್ಯುಕ್ತಮಿಥ ಖಲು ಯ ಉದ್ಗೀಥ ಸ್ಸ ಪ್ರಣವೋ ಯಃ ಪ್ರಣವ ಸ್ಸ ಉದ್ಗೀಥ ಇತ್ಯಸಾವಾದಿತ್ಯ ಉದ್ಗೀಥ ಏಷ ಪ್ರಣವ ಇತ್ಯೇವಂ ಹ್ಯಾಹೋದ್ಗೀಥಃ ಪ್ರಣವಾಖ್ಯಂ ಪ್ರಣೇತಾರಂ ನಾಮರೂಪಂ ವಿಗತನಿದ್ರಂ ವಿಜರಮವಿಮೃತ್ಯುಂ ಪುನಃ ಪಂಚಧಾ ಜ್ಞೇಯಂ ನಿಹಿತಂ ಗುಹಾಯಾಮಿತ್ಯೇವಂ ಹ್ಯಾಹೋರ್ಧ್ವಮೂಲಂ ವಾ ಆಬ್ರಹ್ಮಶಾಖಾ ಆಕಾಶ ವಾಯಗ್ವಗ್ನ್ಯುದಕ ಭೂಮ್ಯಾದಯ ಏಕೇನಾತ್ತಮೇತದ್ಬ್ರಹ್ಮ ತತ್ತಸ್ಯೈ ತತ್ತೇ ಯದಸಾ-ವಾದಿತ್ಯ ಓಮಿತ್ಯೇತದಕ್ಷರಸ್ಯ ಚೈತತ್ತಸ್ಮಾದೋಮಿತ್ಯನೇನೈತದುಪಾಸೀತಾಜಸ್ರ-ಮಿತ್ಯೇಕೋಽರಸಂ ಬೋಧಯೀತ ಇತ್ಯೇವಂ ಹ್ಯಾಹೈತದೇವಾಕ್ಷರಂ ಪುಣ್ಯಮೇತ-ದೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ (4)

ತಾ : ಉದ್ಗೀಥವೇ ಪ್ರಣವ. ಪ್ರಣವವೇ ಉದ್ಗೀಥ. ಈ ಆದಿತ್ಯನೇ ಉದ್ಗೀಥ. ಆತನೇ ಪ್ರಣವ. ಪ್ರಣವಾಖ್ಯನನ್ನು ಪ್ರಣೀತನನ್ನು ನಾಮರೂಪನೆಂದು, ನಿದ್ರೆಯಿಲ್ಲದವನೆಂದು ಜರೇ (ಮುಪ್ಪು) ಇಲ್ಲದವನೆಂದು, ಮೃತ್ಯುವಿಲ್ಲದವನೆಂದು, ಶರೀರದಲ್ಲಿರುವವನೆಂದು ಐದು ವಿಧಗಳಾಗಿ ಜ್ಞೇಯನೆಂದು ಹೇಳುವರು. ಊರ್ಧ್ವಮೂಲನು-ಆಕಾಶ, ವಾಯು ಅಗ್ನಿ, ಉದಕ, ಭೂಮಿ ರೂಪಗಳಲ್ಲಿರುವವನು. ಆತನೇ ಬ್ರಹ್ಮ. ಓಂ ಎನ್ನುವ ಅಕ್ಷರ ರೂಪವೇ ಆದಿತ್ಯ. ಆದುದರಿಂದ ಓಂ ಎಂದೇ ಯಾವಾಗಲೂ ಉಪಾಸಿಸಬೇಕು. ಈ ರಸವನ್ನು ತಿಳಿದುಕೊಳ್ಳಬೇಕು. ಪುಣ್ಯಕರವಾದ ಈ ಅಕ್ಷರವನ್ನು ತಿಳಿದುಕೊಂಡಲ್ಲಿ ಯಾರು ಯಾವುದನ್ನು ಕೋರಿಕೊಳ್ಳುವರೋ ಅದು ಲಭಿಸುವುದು.

ಮಂ.ಶ್ಲೋ|| ಅಥಾನ್ಯತ್ರಾಪ್ಯುಕ್ತಂ ಸ್ವನಯತ್ಯೇಷಾಸ್ಯ ತನೂರ್ಯಾ ಓಮಿತಿ ಸ್ತ್ರೀಪುನ್ನಪುಂಸಕಮಿತಿ ಲಿಂಗವತ್ಯೇಷಾಥಾಗ್ನಿರ್ವಾಯುರಾದಿತ್ಯ ಇತಿಭಾಸ್ವತ್ಯೇಷಾಥ ಬ್ರಹ್ಮ ರುದ್ರೋ ವಿಷ್ಣುರಿತ್ಯಧಿ-ಪತಿರಿತ್ಯೇಷಾಥ ಗಾರ್ಹಪತ್ಯೋ ದಕ್ಷಿಣಾಗ್ನಿರಾಹವನೀಯ ಇತಿ ಮುಖವತ್ಯೇಷಾಥ ಋಗ್ಯಜುಸ್ಸಾಮೇತಿ ವಿಜಾನಾತ್ಯೇಷಾಥ ಭೂರ್ಭುವಸ್ಸರಿತಿ ಲೋಕವತ್ಯೇಷಾಥ ಭೂತಂ ಭವ್ಯಂ ಭವಿಷ್ಯದಿತಿ ಕಾಲವತ್ಯೇಷಾಥ ಪ್ರಾಣೋಽಗ್ನಿಸ್ಸೂರ್ಯ ಇತಿ ಪ್ರತಾಪವತ್ಯೇಷಾಥಾನ್ನ-ಮಾಪಶ್ಚಂದ್ರಮಾ ಇತ್ಯಾಪ್ಯಾಯನವತ್ಯೇಷಾಥ ಬುದ್ಧಿರ್ಮನೋಽಹಂಕಾರ ಇತಿ ಚೇತನ-ವತ್ಯೇಷಾಥ ಪ್ರಾಣೋಽಪಾನೋ ವ್ಯಾನ ಇತಿ ಪ್ರಾಣವತ್ಯೇಕೇ ತ್ಯಜಾಮಿತ್ಯುಕ್ತೈತಾಹ ಹ

**ಪ್ರಸ್ತೋತಾರ್ಪಿತಾ ಭವತೀತ್ಯೇವಂ ಹ್ಯಾಹೈತದ್ವೈ ಸತ್ಯಕಾಮಪರಂ ಚಾಪರಂಚ ಯದೋಮಿ -ತ್ಯೇತದಕ್ಷರಮಿತಿ (೫)**

ತಾ : ಓಂ ಎನ್ನುವುದು ಈತನ ತನುವೆಂದು ಘೋಷಿಸುತ್ತಿದೆ. ಇದು ಸ್ತ್ರೀ ಪುರುಷ ನಪುಂಸಕ (ವೆಂದು) ವೆನ್ನುವ ಲಿಂಗವತಿ. ಅಗ್ನಿ, ವಾಯು, ಆದಿತ್ಯವೆನ್ನುವ ಭಾಸ್ವತಿ (ಕಾಂತಿಯುಳ್ಳದ್ದು ಬ್ರಹ್ಮ ರುದ್ರ ವಿಷ್ಣು ಎನ್ನುವ ಅಧಿಪತಿ. ಗಾರ್ಹಪತ್ಯ, ದಕ್ಷಿಣಾಗ್ನಿ ಆವಹನೀಯವೆನ್ನುವಂತಹ ಮುಖವತಿ. (ಮುಖವುಳ್ಳದ್ದು) ಋಕ್ಕು, ಯಜುಸ್ಸು, ಸಾಮ, ಎನ್ನುವಂತಹ ಜ್ಞಾನವತಿ. ಭೂಃ, ಭುವಃ, ಸುವಃ ಎನ್ನುವ ಲೋಕವತಿ ಭೂತ, ಭವ್ಯ (ವರ್ತಮಾನ) ಭವಿಷ್ಯತ್ತು ಎನ್ನುವ ಕಾಲವತಿ. (ಪ್ರಾಣ, ಅಗ್ನಿ, ಸೂರ್ಯ ಎನ್ನುವ ಪ್ರತಾಪತಿ; ಅನ್ನ, ನೀರು, ಚಂದ್ರ ಎನ್ನುವ ಅಪ್ಯಾಯನವತಿ. ಬುದ್ಧಿ ಮನಸ್ಸು ಅಹಂಕಾರವೆನ್ನುವ ಚೇತನವತಿ; ಪ್ರಾಣ, ಅಪಾನ, ವ್ಯಾನ ಎನ್ನುವ ಪ್ರಾಣವತಿ. ಅದು ಒಂದೇ ಪ್ರಸ್ತೋತ ಅರ್ಪಿತವಾಗುತ್ತಿದೆ. ಈ ಓಂ ಎನ್ನುವ ಅಕ್ಷರವು ಸತ್ಯ ಕಾಮಪರವು ಅಪರವು ಕೂಡಾ.

ಮಂ.ಶ್ಲೋ|| **ಅಥ ವ್ಯಾತ್ತಂ ವಾ ಇದ ಮಾಸೀತ್ಸತ್ಯಂ ಪ್ರಜಾಪತಿಸ್ತಪಸ್ತಪ್ತ್ವಾ ಅನುವ್ಯಾಹರದ್ಭೂರ್ಭುವ- ಸ್ವರಿತ್ಯೇಷಾ ಹಾಥ ಪ್ರಜಾಪತೇಸ್ಸ್ಥವಿಷ್ಠಾ ತನೂರ್ವಾ ಲೋಕವತೀತಿ ಸ್ವರಿತ್ಯಸ್ಯಾಃ ಶಿರೋ ನಾಭಿರ್ಭುವೋ ಭೂಃ ಪಾದಾ ಆದಿತ್ಯಶ್ಚಕ್ಷುರಾಯತ್ತಃ ಪುರುಷಸ್ಯ ಮಹತೋ ಮಾತ್ರಾಶ್ಚಕ್ಷುಷಾ ಹ್ಯಯಂ ಮಾತ್ರಾಶ್ಚರತಿ ಸತ್ಯಂ ವೈ ಚಕ್ಷುರಕ್ಷಿಣ್ಯುಪಸ್ಥಿತೋಽಹಿ ಪುರುಷಸ್ಸರ್ವಾರ್ಥೇಷು ವದ -ತ್ಯೇತಸ್ಮಾದ್ಭೂರ್ಭುವ ಸ್ವರಿತ್ಯುಪಾಸೀತಾನ್ನಂ ಹಿ ಪ್ರಜಾಪತಿರ್ವಿಶ್ವಾತ್ಮಾ ವಿಶ್ವಚಕ್ಷು- ರಿವೋಪಾಸಿತೋ ಭವತೀತ್ಯೇವಂ ಹ್ಯಾಹೈಷಾ ವೈ ಪ್ರಜಾಪತಿರ್ವಿಶ್ವಭೃತ್ತನೂರೇತಸ್ಯಾ- ಮಿದಂ ಸರ್ವಮಂತರ್ಹಿತಮಸ್ಮಿಂಶ್ಚ ಸರ್ವಸ್ಮಿನ್ನೇಷಾಂತರ್ಹಿತೇತಿ ತಸ್ಮಾದೇಷೋಪಾಸೀತೇತಿ (6)**

ತಾ : ಪ್ರಜಾಪತಿ ತಪಸ್ಸು ಮಾಡಿ ಭೂರ್ಭುವಸ್ವಃ ಎಂದು ನುಡಿದ ಅದೇ ಪ್ರಜಾಪತಿಯ ಲೋಕಪತಿಯಾದ ದೊಡ್ಡ ತನುವು. ಸ್ವರ್ಲೋಕವು ಶಿರಸ್ಸು. ಭುವರ್ಲೋಕವು ನಾಭಿ. ಭೂಲೋಕವು ಪಾದಗಳು, ಆದಿತ್ಯನು ಚಕ್ಷುಗಳಾದ ಆ ಮಹತ್ಪುರುಷನಿಗೆ ಚಷುಸ್ಸಿನಿಂದಲೇ ಮಾತ್ರಗಳು ಈತನು ಮಾತ್ರಗಳಾಗಿಚರಿಸುವನು ಸತ್ವವೇ ಕಣ್ಣುಗಳು, ಕಣ್ಣುಗಳಲ್ಲಿರುವ ಸ್ಥಿತನೇ ಪುರುಷ. ಸರ್ವಾರ್ಥಗಳಲ್ಲಿ ನುಡಿಯುವನು. ಆದ್ದರಿಂದ ಭೂರ್ಭುವಸ್ವಃ ಎಂದು ಉಪಾಸಿಸಬೇಕು. ಅನ್ನವೇ ಪ್ರಜಾಪತಿ ವಿಶ್ವಾತ್ಮ ವಿಶ್ವಷಕ್ಷುವಾಗಿ ಉಪಾಸಿಸುವಂತಹವನಾಗುವನು. ಇದೇ ಪ್ರಜಾಪತಿಯ ವಿಶ್ವಭೃತ್ತವಾದ ಶರೀರ ಇದರಲ್ಲೇ ವಿಶ್ವವೆಲ್ಲವೂ ಅಂತರ್ಹಿತವಾಗಿದೆ. ಪ್ರಪಂಚದಲ್ಲೆಲ್ಲೂ ಈ ಶರೀರ ಅಂತರ್ಹಿತವಾಗಿದೆ. ಆದ್ದರಿಂದ ಈ ಶರೀರವನ್ನು ಉಪಾಸಿಸಬೇಕು.

ಮಂ.ಶ್ಲೋ|| **ತತ್ಸವಿತುರ್ವರೇಣ್ಯಮಿತ್ಯಸೌ ವಾ ಆದಿತ್ಯಸ್ಸವಿತಾ ಸವಾ ಏವಂ ಪ್ರವರಣಾಯ ಆತ್ಮ- ಕಾಮೇನೇತ್ಯಾಹುರ್ಬ್ರಹ್ಮವಾದಿನೋಽಥ ಭರ್ಗೋದೇವಸ್ಯ ಧೀಮಹೀತಿ ಸವಿತಾ ವೈ ತೇಽವಸ್ಥಿ -ತಾಯೋಽಸ್ಯ ಭರ್ಗಃ ಕಂ ಸಂಚಿಂತಯಾಮಿತ್ಯಾಹುರ್ಬ್ರಹ್ಮವಾದಿನೋಽಥ ಧಿಯೋ ಯೋನಃ ಪ್ರಚೋದಯಾದಿತಿ ಬುದ್ಧಯೋ ವೈ ಧಿಯಸ್ತಾಯೋಽಸ್ಮಾಕಂ ಪ್ರಚೋದಯಾದಿತ್ಯಾಹು**

-ರ್ಬ್ರಹ್ಮವಾದಿನೋಽಥ ಭರ್ಗ ಇತಿ ಯೋಹವಾ ಅಸ್ಮಿನ್ನಾದಿತ್ಯೇ ನಿಹಿತಸ್ತಾರಕೇಽಕ್ಷಿಣಿ ಚೈಷ ಭರ್ಗಾಖ್ಯೋ ಭಾಭಿರ್ಗತಿರಸ್ಯ ಹೀತಿ ಭರ್ಗೋ ಭರ್ಜತಿ ವೈಷ ಭರ್ಗ ಇತಿ ರುದ್ರೋ ಬ್ರಹ್ಮವಾದಿ-ನೋಽಥ ಭರ್ಗ ಇತಿ ಭಾಸಯತೀಮಾನ್ಲೋಕಾನಿತಿ ರಂಜಯತೀಮಾನಿ ಭೂತಾನಿ ಗಚ್ಛತ ಇತಿ ಗಚ್ಛತ್ಯಸ್ಮಿನ್ನಾಗಚ್ಛತ್ಯಸ್ಯಾ ಇಮಾಸ್ತಸ್ಮಾದ್ಧಾರಕತ್ವಾದ್ಧರಗಶ್ಶತ್ರೂಂತ್ರೂಯಮಾನತ್ವಾ-ತ್ಸೂರ್ಯಸ್ಸವನಾತ್ಸವಿತಾದಾನಾದಾದಿತ್ಯಃ ಪವನಾತ್ಪಾವಮಾನೋಽಥಾ ಯೋಽಥಾಯನಾ-ದಾದಿತ್ಯ ಇತ್ಯೇವಂ ಹ್ಯಾಹ ಖಲ್ವಾತ್ಮನಾತ್ಮಾಽಮೃತಾಖ್ಯ ಶ್ಚೇತಾಮಂತಾ ಗಂತಾ ಸ್ರಷ್ಟಾಽಽ-ನಂದಯಿತಾ ಕರ್ತಾ ವಕ್ತಾ ರಸಯಿತಾ ಘ್ರಾತಾ ಸ್ಪರ್ಶಯಿತಾವ ವಿಭು ವಿಗ್ರಹೇ ಸನ್ನಿವಿಷ್ಟಾ ಇತ್ಯೇವಂ ಹ್ಯಾಹಾಥ ಯತ್ರ ದ್ವೈತೀಭೂತಂ ವಿಜ್ಞಾನಂ ತತ್ರ ಹಿ ಶೃಣೋತಿ ಪಶ್ಯತಿ ಜಿಘ್ರತೀತಿ ರಸಯತೇ ಚೈವ ಸ್ಪರ್ಶಯತಿ ಸರ್ವಮಾತ್ಮಾ ಜಾನೀತೇತಿ ಯತ್ರಾದ್ವೈತೀಭೂತಂ ವಿಜ್ಞಾನಂ ಕಾರ್ಯಕಾರಣನಿರ್ಮುಕ್ತಂ ನಿರ್ವಚನಮನೌಪಮ್ಯಂ ನಿರುಪಾಖ್ಯಂ ಕಿಂ ತದಂಗ ವಾಚ್ಯಮ್ (7)

ತಾ : ಬ್ರಹ್ಮವಾದಿಗಳು ತತ್ಸವಿತುರ್ವರೇಣ್ಯಂ ಎಂದಿರುವುದು ಆದಿತ್ಯನನ್ನು ಕುರಿತು. ಆದಿತ್ಯನು ಸವಿತ. ಆತನೇ ಆತ್ಮಕಾಮನಾಗಿ ಪ್ರವರಣದಲ್ಲಿ ಇರುವಂತಹವನು. ಇನ್ನು ಭರ್ಗೋದೇವಸ್ಯಧೀಮಹಿ ಎಂದು ಸವಿತ. ಈತನಿಗೆ ಭರ್ಗನು ಯಾರೆಂದು ನೆನಪಿಸುತ್ತಿದ್ದಾನೆ. ಮುಂದೆ ಧಿಯೋಯೋನ ಪ್ರಚೋದಯಾತ್ ಎಂದು ಧಿಯಃ ಎಂದರೆ ಬುದ್ಧಿ, ಅದು ನಮ್ಮನ್ನು ಪ್ರೇರೇಪಿಸುವಂತಾಗಲಿ ಎಂದರು. ಭರ್ಗ ಎಂದರೆ ಆದಿತ್ಯನಲ್ಲಿ ಕಣ್ಣಲ್ಲಿ ಕಣ್ಣು ಪಾಪೆಯಂತಿರುವುದು. ಭರ್ಗನೆಂದರೆ ಕಿರಣ-ಗಳಿಂದ ಗಮನವನ್ನು ಹೊಂದಿರುವವನೆಂದು ಭಯ ಹುಟ್ಟಿಸುವನಾದ್ದರಿಂದ ಭರ್ಗನೆಂದು, ರುದ್ರನೆಂದು; ಆತ ಈ ಲೋಕಗಳನ್ನು ಪ್ರಕಾಶಗೊಳಿಸುವವನು ರಂಜಿಸುವವನು, ಈ ಭೂತಗಳು ಹೋಗಿ ಈತನಲ್ಲಿ ಲೀನವಾಗುತ್ತಿದೆಯೆಂದು ಪ್ರಜಲಿತನಿಗಾಗಿ ಬರುತ್ತಿರುವರೆಂದು, ಭಾರವುಳ್ಳವ-ನಾದ್ದರಿಂದ ಭರ್ಗನೆಂದು ಹೆಸರು ಬಂದಿದೆ. ಶತ್ರುಗಳನ್ನು ಸಂಹರಿಸುವನಾದ್ದರಿಂದ ಸೂರ್ಯ ಪ್ರಜೆಗಳನ್ನು ಹೆರವುದರಿಂದ ಸವಿತ, ಆದಾನ(ಗ್ರಹಿಸುವುದು) ಮಾಡುವವನಾದ್ದರಿಂದ ಆದಿತ್ಯ, ಪವಿತ-ನನ್ನಾಗಿ ಮಾಡುವವನಾದ್ದರಿಂದ ಪಾವಮಾನ, ಆತ್ಮ ಅಮೃತನು ಚೇತ (ಜ್ಞಾನವನ್ನು ಹೊಂದಿರು-ವವನು) ಮಂತ (ಮಥನವನ್ನು ಮಾಡುವವನು) ಗಂತ (ಹೊಂದುವವನು) ಸ್ರಷ್ಟ, ಆನಂದಯಿತ, ಕರ್ತ, ವಕ್ತ, ರಸಯಿತ, ಘ್ರಾತ (ವಾಸನೆ ನೋಡುವವನು) ಸ್ಪರ್ಶಯಿತ, ಇವೆಲ್ಲವೂ ವಿಭುವಿಗ್ರಹದಲ್ಲಿ ಸನ್ನಿವಿಷ್ಟವಾಗಿವೆ. ಎರಡಾಗಿ ತಿಳಿದುಕೊಂಡಾಗ ಕೇಳುತ್ತಿದ್ದಾನೆ. ಸ್ಪರ್ಶವನ್ನು ತಿಳಿಯುತ್ತಿದ್ದಾನೆ. ವಾಸನೆ ನೋಡುತ್ತಿದ್ದಾನೆ. ರುಚಿ ನೋಡುತ್ತಿದ್ದಾನೆ. ಎನ್ನುವ ಅದ್ವೈತವಾದ ವಿಜ್ಞಾನವು ಕಾರ್ಯಕಾರಣ ನಿರ್ಮುಕ್ತವಾಗಿ ಹೇಳಲಾಗದಂತಹುದಾಗಿ ಔಪಮ್ಯ ರಹಿತವಾಗಿ ಇದ್ದಾಗ ಅದನ್ನು ಏನನ್ನಬೇಕು? (ತತ್ಸವಿತುರ್ವರೇಣ್ಯಂ.. ಎನ್ನುವ ಮಂತ್ರವು ಸೂರ್ಯೋಪನಿಷತ್ 2ರಲ್ಲಿ ಕೂಡಾ ಇದೆ.)

ಮಂ.ಶ್ಲೋ॥ ಏಷ ಹಿ ಖಲ್ವಾತ್ಮೇಶಾನಶ್ಶಂಭುರ್ಭವೋ ರುದ್ರಃ ಪ್ರಜಾಪತಿರ್ವಿಶ್ವಸೃಡ್ಢಿರಣ್ಯಗರ್ಭಸ್ಸತ್ಯಂ ಪ್ರಾಣೋ ಹಂಸಶ್ಶಾಸ್ತಾ ವಿಷ್ಣುರ್ನಾರಾಯಣೋಽರ್ಕಸ್ಸವಿತಾ ದಾತಾ ಸಮ್ರಾಡಿಂದ್ರ ಇಂದುರಿತಿ ಯ

**ಏಷ ತಪತ್ಯಗ್ನಿನಾ ಪಿಹಿತಸ್ಸಹಸ್ರಾಕ್ಷೇಣ ಹಿರಣ್ಮಯೇನಾನಂದೇನೈಷ ವಾವ ವಿಜಿಜ್ಞಾಸಿ-ತವ್ಯೋಽನ್ವೇಷ್ಟವ್ಯಸ್ಸರ್ವಭೂತೇಭ್ಯೋಽಭಯಂ ದತ್ವಾರಣ್ಯಂ ಗತ್ವಾಥ ಬಹಿಃ ಕೃತೇಂದ್ರಿಯಾ-ರ್ಥಾನ್ ಸ್ವಶರೀರಾದುಪಲಭತೇಽಥೈನಮಿತಿ, ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಮ್, ಸಹಸ್ರರಶ್ಮಿಶ್ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ (೮)**

(ಮೈತ್ರಾಯಣ್ಯುಪನಿಷತ್ಸಮಾಪ್ತಾ)

ತಾ : ಈತನೇ ಆತ್ಮ, ಈಶಾನ, ಶಂಭು, ಭವ, ರುದ್ರ, ಪ್ರಜಾಪತಿ, ವಿಶ್ವಸ್ರಷ್ಟ, ಹಿರಣ್ಯಗರ್ಭ, ಸತ್ಯ, ಪ್ರಾಣ, ಹಂಸ, ಶಾಸ್ತ, ವಿಷ್ಣು, ನಾರಾಯಣ, ಅರ್ಕ, ಸವಿತ, ದಾತ, ಸಮ್ರಾಟ್, ಇಂದ್ರ, ಚಂದ್ರ, ಎಂದು ಹೇಳಲಾಗುತ್ತಿದೆ. ಈತನೇ ತಪಿಸುವಂತೆ ಮಾಡುವವನು, ಅಗ್ನಿಯಿಂದಲೂ, ಸಹಸ್ರಾಕ್ಷ-ನಿಂದಲೂ, ಹಿರಣ್ಮಯನಿಂದಲೂ ಮುಚ್ಚಲ್ಪಟ್ಟವನು. (ಆಚ್ಛಾದಿಸಿರುವಂತಹವನು) ಈತನೇ ಜಿಜ್ಞಾಸೆ ಮಾಡಲರ್ಹನು. ಅನ್ವೇಷಿಸತಕ್ಕವನು, ಸರ್ವ ಭೂತಗಳಿಗೂ ಅಭಯವಿತ್ತು ಅರಣ್ಯಕ್ಕೆ ಇಂದ್ರಿಯಾರ್ಥ-ಗಳನ್ನು ಬಹಿಷ್ಕರಿಸಿ ಸ್ವಶರೀರದಿಂದಲೇ ಈತನನ್ನು ಹೊಂದಲಾಗುವುದು. ವಿಶ್ವರೂಪನು, ಹರಿದ್ವರ್ಣವುಳ್ಳವನು, ಜಾತವೇದನು ಪರಾಯಣನು, ಏಕ ಜ್ಯೋತಿಯಾಗಿ ಬೆಳಗುವವನು ಸಹಸ್ರ ರಶ್ಮಿ ಶತವಿಧಗಳಾಗಿರುವವನು, ಪ್ರಜೆಗಳಿಗೆ ಪ್ರಾಣವಾಗಿ ಈ ಸೂರ್ಯ ಉದಯಿಸುತ್ತಿರುವನು.

ಶಾಂತಿ ಮಂತ್ರ|| **ಓಂ ಆಪ್ಯಾಯನ್ತು ಮಮಾಂಗಾನಿ, ವಾಕ್‌ಪ್ರಾಣಶ್ಚಕ್ಷುಶ್ಶ್ರೋತ್ರಮಥೋ ಬಲ ಮಿಂದ್ರಿಯಾಣಿಚ ಸರ್ವಾಣಿಃ; ಸರ್ವಂ ಬ್ರಹ್ಮೌಪನಿಷದಂ; ಮಾಹಂ ಬ್ರಹ್ಮ ನಿರಾಕುರ್ಯಾಂ; ಮಾಮಾ ಬ್ರಹ್ಮಾ ನಿರಾಕರೋತ್; ಅನಿರಾಕರಣಮಸ್ತ್ಯನಿರಾಕರಣಂ ಮೇಽಸ್ತು; ತದಾತ್ಮನಿ: ನಿರತೇ ಯ ಉಪನಿಷತ್ಸು ಧರ್ಮಾಃ ತೇ ಮಯಿ ಸಂತು ತೇ ಮಯಿ ಸಂತು. ಓಂ ಶಾಂತಿಃ ಶಾಂತಿಃ ಶಾಂತಿಃ**





# ಕೌಷೀತಕೀಬ್ರಾಹ್ಮಣೋಪನಿಷತ್ತು - 25

(ಋಗ್ವೇದಾಂತರ್ಗತ)

ಶಾಂತಿ ಮಂತ್ರ॥ ಓಂ ವಾಙ್ಮೇಮನಸಿ ಪ್ರತಿಷ್ಠಿತಾ - ಮನೋಃ ಮೇಃ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಅಣೀಸ್ಥಃ - ಶ್ರುತಂ ಮೇಃ ಮಾ ಪ್ರಹಾಸೀಃ ಅನೇನಾಧಿತೇನ ಅಹೋಃರಾತ್ರಾನ್ ಸಂದಧಾಮಿ - ಋತಂ ವದಿಷ್ಯಾಮಿ - ಸತ್ಯಂ ವದಿಷ್ಯಾಮಿ - ತನ್ಮಾಮವತು - ತದ್ವಕ್ತಾರಮವತು -ಅವತುಮಾಂ ಅವತು-ವಕ್ತಾರಂ. ಓಂ ಶಾಂತಿಃ ಶಾಂತಿಃ ಶಾಂತಿಃ

ಶ್ಲೋ॥ ಶ್ರೀಮತ್ಕೌಷಿತಕೀ ವಿದ್ಯಾ ವೇದ್ಯ ಪ್ರಜ್ಞಾ ಮಾತ್ರ ಪರಾಕ್ಷರಮ್ ।
ಪ್ರತಿಯೋಗಿ ವಿನಿರ್ಮುಕ್ತ ಬ್ರಹ್ಮಮಾತ್ರಂ ವಿಚಿನ್ತಯೇ ॥

## ಪ್ರಥಮೋಧ್ಯಾಯ

ಮಂ.ಶ್ಲೋ॥ ಓಂ ಚಿತ್ರೋಃ ಹವೈ ಗಾರ್ಗ್ಯಾಯಣಿರ್ಯಕ್ಷ್ಯಮಾಣ ಆರುಣಿಂ ವವ್ರೇ ಸಹಪುತ್ರಂ ಶ್ವೇತಕೇತುಂ ಪ್ರಹಿಣಾಯ । ಯಾಜಯೇತಿ ತಂ ಹಾಸೀನಂ ಪಪ್ರಚ್ಛ ಗೌತಮಸ್ಯ ಪುತ್ರಾಸ್ತೇ ಸಂವೃತಂ ಲೋಕೇ ಯಸ್ಮಿನ್ನಾಧಾಸ್ಯಸ್ಯನ್ ಮಹೋಬುದ್ಧ್ವೋರ್ಧ್ವಲೋಕೇ ಧಾಸ್ಯಸೀತಿ । ಸಹೋವಾಚ ನಾಹಮೇತದ್ವೇದ ಹಂತಾಚಾರ್ಯಂ ಪ್ರಚ್ಛಾನೀತಿ ಸಹ ಪಿತರಮಾಸಾದ್ಯ ಪಪ್ರಚ್ಛೇತೀತಿ ಮಾಪ್ರಾಕ್ಷೀತ್ಕಥಂ ಬ್ರುವಾಣೇತಿ ಸಹೋವಾಚಾಹಮಪ್ಯೇತನ್ನ ವೇದ । ಸದಸ್ಯೇವ ವಯಂ ಸ್ವಾಧ್ಯಾಯಮಧೀತ್ಯ ಹರಾಮಹೇ ಯನ್ನಃ ಪರೇ ದದತ್ಯೇಹ್ಯುಭೌ ಗಮಯಿಷ್ಯಾವ ಇತಿ । ಸಹ ಸಮಿತ್ಪಾಣಿಶ್ಚಿತ್ರಂ ಗಾರ್ಗ್ಯಾಯಣಿಂ ಪ್ರತಿಚಕ್ರಾಮೋಪಾಯಾನೀತಿ ತಂ ಹೋವಾಚ । ಬ್ರಹ್ಮೋರ್ಘೋಽಸಿ ಗೌತಮ ಯೋಃ ಮಾಮುಪಾ ಗಾ ದೇಹಿ ತ್ವಾ ಜ್ಞಪಯಿಷ್ಯಾಮೀತಿ ॥ (1)

ತಾ : ಚಿತ್ರನೆಂಬ ಹೆಸರಿನ ಗಾರ್ಗ್ಯಾಯಣಿ ಮುನಿಯು ಒಂದು ಯಜ್ಞ ಮಾಡಲು ಸಂಕಲ್ಪಿಸಿ, ಆರುಣಿಯೆನ್ನುವ ಮಹರ್ಷಿಯ ಬಳಿಗೆ ಬಂದು ಪ್ರಾರ್ಥಿಸಿದ. ಆರುಣಿ ಮಹರ್ಷಿ ತನ್ನ ಜೊತೆಯಲ್ಲಿದ್ದ ತನ್ನ ಪುತ್ರನಾದ ಶ್ವೇತಕೇತುವನ್ನು ಆ ಯಜ್ಞವನ್ನು ನಿರ್ವಹಿಸಬೇಕೆಂದು ಆಜ್ಞಾಪಿಸಿದ. ಆಗ ಗಾರ್ಗ್ಯಾಯಣಿ ಮುನಿಯು "ಓ ಗೌತಮ ಪುತ್ರಾ! ಶ್ವೇತಕೇತುವೆ! ಊರ್ಧ್ವಲೋಕಕ್ಕೆ ನನ್ನನ್ನು ಕಳುಹಿಸಬಲ್ಲೆಯಾ? ಇಲ್ಲವೆ ಊರ್ಧ್ವ ಲೋಕಕ್ಕೆ ಹೋಗುವ ಮಾರ್ಗವನ್ನು ತಿಳಿಸುವೆಯಾ?" ಎಂದು ವಿನಯದಿಂದ ಪ್ರಾರ್ಥಿಸಿದ. ಶ್ವೇತಕೇತವು ಹೀಗೆ ನುಡಿದ. "ನನಗೆ ಈ ವಿದ್ಯೆ ತಿಳಿಯದು, ನಮ್ಮ ತಂದೆಯವರನ್ನು ಕೇಳಿ ತಿಳಿದುಕೊಳ್ಳುತ್ತೇನೆ" ಶ್ವೇತಕೇತುವು ತನ್ನ ತಂದೆ ಆರುಣಿ (ಗೌತಮ)

ಮಹರ್ಷಿಯ ಬಳಿಗೆ ಹೋಗಿ ಈ ವಿಷಯವನ್ನು ವಿವರಿಸಿದ. ಆರುಣಿ ಮಹರ್ಷಿ ನನಗೆ ಕೂಡಾ ಈ ವಿಷಯವು ತಿಳಿಯದು ಅವರ ಗೃಹದಲ್ಲಿಯೇ ಇದ್ದು ವೇದಾಭ್ಯಾಸ ಮಾಡಿ ತಿಳಿದುಕೊಳ್ಳಲು ಪ್ರಯತ್ನಿಸು" ಎಂದು ಹೇಳಿ ಸಮಿತ್ಪಾಣಿಯಾಗಿ (ಸಮಿತ್ತನ್ನು ಕೈಯಲ್ಲಿ ಹಿಡಿದು) ತನ್ನ ಪುತ್ರನೊಂದಿಗೆ ಚಿತ್ರಗಾರ್ಗ್ಯಾಯಣೀಯ ಬಳಿಗೆ ಬಂದ. "ಚಿತ್ರಗಾರ್ಗ್ಯಾಯಣೀ! ನನ್ನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ವೇದಾಧ್ಯಯನವನ್ನು ಮಾಡಲು ಅವಕಾಶ ಕೊಡಿ" ಎಂದ ಆಗ ಚಿತ್ರಗಾರ್ಗ್ಯಾಯಣಿ ಮಹರ್ಷಿಯು ಆರುಣಿ (ಗೌತಮ) ಮಹಾ ಮುನಿಯೊಂದಿಗೆ ಹೀಗೆ ನುಡಿದ. "ಓ ಗೌತಮ! ನೀನು ಯಥಾರ್ಥವಾಗಿ ಬ್ರಹ್ಮಜ್ಞಾನಿ. ತಿಳಿಯದ ವಿಷಯವನ್ನು ತಿಳಿಯದೆಂದು ನಿರಭಿಮಾನವಾಗಿ ಹೇಳುತ್ತಿರುವೆ. ನನ್ನೊಂದಿಗೆ ಬಾ ನಿನಗೆ ಅರ್ಥವಾಗುವಂತೆ ಪ್ರವಚಿಸುತ್ತೇನೆ."

**ಮಂ.ಶ್ಲೋ॥ ಸಹೋವಾಚ ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ । ತೇಷಾಂ ಪ್ರಾಣೈಃ ಪೂರ್ವಪಕ್ಷ ಆಪ್ಯಾಯತೇಽಥಾಪರಪಕ್ಷೇ ನಪ್ರಜನಯತ್ಯೇತದ್ವೈ ಸ್ವರ್ಗಸ್ಯ ಲೋಕಸ್ಯ ದ್ವಾರಂ । ಯಶ್ಚಂದ್ರಮಾಸ್ತಂ ಯತ್ ಪ್ರತ್ಯಾಹ ತಮತಿಸೃಜತೇ ಯ ಏನಂ ಪ್ರತ್ಯಾಹ ತಮಿಹ ವೃಷ್ಟಿರ್ಭೂತ್ವಾ ವರ್ಷತಿ । ತ ಇಹ ಕೀಟೋ ವಾ ಪತಂಗೋ ವಾ ಶಕುನಿರ್ವಾ ಶಾರ್ದೂಲೋ ವಾ ಸಿಂಹೋ ವಾ ಮತ್ಸ್ಯೋ ವಾ ಪರಶ್ವಾ ವಾ ಪುರುಷೋ ವಾನ್ಯೋ ವೈ ತೇಷು ಸ್ಥಾನೇಷು ಪ್ರತ್ಯಾ ಜಾಯತೇ ಯಥಾಕರ್ಮ ಯಥಾ ವಿದ್ಯಂ ತಮಾಗತಂ ಪೃಚ್ಛತಿ ಕೋಽಸೀತಿ ತಂ ಪ್ರತಿ ಬ್ರೂಯಾತ್ । ವಿಚಕ್ಷಣಾದೃತ ವೋ ರೇತ ಅಭೃತಂ ಪಂಚದಶಾತ್ ಪ್ರಸೂತಾತ್ ಪಿತ್ರಾಪತತ್ ಸ್ತನಮಾ ಪುಂಸಿ । ಕರ್ತರ್ಯೇರ ಯದ್ಧ್ವಂ ಪುಂಸಾ ಕರ್ತ್ರಾ ಮಾತರಿ ಮಾಸಿ ಷಿಕ್ತಸ್ಸಜಾಯಮಾನ ಉಪಜಾಯಮಾನೋ । ದ್ವಾದಶ ತ್ರಯೋದಶ ಉಪಮಾಸೋ ದ್ವಾದಶ ತ್ರಯೋದಶೇನ ಪಿತ್ರಾ ಸಂತ ದ್ವಿದೇಽಹಂ। ತನ ಋತವೋ ಮರ್ತ್ಯವ ಆರಭದ್ವಂ ತೇನ ಸತ್ಯೇನ ತಪಸರ್ತುರಸ್ಮ್ಯಾರ್ತವೋಽಸ್ಮಿಕೋಽಸಿ –ತ್ಯಮಸೀತಿ ತಮತಿಸೃಜತೇ ॥ (2)**

ತಾ : ಚಿತ್ರಗಾರ್ಗ್ಯಾಯಣಿ ಮುನಿ ಈ ವಿಧವಾಗಿ ಹೇಳಿದ "ಈ ಪ್ರಪಂಚವನ್ನು ಬಿಟ್ಟು ಚಂದ್ರಲೋಕವನ್ನು ಸೇರಿದ ಜೀವಿಗಳು ಅಲ್ಲಿಂದ ತಿರುಗಿ ಪ್ರಯಾಣ ಮಾಡಬೇಕಾಗುತ್ತದೆ. ಚಂದ್ರ ಲೋಕವು ಸ್ವರ್ಗಲೋಕಕ್ಕೆ ದ್ವಾರವಾಗಿದೆ. ಶುಕ್ಲ ಪಕ್ಷದಲ್ಲಿ ಚಂದ್ರಲೋಕವನ್ನು ಸೇರಿದವರು. ಸ್ವರ್ಗಲೋಕಕ್ಕೆ ಹೋಗುವ ಅವಕಾಶವಿದೆ. ಕೃಷ್ಣ ಪಕ್ಷದಲ್ಲಿ ಚಂದ್ರಲೋಕಕ್ಕೆ ಸೇರಿದವನು ಮತ್ತೆ ಭೂಲೋಕದಲ್ಲಿ ಜನಿಸಬೇಕಾಗುತ್ತದೆ. ಯಾವ ಜೀವಿಗಳು (ಪುಣ್ಯ ಕರ್ಮಗಳನ್ನು ಮಾಡಿರುವರೆಂದು) ತಕ್ಕ ಸಮಾಧಾನ ಹೇಳುವರೋ ಆ ಜೀವಿಗಳು ಮಾತ್ರವೇ ಸ್ವರ್ಗಕ್ಕೆ ಹೋಗಬಲ್ಲರು. ಪುಣ್ಯ ಕರ್ಮಗಳನ್ನು ಸಾಕಷ್ಟು ಮಾಡದ ಜೀವಿಗಳು ಮತ್ತೆ ವರ್ಷಧಾರೆಯ ಮೂಲಕ ಭೂಲೋಕಕ್ಕೆ ಬರುವರು. ವರ್ಷ ಬಿಂದುಗಳಿಂದ ಭೂಮಿಗೆ ಬಂದ ಜೀವಿಗಳು ಕೀಟಗಳಾಗಿಯೋ, ಪಕ್ಷಿಗಳಾಗಿಯೋ, ಪತಂಗವಾಗಿಯೋ, ಹುಲಿ(ಪಟ್ಟೆಹುಲಿ)ಯಾಗಿಯೋ, ಸಿಂಹವಾಗಿಯೋ, ಮೀನುಗಳಾಗಿ, ಕ್ರೂರ ಮೃಗವಾಗಿ, ಮನುಷ್ಯನಾಗಿ ಅವರವರ ಪೂರ್ವ ಕರ್ಮಗಳನ್ನು ಅನುಸರಿಸಿ ಜನಿಸುವರು. ಚಂದ್ರ ಲೋಕದಿಂದ ಭೂಮಿಗೆ ಇಳಿದುಬಂದ ಕೂಡಲೇ ಜೀವಿಗಳನ್ನು 'ನೀವು ಯಾರು?' ಎಂದು

ಕರ್ಮದೇವತೆಗಳು ಪ್ರಶ್ನಿಸುವರು. ಆಗ ಈ ರೀತಿಯಾಗಿ ಪ್ರತ್ಯುತ್ತರವನ್ನು ಕೊಡಬೇಕಾಗುತ್ತದೆ. 'ಕರ್ಮದೇವತೆಗಳೇ! ಚಂದ್ರ ಲೋಕದಿಂದ ಇಳಿದುಬಂದಿದ್ದೇನೆ 12ನೇ ತಿಂಗಳಲ್ಲಾಗಲೀ, 13ನೆಯ ತಿಂಗಳಲ್ಲಾಗಲಿ ಉತ್ತಮ ರೇತಸ್ಸಿನಲ್ಲಿ ನನ್ನನ್ನು ಇಟ್ಟು ಮಾತೃಗರ್ಭದಿಂದ ನನ್ನನ್ನು ಮನುಷ್ಯನಾಗಿ ಜನಿಸುವಂತೆ ಮಾಡು. ನಾನು ಜನಿಸಿದ ಮೇಲೆ 12 ಅಥವಾ 13ನೇಯ ತಿಂಗಳಲ್ಲಿ ಜ್ಞಾನೋಪದೇಶ-ವಾಗುವಂತಾಗಲಿ. ಓ ಋತುದೇವತೆಗಳೇ! ಈ ಜ್ಞಾನವನ್ನು ನನಗೆ ಪ್ರಸಾದಿಸಿ, ಈ ಸತ್ಯ ತಪಸ್ಸು-ಗಳಿಂದ ನಾನು ಕೂಡಾ ಒಂದು ಋತುಗೇವತೆಯೆ. ನಾನು ಯಾರು? ನಾನು ನೀನು ಒಂದೇ ನಾನೇ ನೀನು ಇನ್ನು ಮಂದಕ್ಕೆ ಸಾಗೋಣ.

**ಮಂ.ಶ್ಲೋ॥ ತಮೇತಂ ದೇವಯಾನಂ ಪಂಥಾನ ಮಾಸಾದ್ಯಾಗ್ನಿಲೋಕಮಾಗಚ್ಛತಿ। ಸ ವಾಯುಲೋಕಂ ಸ ವರುಣಲೋಕಂ ಸ ಆದಿತ್ಯಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮಲೋಕಂ । ತಸ್ಯ ಹವಾ ಏತಸ್ಯ ಬ್ರಹ್ಮಲೋಕಸ್ಯಾರೋ ಹ್ರದೋ ಮುಹುರ್ತ್ತಾಯೇಷ್ಟಿ ಹಾ ವಿರಜಾ ನದೀಲ್ಯೋ । ವೃಕ್ಷಸ್ಸಾಯುಜ್ಯಂ ಸಂಸ್ಥಾನಮಪರಾಜಿತಮಾಯತನಂ। ಇಂದ್ರಪ್ರಜಾಪತೀ ದ್ವಾರಗೋಪಾ ವಿಭುಂ ಪ್ರಮಿತಂ ವಿಚಕ್ಷಣಾ ಸಂಧ್ಯಮಿತೌ ಜಾಃ ಪರ್ಯಂಕಃ ಪ್ರಿಯಾ ಚ । ಮಾನಸೀ ಪ್ರತಿರೂಪಾಚ್ಚ ಚಾಕ್ಷುಷೀ ಪುಷ್ಪಾಣ್ಯಾದಾಯಾ ವಯತೌ ವೈ ಚ ಜಗತ್ಯಂಬಾಶ್ಚಾಂಬಾ ವಯವಾಶ್ಚಾಪ್ಸರಸೋಽಂಬ ಯಾ ನದ್ಯಸ್ತಮಿತ್ಥಂ ವಿದಾ ಗಚ್ಛಂತಿ। ತಂ ಬ್ರಹ್ಮಾಹಾಭಿಧಾವತ ಮಮ ಯಶಸಾ ವಿರಜಾಂ ವಾಯಂ ಪಾಲಯನ್ನದಿಂ ಪ್ರಾಪಂ ಸ ವಾಽಯಂ ಜಿಗೀಷ್ಯತೀತಿ (3)**

ತಾ : (ಬ್ರಹ್ಮ ಲೋಕ ಮಾರ್ಗವನ್ನು ಕುರಿತು) ದೇವಯಾನ ಮಾರ್ಗದಲ್ಲಿ ಪ್ರಯಾಣ ಮಾಡಿದ ಜೀವನು (ಜೀವಾತ್ಮ) "ಈ ಲ್ಯಃ" ಎಂಬ ವೃಕ್ಷ, 'ಸಾಯುಜ್ಯ' ಎಂಬ ಮನು ಪಟ್ಟಣ ಆನಂತರ ವಾಯುಲೋಕಕ್ಕೆ, ವರುಣಲೋಕಕ್ಕೆ, ಆದಿತ್ಯಲೋಕಕ್ಕೆ, ಇಂದ್ರಲೋಕಕ್ಕೆ, ಪ್ರಜಾಪತಿ ಲೋಕಕ್ಕೆ ಒಂದಾದ ಮೇಲೊಂದು ಕ್ರಮವಾಗಿ ಹೋಗಿ ಬ್ರಹ್ಮಲೋಕವನ್ನು ಸೇರುವನು. ಆ ಬ್ರಹ್ಮಲೋಕದಲ್ಲಿ 'ಅರಃ' ಎಂಬ ಒಂದು ಸರಸ್ಸು ಇದೆ. ಅಲ್ಲಿ 'ಯೇಷ್ಟಿಹಾ' ಮುಹೂರ್ತಗಳನ್ನು ಕಳೆಯುವನು ಅಲ್ಲಿ ವಿರಜಾ ನದಿ (ವಯಸ್ಸನ್ನು ಶಾಶ್ವತವಾಗಿ ಮಾಡುವುದು) "ಅಪರಾಜಿತ" ಎನ್ನುವ ಸೌಧ (ಅಪರಾಜಿತ ಎಂದರೆ ಅಜೇಯವಾದುದು) ಇವೆ. ಆ ಸೌಧದಲ್ಲಿ ಇಂದ್ರ ಪ್ರಜಾಪತಿ, ದ್ವಾರಪಾಲಕರಾಗಿ ಇರುವರು. ಆ ಭವನದಲ್ಲಿ 'ವಿಭು' ಎನ್ನುವ ಹೆಸರುಳ್ಳ ದೊಡ್ಡ ಸಭಾವೇದಿಕೆ ಇದೆ. ಅದರಲ್ಲಿ 'ವಿಚಕ್ಷಣಾ' ಎನ್ನುವ ಹೆಸರುಳ್ಳ ತೇಜೋಮಯವಾದ ಸಿಂಹಾಸನವಿದೆ. ಅಲ್ಲಿ 'ಅಮಿತೌಜಾಃ' ಎನ್ನುವ ಉನ್ನತವಾದ ಪರ್ಯಂಕವಿದೆ 'ಮಾನಸೀ', 'ಚಾಕ್ಷುಷೀ' ಎನ್ನುವ ಹೆಸರಗಳನ್ನು ಇಟ್ಟುಕೊಂಡ ಇಬ್ಬರು ದೇವಕಾಂತೆಯರು ಪುಷ್ಪಗಳನ್ನು ಕೈಗಳಲ್ಲಿ ತೆಗೆದುಕೊಂಡು ಜಗತ್ತುಗಳನ್ನು ತೋರಿಸುತ್ತಿರುವರು. ಅಪ್ಸರೆಯರು, ಮಾತೃದೇವತೆಯರು, ನದೀ ಮಾತೆಯರು, ದಾಸೀಜನ ಅಲ್ಲಿ ಸಹಕಾರ ನೀಡುತ್ತಾರೆ. ಅಲ್ಲಿ ಸೇರಿದವರು ಈ ಬ್ರಹ್ಮ ಲೋಕ ಸುಖವನ್ನನು-ಭವಿಸುವರು. ಬ್ರಹ್ಮನು ಸ್ವತಃ ಬಂದು ಈ ರೀತಿಯಾಗಿ ನುಡಿಯುವನು. "ನನ್ನ ಐಶ್ವರ್ಯವನ್ನು ದರ್ಶಿಸಿರಿ! ಅನುಭವಿಸಿರಿ! ವಿರಜಾ ನದಿಯಲ್ಲಿ ಸ್ನಾನಮಾಡಿ! ನಿಮಗೆ ವೃದ್ಧಾಪ್ಯ ಬರುವುದಿಲ್ಲ.

ಮಂ.ಶ್ಲೋ॥ ತಂ ಪಂಚಶತಾನ್ಯಪ್ಸರಸಾಂ ಪ್ರತಿ ಧಾವಂತಿ ಶತಂ ಮಾಲಾ ಹಸ್ತಾಶ್ಶತಮಾಂಜನ ಹಸ್ತಾ-ಶ್ಶತಂ ಚೂರ್ಣಹಸ್ತಾಶ್ಶತಂ ವಾಸೋಹಸ್ತಾಶ್ಶತಂ । ಫಣಾಹಸ್ತಾಸ್ತಂ ಬ್ರಹ್ಮಾಲಂಕಾರೇಣಾಲಂ ಕುರ್ವನ್ತಿ । ಸ ಬ್ರಹ್ಮಾಲಂಕಾರೇಣಾಲಂಕೃತೋ ಬ್ರಹ್ಮವಿದ್ವಾನ್ ಬ್ರಹ್ಮೇವಾಭಿಪ್ರೈತಿ ಸ ಆಗಚ್ಛ-ತ್ಯಾರಂ ಹ್ರದಂ ತನ್ಮಸಸಾತ್ಯೇತಿ ಅಮೃತ್ವಾ ಸಂಪ್ರತಿವಿದೋ ಮಜ್ಜಂತಿ । ಆಗಚ್ಛತಿ ಮುಹುರ್ತಾನ್ಯೇಷ್ಟಿ ಹಸ್ತಸ್ಮಾದಪದ್ರವಂತಿ । ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈ-ವಾತ್ಯೇತಿ ತತ್ಸುಕೃತ ದುಷ್ಕೃತೇ ಧೂನುತೇ ತಸ್ಯ ಪ್ರಿಯಾಜ್ಞಾತಯಸ್ಸುಕೃತಮುಪಯಂತ್ಯ ಪ್ರಿಯಾ ದುಷ್ಕೃತಂ ತದ್ಯಥಾ ರಥೇನ । ಧಾಪಯನ್ರಥಚಕ್ರೇ ಪರ್ಯವೇಕ್ಷತ ಏವಮಹೋ ರಾತ್ರೇ ಪರ್ಯವೇಕ್ಷತ । ಏವಂ ಸುಕೃತ ದುಷ್ಕೃತೇ ಸರ್ವಾಣೀಚ ದ್ವಂದ್ವಾನಿ ಸ ಏಷ ವಿಸುಕೃತೋ ವಿದುಷ್ಕೃತೋ ಬ್ರಹ್ಮವಿದ್ವಾನ್ ಬ್ರಹ್ಮೇವಾಭಿಪ್ರೈತಿ ॥ (4)

ತಾ : (ಬ್ರಹ್ಮಲೋಕಾನುಭವಗಳು) ಆತನ ಬಳಿಗೆ ಐನೂರು (೫೦೦) ಮಂದಿ ಅಪ್ಸರೆಯರು ಬರುವರು. ಅದರಲ್ಲಿ ನೂರು ಜನ ಮಧುರವಾದ ಹಣ್ಣಗಳನ್ನು ಕೈಗಳಲ್ಲಿ ಹಿಡಿದುಕೊಂಡು ಬಂದರು. ನೂರು ಮಂದಿ ಅಪ್ಸರೆಯರು ಸುಗಂಧಲೇಪನಗಳನ್ನು ತರುವರು. ನೂರು ಜನ ಪುಷ್ಪಮಾಲೆಗಳನ್ನು ತರುವರು. ನೂರು ಮಂದಿ ಪರಿಮಳ ದ್ರವ್ಯಗಳನ್ನು ತರುವರು. ಅಲ್ಲಿಗೆ ಬಂದಿದ್ದವರನ್ನು ಬ್ರಹ್ಮನಂ (ರಂ)ತೆಯೇ ಅಲಂಕರಿಸಿದರು ಬ್ರಹ್ಮನಂತೆ ಅಂದವಾಗಿ ಆನಂದವಾಗಿ ಅಲಂಕರಿಸಿದ ಮೇಲೆ ಬ್ರಹ್ಮ ಸನ್ನಿಧಾನಕ್ಕೆ ಪಯಣ ಬೆಳಸಿದರು. 'ಅರಃ' ಎನ್ನುವ ಸರಸ್ಸಿನ ಬಳಿಗೆ ಸೇರುವರು. ಮನಸ್ಸಿನಲ್ಲೇ ಆ ಸುಂದರ ಸರಸ್ಸಿನಲ್ಲಿ ಸ್ನಾನ ಮಾಡುವರು. "ಯೇಷ್ಟಿಹಾ" ಎನ್ನುವ ಮುಹೂರ್ತಗಳು ಕಳೆದವು. ಅಲ್ಲಿಂದ ಉತ್ಸಾಹದಿಂದ ವಿರಜಾ ನದಿಗೆ (ಅಮರರನ್ನಾಗಿ ಮಾಡುವ ನದಿ) ಬಂದರು. ವಿರಜಾ ನದಿಯಲ್ಲಿ ಕೂಡಾ ಮನಸ್ಸಿನಲ್ಲೇ ಸ್ನಾನ ಮಾಡಿದರು ಅಲ್ಲಿ ಪುಣ್ಯಗಳು, ಪಾಪಗಳು, ಎಲ್ಲವನ್ನು ವಿಸರ್ಜಿಸಿದರು. ಆಗ ಅಪ್ರಿಯವಾದವರಿಗೆ ಪಾಪಗಳನ್ನು ಸೇರಿದವು. ಎರಡು ರಥ ಚಕ್ರಗಳು ಓಡುತ್ತಿರುವಂತೆ, ಪುಣ್ಯಪಾಪಗಳು, ಸುಖದುಃಖಗಳು ಮುಂತಾದ ದ್ವಂದ್ವಗಳು, ಆತನಿಂದ ಓಡಿ ಹೋಗುವುವು. ಎಲ್ಲ ದ್ವಂದ್ವಗಳನ್ನು ಬಿಟ್ಟು ಆತ ಬ್ರಹ್ಮನನ್ನು ಸೇರುವನು.

ಮಂ.ಶ್ಲೋ॥ ಸ ಆಗಚ್ಛತೀಲ್ಯಂ ವೃಕ್ಷಂ ತಂ ಬ್ರಹ್ಮ ಗಂಧಃ ಪ್ರವಿಶತಿ ಸ ಆಗಚ್ಛತಿ ಸಾಯುಜ್ಯಂ। ಸಂಸ್ಥಾನಂ ತಂ ಬ್ರಹ್ಮ ಸ ಪ್ರವಿಶತಿ ಸ ಆಗಚ್ಛತ್ಯಪರಾಜಿತಮಾಯತನಂ ತಂ ಬ್ರಹ್ಮ ತೇಜಃ ಪ್ರವಿಶತಿ । ಸ ಆಗಚ್ಛತೀಂದ್ರ ಪ್ರಜಾಪತಿದ್ವಾರಗೋಪಾ ತಾಪಸ್ಮಾದಪದ್ರವತ ಸ್ಸ ಆಗಚ್ಛತಿ ವಿಭು ಪ್ರಮಿತಂ । ತಂ ಬ್ರಹ್ಮ ಯಶಃ ಪ್ರವಿಶತಿ ಸ ಆಗಚ್ಛತಿ ವಿಚಕ್ಷಣಾಮಾನಂದೀಂ ಸಾ ಪ್ರಜ್ಞಾ ಪ್ರಜ್ಞಯಾ ಹಿ ವಿಪಶ್ಯತಿ ಸ ಆಗಚ್ಛತ್ಯಮಿತೌಜಸಂ ಪರ್ಯಂಕಂ। ತಂ ಸ ಪ್ರಾಣಸ್ತಸ್ಯ ಭೂತಂ ಚ ಭವಿಷ್ಯಚ್ಛ ಪೂರ್ವಾ ಪಾದೌ ಶ್ರೋಶ್ಚೇರಾ ಚಾಪರೌ ಬೃಹದ್ರಥಂತರೇ। ಅನೂಚ್ಯೇ ಭದ್ರ ಯಜ್ಞಾ ಯಜ್ಞೀ ಯೇ ಶೀರ್ಷಣ್ಯಮ್ಯುಚಶ್ಚ ಸಾಮಾನಿಚ ಪ್ರಾಚೀನಾ ಗಾನಂ ಯುಜೂಂಷಿ । ತಿರಶ್ಚೀನಾನಿ ಸೋಮಾಂಶವ ಉಪಸ್ತರಣಮುದ್ಗೀಥ ಉಪಶ್ರೀಶ್ರೀ

**-ರುಪಬರ್ಹಣಂ । ತಸ್ಮಿನ್ ಬ್ರಹ್ಮಾಸ್ತೇ ತಮಿತ್ಥಂ ವಿತ್ಪಾದೇನೈವಾಗ್ರ ಆರೋಹತಿ ತಂ ಬ್ರಹ್ಮಾ ಹ ಕೋಽಸೀತ ತಂ ಪ್ರತಿ ಬ್ರೂಯಾತ್ ॥ (೫)**

ತಾ : (ಬ್ರಹ್ಮ ಸಿಂಹಾಸನಕ್ಕೆ ಸೇರುವುದು) ಈಲ್ಯ ಎನ್ನುವ ವೃಕ್ಷದ ಬಳಿಗೆ ಬರುವನು. ಬ್ರಹ್ಮನ ಸುಗಂಧ ಚೈತನ್ಯವು ಈತನಲ್ಲಿ ಸೇರುವುದು. ನಂತರ ಸಾಯುಜ್ಯವೆನ್ನುವ ಪಟ್ಟಣವನ್ನು ಸೇರುವನು. ಅಲ್ಲಿ ಬ್ರಹ್ಮ ಚೈತನ್ಯ ಈತನಲ್ಲಿ ಸೇರುವುದು. ಅಪರಾಜಿತ ಎನ್ನುವ ಸೌಧವನ್ನು ಸೇರಿಕೊಂಡ. ಅಲ್ಲಿ ಬ್ರಹ್ಮ ತೇಜಸ್ಸು ಈತನಲ್ಲಿ ಸೇರಿತು. ನಂತರ ಇಂದ್ರ ಪ್ರಜಾಪತಿ ಎನ್ನುವ ಇಬ್ಬರು ದ್ವಾರಪಾಲಕರ ಬಳಿಗೆ ಬಂದ ಅವರು ಪ್ರೀತಿಯಿಂದ ಮಾರ್ಗವನ್ನು ಕೊಟ್ಟರು. ನಂತರ 'ವಿಭು' ಎನ್ನುವ ದಿವ್ಯ ಸಭಾವೇದಿಕೆಯನ್ನು ಸೇರಿಕೊಂಡ. ಅಲ್ಲಿ ಬ್ರಹ್ಮತೇಜಸ್ಸು ಈತನಲ್ಲಿ ಪ್ರವೇಶಿಸಿತು. ನಂತರ ವಿಚಕ್ಷಣ ಎನ್ನುವ ಬ್ರಹ್ಮ-ಸಿಂಹಾಸನವನ್ನು ಸಮೀಪಿಸಿದ.

ಬೃಹದ್ರಥಂತರ ಸಾಮಗಾನವು ಮುಂದಿನ ಕಾಲುಗಳಲ್ಲಿ ಕೇಳಬಂತು. ಧ್ವೈತ ಸೌಧನಗಾನವು ಕಾಲಹಿಂದೆ ಕೇಳಬಂತು ವೈರೂಪ, ವೈರಾಜ, ಶಾಕ್ವರ, ರೈವತ ಪ್ರಜ್ಞೆಗಳು ಪ್ರಕಾಶಿಸಿದವು ಆ ಪ್ರಜ್ಞೆಗಳೊಂದಿಗೆ ಸಂಭಾಷಣೆಗಳು ಜರುಗಿದುವು. ಅಲ್ಲಿ ಅಮಿತೌಜಸವೆನ್ನುವ ತೇಜೋವಂತವಾದ ವಾಹನವು ಕಾಣಿಸಿತು. ಅದು ಪ್ರಾಣವಾಯು ಭೂತ ಭವಿಷ್ಯತ್ತುಗಳು ಅದಕ್ಕೆ ಮುಂದಿನ ಪಾದಗಳು, ಸಂಪತ್ತುಗಳು, ಆಹಾರಗಳು ಭದ್ರಯಜ್ಞಾ ಯಜ್ಞೀಯಗಳು ಎರಡು ಶಿರಸ್ಸುಗಳು, ಬೃಹತ್ ರಥಂತರ (ರಥಂತರ) ಸಾಮಗಾನಗಳು ಎರಡೂ ಪಕ್ಕದಲ್ಲಿರುವ ಮರದ ಡಬ್ಬಿಗಳು ಯಜುಸ್ಸು. ಅಡ್ಡ ಪಟ್ಟಿಯಾಗಿರುವ ಹಲಗೆಗಳು.

ಸೋಮಲತೆಗಳು ಕೆಳಗಿರುವ ಹಾಸುಗಳು, ಉದ್ಗೀಥೆಗಳು ಮೆತ್ತಗಿನ ದಿಂಬುಗಳು, ಅಲ್ಲಿ ಬ್ರಹ್ಮದೇವರು ಆಸೀನರಾಗಿರುವರು. ಇದು ತಿಳಿದಕೂಡಲೆ ಬ್ರಹ್ಮನ ಸಮೀಪಕ್ಕೆ ಬರುವರು. ಅಲ್ಲಿ ಬ್ರಹ್ಮ 'ನೀವ್ಯಾರು' ಎಂದು ಪ್ರಶ್ನಿಸುವನು. ಈ ಕೆಳಗಿರುವಂತೆ ಪ್ರತ್ಯುತ್ತರ ಹೇಳಲಾಗುವುದು.

ಮಂ.ಶ್ಲೋ॥ **ಋತುರಸ್ಮ್ಯಾರ್ತವೋಽಸ್ಮ್ಯಾಕಾಶಾದ್ಯೋನೇಸ್ಸಂಭೂತೋ ಹವ್ಯೈ । ತತ್ಸಂವತ್ಸರಸ್ಯ ತೇಜೋ-ಭೂತಸ್ಯ ಭೂತಸ್ಯಾತ್ಮ ಭೂತಸ್ಯ ತ್ವಮಾತ್ಮಾಸಿ । ಯಸ್ತ್ವಮಸಿ ಸೋಽಹಮಸ್ಮೀತಿ ತಮಾಹಕೋಽಹಮಸ್ಮೀತಿ ಸತ್ಯಮಿತಿ ಬ್ರೂಯಾತ್ಕಿಂ ತತ್ಸತ್ಯಮಿತಿ । ಯದಸ್ಯದ್ದೇವೇಭ್ಯಶ್ಚ ಪ್ರಾಣೇಭ್ಯಶ್ಚ ತತ್ಸದಥ ಯದ್ದೇವಾಶ್ಚ ಪ್ರಾಣಾಶ್ಚ । ತದ್ಯಂತದೇತಯಾ ವಾಚಾಭಿ ವ್ಯಾಹ್ರಿ-ಯತೇ ಸತ್ಯಮಿತ್ಯೇತಾವದಿದಂ ಸರ್ವಮಿದಂ। ಸರ್ವಮಸೀತ್ಯೇವೈನಂ ತದಾಹ ತಮಾಹ ಕೇನ ಪೌಂಸ್ನಾನಿ ನಾಮಾನ್ಯಾಪ್ನೋತೀತಿ। ಪ್ರಾಣೇನೇತಿ ಬ್ರೂಯಾತ್ಕೇನ ಸ್ತ್ರೀನಾಮಾನೀತಿ ವಾಚೇತಿ ಕೇನ ನಪುಂಸಕನಾಮಾನೀತಿ। ಮನಸೇತಿ ಕೇನ ಗಂಧಾನಿತಿ ಘ್ರಾಣೇನೇತಿ ಬ್ರೂಯಾತ್ಕೇನ ರೂಪಾಣೇತಿ ಚಕ್ಷುಷೇತಿ ಕೇನ ಶಬ್ದಾನಿತಿ ಶ್ರೋತ್ರೇಣೇತಿ। ಕೇನಾನ್ನರಸಾನಿತಿ ಜಿಹ್ವಯೇತಿ ಕೇನ ಕರ್ಮಾಣೇತಿ ಹಸ್ತಾಭ್ಯಾಮಿತಿ ಕೇನ ಸುಖದುಃಖೇ ಇತಿ ಶರೀರೇಣೇತಿ ಕೇನಾನಂದಂ ರತಿಂ ಪ್ರಜಾತಿಮಿತ್ಯುಪಸ್ಥೇನೇತಿ। ಕೇನೇತ್ಯಾ ಇತಿ ಪಾದಾಭ್ಯಾಮಿತಿ ಕೇನಧಿಯೋ ವಿಜ್ಞಾತವ್ಯಂ ಕಾಮಾನಿತಿ ಪ್ರಜ್ಞಯೇತಿ ಪ್ರಬ್ರೂಯಾತ್ತಮಾಹೋ ಹ್ಯೆವ**

**ಖಲು ಮೇಹ್ಯಸಾವಯಂತೇ ಲೋಕ ಇತಿ ಸಾಯಾ ಬ್ರಹ್ಮಣಿ ಚಿತಿರ್ಯಾವ್ಯಷ್ಟಿಸ್ತಾಂ ಚಿತಿಂ ಜಯತಿ ತಾಂ ವ್ಯಷ್ಟಿಂ ವ್ಯಶ್ನುತೇ ಯ ಏವಂ ವೇದ ಯ ಏವಂ ವೇದ (6)**

ತಾ : (ಅನಂತ ಬ್ರಹ್ಮದೊಂದಿಗೆ ಸಂಬಂಧ) ನಾನು ಋತುದೇವತೆ. ಈ ಋತುಧರ್ಮ-ಗಳೊಂದಿಗೆ ನನಗೆ ಸಂಬಂಧವಿದೆ. ಆಕಾಶದಿಂದ ಶುಕ್ಲ ರೂಪದಲ್ಲಿ ಸ್ತ್ರೀಗರ್ಭದಲ್ಲಿ ಸೇರಿದೆ. ಸಂವತ್ಸರ ತೇಜಸ್ಸಾಗಿ ಎಲ್ಲ ಜೀವಾತ್ಮಗಳಂತೆಯೆ ಆತ್ಮವಾಗಿದ್ದೆ. ನೀನು ಸರ್ವ ಜೀವಾತ್ಮಗಳಿಗೆ ಆತ್ಮನಾಗಿರುವೆ. ನಿನ್ನಂತೆಯೇ ನಾನೂ ಆತ್ಮನೇ. ಆಗ ಬ್ರಹ್ಮ ಹೇಳಿದ, "ನಾನು ಯಾರು?" ಎಂದು ಪ್ರಶ್ನಿಸಿದಾಗ 'ನೀನು ಸತ್ಯಾತ್ಮ' ಎಂದ. ಮತ್ತೆ ಬ್ರಹ್ಮ ಪ್ರಶ್ನಿಸಿದ, "ಸತ್ಯಾತ್ಮನೆಂದರೆ ಯಾರು?" "ಇಂದ್ರಿಯ ದೇವತೆಗಳು ಅಲ್ಲ ಪ್ರಾಣವಾಯುವಲ್ಲ, ಅದೇ ಸತ್ಯ, ಸತ್ ಇದೇ. ಸಮಸ್ತ ಜಗತ್ತು. ನೀನು ಕೂಡಾ ಈ ಜಗತ್ (ಜಗದ್ರೂಪ) ರೂಪವೇ ಆಗಿದ್ದೀಯೆ." ಮತ್ತೆ ಪ್ರಶ್ನಿಸಿದ ಬ್ರಹ್ಮ: - ಆಪೋ ರೂಪಗಳಾದ ನನ್ನ ಪುರುಷ ರೂಪಗಳನ್ನು ನೀನು ಹೇಗೆ ತಿಳಿದುಕೊಂಡೆ?" "ಪ್ರಾಣವಾಯು ಶ್ವಾಸಗಳ ಮೂಲಕ ತಿಳಿದು ಕೊಂಡೆ." "ಸ್ತ್ರೀರೂಪಗಳನ್ನು ಹೇಗೆ ತಿಳಿದುಕೊಂಡೆ?" "ವಾಕ್ಕಿನ ಮೂಲಕ ತಿಳಿದುಕೊಂಡೆ." "ನಪುಂಸಕ ರೂಪಗಳನ್ನು ಯಾವ ರೀತಿಯಾಗಿ ತಿಳಿದುಕೊಂಡೆ?" "ಮನಸ್ಸಿನ ಮೂಲಕ." "ವಾಸನೆಗಳನ್ನು ಹೇಗೆ ತಿಳಿದುಕೊಂಡೆ?" "ಘ್ರಾಣೇಂದ್ರಿಯದ ಮೂಲಕ, ರೂಪಗಳನ್ನು ಹೇಗೆ ತಿಳಿದುಕೊಂಡೆ?" "ನೇತ್ರೇಂದ್ರಿಯದ ಮೂಲಕ, 'ಶಬ್ದಗಳನ್ನು ಯಾವ ರೀತಿಯಾಗಿ ತಿಳಿದುಕೊಂಡೆ?' 'ಶ್ರೋತ್ರೇಂದ್ರಿಯಗಳ ಮೂಲಕ," ಅನ್ನ ರಸವನ್ನು ಹೇಗೆ ತಿಳಿದುಕೊಂಡೆ?" "ಜಿಹ್ವೇಂದ್ರಿಯದ ಮೂಲಕ', 'ನೀನು ಮಾಡುವ ಕರ್ಮಗಳನ್ನು ಯಾವ ರೀತಿ ತಿಳಿದುಕೊಂಡೆ?' ಕರ್ಮೇಂದ್ರಿಯಗಳಾದ ಎರಡು ಹಸ್ತಗಳಿಂದ, 'ಸುಖದುಃಖಗಳನ್ನು ಯಾವ ರೀತಿ ತಿಳಿದುಕೊಂಡೆ?' ಶರೀರದ ಮೂಲಕ, 'ಆನಂದವನ್ನು ರತಿಸುಖವನ್ನು ಸಂತಾನೋತ್ಪತ್ತಿಯನ್ನು, ಯಾವ ರೀತಿ ತಿಳಿದುಕೊಂಡೆ? 'ಉಪಸ್ಥೇಂದ್ರಿಯದಿಂದ,' 'ನಡೆಯುವುದನ್ನು ಹೇಗೆ ಕಲಿತೆ'? (ತಿಳಿದುಕೊಂಡೆ) 'ಎರಡು ಪಾದಗಳಿಂದ,' 'ಸಂಕಲ್ಪಗಳನ್ನು ಭಾವನೆಗಳನ್ನು ಕೋರಿಕೆಗಳನ್ನು ಹೇಗೆ ತಿಳಿದುಕೊಂಡೆ' 'ಬುದ್ಧಿ ಪ್ರಜ್ಞೆಯಿಂದ,' ಈ 'ಜಲಮಯವಾದ ಪ್ರಪಂಚವೆಲ್ಲವೂ ನನ್ನದೇ. ನಿನ್ನದು ಕೂಡಾ. ಈ ಸಮಸ್ತ ಪ್ರಪಂಚವು ಬ್ರಹ್ಮಮಯವೇ. ಈ ವಿಷಯವನ್ನು ಅರ್ಥಮಾಡಿಕೊಂಡವರು ಬ್ರಹ್ಮವೇ ಆಗುತ್ತಿದ್ದಾರೆ.

# ದ್ವಿತೀಯೋಧ್ಯಾಯಃ

ಮಂ.ಶ್ಲೋ|| **ಪ್ರಾಣೋ ಬ್ರಹ್ಮೇತಿ ಹ ಸ್ಮಾಹ ಕೌಷೀತಕಿಸ್ತಸ್ಯ ಹವಾ ಏತಸ್ಯ ಪ್ರಾಣಸ್ಯ ಬ್ರಹ್ಮಣೋ ಮನೋಭೂತಾ ವಾಕ್ಪರಿವೇಷ್ಟ್ರೃ ಚಕ್ಷುಃ ಶ್ರೋತ್ರಂ ಸಂಶ್ರಾವಯಿತೃ ತಸ್ಮೈವಾ ಏತಸ್ಮೈ ಪ್ರಾಣಾಯ ಬ್ರಹ್ಮಣ ಏತಾಸ್ಸರ್ವಾ ದೇವತಾ ಅಯಾಚಮಾನಾಯ । ಬಲಿಂ ಹರಂತಿ ತಥೋ ಏವಾಸ್ಮೈ ಸರ್ವಾಣಿ ಭೂತಾನ್ಯಯಾಚಮಾನಾಯೈವ ಬಲಿಂ ಹರಂತಿ ಯ ಏವಂ ವೇದ। ತಸ್ಯೋಪನಿಷನ್ನಯಾಚೇದಿತಿ ತದ್ಯಥಾ ಗ್ರಾಮಂ ಭಿಕ್ಷಿತ್ವಾ । ಲಬ್ಧ್ವೋಪವಿಶೇನ್ನಾಹಮತೋ ದತ್ತಮಶ್ನೀಯಾಮಿತಿ ಯ ಏವೈನಂ ಪುರಸ್ತಾತ್ ಪ್ರತ್ಯಾಚಕ್ಷೀರಂ ಸ್ತ ಏವೈನಮುಪಮಂತ್ರ-ಯಂತೇ । ದದಾಮತ ಇತ್ಯೇಷ ಧರ್ಮೋ ಯಾಚಿತೋ ಭವತ್ಯನಂತರ ಸ್ತ್ವೈವೈನ-ಮುಪಮಂತ್ರಯಂತೇ ದದಾಮತ ಇತಿ । (1)**

ತಾ : (ಪ್ರಾಣವೇ ಬ್ರಹ್ಮವೆನ್ನುವ ಸಿದ್ಧಾಂತ) "ಪ್ರಾಣವಾಯುವೇ ಬ್ರಹ್ಮ." ಹೀಗೆ ಕೌಷೀತಕೀ ಬ್ರಾಹ್ಮಣವು ಹೇಳುತ್ತಿದೆ. ಈ ಪ್ರಾಣ ಬ್ರಹ್ಮವೇ ಸಂಕಲ್ಪಾತ್ಮಕವಾಗಿ ಮನಸ್ಸು ಆಗುತ್ತಿದೆ. ಮಾತನಾಡುವುದಕ್ಕೆ ವಾಗೇಂದ್ರಿಯವಾಗುತ್ತದೆ. ಮತ್ತು ಗಮನಿಸುವ ನೇತ್ರವಾಗುತ್ತದೆ. ಮತ್ತು ಕೇಳಲು ಶ್ರವಣೇಂದ್ರಿಯವಾಗುತ್ತದೆ. ಪ್ರಾಣವಾಯುವೇ ಬ್ರಹ್ಮವೆಂದು ಗುರುತಿಸದವರಿಗೆ, ಸರ್ವ ದೇವತೆಗಳೂ ಅಯಾಚಿತವಾಗಿ ಅವರವರ ಸಂಪತ್ತುಗಳನ್ನು ನೀಡುವರು. ಅದೇ ವಿಧವಾಗಿ ಪ್ರಾಣಬ್ರಹ್ಮಕ್ಕೆ ಜೀವಿಗಳೆಲ್ಲರೂ ಅವರ ಸಂಪತ್ತುಗಳನ್ನು ಸಮರ್ಪಿಸಿ ಪೂಜಿಸುವರು. ಈ ಉಪನಿಷತ್ತನ್ನು ಈ ವಿಧವಾಗಿ ಅರ್ಥಮಾಡಿಕೊಂಡವರು ಯಾವ ವಿಧದಲ್ಲಿಯೂ ಯಾಚನೆ ಮಾಡಬಾರದು. ಒಂದು ಗ್ರಾಮವನ್ನು ದಾನವಾಗಿ ಗ್ರಹಿಸಿ, ಆ ಗ್ರಾಮದಲ್ಲಿಯೇ ತಿನ್ನಲು ತಿಂಡಿಯಿಲ್ಲದೆ ಉಪವಾಸ-ವಿರಬೇಕಾಗಬಹುದು. ಯಾಚನೆ ಮಾಡುವವರ ಸ್ಥಿತಿ ಈ ವಿಧವಾಗಿ ಇರುವುದು ಯಾಚನೆ ಮಾಡದೆ ಇರುವವರು ಯಾವಾಗಲೂ ಭಾಗ್ಯವಂತರೇ. ಯಾಚನೆ ಮಾಡದಿರುವವರನ್ನು ಎಲ್ಲರೂ ಗೌರವಿಸಿ ಪೋಷಿಸುವರು.

**ಮಂ.ಶ್ಲೋ॥ ಪ್ರಾಣೋ ಬ್ರಹ್ಮೇತಿ ಹ ಸ್ಮಾಹ ಪೈಂಗ್ಯಸ್ತಸ್ಯ ಹವಾ ಏತಸ್ಯ ಪ್ರಾಣಸ್ಯ । ಬ್ರಹ್ಮಣೋ ವಾಕ್ಪರಸ್ತಾ ಚಕ್ಷುರಾರುಂಧೇ ಚಕ್ಷುಃ ಪರಸ್ತಾತ್। ಶ್ರೋತ್ರಮಾರುಂಧೇ ಶ್ರೋತ್ರಂ ಪರಸ್ತಾನ್ಮನ ಆರುಂಧೇ ಮನಃ ಪರಸ್ತಾತ್ ಪ್ರಾಣ ಆರುಂಧೇ ತಸ್ಮೈವಾ ಏತಸ್ಮೈ ತ್ರಾಣಾಯ ಬ್ರಹ್ಮಣ ಏತಾಸ್ಸರ್ವಾ ದೇವತಾ ಅಯಾಚಮಾನಾಯ । ಬಲಿಂ ಹರಂತಿ ತಥೋ ಏವಾಸ್ಮೈ ಸರ್ವಾಣಿ ಭೂತಾನ್ಯಯಾಚಮಾನಾಯ ಬಲಿಂ ಹರಂತಿ । ಯ ಏವಂ ವೇದ ತಸ್ಯೋಪನಿಷನ್ನ ಯಾಚೇದಿತಿ ತದ್ಯಥಾ ಗ್ರಾಮಂ ಭಿಕ್ಷಿತ್ವಾ । ಲಬ್ಧ್ವೋಪವಿಶೇನ್ನಾಹಮತೋ ದತ್ತಮಶ್ನೀ-ಯಾಮಿತಿ ಯ ಏವೈನಂ ಪರಸ್ತಾತ್ । ಪ್ರತ್ಯಾಚಕ್ಷಿರಂಸ್ತ ಏವೈನಮುಪಮಂತ್ರಯಂತೇ ದದಾಮತ । ಇತ್ಯೇಷ ಧರ್ಮೋ ಯಾಚಿತೋ ಭವತ್ಯನ್ಯತರ ಸ್ತ್ವೈವೈನಮುಪಮಂತ್ರ-ಯಂತೇ ದದಾಮತ । ಇತ್ಯೇಷ ಧರ್ಮೋ ಯಾಚಿತೋ ಭವತ್ಯಸ್ಯ ತರಸ್ತ್ವೈವೈನ-ಮುಪಮಂತ್ರಯಂತೇ ದದಾಮತ ಇತಿ ॥ (2)**

ತಾ : ಪ್ರಾಣವೇ ಬ್ರಹ್ಮ. ಪ್ರಾಣಬ್ರಹ್ಮವನ್ನು 'ಪೈಂಗ್ಯಃ' ಎಂದು ಹೇಳುವರು. ಈ ಪ್ರಾಣಬ್ರಹ್ಮವು ಅಂತರ್ಯಾಮಿಯಾಗಿರುತ್ತದೆ. ವಾಕ್ಕನ್ನು ನುಡಿಸುತ್ತದೆ. ನೇತ್ರವನ್ನು ಪ್ರಕಾಶಿಸುವಂತೆ ಮಾಡುತ್ತದೆ. ಶ್ರೋತವನ್ನು ಸ್ಪಂದಿಸುವಂತೆ ಮಾಡುತ್ತದೆ. ಮನಸ್ಸನ್ನು ಚೈತನ್ಯವನ್ನಾಗಿ ಮಾಡುತ್ತದೆ. ಅಂದರೆ ಸರ್ವವೂ ಪ್ರಾಣಬ್ರಹ್ಮವೇ. ಈ ಪ್ರಾಣಬ್ರಹ್ಮಕ್ಕೆ ದೇವತೆಗಳೆಲ್ಲರೂ ತಮ್ಮ ದಿವ್ಯ ಶಕ್ತಿಗಳನ್ನು ಸಮರ್ಪಿಸಿ ಕೊಳ್ಳುವರು. ಮತ್ತು ಜೀವಿಗಳೆಲ್ಲರೂ ಅಯಾಚಿತವಾಗಿ ಅವರ ಭಕ್ತಿಸಾಮಗ್ರಿಯನ್ನು ಸಮರ್ಪಿಸಿ ಕೊಳ್ಳವರು. ಈ ಉಪನಿಷತ್ತಿನ ಸಿದ್ಧಾಂತವನ್ನು ತಿಳಿದುಕೊಂಡವರು ಎಂದೂ ಯಾರನ್ನೂ ಯಾಚಿಸುವುದಿಲ್ಲ ಒಂದು ಗ್ರಾಮದಲ್ಲಿ ಎಷ್ಟು ತಿರುಗಿದರೂ ಭಿಕ್ಷೆ ದೊರಕಲಿಲ್ಲ. ಅದೇ ವ್ಯಕ್ತಿಯು ಈ ಉಪನಿಷತ್ತನ್ನು ಅಧ್ಯಯನ ಮಾಡಿದ ನಂತರ ಆ ಗ್ರಾಮದಲ್ಲೇ ಗೌರವಿಸಲ್ಪಡುತ್ತಿರುವನು. ಆ ಗ್ರಾಮದಲ್ಲಿರುವ ಧಾರ್ಮಿಕರೆಲ್ಲರೂ ಈತನಿಗೆ ಸಹಾಯ ಮಾಡಿ ಗೌರವಿಸಲು ಪೈಪೋಟಿ ಮಾಡುವರು, ಯಾಚನೆ ಮಾಡದಿರುವುದು, ಮಹಾಭಾಗ್ಯ.

ಮಂ.ಶ್ಲೋ॥ ಅಥಾತ ಏಕ ಧನಾಪರೋಧನಂ ಯದೇಕಧನಮಭಿಧ್ಯಾಯಾತ್ । ಪೌರ್ಣಮಾಸ್ಯಾಂ ವಾಮಾವಾಸ್ಯಾಂ ವಾ ಶುದ್ಧ ಪಕ್ಷೇ ವಾ ಪುಣ್ಯೇ ನಕ್ಷತ್ರೇಽಗ್ನಿಮುಪಸಮಾಧಾಯ ಪರಿಸಮೂಹ್ಯ । ಪರಿಸ್ತೀರ್ಯ ಪರ್ಯುಕ್ಷ್ಯ ಪೂರ್ವ ದಕ್ಷಿಣಂ ಜಾನ್ವಾ ವಾಚ್ಯ । ಸ್ರುವೇಣ ವಾ ಚಮಸೇನ ವಾ ಕಂಸೇನ ವೈತಾ ಆಜ್ಯಾಹುತಿರ್ಜುಹೋತಿ ವಾಙ್ನಾಮ ದೇವತಾಽವರೋಧಿನೀ ಸಾಮೇಮುಷ್ಮಾದಿದಮವರುಂಧಾ । ತಸ್ಮೈ ಸ್ವಾಹಾ ಪ್ರಾಣೋನಾಮ ದೇವತಾಽವರೋಧಿನೀ ಸಾಮೇಽಮುಷ್ಮಾದಿದಮವರುಂಧಾ । ತಸ್ಯೈ ಸ್ವಾಹಾ ಚಕ್ಷುರ್ನಾಮ ದೇವತಾಽವರೋಧಿನೀ ಸಾಮೇಮುಷ್ಮಾದಿದಮವರುಂಧಾ । ತಸ್ಮೈ ಸ್ವಾಹಾ ಶ್ರೋತ್ರಂ ನಾಮ ದೇವತಾಽವರೋಧಿನೀ ಸಾಮೇಮುಷ್ಮಾದಿದಮವರುಂಧಾ । ತಸ್ಮೈ ಸ್ವಾಹಾ ಮನೋನಾಮ ದೇವತಾಽವರೋಧಿನಿ ಸಾಮೇಮುಷ್ಮಾದಿದಮವರುಂಧಾ । ತಸ್ಮೈ ಸ್ವಾಹಾ ಪ್ರಜ್ಞಾನಾಮ ದೇವತಾಽವರೋಧಿನಿ ಸಾಮೇಮುಷ್ಮಾದಿದಮವರುಂಧಾ । ತಸ್ಮೈ ಸ್ವಾಹೇತ್ಯಥ ಧೂಮ ಗಂಧಂ ಪ್ರಜಿಘಾಯಾಜ್ಯ ಲೇಪೇನಾಂಗಾನ್ಯನುವಿಮೃಜ್ಯ ವಾಚಂ । ಯಮೋಭಿ ಪ್ರವ್ರಜ್ಯಾರ್ಥಂ ಬ್ರವೀತಿ ದೂತಂ ವಾ ಪ್ರಹಿಣುಯಾಲ್ಲಭತೇ ಹೈವ ॥ (೩)

ತಾ : (ಪ್ರತ್ಯೇಕ ಭೋಗಗಳನ್ನು ಸಂಪಾದಿಸುವುದು) ಪ್ರತ್ಯೇಕ ದಿವ್ಯ ಲೋಕಭೋಗಗಳನ್ನು ಬಯಸುವವರು ಈ ಕೆಳಗೆ ಹೇಳಿರುವ ರೀತಿಯಲ್ಲಿ ಅಗ್ನಿ ಕಾರ್ಯವನ್ನು (ಯಜ್ಞವನ್ನು) ಮಾಡಬೇಕು. ಪೌರ್ಣಮಿ ತಿಥಿ ದಿನದಂದು ಆಗಲಿ ಅಮಾವಾಸ್ಯೆಯ ದಿನದಲ್ಲಾಗಲೀ, ಶುಕ್ಲಪಕ್ಷದಲ್ಲಿ ಶುಭತಿಥಿಗಳಲ್ಲಾಗಲೀ, ಯಾವುದೋ ಒಂದು ಶುಭದಿನದಲ್ಲಿ ಯಜ್ಞವನ್ನು ಪ್ರಾರಂಭಿಸಬೇಕು. ಪವಿತ್ರವಾದ ಪ್ರದೇಶವನ್ನು ನಿರ್ಣಯಿಸಿ. ಒಳ್ಳೆಯ ಪೊರಕೆಯಲ್ಲಿ ಪರಿಶುಭ್ರಗೊಳಿಸಿ, ನೀರು ಚುಮುಕಿಸಿ ಪವಿತ್ರ ಭಾವದಲ್ಲಿ ಅಗ್ನಿಯನ್ನು ಪ್ರತಿಷ್ಠಾಪನೆ ಮಾಡಬೇಕು. ಬಲಗಾಲನ್ನು ಬಗ್ಗಿಸಿ ಸ್ರುವದಿಂದಾಗಲಿ, ಚಮಚೆಯಿಂದಾಗಲಿ, ಕಂಚುಪಾತ್ರೆಯಿಂದಾಗಲೀ ಆಜ್ಯವನ್ನು ಹಾಕಬೇಕು. ಅವಶ್ಯವಾದ ದೇವತೆಯ ಹೆಸರು ಹೇಳಿ ಆಜ್ಯವನ್ನು ಹಾಕಿ ಮಂತ್ರವನ್ನು ಸ್ವಾಹಾಕಾರದೊಂದಿಗೆ ಹೇಳುತ್ತಿರಬೇಕು. ಪ್ರಾಣದೇವತೆ ನನಗೆ ಈ ಭೋಗವನ್ನು (ಬೇಕಾಗಿರುವ ಭೋಗವನ್ನು ಹೇಳಿ) ಪ್ರಸಾದಿಸುವಂತಾಗಲಿ! ಎಂದು ಹೇಳಿ ಆಜ್ಯವನ್ನು ಹಾಕುತ್ತಾ ಮಂತ್ರದೊಂದಿಗೆ ಸ್ವಾಹಾ ಎನ್ನಬೇಕು. ಚಕ್ಷುರಿಂದ್ರಿಯ ದೇವತೆಯು (ಬೇಕಾಗಿರುವ ಭೋಗದ ಹೆಸರು ಹೇಳಿ) ನನಗೆ ಈ ಭೋಗವನ್ನು ಪ್ರಸಾದಿಸುವಂತಾಗಲಿ ಎಂದು ಸಂಕಲ್ಪಿಸಿ ಆಜ್ಯವನ್ನು 'ಸ್ವಾಹಾ' ಎಂದು ಹೇಳುತ್ತಾ ಹಾಕಬೇಕು. ಶ್ರವಣೇಂದ್ರಿಯ ದೇವತೆ ನನಗೀ ಭೋಗವನ್ನು (ಭೋಗದ ಹೆಸರು ಹೇಳಿ) ಪ್ರಸಾದಿಸುವಂತಾಗಲಿ, ಎಂದು ಹೇಳಿ ಆಜ್ಯವನ್ನು ಹಾಕಿ ಸ್ವಾಹಾ ಎಂದು ಮಂತ್ರವನ್ನು ಉಚ್ಚರಿಸಬೇಕು. ಮನೋಧಿ ದೇವತೆ ನನಗೆ ಈ ಸಹಾಯವನ್ನು ಮಾಡುವಂತಾಗಲಿ! (ಮಾಡಲಿ) ಎಂದು ಹೇಳಿ ಆಜ್ಯವನ್ನು ಹಾಕುತ್ತಾ ಮಂತ್ರದೊಂದಿಗೆ 'ಸ್ವಾಹಾ' ಎಂದು ಹೇಳಬೇಕು. ಆಮೇಲೆ ಆ ಅಗ್ನಿಯ ಧೂಮವನ್ನು ಆಘ್ರಾಣಿಸಿ ಕೈಯಲ್ಲಿರುವ ಆಜ್ಯವನ್ನು ಪೂರ್ತಿಯಾಗಿ ಅಗ್ನಿಯೊಳಕ್ಕೆ ಹಾಕಿ, ಕೈಗಳನ್ನು ಒರೆಸಿಕೊಂಡು ತನ್ನ ಭಾವಗಳನ್ನು ಸಂಕಲ್ಪಗಳ ಮೂಲಕ ಕಳುಹಿಸಬೇಕು. ನೀನು ಕೋರಿದ ಭೋಗಗಳೆಲ್ಲವೂ ಲಭಿಸುವುವು.

**ಮಂ.ಶ್ಲೋ॥ ಅಥಾತೋ ದೈವಸ್ಮರೋ ಯಸ್ಯ ಪ್ರಿಯೋ ಬುಭೂಷೇ ಯಸ್ಯೈ ವಾ ಏಷಾಂ ವೈ ತೇಷಾ ಮೇವೈತಸ್ಮಿನ್ಪರ್ವಣ್ಯಗ್ನಿಮುಪಸಮಾಧಾಯೈ ತಯೈವಾವೃತ್ತೈ ತಾ ಆಜ್ಯಾಹುತೀರ್ಜು-ಹೋತಿ ವಾಚಂ ತೇ ಮಯಿ ಜುಹೋಮ್ಯಸೌ ಸ್ವಾಹಾ ಪ್ರಾಣಂ ತೇ ಮಯಿ ಜುಹೋ-ಮ್ಯಸೌ ಸ್ವಾಹಾ ಚಕ್ಷುಸ್ತೇ ಮಯಿ ಜುಹೋಮ್ಯಸೌ ಸ್ವಾಹಾ। ಜುಹೋತೇ ಮಯಿ ಜುಹೋಮ್ಯಸೌ ಸ್ವಾಹೇತ್ಯಥ ಧೂಮಗಂಧಂ। ಪ್ರಜಿಘಾಯಾಜ್ಯಲೇಪೇನಾಂಗಾನ್ಯನು-ವಿಮೃಜ್ಯ ವಾಚಂ ಯಮೋಭಿ ಪ್ರವ್ರಜ್ಯ ಸಂಸ್ಪರ್ಶಂ ಜಿಗಮಿಷೇದಪಿ ವಾತಾದ್ವಾ। ಸಂಭಾಷ-ಮಾಣಸ್ತಿಷ್ಠೇತೇ ಪ್ರಿಯೋ ಹೈವ ಭವತಿ ಸ್ಮರಂತಿ ಹೈವ ಭವತಿ ಸ್ಮರಂತಿ ಹೈವ ಸ್ಯಾತ್ (4)**

ತಾ : (ಬೇರೆಯವರ ಅಭಿಮಾನವನ್ನು ಸಂಪಾದಿಸುವ ಪದ್ಧತಿ) ದೈವಸ್ಮರಃ ಎನ್ನುವ ಹೆಸರುಳ್ಳ ದಿವ್ಯ ಮಹಿಮೆಗಳನ್ನು ಸಂಪಾದಿಸಬಹುದು. ಒಬ್ಬ ಪುರುಷನು ನಿನ್ನನ್ನು ಪ್ರೇಮಿಸಬೇಕಾದರೂ, ಒಬ್ಬ ಸ್ತ್ರೀ ನಿನ್ನನ್ನು ಪ್ರೇಮಿಸಬೇಕಾದರೂ, ಇಲ್ಲವೆ ಕೆಲವು ಪುರುಷರು ನಿನ್ನನ್ನು ಪ್ರೇಮಿಸಬೇಕಾದರೂ, ಅಥವಾ ಕೆಲವು ಸ್ತ್ರೀಯರು ನಿನ್ನನ್ನು ಪ್ರೇಮಿಸಬೇಕಾದರೂ ಮೇಲೆ ತಿಳಿಸಿದಂತೆಯೇ ಅಗ್ನಿಕಾರ್ಯ-ವನ್ನು (ಯಜ್ಞವನ್ನು) ಮಾಡಬೇಕು. 'ಓ ದೇವಾ! ನಿನ್ನ ವಾಕ್ಕು ನನಗೆ ಲಭಿಸುವಂತಾಗಲಿ ಸ್ವಾಹಾ," 'ಓ ದೇವಾ! ನಿನ್ನನ್ನೇ ತ್ರಿಶಕ್ತಿ ನನ್ನಲ್ಲಿ ಲಭಿಸುವಂತಾಗಲಿ ಸ್ವಾಹಾ," 'ಓ ದೇವಾ! ನಿನ್ನ ಶ್ರವಣ ಶಕ್ತಿ ನನ್ನಲ್ಲಿ ಲಭಿಸುವಂತಾಗಲಿ ಸ್ವಾಹಾ! ಓ ದೇವಾ! ನಿನ್ನ ಮಾನಸ ತೇಜಸ್ಸು ನನ್ನಲ್ಲಿ (ನನಗೆ ಲಭಿಸುವಂತಾಗಲಿ ಸ್ವಾಹಾ ಓ ದೇವಾ ನಿನ್ನ ಬುದ್ಧಿ ಬಲವು ನನ್ನಲ್ಲಿ ಲಭಿಸುವಂತಾಗಲಿ ಸ್ವಾಹಾ!" ಆಮೇಲೆ ಅಗ್ನಿಯಿಂದ ಬರುವ ಧೂಮವನ್ನು ಆಘ್ರಾಣಿಸಬೇಕು. ದೇಹವೆಲ್ಲ(ವೂ) ಆಜ್ಯಲೇಪನ ಮಾಡಿಕೊಳ್ಳಬೇಕು. ನಿಶ್ಯಬ್ದವಾಗಿ ಅಗ್ನಿ ಕುಂಡವನ್ನು ಸಮೀಪಿಸಿ ಸ್ಪರ್ಶಮಾಡಿ ನಿಂತು ಗಾಳಿಯಲ್ಲಿ, ತನ್ನ ವಾಂಛಿತಗಳನ್ನು ಹೇಳಬೇಕು. ಆಗ ಇವನು ಎಲ್ಲರಿಗೂ ಪ್ರಿಯನಾಗುವನು. ಈತನನ್ನು ಎಲ್ಲರೂ ಕಾಂಕ್ಷಿಸುವರು.

**ಮಂ.ಶ್ಲೋ॥ ಅಥಾತಸ್ಸಾಯಮನ್ನಂ ಪ್ರಾತರ್ಧನಮಂತರಮಗ್ನಿಹೋತ್ರಮಿತಿ ಚಾಚಕ್ಷತೇ । ಯಾವದ್ವೈ ಪುರುಷೋ ಭಾಸತೇ ನ ತಾವತ್ ಪ್ರಾಣಿತುಂ ಶಕ್ನೋತಿ ಪ್ರಾಣಂ ತದಾ ವಾಚಿ ಜುಹೋತಿ ಯಾವದ್ವೈ ಪುರುಷಃ ಪ್ರಾಣಿತಿ ನ ತಾವದ್ಭಾಷಿತುಂ ಶಕ್ನೋತಿ ವಾಚಂ ತದಾ ಪ್ರಾಣೇ ಜುಹೋತ್ಯೇತೇನಂತೇ ಮೃತಾಹುತೀರ್ಜಾಗ್ರಚ್ಚ ಸ್ವರೂಪಂ ಚ ಸಂತತಮವ್ಯವಚ್ಛಿನ್ನಂ ಜುಹೋತ್ಯಥ ಯಾ ಅನ್ಯಾ ಆಹುತಯೋಽಂತವತ್ಯ ಸ್ತಾಃ ಕರ್ಮಮಯ್ಯೋ ಭವಂತ್ಯೇತ ದು ವೈ ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ ಜುಹ್ವಾಂ ಚಕ್ರುಃ ॥ (೫)**

ತಾ : (ಇಂದ್ರಿಯ ನಿಗ್ರಹವನ್ನು ಕುರಿತು) ಒಳಗೆ ನಡೆಯುವ (ಅಂತರ) ಯಜ್ಞವನ್ನು ಪ್ರಾರ್ಥನೆ-ಯೆಂದು ಹೇಳುವರು. ವ್ಯಕ್ತಿ ಮಾತನಾಡಿದಾಗ ಆತನ ಶ್ವಾಸವು ಕೆಲಸ ಮಾಡುವುದಿಲ್ಲ ಆಗ ಪ್ರಾಣವು ತನ್ನ ಶ್ವಾಸವನ್ನು ವಾಕ್ಕಿನಲ್ಲಿ ಆಹುತಿ ಮಾಡುತ್ತಿರುವನು ಆ ವ್ಯಕ್ತಿ ಶ್ವಾಸವನ್ನೆಳೆದು ಕೊಂಡಾಗ ಮಾತನಾಡಲಾರ. ಆ ಎರಡು ಕಾರ್ಯಗಳು ಅಂತ್ಯವಿಲ್ಲದ ಆಹುತಿಗಳು. ಜಾಗ್ರತ್ತಿನಲ್ಲಾಗಲಿ, ನಿದ್ರೆ ಮಾಡುತ್ತಿರುವಾಗ ಆಗಲಿ, ನಿರಂತರವು ಅಂತರಂಗದಲ್ಲಿ ಈ ಆಹುತಿಗಳನ್ನು ಮಾಡುತ್ತಿರುತ್ತಾನೆ.

ಜಾಗ್ರತ್ತಿನಲ್ಲಾಗಲಿ ನಿದ್ರೆ ಮಾಡುತ್ತಿರುವಾಗ ಆಗಲಿ ಈ ಕ್ರಿಯೆ (ಆಹುತಿಗಳನ್ನು ನೀಡುವುದು) ನಡೆಯುತ್ತಲೇ ಇರುತ್ತದೆ. ಅಂತಹವರಿಗೆ ಬಹಿರಂಗವಾಗಿ ಜರುಗುವಂತಹ ಅಂತ್ಯವುಳ್ಳ ಕರ್ಮಗಳು. ಈ ಮಾರ್ಗವನ್ನರಿತ ಆಹುತಿಗಳೆಲ್ಲವೂ ಪೂರ್ವ ಮಹರ್ಷಿಗಳು ಬಹಿರಂಗ ಕರ್ಮಗಳಿಗೆ ಅಗ್ನಿ ಹೋತ್ರವನ್ನು ಜರುಗಿಸುವರು.

ಮಂ.ಶ್ಲೋ॥ ಅಥ ಕಥಂ ಬ್ರಹ್ಮೇತಿ ಹ ಸ್ಮಾಹ ಶುಷ್ಕ ಅಂಗಾರಮೃಗಿತ್ಯುಪಾಸೀತ । ಸರ್ವಾಣಿ ಹಸ್ಮೈ ಭೂತಾನಿ ಶ್ರೇಷ್ಠ್ಯಾಯ ಯಾಭ್ಯರ್ಚ್ಯಂತೇ ತದ್ಯಜುರಿತ್ಯುಪಾಸೀತ । ಸರ್ವಾಣಿ ಹಾಸ್ಮೈ ಭೂತಾನಿ ಶ್ರೇಷ್ಠ್ಯಾಯ ಯಜ್ಯಂತೇ । ತತ್ಸಾಮೇತ್ಯುಪಾಸೀತ ಸರ್ವಾಣಿ ಹಸ್ಮೈ ಭೂತಾನಿ ಶ್ರೈಷ್ಠ್ಯಾಯ-ಸನ್ನಮಂತೇ ತಚ್ಛ್ರೀತ್ಯುಪಾಸೀತ ತದ್ಯಶ ಇತ್ಯುಪಾಸೀತ ತತ್ತೇಜ ಇತ್ಯುಪಾಸೀತ ತದ್ಯಥೈ ತಚ್ಛಾಸ್ತ್ರಾಣಾಂ ಶ್ರೀಮತ್ತಮಂ ಯಶಸ್ವೀತಮಂ ತೇಜಸ್ವಿತಮಂ ಭವತಿ । ತಥೈವೈವಂ ವಿದ್ವಾನ್ ಸರ್ವೇಷಾಂ ಭೂತಾನಾಂ ಶ್ರೀಮತ್ತಮೋ ಯಶಸ್ವಿತಮಸ್ತೇಜಸ್ವಿತಮೋ ಭವತಿ । ತಮೇತಮೈಷ್ಟಕಂ ಕರ್ಮಮಯಮಾತ್ಮಾನಮಧ್ವರ್ಯುಸ್ಸಂಸ್ಕರೋತಿ ತಸ್ಮಿನ್ಯದ್ಧರ್ಮಮಯಂ ಪ್ರಭವತಿ । ತದ್ಧರ್ಮಮಯಂ ಋಙ್ಮಯಂ ಹೋತಾ ಋಙ್ಮಯಂ ಸಾಮಮಯಮುದ್ಗಾತಾ ಸ ಏಷ ಸರ್ವಸ್ಯೈ ತ್ರಯೀ ವಿದ್ಯಾಯಾ ಆತ್ಮೈಷ ಉಪ ಏವಾಸ್ಯಾತ್ಮೈತದಾತ್ಮಾ ಭವತಿ । ಯ ಏವಂ ವೇದ (6)

ತಾ : ಈ ಹೇಳಿದುದೆಲ್ಲ ಬ್ರಹ್ಮವೇ. ಇದನ್ನು 'ಶುಷ್ಕಂಗಾರಮೃಕ್' ಎಂದು ಉಪಾಸಿಸುವರು ಸರ್ವ ಪ್ರಾಣಿಗಳು ಆ ಬ್ರಹ್ಮದೇವನನ್ನು ಕೀರ್ತಿಸುತ್ತಿರುವಂತೆ ಭಾವಿಸಿ ಯಜುರ್ವೇದ ಋಕ್ಕುಗಳಿಂದ ಪ್ರಾರ್ಥಿಸಬೇಕು. ಸರ್ವಪ್ರಾಣಗಳು ಆ ಬ್ರಹ್ಮವನ್ನು ಯಜುರ್ವೇದ ಋಕ್ಕುಗಳಿಂದ ಸ್ತೋತ್ರ ಮಾಡುತ್ತಿರು ವಂತೆ ಪ್ರಾರ್ಥನೆ ಸಲ್ಲಿಸಬೇಕು. ಆ ಬ್ರಹ್ಮನ ಮಹತ್ವವನ್ನು, ಸರ್ವಪ್ರಾಣಗಳು ಸಾಮಗಾನದೊಂದಿಗೆ ಸ್ತೋತ್ರ ಮಾಡುತ್ತಿರುವಂತೆ, ಪ್ರಾರ್ಥನೆ ಮಾಡಬೇಕು. ಆ ಬ್ರಹ್ಮದ ಮಹತ್ತರ ಸೌಂದರ್ಯವನ್ನು ಕೀರ್ತಿಸಬೇಕು. ಯಶಸ್ಸನ್ನು ಕೀರ್ತಿಸಬೇಕು. ಐಶ್ವರ್ಯವನ್ನು ಕೀರ್ತಿಸಬೇಕು. ತೇಜಸ್ಸನ್ನು ಕೀರ್ತಿಸ ಬೇಕು. ಆ ಬ್ರಹ್ಮದ ಸೌಂದರ್ಯವನ್ನು, ಐಶ್ವರ್ಯವನ್ನು, ತೇಜಸ್ಸನ್ನು ಪ್ರಾಣಿಗಳೆಲ್ಲದರಲ್ಲೂ ದರ್ಶಿಸಬೇಕು. ಯೋಗಿ ಈ ವಿಧವಾಗಿ ಆತ್ಮವನ್ನು ಸಂಸ್ಕರಿಸಿಕೊಳ್ಳಬೇಕು. ಶಾಸ್ತ್ರದಲ್ಲಿ ಹೇಳಿರುವಂತೆ ಯಜ್ಞ ಕಾರ್ಯದಲ್ಲಿ ತೊಡಗಬೇಕು. ಅಧ್ವರ್ಯುವು ಸಂಸ್ಕರಿಸಲ್ಪಟ್ಟು ಸರ್ವವನ್ನು ಋಙ್ಮಯವಾಗಿ ಮಾಡುವನು. ಸೋಮಮಯವನ್ನಾಗಿ ಮಾಡುವನು. ತ್ರಯೀ ವಿದ್ಯೆಗಳಲ್ಲಿ ಸರ್ವವೂ ಆತ್ಮಮಯ-ವಾಗುವುದು. ಇದನ್ನು ತಿಳಿದುಕೊಂಡವನು ಆತ್ಮವೇ ಆಗುವನು.

ಮಂ.ಶ್ಲೋ॥ ಅಥಾತಸ್ಸರ್ವಜಿತಃ ಕೌಷೀತಕೇ ಸ್ತ್ರೀಣ್ಯುಪಾಸನಾನಿ ಭವಂತಿ ಯಜ್ಞೋಪವೀತಂ ಕೃತ್ವಾಪ ಆಚಮ್ಯ ತ್ರಿರುದಪಾತ್ರಂ ಪ್ರಸಿಚ್ಯೋದ್ಯಂತಮಾದಿತ್ಯಮುಪತಿಷ್ಠೇದ್ವೃದ್ವರ್ಗೋಸಿ ಪಾಪ್ಮಾನಂ ಮೇ ಉದ್ವೃಙ್ಧೀತ್ಯೇತಯೈವಾ ವೃತಾಮಧ್ಯೇ ಸಂತಮುದ್ವರ್ಗೋಸಿ ಪಾಪ್ಮಾನಮಂತದ್ವ್ಯ-ಪಾ ವಾತ್ಯೈತ್ಯೈವಾವೃತಾಸ್ತಂಯಂತಂ ಯದ್ವರ್ಣೋಸಿ ಪಾಪ್ಮಾನಂ ಮೇ ಸರ್ವಂ ವಾತ್ಯೇತಿ ಯದಹೋರಾತ್ರಾಭ್ಯಾಂ ಪಾಪಂ ಕರೋತಿ ಸಂ ತತ್ ವೃಂಕ್ತೇ ॥ (7)

ತಾ : (ಪಾಪಗಳು ಹೋಗುವುದಕ್ಕೆ ನಿತ್ಯನಿತ್ಯವೂ ಸೂರ್ಯಾರಾಧನೆ (ಮೂರು ವಿಧಗಳಾದ ಕೌಷೀತಕೀ ಉಪನಿಷತ್ತಿನ ಉಪಾಸನೆಗಳು) ಯಜ್ಞೋಪವೀತವನ್ನು ಉಪವೀತವಾಗಿ ಧರಿಸಿಟ್ಟು ಮಾಮೂಲಾಗಿ ಹಾಕಿಕೊಂಡು ಮೂರುಬಾರಿ ಉದಕ ಪಾತ್ರೆಯ ಮೇಲೆ ನೀರನ್ನು ಚುಮುಕಿಸಿ ಕಮಂಡಲದಲ್ಲಿನ ಜಲವನ್ನು ಎಲ್ಲೆಡೆ ಪ್ರೋಕ್ಷಿಸಿ ಉದಯಿಸುತ್ತಿರುವ ಸೂರ್ಯನನ್ನು ಉಪಾಸಿಸಬೇಕು. "ಸೂರ್ಯದೇವಾ! ನೀನು ಪಾಪಗಳನ್ನು ಹೋಗಲಾಡಿಸುವವನು, ನನ್ನ ಸರ್ವ ಪಾಪಗಳನ್ನು ಪ್ರಕ್ಷಾಳನಮಾಡು' ಎಂದು ಅದೇ ವಿಧವಾಗಿ ಮಧ್ಯಾಹ್ನ ಸಮಯ (12ಗಂಟೆ ಸಮಯ)ದಲ್ಲಿ ಕೂಡಾ ಈ ರೀತಿಯಲ್ಲಿ ಹೇಳಬೇಕು. ಓ ದೇವಾ ನೀನು ಪಾಪರಾಹಿತ್ಯವನ್ನು ಉಂಟು ಮಾಡುವಂತಹವನು. ನನ್ನ ಪಾಪಗಳನ್ನು ಹೋಗಲಾಡಿಸುವಂತಹವನಾಗು." ಇದೇ ರೀತಿಯಾಗಿ ಸಾಯಂಸಂಧ್ಯ ಸಮಯದಲ್ಲಿ ಕೂಡಾ ಈ ವಿಧವಾಗಿ ಹೇಳಬೇಕು. 'ಓ ದೇವಾ ನೀನು ಪಾಪಗಳನ್ನು ಹೋಗಲಾಡಿಸುವಂತಹವನು ನನ್ನ ಪಾಪಗಳನ್ನು ಪೂರ್ತಿಯಾಗಿ ಹೋಗಲಾಡಿಸು." ಈ ವಿಷಯವನ್ನು ಸರಿಯಾಗಿ ತಿಳಿದುಕೊಂಡವರು ಸೂರ್ಯ ಭಗವಾನನ ಉಪಾಸನೆಯನ್ನು ಮಾಡುವರು. ಈ ಉಪಾಸನೆ ಮಾಡುವುದರಿಂದ ಹಗಲು ಮಾಡಿದ ಪಾಪಗಳು, ರಾತ್ರಿ ಮಾಡಿದ ಪಾಪಗಳು, ಪೂರ್ತಿಯಾಗಿ ಪಾಪಗಳು ಹೋಗುವವು.

ಮಂ.ಶ್ಲೋ|| **ಅಥಮಾಸಿಮಾಸ್ಯಮಾವಾಸ್ಯಾಯಾಂ ಪಶ್ಚಾಚ್ಚಂದ್ರಮಸಂ ದೃಶ್ಯಮಾನಮುಪತಿಷ್ಠೇತ್ಯೈ ತಯ್ಯೆವಾವೃತಾ ಹರಿತ ತೃಣಾಭ್ಯಾಂ ವಾ ವೃತ್ತಸ್ಯಾದ್ಯತ್ತೇ ಸ್ವಸೀಮೇ ಹೃದಯಮಧಿ ಚಂದ್ರಮಸಿ ಶ್ರಿತಂ ತೇನಾಮೃತತ್ವಮಸ್ಯೇಶಾನಂ ಮಾಹಂ ಪೌತ್ರಮಘಂ ರುದಮಿತಿ ಸಹಾಸ್ಮಾ ತ್ಪೂರ್ವಾಃ ಪ್ರಜಾಃ ಪ್ರಯಂತೀತಿ ನಜಾತಪುತ್ರಸ್ಯಾಥಾ ಜಾತಪುತ್ರಸ್ಯಾಹ ಯಂ ಸಮೇತಾತು ಆಪ್ಯಾಯಸ್ವಸಮೇತು ತೇ ಸಂತೇ ಪಯಾಂಸಿ ಸಮುಯಂತುವಾ ರಾಜಾಯಮಾದಿತ್ಯಾ-ಮಾತ್ವಾ ಅಂಶುಮಾಪ್ಯಾಯಂತೀತೇ ತಾಸ್ತಿಸ್ರ ಜಪಿತ್ವಾ ನಾಸ್ಮಾಕಂ ಪ್ರಾಣೇನ ಪ್ರಜಯಾ ಪಶುಭಿರಾಪ್ಯಾಯಯಸ್ವ ಯೋಽಸ್ಮಾನ್ ದ್ವೇಷ್ಟಿ ಯಂಚ ವಯಂ ದ್ವಿಷ್ಮಸ್ತಸ್ಯ ಪ್ರಾಣೇನ ಪ್ರಜಯಾ ಪಶುಭಿರಾಪ್ಯಾಯಸ್ಯೇತಿ ದೈವೀಮಾವೃತಮಾವರ್ತ ಆದಿತ್ಯಸ್ಯಾವೃತಮನ್ವಾ-ವರ್ತಯತಿ ದಕ್ಷಿಣಂ ಬಾಹುಮನ್ವಾವರ್ತತೇ|| (8)**

ತಾ : (ಐಶ್ವರ್ಯಕ್ಕಾಗಿ ಶುಕ್ಲ ಪಕ್ಷ ಚಂದ್ರನನ್ನು ಉಪಾಸನೆ ಮಾಡುವ ವಿಧಾನ) ಪ್ರತಿ ತಿಂಗಳು ಪೌರ್ಣಮಿಯಿಂದ ಪೌರ್ಣಮಿಯವರೆಗೂ ಚಂದ್ರನು ಪಶ್ಚಿಮದ ದಿಕ್ಕಿನಲ್ಲಿ ಪ್ರಕಾಶಿಸುವವರೆಗೂ ಚಂದ್ರೋಪಾಸನೆ ಮಾಡಬೇಕು ಇಲ್ಲವೆ ಕೆಲವು ಹಚ್ಚಹಸುರಿನ ದೂರ್ವೆಗಳನ್ನು ಸಮರ್ಪಿಸಿ ಈ ಕೆಳಗೆ ಹೇಳಿರುವಂತೆ ಮಾಡಬೇಕು. ಓ ಚಂದ್ರ ದೇವಾ ನೀನು ನನ್ನ ಹೃದಯದಲ್ಲಿ ಸ್ವಸೀಮಾ ರೂಪದಲ್ಲಿರುವೆ ಈ ವಿಷಯ ನನಗೆ ಚೆನ್ನಾಗಿ ಗೊತ್ತಿದೆ. ನನ್ನ ಪುತ್ರರು ಮಾಡಿದ ಪಾಪಗಳು ನನಗೆ ದುಃಖವನ್ನುಂಟುಮಾಡದಿರಲಿ ಯತ್ತೇಸ್ವಸೀಮೇ... 'ಅಘರುದಂ' ಎನ್ನುವ ಮಂತ್ರವನ್ನು ಹೇಳಬೇಕು ಈ ವಿಧವಾಗಿ ಉಪಾಸನೆ ಮಾಡಿದವರ ಸಂತತಿಗೆ ವ್ಯಾಧಿಗಳು ಬರುವುದಿಲ್ಲ. ಪುತ್ರಸಂತತಿ ಯಿಲ್ಲದವರು ಕೂಡಾ ಈ ವಿಧವಾಗಿ ಉಪಾಸನೆ ಮಾಡಿದವರ ಸಂತತಿಗೆ ವ್ಯಾಧಿಗಳು ಬರುವುದಿಲ್ಲ ಪುತ್ರರಿರುವವರು ಪುತ್ರಸಂತತಿಯಿಲ್ಲದವರು ಕೂಡಾ ಈ ಕೆಳಗೆ ಹೇಳಿದ್ದಂತೆ ಪ್ರಾರ್ಥನೆ ಮಾಡಬೇಕು

"ದೇವಾ ನೀನೇ ನನಗೆ ಆಧಾರ ನಿಮ್ಮಲ್ಲಿ ನನ್ನನ್ನು ಸೇರಿಸಿಕೊ ನಿನ್ನಲ್ಲಿ ಸರ್ವ ರಸಗಳೂ, ಸರ್ವ ಶಕ್ತಿಗಳೂ ಇವೆ. ಸೂರ್ಯ ಭಗವಾನನು ಕೂಡಾ ಅನುಗ್ರಹಿಸುವಂತಾಗಲಿ' ಮೇಲೆ ತಿಳಿಸಿರುವ ಋಕ್ಕುಗಳೊಂದಿಗೆ ಪ್ರಾರ್ಥನೆ ಮಾಡಿದ ನಂತರ ಈ ವಿಧವಾಗಿ ಹೇಳಬೇಕು. 'ಪ್ರಾಣಶಕ್ತಿಯಿಂದ, ಸಂತತಿಯಿಂದ, ಪಶುಗಳಿಂದ ನನಗೆ ದುಃಖವು ಉಂಟಾಗದಿರಲಿ ಕೈಗಳನ್ನ ದೇವತೆಯಾದ ದೇವೇಂದ್ರನು ರಕ್ಷಸುವಂತಾಗಲಿ ಸೂರ್ಯ ಭಗವಾನನು ಕಾಪಾಡುವಂತಾಗಲಿ ದಕ್ಷಿಣ(ಬಲ) ಹಸ್ತದಲ್ಲಿ ಪುಣ್ಯಕಾರ್ಯಗಳನ್ನು ಮಾಡುವಂತಾಗಲಿ!"

**ಮಂ.ಶ್ಲೋ॥ ಅಥ ಪೌರ್ಣಮಾಸ್ಯಾಂ ಪುರಸ್ತಾಚ್ಚಂದ್ರಮಸಂ ದೃಶ್ಯಮಾನಮುಪತಿಷ್ಠೇತ್ಯೆ ತವಾವೃತಾ ಸೋಮೋ ರಾಜಾಸಿ ವಿಚಕ್ಷಣಃ ಪಂಚಮುಖೋಽಸಿ ಪ್ರಜಾಪತಿಃ ಬ್ರಾಹ್ಮಣ ಸ್ತ ಏಕಂ ಮುಖಂ ತೇನ ಮುಖೇನ ರಾಜ್ಞೋಽತ್ಸಿ ತೇನ ಮುಖೇನ ಮಾಮನ್ನಾದಂ ಕುರು ರಾಜಾ ತ ಏಕಂ ಮುಖಂ ತೇನ ಮುಖೇನ ವಿಶೋತ್ಸಿ ತೇನ್ಯೈವ ಮುಖೇನ ಮಾಮನ್ನಾದಂ ಕುರುಶ್ಯೇನ ಸ್ತ ಏಕಂ ಮುಖಂ ತೇನ ಮುಖೇನ ಪಕ್ಷಿಣೋತ್ಸಿತೇನ ಮುಖೇನ ಮಾಮನ್ನಾದಂ ಕುರ್ವಗ್ನಿಸ್ತ ಏಕಂಮುಖಂ ತೇನ ಮುಖೇನೇಮಂಲೋಕಮತ್ಸಿ ತೇನ ಮುಖೇನ ಮಾಮನ್ನಾದಂ ಕುರು ಸರ್ವಾಣಿ ಭೂತಾನಿ ಮುಖಂ ತೇನ ಮುಖೇನ ಸರ್ವಾಣಿ ಭೂತಾನ್ಯತ್ಸಿ ತೇನ ಮುಖೇನ ಮಾಮನ್ನಾದಂ ತ್ಯೇವ ಪಂಚಮಂ ಕುರು ಮಾಸ್ಮಾಕಂ ಪ್ರಾಣೇನ ಪ್ರಜಯಾ ಪಶುಭಿ-ರವಕ್ಷೇಪಾ ಯೋಽಸ್ಮಾನ್ ದ್ವೇಷ್ಟಿ ಯಂಚ ವಯಂ ದ್ವಿಷ್ಮ ಸ್ತನ್ಯ ಪ್ರಾಣೇನ ಪ್ರಜಯಾ ಪಶುಭಿರವಕ್ಷೀಯಸ್ವೇತಿ ಸ್ಥಿತಿರ್‍ದೈವೀಮಾವೃತಮಾವರ್ತ ಆದಿತ್ಯಸ್ಯಾವೃತಮನ್ವಾವರ್ತಂ ತ ಇತಿ ದಕ್ಷಿಣಂ ಬಾಹುಮನ್ವಾವರ್ತತೇ ॥ (9)**

ತಾ : (ಪೌರ್ಣಮಿ ತಿಥಿಯ ದಿನ ಕೂಡಾ ಮೇಲೆ ಹೇಳಿದ ರೀತಿಯಾಗಿಯೇ ಚಂದ್ರನು ಪ್ರಕಾಶಿಸುವವರೆಗೂ ಉಪಾಸನೆ ಮಾಡಬೇಕು) ಈ ವಿಧವಾಗಿ ಪ್ರಾರ್ಥಿಸಬೇಕು." ಓ ದೇವಾ ನೀನು ಸೋಮನಾಮಧೇಯದೊಂದಿಗೆ ರಾಜನಾಗಿರುವೆ ನೀನೇ ಮಹಾತೇಜಸ್ಸಿನೊಂದಿಗೆ ಪ್ರಕಾಶಿಸುತ್ತಾ ಪಂಚಮುಖ ಪ್ರಜಾಪತಿ ಒಂದು ಮುಖದಲ್ಲಿ ಸೃಷ್ಟಿಕರ್ತ ಬ್ರಹ್ಮನಾಗಿರುವೆ. ಆ ಮುಖದಲ್ಲಿ ಚಕ್ರವರ್ತಿಗಳನ್ನೇ ಭುಜಿಸುತ್ತಿರುವೆ. ಆ ಮುಖದೊಂದಿಗೆ ನನ್ನನ್ನು ಅನ್ನವನ್ನು ಭುಜಿಸುವವನನ್ನಾಗಿ ಮಾಡು. ಮತ್ತೊಂದು ಮುಖದಲ್ಲಿ(ದೊಂದಿಗೆ) ನೀನು ದೊರೆನಾಗಿರುವೆ. ಆ ಮುಖದಿಂದ ವಿಶ್ವದ ಪ್ರಜೆಗಳನ್ನು ಭಕ್ಷಿಸುತ್ತಿರುವೆ ಮತ್ತೊಂದು ಮುಖದೊಂದಿಗೆ ಶ್ಯೇನನಾಗಿರುವೆ ಆ ಮುಖದಿಂದ ಪಕ್ಷಿಗಳನ್ನು ಭಕ್ಷಿಸುತ್ತಿರುವೆ. ಆ ಮುಖದಿಂದ ಕೂಡಾ ನನ್ನನ್ನು ಅನ್ನವನ್ನು ತಿನ್ನುವವನಾಗಿ ಮಾಡು. ಮತ್ತೊಂದು ರೂಪದಲ್ಲಿ ಅಗ್ನಿ ರೂಪವಾಗಿರುವೆ. ಆ ಮುಖದಿಂದ ನನ್ನನ್ನು ವಿಶ್ವವನ್ನು ಅನುಭವಿಸು-ವಂತೆ ಮಾಡು. ನಿನ್ನ ಐದನೆಯ ಮುಖದಿಂದ ಸರ್ವ ಜೀವರಾಶಿಗಳನ್ನು ಭಕ್ಷಿಸುತ್ತಿರುವೆ. ಆ ಮುಖದಿಂದ ಕೂಡಾ ನನ್ನನ್ನು ಅನ್ನವನ್ನು ಭುಜಿಸುವವನನ್ನಾಗಿ ಮಾಡು. ನಮ್ಮ ಪ್ರಾಣ ಶಕ್ತಿ ಸಂತಾನ, ಪಶುಸಂತತಿ ವ್ಯರ್ಥವಾಗದಿರಲಿ ನಮ್ಮನ್ನು ದ್ವೇಷಿಸುವವರನ್ನು ಮಾತ್ರವೇ ನಾವು ದ್ವೇಷಿಸುತ್ತೇವೆ. ನಾವು ದ್ವೇಷಿಸಿದವರ ಪ್ರಾಣ ಶಕ್ತಿಗಳು, ಸಂತತಿ, ಪಶುಗಳು ದೇವಾ ವ್ಯರ್ಥಗೊಳ್ಳು-

ವಂತಾಗಲಿ. ಆನಂತರ ದೇವತಾರಾಧನೆ ಮಾಡುವೆನು, ಸೂರ್ಯಭಗವಾನನ್ನು ಪೂಜಿಸುವೆ ದಕ್ಷಿಣ ಹಸ್ತದಲ್ಲಿ ಪುಣ್ಯ (ಕಾರ್ಯ)ಗಳನ್ನು ಮಾಡುವೆನು.

**ಮಂ.ಶ್ಲೋ|| ಅಥ ಸಂವೇಶ್ಯನ್ ಜಾಯಾಯೈ ಹೃದಯಮಭಿಮೃಶೇತ್ ಯತ್ತೇ ಸುಸೀಮೇ ಹೃದಯೋ ಹಿತಮಂತಃ ಪ್ರಜಾಪತೌ ಮನ್ಯೇಽಹಮಾಂ ತದ್ವಿದ್ವಾಂಸಂ ಮಾಹಂ ಪೌತ್ರಮಘಂ ರುದಮಿತಿ ಸಹಾಸ್ಮಾತ್ಪೂರ್ವಾಃ ಪ್ರಜಾಃಪ್ರೈತಿ || (10)**

ತಾ : (ಪತ್ನೀ, ಪುತ್ರರೊಂದಿಗೆ ಮಾಡುವ ಪ್ರಾರ್ಥನೆ.) ಪತ್ನಿಯೊಂದಿಗೆ ಹಾಸಿಗೆಯ ಮೇಲೆ ಮಲಗಿರುವಾಗ ಆಕೆಯ ಹೃದಯವನ್ನು ಸ್ಪರ್ಶಿಸಬೇಕು. ಈ ಕೆಳಕಂಡ ರೀತಿಯಲ್ಲಿ ಧ್ಯಾನಿಸಬೇಕು. ನನ್ನ ಹೃದಯದಲ್ಲಿ ಆರಾಧಿಸುತ್ತಿರುವಂತಹ ಓದೇವಿ, ಸುಂದರ ಮೂರ್ತಿ ಸುಸಂತಾನವನ್ನು ಪಡೆಯುವಂತವಳಾಗು. ಪ್ರಜಾಪತಿ ರೂಪದಲ್ಲಿ ನನ್ನನ್ನು ರಕ್ಷಿಸು. ಓದೇವೀ ಅಮರ ಮೂರ್ತಿ ನಮ್ಮ ಸಂತತಿಗೆ ವ್ಯಾಧಿಗಳು ಬರದಂತೆ ರಕ್ಷಿಸು. ಈ ರೀತಿ ಋಕ್ಕುಗಳೊಂದಿಗೆ ಪ್ರಾರ್ಥಿಸುವವರ ಸಂತತಿಗೆ ಯಾವುದೇ ಖಾಯಿಲೆ (ವ್ಯಾಧಿ)ಗಳು ಬರುವುದಿಲ್ಲ.

**ಮಂ.ಶ್ಲೋ|| ಅಥ ಪ್ರೋಷ್ಯಾಯನ್ ಪುತ್ರಸ್ಯ ಮೂರ್ಧಾನಮಭಿಮೃಶತಿ । ಅಂಗಾದಂಗಾ-ತ್ಸಂಭವಸಿ ಹೃದಯಾದಧಿಜಾಯಸೇ ಆತ್ಮಾವೈ ಪುತ್ರನಾಮ್ನಾ ಸ ಜೀವ ಶರದಶ್ಶತಮ್ ಅಸಾವಿತಿ ಸಾಮಾನ್ಯ ಗೃಹ್ಣಾತಿ ಮಾಚ್ಛೇತ್ತಾ ಮಾಪ್ಯದಿಷ್ಠಾಶ್ಶತಂ ಶರದ ಆಯುಷೋ ಜೀವ ಪುತ್ರ ತೇ ನಾಮ್ನಾ ಮೂರ್ಧಾನಮಭಿಜಿಘ್ರಾಮ್ಯಸಾವಿತಿ ತ್ರಿಭಿರ್ಮೂರ್ಧಾನಮಭಿಜಿಘ್ರೇದ್ಗವಾ ತ್ವಾ ಹಿಂಕಾರೇಣಾಭಿ-ಹಿಂಕರೋಮೀತಿ ತ್ರಿರಸ್ಯಮೂರ್ಧಾನಮಭಿಹಿಂಕುರ್ಯಾತ್ || (11)**

ತಾ : (ಪರದೇಶದಿಂದ ಹಿಂದಿರುಗಿ ಬಂದ ತಂದೆ ಮಗನನ್ನು ಪ್ರೇಮದಿಂದ ಆಶೀರ್ವದಿಸು-ವುದು) ಬಹಳ ಕಾಲವಾದ ಮೇಲೆ ಹಿಂದಿರುಗಿ ಬಂದ ತಂದೆ ಪುತ್ರನ ಮೂರ್ಧವನ್ನು (ಆಘ್ರಾಣಿಸಿ) ಮುದ್ದಿಟ್ಟು ಈ ಕೆಳಗೆ ಹೇಳಿರುವ ರೀತಿಯಾಗಿ ಹೇಳಬೇಕು ನನ್ನೆಲ್ಲ ಅವಯವಗಳಿಂದ ಹೃದಯದಿಂದ ನೀನು ಹುಟ್ಟಿರುವೆ ನಾನೇ ನೀನು. ನಿನಗೆ ರಕ್ಷಣೆ ಉಂಟಾಗಲಿ ನನ್ನ ಹೃದಯಾಂತರಾಳದಿಂದ ನಿನಗೆ ಆಶೀರ್ವಾದಗಳು ಪುತ್ರಾ, ನೀನೇ ನಾನಾಗಿರುವೆ. ನೀನು ನೂರು ವರ್ಷ ಬಾಳುವಂತಾಗಲಿ. ಪುತ್ರನ ಹೆಸರು ಹೇಳಿ ಆಶೀರ್ವದಿಸಬೇಕು. ಗೋವುಗಳ ಹೀಂಕಾರದೊಂದಿಗೆ ನಿನ್ನನ್ನು ಹೀಂಕರಿಸುತ್ತಿದ್ದೇನೆ ಎನ್ನುತ್ತಾ ಮೂರು ಬಾರಿ ಮೂರ್ಧವನ್ನು ಆಘ್ರಾಣಿಸಬೇಕು. ಅಶ್ಮಾಭವ ಪರಶುರ್ಭವ.... ದ್ರವಿಣಾನಿ ದೇಹೀತಿ (ಶ್ಲೋಕವಿದೆ, ಪರಿಶೀಲಿಸಿ.)

**ಮಂ.ಶ್ಲೋ|| ಅಥಾತೋ ದೈವಃ ಪರಿಮರ ಏತದ್ವೈ ಬ್ರಹ್ಮ ದೀವ್ಯತೇ ಯದಗ್ನಿರ್ಜ್ವಲತ್ಯಥೈತನ್ಮ್ರಿಯತೇ ಯನ್ನಜ್ವಲತಿ ತಸ್ಯಾದಿತ್ಯಮೇವ ತೇಜೋ ಗಚ್ಛತಿ ವಾಯುಂ ಪ್ರಾಣ ಏತದ್ವೈ ಬ್ರಹ್ಮ ದೀವ್ಯತೇ ಯಥಾ ಮರ್ತ್ಯೋ ದೃಶ್ಯತೇಽಥೈತನ್ಮ್ರಿಯತೇ ಯನ್ನದೃಶ್ಯತೇ ತಸ್ಯ ಚಂದ್ರಮಸ -ಮೇವ ತೇಜೋ ಗಚ್ಛತಿ ವಾಯುಂ ಪ್ರಾಣ ಏತದ್ವೈ ಬ್ರಹ್ಮ ದೀವ್ಯತೇ ಯಚ್ಚಂದ್ರಮಾ ದೃಶ್ಯತೇ ಯದ್ವಿದ್ಯುಧ್ವಿದ್ಯೋತತೇಽಥೈತನ್ಮ್ರಿಯತೇ ಯನ್ನ ವಿದ್ಯೋತತೇ ತಸ್ಯ ವಿದ್ಯುತ -ಮೇವ ವಾಯುಮೇವ ತೇಜೋ ಗಚ್ಛತಿ ವಾಯುಂ ಪ್ರಾಣಸ್ತಾವಾ ಏತಾಸ್ಸರ್ವಾ ದೇವತಾ**

**ವಾಯುಮೇವ ಪ್ರವಿಶ್ಯ ವಾಯೌ ತೃಪ್ತಾನ ಮೂರ್ಛಂತೇ ತಸ್ಮಾದೇವ ಪುನರುದೀರತ ಇತ್ಯಧಿದೈವತಮಥಾಧ್ಯಾತ್ಮಮ್ ॥ (12)**

ತಾ : (ಗಾಳಿಯಿಂದ ಅಂತರ್ಯಾಮಿಯ ಮೂಲಕ ಬರುವ ಮಹಾಮಹಿಮೆಗಳು. ಮೃತ್ಯುವು ಸಂಭವಿಸುವ ಕ್ರಮ, ದೇವತೆಗಳ ಸಹಾಯ ಅಗ್ನಿ ಪ್ರಜ್ವಲಿಸಿ ಪ್ರಕಾಶಿಸುತ್ತಿರುವಾಗ ಈ ಬ್ರಹ್ಮವು ತೇಜೋವಂತವಾಗಿರುವುದು. ಅಗ್ನಿಯಲ್ಲಿ ಜ್ವಾಲೆಗಳು ತಗ್ಗಿದಾಗ ಅದು ಮರಣಿಸಿ ಸೂರ್ಯ ಭಗವಾನನಲ್ಲಿ ಲೀನವಾಗುವುದು. ಅಗ್ನಿಯಲ್ಲಿರುವ ಪ್ರಾಣ ಶಕ್ತಿ ವಾಯುಭೂತದಲ್ಲಿ ಲೀನವಾಗುವುದು ಆಗಲೂ ಬ್ರಹ್ಮ ತೇಜೋವಂತವಾಗಿ ಪ್ರಕಾಶಿಸುವುದು. ಸೂರ್ಯ ದೇವತೆ ಕೂಡಾ ಅದೃಶ್ಯವಾಗುವುದು ಸೂರ್ಯ ತೇಜಸ್ಸು, ಚಂದ್ರನಲ್ಲಿ ಲೀನವಾಗುವುದು ಸೂರ್ಯನಲ್ಲಿರುವ ಪ್ರಾಣವಾಯುವು, ವಾಯು ಭೂತದಲ್ಲಿ ಸೇರುವುದು. ಪ್ರಾಣಶಕ್ತಿ ವಾಯು ಭೂತದಲ್ಲಿ ಲೀನವಾಗುವುದು. ಆಗಲೂ ಕೂಡಾ ಬ್ರಹ್ಮ ಪ್ರಕಾಶಿಸುವನು. ಚಂದ್ರತೇಜಸ್ಸು ವಿದ್ಯುತ್ತಿನಲ್ಲಿ ಪ್ರಕಾಶಿಸಿ ಲೀನವಾಗುವುದು. ಆಗಲೂ ಕೂಡಾ ಬ್ರಹ್ಮ ಬೆಳಗುವುನು. ಆ ವಿದ್ಯುತ್ತಿನ ಪ್ರಕಾಶವು ಪ್ರಾಣ ಶಕ್ತಿ ಎಲ್ಲವೂ ವಾಯುಭೂತದಲ್ಲಿ ಸೇರುವುದು. ಸರ್ವ ದೇವತೆಗಳು ವಾಯು ಭೂತದಲ್ಲಿ ಲೀನವಾಗುವರು. ವಾಯುಭೂತದಲ್ಲಿರುವುದರಿಂದ ಅಮರರಾಗಿರುವರು. ಸರ್ವದೇವತೆಗಳು ಮತ್ತೆ ವಾಯು ಭೂತದಿಂದ ಜನಿಸಿರುವರು. ಅಮರವಾಗಿ ಅಧಿ ದೇವತೆಗಳಾಗಿ ಬೆಳಗುತ್ತಿದ್ದಾರೆ. ಇದು ಅಧಿದೈವತ, ಇದು ಅಧಾತ್ಮ.

ಮಂ.ಶ್ಲೋ॥ **ಏತದ್ವೈ ಬ್ರಹ್ಮ ದೀದಿಪ್ಯತೇ ಯದ್ವಾಚಾ ವದತ್ಯಥೈತನ್ಮ್ರಿಯತೇ ಯನ್ನ ವದತಿ ತಸ್ಯ ಚಕ್ಷುರೇವ ತೇಜೋ ಗಚ್ಛತಿ ಪ್ರಾಣಂ ಏತದ್ವೈ ಬ್ರಹ್ಮ ದೀಪ್ಯತೇ ಯಚ್ಚಕ್ಷುಷಾ ಪಶ್ಯತ್ಯ - ಥೈತನ್ಮ್ರಿಯತೇ ಯನ್ನಪಶ್ಯತಿ ತಸ್ಯ ಶ್ರೋತ್ರಮೇವ ತೇಜೋ ಗಚ್ಛತಿ ಪ್ರಾಣಂ ಪ್ರಾಣ ಏತದ್ವೈ ಬ್ರಹ್ಮ ದೀಪ್ಯತೇ ಯಚ್ಛ್ರೋತ್ರೇಣ ಶೃಣೋತ್ಯಥೈ ತನ್ಮ್ರಿಯತೇ ಯನ್ನಶೃಣೋತಿ ತಸ್ಯಮನ ಏವ ತೇಜೋ ಗಚ್ಛತಿ ಪ್ರಾಣಂ ಪ್ರಾಣ ಏತದ್ವೈ ಬ್ರಹ್ಮ ದೀಪ್ಯತೇ. ಯನ್ಮನಸಾ ಧ್ಯಾಯತ್ಯಥೈತನ್ಮ್ರಿಯತೇ ಯನ್ನ ಧ್ಯಾಯತಿ ತಸ್ಯ ಪ್ರಾಣಮೇವ ತೇಜೋ ಗಚ್ಛತಿ ಪ್ರಾಣಂ ಪ್ರಾಣಸ್ತಾವಾ ಏತಾಸ್ಸರ್ವಾದೇವತಾಃ ಪ್ರಾಣಮೇವ ಪ್ರವಿಶ್ಯ ಪ್ರಾಣೇ ನೃಪ್ತಾನ ಮೂರ್ಛಂತೇ ತಸ್ಮಾಧ್ಯೈವ ಪುನರುದಿರತೇ ತದ್ಯದಿಹ ವಾ ಏವಂ ವಿದ್ವಾಂಸ ಉಭೌ ಪರ್ವತಾ ವಭಿಪ್ರವರ್ತ -ಯಾತಾಂ ತಸ್ತ್ವರ್ಷಮಾಣೋ ದಕ್ಷಿಣಶ್ಚೋತ್ತರಶ್ಚ ನ ಹೈವೈನಂ ಸ್ತೃಣ್ವೀಯಾತಾಮಥ ಯ ಏನಂ ದ್ವಿಷಂತಿ ಯಾಂಶ್ಚ ಸ್ವಯಂ ದ್ವೇಷ್ಟಿ ತ ಏವಂ ಸರ್ವೇ ಪರಿತೋ ಮ್ರಿಯಂತೇ ॥ (13)**

ತಾ : ಈ ವಿಧವಾಗಿ ಸರ್ವದಾ ಬ್ರಹ್ಮ ಪ್ರಕಾಶಸಿಸುತ್ತಿರುವುದು ಯೋಗಿಯುವಾಕ್ಕುಗಳಿಂದ ಸ್ತೋತ್ರಗೈಯುವನು. ವಾಕ್ಕು ನಶಿಸಿದಾಗ ವಾಕ್ಕಿನಲ್ಲಿರುವ ತೇಜಸ್ಸು ಚಕ್ಷುರಿಂದ್ರಿಯದಲ್ಲಿ ಸೇರುವುದು. ಪ್ರಾಣಪಕ್ಷಿ ಅನಂತ ಪ್ರಾಣವಾಯುಗಳಲ್ಲಿ ಸೇರುವುದು. ಆಗ ಕೂಡಾ ಬ್ರಹ್ಮ ಪ್ರಕಾಶಿಸುವುದು. ನೇತ್ರಗಳಿಂದ ನೋಡುವುದು. ನೇತ್ರೇಂದ್ರಿಯವು ನಶಿಸಿದಾಗ ಆ ತೇಜಸ್ಸು ಶ್ರವಣೇಂದ್ರಿಯವನ್ನು ಸೇರುವುದು. ಪ್ರಾಣವಾಯು ಅನಂತ ವಾಯುವಿನಲ್ಲಿ ಲೀನವಾಗುವುದು. ಆಗಲೂ ಬ್ರಹ್ಮ ಪ್ರಕಾಶಿಸುತ್ತದೆ.

ಕಿವಿಗಳಿಂದ ಕೇಳುವನು. ಶ್ರವಣೇಂದ್ರಿಯವು ನಶಿಸಿದಾಗ ಆ ತೇಜಸ್ಸು ಮನಸ್ಸಿನಲ್ಲಿ ಸೇರುವುದು. ಪ್ರಾಣಶಕ್ತಿಯು ಅನಂತ ಪ್ರಾಣದಲ್ಲಿ ಲೀನವಾಗುವುದು. ಆಗಲೂ ಕೂಡಾ ಬ್ರಹ್ಮ ಪ್ರಕಾಶಿಸುವುದು. ಮನಸ್ಸು ಕೂಡಾ ನಶಿಸಿದಾಗ ಆ ತೇಜಸ್ಸು ಪ್ರಾಣಶಕ್ತಿ ಅನಂತ ಪ್ರಾಣವಾಯುಗಳಲ್ಲಿ ಲೀನವಾಗುವುದು. ಸರ್ವದೇವತೆಗಳೂ ಅನಂತ ಪ್ರಾಣವಾಯುವಿನಲ್ಲಿ ಲೀನವಾಗಿರುವರು ಆ ಅನಂತವಾಯು ಭೂತದಿಂದ ಮತ್ತೆ ಹುಟ್ಟುತ್ತಿರುತ್ತಾರೆ. ಈ ವಿವರಗಳನ್ನು ಅರ್ಥ ಮಾಡಿಕೊಂಡವರು ಎರಡು ಪರ್ವತಗಳನ್ನು (ವಿಂಧ್ಯ ಹಿಮಾಲಯ ಪರ್ವತಗಳನ್ನು) ಸುಲಭವಾಗಿ ಹುಲ್ಲಿನ ಕಡ್ಡಿಯಂತೆ ಸುತ್ತಿಬಿಡುವರು, ಈ ವಿಷಯವನ್ನು ದ್ವೇಷಿಸುವರು ನಶಿಸುವರು.

**ಮಂ.ಶ್ಲೋ|| ಅಥಾತೋ ನಿಃಶ್ರೇಯಸಾ ದಾನಂ ಸರ್ವಾಹ ವೈ ದೇವತಾಽಹಂ ಶ್ರೇಯಸೇ ವಿವದಮಾನಾ**
**ಅಸ್ಮಾಚ್ಛರೀರಾದುಚ್ಚಕ್ರಮುಸ್ತದ್ದಾರುಭೂತಂ ಶಿಷ್ಯ ಅಥ ಹೈನಂ ವಾಕ್ ಪ್ರವಿವೇಶ ತದ್ವಾಚಾಽ**
**-ವದಚ್ಛಿಷ್ಯ ಏವಾಥ ಹೈನಂ ಚಕ್ಷುಃ ಪ್ರವಿವೇಶ ತದ್ವಾಚಾ ಪದಚ್ಚಕ್ಷುಷಾ ಪಶ್ಯಚ್ಛಿಷ್ಯ**
**ಏವಾಥ ಹೈನಂ ಶ್ರೋತ್ರಂ ಪ್ರವಿವೇಶ ತದ್ವಾಚಾ ಪದಚ್ಚಕ್ಷುಷಾ ಪಶ್ಯಚ್ಛ್ರೋತ್ರೇಣ ಶೃಣ್ವನ್**
**ಶಿಷ್ಯ ಏವಾಥ ಹೈನಂ ಮನಃ ಪ್ರವಿವೇಶ ತದ್ವಾಚಾ ಪದಚ್ಚಕ್ಷುಷಾ ಪಶ್ಯಚ್ಛ್ರೋತ್ರೇಣ**
**ಶೃಣ್ವನ್ಮನಸಾ ಧ್ಯಾಯಚ್ಛಿಷ್ಯ ಏವಾಥ ಹೈನತ್ ಪ್ರಾಣಃ ಪ್ರವಿವೇಶ ತತ್ತತ ಏವ ಸಮುತ್ತಸ್ಥೌ**
**ತದ್ದೇವಾಃ ಪ್ರಾಣೇ ನಿಶ್ರೇಯಸಂ ವಿಚಿಂತ್ಯ ಪ್ರಾಣಮೇವ ಪ್ರಜ್ಞಾತ್ಮಾನಮಭಿಸಂಸ್ತೂಯ ಸ**
**ಹೈತೇ ಸ್ಸರ್ವೇರಸ್ಮಾಲ್ಲೋಕಾದುಚ್ಚಕ್ರಮುಸ್ತೇ ವಾಯು ಪ್ರತಿಷ್ಠಾಕಾಶಾತ್ಮನಾಸ್ಸ್ವರ್ಯಯುಸ್ತಥೋ**
**ಏವೈವಂ ವಿದ್ವಾನ್ ಸರ್ವೇಷಾಂ ಭೂತಾನಾಂ ಪ್ರಾಣಮೇವ ಪ್ರಜ್ಞಾತ್ಮಾನಮಭಿಸಂಸ್ತೂಯ**
**ಸ ಹೈತೇಸ್ಸರ್ವೈರಸ್ಮಾಚ್ಛರೀರಾದುತ್ಕ್ರಾಮತಿ ಸ ವಾಯು ಪ್ರತಿಷ್ಠಾಕಾಶಾತ್ಮಾನೆ ಸ್ವರೇತಿ ತದ್ಭವತಿ**
**ಯತ್ರೈತದ್ದೇವಾಸ್ತತ್ ಪ್ರಾಪ್ಯ ತದಮೃತೋ ಭವತಿ ಯದಮೃತಾ ದೇವಾಃ || (14)**

ತಾ : (ದೇಹದಿಂದ ಉದ್ಭವಿಸುವ ದಿವ್ಯ ಶಕ್ತಿಗಳನ್ನು ಆತ್ಮಸಾಕ್ಷಾತ್ಕಾರಕ್ಕಾಗಿ ಉಪಯೋಗಿಸ ಬೇಕು.) ನಿಶ್ರೇಯ ಸಾದಾನವನ್ನು ಕುರಿತು. ದೇಹದಲ್ಲಿರುವ ದೇವತೆಗಳೆಲ್ಲರು. ಬ್ರಹ್ಮವನ್ನು ಕುರಿತು ವಿವಾದಗಳನ್ನಿಟ್ಟುಕೊಂಡು ದೇಹದಿಂದ ಹೊರಕ್ಕೆ ಹೋದರು. ಆಗ ಆ ದೇಹದ ಶ್ವಾಸವು ನಿಂತು ಹೋಯಿತು. ಒಂದು ಮರದಂತೆ ಬಿದ್ದುಬಿಟ್ಟಿತು. ಆಗ ವಾಕ್ಕು ಮಾತ್ರದೇಹದೊಳಕ್ಕೆ ಪ್ರವೇಶಿಸಿತು. ಕೂಡಲೇ ವಾಗೀಂದ್ರಿಯವು ಕೆಲಸ ಮಾಡಿತು. ಮಾತು ಹೇಳುವಂತಾಯಿತು. ಚಕ್ಷುರಿಂದ್ರಿಯವು ಸಹ ದೇಹದಲ್ಲಿ ಪ್ರವೇಶಿಸಿತು. ಮಾತನಾಡುವುದು. ನೋಡುವುದು ಕೂಡಾ ಮಾಡತೊಡಗಿತು. ಶ್ರವಣೇಂದ್ರಿಯವು ಕೂಡಾ ಪ್ರವೇಶಿಸಿತು. ಆಗ ಬಾಯಲ್ಲಿ ಮಾತನಾಡುತ್ತಾ, ಕಣ್ಣುಗಳಿಂದ ನೋಡುತ್ತಾ ಕಿವಿಗಳಿಂದ ಕೇಳುವಂತಾಯಿತು. ಮನಸ್ಸು ಕೂಡಾ ಪ್ರವೇಶಿಸಿತು. ಆಗ ಬಾಯಿಂದ ಮಾತನಾಡುತ್ತಾ, ಕಣ್ಣಿಂದ ನೋಡುತ್ತಾ ಕಿವಿಯಿಂದ ಕೇಳುತ್ತಾ ಮನಸ್ಸಿನಿಂದ ಆಲೋಚಿಸುವಂತಾಯಿತು. ಆಗ ಪ್ರಾಣ ಶಕ್ತಿ ಕೂಡಾ ಪ್ರವೇಶಿಸಿತು. ಕೂಡಲೇ ದೇಹವು ಪ್ರಾಣವುಳ್ಳದ್ದಾಯಿತು. ವಾಗೀಂದ್ರಿಯದೇವತೆ ಚಕ್ಷುರಿಂದ್ರಿಯ ದೇವತೆ ಶ್ರವಣೇಂದ್ರಿಯ ದೇವತೆ ಅಂತಃಕರಣ ದೇವತೆ ಈ ಸರ್ವ ದೇವತೆಗಳೂ ಪ್ರಜ್ಞಾತ(ಬುದ್ಧಿ)ದೊಂದಿಗೆ ಸಹ ಪ್ರಾಣದೇವತೆ(ಯು) ಶ್ರೇಷ್ಠವೆಂದು ಗ್ರಹಿಸಿದರು. ಆಕಾಶಭೂತದಲ್ಲಿ ಸಂಚರಿಸುತ್ತಿದ್ದ ಪ್ರಾಣಾತ್ಮದಲ್ಲಿ ಸರ್ವದೇವತೆಗಳೂ ಲೀನವಾಗಿ ಸ್ವರವನ್ನು ಸೇರಿದರು. ಯಾರು

ಪ್ರಾಣಾತ್ಮವು ಸರ್ವದೇವತೆಗಳಿಗಿಂತ ಸರ್ವೋತ್ತಮವೆಂದು ಅರ್ಥಮಾಡಿಕೊಳ್ಳುವರೋ ಅಂತಹವರು ಪ್ರಜ್ಞಾವಂತರೂ ಹೌದು. ಈದೇಹವನ್ನು ಬಿಡುವಾಗ ಸರ್ವ ದೇವತೆಗಳೊಂದಿಗೆ ದಿವ್ಯ ಲೋಕಗಳನ್ನು ಸೇರಿಕೊಳ್ಳುತ್ತಾರೆ. ದೇವತೆಗಳು ಸಂಚರಿಸುವ ಸ್ವರ್ಗ ಲೋಕಕ್ಕೆ ಹೋಗುವರು. ಈ ಭಾವಗಳನ್ನು ಗ್ರಹಿಸಿದವರು ದಿವ್ಯ ಲೋಕವನ್ನು ಸೇರಿ ದೇವತೆಗಳಂತೆ ಅಮರರಾಗಿ ಸಂಚರಿಸುವರು.

ಮಂ.ಶ್ಲೋ॥ ಅಥಾತಃ ಪಿತಾ ಪುತ್ರೀಯಂ ಸಂಪ್ರದಾನಮಿತಿ ಚಾಚಕ್ಷತೇ ಪಿತಾಪುತ್ರಂ ಪ್ರೇಷ್ಯಾಹ್ವಯತಿ ಸ ವೈಸ್ತೃಣೈರಾಗಾರಂ ಸಂಸ್ತೀರ್ಯಾಗ್ನಿಮುಪಸಮಾಧಾಯೋದಕುಂಭಂ ಸಪಾತ್ರಮುಪ -ನಿಧಾಯಾ ಹತೇನ ವಾಸನಾ ಸಂಪ್ರಚ್ಛನ್ನಶ್ಶ್ಯೇತ ಏತ್ಯಪುತ್ರ ಉಪರಿಷ್ಟಾದಭಿನಿಪದ್ಯತ ಇಂದ್ರಿಯೈ ರಸ್ಯೇಂದ್ರಿಯಾಣಿ ಸಂಸ್ಪೃಶ್ಯಾಪಿವಾಽಸ್ಯಾಭಿಮುಖತ ಏವಾಸೀತಾಥಾಸ್ಮೈ ಸಂಪ್ರಯಚ್ಛತಿ ವಾಚಂ ಮೇ ತ್ವಯಿ ದಧಾನೀತಿ ಪಿತಾ ವಾಚಂತೇ ಮಯಿ ದಧ ಇತಿ ಪುತ್ರಶ್ಚಕ್ಷುರ್ಮೇ ತ್ವಯಿ ದಧಾನೀತಿ ಪಿತಾ ಚಕ್ಷುಸ್ತೇ ಮಯಿ ದಧ ಇತಿ ಪುತ್ರಃ ಶ್ರೋತ್ರಂ ಮೇ ತ್ವಯಿ ದಧಾನೀತಿ ಪಿತಾ ಶ್ರೋತ್ರಂ ತೇ ಮಯಿ ದಧ ಇತಿ ಪುತ್ರೋ ಮನೋ ಮೇ ತ್ವಯಿ ದಧಾನೀತಿ ಪಿತಾ ಮನಸ್ತೇ ಮಯಿ ದಧ ಇತಿ ಪುತ್ರಃ ಅನ್ನರಸಾನ್ಮೇ ತ್ವಯಿ ದಧಾನೀತಿ ಪಿತಾ ಅನ್ನರಸಾಂಸ್ತೇ ಮಯಿ ದಧ ಇತಿ ಪುತ್ರಃ ಕರ್ಮಾಣಿ ಮೇತ್ವಯಿ ದಧಾನೀತಿ ಪಿತಾ ಕರ್ಮಾಣಿ ತೇ ಮಯಿ ದಧ ಇತಿ ಪುತ್ರಸ್ಸುಖದುಃಖೇ ಮೇ ತ್ವಯಿ ದಧಾನೀತಿ ಪಿತಾ ಸುಖದುಃಖೇ ತೇ ಮಯಿ ದಧ ಇತಿ ಪುತ್ರ ಆನಂದಂ ರತಿಂ ಪ್ರಜಾತಿಂ ಮೇ ತ್ವಯಿ ದಧಾನೀತಿ ಪಿತಾ ಆನಂದಂ ರತಿಂ ಪ್ರಜಾತಿಂ ತೇ ಮಯಿ ದಧ ಇತಿ ಪುತ್ರ ಇತ್ಯಾಂ ಮೇ ತ್ವಯಿ ದಧಾನೀತಿ ಪಿತಾ ಇತ್ಯಾನ್ತೇ ಮಯಿ ದಧ ಇತಿ ಪುತ್ರೋ ಧಿಯೋ ವಿಜ್ಞಾತವ್ಯಂ ಕಾಮಾನ್ಮೇ ತ್ವಯಿ ದಧಾನೀತಿ ಪಿತಾ ಧಿಯೋ ವಿಜ್ಞಾತವ್ಯಂ ಕಾಮಾಂಸ್ತೇ ಮಯಿ ದಧ ಇತಿ ಪುತ್ರೋಽಥ ದಕ್ಷಿಣಾ ಪ್ರಾಕ್ ಪ್ರಾಙ್ಪರಿಕ್ರಾಮತಿ ತಂ ಪಿತಾ ಸಮಂತ್ರಯತಿ ಯಶೋ ಬ್ರಹ್ಮವರ್ಚಸಮನ್ನಾದ್ಯಂ ಕೀರ್ತಿಸ್ತ್ವಾ ಜುಷತಾಮಿತ್ಯಥೇತರಸ್ಸವ್ಯಮಂಸಮನ್ವವೇಕ್ಷತೇ ಪಾಣಿನಾಂತರ್ಧಾಯ ವಸನಂ ತನುವಾ ಪ್ರಚ್ಛಾದ್ಯ ಸ್ವರ್ಗಾನ್‌ಲೋಕಾನ್ಕಾಮಾನವಾಪ್ನುಹೀತಿ ಸ ಯ ಹ್ಯೇಕತಸ್ಸ್ಯಾತ್ಪುತ್ರಸ್ಯೈಶ್ವರ್ಯೈ ಪಿತಾ ವಸೇತ ಪರಿವಾವ್ರಜೇಯುರ್ಯದ್ಯುವೈ ಪ್ರಯುಜ್ಯಾ ದೇವೈ ಸಂ ಸಮಾಪಯತಿ ತಥಾ ಸಮಾಪಯಿತವ್ಯೋ ಭವತಿ (೧೫)

ತಾ : (ಮರಣಹೊಂದುವುದಕ್ಕೆ ಮೊದಲು ತಂದೆ ತನಗಿರುವ ಮಹಿಮೆಗಳನ್ನೆಲ್ಲವನ್ನು ಮಗನಿಗೆ ಪ್ರಸಾದಿಸುವುದು) ತಂದೆ, ಮಗ, ಇಬ್ಬರೂ ನಿರ್ವಹಿಸುವ ಯಜ್ಞ:- ಮರಣ ಸಮಯದಲ್ಲಿ ತಂದೆ ಮಗನನ್ನು ಕರೆಸುವನು. ಗೃಹವನ್ನು ಶುಭ್ರಗೊಳಿಸಿ,, ಹುಲ್ಲು ಹಾಸನ್ನು ಹಾಸಿ ಜಲಕುಂಭವನ್ನು ಸಿದ್ಧ ಪಡಿಸಿ ಒಂದು ಪಾತ್ರೆಯಲ್ಲಿ ನೀರು ತರಿಸಿ ಅಗ್ನಿಯನ್ನು ಪ್ರಜ್ವಲಗೊಳಿಸುತ್ತಾನೆ. ತಂದೆಯು ಪರಿಶುಭ್ರವಾದ ವಸ್ತ್ರವನ್ನು ಧರಿಸಿ ಮಗನನ್ನು ಕರೆಸಿ ಸರ್ವೇಂದ್ರಿಯಗಳನ್ನು ಸ್ಪರ್ಶಿಸಿದ. ತನ್ನ ಎದುರಾಗಿ ಮಗನನ್ನು ಕುಳ್ಳಿರಿಸಿಕೊಂಡ. ಈ ಕೆಳಗೆ ಕಂಡ ರೀತಿಯಲ್ಲಿ ಸಂಭಾಷಣೆ ಜರುಗುವುದು.

ತಂದೆ: ನನ್ನ ವಾಕ್ಕನ್ನು ನಿನ್ನಲ್ಲಿ ಪ್ರವೇಶಗೊಳಿಸುತ್ತಿದ್ದೇನೆ. ಪುತ್ರ: ನನ್ನಲ್ಲಿ ಪ್ರವೇಶಗೊಳಿಸಿದ ವಾಕ್ಕನ್ನು ಗ್ರಹಿಸಿದ್ದೇನೆ. ತಂದೆ: ನನ್ನ ಪ್ರಾಣಶಕ್ತಿಯನ್ನು ನಿನ್ನಲ್ಲಿ ಪ್ರವೇಶಿಸಗೊಳಿಸುತ್ತಿದ್ದೇನೆ. ಪುತ್ರ: ನನ್ನಲ್ಲಿ ಪ್ರವೇಶಿಸಿರುವ ಪ್ರಾಣಶಕ್ತಿಯನ್ನು ಸ್ವೀಕರಿಸಿದ್ದೇನೆ. ತಂದೆ: ನನ್ನ ನೇತ್ರ ಶಕ್ತಿಯನ್ನು ನಿನ್ನಲ್ಲಿಡುತ್ತಿದ್ದೇನೆ. ಪುತ್ರ: ನನ್ನಲ್ಲಿಟ್ಟಿರುವ ನೇತ್ರಶಕ್ತಿಯನ್ನು ಗ್ರಹಿಸಿದೆನು. ತಂದೆ: ನನ್ನ ಶ್ರವಣೇಂದ್ರಿಯವನ್ನು ಗ್ರಹಿಸು. ಪುತ್ರ: ನನ್ನಲ್ಲಿಡಲಾದ ನಿನ್ನ ಶ್ರವಣೇಂದ್ರಿಯವನ್ನು ಗ್ರಹಿಸಿದೆ. ತಂದೆ: ನನ್ನ ಜಿಹ್ವೇಂದ್ರಿಯವನ್ನು ನಿನ್ನಲ್ಲಿ ಇಡುತ್ತಿದ್ದೇನೆ. ಪುತ್ರ: ನನ್ನಲ್ಲಿಟ್ಟಿರುವ ಜಿಹ್ವೇಂದ್ರಿಯವನ್ನು ಗ್ರಹಿಸಿದ್ದೇನೆ. ತಂದೆ ನನ್ನ ಕರ್ಮ ಫಲಗಳನ್ನು ನಿನ್ನಲ್ಲಿಡುತ್ತಿದ್ದೇನೆ ಪುತ್ರ: ನನ್ನಲ್ಲಿಟ್ಟಿರುವ ನಿನ್ನ ಕರ್ಮಫಲವನ್ನು ಸ್ವೀಕರಿಸಿದೆ. ತಂದೆ: ನನ್ನ ಸುಖದುಃಖಗಳನ್ನು ನಿನ್ನಲ್ಲಿಡುತ್ತಿದ್ದೇನೆ. ಪುತ್ರ: ನನ್ನಲ್ಲಿಟ್ಟುರುವ ನಿನ್ನ ಸುಖದುಃಖಗಳನ್ನು ಸ್ವೀಕರಿಸುತ್ತಿದ್ದೇನೆ. ತಂದೆ: ನನ್ನ ಆನಂದವನ್ನು ರತಿಯನ್ನು ಸಂತತಿಯನ್ನು ನಿನ್ನಲ್ಲಿಡುತ್ತಿದ್ದೇವೆ. ಪುತ್ರ: ನನ್ನಲ್ಲಿಟ್ಟಿರುವ ನಿನ್ನ ಆನಂದವನ್ನು ರತಿಯನ್ನು, ಸಂತತಿಯನ್ನು ಸ್ವೀಕರಿಸುತ್ತಿದ್ದೇನೆ. ತಂದೆ: ನನ್ನ ಮನಸ್ಸನ್ನು ನಿನ್ನಲಿಡುತ್ತಿದ್ದೇವೆ ಪುತ್ರ: ನನ್ನಲ್ಲಿಟ್ಟಿರುವ ನಿನ್ನ ಮನಸ್ಸನ್ನು ಸ್ವೀಕರಿಸುತ್ತಿದ್ದೇನೆ. ತಂದೆ: ನನ್ನ ಬುದ್ಧಿ (ಪ್ರಜ್ಞೆ)ಯನ್ನು ನಿನ್ನಲ್ಲಿ ಇಡುತ್ತಿದ್ದೇನೆ. ಪುತ್ರ: ನನ್ನಲ್ಲಿಟ್ಟ ಪ್ರಜ್ಞೆಯನ್ನು ಸ್ವೀಕರಿಸಿದ್ದೇನೆ. ಮಗನು ಇನ್ನೇನೂ ಹೆಚ್ಚಿಗೆ ಮಾತನಾಡಲಿಲ್ಲ. ತಂದೆ: ನನ್ನ ಪ್ರಾಣಶಕ್ತಿಯನ್ನು ನಿನ್ನಲಿಡುತ್ತಿದ್ದೇನೆ. ಪುತ್ರ: ನನ್ನಲ್ಲಿಟ್ಟಿರುವ ನಿನ್ನ ಪ್ರಾಣಾತ್ಮವನ್ನು ಸ್ವೀಕರಿಸಿದೆ. ಮಗನು ಬಲಗಡೆಗೆ ತಿರುಗಿದ ತಂದೆ ಪೂರ್ವದಿಕ್ಕಿಗೆ ತಿರುಗಿ ಮಗನನ್ನು ಕರೆದು ಹೀಗೆ ಹೇಳಿದ: ಯಶೋವಂತನಾಗಿ ಬಾಳು. ಬ್ರಹ್ಮವರ್ಚಸ್ಸು ಉಂಟಾಗಲಿ. ಕೀರ್ತಿ ಪ್ರತಿಷ್ಠೆಗಳು, ಉಂಟಾಗಲಿ ಪುತ್ರನ ಎಡ ಭುಜದ ಮೇಲೆ ಕೈಯನ್ನಿಟ್ಟ. ತಂದೆ ತನ್ನ ವಸ್ತ್ರದಿಂದ ಪುತ್ರನ ಮುಖವನ್ನು ಹೊದೆಸಿ ಹೀಗೆ ಹೇಳಿದ:- ಸ್ವರ್ಗಸೌಖ್ಯಗಳೆಲ್ಲವೂ ನಿನಗೆ ಲಭಿಸುತ್ತದೆ. ನನ್ನ ಸರ್ವವೂ ನಿನಗೆ ಲಭಿಸುವುದು. ನಾನು ಬದುಕಿದರೂ ಮರಣಿಸಿದರೂ ನನ್ನ ಸರ್ವವೂ ನಿನಗೆ ಲಭಿಸುವುದು ಎಂದ.

# ತೃತೀಯೋಧ್ಯಾಯಃ

ಮಂ.ಶ್ಲೋ|| ಪ್ರತರ್ದನೋ ಹ ವೈ ದೈವೋದಾಸಿರಿಂದ್ರಸ್ಯ ಪ್ರಿಯಂಧಾಮೋಪಜಗಾಮ ಯುದ್ಧೇನ ಪೌರುಷೇಣ ಚ ತಂ ಹೇಂದ್ರ ಉವಾಚ ಪ್ರತರ್ದನ ವರಂ ತೇ ದಧಾನೀತಿ ಸ ಹೋವಾಚ ಪ್ರತರ್ದನಸ್ತ್ವಮೇವ ವೃಣೀಷ್ವ ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸ ಇತಿ ತಂ ಹೇಂದ್ರಮುವಾಚ ನವ್ಯೆ ವರಂ ವರಸ್ಮೈ ವೃಣೀತೇ ತವಮೇವ ವೃಣೀಷ್ವೇತದ್ಧಿ ವರೋ ವೈತರ್ಧಿ ಕಿಲ ಮ ಇತಿ ಹೋವಾಚ ಪ್ರತರ್ದನೋಽಥೋ ಖಲ್ವಿಂದ್ರಸ್ಸತ್ಯಾದೇವ ನೇಯಾಯ ಸ್ಸತ್ಯಂ ಹೀಂದ್ರಸ್ಸ ಹೋವಾಚ ಮಾಮೇವ ವಿಜಾನೀ ಹ್ಯೇತದೇವಾಹಂ ಮನುಷ್ಯಾಯ ಹಿತತಮಂ ಮನ್ಯೇ ಯನ್ಮಾಂ ವಿಜಾನೀಯಾಂ ತ್ರಿಶೀರ್ಷಾಣಂ ತ್ವಾಷ್ಟ್ರ ಮಹನ-ಮವಾಙ್ಮುಖ್ಯಾನ್ಯತೀಂತ್ಸಾಲಾವೃಕೇಭ್ಯಃ ಪ್ರಾಯಚ್ಛಂ ಬಹ್ವಿಸ್ಸಂಧಾ ಅತಿಕ್ರಮ್ಯ ದಿವಿ ಪ್ರಹ್ಲಾದೀನ ತೃಣ ಮಹಾಮಂತರಿಕ್ಷೇ ಪೌಲೋಮಾನ್ ಪೃಥಿವ್ಯಾಂ ಕಾಲಕಾಶ್ಯಾಂಸ್ತಸ್ಯ ಮೇ ತತ್ರ ನ ಲೋಮಚನಾ ಮೀಯತೇ ಸ ಯೋ ಮಾಂ ವಿಜಾನೀಯಾನ್ನಾಸ್ಯ ಕೇನ ಚ ಕರ್ಮಣಾ

**ಲೋಕೋ ಮೀಯತೇ ಸ ಮಾತೃವಧೇನ ಪಿತೃವಧೇನ ಸ ಸ್ತೇಯೇನ ಸ ಭ್ರೂಣಹತ್ಯಯಾ ನಾಸ್ಯ ಪಾಪಂಚ ನ ಚ ಕೃಷೋ ಮುಖಾನ್ನೀಲಂ ವೇತ್ತೀತಿ (1)**

ತಾ : ಪ್ರಾಣಾತ್ಮ ಸಿದ್ಧಾಂತ: ದೇವೇಂದ್ರನು ಪ್ರಸಾದಿಸುವ ಸಂಪತ್ತುಗಳು) ಪ್ರತರ್ದನ ನಾಮದೇಯವುಳ್ಳ ದೈವೋದಾಸಿ (ದಿವೋದಾಸನ ಪುತ್ರ)ಯು ಯುದ್ಧ ಮಾಡಲು ಸಂಕಲ್ಪಿಸಿ ದೇವೇಂದ್ರನ ಸುಂದರ ಭವನಕ್ಕೆ ಆಗಮಿಸಿದ. ದೆವೇಂದ್ರನು ಪ್ರತರ್ದನನೊಂದಿಗೆ ಹೀಗೆ ನುಡಿದ - ಓ ಪ್ರತದ್ದನಾ ನಿನಗೆ ಪ್ರಿಯವಾದ ಒಂದು ವರವನ್ನು ಕೋರಿಕೋ. ಪ್ರತರ್ದನನು ಈ ವಿಧವಾಗಿ ಕೋರಿಕೊಂಡ ಇಂದ್ರಾ, ಮಾನವರಿಗೆ ಶ್ರೇಷ್ಠವಾದ ಸಂಪತ್ತುಗಳನ್ನು ಕೊಡುವಂತಹ ಮಹಿಮೆಯನ್ನು (ವರವನ್ನು) ನೀನೇ ನಿರ್ಣಯಿಸಿ ನನಗೆ ಅನುಗ್ರಹಿಸು ಎಂದ ಇಂದ್ರ ಉತ್ತಮ ವರವನ್ನು ಮರ್ತ್ಯರಿಗಾಗಿ ಪ್ರಸಾದಿಸುವುದಕ್ಕೆ ಸಾಧ್ಯವಿಲ್ಲ. ನಿನಗಾಗಿ ಒಂದು ಒಳ್ಳೆಯ ವರವನ್ನು ಕೋರಿಕೋ. ಪ್ರತರ್ದನ ಚೆನ್ನಾಗಿದೆ ನನ್ನ ನಿಮಿತ್ತವಾಗಿ ಕೋರಿಕೊಳ್ಳುತ್ತೇನೆ. ದೇವೇಂದ್ರನು ಅಸತ್ಯವನ್ನು ನುಡಿಯುವವನಲ್ಲ ಇಂದ್ರನೆಂದರೆ ಸತ್ಯ ಸ್ವರೂಪಿ. ಇಂದ್ರ ನನ್ನನ್ನು ಅರ್ಥ ಮಾಡಿಕೊ. ಮಾನವರಿಗೆ ನಾನುಪ್ರಿಯವಾದವನು ಆದರೆ ಅವರು ನನ್ನನ್ನು ಅರ್ಥ ಮಾಡಿಕೊಳ್ಳಬೇಕು ತ್ರೀಶೀರ್ಷ (ಮೂರು ಶಿರಗಳು)ಗಳುಳ್ಳ ತ್ವಾಷ್ಟ್ರನನ್ನು (ವೃತ್ರನನ್ನು) ನಾನು ಸಂಹರಿಸಿದೆ ಅವಾಙ್ಮುಖವಾದ ಸಾಲಾವೃಕಗಳಿಗೆ (ಕಾಡು ನಾಯಿ, ತೋಳ) ಪ್ರಸಾದಿಸಿದೆ. ಹೆಚ್ಚಿನ ಜೀವಿಗಳಿಗೆ ಉತ್ತಮಗತಿಗಳನ್ನು ಕಲ್ಪಿಸಿದೆ. ಪ್ರಹ್ಲಾದನ ರಾಜ್ಯದಲ್ಲಿನ ಪ್ರಜೆಗಳಿಗೆ ದಿವ್ಯ ಲೋಕನಿವಾಸಗಳನ್ನು ನೀಡಿದೆ ಅದೇ ವಿಧವಾಗಿ ಅಂತರಿಕ್ಷದಲ್ಲಿ ಪಾಲೋಮ (ಪೌಲೋಮ)ಪ್ರಜೆಗಳಿಗೆ ಭೂಮಿಯಲ್ಲಿರುವ ಕಾಲಕಾಶ್ಯರಿಗೆ ದೇವಲೋಕ ಪ್ರಾಪ್ತಿ-ಯನ್ನುಂಟು ಮಾಡಿದೆ. ನನ್ನ ಒಂದು ಕೂದಲಿಗೂ ಕೂಡಾ ಅಪಕಾರವಾಗಲಿಲ್ಲ. ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡವರು ಅವರವರ ಲೋಕಗಳಲ್ಲಿ ಯಾವ ಯಾವ ಪಾಪಗಳನ್ನು ಮಾಡಿದ್ದರೂ ಕಳ್ಳತನ ಮಾತೃಹತ್ಯೆ, ಪಿತೃಹತ್ಯೆ, ಭ್ರೂಣಹತ್ಯೆ ಮುಂತಾದ ಪಾಪಗಳನ್ನು ಮಾಡಿದ್ದರೂ ಭಯವು ಇಲ್ಲದೆ ಇರುವವರು ಯಮದೂತರು ಇಲ್ಲಿಗೆ ಬರುವುದಿಲ್ಲ.

ಮಂ.ಶ್ಲೋ॥ **ಸಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ್ವಾಯುಃ ಪ್ರಾಣಃ ಪ್ರಾಣೋ ವಾ ಆಯುಃ ಪ್ರಾಣ ಉ ವಾ ಅಮೃತಂ ಯಾವಧ್ಯಸ್ಮಿಂಚ್ಛರೀರೇ ಪ್ರಾಣೋ ವಸತಿ ತಾವದಾಯುಃ ಪ್ರಾಣೇನ ಹ್ಯೇವಾಮುಷ್ಮಿನ್ ಲೋಕೇಽಮೃತತ್ವ-ಮಾಪ್ನೋತಿ ಪ್ರಜ್ಞಯಾ ಸತ್ಯಸಂಕಲ್ಪಸ್ಸ ಯೋ ಮ ಆಯುರಮೃತಮಿತ್ಯುಪಾಸ್ತೇ ಸರ್ವ-ಮಾಯುರಸ್ಮಿನ್ ಲೋಕೇ ಆಪ್ನೋತ್ಯಮೃತತ್ವಮಕ್ಷಿತಿಂ ಸ್ವರ್ಗೇಲೋಕೇ ತದ್ಧೈಕ ಆಹು-ರೇಕಭೂಯಂ ವೈ ಪ್ರಾಣಾ ಗಚ್ಛಂತೀತಿ ನಹಿ ಕಶ್ಚನ ಶಕ್ನುಯಾತ್ಸಕೃದ್ವಾಚಾ ನಾಮ ಪ್ರಜ್ಞಾಪಯಿತುಂ ಚಕ್ಷುಷಾ ರೂಪಂ ಶ್ರೋತ್ರೇಣ ಶಬ್ದಂ ಮನಸಾ ಧ್ಯಾತಮಿತ್ಯೇಕ ಭೂಯಂ ವೈ ಪ್ರಾಣಾ ಭೂತ್ವಾ ಏಕೈಕಂ ಸರ್ವಾಣ್ಯೇವೈತಾನಿ ಪ್ರಜ್ಞಾಪಯಂತಿ ವಾಚಂ ವದಿತೀಂ ಸರ್ವೇ ಪ್ರಾಣಾ ಅನುವದಂತಿ ಚಕ್ಷುಃ ಪಶ್ಯತ್ಸರ್ವೇ ಪ್ರಾಣಾ ಅನುಪಶ್ಯಂತಿ ಶ್ರೋತ್ರಂ ಶೃಣ್ವತ್ಸರ್ವೇ ಪ್ರಾಣಾ ಅನುಶೃಣ್ವಂತಿ ಮನೋ ಧ್ಯಾಯತ್ಸರ್ವೇ ಪ್ರಾಣಾ ಅನುಧ್ಯಾಯಂತಿ ಪ್ರಾಣಃ ಪ್ರಾಣಂ**

**ತಂ ಸರ್ವೇ ಪ್ರಾಣಾ ಅನುಪ್ರಾಣಂತೀತ್ಯೇವಮುಹೈ ವೈ ತದಿತಿ ಹೇಂದ್ರ ಉವಾಚಾಸ್ತೀತ್ಯೇವ ಪ್ರಾಣಾನಾನ್ನಿಶ್ರೇಯಸಾದಾನಮಿತಿ ॥ (2)**

ತಾ : (ಜೀವ ಚೈತನ್ಯದಿಂದ ಅಂತರ್ಯಾಮಿಯೊಂದಿಗೆ ತಾದಾತ್ಮ್ಯವನ್ನು ಹೊಂದುವುದು ಇಂದ್ರನು ಹೀಗೆ ನುಡಿದ: ನಾನು ಪ್ರಾಣಾತ್ಮನು ಮತ್ತು ಪ್ರಜ್ಞಾತ್ಮನು ಕೂಡಾ ಆಗಿರುವೆನು. ಆದ್ದರಿಂದ ಆಯುವಾಗಿ ಅಮೃತ ಮೂರ್ತಿಯಾಗಿ ನನ್ನನ್ನು ಉಪಾಸಿಸು. ಜೀವ ಚೈತನ್ಯವೇ ಶ್ವಾಸರೂಪದಲ್ಲಿದೆ. ನಿಜವಾಗಿ ಶ್ವಾಸವೇ ಜೀವಾತ್ಮ. ಈ ಜೀವಾತ್ಮಕ್ಕೆ ಮರಣವಿಲ್ಲ ಈ ದೇಹದಲ್ಲಿ ಶ್ವಾಸವು ಚಲಿಸುತ್ತಿರುವಷ್ಟು ಕಾಲ ಮಾತ್ರವೇ ಜೀವಾತ್ಮನು ವಾಸವಾಗಿರುವನು. ಈ ಶ್ವಾಸದ ಚೈತನ್ಯದಿಂದಲೇ ಈ ಜೀವಾತ್ಮನು ಈ ಲೋಕದಲ್ಲಿ ಅಮರತ್ವವನ್ನು ಹೊಂದುವನು. ಅಂದರೆ ಪ್ರಜ್ಞಾತ್ಮದೊಂದಿಗೆ ಸತ್ಯ ಸಂಕಲ್ಪದೊಂದಿಗೆ ಅಮರತ್ವವನ್ನು ಸಾಧಿಸುವನು ಆದ್ದರಿಂದ ಯಾರು ನನ್ನನ್ನು ಜೀವಾತ್ಮಕವಾಗಿ ಅಮರವಾಗಿ ಉಪಾಸಿಸುವರೋ ಅವರು ಈ ಸ್ವರ್ಗ ಲೋಕದಲ್ಲಿ ವಾಸವಾಗಿರುವರು. ಅಮರರಾಗಿರುವರು. ಅಕ್ಷಿತಿಯನ್ನು ಹೊಂದುವರು (ಪ್ರಾಣ ಶಕ್ತಿಗಳ ಏಕತ್ವ) ಈ ವಿಷಯವಾಗಿ ಕೆಲವರು ಈ ವಿಧವಾಗಿ ಹೇಳುತ್ತಿದ್ದಾರೆ. ಪ್ರಾಣಶ್ವಾಸಗಳು ನಿರಂತರವೂ ಅನಂತ ಪ್ರಾಣದಲ್ಲಿ ಸೇರಿರುತ್ತವೆ" ಈ ಪ್ರಾಣಶಕ್ತಿ ಅನಂತ ಪ್ರಾಣ ಚೈತನ್ಯದೊಂದಿಗೆ ಸಂಬಂಧ ಇಟ್ಟುಕೊಳ್ಳದ ಪಕ್ಷದಲ್ಲಿ ವಾಗೀಂದ್ರಿಯವು ಮಾತನಾಡುವುದಿಲ್ಲ ಕಣ್ಣು ನೋಡುವುದಿಲ್ಲ ಶ್ರವಣೇಂದ್ರಿಯವು ಕೇಳಲಾರದು. ಮನಸ್ಸು ಆಲೋಚನೆ ಮಾಡಲಾರದು. ಪಂಚಪ್ರಾಣಗಳು ಐಕ್ಯಮತ್ಯವನ್ನು ಹೊಂದಿ ಶ್ವಾಸವನ್ನು ನಡೆಸುತ್ತವೆ. ಇಂದ್ರಿಯ-ಗಳನ್ನು ಕೆಲಸ ಮಾಡುವಂತೆ ಪ್ರೇರೆಪಿಸುತ್ತವೆ. ಮಾತನಾಡುವಾಗ ಆಗಲಿ ನೋಡುವ ವೇಳೆಯಲ್ಲಾಗಲಿ ಶ್ರವಣ ಮಾಡುವ ವೇಳೆಯಲ್ಲಾಗಲಿ ಆಲೋಚಿಸುವ ಸಮಯದಲ್ಲಾಗಲಿ ಪಂಚಪ್ರಾಣಗಳು ಒಟ್ಟಾಗಿರುತ್ತವೆ. ಉಚ್ಛ್ವಾಸ ನಿಶ್ವಾಸ ಸಮಯಗಳಲ್ಲಿ ಕೂಡಾ ಪಂಚಪ್ರಾಣಗಳು ಐಕ್ಯವಾಗಿ (ಒಂದೇ ಆಗಿ) ಕೆಲಸ ಮಾಡುತ್ತವೆ ಆದ್ದರಿಂದ ಪ್ರಾಣಚೈತನ್ಯವು ಪ್ರಧಾನ ತತ್ತ್ವವೆಂದು ದೇವೇಂದ್ರನು ಹೇಳಿದ.

ಮಂ.ಶ್ಲೋ॥ **ಜೀವತಿ ವಾಗಪೇತೋ ಮೂಕಾನ್ಹಿಪಶ್ಯಾಮೋ ಜೀವತಿ ಚಕ್ಷುರಪೇತೋಽಂಧಾ-ನ್ಹಿಪಶ್ಯಾಮೋ ಜೀವತಿ ಶ್ರೋತ್ರಾಪೇತೋ ಬಧಿರಾನ್ಹಿಪಶ್ಯಾಮೋ ಜೀವತಿ ಬಾಹುಚ್ಛಿನ್ನೋ ಜೀವತ್ಯೂರುಚ್ಛಿನ್ನ ಇತ್ಯೇವಂ ಹಿ ಪಶ್ಯಾಮ ಇತಿ ಪ್ರಾಣ ಏವ ಪ್ರಜ್ಞಾಽಽತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ. ಅಥ ಖಲು ತಸ್ಮಾದೇತ ಮನೋಕ್ಥಮುಪಾಸೀಽತ ಯಾವೈ ಪ್ರಾಣಸ್ಸಾ ಪ್ರಜ್ಞಾ ಯಾವಾ ಪ್ರಜ್ಞಾ ಸ ಪ್ರಾಣಸ್ಸಹ ಹ್ಯೇತಾವಸ್ಮಿಂಚ್ಛರೀರೇ ವಸತ-ಸ್ಸಹೋತ್ಕ್ರಾಮತಸ್ತಸ್ಯೈಷೈವ ದೃಷ್ಟಿರೇತದ್ವಿಜ್ಞಾನಂ ಯತ್ರೈತತ್ಪುರುಷಸ್ಸುಪ್ತಸ್ಸ್ವಪ್ನನ್ನ ಕಂಚನ ಪಶ್ಯತ್ಯಥಾಽಸ್ಮಿನ್ ಪ್ರಾಣ ಏವೈಕಧಾ ಭವತಿ ತಥೈನಂ ವಾಕ್ಸರ್ವೈರ್ನಾಮಭಿಸ್ಸಹಾಪ್ಯೇತಿ ಚ ಮನಸ್ಸರ್ವೈ ರೂಪೈಸ್ಸಹಾಪ್ಯೇತಿ ಶ್ರೋತ್ರಂ ಸರ್ವೈಶ್ಶಬ್ದೈಸ್ಸಹಾಪ್ಯೇತಿ ಮನಸ್ಸರ್ವೈರ್ಧ್ಯಾತ್ಯೈ ಸ್ಸಹಾಪ್ಯೇತಿ ಸ ಯದಾ ಪ್ರತಿಬುಧ್ಯತೇ ಯಥಾಗ್ನೇರ್ ಜ್ವಲತೋ ವಿಸ್ಫುಲಿಂಗಾ ವಿಪ್ರತಿಷ್ಠೇರ -ನ್ನೇವಮೇವೈ ತಸ್ಮಾದಾತ್ಮನಃ ಪ್ರಾಣಾ ಯಥಾಽಽಯತನಂ ವಿಪ್ರತಿಷ್ಠಂತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾನ್ತಸ್ಯೈಷೈವ ಸಿದ್ಧಿರೇತದ್ವಿಜ್ಞಾನಂ ಯತ್ರೈತತ್ಪುರುಷ ಆರ್ತೋ**

**ಮರಿಷ್ಯನ್ನಾಬಲ್ಯಂನ್ಯೇತ್ಯ ಮೋಹಂ ನೇತಿ ತದಾಹು ರುದಕ್ರಮೀಚ್ಛಿತ್ತಂ ನ ಶೃಣೋತಿ ನ ಪಶ್ಯತಿ ವಾಚಾ ವದತ್ಯಥಾಸ್ಮಿನ್ ಪ್ರಾಣ ಏವೈ ಕಥಾ ಭವತಿ ತಥೈನಂ ವಾಕ್ಸರ್ವೈರ್ನಾ-ಮಭಿಸ್ಸಹಾಪ್ಯೇತಿ ಚಕ್ಷುಸ್ಸರ್ವೈರೂಪೈಸ್ಸಹಾಪ್ಯೇತಿ ಶ್ರೋತ್ರಂ ಸರ್ವೈಶ್ಶಬ್ದೈಸ್ಸಹಾಪ್ಯೇತಿ ಮನಸ್ಸರ್ವೈ-ರ್ಧ್ಯಾತೈಸ್ಸಹಾಪ್ಯೇತಿ ನ ಯದಾ ಪ್ರತಿಬುದ್ಧ್ಯತೇ ಯಥಾಗ್ನೇರ್ವಿಸ್ಫುಲಿಂಗಾ ವಿಪ್ರತಿಷ್ಠೇರನ್ನೇವಮೇವೈ ತಸ್ಮಾದಾತ್ಮನಃ ಪ್ರಾಣಾ ಯಥಾಯತನಂ ವಿಪ್ರತಿಷ್ಠಂತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಃ ॥ (3)**

ತಾ : (ಪ್ರಾಣಾತ್ಮದ ಯಥಾರ್ಥ ತತ್ತ್ವ) ವಾಗೀಂದ್ರಿಯವು ಕೆಲಸ ಮಾಡದಿದ್ದವರು ಕೂಡಾ, ಮೂಕರಾಗಿ ಜೀವಿಸುತ್ತಿರುತ್ತಾರೆ. ನೇತ್ರೇಂದ್ರಿಯವು ಕೆಲಸ ಮಾಡದಿದ್ದವರು ಕೂಡಾ ಕುರುಡರಾಗಿ ಜೀವಿಸುತ್ತಾರೆ. ಶ್ರವಣೇಂದ್ರಿಯವು ಕೆಲಸ ಮಾಡದವರು ಕೂಡಾ, ಕಿವುಡರಾಗಿ ಬದುಕುತ್ತಾರೆ. ಒಂದು ಕೈಯಿಲ್ಲದವರನ್ನು ಒಂದು ಕಾಲು ಇಲ್ಲದವರನ್ನು (ಬದುಕುತ್ತಿರುವವರನ್ನು) ನಾವು ನೋಡುತ್ತಿರುತ್ತೇವೆ. ಬುದ್ಧಿ ಪ್ರಜ್ಞೆಯನ್ನು ಕೂಡಾ ಪ್ರಾಣವೇ ರಕ್ಷಿಸುತ್ತಿರುತ್ತದೆ. ಆದ್ದರಿಂದ ಪ್ರಾಣಾತ್ಮವನ್ನು (ಉಕ್ಥಂ) ವಿಧಿಯಾಗಿ ಉಪಾಸಿಸಬೇಕು. ಪ್ರಾಣಶಕ್ತಿಯಿಂದ ಎಲ್ಲವನ್ನೂ ಹೊಂದ ಬಹುದು. ಪ್ರಾಣಾತ್ಮವೇ ಬುದ್ಧಿ ಪ್ರಜ್ಞೆಯಾಗಿ ಕೆಲಸ ಮಾಡುತ್ತದೆ. ಬುದ್ಧಿ ಪ್ರಜ್ಞೆಯೇ ಪ್ರಾಣಾತ್ಮಕವಾಗಿ ಕೆಲಸ ಮಾಡುತ್ತವೆ. ಬೇರೆ ಬೇರೆಯಾಗಿ ಹೇಳುತ್ತಿರುವ ಬುದ್ಧಿ ಪ್ರಜ್ಞೆ ಪ್ರಾಣಾತ್ಮ ಈ ಎರಡು ಶಕ್ತಿಗಳೂ ಒಂದಾಗಿ ಕೆಲಸ ಮಾಡುತ್ತಿವೆ. ಈ ದೃಷ್ಟಿಯೇ ವಿಜ್ಞಾನ ದೃಷ್ಟಿ ಪುರುಷನು ನಿದ್ರಿಸುವಾಗ ಸುಷುಪ್ತಿಯಲ್ಲಿ (ಗಾಢನಿದ್ರೆಯಲ್ಲಿ) ಸ್ವಪ್ನವನ್ನು ಕಾಣಲಾರ, ಸುಷುಪ್ತಿಯಲ್ಲಿ ವಾಗೀಂದ್ರಿಯ ನೇತ್ರೇಂದ್ರಿಯ ಶ್ರವಣೇಂದ್ರಿಯ ಮನಸ್ಸು ಎಲ್ಲವೂ ಪ್ರಾಣಾತ್ಮದಲ್ಲಿ ಲೀನವಾಗುತ್ತವೆ. ನಿದ್ರೆಯಿಂದ ಎದ್ದ ಕೂಡಲೇ (ಜಾಗ್ರದವಸ್ಥೆಯಲ್ಲಿ) ಕಾಂತಿಕಿರಣಗಳು ವ್ಯಾಪಿಸಿದಂತೆ ಸರ್ವೇಂದ್ರಿಯಗಳಿಗೂ ಪ್ರಾಣಾತ್ಮನು ತನ್ನ ಶಕ್ತಿಯನ್ನು ವ್ಯಾಪಿಸುವಂತೆ ಮಾಡುವನು. ಪ್ರಾಣಾತ್ಮದಿಂದ ಇಂದ್ರಿಯ ಶಕ್ತಿಗಳು ಇಂದ್ರಿಯ ಕಾರ್ಯಗಳಿಂದ ವಿಷಯಗಳು ಪ್ರಕಾಶಿಸುವುವು. ಈ ಪ್ರಾಣಾತ್ಮ ಬುದ್ಧಿ ಪ್ರಜ್ಞೆಯಿಂದ ದೇಹವೆಲ್ಲವು ಪ್ರವೇಶಿಸಿ ವ್ಯಾಪಿಸುವುದು. ಅದ್ದರಿಂದ ಪ್ರಾಣಾತ್ಮವನ್ನು ಭಕ್ತಿಯಿಂದ ಉಪಾಸಿಸಬೇಕು. ಈ ಪ್ರಾಣಾತ್ಮವೇ ಎಲ್ಲವನ್ನೂ ರಕ್ಷಿಸುತ್ತದೆ. ಪ್ರಾಣಾತ್ಮವನ್ನು ಬುದ್ಧಿ ಪ್ರಜ್ಞೆಯಾಗಿ ಭಾವಿಸಬೇಕು. ಬುದ್ಧಿ ಪ್ರಜ್ಞೆಯನ್ನು ಪ್ರಾಣಾತ್ಮಕವಾಗಿ ಆರಾಧಿಸಬೇಕು. ಇದೇ ಸಿದ್ಧಿ. ಪ್ರಾಣಾತ್ಮವನ್ನು ಆರಾಧಿಸುವುದು-ಕಷ್ಟದಲ್ಲಿರುವ ಪುರುಷ ಮರಣ ಸಮಯದಲ್ಲಿ ಸಮ್ಮೋಹಿತನಾಗುವನು ಆತನ ಚಿತ್ತವು ದೇಹದಿಂದ ಬೇರೆಯಾಗುವುದು. ಆತನು ಕೇಳುವುದಿಲ್ಲ ನೋಡುವುದಿಲ್ಲ ಮಾತನಾಡುವುದಿಲ್ಲ, ಆಲೋಚಿಸುವುದಿಲ್ಲ. ಆಗ ಆತನು ಬೀಜರೂಪದಲ್ಲಿ ಪ್ರಾಣಾತ್ಮದಲ್ಲಿ ಲೀನವಾಗಿರುತ್ತಾನೆ. ವಾಗೀಂದ್ರಿಯ ನೇತ್ರೇಂದ್ರಿಯ ಶ್ರವಣೇಂದ್ರಿಯ ಮನಸ್ಸು ಅವುಗಳ ಎಲ್ಲ ಅನುಭವಗಳೊಂದಿಗೆ ಇರುವಂತಹುಗಳು ಬೀಜ ರೂಪದಲ್ಲಿ ಪ್ರಾಣಾತ್ಮದಲ್ಲಿ ಲೀನವಾಗಿರುತ್ತವೆ.

**ಮಂ.ಶ್ಲೋ॥ ಸ ಯದಾಸ್ಮಾಚ್ಛರೀರಾದುತ್ಕ್ರಾಮತಿ ವಾಗಸ್ಮಾತ್ಸರ್ವಾಣಿ ನಾಮಾನ್ಯಭಿವಿಸೃಜತೇ ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ ಪ್ರಾಣೋಽಸ್ಮಾತ್ಸರ್ವಾನ್ ಗಂಧಾನಭಿಸೃಜತೇ ಪ್ರಾಣೇನ ಸರ್ವಾನ್ ಗಂಧಾನಾಪ್ನೋತಿ ಚಕ್ಷುರಸ್ಮಾತ್ಸರ್ವಾಣಿ ರೂಪಾಣ್ಯಭಿವಿಸೃಜತೇ ಚಕ್ಷುಷಾ ಸರ್ವಾಣಿ ರೂಪಾ-**

ಣ್ಯಾಪ್ನೋತಿ ಶ್ರೋತ್ರಮಸ್ಮಾತ್ಸರ್ವಾಂಛಬ್ದಾನಭಿವಿಸ್ಸೃಜತೇ ಶ್ರೋತ್ರೇಣ ಸರ್ವಾಂಛಬ್ದಾ-
ನಾಪ್ನೋತಿ ಮನೋಽಸ್ಮಾತ್ಸರ್ವಾಣಿ ಧ್ಯಾತಾನ್ಯಭಿವಿಸ್ಸೃಜತೇ ಮನಸಾ ಸರ್ವಾಣಿ ಧ್ಯಾತಾನ್ಯಾ-
ವ್ಯಾಪ್ನೋತಿ ಸ್ಸೈಷಾ ಪ್ರಾಣೇ ಸರ್ವಾಪ್ತಿರ್ಯೋವೈ ಪ್ರಾಣಸ್ಸಾ ಪ್ರಜ್ಞಾ ಯಾವಾ ಪ್ರಜ್ಞಾ ಸ ಪ್ರಾಣ
ಸ್ಸಹ ಹ್ಯೇತಾವಸ್ಮಿಂಛರೀರೇ ವಸತಸ್ಸಹೋತ್ಕ್ರಾಮತೋಽಥೋ ಖಲು ಯಥಾ ಪ್ರಜ್ಞಾಯಾಂ
ಸರ್ವಾಣಿ ಭೂತಾನ್ಯೇಕೀ ಭವಂತಿ ತದ್ವ್ಯಾಖ್ಯಾಸ್ಯಾಮಃ ॥ (4)

ತಾ : ಈ ದೇಹವನ್ನು ಬಿಟ್ಟು ಪ್ರಯಾಣ ಮಾಡಿದಾಗ ಜೀವನು ಈ ಕೆಳಗೆ ತಿಳಿಸಿರುವ ನಾಮಗಳೆಲ್ಲವನ್ನು ಜೊತೆಯಲ್ಲಿ ಹೋಗುವನು. ಸಮಸ್ತ ವಾಸನೆಗಳನ್ನು ಪ್ರಾಣಶಕ್ತಿಯಿಂದ ತೆಗೆದು ಕೊಂಡು ಹೋಗುತ್ತಾನೆ. ವಾಗಿಂದ್ರಿಯವು ವಾಕ್ಕುಗಳಿಂದ ಆರ್ಜಿಸಿದ ವಾಸನೆಗಳೆಲ್ಲವನ್ನು ಕೊಡುತ್ತದೆ ಪ್ರಾಣಶಕ್ತಿ ತಾನು ಆರ್ಜಿಸಿದ (ವಾಸನೆಗಳನ್ನು) ಗಂಧಗಳನ್ನು ಕೊಡುತ್ತದೆ. ನೇತ್ರೇಂದ್ರಿಯವು ನೇತ್ರಗಳಿಂದ ಆರ್ಜಿಸಿದ ವಾಸನೆಗಳೆಲ್ಲವನ್ನು ಕೊಡುತ್ತದೆ. ಶ್ರವಣೇಂದ್ರಿಯವು ತಾನು ಆರ್ಜಿಸಿದ ಶಬ್ದ ಸಂಸ್ಕಾರಗಳನ್ನು ಕೊಡುತ್ತದೆ. ಮನಸ್ಸು ತಾನು ಆರ್ಜಿಸಿದ ಸಂಕಲ್ಪ ವಾಸನೆಗಳೆಲ್ಲವನ್ನು ನೀಡುತ್ತದೆ. ಈ ವಿಧವಾಗಿ ಪ್ರಾಣಾತ್ಮ ಸರ್ವವನ್ನು ಕೊಡುತ್ತದೆ. ಈ ವಿಧವಾಗಿ ಪ್ರಾಣಾತ್ಮವು ಸರ್ವವನ್ನು ಸ್ವೀಕರಿಸುತ್ತದೆ. ಪ್ರಾಣಾತ್ಮವೇ ಬುದ್ಧಿ ಪ್ರಜ್ಞೆಯಾಗಿ ಕೆಲಸ ಮಾಡುತ್ತದೆ. ಅವುಗಳ ಪ್ರತ್ಯೇಕ ಶಕ್ತಿ ಸಾಮರ್ಥ್ಯಗಳನ್ನು ತಿಳಿದುಕೊಳ್ಳೋಣ.

ಮಂ.ಶ್ಲೋ॥ ವಾಗೇವಾಸ್ಯಾ ಏಕಮಂಗಮುದೂಢಂ ತಸ್ಯೈ ನಾಮ ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ
ಘ್ರಾಣಮೇವಾಸ್ಯಾ ಏಕಮಂಗಮುದೂಢಂ ತಸ್ಯ ಗಂಧಃ ಪರಸ್ತಾತ್ ಪ್ರತಿವಿಹಿತಾ
ಭೂತಮಾತ್ರಾ ಚಕ್ಷುರೇವಾಸ್ಯಾ ಏಕಮಂಗಮುದೂಢಂ ತಸ್ಯ ರೂಪಂ ಪರಸ್ತಾತ್ ಪ್ರವಿಹಿತಾ
ಭೂತಮಾತ್ರಾ ಶ್ರೋತ್ರಮೇವಾಸ್ಯಾ ಏಕಮಂಗಮುದೂಢಂ ತಸ್ಯಶಬ್ದಃ ಪರಸ್ತಾತ್
ಪ್ರತಿವಿಹಿತಾ ಭೂತಮಾತ್ರಾ ಜಿಹ್ವೈವಾಸ್ಯಾ ಏಕಮಂಗಮುದೂಢಂ ತಸ್ಯಾನ್ನರಸಃ ಪರಸ್ತಾತ್
ಪ್ರತಿವಿಹಿತಾ ಭೂತಮಾತ್ರಾ ಹಸ್ತಾವೇವಾಸ್ಯಾ ಏಕಮಂಗಮುದೂಢಂ ತಯೋಃ ಕರ್ಮ
ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ ಶರೀರಮೇವಾಸ್ಯಾ ಏಕಮಂಗಮುದೂಢಂ ತಸ್ಯ
ಸುಖದುಃಖೇ ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ ಉಪಸ್ಥ ಏವಾಸ್ಯಾ ಏಕಮಂಗ-
ಮುದೂಢಂ ತಸ್ಯಾಽಽನಂದೋ ರತಿಃ ಪ್ರಜಾತಿಃ ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ
ಪಾದಾವೇವಾಸ್ಯಾ ಏಕಮಂಗಮುದೂಢಂ ತಯೋರಿತ್ಯಾಪರಸ್ತಾತ್ ಪ್ರತಿವಿಹಿತಾ ಭೂತ-
ಮಾತ್ರಾ ಪ್ರಜ್ಞೈವಾಸ್ಯಾ ಏಕಮಂಗಮುದೂಢಂ ತಸ್ಯೈಧಿಯೋ ವಿಜ್ಞಾತವ್ಯಂ ಕಾಮಾಃ
ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ ॥ (5)

ತಾ : (ಸರ್ವ ಜೀವಗಳಲ್ಲಿರುವ ಬುದ್ಧಿ ಪ್ರಜ್ಞೆ ಒಂದೇ ಆಗಿ ಹೇಗೆ ವ್ಯಾಪಿಸಿರುವುದೋ ಆಲೋಚಿಸೋಣ) ವಾಗಿಂದ್ರಿಯವು ಒಂದು ಭಾಗವಾಗಿ ವ್ಯವಹರಿಸುತ್ತದೆ. ಅದಕ್ಕೆ ನಾಮವು ಬಾಹ್ಯ ರೂಪ (ಭೂತಮಾತ್ರ). ಘ್ರಾಣವು ಮತ್ತೊಂದು ಭಾಗವಾಗಿ ವ್ಯವಹರಿಸಲಾಗುತ್ತದೆ. ಘ್ರಾಣಕ್ಕೆ ಗಂಧವು

ಬಾಹ್ಯರೂಪ ನೇತ್ರೇಂದ್ರಿಯ(ಕ್ಕೆ) ಕ್ಕಾಗಿ ಸೇರಿದ ಭಾಗವಾಗಿ ವ್ಯವಹರಿಸುತ್ತದೆ. ಅದಕ್ಕೆ ರೂಪವು ಬಾಹ್ಯ ರೂಪ. ಶ್ರವಣೇಂದ್ರಿಯವು ಬೇರೆಂದು ಭಾಗವಾಗಿ ವ್ಯವಹರಿಸುತ್ತದೆ. ಶ್ರವಣೇಂದ್ರಿಯವು ಬಾಹ್ಯರೂಪ. ಜಿಹ್ವೇಂದ್ರಿಯವು ಬೇರೊಂದು ಭಾಗವಾಗಿ ವ್ಯವಹರಿಸಲ್ಪಡುತ್ತದೆ. ಜಿಹ್ವೇಂದ್ರಿಯಕ್ಕೆ(ರಸ) ರುಚಿ ಬಾಹ್ಯರೂಪ. ಎರಡು ಹಸ್ತಗಳು ಒಂದು ಭಾಗವಾಗಿ ವ್ಯವಹರಿಸುತ್ತಿವೆ. ಸ್ವೀಯಕರ್ಮ(ತಾನು ಮಾಡಿದಂತಹ ಕರ್ಮ) ಅವಕ್ಕೆ ಬಾಹ್ಯರೂಪ. ಶರೀರವು ಮತ್ತೊಂದು ಭಾಗವಾಗಿ ವ್ಯವಹರಿಸ-ಲಾಗುತ್ತದೆ. ಸುಖದುಃಖಗಳು ಅವಕ್ಕೆ ಬಾಹ್ಯರೂಪ. ಶರೀರದಲ್ಲಿನ ಉಪಸ್ಥ ಇನ್ನೊಂದು ಭಾಗವಾಗಿ ವ್ಯವಹರಿಸುತ್ತದೆ. ಆನಂದ, ರತಿ, ಸಂತಾನೋತ್ಪತ್ತಿ ಉಪಸ್ಥದ ಬಾಹ್ಯರೂಪಗಳು. ಎರಡು ಪಾದಗಳು ಒಂದು ಭಾಗವಾಗಿ ವ್ಯವಹರಿಸಲಾಗುತ್ತದೆ. ಗಮನ(ಓಡಾಟ) ಅವುಗಳ ಬಾಹ್ಯರೂಪ. ಅಂತಃಕರಣವು (ಬುದ್ಧಿ) ಮತ್ತೊಂದು ಭಾಗವಾಗಿ. ವ್ಯವಹರಿಸುವುದು. ಸಂಕಲ್ಪಗಳು ಕೋರಿಕೆಗಳು ಅಂತಃಕರಣಕ್ಕೆ ಬಾಹ್ಯರೂಪಗಳು.

**ಮಂ.ಶ್ಲೋ॥ ಪ್ರಜ್ಞಯಾ ವಾಚಂ ಸಮಾರುಹ್ಯಾ ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ ಪ್ರಜ್ಞಯಾ ಪ್ರಾಣಂ ಸಮಾರುಹ್ಯ ಪ್ರಾಣೇನ ಸರ್ವಾನ್ಗಂಧಾನಾಪ್ನೋತಿ ಪ್ರಜ್ಞಯಾ ಚಕ್ಷುಸ್ಸಮಾರುಹ್ಯ ಚಕ್ಷುಷಾ ಸರ್ವಾಣಿರೂಪಾಣ್ಯಾಪ್ನೋತಿ ಪ್ರಜ್ಞಯಾ ಶ್ರೋತ್ರಂ ಸಮಾರುಹ್ಯ ಶ್ರೋತ್ರೇಣ ಸರ್ವಾಂಚ್ಛಬ್ದಾ-ನಾಪ್ನೋತಿ ಪ್ರಜ್ಞಯಾ ಜಿಹ್ವಂ ಸಮಾರುಹ್ಯ ಜಿಹ್ವಯಾ ಹಿ ಸರ್ವಾನನ್ನರಸಾನಾಪ್ನೋತಿ ಪ್ರಜ್ಞಯಾ ಹಸ್ತಾ ಸಮಾರುಹ್ಯ ಹಸ್ತಾಭ್ಯಾಂ ಸರ್ವಾಣಿ ಕರ್ಮಾಣ್ಯಾಪ್ನೋತಿ ಪ್ರಜ್ಞಯಾ ಶರೀರಂ ಸಮಾರುಹ್ಯ ಶರೀರೇಣ ಸುಖದುಃಖೇ ಆಪ್ನೋತಿ ಪ್ರಜ್ಞಯೋಪಸ್ಥಂ ಸಮಾರುಹ್ಯೋಪಸ್ಥೇ -ನಾನಂದಂ ರತಿಂ ಪ್ರಜಾತಿಮಾಪ್ನೋತಿ ಪ್ರಜ್ಞಯಾ ಪಾದೌ ಸಮಾರುಹ್ಯ ಪಾದಾಭ್ಯಾಂ ಸರ್ವಾ ಇತ್ಯಾ ಆಪ್ನೋತಿ ಪ್ರಜ್ಞಯೈವ ಧಿಯಂ ಸಮಾರುಹ್ಯ ಪ್ರಜ್ಞಯೈವ ಧಿಯೋ ವಿಜ್ಞಾತವ್ಯಂ ಕಾಮಾನಾಪ್ನೋತಿ ॥ (6)**

ತಾ : ಸರ್ವ ಕಾರ್ಯಗಳನ್ನು ಕರ್ಮಗಳನ್ನು ಬುದ್ಧಿ (ಪ್ರಜ್ಞೆ) ಗ್ರಹಿಸುತ್ತಿದೆ. ಸರ್ವನಾಮ-ಗಳನ್ನು ವಾಗಿಂದ್ರಿಯದಿಂದ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಸರ್ವ ಗಂಧಗಳನ್ನು ಪ್ರಾಣಾತ್ಮದಿಂದ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಸರ್ವ ರೂಪಗಳನ್ನು ಚಷುರಿಂದ್ರಿಯಗಳಿಂದ ಬುದ್ಧಿ ಪ್ರಜ್ಞೆ ಗ್ರಹಿಸುತ್ತದೆ. ಸರ್ವ ಶಬ್ದಗಳನ್ನು ಶ್ರವಣೇಂದ್ರಿಯದಿಂದ ಬುದ್ಧಿ ಪ್ರಜ್ಞೆ ಗ್ರಹಿಸುವುದು. ಸರ್ವ ರಸಗಳನ್ನು (ರುಚಿಗಳನ್ನು) ಜಿಹ್ವೇಂದ್ರಿಯಗಳಿಂದ ಬುದ್ಧಿಪ್ರಜ್ಞೆ ಗ್ರಹಿಸುತ್ತಿದೆ. ಸರ್ವ ಕರ್ಮಗಳನ್ನು ಎರಡು ಹಸ್ತ (ಕೈ)ಗಳಿಂದ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಸಮಸ್ತ ಸುಖದುಃಖಗಳನ್ನು ಶರೀರದಿಂದ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಆನಂದವನ್ನು ರತಿಯನ್ನು ಸಂತಾನೋತ್ಪತ್ತಿಯನ್ನು ಉಪಸ್ಥದ ಮೂಲಕ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಗಮನವನ್ನು ಪಾದಗಳ ಮೂಲಕ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ. ಸರ್ವ ಸಂಕಲ್ಪಗಳನ್ನು ಅಂತಃಕರಣದ ಮೂಲಕ ಬುದ್ಧಿ ಪ್ರಜ್ಞೆ ಗ್ರಹಿಸುತ್ತಿದೆ.

**ಮಂ.ಶ್ಲೋ॥ ನಹಿ ಪ್ರಜ್ಞಾಪೇತಾ ವಾಙ್ನಾಮಮಕಿಂಚನ ಪ್ರಜ್ಞಾಪಯೇದನ್ಯತ್ರ ಮೇ ಮನೋಽಭೂದಿತ್ಯಾಹ ನಾಹಮೇತನ್ನಾಮ ಪ್ರಜ್ಞಾಷಿಸಮಿತಿ ನಹಿ ಪ್ರಜ್ಞಾಪೇತಃ ಪ್ರಾಣೋ ಗಂಧಂ ಕಂಚನ ಪ್ರಜ್ಞಾಪ**

-ಯೇದನ್ಯತ್ರ ಮೇ ಮನೋऽಭೂದಿತ್ಯಾಹ ನಾಹಮೇತಂ ಗಂಧಂ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತಂ ಚಕ್ಷೂ ರೂಪಂ ಕಿಂಚನ ಪ್ರಜ್ಞಾಪಯೇದನ್ಯತ್ರ ಮೇ ಮನೋऽಭೂದಿತ್ಯಾಹ ನಾಹಮೇತದ್ರೂಪಂ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತಂ ಶ್ರೋತ್ರಂ ಶಬ್ದಂ ಕಂಚನ ಪ್ರಜ್ಞಾ -ಪಯೇದನ್ಯತ್ರ ಮೇ ಮನೋऽಭೂದಿತ್ಯಾಹ ನಾಹಮೇತಂ ಶಬ್ದಂ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತಾ ಜಿಹ್ವಾನ್ನರಸಂ ಕಂಚನ ಪ್ರಜ್ಞಾಪಯೇದನ್ಯತ್ರ ಮೇ ಮನೋऽಭೂ-ದಿತ್ಯಾಹ ನಾಹಮೇತಮನ್ನ ರಸಂ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತಾ ಹಸ್ತೌ ಕರ್ಮ ಕಿಂಚನ ಪ್ರಜ್ಞಾಪಯೇತಾಮನ್ಯತ್ರ ಮೇ ಮನೋऽಭೂದಿತ್ಯಾಹ ನಾಹಮೇತತ್ಕರ್ಮ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತಂ ಶರೀರಂ ಸುಖದುಃಖೇ ಕಿಂಚನ ಪ್ರಜ್ಞಾಪಯೇದನ್ಯತ್ರ ಮೇ ಮನೋऽಭೂ -ದಿತ್ಯಾಹ ನಾಹಮೇತತ್ಸುಖದುಃಖೇ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತ ಉಪಸ್ಥ ಆನಂದಂ ರತಿಂ ಪ್ರಜಾತಿಂ ಕಂಚನ ಪ್ರಜ್ಞಾಪಯೇದನ್ಯತ್ರ ಮೇ ಮನೋऽಭೂದಿತ್ಯಾಹಾ ನಾಹಮೇತ -ಮಾನಂದಂ ರತಿಂ ಪ್ರಜ್ಞಾತಿಂ ಪ್ರಜ್ಞಾಸಿಷಮಿತಿ ನಹಿ ಪ್ರಜ್ಞಾಪೇತೌ ಪಾದಾವಿತ್ಯಾಂ ಕಾಂಚನ ಪ್ರಜ್ಞಾಪಯೇ ತಾಮನ್ಯತ್ರ ಮೇ ಮನೋऽಭೂದಿತ್ಯಾಹ ನಾಹಮೇತಮಿತ್ಯಾಂ ಪ್ರಜ್ಞಾಸಿಷ -ಮಿತಿ ನಹಿ ಪ್ರಜ್ಞಾಪೇತಾ ಧೀಃ ಕಾಚನ ಸಿಧ್ಯೇನ್ನ ಪ್ರಜ್ಞಾತವ್ಯಂ ಪ್ರಜ್ಞಾಯೇತ (7)

ತಾ : (ಎಲ್ಲ ಅನುಭವಗಳೊಂದಿಗೆ ಇರುವ ತಿಳುವಳಿಕೆ ಒಂದೇಎಂದು ನಿರೂಪಿಸುವುದು) ಯಥಾರ್ಥವೇನೆಂದರೆ ಬುದ್ಧಿ ಪ್ರಜ್ಞೆಯೊಂದಿಗೆ ಕೂಡಿದ ವಾಕ್ಕುಗಳೊಂದಿಗೆ ಮಾತ್ರವೇ ಯಾವ ವಿಷಯವನ್ನು ನಿರ್ಣಯಿಸಿ ಹೇಳಲಾಗುವುದಿಲ್ಲ. "ನನ್ನ ಮನಸ್ಸು ಎಲ್ಲೋ ಇದೆ. ಆದ್ದರಿಂದ ಗಮನಿಸಲಾರದೆ ಹೋದೆ." ಎಂದು ಒಬ್ಬ ಹೇಳಬಹುದು ನಿಜವಾಗಿಯೂ ಬುದ್ಧಿ ಪ್ರಜ್ಞೆಯಿಂದ ಕೂಡಿರದ ನೇತ್ರೇಂದ್ರಿಯದೊಂದಿಗೆ ಮಾತ್ರವೇ ಯಾವ ರೂಪವನ್ನು ಗುರ್ತಿಸಲಾರೆವು. "ನನ್ನ ಮನಸ್ಸು ಎಲ್ಲೋ ಇದೆ. ಆದ್ದರಿಂದ ಆ ಗಂಧವನ್ನು ಗಮನಿಸಲಿಲ್ಲ" ಎಂದು ಒಬ್ಬ ಹೇಳುತ್ತಿದ್ದಾನೆ. ಯಥಾರ್ಥವಾಗಿ ಬುದ್ಧಿ ಪ್ರಜ್ಞೆಯಿಂದ ಕೂಡಿರದ ನೇತ್ರೇಂದ್ರಿಯದಿಂದ ಮಾತ್ರವೇ ಯಾವ ರೂಪವನ್ನು ಗುರ್ತಿಸಲಾರೆವು. "ನನ್ನ ಮನಸ್ಸು ಎಲ್ಲೋ ಇದೆ ಆದ್ದರಿಂದ ಆ ರೂಪವನ್ನು ಗಮನಿಸಲಿಲ್ಲ. ಎಂದುಒಬ್ಬ ಹೇಳಬಹುದು ನಿಜವಾಗಿ ಬುದ್ಧಿ ಪ್ರಜ್ಞೆಯಿಂದ ತುಂಬಿದ ಶ್ರವಣೇಂದ್ರಿಯದಿಂದ ಮಾತ್ರವೇ ಯಾವ ಶಬ್ದವನ್ನು ಗುರ್ತಿಸಲಾರೆವು. ನನ್ನ ಮನಸ್ಸು ಎಲ್ಲೋ ಇದೆ ಆದ್ದರಿಂದ ಆ ಶಬ್ದವನ್ನು ಗಮನಿಸಲಾರದೆ ಹೋದೆ ಎಂದು ಒಬ್ಬ ಹೇಳುತ್ತಿದ್ದಾನೆ. ನಿಜ ಹೇಳುವುದಾದರೆ ಬುದ್ಧಿ ಪ್ರಜ್ಞೆಯಿಂದ ಕೂಡಿರದ ರಸನೇಂದ್ರಿಯದಿಂದ ಮಾತ್ರವೇ ಯಾವ ರುಚಿಯನ್ನು ಗುರ್ತಿಸಲಾರೆವು ನನ್ನ ಮನಸ್ಸು ಎಲ್ಲೋ ಇದೆ. ಆದ್ದರಿಂದ ಭೋಜನದ ರುಚಿಯನ್ನು ಗುರುತಿಸಲಾಗಲಿಲ್ಲ ಎಂದು ಒಬ್ಬ ಹೇಳುತ್ತಿದ್ದಾನೆ. ನಿಜವಾಗಿ ಬುದ್ಧಿ ಪ್ರಜ್ಞೆಯಿಂದ ಕೂಡಿರದ ಎರಡು ಕೈಗಳಿಂದ ಮಾಡಿದ ಕರ್ಮಗಳನ್ನು ಗುರ್ತಿಸಲಾರೆವು. ನನ್ನ ಮನಸ್ಸು ಎಲ್ಲೋ ಇದೆ. ಆದ್ದರಿಂದ ಹಸ್ತಗಳೊಂದಿಗೆ ಮಾಡಿದ ಕರ್ಮಗಳನ್ನು ಗುರುತಿಸಲಿಲ್ಲ. ಎಂದು ಒಬ್ಬ ಹೇಳುತ್ತಿದ್ದಾನೆ ನಿಜಕ್ಕೂ ಬುದ್ಧಿ ಪ್ರಜ್ಞೆಯಿಂದ ಕೂಡಿರದ ದೇಹದಿಂದ ಮಾತ್ರವೇ ಸುಖದುಃಖಗಳನ್ನು ಗುರುತಿಸಲಾರೆವು. ನನ್ನ ಮನಸ್ಸು ಎಲ್ಲೋ ಇದೆ ಆದ್ದರಿಂದ ಆ ಸುಖದುಃಖಗಳನ್ನು ಗುರುತಿಸಲಾರದೆ ಹೋದೆ ಎಂದು ಒಬ್ಬ ಹೇಳುತ್ತಿದ್ದಾನೆ. ನಿಜವಾಗಿಯೂ ಬುದ್ಧಿಪ್ರಜ್ಞೆಯೊಂದಿಗೆ

ಕೂಡಿರುವ ಉಪಸ್ಥದೊಂದಿಗೆ ಮಾತ್ರವೇ ಆನಂದವನ್ನು ರತಿಸುಖವನ್ನು ಸಂಪಾನೋತ್ಪತ್ತಿಯನ್ನು ಗುರುತಿಸಲಾದರೆ ಹೋದೆ. ನನ್ನ ಮನಸ್ಸು ಆಗ ಎಲ್ಲೋ ಇದೆ. ಆದ್ದರಿಂದ ಆ ಆನಂದವನ್ನು ರತಿ ಸುಖವನ್ನು ಸಂತಾನೋತ್ಪತ್ತಿಯನ್ನು ಗುರುತಿಸಲಾರದೆ ಹೋದೆ. ಎಂದು ಒಬ್ಬ ಹೇಳುತ್ತಿರುತ್ತಾನೆ. ಯಥಾರ್ಥವಾಗಿ ಬುದ್ಧಿ ಪ್ರಜ್ಞೆ ಇಲ್ಲದ ಪಾದದ್ವಯದೊಂದಿಗೆ ನಡೆಯುವುದನ್ನು ಗುರುತಿಸಲಿಲ್ಲ. ನನ್ನ ಮನಸ್ಸು ಆ ಸಮಯದಲ್ಲಿ ಎಲ್ಲೋ ಇದೆ. ಆದ್ದರಿಂದ ಆ ನಡಿಗೆಯನ್ನು ಗಮನಿಸಲಿಲ್ಲ ಎಂದು ಒಬ್ಬ ಹೇಳುತ್ತಿದ್ದಾನೆ. ನಿಜವಾಗಿ ಬುದ್ಧಿ ಪ್ರಜ್ಞೆಯೊಂದಿಗೆ ಮಾತ್ರ ಸಂಕಲ್ಪಗಳನ್ನು ಗುರುತಿಸಲು ಆಗುವುದಿಲ್ಲ ಮನಸ್ಸು ಕೆಲಸ ಮಾಡಿದಾಗ ಮಾತ್ರವೇ ಎಲ್ಲವೂ ಜ್ಞಾಪಕವಿರುವುದು.

**ಮಂ.ಶ್ಲೋ॥ ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾನ್ನ ಗಂಧಂ ವಿಜಿಜ್ಞಾಸೀತ ಘ್ರಾತಾರಂ ವಿದ್ಯಾನ್ನ ರೂಪಂ ವಿಜಿಜ್ಞಾಸೀತ ರೂಪವಿದಂ ವಿದ್ಯಾನ್ನ ಶಬ್ದಂ ವಿಜಿಜ್ಞಾಸೀತ ಶ್ರೋತಾರಂ ವಿದ್ಯಾನ್ನಾನ್ನರಸಂ ವಿಜಿಜ್ಞಾಸೀತಾನ್ನರಸವಿಜ್ಞಾತಾರಂ ವಿದ್ಯಾನ್ನಾನ್ನರಸಂ ವಿಜಿಜ್ಞಾಸೀತಾನ್ನ ರಸವಿಜ್ಞಾತಾರಂ ವಿದ್ಯಾನ್ನ ಕರ್ಮ ವಿಜಿಜ್ಞಾಸೀತ ಕರ್ತಾರಂ ವಿದ್ಯಾನ್ನ ಸುಖದುಃಖೇ ವಿಜಿಜ್ಞಾಸೀತ ಸುಖದುಃಖಯೋರ್ವಿಜ್ಞಾತಾರಂ ವಿದ್ಯಾನ್ನಾನಂದಂ ರತಿಂ ಪ್ರಜಾತಿಂ ವಿಜಿಜ್ಞಾಸೀತಾನಂದಸ್ಯ ರತೇಃ ಪ್ರಜಾತೇಃ ಪ್ರವಿಜ್ಞಾತಾರಂ ವಿದ್ಯಾನ್ನೇತ್ಯಾಂ ವಿಜಿಜ್ಞಾಸೀತ್ಯೈತಾರಂ ವಿದ್ಯಾನ್ನ ಮನೋ ವಿಜಿಜ್ಞಾಸೀತಮನ್ತಾರಂ ವಿದ್ಯಾತ್ತಾವಾ ಏತಾ ದಶೈವ ಭೂತಮಾತ್ರಾ ಅಧಿಪ್ರಜ್ಞಂ ದಶ ಪ್ರಜ್ಞಾಮಾತ್ರಾಧಿಭೂತಂ ಯದ್ಧಿ ಭೂತಮಾತ್ರಾನಸ್ಯುರ್ನಪ್ರಜ್ಞಾ ಮಾತ್ರಾಸ್ಸ್ಯುರ್ಯದ್ವಾ ಪ್ರಜ್ಞಾ -ಮಾತ್ರಾನಸ್ಯುರ್ನಭೂತಮಾತ್ರಾಸ್ಯುಃ ॥ (8)**

ತಾ : (ಸರ್ವ ಜ್ಞಾನಗಳ ಒಟ್ಟು ಸಾರ) ವಾಗಿಂದ್ರಿಯವನ್ನು ಮಾತ್ರವೇ ತಿಳಿದುಕೊಂಡರೆ ಸಾಲದು. ವಾಕ್ಕುಗಳನ್ನು ನುಡಿಯುವವನನ್ನು ತಿಳಿದುಕೊಳ್ಳಬೇಕು ಗಂಧವನ್ನು ಮಾತ್ರ ತಿಳಿದು ಕೊಂಡರೆ ಸಾಲದು. ಗಂಧವನ್ನು ಅನುಭವಿಸುವವನನ್ನು ತಿಳಿದುಕೊಳ್ಳಬೇಕು. ರೂಪಗಳನ್ನು ಮಾತ್ರವೇ ತಿಳಿದುಕೊಂಡರೆ ಸಾಲದು. ಆ ರೂಪಗಳನ್ನು ನೋಡುವವನನ್ನು ತಿಳಿದುಕೊಳ್ಳಬೇಕು. ಶಬ್ದವನ್ನು ಕೇಳುವುದು ಮಾತ್ರ ಸಾಲದು. ಆ ಶ್ರವಣಾನಂದವನ್ನು ಅನುಭವಿಸುವವನನ್ನು ತಿಳಿದು ಕೊಳ್ಳಬೇಕು. ಊಟದ ರುಚಿಯನ್ನು ಮಾತ್ರ ಅನುಭವಿಸಿದರೆ ಸಾಲದು ಆ ರುಚಿಯನ್ನು ಅನುಭವಿಸು-ವವನನ್ನು ತಿಳಿದುಕೊಳ್ಳಬೇಕು. ಕರ್ಮಗಳನ್ನು ಮಾಡುವುದು ಮಾತ್ರ ಸಾಲದು ತಿಳಿದು ಕೊಂಡರೆ ಸಾಲದು ಕರ್ಮಗಳನ್ನು ಮಾಡುವವನನ್ನು ತಿಳಿದುಕೊಳ್ಳಬೇಕು. ಸುಖದುಃಖವನ್ನು ತಿಳಿದುಕೊಂಡರೆ ಸಾಲದು. ಸುಖದುಃಖಗಳನ್ನು ಅನುಭವಿಸುವವನನ್ನು ತಿಳಿದುಕೊಳ್ಳಬೇಕು. ಆನಂದ ರತಿಸುಖ ಸಂತಾನೋತ್ಪತ್ತಿ ಇವುಗಳನ್ನು ತಿಳಿದುಕೊಂಡರೆ ಸಾಲದು ಇವನ್ನು ಅನುಭವಿಸುವವನನ್ನು ತಿಳಿದು ಕೊಳ್ಳಬೇಕು. ನಡಿಗೆಯನ್ನು ತಿಳಿದುಕೊಂಡರೆ ಸಾಲದು ನಡೆಯುವವರನ್ನು ತಿಳಿದು ಕೊಳ್ಳಬೇಕು. ಮನಸ್ಸನ್ನು ತಿಳಿದುಕೊಂಡರೆ ಮಾತ್ರ ಸಾಲದು ಮನಸ್ಸಿನಿಂದ ಸಂಕಲ್ಪಗಳನ್ನು ಮಾಡುವವನನ್ನು ತಿಳಿದುಕೊಳ್ಳಬೇಕು. ಮೇಲೆ ತಿಳಿಸಿದ ಹತ್ತು ಭೂತಮಾತ್ರೆಗಳು ಬುದ್ಧಿ ಪ್ರಜ್ಞೆಗೆ ಸಂಬಂಧಿಸಿದವು ಈ ಪ್ರಜ್ಞಾ ಮಾತ್ರೆಗಳೆಲ್ಲವೂ ಅಧಿಭೂತಗಳು ಪ್ರಾಣಾತ್ಮವಿಲ್ಲದಿದ್ದಲ್ಲಿ ಈ ಪ್ರಜ್ಞಾಮಾತ್ರೆಗಳು ಕೆಲಸ ಮಾಡುವುದಿಲ್ಲ ಪ್ರಜ್ಞಾಮಾತ್ರೆಗಳು ಇಲ್ಲದಾಗ ಪ್ರಾಣಾತ್ಮ ಕೆಲಸ ಮಾಡುವುದಿಲ್ಲ.

ಮಂ.ಶ್ಲೋ॥ ಸಹ್ಯನ್ಯತರತೋ ರೂಪಂ ಕಿಂಚನ ಸಿದ್ಧ್ಯೇನ್ನೋ ಏತನ್ನಾನಾ ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾ ಪರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇ ಅರ್ಪಿತಾ ಸ್ಸವಾ ಏಷ ಪ್ರಾಣ ಏವ ಪ್ರಜ್ಞಾಽಽತ್ಮಾಽನಂದೋಽ-ಜರೋಽಮೃತೋ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾ ಸಾಧುನಾ ಕರ್ಮಣಾ ಕನಿಯಾನೇಷ ಹ್ಯೇವೈನಂ ಸಾದು ಕರ್ಮ ಕಾರಯತಿ ಯ ಮನ್ವಾನುನೇಷತ್ಯೇಷ ಏವೈನ-ಮಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯೋ ನುನುತ್ಸತ ಏಷ ಲೋಕಪಾಲ ಏಷ ಲೋಕಾಧಿಪತಿರೇಷ ಲೋಕೇಶ್ವರಸ್ಸಮ ಆತ್ಮೇತಿ ವಿದ್ಯಾತ್ಸಮ ಆತ್ಮೇತಿ ವಿದ್ಯಾತ್ ॥ (9)

ತಾ : ಯಥಾರ್ಥದಲ್ಲಿ ಯಾವುದರಿಂದ ಬಂದ ರೂಪವಾದರೂ, ಆ ರೂಪವು ಪ್ರತ್ಯೇಕವಸ್ತುವಲ್ಲ. ಅಂತರ್ಯಾಮಿ ತತ್ತ್ವದಲ್ಲಿ ಎಲ್ಲ ರೂಪಗಳು ಒಂದೇ ಆಗಿವೆ. ಪ್ರತ್ಯೇಕವಾದ ಒಂದೇ ರೂಪವೆನ್ನುವುದು ಇಲ್ಲವೇ ಇಲ್ಲ. ಒಂದು ರಥಕ್ಕೆ ಚಕ್ರಗಳನ್ನು ಜೋಡಿಸಲಾಗಿದೆ. ಆ ಚಕ್ರದಲ್ಲಿ ಅರೆಗಳಿವೆ. ಆ ಅರೆ(ದಳ)ಗಳೆಲ್ಲವೂ ಮಧ್ಯದಲ್ಲಿನ ನಾಭಿ (ಕೇಂದ್ರ)ಗೆ ಜೋಡಿಸಲ್ಪಟ್ಟಿವೆ. ಈ ಭೂತ ಮಾತ್ರೆಗಳೆಲ್ಲವೂ ಪ್ರಜ್ಞಾ ಮಾತ್ರೆಗಳಿಂದಲೇ ಬಂದಿರುವಂತಹ ಈ ಪ್ರಜ್ಞಾ ಮಾತ್ರೆಗಳೆಲ್ಲವೂ ಪ್ರಾಣಾತ್ಮದಿಂದ ಉದ್ಭವಿಸಿದಂತಹುವು ಈ ಶ್ವಾಸ ರೂಪದಲ್ಲಿರುವ ಪ್ರಾಣಾತ್ಮ ಪ್ರಜ್ಞಾ ಮಾತ್ರ. ಇದೇ ಆತ್ಮಾನಂದ ಅಜರ ಅಮೃತ ವ್ಯಕ್ತಿಯ ಸಾಧು ವರ್ತನೆಯನ್ನು ಅನುಸರಿಸಿಯೇ ಲೋಕ ವರ್ತನೆಯು ಜರುಗುವುದು. ಸಾಧು (ಪುಣ್ಯ) ಕರ್ಮಗಳನ್ನು ಮಾಡಿದ ಮಾತ್ರಕ್ಕೆ ಮನುಷ್ಯ ದೊಡ್ಡವನಾಗಲಾರ. ಪಾಪಕರ್ಮಗಳನ್ನು ಮಾಡಿದ ವ್ಯಕ್ತಿ ಪಾಪಿಷ್ಠ ನಾಗುವುದಿಲ್ಲ ತನ್ನ ಪ್ರಯತ್ನಕ್ಕೆ ಕೂಡಾ ಸಹಕರಿಸಿದಾಗ ಮಾತ್ರವೇ ಉನ್ನತ ಪದವಿಗೇರಬಲ್ಲ. ಪ್ರಕೃತಿಗೆ ಆಗ್ರಹವುಂಟಾದಾಗ ಮಾತ್ರವೇ ಪಾಪ ಮಾಡಿದವರಿಗೆ ಶಿಕ್ಷೆಯಾಗುವುದು ಆ ಜ್ಞಾನವನ್ನು ಹೊಂದಿದವನೇ ಲೋಕಪಾಲಕನು ಈತನೇ ಲೋಕಾಧಿಪತಿ ಈತನೇ ಎಲ್ಲರಿಗೂ ಪ್ರಭು. ಈತ ನನ್ನ ಆತ್ಮ. ಈತನೇ ಆತ್ಮವಾಗಿದ್ದಾನೆ ಎಂದು ಗ್ರಹಿಸಬೇಕು.

## ಚತುರ್ಥೋಽಧ್ಯಾಯಃ

ಮಂ.ಶ್ಲೋ॥ ಗಾರ್ಗ್ಯೋ ಹವೈ ಬಾಲಾಕಿರನೂಚಾನಸ್ಸಂಸ್ಪಷ್ಟ ಆಸ ಸೋಽಯಮುಶೀನರೇಷು ಸತ್ಸು ಮತ್ಸ್ಯೇಷು ಕುರುಪಾಂಚಾಲೇಷು ಕಾಶೀವಿದೇಹೇಷ್ವಿತಿ ಸದಹಾಜಾತಶತ್ರುಂ ಕಾಶ್ಯ-ಮೇತ್ಯೋವಾಚ ಬ್ರಹ್ಮ ತೇ ಬ್ರವಾಣೀತಿ ತಂ ಹೋವಾಚಾಜಾತಶತ್ರುಸ್ಸಹಸ್ರಂ ದದ್ಮಸ್ತ ಏತಸ್ಯಾಂ ವಾಚಿ ಜನಕೋ ಜನಕ ಇತಿ ವಾ ಉ ಜನಾ ಧಾವಂತೀತಿ ॥ (1)

ತಾ : (ಬ್ರಹ್ಮನ ಮತ್ತೊಂದು ಹೇಳಿಕೆ ಬ್ರಹ್ಮನನ್ನು ಕುರಿತು ಬಾಲಾಕಿ ಮುನಿ ನೀಡಿರುವ ಸಂದೇಶ) ಬ್ರಹ್ಮಜ್ಞಾನವನ್ನು ಚೆನ್ನಾಗಿ ತಿಳಿದುಕೊಂಡ ಗಾರ್ಗ್ಯ ಬಾಲಾಕಿಯೆನ್ನುವ ಶ್ರೇಷ್ಠ ಋಷಿಯೊಬ್ಬ ಹಿಂದೆ ಇದ್ದ. ಆ ಮುನೀಶ್ವರನು ಉಶೀನರರಿದ್ದಾಗ ಮತ್ಸ್ಯ ದೇಶಸ್ಥರಿದ್ದಾಗ ಕುರುಪಾಂಚಾಲ ವಂಶೀಯರು ಇದ್ದಾಗ ಕಾಶೀ ವಾಸಿಗಳಿದ್ದಾಗ ವಿದೇಹ ದೇಶೀಯರಿದ್ದಾಗ, ವಾಸವಾಗಿದ್ದವನು.

ಆಗ ಕಾಶೀ ಪಟ್ಟಣದ ಚಕ್ರವರ್ತಿಯಾದ ಆಜಾತ ಶತ್ರು ಮಹಾರಾಜನ ಬಳಿಗೆ ಈ ಗಾರ್ಗ್ಯ ಬಾಲಾಕಿ ಮುನಿಯು ಬಂದು ಹೀಗೆ ನುಡಿದ. ಬ್ರಹ್ಮವನ್ನು ಕುರಿತು ನಾನು ನಿನಗೆ ಹೇಳುವೆನು. ಆ ಮಾತನ್ನು ಕೇಳುತ್ತಲೇ ಅಜಾತ ಶತ್ರು ಮಹಾರಾಜನು ಹೀಗೆ ಹೇಳಿದ. ಸಾವಿರ ಗೋವುಗಳನ್ನು ನಿಮಗೆ ಬಹುಮಾನವಾಗಿ ಕೊಡುತ್ತಿದ್ದೇನೆ ಅಲ್ಲಿದ್ದ ಪ್ರಜೆಗಳೆಲ್ಲರೂ "ನೀವು ಜ್ಞಾನದಲ್ಲಿ ಜನಕ ಮಹಾರಾಜರು" ಎಂದು ಪ್ರಶಂಸಿಸಿದರು.

**ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ಆದಿತ್ಯೇ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ಬೃಹನ್ ಪಾಂಡರವಾಸಾಧಿಷ್ಠಾ ಸರ್ವೇಷಾಂ ಭೂತಾನಾಂ ಮೂರ್ಧೇತಿವಾ ಅಹಮೇತಮುಪಾಸ ಇತಿ ಸಯೋಹೈತಮೇವ -ಮುಪಾಸ್ತೇಧಿಷ್ಠಾಃಸರ್ವೇಷಾಂ ಭೂತಾನಾಂ ಮೂರ್ಧಾ ಭವತಿ ॥ (2)**

ತಾ : (ಬಾಲಾಕಿ ಮುನಿ ಅಜಾತ ಶತ್ರು ಮಹಾರಾಜ ಇಬ್ಬರೂ ಬ್ರಹ್ಮವನ್ನು ಕುರಿತು ಮಾಡಿದ ನಿರ್ವಚನದ ಪ್ರವಚನ ಬಾಲಾಕಿ ಮುನಿ ಸೂರ್ಯ ಭಗವಾನನಲ್ಲಿರುವ ನಾನು ಆರಾಧಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು ನಾನು ಆತನನ್ನು ಕುರಿತು ಹೀಗೆಂದು ವರ್ಣಿಸಿಲಾರೆ. ಆತ ಮಹಾತ್ಮ. ಸಮಸ್ತ ಭೂತಗಳಿಗೆ ಅಧಿಷ್ಠಾನ, ಶುದ್ಧ, ಸಾತ್ವಿಕ, ಸರ್ವಜೀವಿಗಳಿಗೂ ಶಿರಸ್ಸಿನಂತಹವನು. ಆ ಸೂರ್ಯಾತ್ಮನನ್ನು ಆರಾಧಿಸುತ್ತೇವೆ. ಆ ಸೂರ್ಯ ಭಗವಾನ್‌ನನ್ನು ಆರಾಧಿಸುವವರು ಸೂರ್ಯ ತೇಜಸ್ಸನ್ನು ಹೊಂದಿ ಸರ್ವ ಜೀವಿಗಳಿಗೂ ಶಿರಸ್ಸಿನಂತಿರುವರು.

**ಮಂ.ಶ್ಲೋ॥ ಸ ಏವೈಷ ಬಾಲಾಕಿರ್ಯ ಏವೈಷ ಚಂದ್ರಮಸಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾಸ್ಸೋಮೋರಾಜನ್ನನ್ನ -ಸ್ಯಾತ್ಮೇತಿ ವಾ ಅಹಮೇತಮುಪಾಸ ಇತಿ ಸ ಯೋಹೈ ತಮೇವಮುಪಾಸ್ತೇಽನ್ನಸ್ಯಾತ್ಮಾ ಭವತಿ ॥ (3)**

ತಾ : ಬಾಲಾಕಿ ಮುನಿ ಚಂದ್ರನಲ್ಲಿರುವ ನಾನು ಆರಾಧಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು- ಆ ಪುರುಷನನ್ನು ನಾನು ಅಭಿವರ್ಣಿಸಲಾರೆ. ಆ ಚಂದ್ರನಲ್ಲಿರುವ ಪುರುಷನೇ ಸೋಮ, ರಾಜ, ಆಹಾರ(ಅನ್ನ) ಕ್ಕೆ ಆತ್ಮ. ನಾನು ಆತನನ್ನು ಭಕ್ತಿಯಿಂದ ಉಪಾಸಿಸಿದೆ. ಆ ಸೋಮ ಪುರುಷನನ್ನು ಆರಾಧಿಸುವವರು ಸಮಸ್ತ ಆಹಾರಗಳಿಗೂ ಆತ್ಮವಾಗುತ್ತಿದ್ದಾರೆ.

**ಮಂ.ಶ್ಲೋ॥ ಸ ಹೋವಾಚ ಬಾಲಾಕಿರ್ಯ ಏವೈಷ ವಿದ್ಯುತಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ತಂ ಹೋವಾಚಾಜಾತಶತ್ರುರ್ಮಮೈತಸ್ಮಿನ್ ಸಮವಾದಯಿಷ್ಠಾಸ್ತೇ ಜಸ್ಯಾತ್ಮೇತಿವಾ ಅಹಮೇತಮುಪಾಸ ಇತಿ ಸ ಯೋ ಹೈತಮೇವಮುಪಾಸ್ತೇ ತೇಜಸ್ಯಾತ್ಮಾ ಭವತಿ॥ (4)**

ತಾ : ಬಾಲಾಕಿ ಮುನಿ-ವಿದ್ಯುತ್ ತೇಜಸ್ಸಿನಲ್ಲಿರುವ ನಾನು ಉಪಾಸಿಸುವವಂತಹ ಆ ಪುರುಷನ್ಯಾರು? ಅಜಾತ ಶತ್ರು: ನಾನು ಆ ತೇಜೋ ಪುರುಷನನ್ನು ವರ್ಣಿಸಿಲಾರೆ ಆ ಪುರುಷನು ಸಮಸ್ತ ತೇಜಸ್ಸುಗಳಿಗೂ ಆತ್ಮ: ಆತನನ್ನು ಭಕ್ತಿಯಿಂದ ಉಪಾಸಿಸುತ್ತೇನೆ. ತೇಜಸ್ಸಿಗೆ ಆತ್ಮವಾಗಿ ಆತನನ್ನು ಉಪಾಸಿಸಿದವರು ಸಮಸ್ತ ತೇಜಸ್ಸುಗಳಿಗೂ ಆತ್ಮವಾಗುವರು.

ಮಂ.ಶ್ಲೋ|| ಸಹೋವಾಚ ಬಾಲಾಕಿರ್ಯ ಏವೈಷಸ್ತನಯಿತ್ನೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ತಂಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾಶ್ಶಬ್ದಸ್ಯಾತ್ಮೇತಿ ವಾ ಅಹಮೇತಮುಪಾಸ ಇತಿ ಸಯೋಽಹೈತಮೇವಮುಪಾಸ್ತೇ ಶಬ್ದಸ್ಯಾತ್ಮಾ ಭವತಿ || (5)

ತಾ : ಬಾಲಾಕಿ ಮುನಿ:- ಗುಡುಗುಗಳೊಂದಿಗೆ ಪ್ರಕಾಶಿಸುತ್ತಿರುವ ನಾನು ಉಪಾಸಿಸ ಬೇಕಾದ ಆ ಪುರುಷನ್ಯಾರು? ಅಜಾತಶತ್ರು:- ಆ ಪುರುಷನನ್ನು ನಾನು ಅಭಿವರ್ಣಿಸಲಾರೆ ಸಮಸ್ತ ಶಬ್ದಗಳಿಗೂ ಆತ್ಮವಾಗಿ ಆತನನ್ನು ಉಪಾಸಿಸುತ್ತಿರುವೆನು ಆ ಪುರುಷನನ್ನು ಶಬ್ದಾತ್ಮವಾಗಿ ಉಪಾಸಿಸುವವರು ಸಮಸ್ತ ಶಬ್ದಗಳಿಗೂ ಆತ್ಮವಾಗುತ್ತಿದ್ದಾರೆ.

ಮಂ.ಶ್ಲೋ|| ಸಹೋವಾಚ ಬಾಲಾಕಿರ್ಯ ಏವೈಷ ಆಕಾಶೇ ಪುರುಷಸ್ತಮೇವಾಹಮುಪಾಸ ಇತಿ ತಂಹೋ-ವಾಚಾಜಾತಶತ್ರುರ್ಮಾಮೈತಸ್ಮಿನ್ ಸಂಪದಿಷ್ಠಾಃ ಪೂರ್ಣಮಪ್ರವರ್ತಿ ಬ್ರಹ್ಮೇತಿ ವಾ ಅಹಮೇತ-ಮುಪಾಸ ಇತಿ ಸಯೋಽಹೈತಮೇವಮುಪಾಸ್ತೇ ಪೂರ್ಯತೇ ಪ್ರಜಯೇ ಪಶುಭಿರ್ಯೋ ಏವ ಸ್ವಯಂ ನಾಸ್ಯ ಪ್ರಜಾ ಪುರಾಕಾಲಾತ್ ಪ್ರವರ್ತತೇ || (6)

ತಾ : ಬಾಲಾಕಿ ಮುನಿ:- ಆಕಾಶದಲ್ಲಿರುವ ನಾನು ಉಪಾಸಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು:- ಆಪುರುಷನನ್ನು ಅಭಿವರ್ಣಿಸಲಾರೆ. ಆತ ಪೂರ್ಣ ಪುರುಷ. ಅಪ್ರವರ್ತಿ. ಆ ಬ್ರಹ್ಮವನ್ನು ಭಕ್ತಿಯೊಂದಿಗೆ ಉಪಾಸಿಸುತ್ತಿದ್ದೇನೆ. ಆಕಾಶಾತ್ಮನನ್ನು ಈ ವಿಧವಾಗಿ ಉಪಾಸಿಸಿದವರು ಸುಸುಂತಾನವನ್ನು, ಪಶುಸಂಪತ್ತನ್ನು, ಯಶಸ್ಸನ್ನು ಹೊಂದಿ ಮರಣಾನಂತರ ಸ್ವರ್ಗ ಲೋಕವನ್ನು ಕೂಡಾ ಹೊಂದುತ್ತಾರೆ.

ಮಂ.ಶ್ಲೋ|| ಸಹೋವಾಚ ಬಾಲಾಕಿರ್ಯ ಏವೈಷ ವಾಯೌ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ಇಂದ್ರೋ ವೈಕುಂಠೋ ಪರಾಜಿತಾ ಸೇನೇತಿ ವಾ ಅಹಮೇತಮುಪಾಸ ಇತಿ ಸ ಯೋ ಹೈತಮೇವಮುಪಾಸ್ತೇ ಜಿಷ್ಣುರ್ಹವೈ ಪರಾಜಿಷ್ಣುರನ್ಯತಸ್ತಜ್ಜ್ಯಾಯನ್ಭವತಿ || (7)

ತಾ : ಬಾಲಾಕಿ ಮುನಿ:- ವಾಯುವಿನಲ್ಲಿರುವ ನಾನು ಉಪಾಸಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು:- ಆಪುರುಷನನ್ನು ಅಭಿವರ್ಣಿಸಲಾರೆ ವಾಯುವಿನ ಆತ್ಮವನ್ನು ಇಂದ್ರನಾಗಿ ವೈಕುಂಠನಾಗಿ, ಅಪರಾಜಿತ ವೀರನಾಗಿ ಉಪಾಸಿಸುತ್ತೇನೆ ಆತನನ್ನು ಈ ವಿಧವಾಗಿ ಉಪಾಸಿಸುವವರು ಪರಾಜಯವಿಲ್ಲದ ವಿಷ್ಣುವಿನಂತೆ ಪ್ರಕಾಶಿಸುವರು.

ಮಂ.ಶ್ಲೋ|| ಸಹೋವಾಚ ಬಾಲಾಕಿರ್ಯ ಏವೈಷೋಽಗ್ನೌ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ವಿಷಾಸಹಿರಿತಿ ವಾ ಅಹಮೇತ-ಮುಪಾಸ ಇತಿ ಸ ಯೋ ಹೈತಮೇವಮುಪಾಸ್ತೇ ವಿಷಾಸಹಿರ್ವಾ ಏಷ ಭವತಿ || (8)

ತಾ : ಬಾಲಾಕಿ ಮುನಿ:- ಅಗ್ನಿಭೂತದಲ್ಲಿರುವ ನಾನು ಉಪಾಸಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು:- ಆತನನ್ನು ನಾನು ಪೂರ್ತಿಯಾಗಿ ಅಭಿವರ್ಣಿಸಲಾರೆ. ಆತನು ಸರ್ವವನ್ನೂ ಭಸ್ಮ

ಮಾಡಬಲ್ಲ ಆತನನ್ನು ಭಕ್ತಿಯಿಂದ ಆರಾಧಿಸುತ್ತೇನೆ ಆತನನ್ನು ಉಪಾಸಿಸುವರು ಅಗ್ನಿಯಂತಹ ತೇಜಸ್ಸನ್ನು ಹೊಂದಿದವರಾಗುವರು.

**ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷಾಽಪ್ಸು ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ನಾಮ್ನ್ಯಸ್ಯಾತ್ಮೇತಿ ವಾ ಅಹಮೇತಮುಪಾಸ ಇತಿ ಸ ಯೋ ಹೈತಮೇವಮುಪಾಸ್ತೇ ನಾಮ್ನೋಽಸ್ಯಾತ್ಮಾ ಭವತೀ -ತ್ಯಧಿದೈವತಮಥಾಧ್ಯಾತ್ಮಮ್ ॥ (9)**

ತಾ : ಬಾಲಾಕಿ ಮುನಿ:- ಜಲದಲ್ಲಿರುವ ನಾನು ಉಪಾಸಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು:- ಆ ಪುರುಷನನ್ನು ಕುರಿತು ನಾನು ವರ್ಣಿಸಲಾರೆ ಆತನು ಸರ್ವನಾಮಗಳಗೂ ಆತ್ಮವಾಗಿರುವನು ಆತನನ್ನು ನಾನು ಭಕ್ತಿಯಿಂದ ಉಪಾಸಿಸುತ್ತಿದ್ದೇನೆ. ಆ ಪುರುಷನನ್ನು ಉಪಾಸಿಸುವವರು ಸಮಸ್ತ ನಾಮಗಳಗೂ ಆತ್ಮವಾಗುತ್ತಿದ್ದಾರೆ ಆ ಆತ್ಮವೇ ಅಧಿದೈವತ ಇನ್ನು ಅಧ್ಯಾತ್ಮ!

**ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ಆದರ್ಶೇ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾಃ ಪ್ರತಿರೂಪ ಇತಿ ವಾ ಅಹಮೇತ -ಮುಪಾಸ ಇತಿ ಸ ಯೋಽಹೈತಮೇವಮುಪಾಸ್ತೇ ಪ್ರತಿರೂಪೋ ಹೈವಾಸ್ಯ ಪ್ರಜಾಯಾ- ಮಾಜಾಯತೇ ನಾ ಪ್ರತಿರೂಪಃ ॥ (10)**

ತಾ : (ಪ್ರತಿಬಿಂಬ ರೂಪವಾದ ಜೀವಾತ್ಮನನ್ನು ಕುರಿತು) ಬಾಲಾಕಿ ಮುನಿ:- ಕನ್ನಡಿಯಲ್ಲಿ ಪ್ರತಿಬಿಂಬರೂಪದಲ್ಲಿ ಪ್ರಕಾಶಿಸುವ ಆ ಪುರುಷನ್ಯಾರು? ಆತನನ್ನು ನಾನು ಹೇಗೆ ಉಪಾಸಿಸಬೇಕು? ಅಜಾತಶತ್ರು:- ಆತನನ್ನು ನಾನು ಪೂರ್ತಿಯಾಗಿ ಅಭಿವರ್ಣಿಸಲಾರೆ ಆ ಪುರುಷನನ್ನು ನನ್ನ ಪ್ರತಿ ರೂಪವಾಗಿ ಉಪಾಸಿಸುತ್ತಿದ್ದೇನೆ ಆತನನ್ನು ಪ್ರತಿರೂಪವಾಗಿ ಯಾರು ಉಪಾಸಿಸುವರೋ ಅವರು ಆ ಪುರುಷನ ಆತ್ಮವಾಗುತ್ತಾರೆ. ಅವರು ಪ್ರತಿರೂಪವಲ್ಲ (ಅವರೇ ಇವರು)

**ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ಪ್ರಾತಿಶ್ರುತ್ಕಾ ಯಾಂ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾಯಾ ದ್ವಿತೀಯೋಽನ -ಪಗ ಇತಿ ವಾ ಅಹಮೇತಮುಪಾಸ ಇತಿ ಸಯೋಹೈತಮೇವಮುಪಾಸ್ತೇ ವಿಂದತೇ ದ್ವಿತೀಯಂ ದ್ವಿತೀಯವಾನ್ಭವತಿ ॥ (11)**

ತಾ : ಬಾಲಾಕಿ ಮುನಿ:- ಛಾಯೆಯಲ್ಲಿ (ನನ್ನ ನೆರಳನಲ್ಲಿ)ರುವ ಪುರುಷನ್ಯಾರು? ಅವನನ್ನ ಹೇಗೆ (ಯಾವರೀತಿ ಉಪಾಸಿಸಬೇಕು. ಅಜಾತ ಶತ್ರು:- "ಆತನನ್ನು ನಾನು ಅಭಿವರ್ಣಿಸಲಾರೆ ಆ ಛಾಯಾಪುರುಷನನ್ನು ಎರಡನೆಯನಾಗಿ ಬೇರ್ಪಡಿಸಲಾರೆ. ಒಂದೇ ಆತ್ಮವಾಗಿ ಉಪಾಸಿಸುತ್ತಿರುವೆನು ಛಾಯಾಪುರುಷನನ್ನು ಈ ರೀತಿಯಾಗಿ ಉಪಾಸಿಸುವವರು ಏಕಾತ್ಮವಾಗುವರು.

ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ಶಬ್ದಃ ಪುರುಷಮನ್ವೇತಿ ತಮೇ ವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ಆಯುರಿತಿವಾ ಅಹಮೇತ -ಮುಪಾಸ ಇತಿ ಸಯೋಹೈತಮೇವಮುಪಾಸ್ತೇ ನೋ ಏವ ಸ್ವಯಂ ನಾಸ್ಯ ಪ್ರಜಾ ಪುರಾಕಾಲಾತ್ಸಂಮೋಹಮೇತಿ ॥ (12)

ತಾ : ಬಾಲಾಕಿ ಮುನಿ:- ಅಹಂ ತತ್ವದಲ್ಲಿರುವ ಆ ಪುರುಷನ್ಯಾರು? ಆತನನ್ನು ನಾನು ಯಾವ ರೀತಿ ಉಪಾಸಿಸಬೇಕು? ಅಜಾತ ಶತ್ರು:- ಆತನನ್ನು ನಾನು ಸರಿಯಾಗಿ ವರ್ಣಿಸಲಾರೆ ಆತನನ್ನು ನಾನು ಆಯುವಾಗಿ (ಜೀವವಾಗಿ) ಉಪಾಸಿಸುತ್ತಿದ್ದೇನೆ ಆ ಪುರುಷನನ್ನು ಆ ವಿಧವಾಗಿ ಉಪಾಸಿಸುವವರು ಮರಣ ಸಮಯದಲ್ಲಿ ಸಮ್ಮೋಹವನ್ನು ಹೊಂದುವುದಿಲ್ಲ.

ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷಚ್ಛಾಯಾಯಾಂ ಪುರುಷಸ್ತಮೇವಾಹಮುಪಾಸ ಇತಿ ತಂಹೋವಾಚಾಜಾತಶ್ಯತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ಮೃತ್ಯುರಿತಿವಾ ಅಹಮೇತ -ಮುಪಾಸ ಇತಿ ಸಯೋ ಹೈತಮೇವಮುಪಾಸ್ತೇ ನೋ ಏವ ಸ್ವಯಂ ನಾಸ್ಯ ಪ್ರಜಾ ಪುರಾಕಾಲಾತ್ ಪ್ರಮೀಯತೇ ॥ (13)

ತಾ : ಬಾಲಾಕಿ ಮುನಿ:- ಆ ಛಾಯಾ ಪುರುಷನ್ಯಾರು? ಆತನನ್ನು ನಾನು ಹೇಗೆ ಉಪಾಸಿಸಬೇಕು? ಅಜಾತ ಶತ್ರು:- ಆ ಪುರುಷನನ್ನು ನಾನು ಅಭಿವರ್ಣಿಸಲಾರೆ ಸೃಷ್ಠಿ ಕರ್ತನಾದ ಪ್ರಜಾಪತಿಯಾಗಿ ಆ ಪುರುಷನನ್ನು ಉಪಾಸಿಸುತ್ತಿದ್ದೇನೆ ಈ ವಿಧವಾಗಿ ಆ ಪುರುಷನನ್ನು ಉಪಾಸಿಸಿದವರಿಗೆ, ಅವರ ಸಂತತಿಗೆ, ಅಕಾಲ ಮೃತ್ಯು ಭಯವಿಲ್ಲ.

ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ಶಾರೀರಃ ಪುರುಷಸ್ತಮೇವಾಮುಪಾಸ ಇತಿ ತಂಹೋ -ವಾಚಾಜಾತಶತ್ರುರ್ಮಾಮೈತಸ್ಮಿನ್ ಸಮುವಾದಯಿಷ್ಠಾಃ ಪ್ರಜಾಪತಿರಿತಿ ವಾ ಅಹಮೇತ -ಮುಪಾಸ ಇತಿ ಸಯೋ ಹೈತಮೇವಮುಪಾಸ್ತೇ ಪ್ರಜಾಯತೇ ಪ್ರಜಯಾ ಪಶುಭಿಃ॥(14)

ತಾ : ಬಾಲಾಕಿ ಮುನಿ:- ಈ ಶರೀರದಲ್ಲಿರುವ ನಾನು ಉಪಾಸಿಸಬೇಕಾದ ಆ ಪುರುಷನ್ಯಾರು? ಅಜಾತ ಶತ್ರು:- ಆ ಪುರುಷನನ್ನು ನಾನು ವರ್ಣಿಸಲಾರೆ ಸೃಷ್ಠಿಕರ್ತನಾದ ಪ್ರಜಾಪತಿಯಾಗಿ ಆ ಪುರುಷನನ್ನು ನಾನು ಉಪಾಸಿಸುತ್ತಿರುವೆನು. ಈ ವಿಧವಾಗಿ ಆ ಪುರುಷನನ್ನು ಉಪಾಸಿಸುವವರಿಗೆ ಸುಸಂತಾನ, ಪಶುಸಂಪತ್ತು, ಸಮೃದ್ಧಿಯಾಗಿ ಲಭಿಸುವುದು.

ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷಾ ಪ್ರಾಜ್ಞ ಆತ್ಮಾ ಯೇನೈತತ್ಸುಪ್ತಃ ಸ್ವಪ್ನಯಾಚರತಿ ತಮೇವಾಹಮುಪಾಸ ಇತಿ ತಂಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ಯಮೋ ರಾಜೇತಿ ವಾ ಅಹಮೇತಮುಪಾಸ ಇತಿ ಸ ಯೋಹೈತಮೇವಮುಪಾಸ್ತೇ ಸರ್ವ್ವಂ ಹಸ್ಮಾ ಇದಂ ಶ್ರೇಷ್ಠ್ಯಾಯ ಯಮ್ಯತೇ ॥ (15)

ತಾ : ಬಾಲಾಕಿ ಮುನಿ:- ಸ್ವಪ್ನ ರೂಪದಲ್ಲಿ ಸಂಚರಿಸುತ್ತಿರುವ ಆ ಪುರುಷನ್ಯಾರು? ಆತನನ್ನು ನಾನು ಹೇಗೆ ಉಪಾಸಿಸಬೇಕು? ಅಜಾತ ಶತ್ರು:- ಪುರುಷನನ್ನು ನಾನು ಅಭಿವರ್ಣಿಸಲಾರೆ.

ಆತನನ್ನು ಯಮರಾಜನಾಗಿ ಉಪಾಸಿಸುತ್ತಿರುವೆ. ಈ ವಿಧವಾಗಿ ಉಪಾಸಿಸುವವರಿಗೆ, ಲೋಕದಲ್ಲಿ ಎಲ್ಲ ಸಂಪತ್ತುಗಳಗಿಂತ ಶ್ರೇಷ್ಠವಾದ ಸಂಪತ್ತುಗಳು ಲಭಿಸುವುದು.

**ಮಂ.ಶ್ಲೋ॥ ಸಹೋವಾಚ ಬಾಲಾಕಿರ್ಯ ಏವೈಷ ದಕ್ಷಿಣೇಽಕ್ಷನ್ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾ ನಾಮ್ನ ಆತ್ಮಾಽಗ್ನೇರಾತ್ಮಾ ಜ್ಯೋತಿಷ ಆತ್ಮೇತಿ ವಾ ಅಹಮೇತಮುಪಾಸ ಇತಿ ಸ ಯೋಹೈತಮೇವಮುಪಾಸ್ತ ಏತೇಷಾಂ ಸರ್ವೇಷಾಮಾತ್ಮಾ ಭವತಿ ॥ (16)**

ತಾ : ಬಾಲಾಕಿ ಮುನಿ:- ಬಲಗಣ್ಣಿನಲ್ಲಿ ನಿವಸಿಸುವ ಆ ಪುರುಷನ್ಯಾರು? ಆತನನ್ನು ನಾನು ಹೇಗೆ ಉಪಾಸಿಸಬೇಕು? ಅಜಾತ ಶತ್ರು:- ಆತನನ್ನು ನಾನು ಅಭಿವರ್ಣಿಸಲಾರೆ ಆತನನ್ನು ಸರ್ವ ನಾಮಗಳ ಆತ್ಮವಾಗಿಯೂ, ಅಗ್ನಿಯ ಆತ್ಮವಾಗಿಯೂ, ಜ್ಯೋತಿಗಳ ಆತ್ಮವಾಗಿಯೂ, ಉಪಾಸಿಸುತ್ತಿರುವೆನು. ಈ ವಿಧವಾಗಿ ಉಪಾಸಿಸುವವರು ಸರ್ವನಾಮಗಳ ಅಗ್ನಿಯ, ಜ್ಯೋತಿಗಳ ಆತ್ಮವಾಗುತ್ತಾರೆ.

**ಮಂ.ಶ್ಲೋ॥ ಸ ಹೋವಾಚ ಬಾಲಾಕಿರ್ಯ ಏವೈಷ ಸವ್ಯೇಽಕ್ಷನ್ ಪುರುಷಸ್ತಮೇವಾಹಮುಪಾಸ ಇತಿ ತಂ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಮವಾದಯಿಷ್ಠಾಸ್ಸತ್ಯಸ್ಯಾತ್ಮಾ ವಿದ್ಯುತ ಆತ್ಮಾ ತೇಜಸ ಆತ್ಮೇತಿವಾ ಅಹಮೇತಮುಪಾಸ ಇತಿ ಸಯೋ ಹೈತಮೇವಮುಪಾಸ್ತ ಏತೇಷಾಂ ಸರ್ವೇಷಾಮಾತ್ಮಾ ಭವತೀತಿ (17)**

ತಾ : ಬಾಲಾಕಿ ಮುನಿ:- ಎಡಗಣ್ಣಿನಲ್ಲಿ ವಾಸಿಸುವ ಆ ಪುರುಷನ್ಯಾರು? ಆತನನ್ನು ನಾನು ಹೇಗೆ ಉಪಾಸಿಸಬೇಕು? ಅಜಾತ ಶತ್ರು:- ಆತನನ್ನು ನಾನು ಅಭಿವರ್ಣಿಸಲಾರೆ ಆ ಪುರುಷನನ್ನು ನಾನು ಸತ್ಯಾತ್ಮನಾಗಿಯೂ, ವಿದ್ಯುದಾತ್ಮವಾಗಿಯೂ, ತೇಜಸ್ಸುಗಳ ಆತ್ಮವಾಗಿಯೂ, ಉಪಾಸಿಸುತ್ತಿರುವೆನು. ಈ ವಿಧವಾಗಿ ಉಪಾಸಿಸುವವರು ಸತ್ಯಕ್ಕೆ, ವಿದ್ಯುತ್ತಿಗೆ, ತೇಜಸ್ಸಿಗೆ ಆತ್ಮವಾಗುತ್ತಿರುತ್ತಾರೆ

**ಮಂ.ಶ್ಲೋ॥ ತತ ಉಹ ಬಾಲಾಕಿಸ್ತೂಷ್ಣೀಮಾಸ ತಂ ಹೋವಾಚಾಜಾತಶತ್ರುರೇತಾವನ್ನೂ ಬಾಲಾಕಾ ಇತಿ ಏತಾವದ್ಧೀತಿ ಹೋವಾಚ ಬಾಲಾಕಿಸ್ತಂ ಹೋವಾಚಾಜಾತಶತ್ರುಃ ಮೃಷಾವೈ ಕಿಲ ಮಾ ಸಂವದಿಷ್ಠಾ ಬ್ರಹ್ಮತೇ ಬ್ರವಾಣೀತಿ ಸಹೋವಾಚ ಯೋವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯವೈ ತತ್ಕರ್ಮ ಸಂಘೈರ್ವೇದಿತವ್ಯ ಇತಿ ತತ ಉಹ ಬಾಲಾಕಿ-ಸ್ಸಮಿತ್ಪಾಣಿಃ ಪ್ರತಿಚಕ್ರಾಮೋಪಾಯಾನೀತಿ ತಂ ಹೋವಾಚಾಜಾತಶತ್ರುಃ ಪ್ರತಿಲೋಮ ರೂಪಮೇವಸ್ಯಾದ್ಯಾತ್‌ಕ್ಷತ್ರಿಯೋಽ ಬ್ರಾಹ್ಮಣಮುಪನಯೇದೇಹಿವ್ಯೇವತ್ವಾಜ್ಞಪ-ಯಿಷ್ಯಾಮೀತಿ ತಂ ಹ ಪ್ರಾಣಾವಭಿಮಥ್ಯ ಪ್ರವವ್ರಾಜ ತೌ ಹ ಸುಪ್ತಂ ಪುರುಷಮೀಯತು ಸ್ತಂಹೋಽಜಾತಶತ್ರುರಾಮಂತ್ರಯಾಂ ಚಕ್ರೇ ಬೃಹನ್‌ಪಾಂಡರವಾಸಾ ಸ್ಸೋಮರಾಜನ್ನಿತಿ ಸ ತೂಷ್ಣೀಮೇವ ಶಿಶ್ಯೇತ ತ ಉ ಹೈನಂ ಯಷ್ಟ್ಯಾ ವಿಚಿಕ್ಷೇಪ ತತ ಉ ಏವ ಸಮುತ್ತಸ್ಥೌ**

**ತಂ ಹೋವಾಚಾಜಾತಶತ್ರುಃ ಕ್ವೈಷ ಏತದ್ಬಾಲಾಕೇ ಪುರುಷೋ ಶಯಿಷ್ಟ ಯತ್ರೈತದಭೂ -ದ್ಯತ ಏತದಾಗಾದಿತಿ ತದುಹ ಬಾಲಾಕಿರ್ನ ವಿಜಜ್ಞೌ ॥ (18)**

ತಾ : ಆಗ ಬಾಲಾಕಿ ಮುನಿ ಸ್ವಲ್ಪ ಹೊತ್ತು ಮೌನ ವಹಿಸಿದ. ಅಜಾತ ಶತ್ರು:- ಇಷ್ಟೇನಾ ನಿನ್ನ ಪ್ರಶ್ನೆಗಳು? ಬಾಲಾಕಿ ಮುನಿ:-ಇಷ್ಟೆ. ಅಜಾತ ಶತ್ರು:-ನಿಜವಾಗಿ ಹೇಳಬೇಕೆಂದರೆ ಇದುವರೆಗೂ ಹೇಳಿದುದೆಲ್ಲ ಭ್ರಾಂತಿ ಮಾತ್ರಗಳೇ. ಬ್ರಹ್ಮವನ್ನು ಕುರಿತು ಸ್ಪಷ್ಟವಾಗಿ ಹೇಳುವೆನು ಕೇಳು. ಓ ಬಾಲಾಕಿ! ಈ ಪುರುಷರೆಲ್ಲರನ್ನೂ ಯಾರು ಸೃಷ್ಟಿಸಿದರೋ, ಈ ಸೃಷ್ಟಿ ನಿರ್ಮಾಣವನ್ನು ಯಾರು ಮಾಡಿರುವರೋ ಆ ಬ್ರಹ್ಮವನ್ನು ಕುರಿತು ಸಂಪೂರ್ಣವಾಗಿ ತಿಳಿದುಕೊಳ್ಳಬೇಕು. ಆಗ ಬಾಲಾಕಿ ಮುನಿ ಸಮಿತ್ಪಾಣಿಯಾಗಿ (ಸಮಿತ್ತನ್ನು ಸಮರ್ಪಿಸಿ) "ನನ್ನನ್ನು ನಿಮ್ಮ ಶಿಷ್ಯನಾಗಿ ಸ್ವೀಕರಿಸಿ." ಎಂದು ಪ್ರಾರ್ಥಿಸಿದ. ಅಜಾತ ಶತ್ರು: ಬ್ರಾಹ್ಮಣ ಮುನಿಯು ಒಬ್ಬ ಕ್ಷತ್ರಿಯನಿಗೆ ಶಿಷ್ಯನಾಗಿರುವುದು ಧರ್ಮ ವಿರುದ್ಧವಾಗುತ್ತದೆ. ಆದರೂ ನನ್ನೊಂದಿಗೆ ಬಾ. ಪರಬ್ರಹ್ಮವನ್ನು ನಿನಗೆ ಅರ್ಥವಾಗುವ ಹಾಗೆ ಹೇಳುವೆನು. ಆ ನಂತರ ಅಜಾತ ಶತ್ರುವು ಬಾಲಾಕಿ ಮುನಿಯನ್ನು ಹಸ್ತದಿಂದ ಸ್ಪೃಶಿಸಿ ನಿದ್ರೆ ಮಾಡುತ್ತಿದ್ದ ಒಬ್ಬ ಪುರುಷನ ಬಳಿಗೆ ಕರೆದೊಯ್ದನು. ಅಜಾತ ಶತ್ರುವು "ಧವಳ ವಸ್ತ್ರಗಳನ್ನು ಧರಿಸಿರುವ ಸೋಮರಾಜನೇ! ಎಂದು ನಿದ್ರಿಸುತ್ತಿರುವ ಪುರುಷನನ್ನು ಕುರಿತು ಸಂಬೋಧಿಸಿ ಕರೆದ. ಆದರೆ ಆತ ಮಾತನಾಡಲಿಲ್ಲ, ಒಂದು ಸಣ್ಣ ಕೋಲಿನಿಂದ ನೆಟ್ಟಗೆ ಏಟು ಕೊಟ್ಟ. ಅಜಾತ ಶತ್ರು. ಆಗ ಆತ ನಿದ್ರೆಯಿಂದ ಎದ್ದ. ಅಜಾತ ಶತ್ರು:-"ಓ ಬಾಲಾಕಿ! ಈತನೆಲ್ಲಿಗೆ ಹೋಗಿದ್ದ? ಏನು ಮಾಡುತ್ತಿದ್ದ? ಎಲ್ಲಿಂದ ಹಿಂದಿರುಗಿ ಬಂದ?" ಅಷ್ಟುಮಾತ್ರ-ದಿಂದ ಬಾಲಾಕಿ ಮುನಿಯು ಅರ್ಥ ಮಾಡಿಕೊಳ್ಳಲಿಲ್ಲ. ಅಜಾತ ಶತ್ರು:- "ಓ ಬಾಲಾಕಿ! ನಿದ್ರೆಯಲ್ಲಿ ಈ ಪುರುಷನು ಎಲ್ಲಿದ್ದ? ಎಲ್ಲಿಂದ ಹಿಂದಿರುಗಿ ಬಂದ? ಎಂದು ನಾನು ಪ್ರಶ್ನಿಸಿದೆ ನಿನಗೆ ಅರ್ಥವಾಗಲಿಲ್ಲ."

ಮಂ.ಶ್ಲೋ॥ **ತಂ ಹೋವಾಚಾಜಾತುಶತ್ರುರ್ಯಮೇವ್ಯೈಷ ಏತದ್ಬಾಲಾಕೇ ಪುರುಷೋಶಯಿಷ್ಟ ಯತ್ರೈತ -ದಭೂದ್ಯತ ಏತದಾಗಾದ್ಧಿತಾ ನಾಮ ಹೃದಯಸ್ಯ ನಾಡ್ಯೋ ಹೃದಯಾತ್ಪುರೀತತಮಭಿ -ಪ್ರತನ್ವಂತಿ ಯಥಾ ಸಹಸ್ರಧಾ ಕೇಶೋ ವಿಪತಿತಸ್ತಾವದಣ್ವ್ಯಃ ಪಿಂಗಳಸ್ಯಾಣಿಮ್ನಾ ತಿಷ್ಠಂತೇ ಶುಕ್ಲಸ್ಯ ಕೃಷ್ಣಸ್ಯ ಪೀತಸ್ಯ ಲೋಹಿತಸ್ಯೇತಿ ತಾಸು ತದಾ ಭವತಿ ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ತಥೈನಂ ವಾಕ್ಸರ್ವೈ -ರ್ನಾಮಭಿಸ್ಸಹಾಪ್ಯೇತಿ ಚಕ್ಷುಸ್ಸರ್ವೈ ರೂಪೈಸ್ಸಹಾಪ್ಯೇತಿ ಶ್ರೋತ್ರಂ ಸರ್ವೈಶ್ಶಬ್ದೈಸ್ಸಹಾಪ್ಯೇತಿ ಮನಸ್ಸರ್ವೈರ್ಧ್ಯಾತೈಸ್ಸಹಾಪ್ಯೇತಿ ಸ ಯದಾ ಪ್ರತಿಬುಧ್ಯತೇ ಯಥಾಗ್ನೇರ್ವಿಸ್ಫುಲಿಂಗಾ ವಿಪ್ರತಿಷ್ಠೇರ -ನ್ನೇವಮ್ಯೈವ್ಯೇ ತಸ್ಮಾದಾತ್ಮನಃ ಪ್ರಾಣಾ ಯಥಾಯತನಂ ವಿಪ್ರತಿಷ್ಠಂತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಸ್ತದ್ಯಥಾ ಕ್ಷುರಃ ಕ್ಷುರಧಾವೇ ಹ್ಯೇತಸ್ಯಾಸ್ಯ ವಿಶ್ವಂಭರೋ ವಾ ವಿಶ್ವಂಭರಃ ಕುಲಾಯ ಏವಮೇ ವ್ಯೈಷಪ್ರಾಜ್ಞ ಆತ್ಮೇದಂ ಶರೀರಮನುಪ್ರವಿಷ್ಟ ಆಲೋಮಭ್ಯ ಆನಖೇಭ್ಯಃ ॥ (19)**

ತಾ : ಅಜಾತ ಶತ್ರುವು ಮತ್ತೆ ಆತನಿಗೆ ಈ ವಿಧವಾಗಿ ಹೇಳಿದ ಓ ಬಾಲಾಕಿ! ಈತನು ಮಲಗಿರುವಾಗ ಸ್ವಪ್ನದಲ್ಲಿ ಏನು ಜರುಗಿತು? ಎಲ್ಲಿಗೆ ಹೋಗಿ ಹಿಂದಿರುಗಿ ಬಂದ? ಹೃದಯ

ತಲದಿಂದ 'ಹಿತಾ'ಯೆನ್ನುವ ನಾಡಿಯ ಮೂಲಕ ಪ್ರಯಾಣ ಮಾಡಿರುವನು. ಬಹುದೂರ ಪ್ರಯಾಣ ಮಾಡಿದ್ದಾನೆ. ಆ ಹಿತಾನಾಡಿಯು ಒಂದು ಕೂದಲಿಗಿಂತ ತೆಳ್ಳಗಿರುವುದು. ಕೂದಲನ್ನು ಸಾವಿರ ಭಾಗಗಳನ್ನಾಗಿ ಮಾಡಿದಾಗ ಅದರಲ್ಲಿನ ಒಂದು ಭಾಗದಷ್ಟು ಸೂಕ್ಷ್ಮವಾಗಿರುವುದು. ಅತಿ ಸೂಕ್ಷ್ಮವಾಗಿ ಪಿಂಗಳವರ್ಣ, ಬಿಳುಪು, ಕಪ್ಪು, ಹಳದಿ, ಕೆಂಪು ವರ್ಣಗಳಲ್ಲಿ ಇದೆ. ಅದರಲ್ಲಿ ಶ್ವೇತವರ್ಣವು ಕಾಣಿಸಿದಾಗ ಸ್ವಪ್ನಗಳು ಬರುವುದಿಲ್ಲ ಆಗ ಆತ ಪ್ರಾಣಚೈತನ್ಯದೊಂದಿಗೆ ಸೇರಿರುತ್ತಾನೆ. ಆಗ ಸರ್ವ ವಾಕ್ಕುಗಳು ನಾಮಗಳಲ್ಲಿ ಏಕವಾಗುತ್ತದೆ. ಚಕ್ಷುರಿಂದ್ರಿಯವು ಸರ್ವರೂಪಗಳೊಂದಿಗೆ ಒಂದಾಗುತ್ತದೆ. ಶ್ರೋತ್ರೇಂದ್ರಿಯವು ಸರ್ವಶಬ್ದಗಳೊಂದಿಗೆ ಒಂದಾಗುವುದು. ಮನಸ್ಸು ಸರ್ವ ಸಂಕಲ್ಪಗಳೊಂದಿಗೆ ಒಂದಾಗುತ್ತದೆ. ನಿದ್ರೆಯಿಂದ ಎಚ್ಚೆತ್ತ ಕೂಡಲೇ ಒಮ್ಮೆಲೇ ಅಗ್ನಿ ಪ್ರಜ್ವಲಿಸಿದಂತೆ ಪ್ರಾಣ ಚೈತನ್ಯವು ಪ್ರಕಾಶಿಸುವುದು. ಇಂದ್ರಿಯ ದೇವತೆಗಳು ಎಚ್ಚರ ಗೊಳ್ಳುವರು ಜಾಗ್ರತ್ ಪ್ರಪಂಚವು ವ್ಯಕ್ತವಾಗುವುದು. ಪ್ರಾಣಾತ್ಮ ಚಲನೆಯಾಗಲು ಬುದ್ಧಿಪ್ರಜ್ಞೆ ದೇಹದೆಲ್ಲೆಡೆ ಸರ್ವೇಂದ್ರಿಯಗಳಲ್ಲಿಯೂ ಕೂದಲಿನಿಂದ ಉಗುರುಗಳವರೆಗೂ ಪ್ರವೇಶಿಸುವುದು.

**ಮಂ.ಶ್ಲೋ॥ ತಮೇತಮಾತ್ಮಾನಮೇತಮಾತ್ಮಾನೋಽನ್ವವಶ್ಯಂತಿ ಯಥಾ ಶ್ರೇಷ್ಠಿನಂ ಸ್ವಾಸ್ತದ್ಯಥಾ ಶ್ರೇಷ್ಠೀ ಸ್ವೈರ್ಭುಂಕ್ತೇ ಯಥಾವಾ ಶ್ರೇಷ್ಠಿನಂ ಸ್ವಾ ಭುಂಜಂತ ಏವಂ ಶ್ರೇಷ್ಠಿನಂ ಸ್ವಾಸ್ತ ಏವಾನ್ವಥಯಾಃ ಇಂದ್ರ ಏತಮಾತ್ಮಾನಂ ನವಿಜಿಜ್ಞೌ ತಾವದೇನಮಸುರಾ ಅಭಿಬಭೂವುಸ್ಸ ಯದಾ ವಿಜಿಜ್ಞಾವಥ ಹತ್ವಾ ಸುರಾನ್ವಿಜಿತ್ಯ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ತಥೋ ಏವೈವಂ ವಿದ್ವಾನ್ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯ-ಮಾಧಿಪತ್ಯಂ ಪರ್ಯೇತಿ ಯ ಏವಂ ವೇದ ಯ ಏವಂ ವೇದ ॥ (20)**

**(ಕೌಷೀತಕೀ ಬ್ರಾಹ್ಮಣೋಪನಿಷತ್‌ಸಮಾಪ್ತಾ)**

ತಾ : ಯೋಧನು ತನ್ನ ಸೇನೆಯನ್ನು ತನ್ನ ಆಜ್ಞೆಯಲ್ಲಿಟ್ಟುಕೊಳ್ಳುವಂತೆ ಬುದ್ಧಿ ಪ್ರಜ್ಞೆ ದೇಹೇಂದ್ರಿಯಗಳನ್ನು ತನ್ನ ಆಜ್ಞೆಯಲ್ಲಿ ಇಟ್ಟುಕೊಳ್ಳುವುದು. ದೇವೇಂದ್ರನು ಈ ಆತ್ಮಜ್ಞಾನವನ್ನು ಅರ್ಥ ಮಾಡಿಕೊಳ್ಳದಿದ್ದಾಗ ರಾಕ್ಷಸರು ದೇವೇಂದ್ರನ ಮೇಲೆ ದಂಡೆತ್ತಿ ಬರುವರು. ಆತ್ಮ ಜ್ಞಾನವನ್ನು ಅನುಭವಿಸಿದಾಗ ರಾಕ್ಷಸರನ್ನು ಜಯಿಸಿ ಶ್ರೇಷ್ಠತ್ವವನ್ನು ಸಂಪಾದಿಸುವನು. ಜಿಜ್ಞಾಸೆಯುಳ್ಳ ಸಾಧಕನು (ಆತ್ಮ ಜ್ಞಾನಸಾಧನೆಗಳ ಮೂಲಕ) ಸಮಸ್ತ ಪದಾರ್ಥಗಳಗಿಂತ ಶ್ರೇಷ್ಠವಾದ ಸ್ವಾರಾಜ್ಯವನ್ನು (ಮೋಕ್ಷವನ್ನು) ಸ್ವರ್ಗರಾಜ್ಯವನ್ನು ಆತ್ಮ ಸಾಮ್ರಾಜ್ಯವನ್ನು ಅನುಭವಿಸುತ್ತಿದ್ದಾನೆ.

(ಕೌಷೀತಕಿ ಬ್ರಾಹ್ಮಣೋಪನಿಷತ್ತು ಸಮಾಪ್ತಿ)

**ಶಾಂತಿ ಮಂತ್ರ ॥ಓಂ ವಾಙ್ಮೇಮನಸಿ ಪ್ರತಿಷ್ಠಿತಾ – ಮನೋ ಮೇ ವಾಚಿ ಪ್ರತಿಷ್ಠಿತಂ, ಆವಿರಾವೀರ್ಮ ಏಧಿ, ವೇದಸ್ಯ ಮ ಆಣೀಸ್ಥಃ – ಶ್ರುತಂ ಮೇ ಮಾ ಪ್ರಹಾಸೀಃ ಅನೇನಾಧಿತೇನ ಅಹೋರಾತ್ರಾನ್ ಸಂದಧಾಮಿ – ಋತಂ ವದಿಷ್ಯಾಮಿ – ಸತ್ಯಂ ವದಿಷ್ಯಾಮಿ – ತನ್ಮಾಮವತು – ತದ್ವಕ್ತಾರಮವತು –ಅವತುಮಾಂ ಅವತು–ವಕ್ತಾರಂ. ಓಂ ಶಾಂತಿಃ ಶಾಂತಿಃ ಶಾಂತಿಃ**

ಪ್ರಥಮ ಸಂಪುಟ ಸಮಾಪ್ತಿ

ವರ್ಧತಾಂ ಬ್ರಹ್ಮ ವಿದ್ಯಾಚ ಲೋಕೇಭ್ಯಃ ಸುಖಮೇಧತಾಮ್






ಪ್ರಧಾನಾಚಾರ್ಯರು :
**ಉ.ವೇ. ಪ್ರ. ಶ್ರೀಮಾನ್ ಭಾರ್ಗವ ನರಸಿಂಹ**

ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ ॥

ಅಸತೋಮಾ ಸದ್ಗಮಯ ।

ತಮಸೋಮಾ ಜ್ಯೋತಿರ್ಗಮಯ ।

ಮೃತ್ಯೋರ್ಮಾ ಅಮೃತಂಗಮಯ ।

ಓಂ ಶಾಂತಿ ಶಾಂತಿ ಶಾಂತಿಃ ॥

ಶ್ರೀ ಸೂರ್ಯನಾರಾಯಣ ಶಾಸ್ತ್ರೀ

ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಪಟಿಕಾಕೃತಿಂ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಂ ಉಪಾಸ್ಮಹೇ ॥

